# ಶ್ರೀಮದ್ ಭಾಗವತ

## ಚತುರ್ಥಸ್ಕಂಧ



ಪ್ರಕಾಶನ : ವಿಶ್ವಮಧ್ವಮಹಾಪರಿಷತ್, ಉತ್ತರಾದಿಮಠ

ಅನುವಾದ ಹಾಗೂ ಸಂಪಾದನೆ

**ಪಂ. ಪೂ. ಗುತ್ತಲ ರಂಗಾಚಾರ್ಯರು**

ಕುಲಪತಿಗಳು, ಶ್ರೀಜಯತೀರ್ಥವಿದ್ಯಾಪೀಠ

ವಿಶ್ವಮಧ್ವಮಹಾಪರಿಷತ್ ಗ್ರಂಥಮಾಲಾ - ೩೩

# ಶ್ರೀಮದ್ಭಾಗವತ

## ಚತುರ್ಥಸ್ಕಂಧ

ಅನುವಾದ ಹಾಗೂ ಸಂಪಾದನೆ
ಪಂ.ಪೂ.ಗುತ್ತಲ ರಂಗಾಚಾರ್ಯರು
ಕುಲಪತಿಗಳು, ಶ್ರೀಜಯತೀರ್ಥವಿದ್ಯಾಪೀಠ

ಸಹ ಸಂಪಾದನೆ :
ಪಂ.ಕಾಂತೇಶಾಚಾರ್ಯ ಕದರಮಂಡಲಗಿ M.A

ಪ್ರಕಾಶನ :
ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ
ಶ್ರೀಉತ್ತರಾದಿಮಠ
ವಿಶ್ವಮಧ್ವಮಹಾಪರಿಷತ್, ಬೆಂಗಳೂರು - ೪

**Srimad Bhagavata Chaturtha Skandha**
A highly scholarly yet simple translation in Kannada with word by word meaning, summary and detailed in-depth notes based on Bhavata Tatparya of Sri Madhwacharya a deptly summarizing all available commentaries on the subject by **Sudha Visharada Pandita Poojya Rangacharya Guttal**, Kulapati of Sri Jayateertha Vidyapitha.

Published by : **Vishva Madhwa Maha Parishat**

Copies : **1000**

First Edition : **June 2011**

No.of Pages : **16+648**



**Price.** : [In India] **Rs. 300**

**Copies can be had from :**

**Vishva Madhwa Maha Parishat**
Research Center, #11, 2nd Floor,
Uttaradimath Building. Uttaradi Math Road,
Shankarpuram, Basavanagudi
BANGALORE - 4 Phone : 080 26603692

Type Setting : **V.M.M.P Research wing.**

Cover Design : **K M Sheshagiri**

Printed by : **Vagartha, 149, 8th Cross, N.R Colony, BNG 4**



ಶ್ರೀಮಜ್ಜಗದ್ಗುರುಮಧ್ವಾಚಾರ್ಯಮೂಲಮಹಾಸಂಸ್ಥಾನ
ಶ್ರೀಮದುತ್ತರಾದಿಮಠಾಧೀಶರಾದ, ಶ್ರೀಜಯತೀರ್ಥವಿದ್ಯಾಪೀಠದ
ಸಂಸ್ಥಾಪಕರಾದ ಶ್ರೀ 1008 ಶ್ರೀ ಸತ್ಯಪ್ರಮೋದತೀರ್ಥಶ್ರೀಪಾದಂಗಳವರ
ಅಡಿದಾವರೆಗಳಲ್ಲಿ ಭಕ್ತಿಪೂರ್ವಕ ಸಮರ್ಪಣೆ



ಶ್ರೀಮಜ್ಜಗದ್ಗುರುಮಧ್ವಾಚಾರ್ಯಮೂಲಮಹಾಸಂಸ್ಥಾನಶ್ರೀಮದುತ್ತರಾದಿಮಠಾಧೀಶರಾದ

ಶ್ರೀ 1008 ಶ್ರೀಸತ್ಯಾತ್ಮತೀರ್ಥಶ್ರೀಪಾದಂಗಳವರ ಅಡಿದಾವರೆಗಳಲ್ಲಿ

ಭಕ್ತಿಪೂರ್ವಕ ಸಮರ್ಪಣೆ

॥ ಶ್ರೀದಿಗ್ವಿಜಯರಾಮೋ ವಿಜಯತೇ ॥

ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ

ಶ್ರೀಮದುತ್ತರಾದಿಮಠಾಧೀಶರಾದ

ಶ್ರೀ ಶ್ರೀ ೧೦೦೮ ಶ್ರೀಸತ್ಯಾತ್ಮತೀರ್ಥ ಶ್ರೀಪಾದಂಗಳವರ

# "ಅನುಗ್ರಹ ಸಂದೇಶ"

ಶ್ರೀಮದ್‌ಭಾಗವತವು ಶ್ರೀಕೃಷ್ಣನ ಪ್ರತಿಮೆ. ಮೋಕ್ಷಸಾಧನ. ಆದರೆ ಯಥಾರ್ಥಜ್ಞಾನ ಮಾಡಿಕೊಂಡವರಿಗೆ ಮಾತ್ರ. ಇಲ್ಲದಿದ್ದರೆ ಅನರ್ಥಸಾಧನ. ಇದರ ಯಥಾರ್ಥಜ್ಞಾನಕ್ಕಾಗಿ ಶ್ರೀಮದಾಚಾರ್ಯರ ಶ್ರೀಮದ್ಭಾಗವತತಾತ್ಪರ್ಯದ ಅಧ್ಯಯನ ಅತ್ಯಂತ ಅಗತ್ಯವಾದುದು. ಶ್ರೀಮದಾಚಾರ್ಯರ ಭಾವದ ಅವಬೋಧವಾಗುವದಕ್ಕೆ ಶ್ರೀವಿಜಯಧ್ವಜತೀರ್ಥರು, ಶ್ರೀಯಾದವಾರ್ಯರು,. ಶ್ರೀಸತ್ಯಧರ್ಮರು, ಶ್ರೀ ಶ್ರೀನಿವಾಸತೀರ್ಥರೇ ಮೊದಲಾದ ಅನೇಕಮಹನೀಯರ ವ್ಯಾಖ್ಯಾನಗಳ ಸಹಾಯ, ವ್ಯಾಖ್ಯಾನಕಾರರ ಪರಮಾನುಗ್ರಹ ಅತ್ಯವಶ್ಯ.

ಈ ನಿಟ್ಟಿನಲ್ಲಿ ಎಲ್ಲ ತತ್ತ್ವಜಿಜ್ಞಾಸುಗಳಿಗೆ ಅನುಕೂಲವಾಗುವಂತೆ ಸುಧಾವಿಶಾರದರಾದ ಆಚಾರ್ಯರವರು (ಪಂ. ಗುತ್ತಲ ರಂಗಾಚಾರ್ಯರು) ಸಕಲ ವ್ಯಾಖ್ಯಾನಗಳನ್ನು ಆಳವಾಗಿ ಅಧ್ಯಯನ ಮಾಡಿ, ಎಲ್ಲ ವ್ಯಾಖ್ಯಾನಕಾರರ ಅಭಿಪ್ರಾಯಗಳನ್ನು ಅಳವಡಿಸಿಕೊಂಡು, ಬಹುಸುಂದರವಾಗಿ ಎಲ್ಲರಿಗೂ ಮನಮುಟ್ಟುವಂತೆ ಈ ಗಂಭೀರವಾದ ಗ್ರಂಥದ ಅನುವಾದವನ್ನು ಮಾಡಿದ್ದಾರೆ. ಪ್ರಕೃತ ಈ ಚತುರ್ಥಸ್ಕಂಧಕ್ಕೆ ವಿಜಯಧ್ವಜೀಯ, ಯಾದುಪತ್ಯ ಹಾಗೂ ತಾತ್ಪರ್ಯದ ಇನ್ನೂ ಕೆಲವು ವ್ಯಾಖ್ಯಾನಗಳನ್ನು ಅಳವಡಿಸಿಕೊಂಡಿದ್ದಾರೆ. ಅನೇಕ ಜಟಿಲ ವಿಷಯಗಳನ್ನು ಅತಿಸುಲಲಿತವಾಗಿ ಕನ್ನಡದಲ್ಲಿ ಆಚಾರ್ಯರು ತಿಳಿಸಿದ್ದಾರೆ. ವ್ಯಾಖ್ಯಾನಕಾರರು ಮಾಡಿಕೊಂಡ ಪ್ರಶ್ನೆಗಳು, ಅವುಗಳ ಪರಿಹಾರ, ಇವೆಲ್ಲವನ್ನೂ ಬಹುಸುಂದರವಾಗಿ ತಿಳಿಸಿಕೊಟ್ಟಿದ್ದಾರೆ.

ಭಾಗವತದ ಅನುವಾದ ಕಾರ್ಯ ಇದು ಸುಲಭವಲ್ಲ. ಇದೊಂದು ಅತಿದೀರ್ಘ ಕಾಲದ ತಪಸ್ಸು. ಇದಕ್ಕಾಗಿರುವ ಅವರ ಹಟ ಅನನ್ಯವೂ ಹೌದು. ಆದರ್ಶವೂ ಹೌದು.

ಅವರ ನಿತ್ಯದ ಅವಿರತ ಪಾಠ-ಪ್ರವಚನಗಳು, ಶ್ರೀಮಠದ ಬೃಹತ್ತಾದ ಜವಾಬ್ದಾರಿ, ವಿದ್ಯಾಪೀಠದ ಹೊಣೆ, ಇವುಗಳ ಮಧ್ಯದಲ್ಲಿ ಪ್ರಾಯಃ ಒಂದೂ ದಿನ ಬಿಡದೇ ಸಮಗ್ರಭಾಗವತದ ಅನುವಾದವನ್ನು ಮಾಡಿ ಮುಗಿಸಿದ್ದಾರೆ.

ಭಾಗವತವನ್ನು ಅಥವಾ ತಾತ್ಪರ್ಯ, ಟಿಪ್ಪಣಿಗಳನ್ನು ಸಾಕ್ಷಾತ್ತಾಗಿ ಅರ್ಥಮಾಡಿಕೊಳ್ಳಲಾರದ ಜಿಜ್ಞಾಸುಗಳಿಗೆ, ಅಷ್ಟೇ ಅಲ್ಲ ಅವುಗಳನ್ನು ಅರ್ಥಮಾಡಿಕೊಳ್ಳುವ ವಿದ್ವಾಂಸರಿಗೂ ಸ್ಪಷ್ಟೀಕರಣಕ್ಕಾಗಿ ಇವರ ಈ ಅನುವಾದ ಗ್ರಂಥಗಳು ತುಂಬ ಉಪಯುಕ್ತವಾಗಿವೆ. ಜಿಜ್ಞಾಸುಗಳು ಇದರ ಲಾಭವನ್ನು ಪಡೆದುಕೊಳ್ಳಬೇಕು. ನಮ್ಮ ಉಪಾಸ್ಯಮೂರ್ತಿಗಳಾದ ಶ್ರೀಮೂಲರಾಮದಿಗ್ವಿಜಯರಾಮ ವೇದವ್ಯಾಸದೇವರು ಗುತ್ತಲ ಆಚಾರ್ಯರ ಮೇಲೆ ಪೂರ್ಣಾನುಗ್ರಹ ಮಾಡಿ ಜ್ಞಾನ-ಭಕ್ತಿ-ವೈರಾಗ್ಯಗಳನ್ನು ಕೊಟ್ಟು ಅವರಿಂದ ನಿರಂತರ ಪಾಠ ಪ್ರವಚನಗಳನ್ನು ಮಾಡಿಸಲಿ ಎಂದು ಪ್ರಾರ್ಥಿಸುತ್ತೇವೆ.

ಅವರು ಅನುವಾದ ಮಾಡಿದ ಸಮಗ್ರಭಾಗವತವು ಶೀಘ್ರದಲ್ಲಿ ಪ್ರಕಾಶಿತವಾಗಲಿ ಎಂದು ಹಾರೈಸುತ್ತೇವೆ.

ಅಲ್ಲದೇ ಈ ಸಂಪುಟದ ಸಂಪಾದನಾಕಾರ್ಯದಲ್ಲಿ ಆಚಾರ್ಯರಿಗೆ ವಿಶೇಷ ಸಹಾಯವನ್ನು ಮಾಡಿದ ನಮ್ಮ ಪ್ರಿಯಶಿಷ್ಯನಾದ ಪಂ. ಕಾಂತೇಶಾಚಾರ್ಯ ಇವನಿಗೂ ಭಗವಂತ ವಿಶೇಷ ಜ್ಞಾನ-ಭಕ್ತಿ-ವೈರಾಗ್ಯಗಳನ್ನು ದಯಪಾಲಿಸಲಿ ಎಂದು ಪ್ರಾರ್ಥಿಸುತ್ತೇವೆ.

ಶ್ರೀ ೧೦೦೮ ಶ್ರೀ ಸತ್ಯಾತ್ಮತೀರ್ಥಶ್ರೀಪಾದಂಗಳವರು

ಶ್ರೀಮದುತ್ತರಾದಿಮಠ

ಖರ ಜ್ಯೇಷ್ಠ ಶುದ್ಧ ದಶಮಿ

೧೧-೦೬-೨೦೧೧ ಹೊಳೆನರಸಿಪುರ

# ಮುನ್ನುಡಿ

ಶುಕಾಚಾರ್ಯರ ಚೆನ್ನುಡಿಯಾದ ಭಾಗವತಕ್ಕೊಂದು ಮುನ್ನುಡಿಯ ಆವಶ್ಯಕತೆ ಇದೆಯೇ ? ಗಿಣಿ ಕಚ್ಚಿದ ಹಣ್ಣನ್ನು ಪರೀಕ್ಷಿಸಿ ತಿನ್ನುವ ಮಾನವರುಂಟೇ ? ಅಹುದೆನ್ನುವವರ ಪಾಲಿಗೆ ಈ ಮುನ್ನುಡಿ ಮುಂದಡಿ ಇಟ್ಟು ಮುನ್ನಡೆಯುತ್ತದೆ. ಸಂಸ್ಕೃತದ ಬಾನಲ್ಲರಳಿದ ಇಂದು-ಕಮಲಕ್ಕಿಂದು ಕನ್ನಡದ ಕನ್ನಡಿಯನ್ನು ಹಿಡಿಯುವ ಕಾಯಕ ನಡೆದಿರುವುದು ಓದುಗನರಿಯದ ವಿಷಯವಲ್ಲ. ಆದರೂ ನನ್ನರಿವಿನ ಕನ್ನಡಿ ಹಿರಿದಾಗಲೆಂದು ಬಯಸಿ ಬರೆದ ಕನ್ನಡಭಾಷೆಯ ಭಾವವಿದು. ಸಂಸ್ಕೃತದಲ್ಲಿಯೇ ಹತ್ತು ಹಲವು ವ್ಯಾಖ್ಯಾನಗಳಿದ್ದರೂ, ಭಾಗವತದ ಭಾವ ಬಯಲಾಯಿತೇ ? ಅಸಂಸ್ಕೃತಭಾಷೆಗಳ ಸುಸಂಸ್ಕೃತ ನುಡಿಬರಹಗಳಿದ್ದರೂ ಭಾಗವತದ ಸಿಹಿ ಬರಿದಾಯಿತೇ ? ಇಲ್ಲವೆಂದೇ ಪೂರ್ವಮಹನೀಯರು ಅರ್ಥ-ಭಾವವನ್ನರಿತು ಅರಹಲು ಟಿಪ್ಪಣಿಸಿ ಹೆಣಗಿದ್ದು. ಜೀವನಕ್ಕೊಂದು ಧನ್ಯತೆಯ ಗರಿಯ ಪಡೆದು ಮೆರೆಯಲು, ಹರಿಭಕ್ತನಿಗೊಂದು ಈ ಕಾಯಕದ್ಹೊರತು ಬೇರೆ ಗುರಿಯಿಲ್ಲ. ಹರಿ ಕೊಟ್ಟ ಮತಿ-ಮನಕೆ ಇದರ್ಹೊರತು ಬೇರೆ ಸರಿ ಸಲ್ಲ.

ಸಂಸಾರಕಾಂತಾರದ ಹದಗೆಟ್ಟ ಹಾದಿಯಲಿ ಪರಿಪರಿಯಾಗಿ ಅಲೆದು, ಮನನೊಂದು ಮತಿ ಸವೆದು, ಕಾಲ್ಬಳಲಿ ಅಳುವಂಗೆ ಇದಕ್ಕೊರತು ಬೇರೆ ದಾರಿ ಇಲ್ಲ. ಅಂತೆಲೇ ಇಂದಿಗೂ ಇದನ್ನು ಸಪ್ತಾಹವಾಗಿ ಮೇಲೆಮೇಲೆ ಕೇಳುವ, ಹೇಳುವ ಸತ್‌ಜನವೃಂದ ಅದೆಷ್ಟೋ ? ಕೇಳಿದೆಡೆ ಹೇಳಿದೊಡೆ ಅನುಭವಿಸಿ ಚಿಂತಿಸಿದೊಡೆ ಹರಿಸ್ಮರಣೆಯ ಲಹರಿಯಲಿ ಆತ್ಮಾನಂದಲಹರಿ ತಟಮೀರಿ ಹರಿದ್ಹರಿದು ಮುದಗೊಳಿಸುವುದೆನ್ನುವುದು ನಿಜ ಸತ್ಯ. ಹೀಗಿರಲು ನನ್ನೀ ಆಯಾಸ ಹಾಯಾಗಿ ಹರಿ ಒಲುಮೆ-ಚಿಲುಮೆಯನು ಚಿಮ್ಮಿ ತರುವುದೆಂದೇ ಈ ಅರವತ್ತೈದರ್ಹೊತ್ತಿನುದ್ಯೋಗದ ಹಿಂಭಾವನೆ-ಸಂಭಾವನೆಗಳು. ಭಾಗವತದ ಪ್ರತಿಶ್ಲೋಕಕ್ಕೂ ಜಡತನುಮನದಲಿ ಚೈತನ್ಯಪೂರಕಬಲವಿದೆ ಎನ್ನುವುದಕ್ಕೆ ಸಂಪೂರ್ಣ ಭಾಗವತಕ್ಕೆ ಅದಾಗಲೇ ಕನ್ನಡ ಕನ್ನಡಿಯನ್ಹಿಡಿದ ನನ್ನ ಕರ-ಕೂರ್ಪರಗಳೇ ಸಾಕ್ಷೀ. ಇನ್ನೇನಿದ್ದರೂ ಓದುಗವೃಂದ ಅದರಲ್ಲಿ ಭಾಗವತಭಾವಬಿಂಬವನ್ನು ಕಾಣಬೇಕೆಂದು ಆಸ್ಥೆ ತೋರುವುದಷ್ಟೇ ಬಾಕಿ.

ಪ್ರಕೃತ ನಾಲ್ಕಕ್ಷರಗಳ ''ಭಾ-ಗ-ವ-ತ''ದ ನಾಲ್ಕನೆಯ ಸ್ಕಂಧ ಮೊದಲ ಮುದ್ರಣದ ಮುಖ ಕಂಡಿದೆ. ಈ ಸ್ಕಂಧಸಂದರ್ಭದಲ್ಲಿಯ ವಿಷಯಗಳು ಸ್ನಿಗ್ಧ-ಮನೋಹರವೆಂದೂ, ಪಕ್ವಾಮೃತಫಲವೆಂದೂ ಬೇರೆ ಹೇಳಬೇಕಾಗಿಲ್ಲ. ಬೆಲ್ಲದ ಬೊಂಬೆಯ ಯಾವತ್ತೂ ಭಾಗವು ಬಲುಸಿಹಿಯೇ ಮಧುನಿಷ್ಯಂದದ ಪ್ರತಿ ಸ್ಕಂಧಹಂತವೂ ಜೇನೆ. ಈ ಸ್ಕಂಧದಲ್ಲಿ

ಪ್ರಮುಖವಾಗಿ ಸಮ್ಮುಖವಾಗುವ ಪುರಂಜನೋಪಾಖ್ಯಾನ - ಧ್ರುವಚರಿತೆ - ದಕ್ಷಾಧ್ವರಧ್ವಂಸ ಮೊದಲಾದ ಘಟ್ಟಗಳು ವಿರಕ್ತಿಪ್ರಚುರ ಸರ್ವರಸಘಟ್ಟಗಳು. ಪುರಂಜನೋಪಾಖ್ಯಾನ, ಜೀವನದ ನೀತಿಸಂಯಮಗಳ ಹಠವನ್ನು ತೂಗಿ ಮಾಡಿದ ಪರಿಪಕ್ವಭಾಗ. ನಾವರಿಯದರಿಗಳ ತರಿದು ಆತ್ಮವನು ಹುರಿಗೊಳಿಸಿ ಹರಿಗೆ ಸಮರ್ಪಿಸುವ ಬಗೆಯನು, ಬಗೆಯಲಿ ಮೊಗೆಮೊಗೆದು ತುಂಬುವ ವಿಷಯಪೂರ್ಣಕುಂಭ. ಧ್ರುವಚರಿತೆ ತರಳವಯಸಿನಲಿ ಸರಳವಾಗಿ ತಪಸ್ಸಿಗೆ ಕೊರಳ ಕೊಟ್ಟು ಉನ್ನತಸ್ಥಾನವನ್ನು ಪಡೆಯುವ ಹಿರಿಹಂಬಲವ ತಣಿಸುವ ನೀತಿ ಹೊತ್ತ ದಿವ್ಯಸಂದೇಶ. ದಕ್ಷಾಧ್ವರಧ್ವಂಸ, ಸ್ಥಾನಕ್ಕಿಂತಲೂ ಜ್ಞಾನ, ಭೋಗಕ್ಕಿಂತಲೂ ಯೋಗ ಹಿರಿದೆಂಬ ತತ್ವವನು ಸಾರುವ ರುದ್ರದುಂದುಭಿ. ಮನೋನಿಯಾಮಕನಿಗೆ ಮಗಳನ್ನಿತ್ತದ್ದೇ ಮಹತ್ವದ್ದೆಂದು ಬಗೆದು ಮಾರಿ ಹಾರಿಸಿಕೊಂಡ ದಕ್ಷನ ಪಾಠ ''ಹಿರಿತನಕೆ ಹರಿಯರಿವೇ ಗುರುವು'' ಎನ್ನುವುದು.

ಇಂತಹ ಚತುರ್ಥಸ್ಕಂಧ ಪ್ರಥಮಾದಿ-ಚತುರ್ಥಾಂತ ಪಾದಗಳಲ್ಲಿರುವ ಎಲ್ಲ ದ್ವಿಪಾದರಿಗೆ ಬಾಳಹಾದಿಯಲಿ ಬೆಳಗುವೊಂದು ಹಿರಿ-ಹಣತೆಯಾಗಿರಲೆಂದು

ಬಯಸುತ್ತಾ

ಈ ಸ್ಕಂಧ ಬೆಳಕಾಗಲು ಹಗಲಿರುಳೂ ಬಳಲಿ ಬೆಳಗಿ ಸ್ಕಂಧಕ್ಕೆ ಸ್ಕಂಧ ಕೊಟ್ಟು ಮುದ್ರಣದ ಮೈಗೊಂದು ಹೆಗಲಾದ ಶಿಷ್ಯ ನಿರ್ವಿಶೇಷ ಸುತ ಚಿ.ವಿದ್ಯಾಧೀಶನನ್ನೂ, ಹಾಗೂ ಸುತ ನಿರ್ವಿಶೇಷ ಶಿಷ್ಯ ಚಿ. ಕದರಮಂಡಲಗಿ ಕಾಂತೇಶನನ್ನೂ, ನನ್ನೀ ಬರಹದ ಬೆನ್ನುಲುಬಾಗಿ ನಿಂದು ಮುಂಬೆಳಕಾಗಿ ಬಂದು ಹಂಬಲವ ಈಡೇರಿಸಿ ಅನವರತ ಸ್ವಾನುಗ್ರಹಧಾರಾವರ್ಷಿಗಳಾದ ಪೂಜ್ಯ ಶ್ರೀಶ್ರೀಶ್ರೀಸತ್ಯಾತ್ಮತೀರ್ಥರು ನನ್ನೀ ಕೃತಿಯಿಂದ ಮುದಗೊಂಡು ಮೈದುಂಬಿ ಹರಿಸಿ ಹರಿಕರುಣೆಗೆ ನಮ್ಮನ್ನು ಪಾತ್ರರನ್ನಾಗಿಸಲೆಂದು ಬಯಸುವ-

ಭಾಗವತಜನಪ್ರಿಯ

ಪಂ.ಪೂ. ರಂಗಾಚಾರ್ಯ ಗುತ್ತಲ

ಕುಲಪತಿಗಳು, ಶ್ರೀಜಯತೀರ್ಥ

ವಿದ್ಯಾಪೀಠ

# ಪ್ರಕಾಶಕರ ನುಡಿ

ಶ್ರೀ ೧೦೦೮ ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರ ಮಹದಪೇಕ್ಷೆಯಂತೆ ಪ್ರಾಚೀನಗ್ರಂಥಗಳ ಸಂರಕ್ಷಣೆ ಹಾಗೂ ಅವುಗಳ ಸಂಶೋಧನ, ಪ್ರಕಾಶನ ಮೊದಲಾದ ಅನೇಕ ಉನ್ನತಮಟ್ಟದ ಉದ್ದೇಶಗಳಿಂದ ಶ್ರೀ ೧೦೦೮ ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರಿಂದ ಸಂಸ್ಥಾಪಿತವಾದ ಸಂಸ್ಥೆ **"ವಿಶ್ವಮಧ್ವಮಹಾಪರಿಷತ್"**

ನಮ್ಮ ಸಂಸ್ಥೆಯು ಪ್ರಾಚೀನವಾದ, ಅಪ್ರಕಟಿತವಾದ ಗ್ರಂಥಗಳನ್ನು ವಿದ್ವಾಂಸರಿಂದ ಸಂಶೋಧನೆ ಮಾಡಿಸಿ ಅವುಗಳನ್ನು ಪ್ರಕಾಶಿಸುವ ಮಹತ್ತರ ಧ್ಯೇಯವನ್ನು ಹೊಂದಿದೆ. ಆ ದೃಷ್ಟಿಯಲ್ಲಿ ಅನೇಕ ಮಹತ್ವದ ಪುಸ್ತಕಗಳನ್ನು ಪ್ರಕಾಶಿಸಿದೆ. ಅದಲ್ಲದೇ ಜನರಲ್ಲಿ ಧರ್ಮಜಾಗೃತಿಗಾಗಿ ಪ್ರಶ್ನೋತ್ತರರೂಪದಲ್ಲಿ ಹಾಗೂ ಪ್ರವಚನರೂಪದಲ್ಲಿ ಅನೇಕ ಉಪಯುಕ್ತ ಪುಸ್ತಕಗಳನ್ನು ಈಗಾಗಲೇ ಹೊರತರಲಾಗಿದೆ. ಸಂಸ್ಕೃತ-ಕನ್ನಡ-ತೆಲುಗು-ತಮಿಳು ಹಾಗೂ ಆಂಗ್ಲ ಮೊದಲಾದ ಭಾಷೆಗಳಲ್ಲಿ ಸಂಸ್ಥೆಯಿಂದ ಅನೇಕ ಗ್ರಂಥಗಳು ಪ್ರಕಾಶಿತವಾಗಿವೆ.

ಪಂ. ಪೂ. ಗುತ್ತಲಾಚಾರ್ಯರು ಸಂಪೂರ್ಣ ಭಾಗವತದ ಕನ್ನಡಾನುವಾದ ಮಾಡಿರುವದು ಜಿಜ್ಞಾಸುಗಳ ಪಿಪಾಸೆಗೆ ಅಮೃತವಿತ್ತಂತಾಗಿದೆ. ಈವರೆಗೆ ಅನೇಕಸ್ಕಂಧಗಳು ನಮ್ಮ ಸಂಸ್ಥೆಯಿಂದ ಪ್ರಕಾಶನಗೊಂಡಿದ್ದು, ಪ್ರಕೃತ **"ಚತುರ್ಥಸ್ಕಂಧ"**ವು ಪ್ರಕಾಶನಗೊಳ್ಳುತ್ತಿದೆ. ಸಂದಿಗ್ಧಸ್ಥಳಗಳಲ್ಲಿ, ವಿಪರೀತಾರ್ಥವಾಗುವ ಪ್ರಸಂಗಗಳಲ್ಲಿ ಅತ್ಯವಶ್ಯಕವಾದ ಶ್ರೀಮದಾಚಾರ್ಯರ ಭಾಗವತತಾತ್ಪರ್ಯನಿರ್ಣಯವನ್ನು ಒಳಗೊಂಡು, ಶ್ರೀವಿಜಯಧ್ವಜರ ವ್ಯಾಖ್ಯಾನ ಹಾಗೂ ಶ್ರೀಯಾದವಾರ್ಯರ ವ್ಯಾಖ್ಯಾನಗಳಲ್ಲಿನ ವಿಶೇಷವಿಚಾರಗಳನ್ನು ತಮ್ಮ ಅನುವಾದದಲ್ಲಿ ಒಗ್ಗೂಡಿಸಿಕೊಂಡು, ಓದುಗರ ಮನಮುಟ್ಟುವ ಹಾಗೆ ವಿಷಯಗಳನ್ನು ನಿರೂಪಿಸಿರುವ ಗುತ್ತಲಾಚಾರ್ಯರ ಕ್ರಮ ವೈಶಿಷ್ಟ್ಯಪೂರ್ಣವಾದುದಾಗಿದೆ. ಇಂತಹ ಅನುವಾದಗ್ರಂಥವು ಎಲ್ಲ ಅಧ್ಯೇತೃಗಳ ಕೈತಲುಪಿ, ಮನ ಒಲಿಸುವಂತಾಗಲೆಂದು ಹಾರೈಕೆ.

ಈ ಕೃತಿಯನ್ನು ಸುಂದರವಾಗಿ ಮುದ್ರಣ ಮಾಡಿ ಸಕಾಲಕ್ಕೆ ಅಧ್ಯೇತೃಗಳ ಕೈಗೆ ತಲುಪಿಸಿದ ವಾಗರ್ಥ ಮುದ್ರಣಾಲಯದವರಿಗೂ ಧನ್ಯವಾದಗಳು.

ಪ್ರಧಾನ ಕಾರ್ಯದರ್ಶಿಗಳು
ವಿಶ್ವಮಧ್ವಮಹಾಪರಿಷತ್ ಉತ್ತರಾದಿಮಠ
ಬಸವನಗುಡಿ ಬೆಂಗಳೂರು - 4

# ವಿಷಯಾನುಕ್ರಮಣಿಕೆ

॥ ಶ್ರೀಕೃಷ್ಣಾರ್ಪಣಮಸ್ತು ॥

ಯೋಽಂತಃ ಪ್ರವಿಶ್ಯ ಮಮ ವಾಚಮಿಮಾಂ ಪ್ರಸುಪ್ತಾಂ
ಸಂಜೀವಯತ್ಯಖಿಲಶಕ್ತಿಧರಃ ಸ್ವಧಾಮ್ನಾ ।
ಅನ್ಯಾಂಶ್ಚ ಹಸ್ತಚರಣಶ್ರವಣತ್ವಗಾದೀನ್
ಪ್ರಾಣಾನ್ನಮೋ ಭಗವತೇ ಪುರುಷಾಯ ತುಭ್ಯಮ್ ॥

## ಶ್ರೀಮದ್ಭಾಗವತೇ ಚತುರ್ಥಸ್ಕಂಧೇ

## ಅಥ ಪ್ರಥಮೋಽಧ್ಯಾಯಃ

ಶ್ರೀಹರಿಯಲ್ಲಿ ನಿರತಿಶಯಪ್ರೇಮರೂಪವಾದ ಭಕ್ತಿಯನ್ನು ವಿಧಾನ ಮಾಡುವುದಕ್ಕಾಗಿ, ರುದ್ರದೇವರು ದಕ್ಷಪ್ರಜಾಪತಿಯ ಯಜ್ಞನಾಶ ಮಾಡಿದ ಚರಿತ್ರೆಯನ್ನು ಹೇಳಲು ಹೊರಟ ಮೈತ್ರೇಯರು ತತ್ಪೂರ್ವದಲ್ಲಿ ಸ್ವಾಯಂಭುವಮನುವಿನ ಚರಿತ್ರೆಯನ್ನು ಹೇಳಲು ಉದ್ಯುಕ್ತರಾಗುತ್ತಾರೆ :-

**ಮೈತ್ರೇಯ ಉವಾಚ -**

**ಮನೋಸ್ತು ಶತರೂಪಾಯಾಂ ತಿಸ್ರಃ ಕನ್ಯಾಶ್ಚ ಜಜ್ಞಿರೇ ।**
**ಆಕೂತಿರ್ದೇವಹೂತಿಶ್ಚ ಪ್ರಸೂತಿರಿತಿ ವಿಶ್ರುತಾಃ ॥೧॥**

ಮನೋಃ ತು=ಸ್ವಾಯಂಭುವ ಮನುವಿಗೆ ಶತರೂಪಾಯಾಂ=ಶತರೂಪಾ ಎಂಬ ಪತ್ನಿಯಲ್ಲಿ ಆಕೂತಿಃ, ದೇವಹೂತಿಃ, ಪ್ರಸೂತಿಃ ಇತಿ ವಿಶ್ರುತಾಃ=ಆಕೂತಿ, ದೇವಹೂತಿ, ಪ್ರಸೂತಿ ಎಂಬ ಮೂರು ಹೆಸರುಗಳಿಂದ ಪ್ರಸಿದ್ಧರಾದ ತಿಸ್ರಃ=ಮೂರುಜನ ಕನ್ಯಾಃ= ಕನ್ಯೆಯರು ಚ=ಮತ್ತು ಇಬ್ಬರು ಗಂಡುಮಕ್ಕಳೂ ಸಹ ಜಜ್ಞಿರೇ=ಹುಟ್ಟಿದರು.

**ಭಾಗವತ ತಾತ್ಪರ್ಯ -**

ಹಿಂದೆಯೇ (೩-೧೨-೫೪,೫೫ ರಲ್ಲಿ) ಹೇಳಿದ ಕನ್ಯೆಯರ ಉತ್ಪತ್ತಿ ಮೊದಲಾದವುಗಳನ್ನು ಇಲ್ಲಿ ಮತ್ತೇಕೆ ಹೇಳುವದು ? ಎಂದು ಶಂಕೆ ಬಂದರೆ, ಶ್ರೀಮದಾಚಾರ್ಯರು ಅದನ್ನು ಪ್ರಮಾಣಪುರಸ್ಸರವಾಗಿ ಪರಿಹರಿಸುತ್ತಾರೆ :-

ಪುನಃ ಪುನಃ ಕಥಾಂ ಪ್ರಾಹುರಭ್ಯಾಸಾದುತ್ತಮಂ ಫಲಮ್ ।
ವಿಜ್ಞಾಪಯಿತುಕಾಮಾಸ್ತು ವಿದ್ವಾಂಸಸ್ತತ್ರ ತತ್ರ ತು । ಇತ್ಯಾಗ್ನೇಯೇ ॥

ಹೇಳಿದ ಕಥೆಯನ್ನೇ ಮತ್ತೆ ಮತ್ತೆ ಹೇಳಬಾರದೆಂದು ತಿಳಿದಿದ್ದರೂ ಸಹ, ''ಅನೇಕ ಬಾರಿ ಅದನ್ನು ಹೇಳುವುದರಿಂದ ಉತ್ತಮ ಫಲವಾಗುವದು (ಪುಣ್ಯ ಬರುವುದು)'' ಎಂಬುದನ್ನು ತಿಳಿಸಲಿಚ್ಛಿಸಿದ ವಿದ್ವಾಂಸರು ಅಲ್ಲಲ್ಲಿ ಮತ್ತೆ ಮತ್ತೆ ಕಥೆಗಳನ್ನು ಹೇಳುವರು ಎಂದು ಆಗ್ನೇಯಪುರಾಣದಲ್ಲಿದೆ. ||೧||

**ಆಕೂತಿಂ ರುಚಯೇ ಪ್ರಾದಾದಪಿ ಭ್ರಾತೃಮತೀಂ ನೃಪಃ |**
**ಪುತ್ರಿಕಾಧರ್ಮಮಾಶ್ರಿತ್ಯ ಶತರೂಪಾನುಮೋದಿತಃ ||೨||**

ನೃಪಃ=ಸ್ವಾಯಂಭುವ ಮನುವು ಶತರೂಪಾನುಮೋದಿತಃ=ಪತ್ನಿಯಾದ ಶತರೂಪಾಳಿಂದ ಅನುಮೋದಿಸಲ್ಪಟ್ಟು (ಒಪ್ಪಿಗೆ ಪಡೆದು), ಭ್ರಾತೃಮತೀಂ ಅಪಿ=ಅಣ್ಣ-ತಮ್ಮಂದಿರುಳ್ಳ-ವಳಾಗಿದ್ದರೂ ಸಹ ಆಕೂತಿಂ=ಆಕೂತಿ ಎಂಬ ಮಗಳನ್ನು ರುಚಯೇ=ರುಚಿಪ್ರಜೇಶ್ವರನಿಗೆ ಪುತ್ರಿಕಾಧರ್ಮಮಾಶ್ರಿತ್ಯ=ಇವಳಲ್ಲಿ ಹುಟ್ಟುವ ಮಗನನ್ನು ನನಗೆ ಕೊಡಬೇಕೆಂಬ ಕರಾರಿನಿಂದ ಪ್ರಾದಾತ್=ಕೊಟ್ಟನು.

''ಪುತ್ರಿಕಾಧರ್ಮ'' ಇಲ್ಲಿ ಹೇಗೆ ?

''ಭ್ರಾತೃಮತೀಂ ಅಪಿ'' ಎಂದು ಹೇಳಿದ್ದರಿಂದ

ಅಭ್ರಾತೃಕಾಂ ಪ್ರದಾಸ್ಯಾಮಿ ತುಭ್ಯಂ ಕನ್ಯಾಮಲಂಕೃತಾಮ್ |
ಅಸ್ಯಾಂ ಯೋ ಜಾಯತೇ ಪುತ್ರಃ ಸ ಮೇ ಪುತ್ರೋ ಭವಿಷ್ಯತಿ ||

''ಅಣ್ಣ-ತಮ್ಮಂದಿರಿಲ್ಲದ, ಅಲಂಕೃತಳಾದ ಕನ್ಯೆಯನ್ನು ನಿನಗೆ ದಾನ ಮಾಡುವೆನು. ಇವಳಲ್ಲಿ ಜನಿಸಿದ ಮಗನು ನನ್ನ ಮಗನಾಗುವನು (ಅವನನ್ನು ನನಗೆ ದತ್ತು ಕೊಡಬೇಕು)'' ಎಂಬ ಕರಾರಿನಿಂದ ಕನ್ಯಾದಾನ ಮಾಡಿಕೊಡುವದು **ಪುತ್ರಿಕಾಧರ್ಮ.** ಆದರೆ ಪ್ರಕೃತ ಆಕೂತಿಗೆ ಅಣ್ಣ-ತಮ್ಮಂದಿರು ಇರುವರು. ಆದ್ದರಿಂದ ನಿಜವಾಗಿ ಪುತ್ರಿಕಾಧರ್ಮವು ಇಲ್ಲಿ ಅನ್ವಯಿಸುವದಿಲ್ಲ.

ಹೀಗಿದ್ದರೂ ರಾಜನು ತನಗೆ ರಾಜ್ಯಭಾರ ಮಾಡಲು ಗಂಡುಸಂತತಿ ಇಲ್ಲವಾದ್ದರಿಂದ ಆ ಕಾರಣಕ್ಕೆ ಮಗಳ ಮಗನನ್ನು ಸ್ವೀಕರಿಸಿದ್ದಲ್ಲ. ಪರಂತು ಇವಳಲ್ಲಿ ಸಾಕ್ಷಾತ್ ವಿಷ್ಣುವೇ ಅವತರಿಸುವನೆಂದು ತಿಳಿದವನಾದ್ದರಿಂದ ಅವನ ತಂದೆ ನಾನಾದರೆ ವಿಶೇಷಜ್ಞಾನ ಪಡೆದು ಮುಕ್ತಿಯಲ್ಲಿ ಆನಂದಾತಿಶಯ ಪಡೆಯಬಹುದೆಂಬ ಉದ್ದೇಶದಿಂದ, ಭ್ರಾತೃಗಳಿದ್ದರೂ ಯಜ್ಞನಾಮಕ ಭಗವಂತನಂತಹ ಭ್ರಾತೃಗಳಿಲ್ಲದಿರುವದರಿಂದ ಈ ಧರ್ಮ ಇಲ್ಲಿ ಅನ್ವಯಿಸುವದು ಎಂದು ತಿಳಿಯಬೇಕು. ||೨||

**ಪ್ರಜಾಪತಿಃ ಸ ಭಗವಾನ್ ರುಚಿಸ್ತಸ್ಯಾಮಜೀಜನತ್ ।**
**ಮಿಥುನಂ ಬ್ರಹ್ಮವರ್ಚಸ್ವೀ ಪರಮೇಣ ಸಮಾಧಿನಾ ॥೩॥**

ಬ್ರಹ್ಮವರ್ಚಸ್ವೀ=ಬ್ರಹ್ಮತೇಜಸ್ಸುಳ್ಳ, ಭಗವಾನ್ ರುಚಿಃ ಪ್ರಜಾಪತಿಃ=ಪೂಜ್ಯನಾದ ಪ್ರಜೇಶ್ವರನಾದ ರುಚಿಯು ತಸ್ಯಾಂ=ಆ ಆಕೂತಿಯಲ್ಲಿ ಪರಮೇಣ ಸಮಾಧಿನಾ=ಶ್ರೀಹರಿಯ ಧ್ಯಾನದ ಪುಣ್ಯಪ್ರಭಾವದಿಂದ ಮಿಥುನಂ=ದ್ವಂದ್ವವನ್ನು ಅರ್ಥಾತ್ ಒಂದು ಹೆಣ್ಣು ಒಂದು ಗಂಡು ಮಕ್ಕಳನ್ನು ಅಜೀಜನತ್=ಹುಟ್ಟಿಸಿದನು. ॥೩॥

**ಯಸ್ತಯೋಃ ಪುರುಷಃ ಸಾಕ್ಷಾದ್ ವಿಷ್ಣುರ್ಯಜ್ಞಸ್ವರೂಪಧೃಕ್ ।**
**ಯಾ ಸ್ತ್ರೀ ಸಾ ದಕ್ಷಿಣಾ ಭೂತೇರಂಶಭೂತಾಽನಪಾಯಿನೀ ॥೪॥**

ತಯೋಃ=ಆ ಎರಡು ಮಕ್ಕಳಲ್ಲಿ ಯಃ ಪುರುಷಃ=ಯಾವನು ಗಂಡೋ ಸಃ=ಅವನು ಯಜ್ಞಸ್ವರೂಪಧೃಕ್=ಯಜ್ಞನಾಮಕನಾಗಿ ಅವತಾರ ಮಾಡಿದ, ಸಾಕ್ಷಾತ್ ವಿಷ್ಣುಃ=ಸಾಕ್ಷಾತ್ ಶ್ರೀಹರಿಯೇ ಆಗಿದ್ದಾನೆ.

ವಿಜಯಧ್ವಜೀಯ ಪ್ರಕಾರ :-

(ಅರ್ಥ ೧. :- ತಯೋಃ=ಆ ಎರಡು ಮಕ್ಕಳಲ್ಲಿ ಯಃ ಪುರುಷಃ=ಯಾವನು ಗಂಡೋ ಸಃ=ಅವನು, ಸ್ವರೂಪಧೃಕ್=ಸ್ವಾಭಾವಿಕಸೌಂದರ್ಯವನ್ನು ಧಾರಣ ಮಾಡಿದಂತಹ, ನಾಮ್ನಾ ಯಜ್ಞಃ=ಯಜ್ಞ ಎಂಬ ಹೆಸರಿನಿಂದ ಅವತರಿಸಿದ ವಿಷ್ಣುಃ=ಶ್ರೀಹರಿಯೇ ಆಗಿದ್ದಾನೆ.

ಅರ್ಥ ೨. :- ಅಥವಾ ''ಯಜ್ಞಸ್ವರೂಪಧೃಕ್'' ಎಂಬುದನ್ನು ಸಮಸ್ತಪದ ಮಾಡಿಕೊಂಡು, ಯಜ್ಞಸ್ವರೂಪಧೃಕ್=ಯಜ್ಞನಾಮಕನಾಗಿ ಅವತಾರ ಮಾಡಿದ, ಸಾಕ್ಷಾತ್ ವಿಷ್ಣುಃ=ಸಾಕ್ಷಾತ್ ಶ್ರೀಹರಿಯೇ ಆಗಿದ್ದಾನೆ ಎಂಬ ಅರ್ಥವನ್ನೂ ತಿಳಿಯಬಹುದು.)

ಇನ್ನು, ಯಾ ಸ್ತ್ರೀ=ಯಾವಳು ಹೆಣ್ಣೋ ಸಾ=ಅವಳು, ಅನಪಾಯಿನೀ=ಭಗವಂತನಿಂದ ನಿತ್ಯಾವಿಯೋಗಿನಿಯಾದ, ನಾಮ್ನಾ ದಕ್ಷಿಣಾ=ದಕ್ಷಿಣಾ ಎಂಬ ಹೆಸರಿನಿಂದ ಅವತರಿಸಿದ ಅವಳು ಭೂತೇಃ=ಮಹಾಲಕ್ಷ್ಮೀದೇವಿಯ ಅಂಶಭೂತಾ=ಸ್ವರೂಪಾಂಶಳೇ (ಮಹಾಲಕ್ಷ್ಮಿಯ ಅವತಾರಳೇ) ಆಗಿದ್ದಾಳೆ.

''ಅನಪಾಯಿನೀ'' ಅರ್ಥವೈಶಿಷ್ಟ್ಯ

ಇಲ್ಲಿ ಅನಪಾಯಿನೀ ಎಂಬುದಕ್ಕೆ ಎರಡು ಅರ್ಥಗಳನ್ನು ಹೇಳಿದ್ದಾರೆ.

೧) ಮಹಾಲಕ್ಷ್ಮೀದೇವಿಯು ಭಗವಂತನಿಂದ ನಿತ್ಯಾವಿಯೋಗಿನಿಯಾದವಳು ಎಂದು ಒಂದು ಅರ್ಥ.

೨) ಜನ್ಮ-ಮರಣ ರಹಿತಳು ಎನ್ನುವುದು ಮತ್ತೊಂದು ಅರ್ಥ.

ಯಾವ ಕಾರಣ ಮಹಾಲಕ್ಷ್ಮೀದೇವಿಯು ಭಗವಂತನಿಂದ ನಿತ್ಯಾವಿಯೋಗಿನಿಯಾಗಿದ್ದಾಳೋ ಆ ಕಾರಣ ಭಗವಂತನು ''ಯಜ್ಞ''ನಾಮಕನಾಗಿ ಅವತಾರ ಮಾಡಿದಾಗ ತಾನೂ ''ದಕ್ಷಿಣಾ''ನಾಮಕಳಾಗಿ ಅವತಾರ ಮಾಡಿದ್ದಾಳೆ ಎನ್ನುವುದು ಒಂದು.

ಮತ್ತು ಭಗವಂತನಿಗೆ ಜನ್ಮ-ಮರಣಗಳಿಲ್ಲದ ಕಾರಣ ಭಗವಂತನಿಗೆ ಹೇಗೆ ಪ್ರಾದುರ್ಭಾವ ಮಾತ್ರವೋ, ಹಾಗೆ ಮಹಾಲಕ್ಷ್ಮೀದೇವಿಗೂ ಜನ್ಮ-ಮರಣಗಳಿಲ್ಲವಾದ್ದರಿಂದ ಭಗವಂತನಂತೆ ಮಹಾಲಕ್ಷ್ಮೀದೇವಿಗೂ ಕೇವಲ ಪ್ರಾದುರ್ಭಾವ ಮಾತ್ರ ಎಂದು ತಿಳಿಯಬೇಕು. ॥೪॥

**ಆನಿನ್ಯೇ ಸ್ವಗೃಹಂ ಪುತ್ರ್ಯಾಃ ಪುತ್ರಂ ವಿತತರೋಚಿಷಮ್ ।**
**ಸ್ವಾಯಂಭುವೋ ಮುದಾ ಯುಕ್ತೋ ರುಚಿರ್ಜಗ್ರಾಹ ದಕ್ಷಿಣಾಮ್ ॥೫॥**

ಮುದಾ ಯುಕ್ತಃ=ಸಂತುಷ್ಟನಾದ ಸ್ವಾಯಂಭುವಃ=ಸ್ವಾಯಂಭುವ ಮನುವು ವಿತತರೋಚಿಷಂ=ವ್ಯಾಪ್ತವಾದ ಪ್ರಕಾಶವುಳ್ಳ ಪುತ್ರ್ಯಾಃ ಪುತ್ರಂ=ಮಗಳ ಮಗನಾದ ಯಜ್ಞನಾಮಕ ಭಗವಂತನನ್ನು ಸ್ವಗೃಹಂ ಆನಿನ್ಯೇ=ತನ್ನ ಮನೆಗೆ ಕರೆತಂದನು. ರುಚಿಃ=ರುಚಿಯು ದಕ್ಷಿಣಾಂ=ದಕ್ಷಿಣಾಳನ್ನು ಜಗ್ರಾಹ=ಸ್ವೀಕರಿಸಿದನು. ॥೫॥

**ತಾಂ ಕಾಮಯಾನಾಂ ಭಗವಾನುವಾಹ ಯಜುಷಾಂ ಪತಿಃ ।**
**ತುಷ್ಟಾಯಾಂ ತೋಷಮಾಪನ್ನೋऽಜನಯದ್ ದ್ವಾದಶಾತ್ಮಜಾನ್ ॥೬॥**

ಯಜುಷಾಂ ಪತಿಃ=ಯಜ್ಞಗಳಿಗೆ, ವೇದಗಳಿಗೆ ಸ್ವಾಮಿಯಾದ ಭಗವಾನ್=ಯಜ್ಞನಾಮಕ ಶ್ರೀಹರಿಯು ಕಾಮಯಾನಾಂ ತಾಂ ಉವಾಹ=ತನ್ನನ್ನು ಅಪೇಕ್ಷಿಸುವ ದಕ್ಷಿಣಾಳನ್ನು ಮದುವೆಯಾದನು. ತುಷ್ಟಾಯಾಂ=ತನ್ನ ಅಪೇಕ್ಷೆಯ ಮೇರೆಗೆ ಯಜ್ಞನ ಪತ್ನಿಯಾದುದರಿಂದ ಸಂತುಷ್ಟಳಾದ ದಕ್ಷಿಣಾಳಲ್ಲಿ ತೋಷಂ ಆಪನ್ನಃ=ಸಂತೋಷ ಹೊಂದಿದವನಾಗಿ ದ್ವಾದಶಾತ್ಮಜಾನ್=ಹನ್ನೆರಡು ಮಕ್ಕಳನ್ನು ಅಜನಯತ್=ಹುಟ್ಟಿಸಿದನು. ॥೬॥

ಯಜ್ಞನಿಂದ ಹುಟ್ಟಿದ ಹನ್ನೆರಡುಜನ ಮಕ್ಕಳ ಹೆಸರುಗಳನ್ನು ಹೇಳುತ್ತಾರೆ -

**ತೋಷಃ ಪ್ರತೋಷಃ ಸಂತೋಷೋ ಭದ್ರಃ ಶಾಂತಿರಿಡಸ್ಪತಿಃ ।**
**ಇಂದ್ರಃ ಕವಿರ್ಭುವಃ ಸ್ವಾಹಃ ಸುದೇವೋ ರೋಚನೋ ದ್ವಿಷಟ್ ॥೭॥**

ತೋಷ, ಪ್ರತೋಷ, ಸಂತೋಷ, ಭದ್ರ, ಶಾಂತಿ, ಇಡಸ್ಪತಿ, ಇಂದ್ರ, ಕವಿ, ಭುವ, ಸ್ವಾಹ, ಸುದೇವ, ರೋಚನ ಎಂದು ಆ ಹನ್ನೆರಡುಜನ ಮಕ್ಕಳು. ।।೭।।

**ತುಷಿತಾ ನಾಮ ತೇ ದೇವಾ ಆಸನ್ ಸ್ವಾಯಂಭುವಾಂತರೇ ।**
**ಮರೀಚಿಮಿಶ್ರಾ ಋಷಯೋ ಯಜ್ಞಃ ಸುರಗಣೇಶ್ವರಃ ।।೮।।**

ಸ್ವಾಯಂಭುವಾಂತರೇ=ಸ್ವಾಯಂಭುವ ಮನ್ವಂತರದಲ್ಲಿ ತೇ=ಆ ಹನ್ನೆರಡು ಜನರು ತುಷಿತಾಃ ನಾಮ ದೇವಾಃ=ತುಷಿತಾ ಎಂಬ ಹೆಸರಿನ ದೇವತೆಗಳು ಆಸನ್=ಆದರು. ಮರೀಚಿಮಿಶ್ರಾಃ=ಮರೀಚಿ ಮೊದಲಾದ ಏಳು ಜನರು ಋಷಯಃ ಆಸನ್=ಋಷಿಗಳಾದರು. ಯಜ್ಞಃ=ಯಜ್ಞನಾಮಕನಾದ ಶ್ರೀಹರಿಯೇ ಸುರಗಣೇಶ್ವರಃ (ಆಸೀತ್)=ಇಂದ್ರನಾದನು. ।।೮।।

**ಪ್ರಿಯವ್ರತೋತ್ತಾನಪಾದೌ ಮನುಪುತ್ರೌ ಮಹೌಜಸೌ ।**
**ತತ್ಪುತ್ರಪೌತ್ರನಪ್ತ್ರೂಣಾಮನುವೃತ್ತಂ ತದಂತರಮ್ ।।೯।।**

ಮಹೌಜಸೌ=ಬಹುಪರಾಕ್ರಮಿಗಳಾದ ಪ್ರಿಯವ್ರತೋತ್ತಾನಪಾದೌ=ಪ್ರಿಯವ್ರತ ಹಾಗೂ ಉತ್ತಾನಪಾದ ಎಂಬುವವರು ಮನುಪುತ್ರೌ=ಮನುವಿನ ಮಕ್ಕಳಾಗಿ ಹುಟ್ಟಿದರು. ಈ ರೀತಿಯಾಗಿ ತದಂತರಂ=ಸ್ವಾಯಂಭುವ ಮನ್ವಂತರವು ತತ್ಪುತ್ರಪೌತ್ರನಪ್ತ್ರೂಣಾಂ= ಸ್ವಾಯಂಭುವ ಮನುವಿನ ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳು (ಮೊಮ್ಮಕ್ಕಳ ಮಕ್ಕಳು) ಇವರುಗಳಿಂದ ಅನುವೃತ್ತಂ=ಪ್ರವೃತ್ತವಾಯಿತು.

ಮನ್ವಂತರದ ವಿಶೇಷ ವಿಚಾರ :-

**ಮನ್ವಂತರಂ ಮನುರ್ದೇವಾ ಮನುಪುತ್ರಾಃ ಸುರೇಶ್ವರಾಃ ।**
**ಋಷಯೋಽಂಶಾವತಾರಾಶ್ಚ ಹರೇಃ ಷಡ್ವಿಧಮುಚ್ಯತೇ ।।**

ಎಂಬ ಪ್ರಮಾಣಾನುಸಾರವಾಗಿ ಒಂದು ಮನ್ವಂತರವೆಂದರೆ ಮನು, ದೇವತೆಗಳು, ಮನುವಿನ ಮಕ್ಕಳು, ಇಂದ್ರ, ಋಷಿಗಳು ಹಾಗೂ ಶ್ರೀಹರಿಯ ಅವತಾರ ಹೀಗೆ ಆರರಿಂದ ಕೂಡಿದ್ದಾಗಿರಬೇಕು.

ಪ್ರಕೃತ ಮೇಲಿನ ಎರಡು ಶ್ಲೋಕಗಳಿಂದ ಈ ಮನ್ವಂತರದ ಆರನ್ನೂ ಹೇಳಿದಂತಾಯಿತು. ೧. ಸ್ವಾಯಂಭುವನೇ ಮನುವು, ೨. ತುಷಿತರೆಂಬ ದೇವತೆಗಳು, ೩. ಮರೀಚಿ ಮುಂತಾದವರೇ ಸಪ್ತಋಷಿಗಳು, ೪.ಪ್ರಿಯವ್ರತ-ಉತ್ತಾನಪಾದರು ಮನುಪುತ್ರರು, ೫. ಯಜ್ಞನೇ ಶ್ರೀಹರಿಯ ಅವತಾರ ೬. ಅವನೇ ಇಂದ್ರ. ಹೀಗೆ

ಮನ್ವಂತರಕ್ಕೆ ಬೇಕಾದ ಆರನ್ನು ತಿಳಿಯಬೇಕು. (ಇಲ್ಲಿ ಯಜ್ಞನಿಗೇ ಎರಡು ಸ್ಥಾನಗಳು ಬರುವುದರಿಂದ ೬ ಆಗುವದು.)॥೯॥ 27-12-21

**ದೇವಹೂತಿಮದಾತ್ ತಾತ ಕರ್ದಮಾಯಾತ್ಮಜಾಂ ಮನುಃ ।**
**ತತ್ಸಂಬಂಧಿ ಶ್ರುತಪ್ರಾಯಂ ಭವತಾ ಗದತೋ ಮಮ ॥೧೦॥**

ಹೇ ತಾತ=ವಿದುರನೇ ! ಮನುಃ=ಮನುವು ಆತ್ಮಜಾಂ=ತನ್ನ ಮಗಳಾದ ದೇವಹೂತಿಂ=ದೇವಹೂತಿಯನ್ನು ಕರ್ದಮಾಯ ಅದಾತ್=ಕರ್ದಮರಿಗೆ ಮದುವೆ ಮಾಡಿಕೊಟ್ಟನು. ಗದತಃ ಮಮ (ಸಕಾಶಾತ್)=ಚರಿತ್ರೆಯನ್ನು ಹೇಳುವ ನನ್ನ ದೆಸೆಯಿಂದ ತತ್ಸಂಬಂಧಿ=ಆ ದೇವಹೂತಿಯ ಚರಿತ್ರೆಯು (ಈ ಹಿಂದೆಯೇ ೩-೨೪ ರಿಂದ ೩-೩೪ ವರೆಗೆ) ಭವತಾ=ನಿನ್ನಿಂದ ಶ್ರುತಪ್ರಾಯಂ=ಬಹುಭಾಗವು ಕೇಳಲ್ಪಟ್ಟಿದೆ. ಕೇಳದೇ ಇರುವ ವಿಚಾರವು ಸ್ವಲ್ಪ ಮಾತ್ರ ಉಳಿದಿದೆ ಎಂದು ಭಾವ. ॥೧೦॥

**ದಕ್ಷಾಯ ಬ್ರಹ್ಮಪುತ್ರಾಯ ಪ್ರಸೂತಿಂ ಭಗವಾನ್ ಮನುಃ ।**
**ಪ್ರಾಯಚ್ಛದ್ ಯತ್ಕೃತಃ ಸರ್ಗಸ್ತ್ರಿಲೋಕ್ಯಾಂ ವಿತತೋ ಮಹಾನ್ ॥೧೧॥**

ಭಗವಾನ್ ಮನುಃ=ಪೂಜ್ಯನಾದ ಮನುವು, ಯತ್ಕೃತಃ=ಯಾವನಿಂದ ಮಾಡಲ್ಪಟ್ಟ ಮಹಾನ್=ದೊಡ್ಡದಾದ ಸರ್ಗಃ=ಸೃಷ್ಟಿಯು ತ್ರಿಲೋಕ್ಯಾಂ=ಮೂರು ಲೋಕಗಳಲ್ಲಿ ವಿತತಃ=ವ್ಯಾಪ್ತವಾಯಿತೋ (ತಸ್ಮೈ=ಅಂತಹ) ಬ್ರಹ್ಮಪುತ್ರಾಯ=ಬ್ರಹ್ಮನ ಮಗನಾದ ದಕ್ಷಾಯ=ದಕ್ಷಪ್ರಜಾಪತಿಗೆ ಪ್ರಸೂತಿಂ=ಪ್ರಸೂತಿ ಎಂಬ ಹೆಸರಿನ ತನ್ನ ಮಗಳನ್ನು ಪ್ರಾಯಚ್ಛತ್=ವಿವಾಹ ಮಾಡಿಕೊಟ್ಟನು. ॥೧೧॥

ದೇವಹೂತಿಯ ಉಳಿದ ವಿಷಯವನ್ನು ಹೇಳುವರು -

**ಯಾಃ ಕರ್ದಮಸುತಾಃ ಪ್ರೋಕ್ತಾ ನವ ಬ್ರಹ್ಮರ್ಷಿಪತ್ನಯಃ ।**
**ತಾಸಾಂ ಪ್ರಸೂತಿಪ್ರಸರಂ ಪ್ರೋಚ್ಯಮಾನಂ ನಿಬೋಧ ಮೇ ॥೧೨॥**

ಯಾಃ=ಯಾವ ಬ್ರಹ್ಮರ್ಷಿಪತ್ನಯಃ=ಬ್ರಹ್ಮರ್ಷಿಗಳ ಪತ್ನಿಯರಾದ ಕರ್ದಮಸುತಾಃ ನವ=ಕರ್ದಮರ ಒಂಬತ್ತು ಜನ ಹೆಣ್ಣುಮಕ್ಕಳು ಪ್ರೋಕ್ತಾಃ=ಹಿಂದೆ ತೃತೀಯಸ್ಕಂಧದಲ್ಲಿ ಹೇಳಲ್ಪಟ್ಟರೋ ತಾಸಾಂ=ಅವರ ಪ್ರಸೂತಿಪ್ರಸರಂ=ಸಂತಾನದ ವಿಸ್ತಾರವನ್ನು ಮೇ ಪ್ರೋಚ್ಯಮಾನಂ=ನನ್ನಿಂದ ಹೇಳಲ್ಪಡುವದನ್ನು ನಿಬೋಧ=ಕೇಳು. ॥೧೨॥

**ಪತ್ನೀ ಮರೀಚೇಸ್ತು ಕಲಾ ಸುಷುವೇ ಕರ್ದಮಾತ್ಮಜಾ ।**
**ಕಶ್ಯಪಂ ಪೂರ್ಣಿಮಾನಂ ಚ ಯಯೋರಾಪೂರಿತಂ ಜಗತ್ ॥೧೩॥**

ಮರೀಚೇಃ=ಮರೀಚಿ ಋಷಿಗಳ ಪತ್ನೀ=ಹೆಂಡತಿಯಾದ, ಕರ್ದಮಾತ್ಮಜಾ=ಕರ್ದಮರ ಮಗಳಾದ ಕಲಾ ತು=ಕಲಾ ಎಂಬುವಳಾದರೋ, ಯಯೋಃ=ಯಾರಿಬ್ಬರ ಸಂತತಿಯಿಂದ ಜಗತ್ ಆಪೂರಿತಂ=ಪ್ರಪಂಚವು ತುಂಬಿಕೊಂಡಿತೋ ಅಂತಹ ಕಶ್ಯಪಂ=ಕಶ್ಯಪ ಋಷಿಯನ್ನು ಚ=ಮತ್ತು ಪೂರ್ಣಿಮಾನಂ=ಪೂರ್ಣಿಮಾನ್ ಎಂಬುವವನನ್ನು ಸುಷುವೇ=ಹಡೆದಳು.

ವಿ.ವಿ. ಃ- ಪೂರ್ಣಿಮಾನಂ ಎಂಬುವುದು ಇಮನಿಚ್‌ಪ್ರತ್ಯಯಾಂತವಾದ ಶಬ್ದ. ನಕಾರಾಂತ ಪುಲ್ಲಿಂಗ ಪೂರ್ಣಿಮನ್ ಶಬ್ದ, ಅಣಿಮಾನಂ ಎಂಬ ಶಬ್ದದಂತೆ ದ್ವಿತೀಯಾವಿಭಕ್ತಿ ಏಕವಚನ. ಹೊರತು ಸ್ತ್ರೀಲಿಂಗವಲ್ಲ. ।।೧೩।।

**ಪೂರ್ಣಿಮಾಽಸೂತ ವಿರಜಂ ವಿಶ್ವಗಾಂ ಚ ಪರಂತಪ ।**
**ದೇವಕುಲ್ಯಾ ಹರೇಃ ಪಾದಶೌಚಾದ್ ಯಾಽಭೂತ್ ಸರಿದ್ ದಿವಃ ।।೧೪।।**

ಹೇ ಪರಂತಪ !=ಶತ್ರುತಾಪಕರನಾದ ವಿದುರನೇ ! ಪೂರ್ಣಿಮಾ=ಪೂರ್ಣಿಮಾನ್ ಎಂಬುವವನು ವಿರಜಂ=ವಿರಜ ಎಂಬ ಹೆಸರಿನ ಮಗನನ್ನು ಅಸೂತ=ಪ್ರಸವಿಸಿದನು. ಚ=ಮತ್ತು ದೇವಕುಲ್ಯಾ=ದೇವತೆಗಳ ಕುಲಕ್ಕೆ ಪ್ರಿಯಳಾದ ಯಾ=ಯಾವ ವಿಶ್ವಗಾ ಎಂಬುವವಳು ಹರೇಃ=ಶ್ರೀಹರಿಯ ಪಾದಶೌಚಾತ್=ಪಾದಪ್ರಕ್ಷಾಲನದಿಂದ ದಿವಃ ಸರಿದ್ ಅಭೂತ್=ರೂಪಾಂತರದಿಂದ ಸ್ವರ್ಗಂಗೆಯಾದಳೋ ಅಂತಹ ವಿಶ್ವಗಾಂ=ವಿಶ್ವಗಾ ಎಂಬ ಮಗಳನ್ನೂ ಅಸೂತ=ಪ್ರಸವಿಸಿದನು. ।।೧೪।।

**ಅತ್ರೇಃ ಪತ್ನ್ಯನಸೂಯಾ ತ್ರೀನ್ ಜಜ್ಞೇ ಸುಯಶಸಃ ಸುತಾನ್ ।**
**ದತ್ತಂ ದುರ್ವಾಸಸಂ ಸೋಮಮಾತ್ಮೇಶಬ್ರಹ್ಮಸಂಭವಾನ್ ।।೧೫।।**

ಅತ್ರೇಃ=ಅತ್ರಿಋಷಿಗಳ ಪತ್ನೀ=ಹೆಂಡತಿಯಾದ ಅನಸೂಯಾ=ಅನಸೂಯಾ ಎಂಬುವವಳು ಸುಯಶಸಃ=ಒಳ್ಳೆಯ ಕೀರ್ತಿವಂತರಾದ, ಆತ್ಮೇಶಬ್ರಹ್ಮಸಂಭವಾನ್=ವಿಷ್ಣು-ರುದ್ರ-ಬ್ರಹ್ಮರುಗಳ ಸಹಭಾವವುಳ್ಳ ದತ್ತಂ, ದುರ್ವಾಸಸಂ, ಸೋಮಂ=ದತ್ತ ದುರ್ವಾಸ ಸೋಮ ಎಂಬ ಹೆಸರಿನ ಸುತಾನ್=ಮಕ್ಕಳನ್ನು ಜಜ್ಞೇ=ಪಡೆದಳು.

ಇಲ್ಲಿ ಚಂದ್ರನು (ಸೋಮನು) ಮಾತ್ರ ಬ್ರಹ್ಮನ ಅಂಶವುಳ್ಳವನು. ದತ್ತ-ದುರ್ವಾಸಸರು ಕ್ರಮವಾಗಿ ವಿಷ್ಣು-ರುದ್ರರ ಸ್ವರೂಪರೇ ಆಗಿದ್ದಾರೆ. ಆದರೂ ಛತ್ರಿನ್ಯಾಯದಿಂದ ಸಹಭಾವವನ್ನು ಹೇಳಿದೆ ಎಂದು ತಿಳಿಯಬೇಕು. ।।೧೫।।

ವಿದುರ ಉವಾಚ -

**ಅತ್ರೇರ್ಗೃಹೇ ಸುರಶ್ರೇಷ್ಠಾಃ ಸ್ಥಿತ್ಯಂತೋತ್ಪತ್ತಿಹೇತವಃ ।**
**ಕಿಂಸ್ವಿಚ್ಚಿಕೀರ್ಷವೋ ಜಾತಾ ಏತದಾಖ್ಯಾಹಿ ಮೇ ಗುರೋ ॥೧೬॥**

ಹೇ ಗುರೋ=ಮೈತ್ರೇಯರೇ ! ಅತ್ರೇಃ=ಅತ್ರಿಋಷಿಗಳ ಗೃಹೇ=ಪತ್ನಿಯಲ್ಲಿ ಸ್ಥಿತ್ಯಂತೋತ್ಪತ್ತಿಹೇತವಃ=ಪಾಲನ-ಸಂಹಾರ-ಉತ್ಪತ್ತಿಗಳಿಗೆ ಕಾರಣರಾದ ಸುರಶ್ರೇಷ್ಠಾಃ= ದೇವತೋತ್ತಮರಾದ ವಿಷ್ಣು-ರುದ್ರ-ಬ್ರಹ್ಮರುಗಳು ಕಿಂಸ್ವಿತ್ ಚಿಕೀರ್ಷವಃ=ಏನೇನು ಮಾಡಬೇಕೆಂಬ ಇಚ್ಛೆಯುಳ್ಳವರಾಗಿ ಜಾತಾಃ=ಜನಿಸಿದರು ? ಏತತ್=ಇದನ್ನು ಮೇ=ನನಗೆ ಆಖ್ಯಾಹಿ=ಹೇಳಿರಿ. ॥೧೬॥

ಮೈತ್ರೇಯ ಉವಾಚ -

**ಬ್ರಹ್ಮಣಾ ಚೋದಿತಃ ಸೃಷ್ಟಾವತ್ರಿರ್ಬ್ರಹ್ಮವಿದಾಂ ವರಃ ।**
**ಸಹ ಪತ್ನ್ಯಾ ಯಯಾವೃಕ್ಷಂ ಕುಲಾದ್ರಿಂ ತಪಸಿ ಸ್ಥಿತಃ ॥೧೭॥**

ಸೃಷ್ಟೌ=ಪ್ರಜಾಸೃಷ್ಟಿ ಮಾಡುವ ಕಾರ್ಯದಲ್ಲಿ ಬ್ರಹ್ಮಣಾ=ಚತುರ್ಮುಖನಿಂದ ಚೋದಿತಃ=ಆಜ್ಞಪ್ತನಾದ, ಬ್ರಹ್ಮವಿದಾಂ ವರಃ=ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನಾದ ಅತ್ರಿಃ= ಅತ್ರಿಋಷಿಯು ಪತ್ನ್ಯಾ ಸಹ=ಹೆಂಡತಿಯಿಂದ ಕೂಡಿಕೊಂಡು ಋಕ್ಷಂ ಕುಲಾದ್ರಿಂ= ಋಕ್ಷವೆಂಬ ಪರ್ವತವನ್ನು ಕುರಿತು ಯಯೌ=ಹೋದನು. ಅಲ್ಲಿ ತಪಸಿ ಸ್ಥಿತಃ=ತಪಸ್ಸಿನಲ್ಲಿ ನಿರತನಾದನು. ॥೧೭॥

**ತಸ್ಮಿನ್ ಪ್ರಸೂನಸ್ತಬಕಪಲಾಶಾಶೋಕಕಾನನೇ ।**
**ವಾರ್ಭಿಃ ಸ್ರವದ್ಭಿರುದ್ಘುಷ್ಟೇ ನಿರ್ವಿಂಧ್ಯಾಯಾಃ ಸಮಂತತಃ ॥೧೮॥**

**ಪ್ರಾಣಾಯಾಮೇನ ಸಂಯಮ್ಯ ಮನೋ ವರ್ಷಶತಂ ಮುನಿಃ ।**
**ಅತಿಷ್ಠದೇಕಪಾದೇನ ನಿರ್ದ್ವಂದ್ವೋಽನಿಲಭೋಜನಃ ॥೧೯॥**

ಪ್ರಸೂನಸ್ತಬಕಪಲಾಶಾಶೋಕಕಾನನೇ=ಹೂಗಳ ಗೊಂಚಲಗಳುಳ್ಳ ಮುತ್ತಲವೃಕ್ಷ ಹಾಗೂ ಅಶೋಕವೃಕ್ಷಗಳ ಅಡವಿಯುಳ್ಳ ನಿರ್ವಿಂಧ್ಯಾಯಾಃ=ವಿಂಧ್ಯಾ (ನಿರ್ವಿಂಧ್ಯಾ) ಎಂಬ ಹೆಸರಿನ ನದಿಯಿಂದ ಸ್ರವದ್ಭಿಃ=ಹರಿಯುವ ವಾರ್ಭಿಃ=ನೀರುಗಳಿಂದ ಸಮಂತತಃ=ಎಲ್ಲೆಡೆ ಉದ್‌ಘುಷ್ಟೇ=ಶಬ್ದಿತವಾದ (ಗರ್ಜಿತವಾದ) ತಸ್ಮಿನ್ ಆ ಋಕ್ಷಪರ್ವತದಲ್ಲಿ ॥೧೮॥

ಮುನಿಃ=ಅತ್ರಿ ಋಷಿಯು ಪ್ರಾಣಾಯಾಮೇನ=ವಾಯುನಿರೋಧದಿಂದ ಮನಃ ಸಂಯಮ್ಯ=ಮನಸ್ಸನ್ನು ನಿಗ್ರಹಿಸಿ, ನಿರ್ದ್ವಂದ್ವಃ=ಶೀತೋಷ್ಣಾದಿಗಳಿಂದ ಉಂಟಾಗುವ ವ್ಯಥೆ ಇಲ್ಲದವರಾಗಿ, ಅನಿಲಭೋಜನಃ=ಗಾಳಿಯೇ ಆಹಾರವಾಗಿ ಉಳ್ಳವರಾಗಿ ಏಕಪಾದೇನ= ಒಂದೇ ಕಾಲಿನಿಂದ ವರ್ಷಶತಂ=ನೂರುವರ್ಷಗಳ ಪರ್ಯಂತವಾಗಿ ಅತಿಷ್ಠತ್= ನಿಂತುಕೊಂಡರು. (ನಿಂತು ತಪಸ್ಸು ಮಾಡಿದರು.)

ಒಂದು ಕ್ಷಣವೂ ಎರಡೂ ಕಾಲುಗಳನ್ನು ಇಡಲಿಲ್ಲವೆಂದು **ವರ್ಷಶತಂ** ಎಂಬಲ್ಲಿಯ ದ್ವಿತೀಯಾ ವಿಭಕ್ತಿಯಿಂದ ಸೂಚಿತವಾಗುವದು. ॥೧೯॥

**ಶರಣಂ ತಂ ಪ್ರಪದ್ಯೇಽಹಂ ಯ ಏವ ಜಗದೀಶ್ವರಃ ।**
**ಪ್ರಜಾಮಾತ್ಮಸಮಾಂ ಮಹ್ಯಂ ಪ್ರಯಚ್ಛತ್ವಿತಿ ಚಿಂತಯನ್ ॥೨೦॥**

ಯಃ ಏವ=ಯಾವ ಭಗವಂತನೊಬ್ಬನೇ ಜಗದೀಶ್ವರಃ=ಜಗನ್ನಿಯಾಮಕನಾಗಿರುವನೋ ತಂ=ಅವನನ್ನು ಕುರಿತು ಅಹಂ=ನಾನು "ಆತ್ಮಸಮಾಂ=ತನಗೆ ಸಮಾನನಾದ ಪ್ರಜಾಂ= ಸಂತತಿಯನ್ನು ಮಹ್ಯಂ=ನನಗೆ ಪ್ರಯಚ್ಛತು=ಕೊಡಲಿ" ಇತಿ ಚಿಂತಯನ್=ಹೀಗೆ ಆಲೋಚಿಸುತ್ತ ಶರಣಂ ಪ್ರಪದ್ಯೇ=ಮೊರೆ ಇಡುವೆನು. ॥೨೦॥

**ತಪ್ಯಮಾನಂ ತ್ರಿಭುವನಂ ಪ್ರಾಣಾಯಾಮೈಧಿತಾಗ್ನಿನಾ ।**
**ನಿರ್ಗತೇನ ಮುನೇರ್ಮೂರ್ಧ್ನಃ ಸಮೀಕ್ಷ್ಯ ಪ್ರಭವಸ್ತ್ರಯಃ ॥೨೧॥**

ಪ್ರಭವಃ ತ್ರಯಃ=ಸಮರ್ಥರಾದ ಬ್ರಹ್ಮ-ವಿಷ್ಣು-ಮಹೇಶ್ವರರು ಮುನೇಃ=ಅತ್ರಿಋಷಿಯ ಮೂರ್ಧ್ನಃ=ತಲೆಯಿಂದ ನಿರ್ಗತೇನ=ಹೊರಹೊರಟ ಪ್ರಾಣಾಯಾಮೈಧಿತಾಗ್ನಿನಾ= ಪ್ರಾಣಾಯಾಮದಿಂದ ಅಭಿವೃದ್ಧವಾದ ಬೆಂಕಿಯಿಂದ ತ್ರಿಭುವನಂ=ಮೂರು ಲೋಕವು ತಪ್ಯಮಾನಂ=ಸುಡಲ್ಪಡುವದನ್ನು ಸಮೀಕ್ಷ್ಯ=ನೋಡಿ,॥೨೧॥

**ಅಪ್ಸರೋಮುನಿಗಂಧರ್ವಸಿದ್ಧವಿದ್ಯಾಧರೋರಗೈಃ ।**
**ವಿತಾಯಮಾನಯಶಸೋ ಮುದಾಽಽಶ್ರಮಪದಂ ಯಯುಃ ॥೨೨॥**

ಅಪ್ಸರೋಮುನಿಗಂಧರ್ವಸಿದ್ಧವಿದ್ಯಾಧರೋರಗೈಃ=ಅಪ್ಸರಾಸ್ತ್ರೀಯರು, ಋಷಿಗಳು, ಗಂಧರ್ವರು, ಸಿದ್ಧರು, ವಿದ್ಯಾಧರರು, ನಾಗಗಳು ಇವರುಗಳಿಂದ ವಿತಾಯಮಾನಯಶಸಃ= ವಿಸ್ತರಿಸಲ್ಪಡುವ ಕೀರ್ತಿಯುಳ್ಳವರಾಗಿ ಮುದಾ=ಸಂತೋಷದಿಂದ ಆಶ್ರಮಪದಂ ಯಯುಃ=ಅತ್ರಿ ಋಷಿಗಳ ಆಶ್ರಮಕ್ಕೆ ಹೋದರು. ॥೨೨॥

**ತತ್ಪ್ರಾದುರ್ಭಾವಸಂಯೋಗವಿದ್ಯೋತಿತಮನಾ ಮುನಿಃ ।**
**ಉತ್ತಿಷ್ಠನ್ನೇಕಪಾದೇನ ದದೃಶೇ ವಿಬುಧರ್ಷಭಾನ್ ॥೨೩॥**

ತತ್ಪ್ರಾದುರ್ಭಾವಸಂಯೋಗವಿದ್ಯೋತಿತಮನಾಃ=ಆ ದೇವತೆಗಳ ಪ್ರಾದುರ್ಭಾವದಿಂದ ಮತ್ತು ಸಂಯೋಗ(ಸನ್ನಿಧಾನ)ದಿಂದ ಪ್ರಕಾಶಮಾನವಾದ ಮನಸುಳ್ಳ (ಇವರು ಹೊರಗೆ ಬಂದದ್ದನ್ನು ಮನಸ್ಸಿನಲ್ಲಿ ಕಂಡಂತಹ) ಮುನಿಃ=ಅತ್ರಿ ಋಷಿಯು ಏಕಪಾದೇನ=ಒಂದು ಕಾಲಿನಿಂದ ಉತ್ತಿಷ್ಠನ್=ಸರಿಯಾಗಿ (ಉತ್ಕೃಷ್ಟವಾಗಿ) ನಿಂತು ವಿಬುಧರ್ಷಭಾನ್=ಆ ದೇವತಾಶ್ರೇಷ್ಠರನ್ನು ದದೃಶೇ=ನೋಡಿದನು. ॥೨೩॥

**ಪ್ರಣಮ್ಯ ದಂಡವದ್ ಭೂಮಾವುಪತಸ್ಥೇಽರ್ಹಣಾಂಜಲಿಃ ।**
**ವೃಷಹಂಸಸುಪರ್ಣಸ್ಥಾನ್ ಸ್ವೈಃ ಸ್ವೈಶ್ಚಿಹ್ನೈಶ್ಚ ಚಿಹ್ನಿತಾನ್ ॥೨೪॥**

ವೃಷಹಂಸಸುಪರ್ಣಸ್ಥಾನ್=ಎತ್ತು, ಹಂಸಪಕ್ಷಿ, ಗರುಡ ಇವುಗಳ ಮೇಲೆ ಕುಳಿತಿರುವ, ಸ್ವೈಃ ಸ್ವೈಃ=ತಮ್ಮ ತಮ್ಮ ಚಿಹ್ನೈಃ=ತ್ರಿಶೂಲ-ಕಮಂಡಲು-ಚಕ್ರ ಮುಂತಾದ ಚಿಹ್ನೆಗಳಿಂದ ಚಿಹ್ನಿತಾನ್=ಕೂಡಿದ ದೇವತೆಗಳನ್ನು ಭೂಮೌ=ಭೂಮಿಯಲ್ಲಿ ದಂಡವತ್ ಪ್ರಣಮ್ಯ= ದಂಡಾಕಾರವಾಗಿ ಮಲಗುವ ಮೂಲಕ ನಮಸ್ಕರಿಸಿ ಅರ್ಹಣಾಂಜಲಿಃ= ಪೂಜಾಸಾಧನಗಳಾದ ಹೂ ಮುಂತಾದವುಗಳನ್ನು ಕೈಯಲ್ಲಿ ಹಿಡಿದು ಉಪತಸ್ಥೇ=ಪೂಜಿಸಿದನು. ॥೨೪॥

**ಕೃಪಾವಲೋಕೇನ ಲಸದ್ವದನೇನೋಪಲಂಭಿತಾನ್ ।**
**ತಚ್ರೋಚಿಷಾ ಪ್ರತಿಹತೇ ನಿಮೀಲ್ಯ ಮುನಿರಕ್ಷಿಣೀ ॥೨೫॥**

ಮುನಿಃ=ಅತ್ರಿ ಋಷಿಯು ಕೃಪಾವಲೋಕೇನ=ದಯಾದೃಷ್ಟಿಯಿಂದ ಲಸದ್ವದನೇನ= ಶೋಭಿಸುವ ಮುಖದಿಂದಲೂ ಉಪಲಂಭಿತಾನ್=ತಿಳಿಯಲ್ಪಟ್ಟ ದೇವತೆಗಳನ್ನು ತಚ್ರೋಚಿಷಾ=ಅವರ ಕಾಂತಿಯಿಂದ ಪ್ರತಿಹತೇ=ಪ್ರತಿಬದ್ಧವಾದ ನೋಡುವ ಶಕ್ತಿಯುಳ್ಳ ಅಕ್ಷಿಣೀ=ಕಣ್ಣುಗಳನ್ನು ನಿಮೀಲ್ಯ=ಮುಚ್ಚಿಕೊಂಡು,॥೨೫॥

**ಚೇತಸ್ತತ್ಪ್ರವಣಂ ಯುಂಜನ್ನಸ್ತಾವೀತ್ ಸಂಹತಾಂಜಲಿಃ ।**
**ಶ್ಲಕ್ಷ್ಣಯಾ ಸೂಕ್ತಯಾ ವಾಚಾ ಸರ್ವಲೋಕಗರೀಯಸಃ ॥೨೬॥**

ಚೇತಃ=ಮನಸ್ಸನ್ನು ತತ್ಪ್ರವಣಂ ಯುಂಜನ್=ಅವರಲ್ಲಿ ಮಗ್ನವಾಗುವಂತೆ ಯೋಜಿಸಿ, ಸಂಹತಾಂಜಲಿಃ=ಕೈಜೋಡಿಸಿ ಶ್ಲಕ್ಷ್ಣಯಾ=ಮಧುರವಾದ, ಸೂಕ್ತಯಾ=ವೈದಿಕವಾದ ವಾಚಾ=ಮಾತುಗಳಿಂದ ಸರ್ವಲೋಕಗರೀಯಸಃ=ಹದಿನಾಲ್ಕೂ ಲೋಕಗಳಲ್ಲಿರುವ ಜನರಿಗಿಂತ ಉತ್ತಮ, ಉತ್ತಮೋತ್ತಮ, ಉತ್ತಮೋತ್ತಮೋತ್ತಮರಾದ ವಿಬುಧರ್ಷಭಾನ್=ಆ ಮೂವರು ದೇವತೆಗಳನ್ನು ಅಸ್ತಾವೀತ್=ಸ್ತುತಿಸಿದನು. ॥೨೬॥

28-12-21

ಅತ್ರಿರುವಾಚ-

**ವಿಶ್ವೋದ್ಭವಸ್ಥಿತಿಲಯೇಷು ವಿಭಜ್ಯಮಾನೈ-**
**ರ್ಮಾಯಾಗುಣೈರನುಗುಣಂ ಪ್ರಗೃಹೀತದೇಹಾಃ ।**
**ಹೇ ಬ್ರಹ್ಮವಿಷ್ಣುಗಿರಿಶಾಃ ಪ್ರಣತೋಽಸ್ಮ್ಯಹಂ ವ-**
**ಸ್ತೇಭ್ಯಃ ಕ ಏವ ಭವತಾಂ ಮ ಇಹೋಪಹೂತಃ ॥೨೭॥**

ವಿಶ್ವೋದ್ಭವಸ್ಥಿತಿಲಯೇಷು=ಜಗತ್ತಿನ ಸೃಷ್ಟಿ-ಸ್ಥಿತಿ-ಸಂಹಾರಗಳನ್ನು ಮಾಡುವದಕ್ಕಾಗಿ ವಿಭಜ್ಯಮಾನೈಃ=ಪ್ರತ್ಯೇಕಿಸಲ್ಪಡುವ ಮಾಯಾಗುಣೈಃ=ಪ್ರಕೃತಿಪರಿಣಾಮಗಳಾದ ಸತ್ವರಜಸ್ತಮೋಗುಣಗಳಿಂದ ಅನುಗುಣಂ=ಕಾರ್ಯಾನುಕೂಲವಾಗಿ (ಅಂದರೆ ಸೃಷ್ಟಿ ಮಾಡಲು ರಜೋಗುಣಪ್ರವರ್ತಕನಾಗಿ, ಸ್ಥಿತಿಗಾಗಿ ಸತ್ವಗುಣಪ್ರವರ್ತಕನಾಗಿ, ಸಂಹಾರ ಮಾಡಲು ತಮೋಗುಣಪ್ರವರ್ತಕನಾಗಿ) ಪ್ರಗೃಹೀತದೇಹಾಃ=ದೇಹಗಳನ್ನು ಸ್ವೀಕರಿಸಿದ (ಅವತರಿಸಿದ) ಹೇ ಬ್ರಹ್ಮವಿಷ್ಣುಗಿರಿಶಾಃ!=ಬ್ರಹ್ಮ-ವಿಷ್ಣು-ಮಹೇಶ್ವರರೇ ! ತೇಭ್ಯಃ ವಃ=ಆ ನಿಮಗೆ ಅಹಂ=ನಾನು ಪ್ರಣತೋಽಸ್ಮಿ=ನಮಸ್ಕಾರ ಮಾಡುತ್ತೇನೆ. ಭವತಾಂ ಮಧ್ಯೇ=ನಿಮ್ಮಗಳ ಮಧ್ಯದಲ್ಲಿ ಮೇ=ನನ್ನಿಂದ ಇಹ=ಇಲ್ಲಿ ಉಪಹೂತಃ ಕಃ ಏವ=ಕರೆಯಲ್ಪಟ್ಟವನು ಯಾರು ? ಎಂಬುದನ್ನು ನೀವೇ ಹೇಳಿ.

''ತಂ ಶರಣಂ ಪ್ರಪದ್ಯೇ'' ಎಂದು ನಿಮ್ಮಗಳಲ್ಲಿ ಒಬ್ಬನಾದ, ಮೂರು ರೂಪ ಉಳ್ಳ ವಿಷ್ಣುವನ್ನು ಮಾತ್ರ ನಾನು ಕರೆದಿದ್ದು. ಅದರಲ್ಲಿ ವಿಷ್ಣುರೂಪ ಮಾತ್ರ ಕಾಣುತ್ತಿದೆ. ಬ್ರಹ್ಮ-ರುದ್ರನಾಮಕವಾದ ವಿಷ್ಣುವಿನ ಎರಡು ರೂಪಗಳು ಕಾಣುತ್ತಿಲ್ಲ. ಕಾಣುವ ಬ್ರಹ್ಮ-ರುದ್ರರು ವಿಷ್ಣುಭಿನ್ನರು. ನನ್ನಿಂದ ಕರೆಯಲ್ಪಡದವರು ಏಕೆ ಬಂದರು ? ಎಂದು ಭಾವ.

**ವಿಜಯಧ್ವಜೀಯ** :- ಭಕ್ತಿಯಿಂದ ರೋಮಾಂಚಿತನಾಗಿ ''ಬ್ರಹ್ಮಸ್ಥ-ರುದ್ರಸ್ಥ ಮತ್ತು ಪ್ರತ್ಯೇಕವಿರುವ ವಿಷ್ಣು ಈ ಮೂರು ಪುರುಷರಿಗೆ ಸಮರಾದ ಮೂವರು ಮಕ್ಕಳನ್ನು ಕೊಡಲಿ'' ಎಂಬ ತನ್ನ ಪೂರ್ವ ಸಂಕಲ್ಪವನ್ನು ಮರೆತಂತೆ ಅತ್ರಿಯು ದುಷ್ಟಮೋಹನಕ್ಕಾಗಿ ಈ ರೀತಿ ಪ್ರಶ್ನಿಸುವನು ಎಂಬುದಾಗಿ ''ಕ ಏವ ಭವತಾಂ ಮ ಇಹೋಪಹೂತಃ'' ಎಂಬುದಕ್ಕೆ ಅವತಾರಿಕೆ ನೀಡಿದ್ದಾರೆ. ॥೨೭॥

ಇದನ್ನೇ ವಿವರಿಸುವರು -

**ಏಕೋ ಮಯೇಹ ಭಗವಾನ್ ವಿಬುಧಪ್ರಧಾನಃ**
**ಚಿತ್ತೀಕೃತಃ ಪ್ರಜನನಾಯ ಕಥಂ ನು ಯೂಯಮ್ ।**

**ಅತ್ರಾಗತಾಸ್ತನುಭೃತಾಂ ಮನಸೋಽಪಿ ದೂರಾ**
**ಬ್ರೂತ ಪ್ರಸೀದತ ಮಹಾನತಿವಿಸ್ಮಯೋ ಮೇ ॥೨೮॥**

ಇಹ=ಈ ವನದಲ್ಲಿ ಮಯಾ=ನನ್ನಿಂದ ವಿಬುಧಪ್ರಧಾನಃ=ಸರ್ವದೇವೋತ್ತಮನಾದ ಮೂರುರೂಪವುಳ್ಳ ಭಗವಾನ್ ವಿಷ್ಣುಃ=ಐಶ್ವರ್ಯಶಾಲಿಯಾದ ಶ್ರೀಹರಿಯು ಏಕಃ=ಒಬ್ಬನೇ ಪ್ರಜನನಾಯ=ಮಗನಾಗಿ ಜನಿಸಲು ಚಿತ್ತೀಕೃತಃ=ಧ್ಯಾನ ಮಾಡಲ್ಪಟ್ಟಿರುವನು. ಹೀಗಿರುವಾಗ ತನುಭೃತಾಂ=ಜನರ ಮನಸಃ ಅಪಿ ದೂರಾಃ=ಮನಸ್ಸಿಗೂ ವಿಷಯರಾಗದ ಯೂಯಂ=ನೀವು ನು=ಈಗ ಅತ್ರ=ಇಲ್ಲಿ ಕಥಂ ಆಗತಾಃ=ಹೇಗೆ ಬಂದಿರುವಿರಿ ? ಮೂರುರೂಪದಿಂದ ವಿಷ್ಣುವೇ ಬರಬೇಕಿತ್ತು, ಅವನಿಂದ ಭಿನ್ನರಾದ ಬ್ರಹ್ಮ-ರುದ್ರರ ಆಗಮನಕ್ಕೆ ಕಾರಣವೇನು ಎಂಬುದನ್ನು ಬ್ರೂತ=ಹೇಳಿರಿ. ಪ್ರಸೀದತ=ಸಂತುಷ್ಟರಾಗಿರಿ. ಮೇ=ನನಗೆ ಮಹಾನ್ ಅತಿವಿಸ್ಮಯಃ=ಬಹಳ ದೊಡ್ಡ ಆಶ್ಚರ್ಯ ತಾವು ಬಂದದ್ದು ಎಂದು ಭಾವ॥೨೮॥

ಮೈತ್ರೇಯ ಉವಾಚ -

**ಇತಿ ತಸ್ಯ ವಚಃ ಶ್ರುತ್ವಾ ತ್ರಯಸ್ತೇ ವಿಬುಧರ್ಷಭಾಃ ।**
**ಪ್ರತ್ಯೂಚುಃ ಶ್ಲಕ್ಷ್ಣಯಾ ವಾಚಾ ಪ್ರಹಸಂತೋ ಮುನಿಂ ಪ್ರಭೋ ॥೨೯॥**

ಪ್ರಭೋ=ವಿದುರನೇ ! ಇತಿ=ಈ ರೀತಿಯಾದ ತಸ್ಯ=ಅತ್ರಿ ಋಷಿಯ ವಚಃ=ಮಾತನ್ನು ಶ್ರುತ್ವಾ=ಕೇಳಿ ತೇ ತ್ರಯಃ=ಆ ಮೂರು ವಿಬುಧರ್ಷಭಾಃ=ದೇವತೋತ್ತಮರು ಪ್ರಹಸಂತಃ="ಬ್ರಹ್ಮ-ರುದ್ರನಾಮಕ ವಿಷ್ಣುರೂಪಗಳಿಗೆ ಅಧಿಷ್ಠಾನ ಬಿಟ್ಟು ಪ್ರತ್ಯೇಕಸ್ಥಿತಿ ಇಲ್ಲ" ಎಂಬುದನ್ನು ಇವನು ತಿಳಿದಿಲ್ಲವಲ್ಲ ಎಂದು ನಗುತ್ತ ಮುನಿಂ=ಅತ್ರಿಯನ್ನು ಕುರಿತು ಶ್ಲಕ್ಷ್ಣಯಾ ವಾಚಾ=ಮಧುರವಾದ ಮಾತುಗಳಿಂದ ಪ್ರತ್ಯೂಚುಃ=ಉತ್ತರಿಸಿದರು. ॥೨೯॥

ದೇವಾ ಊಚುಃ -

**ಯಥಾ ಕೃತಸ್ತೇ ಸಂಕಲ್ಪೋ ಭಾವ್ಯಂ ತೇನೈವ ನಾನ್ಯಥಾ ।**
**ತತ್ಸಂಕಲ್ಪಸ್ಯ ತೇ ಬ್ರಹ್ಮನ್ ಯದ್ ವೈ ಧ್ಯಾಯಸಿ ತೇ ವಯಮ್ ॥೩೦॥**

ತೇ=ನಿನ್ನಿಂದ ಯಥಾ ಸಂಕಲ್ಪಃ ಕೃತಃ=ಹೇಗೆ ಸಂಕಲ್ಪ ಮಾಡಲ್ಪಟ್ಟಿದೆಯೋ ತೇನ ತಥಾ ಏವ ಭಾವ್ಯಂ=ಅದು ಹಾಗೇ ಆಗಲೇಬೇಕು. ಯತಃ=ಯಾವ ಕಾರಣ ತತ್ಸಂಕಲ್ಪಸ್ಯ=ಆ ಶ್ರೀಹರಿಯ ಸಂಕಲ್ಪಕ್ಕೆ ತೇ ಸಂಕಲ್ಪಃ=ನಿನ್ನ ಸಂಕಲ್ಪವೂ ಅನ್ಯಥಾ ನ=ಬೇರೆಯಾಗಿಲ್ಲ. ಹೇ ಬ್ರಹ್ಮನ್ !=ಋಷಿಯೇ ! ಯದ್ ವೈ ಧ್ಯಾಯಸಿ=ಯಾರನ್ನು ಧ್ಯಾನ ಮಾಡಿರುವೆಯೋ ತೇ ವಯಂ=ಅವರೇ ನಾವು.

ಭಾಗವತ ತಾತ್ಪರ್ಯ -

ಇಲ್ಲಿ ನೀನು ಯಾವ ಜಗದೀಶ್ವರರನ್ನು ಧ್ಯಾನಿಸಿದೆಯೋ ಅವರೇ ನಾವು ಎಂದು ಹೇಳಿದ್ದರಿಂದ ಕಣ್ಣಿಗೆ ಕಾಣುತ್ತಿರುವ ತ್ರಿಮೂರ್ತಿಗಳಿಗೆ ಐಕ್ಯ ಹೇಳಿರುವಂತೆ ಕಾಣುವದು. ಅದಕ್ಕಾಗಿ ''ತೇ ವಯಂ'' ಎಂಬುದನ್ನು ಸರಿಯಾಗಿ ವ್ಯಾಖ್ಯಾನಿಸಲು, ಮತ್ತು ಒಬ್ಬನನ್ನು ಧ್ಯಾನ ಮಾಡಿದರೂ ಮೂರು ಜನ ಬಂದದ್ದೇಕೆ ? ಎಂಬ ಸಂಶಯವನ್ನು ಪರಿಹಾರ ಮಾಡಲು ಪ್ರಮಾಣ ಹೇಳುವರು -

ಬ್ರಹ್ಮಸ್ಥಶ್ಚೈವ ರುದ್ರಸ್ಥಃ ಸ್ವಯಂ ಚಾಪಿ ಹರಿಃ ಪ್ರಭುಃ ।
ಪ್ರಜಾಂ ತ್ರಿಪುರುಷಸಮಾಂ ಯಚ್ಛತ್ವಿತ್ಯತ್ರಿರೈಚ್ಛತ ।
ತಸ್ಮಾತ್ಸ ಬ್ರಹ್ಮರುದ್ರಾಭ್ಯಾಂ ಸಹ ವಿಷ್ಣುರ್ಜಗತ್ಪತಿಃ ।
ಆಗತ್ಯ ತು ತ್ರಿಮೂರ್ತ್ಯಂಶಾನ್ ಪುತ್ರಾನ್ ಪ್ರಾದಾಜ್ಜನಾರ್ದನಃ ।
ಭಾವಿತ್ವಾಚ್ಚೈವ ಕಾರ್ಯಸ್ಯ ಲೋಕಾನಾಂ ಮೋಹನಾಯ ಚ । ಇತಿ ಬ್ರಹ್ಮವೈವರ್ತೇ ।
ತತ್ಸ್ಥವಿಷ್ಣ್ವಪೇಕ್ಷಯಾ ತೇ ವಯಮಿತಿ ॥

''ಬ್ರಹ್ಮದೇವರಲ್ಲಿರುವ ಹರಿಯು ಹಾಗೂ ರುದ್ರನಲ್ಲಿರುವ ಹರಿಯು, ಮತ್ತು ಸಾಕ್ಷಾತ್ ಶ್ರೀಹರಿಯು ಹೀಗೆ ಕಣ್ಣಿಗೆ ಕಾಣುವ ಮೂರು ಪುರುಷರಿಗೆ ಸಮಾನರಾದ ಪುತ್ರರನ್ನು ನೀಡಲಿ'' ಎಂದು ಅತ್ರಿಯು ಇಚ್ಛಿಸಿದನು. ಆದ್ದರಿಂದ ವಿಷ್ಣುವು ಬ್ರಹ್ಮ-ರುದ್ರರಿಂದ ಸಹಿತನಾಗಿ ಬಂದು ಕಣ್ಣಿಗೆ ಕಾಣುವ ತ್ರಿವಮೂರ್ತಿಗಳ ಅಂಶವುಳ್ಳ ಮಕ್ಕಳನ್ನು ಮೂರುರೂಪವುಳ್ಳ ಜನಾರ್ದನನು ಕೊಟ್ಟನು.

ಜೊತೆಗೆ ಬರುವುದರಿಂದಲೂ, ''ತೇ ವಯಂ'' ಎಂದು ಹೇಳುವದರಿಂದಲೂ ದುಷ್ಟರಿಗೆ ''ಮೂರು ಜನ ಒಂದೇ'' ಎಂದು ಮೋಹವನ್ನು ಹುಟ್ಟಿಸುವದಕ್ಕಾಗಿ ಮತ್ತು ಕಣ್ಣಿಗೆ ಕಾಣುವ ತ್ರಿಮೂರ್ತಿಗಳಿಗೆ ಸಮಾನ ಮಕ್ಕಳು ಹುಟ್ಟುವದಕ್ಕಾಗಿಯೂ ಹಾಗೆ ಬಂದನೆಂದು ಬ್ರಹ್ಮವೈವರ್ತದಲ್ಲಿ ಹೇಳಿದೆ.

ಇನ್ನು ''ತೇ ವಯಂ'' ಎಂದು ಹೇಳಿದ್ದು ಒಳಗಿರುವ ವಿಷ್ಣುರೂಪಗಳ ವಿವಕ್ಷೆಯಿಂದ ಎಂದು ತಿಳಿಯಬೇಕು ಎಂಬುದಾಗಿ ತಾತ್ಪರ್ಯ. ಇದರಿಂದ ''ಶರಣಂ ತಂ ಪ್ರಪದ್ಯೇ'' ಎನ್ನುವದಕ್ಕೆ ತ್ರಿರೂಪನಾದ ನಿನ್ನನ್ನು ಶರಣು ಬಂದೆನೆಂದು ಅರ್ಥ ಮಾಡಬೇಕು. ಮತ್ತು ''ಆತ್ಮಸಮಾಂ'' ಎಂಬುದಕ್ಕೆ ತನಗೆ ಸಮಾನವಾದ ಹಾಗೂ ತನ್ನ ದೇಹಸ್ಥಾನೀಯರಾದ ಬ್ರಹ್ಮ-ರುದ್ರರ ಸಮನಾದ ಪುತ್ರನನ್ನು ಕೊಡಲಿ ಎಂದೇ ಅತ್ರಿ ಇಚ್ಛಿಸಿದನೆಂದು ಅರ್ಥ ಮಾಡಬೇಕೆಂದು ತಿಳಿಯುವದು.

ಮತ್ತು ವಿಷ್ಣುವು ಅಧಿಷ್ಠಾನ ಇಲ್ಲದೇ ಸ್ವತಂತ್ರವಾಗಿ ಇರುವಂತೆ ಬ್ರಹ್ಮ-ರುದ್ರನಾಮಕ (ಬ್ರಹ್ಮ-ರುದ್ರಾಂತರ್ಗತ) ಹರಿಯ ರೂಪಗಳು ಅಧಿಷ್ಠಾನ ಬಿಟ್ಟು ಇರುವದಿಲ್ಲವೆಂದೂ ತಿಳಿಯುವದರಿಂದ, ಹಾಗೆ ವಿಷ್ಣುವಿನ ಜೊತೆ ಬ್ರಹ್ಮ-ರುದ್ರರೂಪಗಳು ಅಧಿಷ್ಠಾನ ಸಹಿತವಾಗಿಯೇ ಬಂದಿರುವವು ಎಂದು ಭಾವ. ॥೩೦॥

**ಅಥಾಸ್ಮದಂಶಭೂತಾಸ್ತೇ ಆತ್ಮಜಾ ಲೋಕವಿಶ್ರುತಾಃ ।**
**ಭವಿತಾರೋಽಂಗ ಭದ್ರಂ ತೇ ವಿತರಿಷ್ಯಂತಿ ತೇ ಯಶಃ ॥೩೧॥**

ಅಥ=ಆದ್ದರಿಂದ ಹೇ ಅಂಗ!=ಅತ್ರಿಯೇ! ತೇ=ನಿನಗೆ ಅಸ್ಮದಂಶಭೂತಾಃ= ಸ್ವರೂಪಾಂಶನಾದವನು ಒಬ್ಬನು, ಭಿನ್ನಾಂಶರಾದವರು ಇಬ್ಬರು ಹೀಗೆ ಮೂರು ಜನ ಆತ್ಮಜಾಃ=ಪುತ್ರರು ಲೋಕವಿಶ್ರುತಾಃ=ಜಗತ್ಪ್ರಸಿದ್ಧರಾಗಿ ಭವಿತಾರಃ=ಹುಟ್ಟುವರು. ತೇ=ಆ ಮಕ್ಕಳು ತೇ=ನಿನಗೆ ಭದ್ರಂ=ಕಲ್ಯಾಣವನ್ನೂ ಯಶಃ=ಕೀರ್ತಿಯನ್ನೂ ವಿತರಿಷ್ಯಂತಿ= ವಿಸ್ತಾರಗೊಳಿಸುವರು. ॥೩೧॥

**ಏವಂ ಕಾಮವರಂ ದತ್ವಾ ಪ್ರತಿಜಗ್ಮುಃ ಸುರೇಶ್ವರಾಃ ।**
**ಸಭಾಜಿತಾಸ್ತಯೋಃ ಸಮ್ಯಗ್ ದಂಪತ್ಯೋರ್ಮಿಷತೋಸ್ತತಃ ॥೩೨॥**

ಏವಂ=ಈ ರೀತಿಯಾಗಿ ಕಾಮವರಂ=ಇಷ್ಟವಾದ ಪುತ್ರರಾಗುವರೆಂಬ ವರವನ್ನು ದತ್ವಾ=ಕೊಟ್ಟು ಸಮ್ಯಗ್ ಸಭಾಜಿತಾಃ=ಅವರಿಂದ (ಅತ್ರಿ-ಅನಸೂಯಾ ದಂಪತಿಗಳಿಂದ) ಚೆನ್ನಾಗಿ ಪೂಜಿತರಾಗಿ ತಯೋಃ ದಂಪತ್ಯೋಃ ಮಿಷತೋಃ ಸತೋಃ=ಆ (ಅತ್ರಿ-ಅನಸೂಯಾ) ದಂಪತಿಗಳು ನೋಡುತ್ತಿರುವಾಗಲೇ ಸುರೇಶ್ವರಾಃ=ದೇವತಾಶ್ರೇಷ್ಠರಾದ ಬ್ರಹ್ಮ-ವಿಷ್ಣು-ಮಹೇಶ್ವರರು ತತಃ=ಅತ್ರಿಯ ಆಶ್ರಮದಿಂದ ಪ್ರತಿಜಗ್ಮುಃ=ತಿರುಗಿಹೋದರು (ಅಂತರ್ಧಾನ ಹೊಂದಿದರು). ॥೩೨॥

ಈ ಹಿಂದಿನ ಶ್ಲೋಕದಲ್ಲಿ "ಅಸ್ಮದಂಶಭೂತಾಃ" ಎಂದು ಹೇಳಿದರು. ಅದರಲ್ಲಿ ಯಾರು ಯಾರ ಅಂಶವೆಂದು ಮುಂದಿನ ಶ್ಲೋಕದಲ್ಲಿ ಹೇಳುವರು -

**ಸೋಮೋಽಭೂದ್ ಬ್ರಹ್ಮಣೋಽಂಶೇನ ದತ್ತೋ ವಿಷ್ಣೋಸ್ತು ಯೋಗವಿತ್ ।**
**ದುರ್ವಾಸಾಃ ಶಂಕರಸ್ಯಾಂಶೋ ನಿಬೋಧಾಂಗಿರಸಃ ಪ್ರಜಾಃ ॥೩೩॥**

ಸೋಮಃ=ಚಂದ್ರನು ಬ್ರಹ್ಮಣಃ=ಚತುರ್ಮುಖನ ಅಂಶೇನ=ಆವೇಶಸಹಿತನಾಗಿ ಅಭೂತ್=ಹುಟ್ಟಿದನು. ಯೋಗವಿತ್=ಯೋಗಶಾಸ್ತ್ರವನ್ನು ತಿಳಿದ (ವಿದಿ ಕೃತೌ ಎಂದೂ ಧಾತುವಿದೆಯಾದ್ದರಿಂದ ಯೋಗವಿತ್ ಎಂಬುದಕ್ಕೆ ಯೋಗಶಾಸ್ತ್ರವನ್ನು ಮಾಡಿದ ಎಂದೂ

ಅರ್ಥ ಮಾಡಬಹುದು) ದತ್ತಃ=ದತ್ತನು ವಿಷ್ಣೋಃ ಅಂಶಃ=ವಿಷ್ಣುವಿನ ಅವತಾರವಾಗಿ ಹುಟ್ಟಿದನು. ದುರ್ವಾಸಾಃ=ದುರ್ವಾಸ ಋಷಿಯು ಶಂಕರಸ್ಯ ಅಂಶಃ=ರುದ್ರನ ಅವತಾರವಾಗಿ ಹುಟ್ಟಿದನು. ಇನ್ನು ಅಂಗಿರಸಃ=ಬ್ರಹ್ಮದೇವರ ಮೂರನೇ ಮಗನಾದ ಅಂಗಿರಸ ಋಷಿಯ ಪ್ರಜಾಃ=ಸಂತತಿಯನ್ನು ನಿಬೋಧ=ಹೇಳುವೆನು, ಕೇಳು, ತಿಳಿದುಕೊ.

27-12-21

**ಭಾಗವತ ತಾತ್ಪರ್ಯ -**

ಇಲ್ಲಿ ದತ್ತ-ದುರ್ವಾಸರಿಗೆ ಸಾಕ್ಷಾತ್ ವಿಷ್ಣು-ರುದ್ರಾಂಶತ್ವವಿದ್ದಂತೆ ಚಂದ್ರನಿಗೂ ಸಾಕ್ಷಾತ್ ಬ್ರಹ್ಮಾಂಶತ್ವ ಹೇಳಿರುವಂತೆ ಕಾಣುವದು. ಆದ್ದರಿಂದ ಅಂಶಶಬ್ದವನ್ನು ಉಪಯೋಗಿಸಿದ್ದರ ಅಭಿಪ್ರಾಯವನ್ನು ಶ್ರೀಮದಾಚಾರ್ಯರು ಪ್ರಮಾಣದಿಂದಲೇ ತಿಳಿಸುವರು -

**ಬ್ರಹ್ಮಣೋ ನಾವತಾರೋಽಸ್ತಿ ಸನ್ನಿಧಾನಂ ತು ಕೇವಲಮ್ ।**
**ಋತೇ ವಿಷ್ಣೋರಾತ್ಮನಶ್ಚ ತದಂಶೋಕ್ತಿಃ ಪ್ರವೇಶತಃ ।।ಇತಿ ಚ**

ಬ್ರಹ್ಮದೇವರಿಗೆ ಅವತಾರ ಇಲ್ಲ. ಪರಮಾತ್ಮನಿಂದ ಮತ್ತು ತಮ್ಮಿಂದ ಬಿಟ್ಟು ಬೇರೆಯವರಿಂದ ಜನ್ಮವು (ಒಂದಂಶದಿಂದ ದೇಹಾಂತರ ಉತ್ಪತ್ತಿಯು) ಬ್ರಹ್ಮದೇವರಿಗೆ ಇಲ್ಲ. ಕಿಂತು ಕೇವಲ ಸನ್ನಿಧಾನ (ಅಂದರೆ ಆವೇಶ) ಉಂಟು. ಆದ್ದರಿಂದ ಬ್ರಹ್ಮದೇವರಿಗೆ ಪರಮಾತ್ಮನಿಂದ ಮತ್ತು ತಮ್ಮಿಂದ ಬಿಟ್ಟು ಬೇರೆಯವರಿಂದ ಜನ್ಮವನ್ನು (ಒಂದಂಶದಿಂದ ದೇಹಾಂತರ ಉತ್ಪತ್ತಿಯನ್ನು) ಎಲ್ಲಿಯಾದರೂ ಹೇಳಿದ್ದರೆ, ಅಲ್ಲಿ ಕೇವಲ ಸನ್ನಿಧಾನ (ಅಂದರೆ ಆವೇಶ) ಉಂಟು ಎಂಬ ಅರ್ಥದಲ್ಲಿ ಅದನ್ನು ತಿಳಿದುಕೊಳ್ಳಬೇಕು. ಹಾಗಾಗಿ ಪ್ರಕೃತದಲ್ಲಿ ಸೋಮನು ಬ್ರಹ್ಮದೇವರ ಅಂಶದಿಂದ ಅವತರಿಸಿದನು ಎಂದು ಹೇಳುವದು ಸನ್ನಿಧಾನದ (ಪ್ರವೇಶಮಾತ್ರದ) ಅಭಿಪ್ರಾಯದಿಂದಲೇ ಎಂದು ತಿಳಿಯಬೇಕು. ಅಂದರೆ ಸೋಮನಲ್ಲಿ ಬ್ರಹ್ಮದೇವರ ಆವೇಶವಿದೆ ಎಂದು ತಿಳಿಯಬೇಕು.

**ಎರಡುವಿಧ ಉತ್ಪತ್ತಿ ಉಳ್ಳವಗೆ ಉತ್ಪತ್ತಿಯೇ ಇಲ್ಲವೇ ?**

**ಪ್ರಶ್ನೆ :-** ಬ್ರಹ್ಮನಿಗೆ ಅವತಾರವಿಲ್ಲವೆಂದು ಹೇಗೆ ಹೇಳಲು ಬರುತ್ತದೆ ? ಯಾಕೆಂದರೆ-

**ಗಾಯತ್ರೀ ಚೈವ ಸಾವಿತ್ರೀ ತಥೈವ ಚ ಸರಸ್ವತೀ ।**
**ಏವಂ ತ್ರಿರೂಪಾ ಪ್ರಕೃತಿರೇಕಾ ಸತ್ವಾದಿಭೇದತಃ ।**
**ತಾಸು ವೀರ್ಯಂ ಸಮುತ್ಸೃಷ್ಟಂ ಬ್ರಹ್ಮಣೈಕತ್ವಮಾಗತಮ್ ।**
**ಸ ಸೂತ್ರಾತ್ಮಾ ಸಮುದ್ದಿಷ್ಟೋ ವಾಯುರ್ಲೋಕಪ್ರಣಾಯಕಃ ।**
**ಸೂತ್ರಾತ್ಮನಾ ಮಾಹಾಂಶ್ಚಾಪಿ ಸಹಜಾತಶ್ಚತುರ್ಮುಖಃ ।।**

ಎಂದು ಹೇಳಿದ ಪ್ರಕಾರ ಬ್ರಹ್ಮದೇವರಿಗೆ ಎರಡುರೀತಿಯಿಂದ ಉತ್ಪತ್ತಿಯನ್ನು ಕೇಳುತ್ತೇವೆ.

೧) ವಿಷ್ಣುವಿನಿಂದ ವಿರಾಟ್ ರೂಪದಿಂದಲೂ, ಚತುರ್ಮುಖರೂಪದಿಂದಲೂ ಆದ್ಯಬ್ರಹ್ಮನಿಗೆ ಉತ್ಪತ್ತಿ ಇದೆ.

೨) ಅದರಂತೆ ಬ್ರಹ್ಮಾಂಡದ ಹೊರಗೆ ಮಹತತ್ತ್ವದಲ್ಲಿರುವ ಪ್ರಕೃತಿತತ್ತ್ವಾಭಿಮಾನಿ ವಾಗ್ದೇವಿಯು (ಸತ್ತ್ವಾದಿಭೇದದಿಂದ) ಗಾಯತ್ರೀ ಸಾವಿತ್ರೀ ಸರಸ್ವತೀ ಎಂದು ಮೂರು ರೂಪ ಉಳ್ಳವಳು, ಈ ಮೂವರಲ್ಲಿ ವಾಸುದೇವಸುತ ಪುರುಷನಾಮಕ ಬ್ರಹ್ಮದೇವರಿಂದ ಪ್ರತ್ಯೇಕವಾಗಿ ಸ್ಥಾಪಿತವಾದ ವೀರ್ಯದಿಂದ ಪ್ರತ್ಯೇಕವಾಗಿ ಶರೀರಗಳು ಜನಿಸಿದವು. ನಂತರ ಒಂದಾದವು. ಆಗ ಸೂತ್ರನಾಮಕ ವಾಯುವು, ಅವನ ಜೊತೆ ಪುರುಷನಾಮಕ (ಮಹತ್ತತ್ತ್ವಾಭಿಮಾನಿ) ಬ್ರಹ್ಮನೂ ಜನಿಸಿದರು ಎಂಬುದಾಗಿ ಬ್ರಹ್ಮದೇವರಿಗೆ ತನ್ನಿಂದ ಉತ್ಪತ್ತಿಯೂ ಹೇಳಲ್ಪಟ್ಟಿದೆ. ಪ್ರಕೃತ ಬ್ರಹ್ಮದೇವರಿಗೆ ಅವತಾರವೇ ಇಲ್ಲ ಎಂದು ಹೇಳಿದರೆ ಅದರ ವಿರೋಧ ಬರುವದು ? ಎಂಬ ಶಂಕೆಗೆ ಅವಕಾಶವಿಲ್ಲ.

**ಉಳಿದವರಿಂದ ಉತ್ಪತ್ತಿ ಇಲ್ಲ**

**ಸಮಾಧಾನ :-** ಬ್ರಹ್ಮದೇವರಿಗೆ ಅವತಾರವೇ ಇಲ್ಲ ಎಂದು ಹೇಳಿದ್ದಾದರೆ ಆಗ ಈ ವಿಧವಾದ ಶಂಕೆಗೆ ಅವಕಾಶವಿರುತ್ತಿತ್ತು. ಆದರೆ ನಾವು ಹಾಗೆ ಹೇಳಿಲ್ಲ. ಕಿಂತು ಬ್ರಹ್ಮದೇವರಿಗೆ ವಿಷ್ಣು ಮತ್ತು ತನ್ನಿಂದ ಬಿಟ್ಟು ಬೇರೆಯವರಿಂದ ಅವತಾರವಿಲ್ಲ ಎಂದು ಹೇಳಿದ್ದರಿಂದ ಅಂತಹ ಶಂಕೆಗೆ ಅವಕಾಶವಿಲ್ಲ.

ಈ ಅಭಿಪ್ರಾಯ ತಿಳಿಸಲೆಂದೇ ಮೂಲದಲ್ಲಿ "ಸೋಮೋऽಭೂದ್ ಬ್ರಹ್ಮಣೋऽಂಶೇನ" ಎಂದೂ "ದುರ್ವಾಸಾಃ ಶಂಕರಸ್ಯ ಅಂಶಃ" ಎಂದೂ ವಿಲಕ್ಷಣಪ್ರಯೋಗ ಮಾಡಿರುವರು.

ಸೋಮನು ಬ್ರಹ್ಮಾವತಾರನಲ್ಲ. ಕಿಂತು ಅವನಿಂದ ಅವಿಶಿಷ್ಟನಷ್ಟೇ ಎಂದಾದರೆ, ಮೂಲದಲ್ಲಿ "ಆತ್ಮೇಶಬ್ರಹ್ಮಸಂಭವಾನ್" ಎಂದು ಸಾಕ್ಷಾದವತಾರವೆಂಬಂತೆ ಹೇಳಿದ್ದೇಕೆ? ಎಂದು ಶಂಕೆ ಬಂದರೆ, ಈ ವಿಧವಾದ ಅನೇಕ ವಿರುದ್ಧ ಮಾತುಗಳಿಗೆ ವ್ಯಾಖ್ಯಾನ ಮಾಡುವ ರೀತಿಯನ್ನು ಶ್ರೀಮದಾಚಾರ್ಯರು "ಸೃಷ್ಟಿಭೇದಾತ್" ಮುಂತಾದ ವಾಕ್ಯಗಳಿಂದ ತಿಳಿಸುವರು-

ಸೃಷ್ಟಿಭೇದಾದ್ವಿರೂಪಂ ತು ಕಥಾ ಪಂಚೋತ್ತರಂ ಶತಮ್ ।
ವೈರೂಪ್ಯಮನ್ಯದಿಜ್ಞೇಯಂ ತಾತ್ಪರ್ಯಾನ್ಮೋಹನಾಯ ಚ ॥ ಇತಿ ಸ್ಕಾಂದೇ ।

**ಋತೇ ತು ಪಾಂಡವಕಥಾಂ ಕಾರ್ಷ್ಣ್ಯಂ ರಾಮಾಯಣಂ ತಥಾ ।**
**ವಿಷ್ಣೋರ್ಬ್ರಹ್ಮಾದಿನಾಂ ಚೈವ ಕ್ರಮಾದ್ವ್ಯತ್ಯಸ್ತಶಕ್ತಿತಾಮ್ ॥**
**ಏತದಾಪಾದಕಂ ಚಾನ್ಯದೃತೇ ಕಲ್ಪಾದಿಭೇದತಃ ।**
**ಕಥಾಭೇದಸ್ತು ವಿಜ್ಞೇಯೋ ಮೋಹಾಯೈತೇಷು ಭಿನ್ನತಾ ॥ ಇತಿ ವಾರಾಹೇ**

ಸೃಷ್ಟಿವಿಷಯಕವಾದ ನೂರೈದು ಕಥೆಗಳಲ್ಲಿ ವಿರೋಧಗಳು ಕಂಡುಬರುತ್ತವೆಯಾದರೂ, ಕಲ್ಪಭೇದದಿಂದ ಸೃಷ್ಟಿಯಲ್ಲಿ ವೈವಿಧ್ಯವಿರುವದರಿಂದ ಅಲ್ಲಲ್ಲಿ ಪುರಾಣಗಳಲ್ಲಿ ವಿವಿಧವಾಗಿ ವಿಭಿನ್ನವಾಗಿ ಆ ರೀತಿಯಾಗಿ ಹೇಳುವರು ಎಂದು ತಿಳಿಯಬೇಕು. ಉಳಿದೆಲ್ಲ ಸಿದ್ಧಾಂತವಿರುದ್ಧ ಮಾತುಗಳಿಗೆ ದೈತ್ಯಮೋಹಾರ್ಥಕತ್ವವನ್ನೇ ಹೇಳಬೇಕು. ಏಕೆಂದರೆ ಅವುಗಳಿಗೆ ಸಿದ್ಧಾಂತಕ್ಕೆ ಅವಿರುದ್ಧವಾದ ಬೇರೆ ಅರ್ಥದಲ್ಲಿ ತಾತ್ಪರ್ಯವಿರುವ ಕಾರಣ.

ಉಳಿದ ವಾಕ್ಯಗಳೆಂದರೆ :- ಪಾಂಡವರ ಚರಿತ್ರೆ, ಕೃಷ್ಣನ ಚರಿತ್ರೆ, ರಾಮನ ಚರಿತ್ರೆ ಮತ್ತು ವಿಷ್ಣುವಿಗಿಂತಲೂ ಬ್ರಹ್ಮಾದಿಗಳಿಗೆ ತಾರತಮ್ಯ-ಶಕ್ತಿಗಳನ್ನು ವಿಪರೀತವಾಗಿ (ವ್ಯತ್ಯಾಸ ಮಾಡಿ ಅರ್ಥಾತ್ ಬ್ರಹ್ಮನೇ ಸರ್ವಶಕ್ತ, ವಿಷ್ಣು ಅಲ್ಲ ಮುಂತಾಗಿ) ಹೇಳುವ ವಾಕ್ಯಗಳು, ಹಾಗೂ ತಾರತಮ್ಯಾದಿರೂಪ ಸಿದ್ಧಾಂತವಾಕ್ಯಗಳು ಇವುಗಳೆಲ್ಲವೂ ಮೋಹಕಗಳೇ. ಇವುಗಳನ್ನು ಬಿಟ್ಟು ನೂರೈದು ಸೃಷ್ಟಿವಾಕ್ಯಗಳು ಕಲ್ಪಭೇದದಿಂದ ಹಾಗೂ ಸನ್ನಿಧಾನ ವಿವಕ್ಷೆಯಿಂದ ಹೊರಟವು ಎಂದು ತಿಳಿಯಬೇಕು ಎಂದು ಸ್ಕಾಂದ ಮತ್ತು ವರಾಹಪುರಾಣಗಳಲ್ಲಿ ಹೇಳಿದೆ. ॥೩೩॥

**ಶ್ರದ್ಧಾ ತ್ವಂಗಿರಸಃ ಪತ್ನೀ ಚತಸ್ರೋಽಸೂತ ಕನ್ಯಕಾಃ ।**
**ಸಿನೀವಾಲೀ ಕುಹೂ ರಾಕಾ ಚತುರ್ಥ್ಯನುಮತಿಸ್ತಥಾ ॥೩೪॥**

ಅಂಗಿರಸಃ=ಅಂಗಿರಸ ಋಷಿಗಳ ಪತ್ನೀ=ಹೆಂಡತಿಯಾದ ಶ್ರದ್ಧಾ=ಶ್ರದ್ಧಾ ಎಂಬುವಳಾದರೋ ಸಿನೀವಾಲೀ=ಕೃಷ್ಣಚತುರ್ದಶಿಗೆ ಅಭಿಮಾನಿನಿಯಾದ ಸಿನೀವಾಲೀ ಎಂಬುವವಳು ತಥಾ=ಅದರಂತೆ ಕುಹೂ=ಅಮಾವಾಸ್ಯೆಗೆ ಅಭಿಮಾನಿನಿಯಾದ ಕುಹೂ ಎಂಬುವವಳು ತಥಾ=ಅದರಂತೆ ಚತುರ್ಥೀ=ನಾಲ್ಕನೆಯವಳಾದ, ಶುಕ್ಲಚತುರ್ದಶಿಗೆ ಅಭಿಮಾನಿನಿಯಾದ ಅನುಮತಿಃ=ಅನುಮತಿ ಎಂಬುವವಳು, ತಥಾ=ಅದರಂತೆ ರಾಕಾ= ಹುಣ್ಣಿಮೆಗೆ ಅಭಿಮಾನಿನಿಯಾದ ರಾಕಾ ಎಂಬುವವಳು ಹೀಗೆ ಚತಸ್ರಃ=ನಾಲ್ಕುಸಂಖ್ಯಾಕರಾದ ಕನ್ಯಕಾಃ=ಹೆಣ್ಣುಮಕ್ಕಳನ್ನು ಅಸೂತ=ಹೆತ್ತಳು. ॥೩೪॥

**ತತ್ಪುತ್ರಾವಪರಾವಾಸ್ತಾಂ ಖ್ಯಾತೌ ಸ್ವಾರೋಚಿಷಾಂತರೇ ।**
**ಉಚಥ್ಯೋ ಭಗವಾನ್ ಸಾಕ್ಷಾದ್ ಬ್ರಹ್ಮಿಷ್ಠಶ್ಚ ಬೃಹಸ್ಪತಿಃ ॥೩೫॥**

ಸಾಕ್ಷಾತ್ ಭಗವಾನ್=(ಪ್ರತ್ಯಕ್ಷಪೂಜ್ಯನಾದ) ಮುಖ್ಯಭಗವಂತನ ಅಂಶವುಳ್ಳ ಉಚಥ್ಯಃ=ಉಚಥ್ಯ ಎಂಬ ಹೆಸರಿನ ಒಬ್ಬ ಮಗ, ಚ=ಮತ್ತು ಬ್ರಹ್ಮಿಷ್ಠಃ=ವೈದಿಕತಮನಾದ ಬೃಹಸ್ಪತಿಃ=ವಾಕ್ಯಗಳಿಗೆ ಪಾಲಕನಾದ್ದರಿಂದ ಬೃಹಸ್ಪತಿ ಎನಿಸಿದ ಮತ್ತೊಬ್ಬ ಮಗ, ಈ ರೀತಿಯಾಗಿ ಸ್ವಾರೋಚಿಷಾಂತರೇ=ಸ್ವಾರೋಚಿಷ ಎಂಬ ಮನ್ವಂತರದಲ್ಲಿ ಖ್ಯಾತೌ=ಪ್ರಸಿದ್ಧರಾದ, ಅಪರೌ=ಇನ್ನಿಬ್ಬರು ತತ್ಸುತೌ=ಶ್ರದ್ಧಾಳ ಪುತ್ರರು ಆಸ್ತಾಂ=ಇದ್ದರು. ।।೩೫।।

**ಪುಲಸ್ತ್ಯೋಽಜನಯತ್ ಪತ್ನ್ಯಾಮಗಸ್ತ್ಯಂ ಚ ಹವಿರ್ಭುಜಿ ।**
**ಸೋಽನ್ಯಜನ್ಮನಿ ದಭ್ರೋಽಗ್ನಿರ್ವಿಶ್ರವಾಶ್ಚ ಮಹಾತಪಾಃ ।।೩೬।।**

ಪುಲಸ್ತ್ಯಃ=ಪುಲಸ್ತ್ಯನಾಮಕ ಋಷಿಯು ಹವಿರ್ಭುಜಿ ಪತ್ನ್ಯಾಂ=ಹವಿರ್ಭುಕ್ ಎಂಬ ಹೆಂಡತಿಯಲ್ಲಿ ಅಗಸ್ತ್ಯಂ=ಅಗಸ್ತ್ಯನನ್ನು ಅಜನಯತ್=ಹುಟ್ಟಿಸಿದನು. ಸಃ=ಅಗಸ್ತ್ಯನು ಅನ್ಯಜನ್ಮನಿ=ಮತ್ತೊಂದು ಜನ್ಮದಲ್ಲಿ ದಭ್ರಃ ಅಗ್ನಿಃ=ಅಗ್ನಿಗಳಲ್ಲಿ ದಭ್ರ ಎಂಬ ಹೆಸರಿನ ಅಗ್ನಿಯು. ಮಹಾತಪಾಃ=ದೊಡ್ಡತಪಸ್ವಿಯಾದ ವಿಶ್ರವಾಃ ಚ=ವಿಸ್ರವಸ್ ಎಂಬುವವನೂ ಸಹ ಪುಲಸ್ತ್ಯನ ಮಗನು. ।।೩೬।।

**ತಸ್ಯ ಯಕ್ಷಪತಿರ್ದೇವಃ ಕುಬೇರಸ್ತ್ವಿಡಬಿಲಾಸುತಃ ।**
**ರಾವಣಃ ಕುಂಭಕರ್ಣಶ್ಚ ತಥಾನ್ಯಸ್ಯಾಂ ವಿಭೀಷಣಃ ।।೩೭।।**

ತಸ್ಯ=ವಿಶ್ರವಸನಿಗೆ ಯಕ್ಷಪತಿಃ=ಯಕ್ಷರಿಗೆ ಒಡೆಯನಾದ ಕುಬೇರಃ ದೇವಃ=ದೇವತೆಯಾದ ಕುಬೇರನು ಇಡಿಬಿಲಾಸುತಃ=ಇಡಿಬಿಲಾ ಎಂಬ ಪತ್ನಿಯಲ್ಲಿ ಜನಿಸಿದ ಮಗನು. ತಥಾ=ಅದೇ ರೀತಿಯಾಗಿ ಅನ್ಯಸ್ಯಾಂ=ಕೇಶಿನೀ ಎಂಬ ಪತ್ನಿಯಲ್ಲಿ ರಾವಣಃ=ರಾವಣನು, ಕುಂಭಕರ್ಣಃ=ಕುಂಭಕರ್ಣನು ಚ=ಮತ್ತು ವಿಭೀಷಣಃ=ವಿಭೀಷಣನು ಎಂಬ ಮೂರು ಜನ ಮಕ್ಕಳು ಜನಿಸಿದರು.

ಕುಬಿ ಆಚ್ಛಾದನೇ ಎಂಬ ಧಾತು ಇರುವದರಿಂದ (ಕುಂಬತಿ ಆಚ್ಛಾದಯತಿ ಇತಿ ಕುಬೇರಃ) ಧನವನ್ನು ಕೊಟ್ಟು ದ್ರಾರಿದ್ರ್ಯವನ್ನು ಮುಚ್ಚಿ ಹಾಕುವದರಿಂದ ಕುಬೇರನು ಎಂದು ಹೆಸರು. ಪಾರ್ವತಿಯ ಶಾಪದಿಂದ ಕುಚ್ಛಿತದೇಹವುಳ್ಳವನು ಎಂದರ್ಥ।।೩೭।।

**ಪುಲಹಸ್ಯ ಗತಿರ್ಭಾರ್ಯಾ ತ್ರೀನಸೂತ ಸತೀ ಸುತಾನ್ ।**
**ಕರ್ಮಶ್ರೇಷ್ಠಂ ವರೀಯಾಂಸಂ ಸಹಿಷ್ಣುಂ ಚ ಮಹಾಮತೇ ।।೩೮।।**

ಮಹಾಮತೇ=ವಿದುರನೇ ! ಪುಲಹಸ್ಯ=ಪುಲಹ ಋಷಿಗಳ ಭಾರ್ಯಾ=ಪತ್ನಿಯಾದ, ಸತೀ=ಪತಿವ್ರತೆಯಾದ ಗತಿಃ=ಎಂಬುವವಳು ಕರ್ಮಶ್ರೇಷ್ಠಂ, ವರೀಯಾಂಸಂ, ಸಹಿಷ್ಣುಂ=

ಕರ್ಮಶ್ರೇಷ್ಠ-ವರೀಯಾನ್-ಸಹಿಷ್ಣು ಎಂಬ ತ್ರೀನ್=ಮೂರುಜನ ಸುತಾನ್=ಪುತ್ರರನ್ನು ಅಸೂತ=ಹೆತ್ತಳು. ।।೩೮।।

**ಕ್ರತೋರಪಿ ಕ್ರಿಯಾ ಭಾರ್ಯಾ ವಾಲಖಿಲ್ಯಾನಸೂಯತ ।**
**ಋಷೀನ್ ಷಷ್ಟಿಸಹಸ್ರಾಣಿ ಜ್ವಲತೋ ಬ್ರಹ್ಮತೇಜಸಾ ।।೩೯।।**

ಕ್ರತೋಃ ಭಾರ್ಯಾ ಕ್ರಿಯಾ ಅಪಿ=ಕ್ರತು ಎಂಬ ಋಷಿಯ ಪತ್ನಿಯಾದ ಕ್ರಿಯಾ ಎಂಬುವವಳು ಬ್ರಹ್ಮತೇಜಸಾ=ವೇದಾಧ್ಯಯನನಿಮಿತ್ತವಾದ ಕಾಂತಿಯಿಂದ ಜ್ವಲತಃ= ಪ್ರಕಾಶಮಾನರಾದ, ಋಷೀನ್=(ವೇದದ್ರಷ್ಟ್ರುಗಳಾದ) ಜ್ಞಾನಿಗಳಾದ, ಷಷ್ಟಿಸಹಸ್ರಾಣಿ= ಅರವತ್ತು ಸಾವಿರ ಸಂಖ್ಯಾಕರಾದ, ವಾಲಖಿಲ್ಯಾನ್=ಬ್ರಹ್ಮಚಾರಿಗಳಾದ ವಾಲಖಿಲ್ಯರೆಂಬ ಹೆಸರಿನ ಮಕ್ಕಳನ್ನು ಅಸೂಯತ=ಹೆತ್ತಳು. ।।೩೯।।

**ಊರ್ಜಾಯಾಂ ಜಜ್ಞಿರೇ ಪುತ್ರಾ ವಸಿಷ್ಠಸ್ಯ ಪರಂತಪ ।**
**ಚಿತ್ರಕೇತುಪ್ರಧಾನಾಸ್ತೇ ಸಪ್ತ ಬ್ರಹ್ಮರ್ಷಯೋಽಮಲಾಃ ।।೪೦।।**

ಹೇ ಪರಂತಪ=ವಿದುರನೇ ! ವಸಿಷ್ಠಸ್ಯ=ವಸಿಷ್ಠ ಋಷಿಗಳಿಗೆ ಊರ್ಜಾಯಾಂ= ಅರುಂಧತಿಯಲ್ಲಿ ಅಮಲಾಃ=ನಿರ್ಮಲರಾದ ಚಿತ್ರಕೇತುಪ್ರಧಾನಾಃ=ಚಿತ್ರಕೇತುವೇ ಮುಖ್ಯರಾದ, ಸಪ್ತ=ಏಳುಜನ ಬ್ರಹ್ಮರ್ಷಯಃ=ಬ್ರಹ್ಮಜ್ಞಾನಿಗಳಾದ ಪುತ್ರಾಃ=ಮಕ್ಕಳು ಜಜ್ಞಿರೇ=ಹುಟ್ಟಿದರು. ।।೪೦।।

**ಚಿತ್ರಕೇತುಃ ಸುರೋಚಿಶ್ಚ ವಿರಜೋ ಮಿತ್ರ ಏವ ಚ ।**
**ಉಲ್ಬಣೋ ವಸುಭೃದ್ಯಾನೋ ದ್ಯುಮಾನ್ ಶಕ್ತ್ಯಾದಯೋಽಪರೇ ।।೪೧।।**

ಚಿತ್ರಕೇತು, ಸುರೋಚಿ, ವಿರಜ, ಮಿತ್ರ, ಉಲ್ಬಣ, ವಸುಭೃದ್ಯಾನ, ದ್ಯುಮಾನ್ ಎಂಬುವವರೇ ಆ ಏಳು ಜನಮಕ್ಕಳು. ಅಪರೇ=ಈ ಏಳು ಜನರಿಂದ ಭಿನ್ನರಾದ ಶಕ್ತ್ಯಾದಯಃ= ಶಕ್ತಿಮುನಿ ಮುಂತಾದ ಋಷಿಗಳು ಬೇರೆ ಪತ್ನಿಯಲ್ಲಿ ಜನಿಸಿದವರು. ।।೪೧।।

**ಶಾಂತಿಸ್ತ್ವಥರ್ವಣಃ ಪತ್ನೀ ಲೇಭೇ ಪುತ್ರಂ ಧೃತವ್ರತಮ್ ।**
**ದಧ್ಯಂಚಮಶ್ವಶಿರಸಂ ಭೃಗೋರ್ವಂಶಂ ನಿಬೋಧ ಮೇ ।।೪೨।।**

ಅಥರ್ವಣಃ ಪತ್ನೀ=ಅಥರ್ವ ಋಷಿಗಳ ಹೆಂಡತಿಯಾದ ಶಾಂತಿಃ=ಶಾಂತಿಯು (ಚಿತ್ತಿ ಎಂದು ಇವಳಿಗೆ ಹೆಸರು) ಧೃತವ್ರತಂ=ತಪೋನಿಷ್ಠನಾದ, ದಧ್ಯಂಚಂ=ದಧ್ಯಜ (ದಧೀಚಿ) ಎಂಬ ಹೆಸರಿನ, ಅಶ್ವಶಿರಸಂ=ಅಶ್ವಶಿರನೆಂದೂ ಕರೆಸಿಕೊಳ್ಳುವ ಪುತ್ರಂ=ಮಗನನ್ನು ಲೇಭೇ= ಪಡೆದಳು. ಭೃಗೋಃ=ಭೃಗುಋಷಿಯ ವಂಶಂ=ವಂಶವನ್ನು ಮೇ=ನನ್ನಿಂದ ನಿಬೋಧ= ತಿಳಿದುಕೋ. ।।೪೨।।

**ಭೃಗುಃ ಖ್ಯಾತ್ಯಾಂ ಮಹಾಭಾಗಃ ಪತ್ನ್ಯಾಂ ಪುತ್ರಾನಜೀಜನತ್ ।**
**ಧಾತಾರಂ ಚ ವಿಧಾತಾರಂ ಶ್ರಿಯಂ ಚ ಭಗವತ್ಪ್ರಿಯಾಮ್ ॥೪೩॥**

♦ ಮಹಾಭಾಗಃ=ದೊಡ್ಡಭಾಗ್ಯಶಾಲಿಯಾದ ಭೃಗುಃ=ಭೃಗುಋಷಿಯು ಖ್ಯಾತ್ಯಾಂ ಪತ್ನ್ಯಾಂ=ಖ್ಯಾತಿ ಎಂಬ ಭಾರ್ಯೆಯಲ್ಲಿ ಧಾತಾರಂ=ಧಾತೃ ಎಂಬ ಮಗನನ್ನು ಚ=ಮತ್ತು ವಿಧಾತಾರಂ=ವಿಧಾತೃ ಎಂಬ ಮಗನನ್ನು ಹಾಗೂ ಭಗವತ್ಪ್ರಿಯಾಂ=ಶ್ರೀಹರಿಗೆ ಪ್ರಿಯಳಾದ ಶ್ರಿಯಂ ಚ=ಲಕ್ಷ್ಮೀದೇವಿಯನ್ನೂ ಸಹ ಹೀಗೆ ಮೂರುಜನ ಪುತ್ರಾನ್=ಮಕ್ಕಳನ್ನು ಅಜೀಜನತ್=ಹುಟ್ಟಿಸಿದನು.

ವಿ.ವಿ. ಃ- ಭೃಗು ಋಷಿಗಳಿಗೆ ಧಾತಾ-ವಿಧಾತಾ ಎಂದು ಇಬ್ಬರು ಗಂಡುಮಕ್ಕಳು ಹುಟ್ಟಿದ್ದು. ಅಂದಮೇಲೆ ಪುತ್ರೌ ಎಂದು ದ್ವಿವಚನ ಹೇಳಬೇಕಿತ್ತು. ಆದರೆ ಪುತ್ರಾನ್ ಎಂದು ಬಹುವಚನ ಹೇಗೆ ? ಎಂದರೆ, ಗಂಡುಮಕ್ಕಳು ಇಬ್ಬರೇ ಆಗಿದ್ದರೂ ಸಹ ಮಗಳಾದ ಲಕ್ಷ್ಮೀದೇವಿಯೂ ಗಂಡಿಗೇನೂ ಕಡಿಮೆಯಲ್ಲ ಎಂಬ ಅಭಿಪ್ರಾಯದಿಂದ ಪುತ್ರಾನ್ ಎಂದಿದ್ದಾರೆ.

♦ ಭೃಗು ಋಷಿಗಳು ಮಹಾಭಾಗ್ಯಶಾಲಿಗಳಾಗದೇ ಇದ್ದಿದ್ದರೆ ಮಹಾಲಕ್ಷ್ಮೀದೇವಿಯು ಮಗಳಾಗಿ ಹುಟ್ಟುತ್ತಿದ್ದಳೇ ? ಸಾಧ್ಯವಿಲ್ಲ. ಈಗ ಮಹಾಲಕ್ಷ್ಮಿಯೇ ಮಗಳಾಗಿ ಹುಟ್ಟಿದ್ದಾಳೆ ಎಂದರೆ ಭೃಗು ಋಷಿಗಳು ಮಹಾಭಾಗ್ಯಶಾಲಿಗಳೇ ಎಂದು ತಿಳಿಯುತ್ತದೆ. ಈ ಅಭಿಪ್ರಾಯವನ್ನು "ಮಹಾಭಾಗಃ" ಎಂಬ ಪದದಿಂದ ಸೂಚಿಸುತ್ತಿದ್ದಾರೆ. ॥೪೩॥

**ಆಯತಿಂ ನಿಯತಿಂ ಚೈವ ಸುತೇ ಮೇರುಸ್ತಯೋರದಾತ್ ।**
**ತಾಭ್ಯಾಂ ತಯೋರಭವತಾಂ ಮೃಕಂಡುಃ ಪ್ರಾಣ ಏವ ಚ ॥೪೪॥**

ಮೇರುಃ=ಸುವರ್ಣಪರ್ವತರಾಜನು ತಯೋಃ=ಆ ಧಾತೃ-ವಿಧಾತೃಗಳಿಗೆ ಆಯತಿಂ ಚ ನಿಯತಿಂ=ಆಯತಿ ಮತ್ತು ನಿಯತಿ ಎಂಬ ಸುತೇ=ಇಬ್ಬರು ಪುತ್ರಿಯರನ್ನು ಅದಾತ್=ಕ್ರಮವಾಗಿ ಕೊಟ್ಟನು. ತಾಭ್ಯಾಂ=ಧಾತೃ-ವಿಧಾತೃಗಳಿಂದ ತಯೋಃ=ಆಯತಿ ನಿಯತಿಯರಲ್ಲಿ ಮೃಕಂಡುಃ ಚ ಪ್ರಾಣಃ ಅಭವತಾಂ=ಮೃಕಂಡು ಮತ್ತು ಪ್ರಾಣ ಎಂಬ ಮಕ್ಕಳು ಜನಿಸಿದರು. (ಧಾತಾ-ಆಯತಿಯರಲ್ಲಿ ಮೃಕಂಡು. ವಿಧಾತಾ-ನಿಯತಿಯರಲ್ಲಿ ಪ್ರಾಣನು ಜನಿಸಿದರೆಂದರ್ಥ.) ॥೪೪॥

**ಮಾರ್ಕಂಡೇಯೋ ಮೃಕಂಡೋಸ್ತು ಪ್ರಾಣಾದ್ ವೇದಶಿರಾ ಮುನಿಃ ।**
**ಕವಿಶ್ಚ ಭಾರ್ಗವೋ ಯಸ್ಯ ಭಗವಾನುಶನಾ ಸುತಃ ॥೪೫॥**

ಮೃಕಂಡೋಃ=ಮೃಕಂಡುವಿನಿಂದ ಮಾರ್ಕಂಡೇಯಃ=ಮಾರ್ಕಂಡೇಯನು, ಪ್ರಾಣಾತ್=ಪ್ರಾಣನಿಂದ ವೇದಶಿರಾಃ ಮುನಿಃ=ವೇದಶಿರನೆಂಬ ಋಷಿಯು ಜನಿಸಿದರು. ಯಸ್ಯ=ಯಾವ ಕವಿ ಎಂಬುವವನಿಗೆ ಭಗವಾನ್=ಪೂಜ್ಯನಾದ ಉಶನಾ=ಶುಕ್ರಾಚಾರ್ಯನು ಸುತಃ=ಮಗನೋ ಸಃ=ಅಂತಹ ಕವಿಃ ಚ=ಕವಿ ಎಂಬುವವನೂ ಸಹ ಭಾರ್ಗವಃ=ಭೃಗು ಋಷಿಯ ಮಗನೆಂದು ಖ್ಯಾತನಾದನು. ।।೪೫।।

**ಸರ್ವೇ ತೇ ಮುನಯಃ ಕ್ಷತ್ತರ್ಲೋಕಾನ್ ಸರ್ಗೈರಭಾವಯನ್ ।**
**ಏಷ ಕರ್ದಮದೌಹಿತ್ರಸಂತಾನಃ ಕಥಿತಸ್ತವ ।।೪೬।।**

**ಶೃಣ್ವತಃ ಶ್ರದ್ಧಧಾನಸ್ಯ ಸದ್ಯಃ ಪಾಪಹರಃ ಪರಃ ।**

ಹೇ ಕ್ಷತ್ತಃ=ಎಲೋ ವಿದುರನೇ ! ತೇ ಸರ್ವೇ ಮುನಯಃ=ಹಿಂದೆ ಹೇಳಿದ ಆ ಎಲ್ಲ ಋಷಿಗಳು ಸರ್ಗೈಃ=ತಮ್ಮ ಸೃಷ್ಟಿಯಿಂದ ಲೋಕಾನ್ ಅಭಾವಯನ್=ಲೋಕಗಳನ್ನು ಬೆಳೆಸಿದರು. ಶ್ರದ್ಧಧಾನಸ್ಯ=ಆಸ್ತಿಕ್ಯಬುದ್ಧಿಯುಳ್ಳ ಶೃಣ್ವತಃ=ಕೇಳುವವನಿಗೆ ಸದ್ಯಃ=ತಕ್ಷಣದಲ್ಲಿ ಪಾಪಹರಃ=ಪಾಪವನ್ನು ಕಳೆಯುವ, ಪರಃ=ಶ್ರೇಷ್ಠವಾದ, ಏಷಃ=ಈ ಕರ್ದಮದೌಹಿತ್ರ-ಸಂತಾನಃ=ಕರ್ದಮರ ಹೆಣ್ಣುಮಕ್ಕಳ ಪುತ್ರ-ಪೌತ್ರರ ಪರಂಪರೆಯು ತವ=ನಿನಗೆ ಕಥಿತಃ=ಹೇಳಲ್ಪಟ್ಟಿತು. ।।೪೬।।

**ಪ್ರಸೂತಿಂ ಮಾನವೀಂ ದಕ್ಷ ಉಪಯೇಮೇ ಹ್ಯಜಾತ್ಮಜಃ ।।೪೭।।**

ಅಜಾತ್ಮಜಃ=ಬ್ರಹ್ಮಪುತ್ರನಾದ ದಕ್ಷಃ=ದಕ್ಷಪ್ರಜೇಶ್ವರನು ಮಾನವೀಂ=ಸ್ವಾಯಂಭುವ-ಮನುವಿನ ಮಗಳಾದ ಪ್ರಸೂತಿಂ=ಪ್ರಸೂತಿ ಎಂಬುವಳನ್ನು ಉಪಯೇಮೇ=ಮದುವೆ-ಯಾದನು. ।।೪೭।।

**ತಸ್ಯಾಂ ಸಸರ್ಜ ದುಹಿತ್ಯಃ ಷೋಡಶಾಮಲಲೋಚನಾಃ ।**
**ತ್ರಯೋದಶಾದಾದ್ ಧರ್ಮಾಯ ತಥೈಕಾಮಗ್ನಯೇ ವಿಭುಃ ।।೪೮।।**

ವಿಭುಃ=ಸಮರ್ಥನಾದ ದಕ್ಷನು ತಸ್ಯಾಂ=ಆ ಪ್ರಸೂತಿಯಲ್ಲಿ ಅಮಲಲೋಚನಾಃ=ಸುಂದರಿಯರಾದ, ಷೋಡಶ=ಹದಿನಾರುಜನ ದುಹಿತ್ಯಃ=ಹೆಣ್ಣುಮಕ್ಕಳನ್ನು ಸಸರ್ಜ=ಸೃಷ್ಟಿಸಿದನು. ಅವರಲ್ಲಿ ತ್ರಯೋದಶ=ಹದಿಮೂರು ಜನರನ್ನು ಧರ್ಮಾಯ=ಯಮಧರ್ಮನಿಗೆ ಅದಾತ್=ಮದುವೆಮಾಡಿಕೊಟ್ಟನು. ಏಕಾಂ=ಒಬ್ಬಳನ್ನು ಅಗ್ನಯೇ=ಅಗ್ನಿಗೆ ಅದಾತ್=ಮದುವೆಮಾಡಿಕೊಟ್ಟನು. ।।೪೮।।

**ಪಿತೃಭ್ಯ ಏಕಾಂ ಯುಕ್ತೇಭ್ಯೋ ಭವಾಯೈಕಾಂ ಭವಚ್ಛಿದೇ ॥೪೯॥**

ಯುಕ್ತೇಭ್ಯಃ=ಮಿಲಿತರಾದ ಪಿತೃಭ್ಯಃ=ಪಿತೃಗಳಿಗೆ ಏಕಾಂ=ಒಬ್ಬಳನ್ನು ಭವಚ್ಛಿದೇ= ಜ್ಞಾನೋಪದೇಶ ಮಾಡಿ ಸಂಸಾರಮೋಚಕರಾದ ಭವಾಯ=ರುದ್ರದೇವರಿಗೆ ಏಕಾಂ=ಒಬ್ಬಳನ್ನು ಅದಾತ್=ಮದುವೆಮಾಡಿಕೊಟ್ಟನು.

"ಯುಕ್ತೇಭ್ಯಃ" ಎಂಬುದಕ್ಕೆ ಶ್ರೀಹರಿಯಲ್ಲಿ ಮನೋಯೋಗವುಳ್ಳವರು ಎಂದೂ ಅರ್ಥ. ಪ್ರಚೇತಸರಂತೆ ಐಕಮತ್ಯ ಉಳ್ಳವರಾದ್ದರಿಂದ ಅನೇಕರಿಗೆ ಒಬ್ಬಳನ್ನು ಕೊಟ್ಟದ್ದು ಯುಕ್ತವೇ ಆಗಿದೆ. ॥೪೯॥

ಅವರ ಹೆಸರುಗಳನ್ನು ಹೇಳುವರು -

**ಶ್ರದ್ಧಾ ಮೈತ್ರೀ ದಯಾ ಶಾಂತಿಸ್ತುಷ್ಟಿಃ ಪುಷ್ಟಿಃ ಕ್ರಿಯೋನ್ನತಿಃ ।**
**ಬುದ್ಧಿರ್ಮೇಧಾ ತಿತಿಕ್ಷಾ ಹ್ರೀರ್ಮೂರ್ತಿರ್ಧರ್ಮಸ್ಯ ಪತ್ನಯಃ ॥**

ಶ್ರದ್ಧಾ ಮೈತ್ರೀ ದಯಾ ಶಾಂತಿ ತುಷ್ಟಿ ಪುಷ್ಟಿ ಕ್ರಿಯಾ ಉನ್ನತಿ ಬುದ್ಧಿ ಮೇಧಾ ತಿತಿಕ್ಷಾ ಹ್ರೀ ಮೂರ್ತಿ ಎಂಬ ಹದಿಮೂರುಜನರು ಯಮಧರ್ಮನ ಪತ್ನಿಯರು.

ಈ ಶ್ಲೋಕದಲ್ಲಿ ಹೇಳಿದ ಹದಿಮೂರುಜನ ಯಮನ ಪತ್ನಿಯರು ಶ್ರದ್ಧಾ ಮುಂತಾದವುಗಳಿಗೆ ಅಭಿಮಾನಿದೇವತೆಗಳೆಂದು ತಿಳಿಯಬೇಕು.

೧. ಶ್ರದ್ಧಾ ಎಂದರೆ ಶಾಸ್ತ್ರದಲ್ಲಿ ಹೇಳಿದ ಪದಾರ್ಥಗಳು ಕಣ್ಣಿಗೆ ಕಾಣದಿದ್ದರೂ ಇದೆ ಎಂದು ತಿಳಿಯುವುದು. ಮತ್ತು ಇದರಿಂದ ನನಗೆ ಪ್ರಯೋಜನವಿದೆ ಎಂದು ತಿಳಿಯುವದು ಎಂಬ ಆಸ್ತಿಕ್ಯಬುದ್ಧಿ. ಈ ಎರಡೂ ಶ್ರದ್ಧಾ ಎನಿಸುತ್ತವೆ.

೨. ಹಿತಾಚರಣೆಯೇ ಮೈತ್ರಿ. ೩. ಪರರ ದುಃಖವನ್ನು ಪರಿಹರಿಸುವ ಇಚ್ಛೆಯೇ ದಯಾ. ೪. ಆಶೆಯಿಲ್ಲದಿರುವದೇ ಶಾಂತಿ. ೫. ಶ್ರೀಹರಿಯ ಇಚ್ಛೆಯಿಂದ ದೊರೆತದ್ದರಲ್ಲಿ ಸಾಕು ಎಂಬ ಬುದ್ಧಿಯೇ ತುಷ್ಟಿ ೬. ದೇಹ ಸ್ಥೂಲವಾಗುವದು ಪುಷ್ಟಿ ೭. ಶಾಸ್ತ್ರವಿಹಿತವಾದ ಕರ್ಮ ಕ್ರಿಯಾ. ೮. ಧನಧಾನ್ಯವೃದ್ಧಿ ಉನ್ನತಿ. ೯. ವಿಚಾರ ಮಾಡಿ ನಿಶ್ಚಯವಾದ ಜ್ಞಾನವೇ ಬುದ್ಧಿ. ೧೦. ಅನುಭವಿಸಿದ ಪದಾರ್ಥಗಳನ್ನು ಮನಸ್ಸಿನಲ್ಲಿ ಧಾರಣ ಮಾಡುವ ಸಾಮರ್ಥ್ಯವೇ ಮೇಧಾ. ೧೧. ಪರರು ಮಾಡಿದ ಅಪರಾಧವನ್ನು ಸಹನ ಮಾಡುವದು ತಿತಿಕ್ಷಾ. ೧೨. ನಿಷಿದ್ಧಕಾರ್ಯ ಮಾಡಿದಾಗ ಜಿಗುಪ್ಸೆಯಾಗುವುದೇ ಹ್ರೀ (ಲಜ್ಜೆ). ೧೩. ಶುದ್ಧಿ ಎಂದು ಕರೆಸಿಕೊಳ್ಳುವ ಶುದ್ಧಸತ್ವಕ್ಕೆ ಅಭಿಮಾನಿದೇವತೆ ಮೂರ್ತಿ ಎಂಬುವಳು.

ಇವರಿಗೆ ತಕ್ಕ ಮಕ್ಕಳನ್ನು ಮುಂದೆ ಹೇಳುವರು. ಶ್ರದ್ಧಾದಿಗಳಿಂದ ಕೂಡಿದ ಧರ್ಮಾತ್ಮನಿಗೆ (ಸಜ್ಜನನಿಗೆ) ಏನೇನು ಫಲಗಳಾಗುವವೋ ಅವುಗಳ ಅಭಿಮಾನಿದೇವತೆಗಳು ಶ್ರದ್ಧಾದಿಗಳ ಮಕ್ಕಳಾಗಿ ಜನಿಸಿದರೆಂದು ಮುಂದಿನ ಎರಡು ಶ್ಲೋಗಳಿಂದ ತಿಳಿಸುವರು -

**ಶ್ರದ್ಧಾಽಸೂತ ಶುಭಂ ಮೈತ್ರೀ ಪ್ರಸಾದಮಭಯಂ ದಯಾ ॥೫೦॥**

ಶ್ರದ್ಧಾ=[೧]ಶ್ರದ್ಧಾ ಎಂಬುವಳು ಶುಭಂ=ಶುಭ ಎಂಬ ಮಗನನ್ನು (ಪುಣ್ಯವನ್ನು-ಒಳ್ಳೆಯ ಅದೃಷ್ಟವನ್ನು) ಅಸೂತ=ಹೆತ್ತಳು. ಮೈತ್ರೀ=ಮೈತ್ರಿ ಎಂಬುವವಳು ಪ್ರಸಾದಂ=[೨]ಪ್ರಸಾದನೆಂಬ ಮಗನನ್ನು ಅಸೂತ=ಹೆತ್ತಳು. ದಯಾ=ದಯಾ ಎಂಬುವವಳು ಅಭಯಂ=[೩]ಅಭಯನನ್ನು ಅಸೂತ=ಹೆತ್ತಳು. ॥೫೦॥

**ಶಾಂತಿಃ ಸುಖಂ ಮುದಂ ತುಷ್ಟಿಃ ಸ್ಮಯಂ ಪುಷ್ಟಿರಸೂಯತ ।**
**ಯೋಗಂ ಕ್ರಿಯೋನ್ನತಿರ್ದರ್ಪಮರ್ಥಂ ಬುದ್ಧಿರಸೂಯತ ॥೫೧॥**

ಶಾಂತಿಃ=ಶಾಂತಿ ಎಂಬುವವಳು ಸುಖಂ=[೪]ಸ್ವರೂಪಸುಖನೆಂಬ ಮಗನನ್ನು ಪಡೆದಳು. ತುಷ್ಟಿಃ=ತುಷ್ಟಿ ಎಂಬುವವಳು ಹರ್ಷಂ=[೫]ಹರ್ಷನನ್ನು ಪಡೆದಳು. ಪುಷ್ಟಿಃ=ಪುಷ್ಟಿಯು ಸ್ಮಯಂ=[೬]ಗರ್ವನನ್ನು ಪಡೆದಳು. ಕ್ರಿಯಾ=ಕ್ರಿಯಾ ಎಂಬುವವಳು ಯೋಗಂ=[೭]ಯೋಗನನ್ನೂ ಹೆತ್ತಳು. ಉನ್ನತಿಃ=ಉನ್ನತಿಯು ದರ್ಪಂ=[೮]ದರ್ಪನನ್ನು ಮಗನಾಗಿ ಪಡೆದಳು. ಬುದ್ಧಿಃ=ಬುದ್ಧಿ ಎಂಬುವವಳು ಅರ್ಥಂ=[೯]ಅರ್ಥನನ್ನು ಹೆತ್ತಳು. ॥೫೧॥

---

೧. **ಅಶ್ರದ್ಧಯಾ ಹುತಂ ದತ್ತಂ ತಪಸ್ತಪ್ತಂ ಕೃತಂ ಚ ಯತ್ ।**
**ಅಸದಿತ್ಯುಚ್ಯತೇ ಪಾರ್ಥ ನ ಚ ತತ್ಪ್ರೇತ್ಯ ನೋ ಇಹ ॥**
ಎಂದು ಭಗವದ್ಗೀತೆಯಲ್ಲಿ ಶ್ರದ್ಧೆ ಇಲ್ಲದೇ ಮಾಡಿದವನ ಕರ್ಮಗಳು ನಿಷ್ಫಲವೆಂದು ಹೇಳಿರುವುದರಿಂದ ಮತ್ತು - "ಶ್ರದ್ಧಯಾ ಪರಯಾ ತಪ್ತಃ" "ಶೃಣ್ವತಃ ಶ್ರದ್ದಧಾನಸ್ಯ" "ಶ್ರದ್ದಧಾನಾಯ ಭಕ್ತಾಯ" ಮುಂತಾಗಿ ಫಲವನ್ನು ಹೇಳುವಾಗಲೆಲ್ಲ ಶ್ರದ್ಧೆಯನ್ನು ಬಹುಶಃ ಹೇಳಿರುವದರಿಂದಲೂ, ಶ್ರದ್ಧೆಯಿಲ್ಲದ ಕರ್ಮವು ವಿಫಲವಾದ್ದರಿಂದ ಶ್ರದ್ಧೆಯಿದ್ದರೆ ಶುಭವಾದ ಪುಣ್ಯ ಬರುವದು ಎಂದು ಇಲ್ಲಿ ಸೂಚಿತವಾಗುತ್ತಿದೆ.

೨. ಎಲ್ಲ ಪ್ರಾಣಿಗಳಲ್ಲಿ (ಹಿತಾಚರಣೆಯಿಂದ) ಮೈತ್ರಿ ಮಾಡುವುದರಿಂದ ಮನಸ್ಸಿಗೆ (ಪ್ರಸಾದ) ಪ್ರಸನ್ನತೆ ಬರುವದು. ದ್ರೋಹ ಮಾಡಿದರೆ ಮಾಲಿನ್ಯ ಬರುವದು ಎಂದು ಇಲ್ಲಿ ಸೂಚಿತವಾಗುತ್ತಿದೆ.

೩. ಎಲ್ಲ ಪ್ರಾಣಿಗಳಲ್ಲಿ ದಯೆ ಮಾಡುವದರಿಂದ ಆ ಪ್ರಾಣಿಗಳಿಂದಲೂ, ಯಮನಿಂದಲೂ (ಅಭಯವಿರುತ್ತದೆ) ಭಯವಿರುವದಿಲ್ಲ. ಇಲ್ಲವಾದರೆ "ದ್ರೋಗ್ಧುರ್ವೈ ಪರತೋ ಭಯಂ" ಎಂದಿರುವದರಿಂದ ಭಯ ಬರುವದು ಎಂದು ಇಲ್ಲಿ ಸೂಚಿತವಾಗುತ್ತಿದೆ.

೪. ಯಾರು ವಿಷಯಾಭಿಲಾಷೆಯಿಂದ ವಿಷಯಗಳನ್ನು ಬೆನ್ನಟ್ಟುವರೋ ಅವರಿಗೆ ಸ್ವರೂಪಸುಖದ ತಿರೋಧಾನವಾಗುವದು. ವಿಷಯಾಭಿಲಾಷೆ ಬಿಟ್ಟವನಿಗೇನೇ ಸ್ವರೂಪಸುಖವು ಅಭಿವ್ಯಕ್ತವಾಗುವದು

**ಮೇಧಾ ಸ್ಮೃತಿಂ ತಿತಿಕ್ಷಾ ತು ಕ್ಷೇಮಂ ಹ್ರೀಃ ಪ್ರಶ್ರಯಂ ಸುತಮ್ ।**
**ಮೂರ್ತಿಃ ಸರ್ವಗುಣೋತ್ಪತ್ತೀ ನರನಾರಾಯಣಾವೃಷೀ ॥೫೨॥**

ಮೇಧಾ=ಮೇಧಾಳು ಸ್ಮೃತಿಂ=[೧೦]ಸ್ಮೃತಿಯನ್ನು ಪಡೆದಳು. ತಿತಿಕ್ಷಾ ತು=ತಿತಿಕ್ಷಾ ಆದರೂ ಕ್ಷೇಮಂ=[೧೧]ಕ್ಷೇಮನನ್ನು ಹೆತ್ತಳು. ಹ್ರೀಃ=ಹ್ರೀ(ಲಜ್ಜೆ)ಯೆಂಬುವಳು ಪ್ರಶ್ರಯಂ ಸುತಂ=ಪ್ರಶ್ರಯ([೧೨]ವಿನಯ)ನನ್ನು ಪೆತ್ತಳು. ಮೂರ್ತಿಃ=ಮೂರ್ತಿ ಎನ್ನುವವಳು ಸರ್ವಗುಣೋತ್ಪತ್ತೀ=ಶಮದಮಾದಿಗುಣಗಳಿಗೆ ಉತ್ಪಾದಕರಾದ ನರನಾರಾಯಣೌ ಋಷೀ ಅಸೂತ=ನರ ಮತ್ತು ನಾರಾಯಣ ಎಂಬ ಇಬ್ಬರು ಜ್ಞಾನಿಗಳಾದ ಮಕ್ಕಳನ್ನು ಪಡೆದಳು.

ನರನು ಶುಕ್ಲಕೇಶಾವೇಶವುಳ್ಳವನು, ನಾರಾಯಣನು ಭಗವಂತನ ಅವತಾರನೆಂದು ತಿಳಿಯಬೇಕು. ಎಲ್ಲರಂತೆ ಪ್ರಸೂತಿ(ಹೆರಿಗೆ)ಧರ್ಮಗಳು ಇಲ್ಲಿ ಇಲ್ಲವೆಂದು ತಿಳಿಸಲು ಕ್ರಿಯಾಪದ ಇಟ್ಟಿಲ್ಲವೆಂದು ತಿಳಿಯಬೇಕು. ॥೫೨॥

---

ಎಂಬುದನ್ನು "ಅಶಾಂತಸ್ಯ ಕುತಃ ಸುಖಂ" "ಶಾಂತನಾದವನಿಗೆ ಸುಖ. ಅಶಾಂತನಿಗಿಲ್ಲ" ಎಂದು ಶ್ರೀಕೃಷ್ಣನ ಮಾತಿನಿಂದ ತಿಳಿಯುವದು.

೫. ಅಲಂಬುದ್ಧಿಯಿದ್ದವನಿಗೆ ಮಾತ್ರ ಹರ್ಷವಾಗುವದು. ಎಷ್ಟುಸಿಕ್ಕರೂ ಸಾಲದು ಎಂಬುವವನಿಗೆ ಹರ್ಷವಾಗಲಾರದು.

೬. ದೇಹದಿಂದ ಪುಷ್ಟ(ಬಲಿಷ್ಠ)ನಾದವನಿಗೆ ಗರ್ವ ಬರುವದು. ಕೃಶನಾದ ದುರ್ಬಲನಿಗೆ ಗರ್ವವಿರುವದಿಲ್ಲ.

೭. ಲೌಕಿಕಕ್ರಿಯೆಗಳಿಂದ ಯೋಗವು ("ಅಪ್ರಾಪ್ತಪ್ರಾಪ್ತಿಃ ಯೋಗಃ" ಎಂದಿರುವಂತೆ ಹೊಸದಾಗಿ ಏನಾದರೂ ದೊರೆಯುವದು) ಪ್ರಾಪ್ತವಾಗುವುದು. ಪ್ರಾಣಾಯಾಮಾದಿರೂಪಕ್ರಿಯೆಯಿಂದ ಧ್ಯಾನಯೋಗವು, ಯಜ್ಞಾದಿಕ್ರಿಯೆಗಳಿಂದ ಭಕ್ತಿಯೋಗವು ಬರುವದು ಪ್ರಸಿದ್ಧವಾಗಿದೆ.

೮. ಧನ-ಧಾನ್ಯವೃದ್ಧಿರೂಪ ಉನ್ನತಿ ಇದ್ದವನಿಗೆ ದರ್ಪ ಎಂದರೆ ನಾನು ದೊಡ್ಡವನೆಂಬ ಜ್ಞಾನ (ಅದೇ ಅಹಂಕಾರವೆನಿಸುವದು) ಇರುವದು ಕಂಡಿದೆ. ದರಿದ್ರನಿಗೆ ಅದು ಇರುವದಿಲ್ಲ.

೯. ಬುದ್ಧಿ ಇದ್ದವರಿಗೇನೇ ಅವರವರಿಗೆ ಇಷ್ಟಪದಾರ್ಥ ದೊರೆಯುವದು ಪ್ರಸಿದ್ಧವಾಗಿದೆ.

೧೦. ಅನುಭವಿಸಿದ್ದನ್ನು ಧಾರಣ ಮಾಡುವ ಸಾಮರ್ಥ್ಯವೆಂಬ ಮೇಧಾ ಯಾರಿಗೆ ಇರುವುದೋ ಅವರಿಗೆ ಯಾವುದನ್ನು ಮಾಡಬೇಕು, ಯಾವುದನ್ನು ಬಿಡಬೇಕು ಎಂಬ ಸ್ಮರಣವಿರುವದು. ಯಾವನಿಗೆ ಸಂಸ್ಕಾರವೇ ನಾಶವಾಗಿದೆ ಅವನಿಗೆ ಸ್ಮರಣ ಬರುವದಿಲ್ಲ.

೧೧. ಪರರ ಅಪರಾಧವನ್ನು ಸಹನ ಮಾಡುವವನಿಗೆ ಕಲ್ಯಾಣವಾಗುವದು. ಇಲ್ಲವಾದರೆ ಸಿಟ್ಟಿನಿಂದ ಅವರಿಗೆ ಹಿಂಸಾದಿಗಳನ್ನು ಮಾಡಿ ನರಕಕ್ಕೆ ಗುರಿಯಾಗುವನು.

೧೨. ಲಜ್ಜಾ ಉಳ್ಳವನಿಗೆ ವಿಹಿತವಾಗದಿರುವ ನಿಷಿದ್ಧವಾದ ಕೆಲಸ ಮಾಡುವಾಗ ಬೇರೆಯವರು ನೋಡಿದರೆ ನಾಚಿಕೆಯಾಗುವದು. ನಮ್ರತೆ ಬರುವದು. ತಲೆಬಾಗುವನು. ಹೊರತು ನಿರ್ಲಜ್ಜನಿಗೆ ನಾಚಿಕೆಯಾಗುವುದಿಲ್ಲ.

ಭಗವದವತಾರಜ್ಞಾಪಕವಾದ ಜಗತ್ತಿನ ಆನಂದ ಮುಂತಾದವನ್ನು ಮುಂದಿನ ಮೂರುಶ್ಲೋಕಗಳಿಂದ ಹೇಳುವರು -

**ಯಯೋರ್ಜನ್ಮನ್ಯದೋ ವಿಶ್ವಮಭ್ಯನಂದತ್ ಸುನಿರ್ವೃತಮ್ ।**
**ಮನಾಂಸಿ ಕಕುಭೋ ವಾತಾಃ ಪ್ರಸೇದುಃ ಸರಿತೋಽಗ್ನಯಃ ॥೫೩॥**

ಯಯೋಃ ಜನ್ಮನಿ=ನರ-ನಾರಾಯಣರ ಅವತಾರವಾದಾಗ ಅದಃ ವಿಶ್ವಂ=ಈ ತ್ರಿಗುಣಾತ್ಮಕವಾದ್ದರಿಂದ ಸುಖ-ದುಃಖಾದಿಗಳಿಂದ ಕೂಡಿದ್ದಾದರೂ ಪ್ರಪಂಚವು ಸುನಿರ್ವೃತ್ತಂ ಸತ್=ಆನಂದಭರಿತವಾಗಿ ಅಭ್ಯನಂದತ್=ಇದು ನಮ್ಮ ಭಾಗ್ಯವೆಂದು ಭಗವಂತನ ಅವತಾರವನ್ನು ಗೌರವಿಸಿತು. ಮನಾಂಸಿ=ಸಜ್ಜನರ ಮನಸ್ಸುಗಳು, ಕಕುಭಃ=ದಿಕ್ಕುಗಳು, ವಾತಾಃ=ಗಾಳಿಗಳು, ಸರಿತಃ=ನದಿಗಳು, ಅಗ್ನಯಃ=ಅಗ್ನಿಗಳು ಎಲ್ಲವೂ ಪ್ರಸೇದುಃ= ಪ್ರಸನ್ನವಾದವು.

ಸಜ್ಜನರ ಮನಸ್ಸುಗಳು ಇತರ ಕಾರಣಗಳಿಲ್ಲದೇ ಪ್ರಸನ್ನವಾದವು. ದಿಕ್ಕುಗಳು ಪ್ರಸನ್ನವಾಗುವದು ಎಂದರೆ ದೂರದಲ್ಲಿರುವ ಪದಾರ್ಥಗಳೂ ಕಾಣುವಂತೆ ಪ್ರಕಾಶವಿಶೇಷವುಳ್ಳವುಗಳಾದವೆಂದರ್ಥ. ಗಾಳಿ ಪ್ರಸನ್ನವೆಂದರೆ ಅದರ ಸ್ಪರ್ಶ ಸುಖಜನಕವಾಗುವದೆಂದರ್ಥ. ನದಿಗಳು ಪ್ರಸನ್ನವಾದವು ಎಂದರೆ ಅಲ್ಲಿಯ ಕಮಲಗಳು ಅರಳುವದು, ನಿರ್ಮಲವಾಗುವದು, ಅದ್ರಿಗಳು ಪ್ರಸನ್ನವೆಂದರೆ ತಮ್ಮಲ್ಲಿರುವ ಮಣಿ ಮುಂತಾದವುಗಳನ್ನು ಹೊರಗೆಡುಹುವದು. ಅಗ್ನಿಗಳು ಪ್ರಸನ್ನವೆಂದರೆ ಆಹುತಿ ಹಾಕದಲೇ ಜ್ವಲಿಸುವದು ಎಂದರ್ಥ. ॥೫೩॥

ಇದು ಭೂಲೋಕದ ಪ್ರಸನ್ನತೆಯಾದರೆ, ಮೇಲಿನ ಲೋಕದ ಜನರ ಸೇವೆ ಹೇಳುವರು -

**ದಿವ್ಯವಾದ್ಯಂತ ತೂರ್ಯಾಣಿ ಪೇತುಃ ಕುಸುಮವೃಷ್ಟಯಃ ।**
**ಮುನಯಸ್ತುಷ್ಟುವುಸ್ತುಷ್ಟಾ ಜಗುರ್ಗಂಧರ್ವಕಿನ್ನರಾಃ ॥೫೪॥**

ದಿವಿ=ಸ್ವರ್ಗದಲ್ಲಿ ತೂರ್ಯಾಣಿ=ತೂರ್ಯ ಮುಂತಾದ ಎಲ್ಲ ದೇವತೆಗಳ ವಾದ್ಯಗಳೆಲ್ಲ ಅವಾದ್ಯಂತ=ಬಾರಿಸಿದವು, ಧ್ವನಿಮಾಡಿದವು. ಕುಸುಮವೃಷ್ಟಯಃ ಪೇತುಃ=ದೇವತೆಗಳು ಮಾಡಿದ ಪುಷ್ಪವೃಷ್ಟಿಯು ಧರ್ಮನ ಮನೆಯಲ್ಲಿ ಬಿದ್ದಿತು. ತುಷ್ಟಾಃ=ಭಗವಂತನ ಅವತಾರವನ್ನು ತಿಳಿದು ಸಂತುಷ್ಟರಾದ ಮುನಯಃ=ಮುನಿಗಳು ತುಷ್ಟುವುಃ=ಸ್ತೋತ್ರ ಮಾಡಿದರು. ಗಂಧರ್ವಕಿನ್ನರಾಃ=ಗಂಧರ್ವರು, ಕಿನ್ನರರು ಜಗುಃ=ಭಗವಂತನ ಕೀರ್ತಿಯನ್ನು ಗಾನ ಮಾಡಿದರು. ॥೫೪॥

**ನೃತ್ಯಂತಿ ಸ್ಮ ಸ್ತ್ರಿಯೋ ದೇವ್ಯ ಆಸೀತ್ ಪರಮಮಂಗಲಮ್ ।**
**ದೇವಾ ಬ್ರಹ್ಮಾದಯಃ ಸರ್ವೇ ಉಪತಸ್ಥುರಭಿಷ್ಟವೈಃ ॥೫೫॥**

ದೇವ್ಯಃ ಸ್ತ್ರಿಯಃ=ದೇವತಾಸ್ತ್ರೀಯರು (ಅಪ್ಸರೆಯರು) ನೃತ್ಯಂತಿ ಸ್ಮ=ನರ್ತನ ಮಾಡಿದರು. ಏವಂ=ಈ ರೀತಿಯಾಗಿ ಪರಮಮಂಗಲಂ ಆಸೀತ್=ಯಾರ ಪ್ರೇರಣೆ ಇಲ್ಲದೇ ಶ್ರೀಹರಿಯ ಪ್ರಭಾವದಿಂದ ಮಂಗಲವನ್ನು ಮಾಡಿದರು. ಭೂಮಿ-ಸ್ವರ್ಗಗಳಲ್ಲಿ ಉತ್ಸವವಾಯಿತು.

ಬ್ರಹ್ಮಾದಯಃ ಸರ್ವೇ ದೇವಾಃ=ಬ್ರಹ್ಮದೇವರೇ ಮೊದಲಾದ ಎಲ್ಲ ದೇವತೆಗಳು ಅಭಿಷ್ಟವೈಃ ಉಪತಸ್ಥುಃ=ಸ್ತೋತ್ರಗಳಿಂದ ಉಪಾಸನೆ ಮಾಡಿದರು, ಸೇವಿಸಿದರು, ಸ್ತುತಿಸಿದರು ಎಂದರ್ಥ.

**ಭಾಗವತ ತಾತ್ಪರ್ಯ -**

ಇಲ್ಲಿ ನಾರಾಯಣನಂತೆ ನರನನ್ನೂ ಬ್ರಹ್ಮಾದಿದೇವತೆಗಳು ಸ್ತುತಿಸಿದ್ದರಿಂದ ಅವನೂ ಸಾಕ್ಷಾತ್ ವಿಷ್ಣುವಿನ ಅವತಾರವೆಂದು ತೋರುವದು. ಆ ಕಾರಣ ಆಚಾರ್ಯರು ವಿವಕ್ಷಿತವಾದ ತಾತ್ಪರ್ಯವನ್ನು ಪ್ರಮಾಣದಿಂದ ತಿಳಿಸುವರು -

**ನರೇ ವಿಷ್ಣುಃ ಸಮಾವಿಷ್ಟಃ ಸ್ವಯಂ ನಾರಾಯಣೋ ಹರಿಃ ।**
**ಅರ್ಜುನೇ ಚ ನರಾವೇಶಃ ಕೃಷ್ಣೋ ನಾರಾಯಣಃ ಸ್ವಯಂ ॥ ಇತಿ ತತ್ತ್ವವಿವೇಕೇ ॥**

ನಾರಾಯಣನು ಸಾಕ್ಷಾತ್ ಶ್ರೀಹರಿಯ ಅವತಾರನು. ಶೇಷಾವತಾರನಾದ ನರನಲ್ಲಿ ವಿಷ್ಣುವಿನ ಆವೇಶ ಮಾತ್ರವೆಂದು ತಿಳಿಯಬೇಕು. ಅದರಂತೆ ಇಂದ್ರಾವತಾರನಾದ ಅರ್ಜುನನಲ್ಲಿ ನರನ ಆವೇಶಮಾತ್ರ. ಶ್ರೀಕೃಷ್ಣನು ಸಾಕ್ಷಾತ್ ನಾರಾಯಣನು ಎಂದು ತತ್ತ್ವವಿವೇಕದಲ್ಲಿದೆ.

ಈ ತಾತ್ಪರ್ಯದ ಉತ್ತರಾರ್ಧದಲ್ಲಿ ಪ್ರಾಸಂಗಿಕವಾಗಿ ೫೯ನೇ ಶ್ಲೋಕವಾದ "ತಾವಿಮೌ ವೈ ಭಗವತೋ ...." ಎಂಬ ಶ್ಲೋಕದ ತಾತ್ಪರ್ಯವನ್ನೂ ಹೇಳಿರುವರು. ಅಂದರೆ ಇಂದ್ರಾಂಶನಾದರೂ ಹರಿಯಿಂದ ಆವಿಷ್ಟನರಾಂಶ ಅರ್ಜುನನಲ್ಲಿರುವದರಿಂದ ೫೯ನೇ ಶ್ಲೋಕದಲ್ಲಿ "ಹರೇರಂಶೌ" ಎಂದಿರುವರೆಂದು ಭಾವ. ॥೫೫॥

ದೇವತೆಗಳ ಸ್ತೋತ್ರಪ್ರಕಾರವನ್ನು ತಿಳಿಸುವರು -

**ಯೋ ಮಾಯಯಾ ವಿರಚಿತಂ ನಿಜಯಾತ್ಮನೀದಂ**
**ಖೇ ರೂಪಭೇದಮಿವ ತತ್ಪ್ರತಿಚಕ್ಷಣಾಯ ।**

**ಏತೇನ ಧರ್ಮಸದನೇ ಋಷಿಮೂರ್ತಿನಾಽದ್ಯ**
**ಪ್ರಾದುಶ್ಚಕಾರ ಪುರುಷಾಯ ನಮಃ ಪರಸ್ಮೈ ॥೫೬॥**

ಯಃ=ಯಾವ ಶ್ರೀಹರಿಯು ನಿಜಯಾ ಮಾಯಯಾ=ತನ್ನ ಇಚ್ಛೆಯಿಂದ ಯಸ್ಮಿನ್ ಆತ್ಮನಿ=ಯಾವ ತನ್ನಲ್ಲಿ ಖೇ=ಆಕಾಶದಲ್ಲಿ ಆಶ್ರಯಪಡೆದು ರೂಪಭೇದಮಿವ=ವಿಮಾನಗಳು, ಮೋಡ, ಪಕ್ಷಿ ಮುಂತಾದವು ಕಾಣುವಂತೆ ಗಾಳಿಯು ಆಕಾಶವನ್ನು ಆಶ್ರಯಿಸಿದಂತೆ ಆಶ್ರಿತವಾಗಿ ಇದಂ ವಿಶ್ವಂ ವಿರಚಿತಂ=ಈ ಜಗತ್ತು ನಿರ್ಮಿಸಿಲ್ಪಟ್ಟಿತ್ತೋ, ತತ್ಪ್ರತಿಚಕ್ಷಣಾಯ= ಅಂತಹ ತನ್ನನ್ನು ಪ್ರಕಾಶಗೊಳಿಸಲು, ತನ್ನನ್ನು ಏತೇನ ಋಷಿಮೂರ್ತಿನಾ ಅದ್ಯ=ಈಗ ನಮ್ಮ ಕಣ್ಣಿಗೆ ಕಾಣುವ ಋಷಿಯ ಆಕಾರದಿಂದ ಧರ್ಮಸದನೇ=ಮೂರ್ತಿ ಎಂಬ ಧರ್ಮಪತ್ನಿಯಲ್ಲಿ ಪ್ರಾದುಶ್ಚಕಾರ=ಪ್ರಕಟಗೊಳಿಸಿದನೋ ಅಂತಹ ಪರಸ್ಮೈ ಪುರುಷಾಯ=ಸರ್ವೋತ್ತಮನಾದ ಶ್ರೀಹರಿಗೆ ನಮಃ=ನಮಸ್ಕಾರವು.

**ಭಾಗವತ ತಾತ್ಪರ್ಯ -**

ಈ ಶ್ಲೋಕದಲ್ಲಿಯ ರೂಪಭೇದಶಬ್ದವು ಅರ್ಥವಾಗದಿರುವುದರಿಂದ ಅದನ್ನು ವ್ಯಾಖ್ಯಾನಿಸುವರು :-

**ಖೇ ರೂಪಭೇದೋ (ವಾಯ್ವಾದಿಕಃ) ಽಭ್ರಾದಿಃ ।**
**''ಯಥಾಕಾಶಸ್ಥಿತೋ ನಿತ್ಯಂ'' ಇತ್ಯಾದಿ ಚ ।**
**ಯಥಾಕಾಶೇ ವಿಮಾನಾದಿರೂಪಭೇದಃ ಪ್ರತೀಯತೇ ।**
**ತಥಾ ಹರೌ ಜಗದಿದಂ ತತ್ಸಾಮರ್ಥ್ಯಾತ್ಪ್ರತೀಯತೇ ॥'' ಇತಿ ಬ್ರಾಹ್ಮೇ ॥**

ಆಕಾಶದಲ್ಲಿ ರೂಪಭೇದವೆಂದರೆ ವಾಯು, ಮೋಡ, ಪಕ್ಷಿ ಮುಂತಾದ ವಿವಿಧ ಪದಾರ್ಥಗಳು ಅಥವಾ ಎಲ್ಲ ಭೂತಗಳು ಆಶ್ರಿತವಾಗಿರುವಂತೆ, ಅಥವಾ ರೂಪಾಣಾಂ ವಿಮಾನಾದಿ ಆಕಾರಗಳ ಭೇದವೈಚಿತ್ರ್ಯವು ಮೋಡದಲ್ಲಿ ಕಾಣುವದೋ ಹಾಗೆ ಈ ಜಗತ್ತು ಶ್ರೀಹರಿಯನ್ನು ಆಶ್ರಯಿಸಿದೆ.

**ಯಥಾಕಾಶಸ್ಥಿತೋ ನಿತ್ಯಂ ವಾಯುಸ್ಸರ್ವತ್ರಗೋ ಮಹಾನ್ ।**
**ತಥಾ ಸರ್ವಾಣಿ ಭೂತಾನಿ ಮತ್ಸ್ಥಾನೀತ್ಯುಪಧಾರಯ ॥**

ಆಕಾಶದಲ್ಲಿರುವ ವಾಯುವು ಎಲ್ಲ ಕಡೆ ಇದ್ದಂತೆ ಎಲ್ಲ ಪ್ರಾಣಿಗಳು ನನ್ನಲ್ಲಿವೆ ಎಂದು ತಿಳಿ ಎಂಬುದಾಗಿ ಶ್ರೀಕೃಷ್ಣಪರಮಾತ್ಮ ಗೀತೆಯಲ್ಲಿ ಹೇಳಿರುವನು. ಮತ್ತು ಆಕಾಶದಲ್ಲಿ ವಿಮಾನ, ಮೋಡ, ಪಕ್ಷಿ ಮುಂತಾದವು ತೋರುವಂತೆ ಶ್ರೀಹರಿಯಲ್ಲಿ ಜಗತ್ತು ಶ್ರೀಹರಿಯ ಸಾಮರ್ಥ್ಯದಿಂದ ತೋರುತ್ತದೆ ಎಂದು ಬ್ರಹ್ಮಪುರಾಣದಲ್ಲಿ ಹೇಳಿದೆ. ॥೫೬॥

**ನೃತ್ಯಂತಿ ಸ್ಮ ಸ್ತ್ರಿಯೋ ದೇವ್ಯ ಆಸೀತ್ ಪರಮಮಂಗಲಮ್ ।**
**ದೇವಾ ಬ್ರಹ್ಮಾದಯಃ ಸರ್ವೇ ಉಪತಸ್ಥುರಭಿಷ್ಟವೈಃ ॥೫೫॥**

ದೇವ್ಯಃ ಸ್ತ್ರಿಯಃ=ದೇವತಾಸ್ತ್ರೀಯರು (ಅಪ್ಸರೆಯರು) ನೃತ್ಯಂತಿ ಸ್ಮ=ನರ್ತನ ಮಾಡಿದರು. ಏವಂ=ಈ ರೀತಿಯಾಗಿ ಪರಮಮಂಗಲಂ ಆಸೀತ್=ಯಾರ ಪ್ರೇರಣೆ ಇಲ್ಲದೇ ಶ್ರೀಹರಿಯ ಪ್ರಭಾವದಿಂದ ಮಂಗಲವನ್ನು ಮಾಡಿದರು. ಭೂಮಿ-ಸ್ವರ್ಗಗಳಲ್ಲಿ ಉತ್ಸವವಾಯಿತು.

ಬ್ರಹ್ಮಾದಯಃ ಸರ್ವೇ ದೇವಾಃ=ಬ್ರಹ್ಮದೇವರೇ ಮೊದಲಾದ ಎಲ್ಲ ದೇವತೆಗಳು ಅಭಿಷ್ಟವೈಃ ಉಪತಸ್ಥುಃ=ಸ್ತೋತ್ರಗಳಿಂದ ಉಪಾಸನೆ ಮಾಡಿದರು, ಸೇವಿಸಿದರು, ಸ್ತುತಿಸಿದರು ಎಂದರ್ಥ.

**ಭಾಗವತ ತಾತ್ಪರ್ಯ -**

ಇಲ್ಲಿ ನಾರಾಯಣನಂತೆ ನರನನ್ನೂ ಬ್ರಹ್ಮಾದಿದೇವತೆಗಳು ಸ್ತುತಿಸಿದ್ದರಿಂದ ಅವನೂ ಸಾಕ್ಷಾತ್ ವಿಷ್ಣುವಿನ ಅವತಾರವೆಂದು ತೋರುವದು. ಆ ಕಾರಣ ಆಚಾರ್ಯರು ವಿವಕ್ಷಿತವಾದ ತಾತ್ಪರ್ಯವನ್ನು ಪ್ರಮಾಣದಿಂದ ತಿಳಿಸುವರು -

**ನರೇ ವಿಷ್ಣುಃ ಸಮಾವಿಷ್ಟಃ ಸ್ವಯಂ ನಾರಾಯಣೋ ಹರಿಃ ।**
**ಅರ್ಜುನೇ ಚ ನರಾವೇಶಃ ಕೃಷ್ಣೋ ನಾರಾಯಣಃ ಸ್ವಯಂ ॥ ಇತಿ ತತ್ತ್ವವಿವೇಕೇ ॥**

ನಾರಾಯಣನು ಸಾಕ್ಷಾತ್ ಶ್ರೀಹರಿಯ ಅವತಾರನು. ಶೇಷಾವತಾರನಾದ ನರನಲ್ಲಿ ವಿಷ್ಣುವಿನ ಆವೇಶ ಮಾತ್ರವೆಂದು ತಿಳಿಯಬೇಕು. ಅದರಂತೆ ಇಂದ್ರಾವತಾರನಾದ ಅರ್ಜುನನಲ್ಲಿ ನರನ ಆವೇಶಮಾತ್ರ. ಶ್ರೀಕೃಷ್ಣನು ಸಾಕ್ಷಾತ್ ನಾರಾಯಣನು ಎಂದು ತತ್ತ್ವವಿವೇಕದಲ್ಲಿದೆ.

ಈ ತಾತ್ಪರ್ಯದ ಉತ್ತರಾರ್ಧದಲ್ಲಿ ಪ್ರಾಸಂಗಿಕವಾಗಿ ೫೯ನೇ ಶ್ಲೋಕವಾದ "ತಾವಿಮೌ ವೈ ಭಗವತೋ ...." ಎಂಬ ಶ್ಲೋಕದ ತಾತ್ಪರ್ಯವನ್ನೂ ಹೇಳಿರುವರು. ಅಂದರೆ ಇಂದ್ರಾಂಶನಾದರೂ ಹರಿಯಿಂದ ಆವಿಷ್ಟ ನರಾಂಶ ಅರ್ಜುನನಲ್ಲಿರುವದರಿಂದ ೫೯ನೇ ಶ್ಲೋಕದಲ್ಲಿ "ಹರೇರಂಶೌ" ಎಂದಿರುವರೆಂದು ಭಾವ. ॥೫೫॥

ದೇವತೆಗಳ ಸ್ತೋತ್ರಪ್ರಕಾರವನ್ನು ತಿಳಿಸುವರು -

**ಯೋ ಮಾಯಯಾ ವಿರಚಿತಂ ನಿಜಯಾತ್ಮನೀದಂ**
**ಖೇ ರೂಪಭೇದಮಿವ ತತ್ಪ್ರತಿಚಕ್ಷಣಾಯ ।**

**ಏತೇನ ಧರ್ಮಸದನೇ ಋಷಿಮೂರ್ತಿನಾऽದ್ಯ**
**ಪ್ರಾದುಶ್ಚಕಾರ ಪುರುಷಾಯ ನಮಃ ಪರಸ್ಮೈ ॥೫೬॥**

ಯಃ=ಯಾವ ಶ್ರೀಹರಿಯು ನಿಜಯಾ ಮಾಯಯಾ=ತನ್ನ ಇಚ್ಛೆಯಿಂದ ಯಸ್ಮಿನ್ ಆತ್ಮನಿ=ಯಾವ ತನ್ನಲ್ಲಿ ಖೇ=ಆಕಾಶದಲ್ಲಿ ಆಶ್ರಯಪಡೆದು ರೂಪಭೇದಮಿವ=ವಿಮಾನಗಳು, ಮೋಡ, ಪಕ್ಷಿ ಮುಂತಾದವು ಕಾಣುವಂತೆ ಗಾಳಿಯು ಆಕಾಶವನ್ನು ಆಶ್ರಯಿಸಿದಂತೆ ಆಶ್ರಿತವಾಗಿ ಇದಂ ವಿಶ್ವಂ ವಿರಚಿತಂ=ಈ ಜಗತ್ತು ನಿರ್ಮಿಸಲ್ಪಟ್ಟಿತ್ತೋ, ತತ್ಪ್ರತಿಚಕ್ಷಣಾಯ= ಅಂತಹ ತನ್ನನ್ನು ಪ್ರಕಾಶಗೊಳಿಸಲು, ತನ್ನನ್ನು ಏತೇನ ಋಷಿಮೂರ್ತಿನಾ ಅದ್ಯ=ಈಗ ನಮ್ಮ ಕಣ್ಣಿಗೆ ಕಾಣುವ ಋಷಿಯ ಆಕಾರದಿಂದ ಧರ್ಮಸದನೇ=ಮೂರ್ತಿ ಎಂಬ ಧರ್ಮಪತ್ನಿಯಲ್ಲಿ ಪ್ರಾದುಶ್ಚಕಾರ=ಪ್ರಕಟಗೊಳಿಸಿದನೋ ಅಂತಹ ಪರಸ್ಮೈ ಪುರುಷಾಯ=ಸರ್ವೋತ್ತಮನಾದ ಶ್ರೀಹರಿಗೆ ನಮಃ=ನಮಸ್ಕಾರವು.

**ಭಾಗವತ ತಾತ್ಪರ್ಯ -**

ಈ ಶ್ಲೋಕದಲ್ಲಿಯ ರೂಪಭೇದಶಬ್ದವು ಅರ್ಥವಾಗದಿರುವುದರಿಂದ ಅದನ್ನು ವ್ಯಾಖ್ಯಾನಿಸುವರು ಃ-

**ಖೇ ರೂಪಭೇದೋ (ವಾಯ್ವಾದಿಕಃ) ऽಭ್ರಾದಿಃ ।**
**''ಯಥಾಕಾಶಸ್ಥಿತೋ ನಿತ್ಯಂ'' ಇತ್ಯಾದಿ ಚ ।**
**ಯಥಾಕಾಶೇ ವಿಮಾನಾದಿರೂಪಭೇದಃ ಪ್ರತೀಯತೇ ।**
**ತಥಾ ಹರೌ ಜಗದಿದಂ ತತ್ಸಾಮರ್ಥ್ಯಾತ್ಪ್ರತೀಯತೇ ॥'' ಇತಿ ಬ್ರಾಹ್ಮೇ ॥**

ಆಕಾಶದಲ್ಲಿ ರೂಪಭೇದವೆಂದರೆ ವಾಯು, ಮೋಡ, ಪಕ್ಷಿ ಮುಂತಾದ ವಿವಿಧ ಪದಾರ್ಥಗಳು ಅಥವಾ ಎಲ್ಲ ಭೂತಗಳು ಆಶ್ರಿತವಾಗಿರುವಂತೆ, ಅಥವಾ ರೂಪಾಣಾಂ ವಿಮಾನಾದಿ ಆಕಾರಗಳ ಭೇದವೈಚಿತ್ರ್ಯವು ಮೋಡದಲ್ಲಿ ಕಾಣುವದೋ ಹಾಗೆ ಈ ಜಗತ್ತು ಶ್ರೀಹರಿಯನ್ನು ಆಶ್ರಯಿಸಿದೆ.

**ಯಥಾಕಾಶಸ್ಥಿತೋ ನಿತ್ಯಂ ವಾಯುಸ್ಸರ್ವತ್ರಗೋ ಮಹಾನ್ ।**
**ತಥಾ ಸರ್ವಾಣಿ ಭೂತಾನಿ ಮತ್ಸ್ಥಾನೀತ್ಯುಪಧಾರಯ ॥**

ಆಕಾಶದಲ್ಲಿರುವ ವಾಯುವು ಎಲ್ಲ ಕಡೆ ಇದ್ದಂತೆ ಎಲ್ಲ ಪ್ರಾಣಿಗಳು ನನ್ನಲ್ಲಿವೆ ಎಂದು ತಿಳಿ ಎಂಬುದಾಗಿ ಶ್ರೀಕೃಷ್ಣಪರಮಾತ್ಮ ಗೀತೆಯಲ್ಲಿ ಹೇಳಿರುವನು. ಮತ್ತು ಆಕಾಶದಲ್ಲಿ ವಿಮಾನ, ಮೋಡ, ಪಕ್ಷಿ ಮುಂತಾದವು ತೋರುವಂತೆ ಶ್ರೀಹರಿಯಲ್ಲಿ ಜಗತ್ತು ಶ್ರೀಹರಿಯ ಸಾಮರ್ಥ್ಯದಿಂದ ತೋರುತ್ತದೆ ಎಂದು ಬ್ರಹ್ಮಪುರಾಣದಲ್ಲಿ ಹೇಳಿದೆ. ॥೫೬॥

**ಸೋಽಯಂ ಸ್ಥಿತಿವ್ಯತಿಕರೋಪಶಮಾಯ ಸೃಷ್ಟಾನ್**
**ಸತ್ತ್ವೇನ ನಃ ಸುರಗಣಾನನುಮೇಯತತ್ತ್ವಃ ।**
**ದೃಶ್ಯಾದದಭ್ರಕರುಣೇನ ವಿಲೋಕನೇನ**
**ಯಚ್ಛ್ರೀನಿಕೇತಮಮಲಂ ಕ್ಷಿಪತಾಽರವಿಂದಮ್ ॥೫೭॥**

ಸಃ ಅನುಮೇಯತತ್ತ್ವಃ=ಶಾಸ್ತ್ರಾನುಸಾರಿಯಾದ ಅನುಮಾನದಿಂದ ತಿಳಿಯುವ ಸ್ವರೂಪವುಳ್ಳ ಅಯಂ=ಭಕ್ತಾಭೀಷ್ಟಪ್ರದನೆಂದು ಪ್ರಸಿದ್ಧನಾದ ಶ್ರೀಹರಿಯು ಸ್ಥಿತಿವ್ಯತಿಕರೋಪಶಮಾಯ=ಜಗತ್ತಿನ ಮರ್ಯಾದಾವ್ಯತ್ಯಾಸವನ್ನು ಪರಿಹರಿಸಲು ಸತ್ತ್ವೇನ ಸೃಷ್ಟಾನ್=ಸತ್ವಗುಣದಿಂದ ಸೃಷ್ಟಿಸಲ್ಪಟ್ಟ ಸುರಗಣಾನ್ ನಃ=ದೇವತಾಸಮೂಹರಾದ ನಮ್ಮನ್ನು ಯತ್=ಯಾವದು ಅಮಲಂ=ನಿರ್ದುಷ್ಟವಾದ ಆದ್ದರಿಂದಲೇ ಶ್ರೀನಿಕೇತಂ=ಲಕ್ಷ್ಮೀದೇವಿಯ ಆವಾಸಸ್ಥಾನವಾದ ಅರವಿಂದಂ=ಕಮಲವನ್ನು ಕ್ಷಿಪತಾ=ತನ್ನ ಕಾಂತಿಯಿಂದ ತಿರಸ್ಕರಿಸುವ ಅದಭ್ರಕರುಣೇನ=ಅನಲ್ಪವಾದ ದಯೆಯಿಂದ ಕೂಡಿದ ವಿಲೋಕನೇನ=ಕಣ್ಣುಗಳಿಂದ ದೃಶ್ಯಾತ್=ನೋಡಲಿ. ॥೫೭॥

**ಏವಂ ಸುರಗಣೈಸ್ತಾತ ಭಗವಂತಾವಭಿಷ್ಟುತೌ ।**
**ಲಬ್ಧಾವಲೋಕೈರ್ಯಯತುರರ್ಚಿತೌ ಗಂಧಮಾದನಮ್ ॥೫೮॥**

ಏವಂ=ಈ ರೀತಿ ಲಬ್ಧಾವಲೋಕೈಃ ಸುರಗಣೈಃ=ಭಗವಂತನ ಕೃಪಾದೃಷ್ಟಿಯನ್ನು ಪಡೆದ ದೇವತೆಗಳಿಂದ ಅಭಿಷ್ಟುತೌ=ಸ್ತುತರಾದ, ಅರ್ಚಿತೌ=ಪೂಜಿತರಾದ, ಭಗವಂತೌ=ನರ-ನಾರಾಯಣರು ಗಂಧಮಾದನಂ ಯಯತುಃ=ಗಂಧಮಾದನಪರ್ವತವನ್ನು ಕುರಿತು ಹೋದರು. ॥೫೮॥

**ತಾವಿಮೌ ವೈ ಭಗವತೋ ಹರೇರಂಶಾವಿಹಾಗತೌ ।**
**ಭಾರವ್ಯಯಾಯ ಚ ಭುವಃ ಕೃಷ್ಣೌ ಯದುಕುರೂದ್ವಹೌ ॥೫೯॥**

ತೌ ಇಮೌ=ಪ್ರಸಿದ್ಧರಾದ ಈ ನರ-ನಾರಾಯಣರು ಭಗವತಃ ಹರೇಃ ಅಂಶೌ=(ನಾರಾಯಣನು)ಶ್ರೀವಿಷ್ಣುವಿನ ಸಾಕ್ಷಾದವತಾರ ಹಾಗೂ (ನರನು)ಅಂಶಾವತಾರ ಇವರಿಬ್ಬರೂ ಭುವಃ ಭಾರವ್ಯಯಾಯ=ಭೂಭಾರಹರಣ ಮಾಡಲು ಇಹ=ಈ ಭರತಖಂಡದಲ್ಲಿ ಯದುಕುರೂದ್ವಹೌ ಕೃಷ್ಣೌ=ಯಾದವರ ಪಾಲಕನಾದ ದೇವಕೀಪುತ್ರ ಶ್ರೀಕೃಷ್ಣನಲ್ಲಿಯೂ, ಕುರುಪಾಲಕ ಕೃಷ್ಣನೆಂದರೆ ಕುಂತೀಪುತ್ರ ಅರ್ಜುನನಲ್ಲಿಯೂ ಆಗತೌ=ಪ್ರವಿಷ್ಟರಾದರು. ಶ್ರೀಕೃಷ್ಣನು ಸಾಕ್ಷಾನ್ನಾರಾಯಣನೇ. ಅರ್ಜುನನಲ್ಲಿ ಶ್ರೀಹರಿಯ ಅಂಶವು, ನರನ ಆವೇಶಮಾತ್ರವೆಂದು ತಿಳಿಯಬೇಕು. ॥೫೯॥

ಇಲ್ಲಿಯವರೆಗೆ ದಕ್ಷನ ಹದಿನಾರು ಕುವರಿಯರಲ್ಲಿ ಹದಿಮೂರು ಜನರ ವಂಶವನ್ನು ಹೇಳಿ, ಪ್ರಕೃತ ಹದಿನಾಲ್ಕನೆಯವಳಾದ ಸ್ವಾಹಾಳ ವಂಶವನ್ನು ಮುಂದೆ ಹೇಳುವರು -

**ಸ್ವಾಹಾಭಿಮಾನಿನಶ್ಚಾಗ್ನೇರಾತ್ಮಜಾಂಸ್ತ್ರೀನಜೀಜನತ್ ।**
**ಪಾವಕಂ ಪವಮಾನಂ ಚ ಶುಚಿಂ ಚ ಹುತಭೋಜನಮ್ ॥೬೦॥**

ಸ್ವಾಹಾ=ಸ್ವಾಹಾ ಎಂಬುವಳು ಅಗ್ನೇಃ=ಪ್ರಧಾನ ಅಗ್ನಿಯಿಂದ ಅಭಿಮಾನಿನಃ=ಜಡಅಗ್ನಿಗೆ ಅಭಿಮಾನಿಗಳಾದ ಪಾವಕಂ, ಪವಮಾನಂ, ಶುಚಿಂ=ಪಾವಕ, ಪವಮಾನ, ಶುಚಿ ಎಂಬ ಹೆಸರಿನ, ಹುತಭೋಜನಂ=ಹೋಮ ಮಾಡಿದ್ದನ್ನು ಭುಂಜಿಸುವ (ಇದು ಮೂವರಿಗೂ ವಿಶೇಷಣ) ತ್ರೀನ್ ಆತ್ಮಜಾನ್=ಮೂರು ಮಕ್ಕಳನ್ನು ಅಜೀಜನತ್=ಹೆತ್ತಳು. ॥೬೦॥

**ತೇಭ್ಯೋಽಗ್ನಯಃ ಸಮಭವಂಶ್ಚತ್ವಾರಿಂಶಚ್ಚ ಪಂಚ ಚ ।**
**ತ ಏವೈಕೋನಪಂಚಾಶತ್ ಸಾಕಂ ಪಿತೃಪಿತಾಮಹೈಃ ॥೬೧॥**

ತೇಭ್ಯಃ=ಆ ಪಾವಕ, ಪವಮಾನ, ಶುಚಿ ಎಂಬ ಮೂವರಿಂದ ಚತ್ವಾರಿಂಶತ್=ನಲವತ್ತು ಚ=ಮತ್ತು ಪಂಚ=ಐದು ಅಗ್ನಯಃ=ಅಗ್ನಿಗಳು ಸಮಭವನ್=ಜನಿಸಿದರು. ತೇ ಏವ=ಅವರೇ ಪಿತೃಪಿತಾಮಹೈಃ ಸಾಕಂ=ತಂದೆಗಳಾದ ಮೂರು ಜನರಿಂದ ಹಾಗೂ ಅಜ್ಜನಾದ ಅಗ್ನಿಯಿಂದ ಸೇರಿ ಏಕೋನಪಂಚಾಶತ್=ನಲವತ್ತೊಂಬತ್ತು ಜನರಾದರು.

> ನಿರ್ಮಥ್ಯಃ ಪವಮಾನಃ ಸ್ಯಾದ್ವೈದ್ಯುತಃ ಪಾವಕಃ ಸ್ಮೃತಃ ।
> ಯಶ್ಚಾಸೌ ತಪತೇ ಸೂರ್ಯಃ ಶುಚಿರಗ್ನಿಸ್ತ್ವಸೌ ಸ್ಮೃತಃ ॥

ಎಂದು ಕೂರ್ಮಪುರಾಣದ ಪ್ರಕಾರ ವಿಶೇಷ ತಿಳಿಯುವದು. ॥೬೧॥

ಇವರ ಕೆಲಸವೇನೆಂದು ಹೇಳುವರು -

**ವೈತಾನಿಕೇ ಕರ್ಮಣಿ ಯನ್ನಾಮಭಿರ್ಬ್ರಹ್ಮವಾದಿಭಿಃ ।**
**ಆಗ್ನೇಯ್ಯಾ ಇಷ್ಟಯೋ ಯಜ್ಞೇ ನಿರೂಪ್ಯಂತೇಽಗ್ನಯಸ್ತು ತೇ ॥೬೨॥**

ವೈತಾನಿಕೇ ಕರ್ಮಣಿ ಯಜ್ಞೇ=ವೈದಿಕವಾದ ಯಜ್ಞದಲ್ಲಿ ಬ್ರಹ್ಮವಾದಿಭಿಃ= ಕರ್ಮಕಾಂಡಾದಿವೇದವನ್ನರಿತವರಿಂದ ಆಗ್ನೇಯ್ಯಾಃ=ಅಗ್ನಿದೇವತಾಕವಾದ ಇಷ್ಟಯಃ ನಿರೂಪ್ಯಂತೇ ಯನ್ನಾಮಭಿಃ=ಯಾರ ಹೆಸರಿನಿಂದ ಹೋಮ ಮಾಡಲ್ಪಡುವದೋ ತೇ ಅಗ್ನಯಃ=ಅದೇ ಅಗ್ನಿಗಳೇ ಇವರು. ಕಾರಣ ವ್ಯರ್ಥರಲ್ಲ. ॥೬೨॥

ಪಿತೃಗಳಿಗೆ ಒಬ್ಬಳನ್ನು ಕೊಟ್ಟನೆಂದು ಹೇಳಿತ್ತಷ್ಟೆ ! ಅವರ ಜಾತಿ-ನಾಮಗಳನ್ನು ಹೇಳುವರು -

**ಅಗ್ನಿಷ್ವಾತ್ತಾ ಬರ್ಹಿಷದಃ ಸೌಮ್ಯಾಃ ಪಿತರ ಆಜ್ಯಪಾಃ ।**
**ಸಾಗ್ನಯೋಽನಗ್ನಯಸ್ತೇಷಾಂ ಪತ್ನೀ ದಾಕ್ಷಾಯಣೀ ಸ್ವಧಾ ॥೬೩॥**

ಅಗ್ನಿಷ್ವಾತ್ತಾಃ ಬರ್ಹಿಷದಃ ಸೌಮ್ಯಾಃ ಆಜ್ಯಪಾಃ=ಹೀಗೆ ನಾಲ್ಕು ರೀತಿಯವರು ಪಿತರಃ=ಪಿತೃಗಳು ಅಥವಾ ಸಾಗ್ನಯಃ ಅನಗ್ನಯಃ=ಹೀಗೆ ಎರಡುವಿಧ ಇವರೆಲ್ಲರಿಗೂ ಸ್ವಧಾ ದಾಕ್ಷಾಯಣೀ=ದಕ್ಷನ ಮಗಳಾದ ಸ್ವಧಾ ಎಂಬುವಳು ಪತ್ನೀ=ಹೆಂಡತಿಯು.

ಯಜ್ಞ ಮಾಡದಿರುವವರು ಅಗ್ನಿಷ್ವಾತ್ತರು, ಯಜ್ಞ ಮಾಡುವವರು ಬರ್ಹಿಷದರು, ಸೌಮ್ಯಾಃ ಎಂದರೆ ಸೋಮಪಾನ ಮಾಡುವವರು, ಆಜ್ಯಪಾಃ ಎಂದರೆ ಹುತವಾದ ಆಜ್ಯಪಾನ ಮಾಡುವವರು. ಅಗ್ನೌಕರಣವಿದ್ದವರು ಸಾಗ್ನಿಗಳು, ಅಗ್ನೌಕರಣವಿಲ್ಲದವರು ಅನಗ್ನಿಗಳು. ಹೀಗೆ ನಾಲ್ಕು ವಿಧ. ಅಥವಾ -

**ಯೇ ವೈ ಯಜ್ವಾನಸ್ತೇ ವೈ ಪಿತರೋ ಬರ್ಹಿಷದಃ ।**
**ಯೇ ವಾ ಅಯಜ್ವಾನಃ ಗೃಹಮೇಧಿನಸ್ತೇ ಪಿತರೋಽಗ್ನಿಷ್ವಾತ್ತಾಃ ॥**

ಎಂಬ ಶ್ರುತಿಯ ಪ್ರಕಾರ ಯಜ್ಞ ಮಾಡದಿರುವ ಅಗ್ನಿಷ್ವಾತ್ತರೇ ಅನಗ್ನಿಗಳು. ಇವರಿಗೆ ಅಗ್ನೌಕರಣವಿಲ್ಲ. ಇನ್ನು ಯಜ್ಞ ಮಾಡುವ ಬರ್ಹಿಷದರೇ ಸಾಗ್ನಿಗಳು. ಅವರೇ ಆಜ್ಯಪರು. ಸೋಮಪಾನ ಮಾಡುವರು ಸಾಗ್ನಿಗಳೂ ಇವರಿಗೆ ಅಗ್ನೌಕರಣವುಂಟು. ಹೀಗೆ ಮಾಡಿದರೆ ಎರಡುವಿಧ ಅಗ್ನಿಷ್ವಾತ್ತ ಬರ್ಹಿಷದ ಉಳಿದದ್ದು ವಿಶೇಷಣವೆಂದೂ ತಿಳಿಯಬಹುದು॥೬೩॥

**ತೇಭ್ಯೋ ದಧಾರ ಕನ್ಯೇ ದ್ವೇ ಮೇನಾಂ ವೈತರಣೀಂ ಸ್ವಧಾ ।**
**ಉಭೇ ತೇ ಬ್ರಹ್ಮವಾದಿನ್ಯೌ ಜ್ಞಾನವಿಜ್ಞಾನಪಾರಗೇ ॥೬೪॥**

ಸ್ವಧಾ=ಸ್ವಧಾನಾಮಕಳಾದ ಪಿತೃಪತ್ನಿಯು ತೇಭ್ಯಃ=ಪಿತೃಗಳಿಂದ ಮೇನಾಂ, ವೈತರಣೀಂ=ಮೇನಾ ವೈತರಣೀ ಎಂಬ ದ್ವೇ=ಎರಡು ಕನ್ಯೇ=ಕನ್ಯೆಯರನ್ನು ದಧಾರ= ಗರ್ಭದಲ್ಲಿ ಧಾರಣ ಮಾಡಿದಳು. ತೇ ಉಭೇ=ಅವರೀರ್ವರು ಬ್ರಹ್ಮವಾದಿನ್ಯೌ= ವೇದವಿಚಾರವಿಚಕ್ಷಣರು ಜ್ಞಾನವಿಜ್ಞಾನಪಾರಗೇ=ವಿಶೇಷಜ್ಞಾನ-ಸಾಮಾನ್ಯಜ್ಞಾನ ಪಾರಂಗತರು. ॥೬೪॥

**ಭವಸ್ಯ ಪತ್ನೀ ತು ಸತೀ ಭವಂ ದೇವಮನುವ್ರತಾ ।**
**ಆತ್ಮನಃ ಸದೃಶಂ ಪುತ್ರಂ ನ ಲೇಭೇ ಗುಣಶಾಲಿನಮ್ ॥೬೫॥**

ಭವಸ್ಯ=ರುದ್ರದೇವರ ಪತ್ನೀ=ಹೆಂಡತಿಯಾದ ಸತೀ ತು=ಸತೀದೇವಿಯಾದರೂ ದೇವಂ ಭವಂ ಅನುವ್ರತಾಽಪಿ=ಪತಿಯಾದ ರುದ್ರದೇವರನ್ನು ಅನುಸರಿಸಿಯೂ ಆತ್ಮನಃ=ತನಗೆ

ಸದೃಶಂ=ಅನುರೂಪನಾದ ಗುಣಶಾಲಿನಂ ಪುತ್ರಂ=ಗುಣವಂತನಾದ ಮಗನನ್ನು ನ ಲೇಭೇ=ಹೊಂದಲಿಲ್ಲ. ।।೬೫।।

ಅದಕ್ಕೆ ಕಾರಣ ಹೇಳುವರು -

**ಪಿತರ್ಯಪ್ರತಿರೂಪೇ ಸ್ವೇ ಭವಾಯಾನಾಗಸೇ ರುಷಾ ।**
**ಅಪ್ರೌಢೇವಾತ್ಮನಾತ್ಮಾನಮಜಹಾದ್ ಯೋಗಸಂಯುತಾ ।।೬೬।।**

।। ಇತಿ ಶ್ರೀಮದ್ಭಾಗವತೇ ಚತುರ್ಥಸ್ಕಂಧೇ ಪ್ರಥಮೋಽಧ್ಯಾಯಃ ।।

ಸ್ವೇ ಪಿತರಿ=ತನ್ನ ತಂದೆಯು ಅನಾಗಸೇ=ನಿರಪರಾಧಿಯಾದ ಭವಾಯ=ರುದ್ರನಿಗೆ ಅಪ್ರತಿರೂಪೇ (ಸತಿ)=ವಿರೋಧ ಮಾಡುತ್ತಿರಲು ರುಷಾ=ಸಿಟ್ಟಿನಿಂದ ಅಪ್ರೌಢಾ ಇವ=ಮದುವೆಯಾಗದಿದ್ದವಳಂತೆ ಯೋಗಸಂಯುತಾ=ಪ್ರಾಣೋತ್ಕ್ರಮಣ ಮಾಡಲು ಯೋಗವನ್ನು ಹೊಂದಿದವಳಾಗಿ ಆತ್ಮನಾ=ಮನಸ್ಸಿನಿಂದ ಆತ್ಮಾನಂ=ಪರಮಾತ್ಮನನ್ನು ಧ್ಯಾನ ಮಾಡುತ್ತಾ, ಸ್ವಯಂತಾನೇ ಆತ್ಮಾನಂ=ತನ್ನ ದೇಹವನ್ನು ಅಜಹಾತ್=ಬಿಟ್ಟಳು.

**ಭಾಗವತತಾತ್ಪರ್ಯ :-**

**ಪ್ರಶ್ನೆ :-** ಇಲ್ಲಿ ಸತೀದೇವಿಯು ತನ್ನ ದೇಹವನ್ನು ತ್ಯಾಗ ಮಾಡುವ ಸಂದರ್ಭದಲ್ಲಿ ''ಅಪ್ರೌಢೇವ'' (ಮದುವೆಯಾಗದಿದ್ದವಳಂತೆ) ಎಂದು ಮೂಲದಲ್ಲಿ ಹೇಳಿದ್ದಾರೆ. ಆದರೆ ''ಭವಸ್ಯ ಪತ್ನೀ ತು ಸತೀ'' ಎಂಬುದಾಗಿ ಹಿಂದಿನ ಭಾಗವತಶ್ಲೋಕದಲ್ಲಿಯೆ ''ಸತೀದೇವಿಯು ರುದ್ರದೇವರ ಪತ್ನಿಯು'' ಎಂದು ಹೇಳಿ ಈಗ ''ಅಪ್ರೌಢೇವ'' (ಮದುವೆಯಾಗದಿದ್ದವಳಂತೆ) ಎಂದು ಹೇಳುವುದು ಹೇಗೆ ಸಮಂಜಸ ?

**ಸಮಾಧಾನ :-** ಈ ಪ್ರಶ್ನೆಗೆ ಆಚಾರ್ಯರು ತಮ್ಮ ತಾತ್ಪರ್ಯದಲ್ಲಿ ಉತ್ತರ ಕೊಡುತ್ತಾರೆ.

**ಅಪ್ರೌಢೇವ ಅಸ್ವೀಕೃತೇವ ।।** ಮೂಲದಲ್ಲಿರುವ ''ಅಪ್ರೌಢಾ ಇವ'' ಎಂಬ ಶಬ್ದಕ್ಕೆ ''ಅಸ್ವೀಕೃತಾ ಇವ'' (ರುದ್ರದೇವರಿಂದ ಸ್ವೀಕೃತಳಾಗಿದ್ದರೂ ಸಹ ಸ್ವೀಕರಿಸಲ್ಪಡದವಳಂತೆ) ಎಂದು ಅರ್ಥೈಸಿಕೊಳ್ಳಬೇಕು.

ಅದರ ಅಭಿಪ್ರಾಯ :- ರುದ್ರದೇವರು ಪಾಣಿಗ್ರಹಣ ಮಾಡಿ ಸತೀದೇವಿಯನ್ನು ಸ್ವೀಕಾರ ಮಾಡಿದ್ದರೂ ಸಹ (ರುದ್ರದೇವರಿಂದ ಸ್ವೀಕೃತಳಾಗಿದ್ದರೂ ಸಹ) ವಿವಾಹದ ಕಾರ್ಯವಾದ ಸಂತಾನೋತ್ಪತ್ತ್ಯಾದಿಗಳು ಆಗದ ಕಾರಣ ಮೂಲದಲ್ಲಿ ''ಸ್ವೀಕರಿಸಲ್ಪಡದವಳಂತೆ'' ಎಂದು ಹೇಳಿದ್ದಾರೆ ಎಂದು ಭಾವ. ।।೬೬।।

।। ಇಲ್ಲಿಗೆ ಒಂದನೆಯ ಅಧ್ಯಾಯವು ಮುಗಿಯಿತು ।।

## ಅಥ ದ್ವಿತೀಯೋಽಧ್ಯಾಯಃ

**ವಿದುರ ಉವಾಚ -**

**ಭವೇ ಶೀಲವತಾಂ ಶ್ರೇಷ್ಠೇ ದಕ್ಷೋ ದುಹಿತೃವತ್ಸಲಃ ।**
**ವಿದ್ವೇಷಮಕರೋತ್ ಕಸ್ಮಾದನಾದೃತ್ಯಾತ್ಮಜಾಂ ಸತೀಮ್ ॥೧॥**

ದುಹಿತೃವತ್ಸಲಃ=ಮಗಳಮೇಲೆ ಪ್ರೀತಿಯುಳ್ಳ ದಕ್ಷಃ=ದಕ್ಷಪ್ರಜೇಶ್ವರನು ಆತ್ಮಜಾಂ=ತನ್ನ ಮಗಳಾದ ಸತೀಂ=ಸತೀದೇವಿಯನ್ನು ಅನಾದೃತ್ಯ=ಆದರಿಸದೇ ಶೀಲವತಾಂ ಶ್ರೇಷ್ಠೇ= ಸದಾಚಾರವುಳ್ಳವರಲ್ಲಿ ಉತ್ತಮರಾದ ಭವೇ=ರುದ್ರದೇವರಲ್ಲಿ ವಿದ್ವೇಷಂ=ವಿಶೇಷವಾದ ವೈರವನ್ನು ಕಸ್ಮಾತ್ ಅಕರೋತ್=ಏಕೆ ಮಾಡಿದನು ?

ರುದ್ರದೇವರು ಗುಣಗಳಿಂದಲೂ, ಅಳಿಯನೆಂಬ ಸಂಬಂಧದಿಂದಲೂ, ದ್ವೇಷಕ್ಕೆ ಅರ್ಹರಲ್ಲವೆಂದು "ಶೀಲವತಾಂ ಶ್ರೇಷ್ಠೇ" "ಸತೀಂ ಅನಾದೃತ್ಯ" ಎಂಬ ಪದಗಳಿಂದ ಸೂಚಿತವಾಗುವದು. ॥೧॥

**ಕಸ್ತಂ ಚರಾಚರಗುರುಂ ನಿರ್ವೈರಂ ಶಾಂತವಿಗ್ರಹಮ್ ।**
**ಆತ್ಮಾರಾಮಂ ಕಥಂ ದ್ವೇಷ್ಟಿ ಜಗತೋ ದೈವತಂ ಮಹತ್ ॥೨॥**

ಕಃ=ದಕ್ಷಪ್ರಜಾಪತಿಯು ಚರಾಚರಗುರುಂ=ಚೇತನಾಚೇತನಾತ್ಮಕಪ್ರಪಂಚಕ್ಕೆ ಗುರುವಾದ, ಶಾಂತವಿಗ್ರಹಂ=ಶಾಂತಿಯೇ ದೇಹವಾಗಿ ಉಳ್ಳ ಆದ್ದರಿಂದಲೇ ನಿರ್ವೈರಂ= ಸ್ವಾಭಾವಿಕವೈರವಿಲ್ಲದ, ಆತ್ಮಾರಾಮಂ=ಪರಮಾತ್ಮನಲ್ಲಿಯೇ ಆಸಕ್ತರಾದ, ಜಗತಃ ಮಹತ್ ದೈವತಂ=ಜಗತ್ತಿಗೆ ದೊಡ್ಡದೇವತೆಯಾದ ತಂ=ರುದ್ರದೇವರನ್ನು ಕಥಂ ದ್ವೇಷ್ಟಿ=ಹೇಗೆ ದ್ವೇಷಿಸಿದನು ? ಇದರಿಂದ ದಕ್ಷನಿಗೆ ಅನರ್ಥವಾಗುವದೆಂದು ಭಾವ. ॥೨॥

**ಏತದಾಖ್ಯಾಹಿ ಮೇ ಬ್ರಹ್ಮನ್ ಜಾಮಾತುಃ ಶ್ವಶುರಸ್ಯ ಚ ।**
**ವಿದ್ವೇಷಸ್ತು ಯತಃ ಪ್ರಾಣಾನತ್ಯಜದ್ ದುಸ್ತ್ಯಜಾನ್ ಸತೀ ॥೩॥**

ಹೇ ಬ್ರಹ್ಮನ್=ಹೇ ಮೈತ್ರೇಯರೇ ! ಜಾಮಾತುಃ=ಅಳಿಯನಿಗೂ ಚ=ಮತ್ತು ಶ್ವಶುರಸ್ಯ=ಮಾವನಿಗೂ ಯತಃ ವಿದ್ವೇಷಃ=ಯಾವ ಕಾರಣಕ್ಕಾಗಿ ದ್ವೇಷ ಉಂಟಾಯಿತು ? ಸತೀ=ಸತೀದೇವಿಯು ದುಸ್ತ್ಯಜಾನ್=ಬಿಡಲಾಗದ ಪ್ರಾಣಾನ್=ಪ್ರಾಣಗಳನ್ನು ಯತಃ=ಯಾವ ದ್ವೇಷನಿಮಿತ್ತದಿಂದ ಅತ್ಯಜತ್=ಬಿಟ್ಟಳು ? ಏತತ್=ಇದನ್ನು ಮೇ=ನನಗೆ ಆಖ್ಯಾಹಿ=ಹೇಳಿರಿ.

ಕಾರಣವನ್ನು ತಿಳಿಸಲು ಮೈತ್ರೇಯರು ಇತಿಹಾಸವನ್ನು ಹೇಳುವರು -

**ಮೈತ್ರೇಯ ಉವಾಚ -**

**ಪುರಾ ವಿಶ್ವಸೃಜಾಂ ಸತ್ರೇ ಸಮೇತಾಃ ಪರಮರ್ಷಯಃ ।**
**ತಥಾಽಮರಗಣಾಃ ಸರ್ವೇ ಸಾನುಗಾ ಮುನಯೋಽಗ್ನಯಃ ॥೪॥**

ಪುರಾ=ಹಿಂದೆ ವಿಶ್ವಸೃಜಾಂ ಸತ್ರೇ=ಪ್ರಜೇಶ್ವರರು ಮಾಡಿದ ಸತ್ರದಲ್ಲಿ (ಅನೇಕಜನರು ಸೇರಿ ಮಾಡುವ ಯಾಗಕ್ಕೆ ಸತ್ರ ಎನ್ನುತ್ತಾರೆ. ಪ್ರಕೃತ ಮರೀಚಿ ಮುಂತಾದವರು ಸೇರಿ ಮಾಡಿದ ಸತ್ರದಲ್ಲಿ ಎಂದರ್ಥ) ಪರಮರ್ಷಯಃ=ಶ್ರೇಷ್ಠರಾದ ಋಷಿಗಳು ತಥಾ=ಹಾಗೂ ಅಮರಗಣಾಃ=ದೇವತೆಗಳು, ಸಾನುಗಾಃ=ಅನುಚರಸಹಿತರಾದ ಮುನಯಃ=ಇತರ ಮುನಿಗಳು, ಅಗ್ನಯಃ=ಅಗ್ನಿಗಳೂ ಸಮೇತಾಃ ಆಸನ್=ಒಂದೇ ಸ್ಥಳದಲ್ಲಿ ಮಿಲಿತರಾಗಿದ್ದರು.

**ತತ್ರ ಪ್ರವಿಷ್ಟಂ ಮುನಯೋ ದೃಷ್ಟ್ವಾಽರ್ಕಮಿವ ರೋಚಿಷಾ ।**
**ಭ್ರಾಜಮಾನಂ ವಿತಿಮಿರಂ ಕುರ್ವಂತಂ ತನ್ಮಹತ್ ಸದಃ ॥೫॥**

ತತ್ರ=ಆ ಯಜ್ಞಮಂಟಪದಲ್ಲಿ ಪ್ರವಿಷ್ಟಂ=ಪ್ರವೇಶ ಮಾಡಿದ, ಅರ್ಕಂ ಇವ= ಸೂರ್ಯನಂತೆ ರೋಚಿಷಾ=ಕಾಂತಿಯಿಂದ ಭ್ರಾಜಮಾನಂ=ಪ್ರಕಾಶಿಸುತ್ತಿರುವ, ತತ್ ಮಹತ್ ಸದಃ=ಆ ದೊಡ್ಡಸಭೆಯನ್ನು ವಿತಿಮಿರಂ ಕುರ್ವಂತಂ=ಕತ್ತಲೆ ಇಲ್ಲದಂತೆ ಮಾಡಿದ ದಕ್ಷಂ=ದಕ್ಷನನ್ನು ದೃಷ್ಟ್ವಾ=ನೋಡಿ ಮುನಯಃ=ಋಷಿಗಳು, (ಮುಂದಿನ ಶ್ಲೋಕದಲ್ಲಿ ಅನ್ವಯ ಮುಂದುವರೆಯುತ್ತದೆ)॥೫॥

**ಉದತಿಷ್ಠನ್ ಸದಸ್ಯಾಸ್ತೇ ಸ್ವಧಿಷ್ಣ್ಯೇಭ್ಯಃ ಸಹಾಗ್ನಯಃ ।**
**ಋತೇ ವಿರಿಂಚಿಂ ಶರ್ವಂ ಚ ತದ್ಭಾಸಾ ಕ್ಷಿಪ್ತಚೇತಸಃ ॥೬॥**

ತದ್ಭಾಸಾ=ದಕ್ಷನ ಕಾಂತಿಯಿಂದ ಕ್ಷಿಪ್ತಚೇತಸಃ=ಚಂಚಲವಾದ ಮನಸ್ಸುಳ್ಳ, ಕ್ಷಿಪ್ತತೇಜಸಃ ಎಂಬ ಪಾಠದಲ್ಲಿ ತಿರಸ್ಕೃತವಾದ ತಮ್ಮ ಕಾಂತಿಯುಳ್ಳ, ಸಹಾಗ್ನಯಃ=ಅಗ್ನಿಗಳಿಂದ ಸಹಿತರಾದ, ತೇ ಸದಸ್ಯಾಃ=ಆ ಸಭಿಕರು ವಿರಿಂಚಿಂ ಶರ್ವಂ ಚ ಋತೇ=ಬ್ರಹ್ಮ ಮತ್ತು ರುದ್ರರನ್ನು ಹೊರತುಪಡಿಸಿ ಸ್ವಧಿಷ್ಣ್ಯೇಭ್ಯಃ=ತಮ್ಮ ಸ್ಥಾನಗಳಿಂದ (ಆಸನಗಳಿಂದ) ಉದತಿಷ್ಠನ್=ಎದ್ದು ನಿಂತುಕೊಂಡರು. (ಗೌರವ ಸಲ್ಲಿಸಿದರು.)॥೬॥

**ಸದಸಸ್ಪತಿಭಿರ್ದಕ್ಷೋ ಭಗವಾನ್ ಸಾಧು ಸತ್ಕೃತಃ ।**
**ಅಜಂ ಲೋಕಗುರುಂ ನತ್ವಾ ನಿಷಸಾದ ತದಾಜ್ಞಯಾ ॥೭॥**

ಭಗವಾನ್ ದಕ್ಷಃ=ಪೂಜ್ಯನಾದ ದಕ್ಷನು ಸದಸಸ್ಪತಿಭಿಃ=ಸಭಾಪತಿಗಳಿಂದ ಸಾಧು=ಚೆನ್ನಾಗಿ ಸತ್ಕೃತಃ=ಗೌರವಿಸಲ್ಪಟ್ಟು ಲೋಕಗುರುಂ ಅಜಂ=ಜಗದ್ಗುರುವಾದ ಬ್ರಹ್ಮದೇವರನ್ನು ನತ್ವಾ ನಮಸ್ಕರಿಸಿ ತದಾಜ್ಞಯಾ=ಬ್ರಹ್ಮದೇವರ ಆಜ್ಞೆಯಿಂದ ನಿಷಸಾದ=ಕುಳಿತುಕೊಂಡನು. ॥೭॥

**ಪ್ರಾಙ್ ನಿಷಣ್ಣಂ ಮೃಡಂ ದೃಷ್ಟ್ವಾ ನಾಮೃಷ್ಯತ್ ತದನಾದೃತಃ ।**
**ಉವಾಚ ವಾಚಂ ಚಕ್ಷುರ್ಭ್ಯಾಮಭಿವೀಕ್ಷ್ಯ ದಹನ್ನಿವ ॥೮॥**

(ಭಗವಾನ್ ದಕ್ಷಃ=ಪೂಜ್ಯನಾದ ದಕ್ಷನು) ಪ್ರಾಕ್=ತಾನು ಕೂಡುವ ಮೊದಲೇ ನಿಷಣ್ಣಂ=ಕುಳಿತಿರುವ (ತಾನು ಬರುವಾಗ ಏಳದಿರುವ ಎಂದರ್ಥ) ತನ್ನೆದುರಿಗೆ ಕುಳಿತ ಮೃಡಂ=ಶಿವನನ್ನು ದೃಷ್ಟ್ವಾ=ನೋಡಿ ತದಾನಾದೃತಃ=ಶಿವನಿಂದ ಆದರಿಸಲ್ಪಡದವನಾಗಿ (ಎದ್ದು ಆಸನ ನೀಡಿ ಗೌರವಿಸಲ್ಪಡದವನಾಗಿ) ನ ಅಮೃಷ್ಯತ್=ಸಹಿಸಲಿಲ್ಲ, ಚಕ್ಷುರ್ಭ್ಯಾಂ= ಕಣ್ಣುಗಳಿಂದ ದಹನ್ನಿವ=ಸುಡುವವನಂತೆ ಅಭಿವೀಕ್ಷ್ಯ=ನೋಡಿ ವಾಚಂ ಉವಾಚ= ಮಾತನಾಡಿದನು. ॥೮॥

**ದಕ್ಷ ಉವಾಚ -**

**ಶ್ರೂಯತಾಂ ಬ್ರಹ್ಮರ್ಷಯೋ ಮೇ ಸಹಸಭ್ಯಾಃ ಸಹಾಗ್ನಯಃ ।**
**ಸಾಧೂನಾಂ ಬ್ರುವತೋ ವೃತ್ತಂ ನಾಜ್ಞಾನಾನ್ನ ಚ ಮತ್ಸರಾತ್ ॥೯॥**

ಸಹಾಗ್ನಯಃ=ಅಗ್ನಿಗಳಿಂದ ಸಹಿತರಾದ, ಸಹಸಭ್ಯಾಃ=ಸಭಿಕರಿಂದ ಸಹಿತರಾದ, ಹೇ ಬ್ರಹ್ಮರ್ಷಯಃ=ಹೇ ಬ್ರಹ್ಮಜ್ಞಾನಿಗಳೇ ! ಅಜ್ಞಾನಾತ್=ಅಜ್ಞಾನದಿಂದ ಅಥವಾ ವಿಪರೀತಜ್ಞಾನದಿಂದ ಚ=ಮತ್ತು ಮತ್ಸರಾತ್=ಮಾತ್ಸರ್ಯದಿಂದ (ಪರೋತ್ಕರ್ಷದ ಸಹನೆ ಇಲ್ಲದೇ) ನ ಬ್ರುವತಃ=ಹೇಳದಿರುವ ಮೇ=ನನ್ನಿಂದ ಸಾಧೂನಾಂ=ಸಜ್ಜನರ ವೃತ್ತಂ=ಸದಾಚಾರವು ಶ್ರೂಯತಾಂ=ನಿಮ್ಮಿಂದ ಕೇಳಲ್ಪಡಲಿ. ॥೯॥

**ಅಯಂ ತು ಲೋಕಪಾಲಾನಾಂ ಯಶೋಘ್ನೋ ನಿರಪತ್ರಪಃ ।**
**ಸದ್ಭಿರಾಚರಿತಃ ಪಂಥಾ ಯೇನ ಸ್ತಬ್ಧೇನ ದೂಷಿತಃ ॥೧೦॥**

ಸದ್ಭಿಃ=ಸಜ್ಜನರಿಂದ ಆಚರಿತಃ=ಆಚರಿಸಲ್ಪಡುತ್ತಾ ನಡೆದುಬಂದ ಪಂಥಾಃ=ಮಾರ್ಗವು ಸ್ತಬ್ಧೇನ=ವಿಹಿತಕರ್ಮಗಳನ್ನು ಮಾಡದಿರುವ ಯೇನ=ಯಾವನಿಂದ ದೂಷಿತಃ=ದೂಷಿಸಲ್ಪಟ್ಟಿತ್ತೋ, ಅಂತಹ ಅಯಂ ತು=ಈ ರುದ್ರದೇವನಾದರೂ (ಸಿಟ್ಟಿನಿಂದ ಹೆಸರು ಹೇಳದೇ ಅಯಂ

ಎಂದಿರುವದು) ಲೋಕಪಾಲಾನಾಂ=ಲೋಕಪಾಲಕರ ಯಶೋಘ್ನಃ=ಕೀರ್ತಿಯನ್ನು ನಾಶ ಮಾಡುವವನು. ನಿರಪತ್ರಪಃ=ನಿರ್ಲಜ್ಜನು. ।।೧೦।।

**ಏಷ ಮೇ ಶಿಷ್ಯತಾಂ ಪ್ರಾಪ್ತೋ ಯನ್ಮೇ ದುಹಿತುರಗ್ರಹೀತ್ ।**
**ಪಾಣಿಂ ವಿಪ್ರಾಗ್ನಿಮುಖತಃ ಸಾವಿತ್ರ್ಯಾ ಇವ ಸಾಧುವತ್ ।।೧೧।।**

ಯತ್=ಯಾವ ಕಾರಣ ಸಾವಿತ್ರ್ಯಾಃ=ಗಾಯತ್ರಿಯ ಪಾಣಿಂ=ಉಚ್ಚಾರಣವನ್ನು ಸಾಧುವತ್=ಯೋಗ್ಯನಾದವನು ಸ್ವೀಕರಿಸಿದಂತೆ, ಸಾಧುವತ್=ಯೋಗ್ಯನಂತೆ ನಟಿಸಿ ವಿಪ್ರಾಗ್ನಿಮುಖತಃ=ಬ್ರಾಹ್ಮಣರ ಸಮ್ಮುಖದಲ್ಲಿ ಅಗ್ನಿಸಾಕ್ಷಿಯಾಗಿ ಮೇ ದುಹಿತುಃ=ನನ್ನ ಮಗಳ ಪಾಣಿಂ ಅಗ್ರಹೀತ್=ಕೈಹಿಡಿದಿರುವನೋ (ಮಗಳನ್ನು ವಿವಾಹವಾಗಿರುವನೋ) ತತ್=ಆದ ಕಾರಣ ಮೇ=ನನ್ನ ಶಿಷ್ಯತಾಂ ಪ್ರಾಪ್ತಃ=ಶಿಷ್ಯತ್ವವನ್ನು ಹೊಂದಿರುವನು.

♦ ಯಾರು ಯಾರಿಂದ ಗಾಯತ್ರೀ ಉಪದೇಶ ಪಡೆಯುವರೋ ಅವರು ಅವರ ಶಿಷ್ಯರಾದಂತೆ. ಅದರಂತೆ ಯಾರು ಯಾರ ಮಗಳನ್ನು ವಿವಾಹವಾಗುವರೋ ಅವರು ಅವರ ಶಿಷ್ಯರಾದಂತೆ. ಆ ಕಾರಣ ಶಿವನು ನನ್ನಿಂದ ಕನ್ಯೆಯನ್ನು ಪಡೆದಿದ್ದರಿಂದ ಶಿವನು ನನ್ನ ಶಿಷ್ಯನೆಂದರ್ಥ.

♦ ಇಂಥವನಿಗೆ ಕನ್ಯೆ ಏಕೆ ಕೊಟ್ಟೆ ? ಎಂಬ ತನ್ನ ಆಕ್ಷೇಪಕ್ಕೆ ''ಸಾಧುವತ್'' ''ಯೋಗ್ಯನಂತೆ ನಟಿಸಿ ನನ್ನ ಮಗಳ ಕೈಹಿಡಿದನು'' ಎಂದು ಹೇಳುವುದರಿಂದ ಉತ್ತರ ಸೂಚಿತವಾಗುವುದು. ।।೧೧।।

**ಗೃಹೀತ್ವಾ ಮೃಗಶಾವಾಕ್ಷ್ಯಾಃ ಪಾಣಿಂ ಮರ್ಕಟಲೋಚನಃ ।**
**ಪ್ರತ್ಯುತ್ಥಾನಾಭಿವಾದಾರ್ಹೇ ವಾಚಾಽಪ್ಯಕೃತ ನೋಚಿತಮ್ ।।೧೨।।**

ಮರ್ಕಟಲೋಚನಃ=ಕಪಿಗಳ ಕಣ್ಣಿನಂತೆ ಕಣ್ಣುಗಳುಳ್ಳ ಈ ಶಿವನು ಮೃಗಶಾವಾಕ್ಷ್ಯಾಃ= ಜಿಂಕೆಮರಿಯ ಕಣ್ಣಿನಂತೆ ಕಣ್ಣುಗಳುಳ್ಳ ಸುಂದರಳಾದ ಸತೀದೇವಿಯ ಪಾಣಿಂ ಗೃಹೀತ್ವಾ=ಕೈ ಹಿಡಿದೂ ಸಹ ಪ್ರತ್ಯುತ್ಥಾನಾಭಿವಾದಾರ್ಹೇ=ಎದ್ದು ನಮಸ್ಕರಿಸಲು ಯೋಗ್ಯನಾದ ನನ್ನಲ್ಲಿ ವಾಚಾಽಪಿ=ಮಾತಿನಿಂದಲೂ ಸಹ ಉಚಿತಂ=ಯೋಗ್ಯ ಸತ್ಕಾರವನ್ನು ನ ಅಕೃತ=ಮಾಡಲಿಲ್ಲ (ಬನ್ನಿರಿ, ಕ್ಷೇಮವೇ ? ಎಂದೂ ಕೇಳಲಿಲ್ಲವೆಂದರ್ಥ.)।।೧೨।।

**ಲುಪ್ತಕ್ರಿಯಾಯಾಶುಚಯೇ ಮಾನಿನೇ ಭಿನ್ನಸೇತವೇ ।**
**ಅನಿಚ್ಛನ್ನಪ್ಯದಾಂ ಬಾಲಾಂ ಶೂದ್ರಾಯೇವೋಶತೀಂ ಗಿರಮ್ ।।೧೩।।**

ಲುಪ್ತಕ್ರಿಯಾಯ=ವೇದವಿಹಿತಕರ್ಮಾನುಷ್ಠಾನಗಳನ್ನು ಮಾಡದಿರುವ, ಅಶುಚಯೇ= ಆದ್ದರಿಂದಲೇ ಅಶುದ್ಧನಾದ, ಮಾನಿನೇ=ಅಭಿಮಾನಿಯಾದ, ಭಿನ್ನಸೇತವೇ=ವೇದದಲ್ಲಿ ಹೇಳಿದ ಮರ್ಯಾದೆಯನ್ನು ಉಲ್ಲಂಘಿಸಿದ ಈ ಶಿವನಿಗೆ ಅನಿಚ್ಛನ್ ಅಪಿ=ಕೊಡಲು ಇಚ್ಛೆ ಇಲ್ಲದಿದ್ದರೂ ಸಹ (ಬ್ರಹ್ಮದೇವರಿಂದ ಪ್ರೇರಿತನಾಗಿ) ಬಾಲಾಂ=ಕನ್ಯೆಯಾದ ಸತೀದೇವಿಯನ್ನು ಉಶತೀಂ=ನಿರ್ದುಷ್ಟವಾದ ಗಿರಂ=ವೇದವಾಕ್ಯವನ್ನು ಶೂದ್ರಾಯ ಇವ= ಶೂದ್ರನಿಗೆ ಉಪದೇಶಿಸಿದಂತೆ ಅದಾಂ=ಕೊಟ್ಟೆನು. ।।೧೩।।

**ಪ್ರೇತಾವಾಸೇಷು ಘೋರೇಷು ಘೋರೈರ್ಭೂತಗಣೈರ್ವೃತಃ ।**
**ಅಟತ್ಯುನ್ಮತ್ತವನ್ನಗ್ನೋ ವ್ಯುಪ್ತಕೇಶೋ ಹಸನ್ ರುದನ್ ।।೧೪।।**

ಘೋರೇಷು=ಭಯಂಕರವಾದ ಪ್ರೇತಾವಾಸೇಷು=ಪ್ರೇತಗಳಿಗೆ ಆವಾಸಸ್ಥಾನವಾದ ಸ್ಮಶಾನಗಳಲ್ಲಿ ಘೋರೈಃ=ಕ್ರೂರವಾದ ಭೂತಗಣೈಃ=ಪಿಶಾಚಿಗಳ ಸಮೂಹಗಳಿಂದ ವೃತಃ=ಸುತ್ತುವರಿಯಲ್ಪಟ್ಟು ನಗ್ನಃ=(ಬತ್ತಲೆಯಾಗಿ) ವಿವಸ್ತ್ರನಾಗಿ ವ್ಯುಪ್ತಕೇಶಃ=ಕೂದಲುಗಳನ್ನು ಹರಿವಿಕೊಂಡು ಹಸನ್=ನಗುತ್ತಾ ರುದನ್=ಅಳುತ್ತಾ ಉನ್ಮತ್ತವತ್=ಹುಚ್ಚನಂತೆ ಅಟತಿ=ಸಂಚರಿಸುವನು. ।।೧೪।।

**ಚಿತಾಭಸ್ಮಕೃತಸ್ನಾನಃ ಪ್ರೇತಾಸ್ಥಿಗ್ರಂಥಿಭೂಷಣಃ ।**
**ಶಿವಾಪದೇಶೋ ಹ್ಯಶಿವೋ ಮತ್ತೋ ಮತ್ತಜನಪ್ರಿಯಃ ।।೧೫।।**

ಚಿತಾಭಸ್ಮಕೃತಸ್ನಾನಃ=ಚಿತೆಯ (ಹೆಣವನ್ನು ಸುಡಲು ಹಾಕಿದ ಕಟ್ಟಿಗೆಗಳಿಗೆ ಚಿತಾ ಎನ್ನುವರು. ಅದರ) ಭಸ್ಮದಿಂದ (ಬೂದಿಯಿಂದ) ಸ್ನಾನ ಮಾಡಿದವನು (ಬೂದಿ ಹಚ್ಚಿಕೊಂಡವನೆಂದರ್ಥ). ಪ್ರೇತಾಸ್ಥಿಗ್ರಂಥಿಭೂಷಣಃ=ಪ್ರೇತಗಳ ಅಸ್ಥಿ(ಎಲಬು)ಗಳಿಂದ ಮಾಡಿದ ಮಾಲೆಯೇ ಅಲಂಕಾರವಾಗಿ ಉಳ್ಳವನು, ಮತ್ತು ಶಿವಾಪದೇಶಃ=ಹೆಸರಿಗೆ ಮಾತ್ರ ಶಿವ ಎಂದು (ಮಂಗಳಕರನೆಂದು) ಕರೆಸಿಕೊಂಡರೂ ಅಶಿವಃ=ವಸ್ತುತಃ ಅಮಂಗಲನು. ಮತ್ತಃ=ಉನ್ಮತ್ತನು (ನಿಷಿದ್ಧಾಚಾರವುಳ್ಳವನು). ಮತ್ತಜನಪ್ರಿಯಃ=ಅಂತಹ ಉನ್ಮತ್ತರಾದ ಜನರೇ ಇವನಿಗೆ ಪ್ರಿಯರು. ಅಥವಾ ಅಂತಹ ಉನ್ಮತ್ತರಾದ ಜನರಿಗೆ ಇವನು ಪ್ರೀತಿಪಾತ್ರನು. ।।೧೫।।

**ಪತಿಃ ಪ್ರಮಥಭೂತಾನಾಂ ತಮೋಮಾತ್ರಾತ್ಮಿಕಾತ್ಮನಾಮ್ ।**
**ತಸ್ಮಾ ಉನ್ಮಾದನಾಥಾಯ ನಷ್ಟಶೌಚಾಯ ದುರ್ಹೃದೇ ।।೧೬।।**

**ದತ್ತಾ ಬತ ಮಯಾ ಸಾಧ್ವೀ ಚೋದಿತೇ ಪರಮೇಷ್ಠಿನಾ ।।೧೭।।**

ತಮೋಮಾತ್ರಾತ್ಮಿಕಾತ್ಮನಾಂ=ಕೇವಲ ತಾಮಸಸ್ವಭಾವದವರಾದ ಪ್ರಮಥಭೂತಾನಾಂ= ಪ್ರಮಥರೆಂಬ ಭೂತಗಣಕ್ಕೆ ಪತಿಃ=ಸ್ವಾಮಿಯು. ತಸ್ಮೈ=ಅಂತಹ, ಉನ್ಮಾದನಾಥಾಯ= ಭೂತವಿಶೇಷರಿಗೆ ಒಡೆಯನಾದ, ನಷ್ಟಶೌಚಾಯ=ಅಶುದ್ಧನಾದ, ದುರ್ಹೃದೇ= ದುಷ್ಟಬುದ್ಧಿಯುಳ್ಳವನಿಗೆ||೧೬||

ಪರಮೇಷ್ಠಿನಾ=ಬ್ರಹ್ಮದೇವರಿಂದ ಚೋದಿತೇ ಸತಿ=ಪ್ರೇರಿಸಲ್ಪಡುತ್ತಿರಲು ಮಯಾ= ನನ್ನಿಂದ ಸಾಧ್ವೀ=ಕನ್ಯೆಯು ದತ್ತಾ=ಕೊಡಲ್ಪಟ್ಟಳು. ಬತ=ಖೇದವು. ||೧೭||

**ಮೈತ್ರೇಯ ಉವಾಚ -**

**ವಿನಿಂದ್ಯೈವಂ ಸ ಗಿರಿಶಮಪ್ರತೀಪಮವಸ್ಥಿತಮ್ ।**
**ದಕ್ಷೋ ಹ್ಯಪ ಉಪಸ್ಪೃಶ್ಯ ಕ್ರುದ್ಧಃ ಶಪ್ತುಂ ಪ್ರಚಕ್ರಮೇ ||೧೮||**

ಸಃ ದಕ್ಷಃ=ಆ ದಕ್ಷನು ಅಪ್ರತೀಪಂ=ಯಾರಿಂದಲೂ ವಿರೋಧವಿಲ್ಲದ ಅವಸ್ಥಿತಂ= ಕುಳಿತಿರುವ ಗಿರಿಶಂ=ರುದ್ರದೇವರನ್ನು ಏವಂ=ಈ ರೀತಿಯಾಗಿ ವಿನಿಂದ್ಯ=ವಿಶೇಷವಾಗಿ ನಿಂದಿಸಿ ಕ್ರುದ್ಧಃ ಸನ್=ಕೋಪಗೊಂಡವನಾಗಿ ಅಪಃ ಉಪಸ್ಪೃಶ್ಯ=ಆಚಮನ ಮಾಡಿ ಶಪ್ತುಂ ಪ್ರಚಕ್ರಮೇ=ಶಾಪ ಕೊಡಲು ಆರಂಭಿಸಿದನು. ||೧೮||

**ಅಯಂ ತು ದೇವಯಜನ ಇಂದ್ರೋಪೇಂದ್ರಾದಿಭಿರ್ಭವಃ ।**
**ಯಜ್ಞಭಾಗಂ ನ ಲಭತಾಂ ದೇವೈರ್ದೇವಗಣಾಧಮಃ ||೧೯||**

ದೇವಗಣಾಧಮಃ=ದೇವತೆಗಳ ಸಮೂಹದಲ್ಲಿ ಅಧಮನಾದ ಅಯಂ ಭವಃ=ಈ ರುದ್ರದೇವರು ಇಂದ್ರೋಪೇಂದ್ರಾದಿಭಿಃ ದೇವೈಃ=ಇಂದ್ರ ಮತ್ತು ಉಪೇಂದ್ರ ಮೊದಲಾದ ದೇವತೆಗಳ ಜೊತೆಗೆ ದೇವಯಜನೇ=ಯಜ್ಞದಲ್ಲಿ ಯಜ್ಞಭಾಗಂ=ಆಹುತಿಯನ್ನು ನ ಲಭತಾಂ=ಹೊಂದದಿರಲಿ. ||೧೯||

**ನಿಷಿಧ್ಯಮಾನಃ ಸ ಸದಸ್ಯಮುಖ್ಯೈಃ**
**ದಕ್ಷೋ ಗಿರಿತ್ರಾಯ ವಿಸೃಜ್ಯ ಶಾಪಮ್ ।**
**ತಸ್ಮಾದ್ ವಿನಿಷ್ಕ್ರಮ್ಯ ವಿವೃದ್ಧಮನ್ಯುಃ**
**ಜಗಾಮ ಕೌರವ್ಯ ನಿಜಂ ನಿಕೇತನಮ್ ||೨೦||**

ಹೇ ಕೌರವ್ಯ=ಎಲೈ ವಿದುರನೇ ! ಸದಸ್ಯಮುಖ್ಯೈಃ=ಸಭಿಕರಲ್ಲಿ ಪ್ರಮುಖರಾದವರಿಂದ ನಿಷಿಧ್ಯಮಾನಃ=ಶಾಪ ಕೊಡಬೇಡ ಎಂದು ನಿಷೇಧಿಸಲ್ಪಟ್ಟರೂ ಸಃ ದಕ್ಷಃ=ಆ ದಕ್ಷನು ಗಿರಿತ್ರಾಯ=ರುದ್ರದೇವರಿಗೆ ಶಾಪಂ ವಿಸೃಜ್ಯ=ಶಾಪವನ್ನಿತ್ತು ವಿವೃದ್ಧಮನ್ಯುಃ ಸನ್=ಬಹಳ

ಕೋಪಗೊಂಡವನಾಗಿ ತಸ್ಮಾತ್=ಆ ಸ್ಥಳದಿಂದ (ಸಭೆಯಿಂದ) ವಿನಿಷ್ಕ್ರಮ್ಯ=ಹೊರಟು ನಿಜಂ ನಿಕೇತನಂ=ತನ್ನ ಮನೆಯನ್ನು ಕುರಿತು ಜಗಾಮ=ಹೋದನು. ।।೨೦।।

**ವಿಜ್ಞಾಯ ಶಾಪಂ ಗಿರಿಶಾನುಗಾಗ್ರಣೀಃ**
**ನಂದೀಶ್ವರೋ ರೋಷಕಷಾಯದೂಷಿತಃ ।**
**ದಕ್ಷಾಯ ಶಾಪಂ ವಿಸಸರ್ಜ ದಾರುಣಂ**
**ಯೇ ಚಾನ್ವಮೋದಂಸ್ತದವಾಚ್ಯತಾಂ ದ್ವಿಜಾಃ ।।೨೧।।**

ಗಿರಿಶಾನುಗಾಗ್ರಣೀಃ=ರುದ್ರದೇವರ ಸೇವಕರಲ್ಲಿ ಶ್ರೇಷ್ಠನಾದ ನಂದೀಶ್ವರಃ=ನಂದಿಯು ಶಾಪಂ ವಿಜ್ಞಾಯ=ರುದ್ರದೇವರಿಗೆ ದಕ್ಷನು ಕೊಟ್ಟ ಶಾಪವನ್ನು ತಿಳಿದು ರೋಷಕಷಾಯ-ದೂಷಿತಃ ಸನ್=ಸಿಟ್ಟೆಂಬ ಮರಳಿದ ನೀರಿನಿಂದ ಬೆಂದುಹೋದವನಾಗಿ ದಕ್ಷಾಯ=ದಕ್ಷನಿಗೂ ಚ=ಮತ್ತು ಯೇ ದ್ವಿಜಾಃ=ಯಾವ ಬ್ರಾಹ್ಮಣರು ತದವಾಚ್ಯತಾಂ=ರುದ್ರದೇವರ ನಿಂದೆಯನ್ನು ಅನ್ವಮೋದನ್=ಅನುಮೋದಿಸಿದರೋ ಅವರಿಗೂ ಸಹ, ದಾರುಣಂ ಶಾಪಂ ವಿಸಸರ್ಜ=ಭೀಕರವಾದ ಶಾಪವನ್ನು ಕೊಟ್ಟನು. ।।೨೧।।

**ನಂದಿರುವಾಚ –**

**ಯ ಏತನ್ಮರ್ತ್ಯಮುದ್ದಿಶ್ಯ ಭಗವತ್ಯಪ್ರತಿದ್ರುಹಿ ।**
**ದ್ರುಹ್ಯತ್ಯಜ್ಞಃ ಪೃಥಗ್ದೃಷ್ಟಿಸ್ತತ್ತ್ವತೋ ವಿಮುಖೋ ಭವೇತ್ ।।೨೨।।**

ಯಃ=ಯಾವ ದಕ್ಷನು ಏತತ್ ಮರ್ತ್ಯಂ=ಈ ನಶ್ವರವಾದ (ಅನಿತ್ಯವಾದ) ಶರೀರವನ್ನು (ಅಂದರೆ ಶಾರೀರಿಕಸಂಬಂಧವನ್ನು) ಉದ್ದಿಶ್ಯ=ಉದ್ದೇಶವಾಗಿ ಇಟ್ಟುಕೊಂಡು ಪೃಥಗ್ದೃಷ್ಟಿಃ=ನಾನೇ ಪೂಜ್ಯನೆಂಬ ಭ್ರಾಂತಿಯುಳ್ಳವನಾಗಿ ಅಪ್ರತಿದ್ರುಹಿ=ದ್ರೋಹ ಮಾಡಿದವರಿಗೂ ತಿರುಗಿ ದ್ರೋಹ ಮಾಡದಿರುವ ಭಗವತಿ=ಪೂಜ್ಯರಾದ ರುದ್ರದೇವರ ವಿಷಯದಲ್ಲಿ ಅಜ್ಞಃ=ಅಜ್ಞಾನಿಯಾಗಿ ದ್ರುಹ್ಯತಿ=ದುಷ್ಟಮಾತುಗಳನ್ನಾಡಿ ದ್ರೋಹ ಬಗೆದಿರುವನೋ ಸಃ=ಆ ದಕ್ಷನು ತತ್ತ್ವತಃ ವಿಮುಖಃ ಭವೇತ್=ಯಥಾರ್ಥಜ್ಞಾನದಿಂದ ಬಹಿರ್ಮುಖನಾಗಲಿ (ಅಂದರೆ ತತ್ವಜ್ಞಾನಶೂನ್ಯನಾಗಲಿ ಎಂದು ಭಾವ). ।।೨೨।।

ಕೇವಲ ತತ್ತ್ವಜ್ಞಾನಶೂನ್ಯನಷ್ಟೇ ಅಲ್ಲ, ಕಾಮ್ಯಕರ್ಮಸಕ್ತನೂ ಆಗಲಿ ಎಂದು ಶಪಿಸುವನು -

**ಗೃಹೇಷು ಕೂಟಧರ್ಮೇಷು ಸಕ್ತೋ ಗ್ರಾಮ್ಯಸುಖೇಚ್ಛಯಾ ।**
**ಕರ್ಮತಂತ್ರಂ ವಿತನುತಾದ್ ವೇದವಾದವಿಪನ್ನಧೀಃ ।।೨೩।।**

ಗ್ರಾಮ್ಯಸುಖೇಚ್ಛಯಾ=ವಿಷಯಸುಖಾಪೇಕ್ಷೆಯಿಂದ ಗೃಹೇಷು=ಗೃಹಸ್ಥಾಶ್ರಮಕ್ಕೆ ಉಚಿತವಾದ ಕೂಟಧರ್ಮೇಷು=ಧರ್ಮಾಭಾಸಗಳಲ್ಲಿ (ಶ್ರೀಹರಿಯ ಅನುಸಂಧಾನವಿದ್ದರೆ ಆಗ ನಿಜವಾದ ಧರ್ಮವೆನಿಸುತ್ತವೆ. ಶ್ರೀಹರಿಯ ಅನುಸಂಧಾನವಿಲ್ಲದಿದ್ದರೆ ಅವು ಧರ್ಮಾಭಾಸವೆನಿಸುತ್ತವೆ. ಅಂತಹ ಧರ್ಮಾಭಾಸಗಳಲ್ಲಿ ಎಂದರ್ಥ) ಸಕ್ತಃ=ಆಸಕ್ತನಾಗಿ ವೇದವಾದವಿಪನ್ನಧೀಃ=ವೇದಗಳ ಮೇಲ್ನೋಟದ ಅರ್ಥಗಳಿಂದ ವಿವೇಕವನ್ನು ಕಳೆದುಕೊಂಡ ಬುದ್ಧಿಯುಳ್ಳವನಾಗಿ ಕರ್ಮತಂತ್ರಂ ವಿತನುತಾದ್=ಕರ್ಮಗಳನ್ನು ಮಾಡಲಿ.

''ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ'' ಎಂಬ ವಾಕ್ಯದಲ್ಲಿ ನಿಜವಾಗಿ ಮೋಕ್ಷವೆಂಬ ಸ್ವರ್ಗಶಬ್ದಾರ್ಥವನ್ನು ತಿಳಿಯದೇ ಮೇಲೆ ತೋರುವ ಅನಿತ್ಯವಾದ ಸ್ವರ್ಗಕ್ಕಾಗಿಯೇ ಯಜ್ಞ ಮಾಡಲಿ ಎಂದು ಭಾವ.

**ಭಾಗವತತಾತ್ಪರ್ಯ :-**

ಇಲ್ಲಿ ''ತತ್ತ್ವಜ್ಞಾನವಾಗದಿರಲಿ'' ಎಂಬ ಶಾಪ ಸಾರ್ವಕಾಲಿಕವೆಂದು ತೋರುವದು. ಆದರೆ ದಕ್ಷನು ಆಧಿಕಾರಿಕಜೀವನಾದ್ದರಿಂದ ಅದು ಸರಿಯಲ್ಲ ಎಂದು ಪ್ರಶ್ನೆ ಬಂದರೆ, ಅದಕ್ಕಾಗಿ ಆಚಾರ್ಯರು ವಿವಕ್ಷಿತ ತಾತ್ಪರ್ಯವನ್ನು ಪ್ರಮಾಣದಿಂದ ಹೇಳುವರು -

**ಯೇ ಜ್ಞಾನವಿಷಯಾಃ ಶಾಪಾ ಮುಕ್ತಿಗಾಸ್ತೇಽಧಿಕಾರಿಣಾಮ್ ।**
**ಕಾದಾಚಿತ್ಕಾಸ್ತೇ ಭವಂತಿ ನೈವ ತೇ ಸಾರ್ವಕಾಲಿಕಾಃ ॥**

**ತೇಷಾಂ ಜ್ಞಾನಸ್ಯ ಮುಕ್ತೇಶ್ಚ ತಾರತಮ್ಯಸ್ಯ ಚೈವ ಹಿ ।**
**ಭಗವನ್ನಿಯತತ್ವಾತ್ತು ಶಾಪಾದಿರ್ನಾತ್ರ ಕಾರಣಮ್ ॥ ಇತಿ ವಾರಾಹೇ ।**

ಅಧಿಕಾರಿಣಾಂ=ನಿಶ್ಚಿತಮೋಕ್ಷಉಳ್ಳವರಿಗೆ (ಈಗಾಗಲೇ ಅಪರೋಕ್ಷಜ್ಞಾನವನ್ನು ಸಂಪಾದಿಸಿ ಮುಂದೆ ನಿಶ್ಚಿತವಾಗಿ ಮೋಕ್ಷವನ್ನು ಹೊಂದಲಿರುವ ಅಧಿಕಾರಿಗಳಿಗೆ) ಕೊಡುವ ಯೇ=ಯಾವ ಜ್ಞಾನವಿಷಯಾಃ ಶಾಪಾಃ, ಮುಕ್ತಿಗಾಃ ಶಾಪಾಃ, (ಉಪಲಕ್ಷಣತಯಾ) ತಾರತಮ್ಯವಿಷಯಾಶ್ಚ ಶಾಪಾಃ=ಅಂದರೆ ''ಇವನು ಜ್ಞಾನಶೂನ್ಯನಾಗಲಿ'' ಎಂಬ ಶಾಪ, ಮತ್ತು ''ಇವನು ಮುಕ್ತಿಯನ್ನು ಹೊಂದುವುದು ಬೇಡ'' ಎಂಬ ಶಾಪ, ಹಾಗೂ ''ಇವನು ನೀಚನಾಗಲಿ'' ಎಂಬುದಾಗಿ ಉತ್ತಮನಿಗೆ ಕೊಡುವ ಶಾಪ, ಹೀಗೆ ಜ್ಞಾನವಿಷಯಕವಾದ-ಮುಕ್ತಿವಿಷಯಕವಾದ-ತಾರತಮ್ಯವಿಷಯಕವಾದ ಶಾಪಗಳೇನಿವೆಯೋ ತೇ=ಅವುಗಳು ಕಾದಾಚಿತ್ಕಾಃ ಏವ=ಕೆಲವು ಕಾಲದಲ್ಲಿ ಮಾತ್ರವೇ ಫಲಿಸುತ್ತವೆ. ಹೊರತು ನ ಸರ್ವಕಾಲಿಕಾಃ= ಸರ್ವಕಾಲದಲ್ಲಿ ಫಲಿಸುವುದಿಲ್ಲ.

ಅದರರ್ಥ :- ಶಾಪ ಕೊಟ್ಟಮಾತ್ರಕ್ಕೆ ಸರ್ವಥಾ ಜ್ಞಾನವಾಗದೇ ಇರುವದು, ಸರ್ವಥಾ ಮುಕ್ತಿ ಆಗದೇ ಇರುವುದು, ಉತ್ತಮನು ತಾರತಮ್ಯದಲ್ಲಿ ನೀಚನಾಗುವುದು ಇವುಗಳು ನಡೆಯುವುದಿಲ್ಲ.

ತೇಷಾಂ=ಅವರ ಜ್ಞಾನಸ್ಯ ಮುಕ್ತೇಶ್ಚ ತಾರತಮ್ಯಸ್ಯ ಚ=ಜ್ಞಾನ, ಮುಕ್ತಿ, ತಾರತಮ್ಯ ಎಲ್ಲವೂ ಭಗವನ್ನಿಯತತ್ವಾತ್=ಭಗವಂತನ ಅಧೀನವಾದ್ದರಿಂದ (ಸತ್ಯಸಂಕಲ್ಪನಾದ ಶ್ರೀಹರಿಯು ''ಅವರಿಗೆ ಜ್ಞಾನ, ಮುಕ್ತಿ, ತಾರತಮ್ಯಗಳು ತಪ್ಪದೇ (ನಿತ್ಯವಾಗಿ-ಕಡ್ಡಾಯವಾಗಿ) ಆಗಲಿ'' ಎಂದೇ ವ್ಯವಸ್ಥೆ ಮಾಡಿರುವನಾದ್ದರಿಂದ) ಜ್ಞಾನ-ಮುಕ್ತಿ-ತಾರತಮ್ಯಗಳಲ್ಲಿ ವ್ಯತ್ಯಾಸವಾಗುವದಿಲ್ಲ.

ಅತ್ರ ತು=ಈ ಕಾದಾಚಿತ್ಕವಾದ ಜ್ಞಾನಾದಿರಾಹಿತ್ಯದ ವಿಷಯದಲ್ಲೂ ಸಹ ಶಾಪಾದಿಃ ನ ಕಾರಣಂ=ಶಾಪ ಹಾಗೂ ಉತ್ತಮಾಪರಾಧಗಳು ಕಾರಣವಲ್ಲ. ಕಿಂತು ಪ್ರಾರಬ್ಧಕರ್ಮವೇ ಕಾರಣ. ಅದಕ್ಕೆ ಶಾಪಾದಿಗಳು ಸೂಚಕವಾಗುತ್ತವೆ ಎಂಬ ವಿಶೇಷವು ''ತು''ಶಬ್ದದಿಂದ ಸೂಚಿತವಾಗುವದು.

''ಮುಕ್ತಿಗಾಶ್ಚ'' ಎಂದು ಹೇಳಿದ್ದರಿಂದ ''ಸಂಸರಂತ್ವಿಹ'' ಎಂಬ ೨೫ನೇ ಶ್ಲೋಕದ ತಾತ್ಪರ್ಯವನ್ನು ಹೇಳಿದಂತಾಯಿತು. ।।೨೩।।

**ಬುದ್ಧ್ಯಾ ಪರಾಭಿಧ್ಯಾಯಿನ್ಯಾ ವಿಸ್ಮೃತಾತ್ಮಗತಿಃ ಪಶುಃ ।**
**ಸ್ತ್ರೀಕಾಮಃ ಸೋಽಸ್ತು ನಿತರಾಂ ದಕ್ಷೋ ಬಸ್ತಮುಖೋಽಚಿರಾತ್ ।।೨೪।।**

ಸಃ ದಕ್ಷಃ=ದಕ್ಷನು ಪರಾಭಿಧ್ಯಾಯಿನ್ಯಾ=ವಿಷಯಗಳನ್ನೇ ಧ್ಯಾನ ಮಾಡುವ ಸ್ವಭಾವವುಳ್ಳ ಬುದ್ಧ್ಯಾ=ಬುದ್ಧಿಯಿಂದ ವಿಸ್ಮೃತಾತ್ಮಗತಿಃ=ಪರಮಾತ್ಮನ ಸ್ಥಿತಿಯನ್ನು ಅರಿಯದವನಾಗಿ ಆದ್ದರಿಂದಲೇ ಪಶುಃ=ಪಶುಸಮಾನನು ಆಗಲಿ. ಮತ್ತು ನಿತರಾಂ ಸ್ತ್ರೀಕಾಮಃ=ಬಹಳವಾದ ಸ್ತ್ರೀ ಅಭಿಲಾಷೆಯುಳ್ಳವನು ಆಗಲಿ. ಅಚಿರಾತ್=ಶೀಘ್ರದಲ್ಲಿಯೇ ಬಸ್ತಮುಖಃ=ಆಡಿನ ಮುಖದವನೂ ಆಗಲಿ ಎಂಬುದಾಗಿ ನಂದಿಯು ಮರುಶಾಪ ಕೊಟ್ಟನು.

ಪಶುಸಮಾನನಾಗಲಿ ಎಂಬುವುದು ತಾರತಮ್ಯವಿಷಯಕ ಶಾಪವೆಂದು ತಿಳಿಯಬೇಕು. ಆದ್ದರಿಂದಲೇ ಇದರ ತಾತ್ಪರ್ಯವೂ ಪ್ರಮಾಣದಲ್ಲಿ ಹೇಳಿದೆ. ।।೨೪।।

**ವಿದ್ಯಾಬುದ್ಧಿರವಿದ್ಯಾಯಾಂ ಕರ್ಮಮಯ್ಯಾಮಸಾವಜಃ ।**
**ಸಂಸರಂತ್ವಿಹ ಯೇ ಚಾಮುಮನುಶರ್ವಾವಮಾನಿನಮ್ ।।೨೫।।**

ಅಜಃ=ದಕ್ಷನು ಅವಿದ್ಯಾಯಾಂ=ವಿದ್ಯಾವಿರೋಧಿಯಾದುದರಿಂದ ಅವಿದ್ಯೆಯೆಂದು ಕರೆಸಿಕೊಳ್ಳುವ, ಕೇವಲ ಕರ್ಮಮಾತ್ರಪರವಾದ ವಿದ್ಯೆಯಲ್ಲಿ ವಿದ್ಯಾಬುದ್ಧಿಃ=ಇದೇ ತತ್ತ್ವವಿದ್ಯೆ ಎಂಬ ಜ್ಞಾನವುಳ್ಳವನಾಗಲಿ. ಯೇ ಚ=ಯಾವ ಬ್ರಾಹ್ಮಣರು ಶರ್ವಾವಮಾನಿನಂ ಅನು=ರುದ್ರದೇವರನ್ನು ಅವಮಾನ ಮಾಡಿದ ದಕ್ಷನನ್ನು ಅನುಸರಿಸಿರುವರೋ ತೇ=ಅವರೂ ಇಹ ಸಂಸರಂತು=ಈ ಸಂಸಾರದಲ್ಲಿಯೇ ಇರಲಿ. ಮುಕ್ತರಾಗುವುದು ಬೇಡವೆಂದರ್ಥ.

6-1-22.

**ಗಿರೇಃ ಸುತಾಯಾಃ ಪುಷ್ಪಿಣ್ಯಾ ಮಧುಗಂಧೇನ ಭೂರಿಣಾ ।**
**ಮಥ್ನಾ ಚೋನ್ಮಥಿತಾತ್ಮಾನಃ ಸಂಮುಹ್ಯಂತು ಹರದ್ವಿಷಃ ॥೨೬॥**

ಹರದ್ವಿಷಃ=ರುದ್ರದೇವರ ದ್ವೇಷಿಗಳು, ಗಿರೇಃ=ಮುಖ್ಯಪ್ರಾಣದೇವರ ಸುತಾಯಾಃ= ರಕ್ಷಣೀಯವಾದುದರಿಂದ ಮಗಳಂತೆ ಇರುವ ಪುಷ್ಪಿಣ್ಯಾಃ=ಮೇಲ್ನೋಟಕ್ಕೆ ಜನರಿಗೆ ರುಚಿಯನ್ನುಂಟುಮಾಡಲು ತತ್ಕಾಲದಲ್ಲಿ ರಮಣೀಯವಾದುದರಿಂದ ಪುಷ್ಪಸಮವಾದ (ಹೂವನ್ನು ಒಂದೇಕ್ಷಣ ವಾಸನೆ ನೋಡಿ ಬಿಡುವಂತೆ ಅಲ್ಪಕಾಲಭೋಗ್ಯವಾದ) ಸ್ವರ್ಗವನ್ನು ಪ್ರತಿಪಾದಿಸುವ ವೇದವಾಕ್ಯಗಳ ಭೂರಿಣಾ=ಬಹಳವಾದ ಮಧುಗಂಧೇನ=ವಿಷಯ-ಸುಖವೆಂಬ ಜೇನಿನ ಪರಿಮಳದಿಂದ, ಅದರ ಅನುಭವದಿಂದ ಮಥ್ನಾ=ಕಾಮನೆಯಿಂದ ಉನ್ಮಥಿತಾತ್ಮಾನಃ=ಬಹಳ ಚಂಚಲವಾದ ಮನಸ್ಸುಳ್ಳವರಾಗಿ ಸಂಮುಹ್ಯಂತು=ಮೋಕ್ಷವನ್ನು ತಿಳಿಸುವ ವೇದದ ತಾತ್ಪರ್ಯ ತಿಳಿಯದೇ ಸ್ವರ್ಗ ಮುಂತಾದವೇ ಶ್ರೇಯಸ್ಸೆಂದು ತಿಳಿದು ಕರ್ಮಗಳಲ್ಲಿ ಆಸಕ್ತರಾಗಲಿ ಎಂದು ಭಾವ.

**ಭಾಗವತತಾತ್ಪರ್ಯ -**

ಇಲ್ಲಿ ''ಗಿರೇಃ ಸುತಾಯಾಃ ಪುಷ್ಪಿಣ್ಯಾಃ'' ಎಂಬುದಕ್ಕೆ ''ರಜಸ್ವತಿಯಾದ ಪಾರ್ವತಿಯ'' ಎಂದು ವಿಪರೀತ ಅರ್ಥ ತೋರುತ್ತದೆ. ಅದನ್ನು ನಿರಾಕರಿಸಲು ಪ್ರಮಾಣದಿಂದಲೇ ಆ ಪದಗಳಿಗೆ ವ್ಯಾಖ್ಯಾನ ಮಾಡುತ್ತಾರೆ :-

**ಗಿರಿಃ ಪ್ರಾಣಃ ಸಮುದ್ದಿಷ್ಟಃ ತತ್ಸುತಾ ವೇದವಾಕ್ ಸ್ಮೃತಾ ।**
**ಪುಷ್ಪಂ ಸ್ವರ್ಗಾದಯಃ ಪ್ರೋಕ್ತಾಃ ಫಲಂ ಮೋಕ್ಷ ಉದಾಹೃತಮ್ ॥ ಇತಿ ವಾಮನೇ ॥**

ಗಿರಿಃ ಎಂದರೆ ಮುಖ್ಯಪ್ರಾಣದೇವರು. ಅವರ ಮಗಳೆಂದರೆ ವೇದವಾಕ್ಯಗಳು. ಹೂ ಎಂದರೆ ಆಪಾತತಃ ತೋರುವ ಸ್ವರ್ಗಾದಿಗಳು, ಐಹಿಕಸುಖಗಳು (ಐಶ್ವರ್ಯ). ಮೋಕ್ಷವು ಫಲವು ಎಂದು ವಾಮನಪುರಾಣದಲ್ಲಿದೆ.

♦ ಕಾಲಕೂಟವನ್ನು ನಿಗರಣ ಮಾಡಿದ್ದರಿಂದ (ಕುಡಿದಿದ್ದರಿಂದ) ಮತ್ತು ದೈತ್ಯರೆಂಬ ಪಾಪವನ್ನೂ ನುಂಗುವುದರಿಂದ ಗಿರಿ ಎಂದರೆ ಮುಖ್ಯಪ್ರಾಣದೇವರು. ಅವರಿಂದ ಶಿಷ್ಯರಿಗೆ ಉಪದಿಷ್ಟವಾದ್ದರಿಂದ ವೇದವಾಕ್ಯಗಳು ಅವರ ಮಗಳಿದ್ದಂತೆ ಎಂದು ತಾತ್ಪರ್ಯಾಭಿಪ್ರಾಯ.

ಮಥ್ನಾ ಎಂಬುದಕ್ಕೆ ಕಡಗೋಲು ಎಂದರ್ಥ ತೋರುವುದು. ಆದ್ದರಿಂದ ಪ್ರಮಾಣದಿಂದಲೇ ಅದಕ್ಕೆ ಅರ್ಥ ಹೇಳುವರು :-

**ಅನಂಗೋ ಮನ್ಮಥೋ ಮಂಥಾ ಕಾಮೋಽಂಗಜ ಉದಾಹೃತಃ ||**

ಇತಿ ಶಬ್ದನಿರ್ಣಯೇ ||

ಅನಂಗ, ಮನ್ಮಥ, ಮಂಥಾ, ಅಂಗಜ ಇತ್ಯಾದಿಯಾಗಿ ಕಾಮನೇ ಹೇಳಲ್ಪಡುವನು ಎಂದು ಶಬ್ದನಿರ್ಣಯದಲ್ಲಿದೆ. ||೨೬||

ಮತ್ತೊಂದು ಶಾಪ ಕೊಡುವನು -

**ಸರ್ವಭಕ್ಷಾ ದ್ವಿಜಾ ವೃತ್ತ್ಯೈ ಧೃತವಿದ್ಯಾತಪೋವ್ರತಾಃ |**
**ವಿತ್ತದೇಹೇಂದ್ರಿಯಾರಾಮಾ ಯಾಚಕಾ ವಿಚರಂತ್ವಿಹ ||೨೭||**

ದ್ವಿಜಾಃ=ಬ್ರಾಹ್ಮಣರು ವೃತ್ತ್ಯೈ=ಜೀವನಕ್ಕಾಗಿ (ಪುಣ್ಯಕ್ಕಾಗಿ ಅಲ್ಲ) ಧೃತವಿದ್ಯಾತ-ಪೋವ್ರತಾಃ=ವಿದ್ಯೆ ತಪಸ್ಸು ವ್ರತಗಳನ್ನು ಮಾಡುವವರೂ, ವಿತ್ತದೇಹೇಂದ್ರಿಯಾರಾಮಾಃ=ಹಣ ಶರೀರ ಇಂದ್ರಿಯಗಳಲ್ಲಿಯೇ ಆಸಕ್ತಿಯುಳ್ಳವರೂ, ಸರ್ವಭಕ್ಷಾಃ=ತಿನ್ನಬಾರದ್ದನ್ನು (ನಿಷಿದ್ಧವಾದದ್ದನ್ನು) ತಿನ್ನುವವರೂ ಆಗಿ, ಯಾಚಕಾಃ=ಭಿಕ್ಷುಕರಾಗಿ ಇಹ ವಿಚರಂತು=ಇಲ್ಲಿಯೇ ಸಂಚರಿಸಲಿ. ||೨೭||

**ತಸ್ಯೈವಂ ವದತಃ ಶಾಪಂ ಶ್ರುತ್ವಾ ದ್ವಿಜಕುಲಾಯ ವೈ |**
**ಭೃಗುಃ ಪ್ರತ್ಯಸೃಜಚ್ಛಾಪಂ ಬ್ರಹ್ಮದಂಡಂ ದುರತ್ಯಯಮ್ ||೨೮||**

ಏವಂ=ಈ ರೀತಿಯಾಗಿ ವದತಃ=ಹೇಳುತ್ತಿರುವ ತಸ್ಯ=ನಂದೀಶ್ವರನ ದ್ವಿಜಕುಲಾಯ ಶಾಪಂ=ಬ್ರಾಹ್ಮಣಸಮಾಜಕ್ಕೆ ಇತ್ತ ಶಾಪವನ್ನು ಶ್ರುತ್ವಾ=ಕೇಳಿ, ಭೃಗುಃ=ಭೃಗುಋಷಿಯು ದುರತ್ಯಯಂ=ಮೀರಲಾಗದ ಬ್ರಹ್ಮದಂಡಂ=ಬ್ರಾಹ್ಮಣರ ಆಯುಧದಂತಿರುವ ಶಾಪಂ=ಶಾಪವನ್ನು ಪ್ರತ್ಯಸೃಜತ್=ಪ್ರತಿಯಾಗಿ ಇತ್ತನು. ||೨೮||

**ಭೃಗುರುವಾಚ -**

**ಭವವ್ರತಧರಾ ಯೇ ಚ ಯ ಏತಾನ್ ಸಮನುವ್ರತಾಃ |**
**ಪಾಖಂಡಿನಸ್ತೇ ಭವಂತು ಸಚ್ಛಾಸ್ತ್ರಪರಿಪಂಥಿನಃ ||೨೯||**

ಯೇ=ಯಾರು ಭವವ್ರತಧರಾಃ=ರುದ್ರದೇವರ ವ್ರತವನ್ನು (ಭಸ್ಮಧಾರಣ ಮುಂತಾದವುಗಳನ್ನು) ಮಾಡುವವರೋ ಚ=ಮತ್ತು ಯೇ=ಯಾರು ಏತಾನ್=ಇವರನ್ನು

ಅನುವ್ರತಾಃ=ಅನುಸರಿಸುವರೋ ತ೭ೇ=ಅವರು ಸಚ್ಛಾಸ್ತ್ರಪರಿಪಂಥಿನಃ=ವೇದಾದಿಶಾಸ್ತ್ರಗಳಿಗೆ ವಿರುದ್ಧವಾಗಿ ನಡೆಯುವ ಪಾಖಂಡಿನಃ ಭವಂತು=ಪಾಖಂಡಿಗಳಾಗಲಿ.

♦ ವೇದವಿರುದ್ಧವಾದ ಸಣ್ಣ ಕೆಲಸ ಮಾಡಿದರೂ ಅವನು ಪಾಖಂಡಿ ಎನಿಸುವವನು.

ಇದನ್ನೇ ವಿವರಿಸುವರು -

**ನಷ್ಟಶೌಚಾ ಮೂಢಧಿಯೋ ಜಟಾಭಸ್ಮಾಸ್ಥಿಧಾರಿಣಃ ।**
**ವಿಶಂತು ಶಿವದೀಕ್ಷಾಯಾಂ ಯತ್ರ ದೈವಂ ಸುರಾಸವಮ್ ॥೩೦॥**

ನಷ್ಟಶೌಚಾಃ=ಶುದ್ಧಿಯನ್ನು ಕಳೆದುಕೊಂಡವರಾಗಿ, ಮೂಡಧಿಯಃ=ವಿವೇಕ-ಬುದ್ಧಿಯಿಲ್ಲದವರಾಗಿ, ಜಟಾಭಸ್ಮಾಸ್ಥಿಧಾರಿಣಃ=ಜಟೆ-ಭಸ್ಮ-ಎಲುಬಿನ ಹಾರ ಮುಂತಾದವುಗಳನ್ನು ಧರಿಸುವವರೂ ಆಗಿ ಯತ್ರ=ಯಾವ ಶಿವದೀಕ್ಷೆಯಲ್ಲಿ ಸುರಾ ಆಸವಂ ದೈವಂ=ಸುರಾ-ಆಸವಗಳೇ ದೇವತೆಯಂತೆ ಪೂಜನೀಯವಾಗಿದೆಯೋ ಅಂತಹ ಶಿವದೀಕ್ಷಾಯಾಂ=ಶಿವದೀಕ್ಷೆಯಲ್ಲಿ ವಿಶಂತು=ಪ್ರವೇಶಿಸಲಿ.

**ಯತ್ರ ದೈವಂ ಸುರಾಸವಮ್ - ಅರ್ಥ :- 1**

ಸುರಾ ಎಂದರೆ ಬೆಲ್ಲ-ಹಿಟ್ಟುಗಳಿಂದ ನಿರ್ಮಿಸಿದ ಮದ್ಯ. ಆಸವ ಎಂದರೆ ತಾಳೆಮರದಿಂದ ತಯಾರಾದ ಮದ್ಯ. ಇವುಗಳನ್ನು ಕೊಡದಲ್ಲಿ ತುಂಬಿಟ್ಟು ಶಿವದೀಕ್ಷೆಯಲ್ಲಿ ದೇವರಂತೆ ಪೂಜಿಸಲಾಗುತ್ತದೆ. ಅಂತಹ ಶಿವದೀಕ್ಷೆಯಲ್ಲಿ ಪ್ರವೇಶಿಸಲಿ ಎಂದು ಭಾವ.

**ಯತ್ರ ದೈವಂ ಸುರಾಸವಮ್ - ಅರ್ಥ :- 2**

''**ದೀಕ್ಷಾಪ್ರವೇಶಮಾತ್ರೇಣ ಬ್ರಾಹ್ಮಣೋ ಭವತಿ ಕ್ಷಣಾತ್**'' ಎಂಬ ಅವರ ಮಾತಿನ ಪ್ರಕಾರ ಒಂದು ಮಂಡಲದಿಂದ ಇನ್ನೊಂದು ಮಂಡಲಕ್ಕೆ ಬಂದರೆ ಆ ಆ ಜಾತಿಯನ್ನು ಪಡೆಯುವನು. ಈ ಕ್ರಮದಿಂದ ಚಂಡಾಲನನ್ನೂ ಬ್ರಾಹ್ಮಣನನ್ನಾಗಿ ಮಾಡುವ ಶಿವದೀಕ್ಷೆಯಲ್ಲಿ ಪ್ರವೇಶಿಸಲಿ ಎಂದೂ ಅರ್ಥ.

**ಯತ್ರ ದೈವಂ ಸುರಾಸವಮ್ - ಅರ್ಥ :- 3**

ದೇವತೆಗಳಿಗೆ ಮದ್ಯ-ಮಾಂಸಗಳನ್ನೇ ನೈವೇದ್ಯದಂತೆ ಸಮರ್ಪಿಸುವ ಶಿವದೀಕ್ಷೆಯಲ್ಲಿ ಪ್ರವೇಶಿಸಲಿ ಹೀಗೂ ಅರ್ಥ. ॥೩೦॥

ಈ ರೀತಿಯಾಗಿ ಶಾಪ ಕೊಡಲು ಕಾರಣ ತಿಳಿಸುವರು -

**ಬ್ರಹ್ಮ ಚ ಬ್ರಾಹ್ಮಣಾಂಶ್ಚೈವ ಯೇ ಯೂಯಂ ಪರಿನಿಂದಥ ।**
**ಸೇತುಂ ವಿಧಾರಣಂ ಪುಂಸಾಮತಃ ಪಾಖಂಡಮಾಶ್ರಿತಾಃ ॥೩೧॥**

ಪುಂಸಾಂ=ವರ್ಣಾಶ್ರಮಾಚಾರವನ್ನು ಮಾಡುವ ಜನರಿಗೆ ವಿಧಾರಣಂ=ವಿಶೇಷವಾಗಿ ಆಶ್ರಯವಾದ ಸೇತುಂ=ಮರ್ಯಾದಾರೂಪವಾದ ಬ್ರಹ್ಮ=ವೇದವನ್ನು ಚ=ಮತ್ತು ಬ್ರಾಹ್ಮಣಾನ್=ಬ್ರಾಹ್ಮಣರನ್ನೂ ಯೇ=ಯಾವ ಯೂಯಂ=ನೀವು ಪರಿನಿಂದಥ= ನಿಂದಿಸಿರುವಿರೋ ('ಗಿರೇಃ ಸುತಾಯಾಃ' ಎಂದು ವೇದವನ್ನೂ, 'ಸರ್ವಭಕ್ಷಾಃ' ಎಂದು ಬ್ರಾಹ್ಮಣರನ್ನು ನಿಂದಿಸಿರುವಿರೋ) ಅತಃ=ಆ ಕಾರಣ ಪಾಖಂಡಂ ಆಶ್ರಿತಾಃ=ಪಾಖಂಡತ್ವವನ್ನು ಹೊಂದಿರುವಿರಿ.

**ಪಾಖಂಡ ಎಂದರೆ ?**

**ಪಾಲನಾತ್ ಸರ್ವಧರ್ಮಾಣಾಂ ಪಾಶಬ್ದೇನ ತ್ರಯೀಮತಾ ।**
**ತಾಂ ಖಂಡಯತಿ ಯೋ ಮೋಹಾತ್ ಪಾಖಂಡಃ ಸ ಪ್ರಕೀರ್ತಿತಃ ॥**

ಎಲ್ಲ ಧರ್ಮಗಳ ಪಾಲಕವಾದ್ದರಿಂದ ವೇದವು ಪಾ ಎನಿಸಿವೆ. ಅಂತಹ ವೇದವನ್ನು ಯಾವನು ಮೋಹದಿಂದ ಖಂಡಿಸುತ್ತಾನೆಯೋ ಅವನು ಪಾಖಂಡನೆನಿಸುವನು ಎಂಬುದಾಗಿ ''ಪಾಖಂಡ''ನ ಲಕ್ಷಣ ನಿರೂಪಿತವಾಗಿದೆ. ।।೩೦।।

**ಏಷ ಏವ ಹಿ ಲೋಕಾನಾಂ ಶಿವಃ ಪಂಥಾಃ ಸನಾತನಃ ।**
**ಯಂ ಪೂರ್ವೇ ಚಾನುಸಂತಸ್ಥುರ್ಯತ್ಪ್ರಮಾಣಂ ಜನಾರ್ದನಃ ।।೩೨।।**

ಪೂರ್ವೇ=ಋಷಿಗಳು ಯಂ=ಯಾವ (ವೇದರೂಪವಾದ) ಮಾರ್ಗವನ್ನು ಅನುಸಂತಸ್ಥುಃ=ಅನುಸರಿಸಿ ನಡೆದರೋ, ಯತ್ಪ್ರಮಾಣಂ ಯತ್=ಯಾವ ವೇದಕ್ಕೆ ಪ್ರಮಾಣಂ=ಸಮ್ಯಕ್ ವಕ್ತೃವು ಜನಾರ್ದನಃ=ಶ್ರೀಹರಿಯಾಗಿರುವನೋ, ಅಂತಹ ಏಷಃ ಏವ=ವೇದವೇ ಲೋಕಾನಾಂ=ವರ್ಣಾಶ್ರಮಾಚಾರವುಳ್ಳ ಜನರಿಗೆ ಸನಾತನಃ=ಪ್ರಾಚೀನವಾದ ಶಿವಃ ಪಂಥಾಃ=ಮಂಗಲಕರ ಮಾರ್ಗವಾಗಿದೆ.

**ಪ್ರಮಾಣ ಎಂದರೆ ಸಮ್ಯಕ್‌ವಕ್ತಾ !**

ಪ್ರಮಾಣಂ ಬೋಧನೇಯತ್ತಾಮರ್ಯಾದಾಶಾಸ್ತ್ರಹೇತುಷು ।
ಸಮ್ಯಗ್‌ವಕ್ತರಿ ವಾ ಯಃ ಸ್ಯಾತ್ ಪ್ರಮಾಣಂ ಮರಣೇ ಗತೌ ॥

ಎಂದು ಯಾದವಕೋಶವಿರುವುದರಿಂದ ಮೂಲದಲ್ಲಿರುವ ''ಪ್ರಮಾಣಂ'' ಎಂಬ ಶಬ್ದಕ್ಕೆ ಸಮ್ಯಕ್‌ವಕ್ತಾ ಎಂದು ಅರ್ಥ ತಿಳಿಯಬೇಕು.

◆ **ಋಷಿಗಳು ವೇದವನ್ನು ಅನುಸರಿಸಿದರು** ಎಂದು ಹೇಳಿದ್ದರಿಂದ ''ಶಿಷ್ಟಪರಿಗೃಹೀತವಾಗಿದೆ ವೇದಮಾರ್ಗ. ಶೈವಾಗಮ ಶಿಷ್ಟಗೃಹೀತವಲ್ಲ'' ಎಂಬುದು ಸೂಚಿತವಾಗುತ್ತದೆ.

◆ ಮತ್ತು, **ವೇದಕ್ಕೆ ಜನಾರ್ದನನು ವಕ್ತಾ** ಎಂದು ಹೇಳಿದ್ದರಿಂದ "ವೇದವು ಅಪೌರುಷೇಯವಾದ ಕಾರಣ ದೋಷಕ್ಕೆ (ಪುರುಷದೋಷನಿಬಂಧನವಾದ ಶಬ್ದದೋಷಕ್ಕೆ) ಅವಕಾಶವಿಲ್ಲ. ಶೈವಾಗಮವು ಪೌರುಷೇಯವಾದ ಕಾರಣ ತನ್ನಿಮಿತ್ತ ದೋಷವಿದೆ (ಪುರುಷದೋಷನಿಬಂಧನವಾದ ಶಬ್ದದೋಷವಿದೆ) ಎಂದೂ ಸೂಚಿತ. ।।೩೨।।

**ತದ್ ಬ್ರಹ್ಮ ಪರಮಂ ಶುದ್ಧಂ ಸತಾಂ ವರ್ತ್ಮ ಸನಾತನಮ್ ।**
**ವಿಗರ್ಹ್ಯ ಯಾತ ಪಾಖಂಡಂ ದೈವಂ ವೋ ಭೂತರಾಟ್ ಸದಾ ।।೩೩।।**

ಪರಮಂ ಶುದ್ಧಂ=ಉತ್ತಮಶ್ರೇಯಃಸಾಧನವಾದ ಅತ್ಯಂತ ಉತ್ಕೃಷ್ಟವಾದ ಅಪೌರುಷೇಯವಾದ ಸನಾತನಂ=ಅನಾದಿಯಾದ ಸತಾಂ ವರ್ತ್ಮ=ಸಜ್ಜನರ ಮಾರ್ಗವಾದ ಬ್ರಹ್ಮ=ವೇದವನ್ನು ವಿಗರ್ಹ್ಯ=ನಿಂದೆ ಮಾಡಿದ್ದರಿಂದ ಪಾಖಂಡಂ ಯಾತ=ಪಾಖಂಡ ಮತವನ್ನು ಹೊಂದಿರಿ. ವಃ=ನಿಮಗೆ ಭೂತರಾಟ್=ತಾಮಸಭೂತಗಳ ಪತಿಯಾದ ಶಿವನು ಸದಾ=ಯಾವಾಗಲೂ ದೈವಂ=ದೇವತೆಯಾಗುವನು. ।।೩೩।।

**ಮೈತ್ರೇಯ ಉವಾಚ -**

**ತಸ್ಯೈವಂ ವದತಃ ಶಾಪಂ ಭೃಗೋಃ ಸ ಭಗವಾನ್ ಭವಃ ।**
**ನಿಶ್ಚಕ್ರಾಮ ತತಃ ಕಿಂಚಿದ್ ವಿಮನಾ ಇವ ಸಾನುಗಃ ।।೩೪।।**

ಏವಂ=ಈ ರೀತಿಯಾಗಿ ತಸ್ಯ ಭೃಗೋಃ ಶಾಪಂ ವದತಃ ಸತಃ=ಆ ಭೃಗುವು ಶಾಪವನ್ನು ಹೇಳುತ್ತಿರಲು ಸಃ ಭಗವಾನ್ ಭವಃ=ಪೂಜ್ಯರಾದ ಆ ರುದ್ರದೇವರು ಕಿಂಚಿತ್ ವಿಮನಾಃ ಇವ=ಮನಸ್ಸಿಗೆ ಸ್ವಲ್ಪ ಖೇದವನ್ನು ಹೊಂದಿದವರಂತೆ ಆಗಿ ಸಾನುಗಃ=ಪರಿವಾರಸಹಿತರಾಗಿ ತತಃ=ಅಲ್ಲಿಂದ ನಿಶ್ಚಕ್ರಾಮ=ಹೊರಹೊರಟರು.

ತಾವು ಹೋದಮೇಲೆ ತಮ್ಮ ಪರಿವಾರದವರು ವಿಷ್ಣುಭಕ್ತರಿಗೆ ಶಾಪ ಕೊಡದಿರಲಿ ಎಂದು ತಮ್ಮ ಪರಿವಾರದವರನ್ನೂ ಕರೆದುಕೊಂಡೇ ಹೊರಟರು ರುದ್ರದೇವರು.

**ಶಬ್ದಪ್ರಯೋಗ ಸ್ವಾರಸ್ಯ !**

ರುದ್ರದೇವರು ಆತ್ಮಾರಾಮರಾದ್ದರಿಂದ ಖಿನ್ನತೆ ಇಲ್ಲ. ಪ್ರಕೃತ ವಿರೋಧವಾದದ್ದರಿಂದ ಖಿನ್ನತೆ ಪ್ರಸಕ್ತವಾದರೂ ಅದರಿಂದ ಅವರಿಗೆ ಹಾನಿ ಇಲ್ಲ ಎಂಬುದನ್ನು "**ಕಿಂಚಿತ್**" ಎಂಬ ಶಬ್ದದಿಂದ ಸೂಚಿಸಿರುವರು.

ತಮಗೆ ಇಷ್ಟವಾದ ಪಾಖಂಡಮತವನ್ನು ತಾವೇ ಮಾಡಿದ್ದರಿಂದ ಅದು ಪ್ರವೃತ್ತವಾಗುವದು ತಮಗೆ ಅಭಿಪ್ರೇತವೇ ಆಗಿದೆ ಎಂಬ ಅಭಿಪ್ರಾಯವನ್ನು "**ಇವ**" ಎಂಬ ಶಬ್ದದಿಂದ ಸೂಚಿಸಿರುವರು. ।।೩೪।।

**ತೇಽಪಿ ವಿಶ್ವಸೃಜಃ ಸತ್ರಂ ಸಹಸ್ರಪರಿವತ್ಸರಾನ್ ।**
**ಸಂವಿಧಾಯ ಮಹೋತ್ಸಾಹಾದ್ ಯತ್ರೇಜ್ಯಋಷಭೋ ಹರಿಃ ॥೩೫॥**

ತೇ ವಿಶ್ವಸೃಜಃ ಅಪಿ=ಜಗತ್ಸೃಷ್ಟಿಕರ್ತೃಗಳಾದ ಆ ಪ್ರಜೇಶ್ವರರೂ ಸಹ, ಯತ್ರ=ಯಾವ ಸತ್ರದಲ್ಲಿ ಹರಿಃ=ಶ್ರೀಹರಿಯು ಇಜ್ಯಋಷಭಃ=ಪೂಜಾರ್ಹರಾದವರಲ್ಲಿ ಶ್ರೇಷ್ಠನಾಗಿರುವನೋ ಅಂತಹ ಸತ್ರಂ=ಯಜ್ಞವನ್ನು ಸಹಸ್ರಪರಿವತ್ಸರಾನ್=ಸಾವಿರವರ್ಷಪರ್ಯಂತವಾಗಿ ಮಹೋತ್ಸಾಹಾತ್=ಬಹಳ ಉತ್ಸಾಹದಿಂದ ಸಂವಿಧಾಯ=ಮಾಡಿ, (ಅನ್ವಯ ಮುಂದುವರೆಯುತ್ತದೆ)॥೩೫॥

**ಆಪ್ಲುತ್ಯಾವಭೃಥಂ ಯತ್ರ ಗಂಗಾ ಯಮುನಯಾಽನ್ವಿತಾ ।**
**ವಿರಜೇನಾತ್ಮನಾ ಸರ್ವೇ ಸ್ವಂ ಸ್ವಂ ಧಾಮ ಯಯುಸ್ತತಃ ॥೩೬॥**

॥ ಇತಿ ಶ್ರೀಮದ್ಭಾಗವತೇ ಚತುರ್ಥಸ್ಕಂಧೇ ದ್ವಿತೀಯೋಽಧ್ಯಾಯಃ ॥

ಯತ್ರ=ಯಾವ ಪ್ರಯಾಗದಲ್ಲಿ ಗಂಗಾ=ಗಂಗಾನದಿಯು ಯಮುನಯಾ ಅನ್ವಿತಾ=ಯಮುನಾನದಿಯಿಂದ ಕೂಡಿರುವಳೋ ಅಂತಹ ಸಂಗಮದಲ್ಲಿ ಅವಭೃಥಂ ಆಪ್ಲುತ್ಯ=ಯಜ್ಞಾಂಗವಾದ ಸ್ನಾನವನ್ನು ಮಾಡಿ, ಸರ್ವೇ=ಎಲ್ಲರೂ (ಕರ್ಮಣಾ= ಯಜ್ಞರೂಪವಾದ ಕರ್ಮಾಚರಣೆ ಮಾಡಿದ್ದರಿಂದ) ವಿರಜೇನ ಆತ್ಮನಾ (ಯುಕ್ತಾಃ)= ನಿರ್ಮಲವಾದ ಮನಸ್ಸಿನಿಂದ ಕೂಡಿದವರಾಗಿ ತತಃ=ಆ ಸ್ಥಳದಿಂದ ಸ್ವಂ ಸ್ವಂ ಧಾಮ ಯಯುಃ=ತಮ್ಮ ತಮ್ಮ ಮನೆಗಳಿಗೆ ತೆರಳಿದರು. ॥೩೬॥

॥ ಇಲ್ಲಿಗೆ ಎರಡನೇ ಅಧ್ಯಾಯವು ಮುಗಿಯಿತು ॥

# ಅಥ ತೃತೀಯೋಽಧ್ಯಾಯಃ

**ಮೈತ್ರೇಯ ಉವಾಚ -**

**ಸದಾ ವಿದ್ವಿಷತೋರೇವಂ ಕಾಲೋ ವಿವದಮಾನಯೋಃ ।**
**ಜಾಮಾತುಃ ಶ್ವಶುರಸ್ಯಾಪಿ ಸುಮಹಾನತಿಚಕ್ರಮೇ ॥೧॥**

ಏವಂ=ಈ ರೀತಿಯಾಗಿ ಸದಾ ವಿದ್ವಿಷತೋಃ=ಯಾವಾಗಲೂ ದ್ವೇಷ ಮಾಡುವ, ವಿವದಮಾನಯೋಃ=ವಿವಾದ ಮಾಡುವ ಜಾಮಾತುಃ ಶ್ವಶುರಸ್ಯಾಪಿ=ಅಳಿಯ-ಮಾವಂದರುಗಳಿಗೆ ಸುಮಹಾನ್ ಕಾಲಃ=ಬಹಳ ದೀರ್ಘಕಾಲವು ಅತಿಚಕ್ರಮೇ=ಕಳೆದುಹೋಯಿತು.

ಅಳಿಯಂದಿರಾದ ರುದ್ರದೇವರು ಹಾಗೂ ಮಾವಂದಿರಾದ ದಕ್ಷಪ್ರಜಾಪತಿ ಇವರಿಬ್ಬರಲ್ಲಿ ವೈಮನಸ್ಯವು ಹೀಗೆಯೇ ಬಹಳಕಾಲದವರೆಗೆ ನಡೆಯಿತು ಎಂದು ಭಾವ.

**ಯದಾಭಿಷಿಕ್ತೋ ದಕ್ಷಸ್ತು ಬ್ರಹ್ಮಣಾ ಪರಮೇಷ್ಠಿನಾ ।**
**ಪ್ರಜಾಪತೀನಾಂ ಸರ್ವೇಷಾಮಾಧಿಪತ್ಯೇ ಸ್ಮಯೋಽಭವತ್ ॥೨॥**

ದಕ್ಷಸ್ತು=ದಕ್ಷನಾದರೋ ಪರಮೇಷ್ಠಿನಾ=ಜೀವೋತ್ತಮರಾದ ಬ್ರಹ್ಮಣಾ=ಬ್ರಹ್ಮದೇವರಿಂದ ಯದಾ=ಯಾವಾಗ ಸರ್ವೇಷಾಂ ಪ್ರಜಾಪತೀನಾಂ ಆಧಿಪತ್ಯೇ ಅಭಿಷಿಕ್ತಃ=ಎಲ್ಲ ಪ್ರಜೇಶ್ವರರಿಗೂ ಅಧಿಪತಿಯಾಗಿ ಪಟ್ಟಾಭಿಷಿಕ್ತನಾದನೋ ತದಾ=ಆಗ ತಸ್ಯ=ಅವನಿಗೆ ಸ್ಮಯಃ ಅಭವತ್=ಗರ್ವ (ಅಹಂಕಾರ) ಉಂಟಾಯಿತು. ॥೨॥

**ಇಷ್ಟ್ವಾ ಸ ವಾಜಪೇಯೇನ ಬ್ರಹ್ಮಿಷ್ಠೋ ಭೂಯ ಏವ ಚ ।**
**ಬೃಹಸ್ಪತಿಸವಂ ನಾಮ ಸಮಾರೇಭೇ ಕ್ರತೂತ್ತಮಮ್ ॥೩॥**

ಸಃ=ದಕ್ಷಪ್ರಜೇಶ್ವರನು ವಾಜಪೇಯೇನ=ವಾಜಪೇಯಯಾಗದಿಂದ ಇಷ್ಟ್ವಾ= ಶ್ರೀಹರಿಯನ್ನು ಪೂಜಿಸಿ ಬ್ರಹ್ಮಿಷ್ಠಃ=ಕರ್ಮಪ್ರತಿಪಾದಕವಾದ ವೇದಗಳಲ್ಲಿ ಆಸಕ್ತನಾಗಿ ಭೂಯಃ ಏವ=ಪುನಃ ಬೃಹಸ್ಪತಿಸವಂ ನಾಮ=ಬೃಹಸ್ಪತಿ(ಯಾಗ)ಸವ ಎಂಬ ಹೆಸರಿನ ಕ್ರತೂತ್ತಮಂ=ಶ್ರೇಷ್ಠವಾದ ಯಜ್ಞವನ್ನು ಸಮಾರೇಭೇ=ಪ್ರಾರಂಭ ಮಾಡಿದನು.

♦ ''ವಾಜಪೇಯೇನ ಇಷ್ಟ್ವಾ ಬೃಹಸ್ಪತಿಸವೇನ ಯಜೇತ'' ''ವಾಜಪೇಯ ಯಾಗವನ್ನು ಮಾಡಿ ಅನಂತರ ಬೃಹಸ್ಪತಿಯಾಗವನ್ನು ಮಾಡಬೇಕು'' ಎಂದು ಶ್ರುತಿ ಇರುವುದರಿಂದ ದಕ್ಷಪ್ರಜಾಪತಿಯು ಮೊದಲು ವಾಜಪೇಯಯಾಗವನ್ನು ಮಾಡಿ ಆಮೇಲೆ ಬೃಹಸ್ಪತಿಯಾಗವನ್ನು ಮಾಡಲು ಪ್ರಾರಂಭಿಸಿದನು ಎಂದು ಅಭಿಪ್ರಾಯ. ।।೩।।

**ತಸ್ಮಿನ್ ಬ್ರಹ್ಮರ್ಷಯಃ ಸರ್ವೇ ದೇವರ್ಷಿಪಿತೃದೇವತಾಃ ।**
**ಆಸನ್ ಕೃತಸ್ವಸ್ತ್ಯಯನಾಸ್ತತ್ಪತ್ನ್ಯಶ್ಚ ಸಭರ್ತೃಕಾಃ ।।೪।।**

ತಸ್ಮಿನ್=ಆ ಯಜ್ಞದಲ್ಲಿ ಸರ್ವೇ=ಎಲ್ಲ ಬ್ರಹ್ಮರ್ಷಯಃ=ಬ್ರಹ್ಮರ್ಷಿಗಳು, ದೇವರ್ಷಿಪಿತೃದೇವತಾಃ=ದೇವರ್ಷಿಗಳು, ಪಿತೃಗಳು ಹಾಗೂ ದೇವತೆಗಳು ಸಭರ್ತೃಕಾಃ ಆಸನ್=ತಮ್ಮ ತಮ್ಮ ಪತಿಗಳಿಂದ ಸಹಿತರಾಗಿ ಇದ್ದರು. ತತ್ಪತ್ನ್ಯಶ್ಚ=ಅವರ ಪತ್ನಿಯರೂ ಕೂಡ ಕೃತಸ್ವಸ್ತ್ಯಯನಾಃ ಆಸನ್=(ಕೃತಮಂಗಲಾಃ ಆಸನ್) ಪುನಃ ಪೂಜಿಸಲ್ಪಟ್ಟರು.

♦ ಯಜ್ಞಕಾರ್ಯ ಮಾಡಿದ್ದಕ್ಕೆ ದಕ್ಷಿಣಾದಿಗಳನ್ನು ಕೊಟ್ಟು ಮೊದಲು ಪೂಜಿಸಿದ್ದರೂ ಸಹ, ಗಂಡ-ಹೆಂಡತಿಯರಿಗೆ ಉಡುಗೊರೆ ಕೊಟ್ಟು ಮತ್ತೆ ಗೌರವಿಸಿದರು (ಫಲವನ್ನು ಕೊಡುವಾಗ ಮತ್ತೆ ಪೂಜಿಸಿದರು) ಎಂದು ಅಭಿಪ್ರಾಯ. ।।೪।।

**ತದುಪಶ್ರುತ್ಯ ನಭಸಿ ಖೇಚರಾಣಾಂ ಪ್ರಜಲ್ಪತಾಮ್ ।**
**ಸತೀ ದಾಕ್ಷಾಯಣೀ ದೇವೀ ಪಿತುರ್ಯಜ್ಞಮಹೋತ್ಸವಮ್ ।।೫।।**

ದೇವೀ=ಪ್ರಕಾಶಮಾನಳಾದ ದಾಕ್ಷಾಯಣೀ=ದಕ್ಷಕುವರಿಯಾದ ಸತೀ=ಸತೀ ಎಂಬುವವಳು ನಭಸಿ=ಆಕಾಶದಲ್ಲಿ ಖೇಚರಾಣಾಂ ಪ್ರಜಲ್ಪತಾಂ ಸತಾಂ=ದೇವತೆಗಳು ಪರಸ್ಪರ ಮಾತನಾಡುತ್ತಿರಲು ಪಿತುಃ=ತಂದೆಯ (ದಕ್ಷಪ್ರಜಾಪತಿಯು ಮಾಡುತ್ತಿರುವ) ಯಜ್ಞಮಹೋತ್ಸವಂ=ಯಜ್ಞವಿಷಯಕವಾದ ತತ್=ಅವರ ಮಾತನ್ನು ಉಪಶ್ರುತ್ಯ=ಕೇಳಿ, (೭ನೇ ಶ್ಲೋಕದವರೆಗೆ ಅನ್ವಯ ಮುಂದುವರೆಯುತ್ತದೆ.)।।೫।।

**ವ್ರಜತೀಃ ಸರ್ವತೋ ದಿಗ್ಭ್ಯ ಉಪದೇವವರಸ್ತ್ರಿಯಃ।।**
**ವಿಮಾನಯಾನಾ ಸಪ್ರೇಷ್ಠಾ ನಿಷ್ಕಕಂಠ್ಯಃ ಸುವಾಸಸಃ ।।೬।।**

ಸರ್ವತೋ ದಿಗ್ಭ್ಯಃ=ಎಲ್ಲ ದಿಕ್ಕುಗಳಿಂದ ವ್ರಜತೀಃ=ಯಜ್ಞಕ್ಕೆ ಹೋಗುತ್ತಿರುವ, ವಿಮಾನಯಾನಾಃ=ವಿಮಾನಗಳೇ ವಾಹನವಾಗಿ ಉಳ್ಳ ಸಪ್ರೇಷ್ಟಾಃ=ಪತಿಗಳಿಂದ ಸಹಿತರಾದ, ನಿಷ್ಕಕಂಠ್ಯಃ=ಕೊರಳಲ್ಲಿ ಪದಕಗಳನ್ನು ಧರಿಸಿದ, ಸುವಾಸಸಃ=ಒಳ್ಳೆಯ ವಸ್ತ್ರಗಳನ್ನು ಧರಿಸಿದ,।।೬।।

**ದೃಷ್ಟ್ವಾ ಸ್ವನಿಲಯಾಭ್ಯಾಶೇ ಲೋಲಾಕ್ಷೀರ್ಮೃಷ್ಟಕುಂಡಲಾಃ ।**
**ಪತಿಂ ಭೂತಪತಿಂ ದೇವಮೌತ್ಸುಕ್ಯಾದಭ್ಯಭಾಷತ ।।೭।।**

ಲೋಲಾಕ್ಷೀಃ=ಚಂಚಲವಾದ ಕಣ್ಣುಗಳುಳ್ಳ, ಮೃಷ್ಟಕುಂಡಲಾಃ=ಹೊಳೆಯುವ ಕುಂಡಲಗಳನ್ನು ಧರಿಸಿದ, ಉಪದೇವವರಸ್ತ್ರಿಯಃ=ಗಂಧರ್ವರ ಪತ್ನಿಯರನ್ನು ಸ್ವನಿಲಯಾಭ್ಯಾಸೇ=ತನ್ನ ಮನೆಯ ಸಮೀಪದಲ್ಲಿ ದೃಷ್ಟ್ವಾ=ನೋಡಿ ಔತ್ಸುಕ್ಯಾತ್=ಉತ್ಸುಕತೆಯಿಂದ ದೇವಂ=ಪ್ರಕಾಶಮಾನನಾದ ಭೂತಪತಿಂ=ಭೂತಗಳಿಗೆ ಒಡೆಯನಾದ ಪತಿಂ=ತನ್ನ ಗಂಡನನ್ನು ಕುರಿತು ಅಭ್ಯಭಾಷತ=ಮಾತನಾಡಿದಳು. ।।೭।।

**ಸತ್ಯುವಾಚ -**

**ಪ್ರಜಾಪತೇಸ್ತೇ ಶ್ವಶುರಸ್ಯ ಸಾಂಪ್ರತಂ**
**ನಿರ್ಯಾಪಿತೋ ಯಜ್ಞಮಹೋತ್ಸವಃ ಕಿಲ ।**
**ವಯಂ ಚ ತತ್ರಾಭಿಸರಾಮ ವಾಮ ತೇ**
**ಯದ್ಯರ್ಥಿತಾಽಮೀ ವಿಬುಧಾ ವ್ರಜಂತಿ ಹಿ ।।೮।।**

ಪ್ರಜಾಪತೇಃ=ಪ್ರಜೇಶ್ವರನಾದ ತೇ ಶ್ವಶುರಸ್ಯ=ನಿಮ್ಮ ಮಾವನ (ನಿಮ್ಮ ಮಾವನು ಮಾಡುತ್ತಿರುವ) ಯಜ್ಞಮಹೋತ್ಸವಃ=ಯಜ್ಞಮಹೋತ್ಸವವು ಸಾಂಪ್ರತಂ=ಈಗ ನಿರ್ಯಾಪಿತಃ ಕಿಲ=ನಡೆದಿದೆಯಷ್ಟೆ! ಹೇ ವಾಮ=ಎಲೋ ಪರಮಮಂಗಲಕನಾದ ಶಿವನೇ ಹಿ=ಯಾವ ಕಾರಣಕ್ಕಾಗಿ ಅಮೀ ವಿಬುಧಾಃ=ಈ ಋಷಿಗಳು ವ್ರಜಂತಿ=ಹೊಗುತ್ತಿರುವರೋ ಆ ಕಾರಣ, ತೇ=ನಿನಗೆ ಯದಿ ಅರ್ಥಿತಾ (ಅಸ್ತಿ)=ಇಚ್ಛೆ ಇದ್ದುದಾದರೆ ವಯಂ ಚ=ನಾವೂ ಸಹ ತತ್ರ=ಅಲ್ಲಿಗೆ ಅಭಿಸರಾಮ=ಹೋಗೋಣ ಎಂದು ಹೇಳಿದಳು. ।।೮।।

ಉತ್ಸುಕತೆಯನ್ನು ಪ್ರಕಟಿಸುತ್ತಾ ಅಲ್ಲಿ ಹೋಗಲು ಹಲವು ಕಾರಣಗಳನ್ನೂ ಮುಂದಿನ ಆರು ಶ್ಲೋಕಗಳಲ್ಲಿ ಹೇಳುವಳು :-

**ತಸ್ಮಿನ್ ಭಗಿನ್ಯೋ ಮಮ ಭರ್ತೃಭಿಃ ಸ್ವಕೈಃ**
**ಧ್ರುವಂ ಗಮಿಷ್ಯಂತಿ ಸುಹೃದ್ದಿದೃಕ್ಷವಃ ।**

**ಅಹಂ ಚ ತಸ್ಮಿನ್ ಭವತಾಽಭಿಕಾಮಯೇ**
**ಸಹೋಪನೀತಂ ಪರಿಬರ್ಹಮರ್ಹಿತುಮ್ ॥೯॥**

ತಸ್ಮಿನ್=ಆ ಯಜ್ಞದಲ್ಲಿ ಸುಹೃದ್ದಿದೃಕ್ಷವಃ=ಬಂಧುಗಳನ್ನು ನೋಡುವ ಅಪೇಕ್ಷೆಯುಳ್ಳ ಮಮ ಭಗಿನ್ಯಃ=ನನ್ನ ಅಕ್ಕಂದಿರು ಸ್ವೈಃ ಭರ್ತೃಭಿಃ (ಸಹ)=ತಮ್ಮ ತಮ್ಮ ಪತಿಗಳಿಂದ ಸಹಿತರಾಗಿ ಧ್ರುವಂ ಗಮಿಷ್ಯಂತಿ=ನಿಶ್ಚಯವಾಗಿ ಹೋಗುವರು. ಅಹಂ ಚ=ನಾನೂ ಸಹ ತಸ್ಮಿನ್=ಆ ಯಜ್ಞದಲ್ಲಿ ಉಪನೀತಂ=ತಂದೆ-ತಾಯಿಗಳು ಕೊಟ್ಟ ಪರಿಬರ್ಹಂ= ವಸ್ತ್ರಾಲಂಕಾರರೂಪವಾದ ಕಾಣಿಕೆಯನ್ನು ಭವತಾ ಸಹ ಅರ್ಹಿತುಂ=ನಿಮ್ಮೊಡನೆ ಸ್ವೀಕರಿಸಲು ಅಭಿಕಾಮಯೇ=ಇಚ್ಛಿಸುವೆನು. ಆ ಕಾರಣ ನಿಮ್ಮೊಡನೆ ಹೋಗಬೇಕೆಂದು ನನ್ನ ಇಚ್ಛೆ ಎಂದು ಭಾವ. ॥೯॥

**ತತ್ರ ಸ್ವಸ್ರೂರ್ಮೇ ನನು ಭರ್ತೃಸಂಮಿತಾ**
**ಮಾತೃಷ್ವಸ್ರೂಃ ಕ್ಲಿನ್ನಧಿಯಂ ಚ ಮಾತರಮ್ ।**
**ದ್ರಕ್ಷ್ಯೇ ಚಿರೋತ್ಕಂಠಮನಾ ಮಹರ್ಷಿಭಿ-**
**ರುನ್ನೀಯಮಾನಂ ಚ ಮೃಡಾಧ್ವರಧ್ವಜಮ್ ॥೧೦॥**

ಹೇ ಮೃಡ=ಎಲೋ ರುದ್ರನೇ ! ತತ್ರ=ಅಲ್ಲಿ ಭರ್ತೃಸಂಮಿತಾಃ=ತಮ್ಮ ಪತಿಗಳಿಂದ ಸಹಿತರಾದ ಮೇ ಸ್ವಸ್ರೂಃ=ನನ್ನ ಅಕ್ಕಂದಿರನ್ನು, ಚ=ಮತ್ತು ಮಾತೃಷ್ವಸ್ರೂಃ=ಚಿಕ್ಕಮ್ಮಂದಿರನ್ನೂ, ಚ=ಮತ್ತು ಕ್ಲಿನ್ನಧಿಯಂ ಮಾತರಂ=ಸ್ನೇಹದಿಂದ ಆದ್ರವಾದ ಮನಸ್ಸುಳ್ಳ ತಾಯಿಯನ್ನು, ಮಹರ್ಷಿಭಿಃ=ದೊಡ್ಡ ದೊಡ್ಡ ಋಷಿಗಳಿಂದ ಉನ್ನೀಯಮಾನಂ=ನಡೆಸಲ್ಪಡುವ ಅಧ್ವರಧ್ವಜಂ=ಶ್ರೇಷ್ಠಯಜ್ಞವನ್ನು ಚಿರೋತ್ಕಂಠಮನಾಃ=ಬಹುಕಾಲದಿಂದ ಉತ್ಸುಕವಾದ ಮನಸ್ಸುಳ್ಳವಳಾಗಿ ದ್ರಕ್ಷ್ಯೇ=ನೋಡುವೆ. ॥೧೦॥ 9-1-22.

**ತ್ವಯ್ಯೇತದಾಶ್ಚರ್ಯಮಜಾತ್ಮಮಾಯಯಾ**
**ವಿನಿರ್ಮಿತಂ ಭಾತಿ ಗುಣತ್ರಯಾತ್ಮಕಮ್ ।**
**ಅಥಾಪ್ಯಹಂ ಯೋಷಿದತತ್ವವಿಚ್ಚ ತೇ**
**ದೀನಾ ದಿದೃಕ್ಷೇ ಭವ ಮೇ ಭವಕ್ಷಿತಿಮ್ ॥೧೧॥**

ಹೇ ಅಜ=ರುದ್ರನೇ ತ್ವಯಿ=ನಿನ್ನ ಜ್ಞಾನದಲ್ಲಿ ಆತ್ಮಮಾಯಯಾ=ಪರಮಾತ್ಮನ ಇಚ್ಛೆಯಿಂದ ವಿನಿರ್ಮಿತಂ=ಸೃಷ್ಟವಾದ ಗುಣತ್ರಯಾತ್ಮಕಂ=ಸತ್ವಾದಿಗುಣೋಪಾದಾನಕವಾದ ಆಶ್ಚರ್ಯಂ=ನಾನಾ ವಿಚಿತ್ರವಾದ ಏತತ್=ಈ ಜಗತ್ತು (ಯದ್ಯಪಿ) ಭಾತಿ=ತೋರುವದು. ಅಥಾಪಿ=ಆದರೂ ಯೋಷಿತ್=ಹೆಣ್ಣುಮಗಳಾದ ಅಹಂ=ನಾನು ತೇ=ನಿನ್ನ ಅತತ್ವವಿತ್=

ತತ್ವವನ್ನು ತಿಳಿದವಳಲ್ಲ, ಕಾರಣ ದೀನಾ=ಕೃಪಣಳಾಗಿದ್ದೇನೆ. ಹೇ ಭವ=ರುದ್ರನೇ ಮೇ=ನನ್ನ ಭವಕ್ಷಿತಿಂ=ಜನ್ಮಭೂಮಿಯನ್ನು (ತವರುಮನೆಯನ್ನು) ದಿದೃಕ್ಷೇ=ನೋಡಲಿಚ್ಛಿಸುವೆನು. ।।೧೧।।

**ಪಶ್ಯ ಪ್ರಯಾಂತೀರ್ಶ್ಚ ಭವಾನ್ಯಯೋಷಿತಃ**
**ಸ್ವಲಂಕೃತಾಃ ಕಾಂತಸಖಾ ವರೂಥಶಃ ।**
**ಯಾಸಾಂ ವ್ರಜದ್ಭಿಃ ಶಿತಕಂಠ ಮಂಡಿತಂ**
**ನಭೋ ವಿಮಾನೈಃ ಕಲಹಂಸಪಾಂಡುಭಿಃ ।।೧೨।।**

ಹೇ ಶಿತಿಕಂಠ ಭವ=ನೀಲಕಂಠನಾದ ಹೇ ರುದ್ರನೇ ! ಯಾಸಾಂ=ಯಾರ ಕಲಹಂಸಪಾಂಡುಭಿಃ=ರಾಜಹಂಸದಂತೆ ಶುಭ್ರವಾದ, ವ್ರಜದ್ಭಿಃ=ಹೋಗುತ್ತಿರುವ ವಿಮಾನೈಃ=ವಿಮಾನಗಳಿಂದ ನಭಃ=ಆಕಾಶವು ಮಂಡಿತಂ=ಅಲಂಕೃತವಾಗಿದೆಯೋ (ತಾಃ=ಅಂತಹ,) ಸ್ವಲಂಕೃತಾಃ=ಚೆನ್ನಾಗಿ ಅಲಂಕಾರ ಮಾಡಿಕೊಂಡಿರುವ, ಕಾಂತಸಖಾಃ= ಗಂಡನೇ ಗೆಳೆಯನಾಗಿವುಳ್ಳ, ವರೂಥಶಃ=ಗುಂಪುಗುಂಪಾಗಿ ಪ್ರಯಾಂತೀಃ=ಯಜ್ಞಕ್ಕೆ ಹೋಗುತ್ತಿರುವ, ಅನ್ಯಯೋಷಿತಃ=ನನ್ನ ತಂದೆಗೆ ಸಂಬಂಧವಿಲ್ಲದ ಸ್ತ್ರೀಯರನ್ನು ಪಶ್ಯ=ನೋಡು. ।।೧೨।।

**ಕಥಂ ಸುತಾಯಾಃ ಪಿತೃಗೇಹಕೌತುಕಂ**
**ನಿಶಮ್ಯ ದೇಹಃ ಸುರವರ್ಯ ನೇಂಗತೇ ।**
**ಅನಾಹುತಾ ಅಪ್ಯಭಿಯಾಂತಿ ಸೌಹೃದಾದ್**
**ಭರ್ತುರ್ಗುರೋರ್ದೇಹಕೃತಶ್ಚ ಕೇತನಮ್ ।।೧೩।।**

ಹೇ ಸುರವರ್ಯ=ದೇವಶ್ರೇಷ್ಠನೇ ! ಪಿತೃಗೇಹಕೌತುಕಂ ನಿಶಮ್ಯ=ತಂದೆಯ ಮನೆಯಲ್ಲಿ ನಡೆಯುವ ಉತ್ಸವವನ್ನು ಕೇಳಿ ಸುತಾಯಾಃ=ಮಗಳಾದ ನನ್ನ ದೇಹಃ=ಶರೀರವು ಕಥಂ ನೇಂಗತೇ=ಹೇಗೆತಾನೆ ನೋಡಲು ಹಾತೊರೆಯುವುದಿಲ್ಲ ? (ಬೇರೆ ಹೆಂಗಸರೂ ಸಹ ಹೋಗುತ್ತಿರುವಾಗ ನಾನು ಹೇಗೆ ಸುಮ್ಮನೆ ಕೂಡಲು ಸಾಧ್ಯ?)

ಆಹ್ವಾನವಿಲ್ಲದೇ ಹೇಗೆ ಹೋಗುವದು ? ಎಂದರೆ ಅದಕ್ಕೆ ಹೇಳುವಳು :- ಭರ್ತುಃ= ಯಜಮಾನನ (ಗಂಡನ), ಗುರೋಃ=ಗುರುವಿನ, ದೇಹಕೃತಃ=ಭೌತಿಕದೇಹವನ್ನು ಕೊಟ್ಟಂತಹ ತಂದೆಯ ಕೇತನಂ=ಮನೆಯನ್ನು ಕುರಿತು ಅನಾಹುತಾಃ ಅಪಿ=ಆಹ್ವಾನಿತರಾಗದಿದ್ದರೂ ಸಹ ಸೌಹೃದಾತ್=ಸ್ನೇಹದಿಂದ ಅಭಿಯಾಂತಿ=ಹೋಗುವರು।।೧೩।।

**ತನ್ಮೇ ಪ್ರಸೀದೇದಮಮರ್ತ್ಯ ವಾಂಛಿತಂ**
**ಕರ್ತುಂ ಭವಾನ್ ಕಾರುಣಿಕೋ ಬತಾರ್ಹಸಿ ।**

**ತ್ವಯಾಽಪಿ ಪೂರ್ಣೋಽಯಮದಭ್ರಚಕ್ಷುಷಾ**
**ನಿರೂಪಿತಾಽತೋಽನುಗೃಹಾಣ ಯಾಚಿತಃ ।।೧೪।।**

ಹೇ ಅಮರ್ತ್ಯ=ಎಲೋ ದೇವನೇ ! ತತ್=ಆದ್ದರಿಂದ ಹಿಂದೆ ಹೇಳಿದಂತೆ ಹೋಗಲು ಅನೇಕ ಕಾರಣಗಳಿರುವದರಿಂದ) ಯತಃ=ಯಾವ ಕಾರಣ ಅದಭ್ರಚಕ್ಷುಷಾ=ಬಹುಜ್ಞಾನವುಳ್ಳ ತ್ವಯಾ=ನಿನ್ನಿಂದ ಅಹಂ=ನಾನು ನಿರೂಪಿತಾ=ನಿನ್ನ ದೇಹದ ಅರ್ಧಭಾಗದಲ್ಲಿ ಧರಿಸಲ್ಪಟ್ಟಿರುವೆನೋ, ಆ ಕಾರಣ ನಿನಗೆ ಅರ್ಧನಾರೀಶ್ವರನೆಂದು ಪ್ರಸಿದ್ಧಿಯಿದೆಯೋ ಆದ್ದರಿಂದ ಭವಾನ್=ನೀನು ಪೂರ್ಣಃ ಕಾರುಣಿಕಃ=ಸಂಪೂರ್ಣದಯಾಳುವಾಗಿರುವಿ. ಇದಂ ವಾಂಛಿತಂ ಕರ್ತುಂ=ನನ್ನ ಈ ಅಭಿಲಾಷೆಯನ್ನು ಪೂರ್ಣಗೊಳಿಸಲು ಅರ್ಹಸಿ= ಸಮರ್ಥನಾಗಿರುವಿ. ಆ ಕಾರಣ ಪ್ರಸೀದ=ನನ್ನಮೇಲೆ ಪ್ರಸನ್ನನಾಗು. ಯಾಚಿತಃ=ನನ್ನಿಂದ ಪ್ರಾರ್ಥಿತನಾಗಿ ಅನುಗೃಹಾಣ=ಅನುಗ್ರಹ ಮಾಡು.

**ಪಾಠಾಂತರ - ಅರ್ಥಾಂತರ**

**"ತ್ವಯಾಽಪಿ ಪೂರ್ಣೋಽಯಮದಭ್ರಚಕ್ಷುಷಾ**
**ನಿರೂಪಿತಃ ಸೋಽನುಗೃಹಾಣ ಯಾಚಿತಃ"**

ಎಂಬ ಪಾಠವಿದ್ದಾಗಃ- "ಆಹ್ವಾನಿತರಾಗದಿದ್ದರೂ ಹಿರಿಯರ ಮನೆಗೆ ಹೋಗಬಹುದು" ಎಂಬ ಧರ್ಮವನ್ನು ನಾನು ಮಾತ್ರ ಹೇಳುತ್ತಿಲ್ಲ. ಪರಂತು ತ್ವಯಾಽಪಿ=ನಿನ್ನಿಂದಲೂ ಪೂರ್ಣಃ ನಿರೂಪಿತಃ=ದೊಡ್ಡದಾಗಿ ಹೇಳಲ್ಪಟ್ಟಿದೆ. ಆದ್ದರಿಂದ ಸಃ ತ್ವಂ=ಅಂತಹ ಧರ್ಮವನ್ನು ದೊಡ್ಡದಾಗಿ ಹೇಳಿದ ನೀನು ಅನುಗೃಹಾಣ=ಅನುಗ್ರಹ ಮಾಡು ಎಂದು ವ್ಯಾಖ್ಯಾನಿಸಬೇಕು.

**ಋಷಿರುವಾಚ -**

**ಏವಂ ಗಿರಿತ್ರಃ ಪ್ರಿಯಯಾಽಭಿಭಾಷಿತಃ**
**ಪ್ರತ್ಯಭ್ಯಧತ್ತ ಪ್ರಹಸನ್ ಸುರಪ್ರಿಯಃ ।**
**ಸಂಸ್ಮಾರಿತೋ ಮರ್ಮಭಿದಃ ಕುವಾಗಿಷೂನ್**
**ಯಾನಾಹ ಕೋ ವಿಶ್ವಸೃಜಾಂ ಸಮಕ್ಷತಃ ।।೧೫।।**

ಗಿರಿತ್ರಃ=ರುದ್ರದೇವರು ಏವಂ=ಈ ರೀತಿಯಾಗಿ ಪ್ರಿಯಯಾ=ಹೆಂಡತಿಯಾದ ಸತೀದೇವಿಯಿಂದ ಅಭಿಭಾಷಿತಃ=ಕೇಳಲ್ಪಟ್ಟವನಾಗಿ, ವಿಶ್ವಸೃಜಾಂ ಸಮಕ್ಷತಃ=ಕಶ್ಯಪಾದಿ ಋಷಿಗಳ ಎದುರಿಗೆ ಕಃ=ದಕ್ಷಪ್ರಜಾಪತಿಯು ಯಾನ್=ಯಾವ ಮರ್ಮಭಿದಃ= ಮರ್ಮಭೇದಕವಾದ ಮಾತುಗಳನ್ನು ಆಹ=ಆಡಿದನೋ ಅಂತಹ ಕುವಾಗಿಷೂನ್=ಕೆಟ್ಟ ಮಾತುಗಳೆಂಬ ಬಾಣಗಳನ್ನು ಸಂಸ್ಮಾರಿತಃ=ಜ್ಞಾಪಿಸಿಕೊಂಡವನಾಗಿ ಸುರಪ್ರಿಯಃ=ದೇವತೆಗಳಿಗೆ ಪ್ರಿಯನಾದ ರುದ್ರದೇವನು ಪ್ರಹಸನ್=ನಗುತ್ತ ಪ್ರತ್ಯಭ್ಯಧತ್ತ=ಉತ್ತರಿಸಿದನು. ।।೧೫।।

**ಶಂಭುರುವಾಚ -**

**ತ್ವಯೋದಿತಂ ಶೋಭನಮೇವ ಶೋಭನೇ**
**ಅನಾಹುತಾ ಅಪ್ಯಭಿಯಾಂತಿ ಬಂಧುಷು ।**
**ತೇ ಯದ್ಯನುತ್ಪಾದಿತದೋಷದೃಷ್ಟಯೋ**
**ಬಲೀಯಸಾऽನಾತ್ಮ್ಯಮದೇನ ಮನ್ಯುನಾ ॥೧೬॥**

ಹೇ ಶೋಭನೇ=ಮಂಗಳಕರಳಾದ ಸತಿಯೇ ! ತ್ವಯಾ=ನಿನ್ನಿಂದ ಉದಿತಂ= ಹೇಳಲ್ಪಟ್ಟದ್ದು ಶೋಭನಂ ಏವ=ಒಳ್ಳೆಯದೇ. ಯಾವಾಗ ? ಅಂದರೆ, ತೇ=ಬಂಧುಗಳಾದ ಅವರು ಯದಿ=ಒಂದು ವೇಳೆ ಬಲೀಯಸಾ=ಬಹಳವಾದ ಅನಾತ್ಮ್ಯಮದೇನ= ದೇಹಾಭಿಮಾನದಿಂದ ಉಂಟಾದ ದರ್ಪ(ಅಹಂಕಾರ)ದಿಂದ ಚ=ಮತ್ತು ಮನ್ಯುನಾ= ಸಿಟ್ಟಿನಿಂದ ಅನುತ್ಪಾದಿತದೋಷದೃಷ್ಟಯಃ=ನಮ್ಮಮೇಲೆ ದೋಷದೃಷ್ಟಿ ಉಳ್ಳವರು ಆಗದಿದ್ದರೆ, ಆಗ ನೀನು ಹೇಳಿದುದು ಸರಿಯೇ.

ಆದರೆ ಈಗ ದಕ್ಷನಾದರೋ ನಮ್ಮಲ್ಲಿ ದೋಷದೃಷ್ಟಿ ಉಳ್ಳವನಾಗಿರುವನು. ಆ ಕಾರಣ ಆಹ್ವಾನವಿಲ್ಲದೇ ಹೋಗುವದು ಉಚಿತವಲ್ಲ ॥೧೬॥

ವಿದ್ಯೆ ಮೊದಲಾದ ಗುಣವುಳ್ಳ ದಕ್ಷನು ನಿನ್ನಂತಹ ಮಹಾತ್ಮನಲ್ಲಿ ಹೇಗೆ ದೋಷದೃಷ್ಟಿಯುಳ್ಳವನಾದನು ? ಎಂದು ಪ್ರಶ್ನೆ ಬಂದರೆ, ಆದಕ್ಕೆ ಶಿವನು ಹೇಳುವನು :-

**ವಿದ್ಯಾತಪೋವಿತ್ತವಪುರ್ವಯಃಕುಲೈಃ**
**ಸತಾಂ ಗುಣೈಃ ಷಡ್ಭಿರಸತ್ತಮಾ ಮದೈಃ ।**
**ಸ್ಮೃತೌ ಹತಾಯಾಮಭಿಮಾನದುರ್ದೃಶಃ**
**ತಪ್ತಾ ನ ಪಶ್ಯಂತಿ ಹಿ ಧಾಮ ಭೂಯಸಾಮ್ ॥೧೭॥**

ವಿದ್ಯಾತಪೋವಿತ್ತವಪುರ್ವಯಃಕುಲೈಃ=ವಿದ್ಯೆ (ಜ್ಞಾನ), ತಪಸ್ಸು ವಿತ್ತ (ಹಣ), (ವಪುಃ) ಸುಂದರವಾದ ದೇಹ, ವಯಸ್ಸು ಹಾಗೂ (ಕುಲ) ಒಳ್ಳೆಯಕುಲದಲ್ಲಿ ಜನನ ಎಂಬ ಸತಾಂ=ಸಜ್ಜನರ ಷಡ್ಭಿಃ ಗುಣೈಃ=ಆರು ಗುಣಗಳಿಂದ ಉಂಟಾದ ಮದೈಃ=ಗರ್ವದಿಂದ ಸ್ಮೃತೌ ಹತಾಯಾಂ=ಶಾಸ್ತ್ರದಿಂದ ಬಂದ ಜ್ಞಾನವು ನಾಶವಾಗುತ್ತಿರಲು ಅಸತ್ತಮಾಃ=ದುಷ್ಟಜನರು ಅಭಿಮಾನದುರ್ದೃಶಃ=ಅಭಿಮಾನದಿಂದ (ಅಹಂಕಾರದಿಂದ) ದುಷ್ಟಜ್ಞಾನವುಳ್ಳವರಾಗಿ ತಪ್ತಾಃ=ಮನಸ್ಸಿನಲ್ಲಿಯೇ ಸಂತಾಪಉಳ್ಳವರಾಗಿ ಭೂಯಸಾಂ=ಮಹಾತ್ಮರ ಧಾಮಃ= ಪ್ರಭಾವವನ್ನು ನ ಪಶ್ಯಂತಿ=ನೋಡಲಾರರು (ತಿಳಿಯಲಾರರು).

ಅಂದರೆ :- ಗುಣಗಳು ಸಜ್ಜನರಿಗೆ ಹಿತಕರವಾಗುವವು. ಅಸಜ್ಜನರಿಗೆ ಹಿತಕರವಾಗುವುದಿಲ್ಲ, ಅಷ್ಟೇ ಅಲ್ಲದೇ ದುಷ್ಟರಿಗೆ ಅಪಕಾರಿಗಳೇ ಆಗುವವು ಎಂದು ಭಾವ

**ನೈತಾದೃಶಾನಾಂ ಸ್ವಜನವ್ಯಪೇಕ್ಷಯಾ**
**ಗೃಹಾನ್ ಪ್ರತೀಯಾದನವಸ್ಥಿತಾತ್ಮನಾಮ್ ।**
**ಯೇಽಭ್ಯಾಗತಾನ್ ವಕ್ರಧಿಯಾಽಭಿಚಕ್ಷತೇ**
**ಆರೋಪಿತಭ್ರೂಭಿರಮರ್ಷಣಾಕ್ಷಿಭಿಃ ॥೧೮॥**

ಯೇ=ಯಾರು ಅಭ್ಯಾಗತಾನ್=ಬಂದವರನ್ನು ವಕ್ರಧಿಯಾ=ಡೊಂಕುಬುದ್ಧಿಯಿಂದ ಆರೋಪಿತಭ್ರೂಭಿಃ=ಗಂಟಿಕ್ಕಿದ ಹುಬ್ಬುಗಳಿಂದ ಸಹಿತವಾದ ಅಮರ್ಷಣಾಕ್ಷಿಭಿಃ= ಅಸಹನೆಯಿಂದ ಕೂಡಿದ ಕಣ್ಣುಗಳಿಂದ ಅಭಿಚಕ್ಷತೇ=ನೋಡುವರೋ ಏತಾದೃಶಾನಾಂ= ಇಂತಹ ಅನವಸ್ಥಿತಾತ್ಮನಾಂ=ಸ್ಥಿರಮನಸ್ಸಿಲ್ಲದವರ ಗೃಹಾನ್=ಮನೆಯನ್ನು ಕುರಿತು ಸ್ವಜನವ್ಯಪೇಕ್ಷಯಾ=ಬಂಧುಗಳೆಂಬ ಭಾವನೆಯಿಂದ ನ ಪ್ರತೀಯಾತ್=ಹೋಗಕೂಡದು.

ಆದರೂ ಅಂತಹ ಬಂಧುಗಳ ಮನೆಗೆ ಹೋಗಬೇಕು. ಅವರಾಡಿದ ಮಾತುಗಳನ್ನು ಸಹಿಸಬೇಕು ಎಂದರೆ, ಅದು ಸಾಧ್ಯವಿಲ್ಲವೆಂದು ಹೇಳುವರು :-

**ತಥಾಽರಿಭಿರ್ನ ಪ್ರಧನೇ ಶಿಲೀಮುಖೈಃ**
**ಶೇತೇಽರ್ದಿತಾಂಗೋ ಹೃದಯೇನ ದೂಯತಾ ।**
**ಸ್ವಾನಾಂ ಯಥಾ ವಕ್ರಧಿಯಾಂ ದುರುಕ್ತಿಭಿ-**
**ರ್ದಿವಾನಿಶಂ ತಪ್ಯತಿ ಮರ್ಮತಾಡಿತಃ ॥೧೯॥**

ಯಥಾ=ಹೇಗೆ ವಕ್ರಧಿಯಾಂ=ಡೊಂಕುಬುದ್ಧಿಯುಳ್ಳ ಸ್ವಾನಾಂ=ಸ್ವಕೀಯರ ದುರುಕ್ತಿಭಿಃ=ದುಷ್ಟಮಾತುಗಳಿಂದ ಮರ್ಮತಾಡಿತಃ=ಹೃದಯಕ್ಕೆ ಪೆಟ್ಟು ತಿಂದವನಾಗಿ ದಿವಾನಿಶಂ=ಹಗಲು-ರಾತ್ರಿ (ನಿದ್ರೆ ಮಾಡದೇ) ತಪ್ಯತಿ=ದುಃಖಪಡುವನೋ ತಥಾ=ಹಾಗೆ ಪ್ರಧನೇ=ಯುದ್ಧದಲ್ಲಿ ಅರಿಭಿಃ=ಶತ್ರುಗಳಿಂದ ಶಿಲೀಮುಖೈಃ=ಬಾಣಗಳಿಂದ ಅರ್ದಿತಾಂಗಃ= ಪೆಟ್ಟುತಿಂದ ಅವಯವವುಳ್ಳ ಪುರುಷನೂ ನ ವ್ಯಥತೇ=ದುಃಖಪಡಲಾರನು. ಏಕೆಂದರೆ ಯುದ್ಧದಲ್ಲಿ ಶತ್ರುಗಳಿಂದ ಪೆಟ್ಟುತಿಂದ ವ್ಯಕ್ತಿಯು ದೂಯತಾ ಹೃದಯೇನ ಶೇತೇ=ದುಃಖಪಡುತ್ತಲೇ ಮಲಗಿಬಿಡುವನು. (ರಾತ್ರಿ ನಿದ್ರೆ ಮಾಡುವನು.)॥೧೯॥

**ವ್ಯಕ್ತಂ ತ್ವಮುತ್ಕೃಷ್ಟಗತೇಃ ಪ್ರಜಾಪತೇಃ**
**ಪ್ರಿಯಾಽಽತ್ಮಜಾನಾಮಸಿ ಸುಭ್ರು ಸಂಮತಾ ।**

**ಅಥಾಽಪಿ ಮಾನಂ ನ ಪಿತುಃ ಪ್ರಪತ್ಸ್ಯಸೇ**
**ಮದಾಶ್ರಯಾತ್ ಕಃ ಪರಿತಪ್ಯತೇ ಯತಃ ॥೨೦॥**

ಉತ್ಕೃಷ್ಟಗತೇಃ=ಉತ್ತಮಸ್ಥಿತಿಯಲ್ಲಿರುವ ಪ್ರಜಾಪತೇಃ=ದಕ್ಷನ ಆತ್ಮಜಾನಾಂ=ಮಕ್ಕಳಲ್ಲಿ ತ್ವಂ=ನೀನು ಪ್ರಿಯಾ ಅಸಿ=ಪ್ರೀತಿಪಾತ್ರಳಾಗಿರುವಿ ಎಂಬುದಾಗಿ ವ್ಯಕ್ತಂ=ನಿಶ್ಚಿತವಾಗಿ ಸಂಮತಾ=ನನಗೆ ಗೊತ್ತಿರುವಿ. ಹೇ ಸುಭ್ರು=ಎಲೈ ಸತಿಯೇ ! ಅಥಾಪಿ=ಆದರೂ ಯತಃ= ಯಾವ ಕಾರಣ ಮದಾಶ್ರಯಾತ್=ನಿನಗೆ ನನ್ನ ಸಂಬಂಧವಿರುವುದರಿಂದ ಕಃ=ದಕ್ಷನು ಪರಿತಪ್ಯತೇ=ಸಂತಾಪಪಡುವನೋ ಆ ಕಾರಣ ಪಿತುಃ=ತಂದೆಯಿಂದ ಮಾನಂ ನ ಪ್ರಪತ್ಸ್ಯಸೇ=ಗೌರವವನ್ನು ಹೊಂದಲಾರೆ. ಆ ಕಾರಣ ನನ್ನನ್ನು ಬಿಟ್ಟು ನೀನೊಬ್ಬಳೇ ಹೋಗುವದೂ ಉಚಿತವಲ್ಲವೆಂದು ಭಾವ. ॥೨೦॥

ದಕ್ಷನು ಜ್ಞಾನಿಯಾಗಿದ್ದರೂ ಅಸುರಾವೇಶದಿಂದ ಮತ್ತು ನಮ್ಮ ಉತ್ಕರ್ಷದಲ್ಲಿ ಸಹನೆ ಇಲ್ಲದವನಾದ್ದರಿಂದ ಈ ರೀತಿ ದ್ವೇಷಿಸುವನು ಎಂದು ಹೇಳುವರು :-

**ತಾತಪ್ಯಮಾನೇನ ಹೃದಾಽಽತುರೇಂದ್ರಿಯಃ**
**ಸಮೃದ್ಧಿಭಿಃ ಪೂರುಷಬುದ್ಧಿಸಾಕ್ಷಿಣಾಮ್ ।**
**ಅಕಲ್ಪ ಏಷಾಮಧಿರೋಢುಮಂಜಸಾ**
**ಪದಂ ಪರಂ ದ್ವೇಷ್ಟಿ ಯಥಾಽಸುರಾ ಹರಿಮ್ ॥೨೧॥**

ಪೂರುಷಬುದ್ಧಿಸಾಕ್ಷಿಣಾಂ=ಎಲ್ಲರ ಮನೋಭಿಮಾನಿಗಳಾದ ನಮ್ಮ ಸಮೃದ್ಧಿಭಿಃ= ಸಂಪೂರ್ಣ ಸಂಪತ್ತುಗಳಿಂದ ಮತ್ತು ಅಸುರಾವೇಶದಿಂದಲೂ ಏಷಾಂ=ಯಾರ ಪರಂ= ಶ್ರೇಷ್ಠವಾದ ಪದಂ=ಸ್ಥಾನವನ್ನು ಅಂಜಸಾ=ಚೆನ್ನಾಗಿ ಅಧಿರೋಢುಂ=ಏರಲು ಅಕಲ್ಪಃ= ಅಸಮರ್ಥನಾಗಿ ತಾತಪ್ಯಮಾನೇನ=ಸಂತಾಪಗೊಂಡ ಹೃದಾ=ಮನಸ್ಸಿನಿಂದ ಆತುರೇಂದ್ರಿಯಃ=ವ್ಯಾಕುಲಗೊಂಡ ಬಾಹ್ಯೇಂದ್ರಿಯವುಳ್ಳವನಾಗಿ ಯಥಾ=ಯಾವ ರೀತಿಯಾಗಿ ಅಸುರಾಃ=ದೈತ್ಯರು ಹರಿಂ=ಶ್ರೀಹರಿಯನ್ನು (ದ್ವಿಷಂತಿ) ದ್ವೇಷಿಸುತ್ತಾರೋ ಅದರಂತೆ ದ್ವೇಷ್ಟಿ=ದ್ವೇಷಿಸುವನು. ॥೨೧॥

ಎದ್ದು ನಮಸ್ಕರಿಸಲು ಯೋಗ್ಯನಾದ ದಕ್ಷನನ್ನು ನೀವು ಗೌರವಿಸದೇ ಇದ್ದದ್ದರಿಂದ ಅವನಿಗೆ ದ್ವೇಷ ಬಂದಿರಬಹುದಲ್ಲ ? ಎಂದರೆ, ಅಧಮನಾದ ವ್ಯಕ್ತಿ ಬಂದಾಗ ಉತ್ತಮನಾದವನು ಎದ್ದು ಗೌರವಿಸುವ ಕಾರಣವಿಲ್ಲ. ಲೋಕಮರ್ಯಾದೆಗಾಗಿ (ಧರ್ಮರಕ್ಷಣೆಗಾಗಿ) ಮಾಡುವದಾದರೂ ಅಂತರ್ಯಾಮಿಗೆ ಮನಸಾ ಮಾಡಿದರೆ ಸಾಕು. ಪ್ರಕೃತ ನಾನು ಅದನ್ನು ಮಾಡಿಯೇ ಇರುವೆನು ಎಂದು ರುದ್ರದೇವರು ಹೇಳುತ್ತಾರೆ :-

**ಪ್ರತ್ಯುದ್ಗಮಪ್ರಶ್ರಯಣಾಭಿವಾದನಂ**
**ವಿಧೀಯತೇ ಸಾಧು ಮಿಥಃ ಸುಮಧ್ಯಮೇ ।**
**ಪ್ರಾಜ್ಞೈಃ ಪರಸ್ಮೈ ಪುರುಷಾಯ ಚೇತಸಾ**
**ಗುಹಾಶಯಾಯೈವ ನ ದೇಹಮಾನಿನೇ ॥೨೨॥**

ಹೇ ಸುಮಧ್ಯಮೇ=ಸತಿಯೇ ! ತನಗೆ ಸಮಾನರಾದ ಅಥವಾ ನೀಚರಾದ ವೈಷ್ಣವರು ಬಂದಾಗ ಪ್ರಾಜ್ಞೈಃ=ತತ್ವಜ್ಞಾನಿಗಳಾದ ಪುರುಷರಿಂದ ಪ್ರತ್ಯುದ್ಗಮಪ್ರಶ್ರಯಣಾಭಿವಾದನಂ= ಎದ್ದುನಿಂತು ಗೌರವಿಸುವುದು, ನಮಸ್ಕರಿಸುವುದು ಇವೇ ಮೊದಲಾದವುಗಳು ಗುಹಾಶಯಾಯ=ಜೀವರ ಹೃದಯಗುಹೆಯಲ್ಲಿ ವಾಸಿಸಿರುವ (ಜೀವರಲ್ಲಿ ಅಂತರ್ಯಾಮಿ-ಯಾದ), ಪರಸ್ಮೈ ಪುರುಷಾಯ ಏವ=ಸರ್ವೋತ್ತಮನಾದ ಶ್ರೀಹರಿಗೆ ಮಾತ್ರ(ಶ್ರೀಹರಿಯ ಉದ್ದೇಶದಿಂದಲೇ)ಸಾಧುಃ=ಚೆನ್ನಾಗಿ ಮನಸಾ=ಮನಸ್ಸಿನಿಂದ ವಿಧೀಯತೇ= ಮಾಡಲ್ಪಡುವದು. ಹೊರತು ನ ದೇಹಮಾನಿನೇ=ದೇಹಾಭಿಮಾನಿಯಾದ ಜೀವನಿಗೆ ಅಲ್ಲ.

ಆ ಕಾರಣ ದಕ್ಷನು ನನಗೆ ಮಾವನಾದರೂ ಸ್ವರೂಪಯೋಗ್ಯತೆಯಲ್ಲಿ ನನಗಿಂತ ಅಧಮನಾಗಿದ್ದಾನೆ. ಆದ್ದರಿಂದ ಅವನು ಬಂದಾಗ ಲೋಕಮರ್ಯಾದೆಗಾಗಿ ಅವನ ಅಂತರ್ಯಾಮಿಗೆ ಮನಸಾ ನಮನಾದಿಗಳನ್ನು ಮಾಡಬೇಕಿತ್ತು. ಆ ಕಾರ್ಯವನ್ನು ನಾನು ಮಾಡಿರುವೆನು. ಆ ಕಾರಣ ನನ್ನದೇನೂ ದೋಷವಿಲ್ಲ ಎಂದು ಭಾವ॥೨೨॥

ಮರ್ಯಾದೆಗಾಗಿಯಾದರೂ ದೈಹಿಕವಾಗಿಯೇ ಏಕೆ ನಮಸ್ಕಾರಾದಿಗಳನ್ನು ಮಾಡಲಿಲ್ಲ ? ಎಂದರೆ, ನನ್ನ ಗುರುಗಳಾದ ಚತುರ್ಮುಖಬ್ರಹ್ಮದೇವರೆಂಬ ಉತ್ತಮಾಧಿಷ್ಠಾನ ಎದುರಿಗೆ ಇರುವಾಗ, ಅಲ್ಲಿರುವ ವಾಸುದೇವನಾಮಕಭಗವಂತನ ಧ್ಯಾನದಲ್ಲಿ ಮಗ್ನನಾದ ನನಗೆ, ಅವರ ಎದುರಿನಲ್ಲಿ ನೀಚಾಧಿಷ್ಠಾನದಲ್ಲಿರುವ (ದಕ್ಷನಲ್ಲಿರುವ) ಶ್ರೀಹರಿಯನ್ನು ಕುರಿತು ದೈಹಿಕವಾದ ನಮನಾದಿಗಳು ಉಚಿತವಲ್ಲ. ಮಾನಸಿಕವಾದ ನಮನಾದಿಗಳೇ ಯೋಗ್ಯವಾದ ಕಾರಣ ಆ ಸಮಯದಲ್ಲಿ ನಾನು ಅದನ್ನೇ ಮಾಡಿದೆ ಎಂದು ರುದ್ರದೇವರು ಹೇಳುವರು -

**ಸತ್ತ್ವಂ ವಿಶುದ್ಧಂ ವಸುದೇವಶಬ್ದಿತಂ**
**ಯದೀಯತೇ ತತ್ರ ಪುಮಾನಪಾವೃತಃ ।**
**ಸತ್ತ್ವಂ ಚ ಯಸ್ಮಿನ್ ಭಗವಾನ್ ವಾಸುದೇವೋ**
**ತ್ವಧೋಕ್ಷಜೋ ಮೇ ಮನಸಾ ವಿಧೀಯತೇ ॥೨೩॥**

ವಿಶುದ್ಧಂ ಸತ್ವಂ=ಬ್ರಹ್ಮದೇವರ ಶರೀರವು ವಸುದೇವಶಬ್ದಿತಂ=ವಸುಗಳಿಂದ, ದೇವತೆಗಳಿಂದ, ಜ್ಞಾನಿಗಳಿಂದ, ಅಥವಾ ಆಂತರದ್ರವ್ಯಗಳಿಂದ ಪ್ರಕಾಶಿಸಲ್ಪಡುವುದರಿಂದ

''ವಸುದೇವ'' ಎಂದು ಕರೆಸಿಕೊಳ್ಳುವದು. ತತ್ರ=ಆ ಬ್ರಹ್ಮಶರೀರದಲ್ಲಿ ಪುಮಾನ್=ಪರಮಪುರುಷನಾದ ಭಗವಾನ್=ಭಗವಂತನು ಯತ್=ಯಾವ ಕಾರಣ ಅಪಾವೃತಃ=ಮಾಯಾರೂಪವಾದ ಆವರಣರಹಿತನಾಗಿ ಈಯತೇ=ತಿಳಿಯಲ್ಪಡುವನೋ ಆದ್ದರಿಂದ ಭಗವಂತನು ವಾಸುದೇವಃ=ವಾಸುದೇವಶಬ್ದವಾಚ್ಯನು. ವಸುದೇವನೆನಿಸುವ ಬ್ರಹ್ಮನಲ್ಲಿ ತಿಳಿಯುವದರಿಂದ ಶ್ರೀಹರಿ ವಾಸುದೇವ ಎನಿಸಿದ್ದಾನೆ ಎಂದು ಹೇಳಿದಂತಾಯಿತು. ಚ=ಮತ್ತು ಯಸ್ಮಿನ್=ಯಾವ ಶ್ರೀಹರಿಯಲ್ಲಿ ಸತ್ವಂ=ವಸುದೇವಶಬ್ದವಾಚ್ಯವಾದ ಬ್ರಹ್ಮಶರೀರವು ಇದೆಯೋ ಅವನು ವಾಸುದೇವನು ಹೀಗೂ ಅರ್ಥ. ಸಃ=ಅಂತಹ ಅಧೋಕ್ಷಜಃ=ವಿಷ್ಣುವಿನ ಉಳಿದ ರೂಪಗಳಂತೆ ಬ್ರಹ್ಮಶರೀರ ಬಿಟ್ಟು ಬೇರೆಡೆ ದೃಶ್ಯವಾಗದ (ಬ್ರಹ್ಮಶರೀರದಲ್ಲಿ ಮಾತ್ರ ದೃಶ್ಯವಾಗುವ) ಕಾರಣ, ಅಥವಾ ಬ್ರಹ್ಮಶರೀರದಲ್ಲಿ ಆಶ್ರಯಿಸಿರುವ ಕಾರಣ ''ವಾಸುದೇವ'' ಶಬ್ದವಾಚ್ಯನಾದ ಭಗವಂತನು ಮೇ=ನನ್ನಿಂದ ಮನಸಾ ವಿಧೀಯತೇ=ಮನಸ್ಸಿನಿಂದ ವಿಶೇಷವಾಗಿ ಧ್ಯಾನಿಸಲ್ಪಡುವನು.

**ಭಾಗವತ ತಾತ್ಪರ್ಯ :-**

ಇಲ್ಲಿ ''ವಿಧೀಯತೇ'' ಎಂಬುದಕ್ಕೆ (ಕ್ರಿಯತೇ) ಮಾಡಲ್ಪಡುವದು ಎಂದು ಅನ್ಯಥಾಪ್ರತೀತಿ ಬರುತ್ತದೆ. ಆ ಕಾರಣ ಆಚಾರ್ಯರು ಅದನ್ನು ವ್ಯಾಖ್ಯಾನಿಸುವರು :-

**ವಿಶೇಷೇಣ ಧೀಯತೇ ಚಿಂತ್ಯತೇ ।**

ವಿಧೀಯತೇ ಎಂದರೆ (ವಿಶೇಷೇಣ ಧೀಯತೇ ಚಿಂತ್ಯತೇ) ವಿಶೇಷವಾಗಿ ಧ್ಯಾನಿಸಲ್ಪಡುವನು ಎಂದರ್ಥ.

ವಿಷ್ಣುವು ರುದ್ರನಿಂದ ಧ್ಯೇಯ ಎನ್ನುವದಕ್ಕೆ ಪ್ರಮಾಣ ಹೇಳುವರು -

**ರುದ್ರೇಣ ಧೀಯತೇ ವಿಷ್ಣುಃ ವಿಷ್ಣೋರ್ಧ್ಯೇಯೋ ನ ಕಶ್ಚನ । ಇತಿ ಬ್ರಹ್ಮವೈವರ್ತೇ ।**

ವಿಷ್ಣುವು ರುದ್ರನಿಂದ ಧ್ಯಾನಿಸಲ್ಪಡುತ್ತಾನೆ. (ವಿಷ್ಣುವಿಗೆ ಧ್ಯೇಯರು ಯಾರೂ ಇಲ್ಲ) ವಿಷ್ಣುವು ಯಾರನ್ನೂ ಧ್ಯಾನಿಸುವುದಿಲ್ಲ ಎಂದು ಬ್ರಹ್ಮವೈವರ್ತದಲ್ಲಿದೆ.

ಮನಸ್ಸಿನಿಂದ ಧಾರಣ ಮಾಡುವದು ಎಂದರೆ ಚಿಂತನವೇ ಎಂಬ ಅಭಿಪ್ರಾಯದಿಂದ ''ಚಿಂತ್ಯತೇ'' ಎಂದು ವ್ಯಾಖ್ಯಾನಿಸಿರುವರು. ।।೨೩।।

ನನ್ನ ತಂದೆಯನ್ನು ನಾನು ನೋಡದೇ ಇರಲು ಹೇಗೆ ಸಾಧ್ಯ ? ಎಂದರೆ, ನಾನು ನಿನ್ನ ಗುರುಸ್ಥಾನದಲ್ಲಿದ್ದೇನೆ. ನನ್ನನ್ನು ದ್ವೇಷಿಸುವ ನಿನ್ನ ತಂದೆಯು ಗುರುದ್ವೇಷಿಯಾಗಿದ್ದಾನೆ. ಆದ್ದರಿಂದ ಗುರುದ್ವೇಷಿಯನ್ನು ನೋಡುವದು ನಿನಗೆ ಉಚಿತವಲ್ಲವೆಂದು ರುದ್ರದೇವರು ಹೇಳುವರು -

**ತ್ವಯಾ ನಿರೀಕ್ಷ್ಯೋ ನ ಪಿತಾऽಪಿ ದೇಹಕೃದ್**
**ದಕ್ಷೋ ಮಮ ದ್ವಿಟ್ ತದನುವ್ರತಾಶ್ಚ ಯೇ ।**
**ಯೋ ವಿಶ್ವಸೃಗ್ಯಜ್ಞಗತಂ ವರೋರು ಮಾ-**
**ಮನಾಗಸಂ ದುರ್ವಚಸಾऽಕರೋತ್ ತಿರಃ ॥೨೪॥**

ಹೇ ವರೋರು=ಸತಿಯೇ ! ಯಃ=ಯಾವ ದಕ್ಷನು ವಿಶ್ವಸೃಗ್ಯಜ್ಞಗತಂ=ಜಗತ್ಸ್ರಷ್ಟ್ರುಗಳಾದ ಋಷಿಗಳ ಯಜ್ಞದಲ್ಲಿ ಭಾಗವಹಿಸಿದ ಅನಾಗಸಂ=ನಿರಪರಾಧಿಯಾದ ಮಾಂ=ನನ್ನನ್ನು ದುರ್ವಚಸಾ=ದುಷ್ಟಮಾತುಗಳಿಂದ ತಿರಃ ಅಕರೋತ್=ತಿರಸ್ಕಾರ ಮಾಡಿದನೋ ಅಂತಹ ಮಮ ದ್ವಿಟ್=ನನ್ನ ದ್ವೇಷಿಯಾದ ದೇಹಕೃತ್ ಪಿತಾऽಪಿ=ಜನ್ಮವಿತ್ತ ನಿನ್ನ ತಂದೆಯಾದರೂ ನ ನಿರೀಕ್ಷ್ಯಃ=ನೋಡಲು ಯೋಗ್ಯನಲ್ಲ ಮತ್ತು ಯೇ=ಯಾರು ತದನುವ್ರತಾಃ=ಅವನನ್ನು ಅನುಸರಿಸುವರೋ ತೇ ಅಪಿ=ಅವರೂ ಸಹ ನ ನಿರೀಕ್ಷ್ಯಾಃ=ನೋಡಲು ಯೋಗ್ಯರಲ್ಲ. ತಾಯಿ-ಅಕ್ಕ-ತಂಗಿಯರೂ ನೊಡಲು ಅರ್ಹರಲ್ಲ ಎಂದಂತಾಯಿತು. ॥೨೪॥

**ಯದಿ ವ್ರಜಿಷ್ಯಸ್ಯತಿಹಾಯ ಮದ್ವಚೋ**
**ಭದ್ರಂ ಭವತ್ಯಾ ನ ತತೋ ಭವಿಷ್ಯತಿ ।**
**ಸಂಭಾವಿತಸ್ಯ ಸ್ವಜನಾತ್ ಪರಾಭವೋ**
**ಯದಾ ಸ ಸದ್ಯೋ ಮರಣಾಯ ಕಲ್ಪತೇ ॥೨೫॥**

॥ ಇತಿ ಶ್ರೀಮದ್ಭಾಗವತೇ ಚತುರ್ಥಸ್ಕಂಧೇ ತೃತೀಯೋऽಧ್ಯಾಯಃ ॥

ಯದಿ=ಒಂದುವೇಳೆ ಮದ್ವಚಃ=ನನ್ನ ಮಾತನ್ನು ಅತಿಹಾಯ=ಮೀರಿ ವ್ರಜಷ್ಯಸಿ=ಹೋಗುವಿಯಾದರೆ ತತಃ=ಅವರಿಂದ ಭವತ್ಯಾಃ=ನಿನಗೆ ಭದ್ರಂ=ಮಂಗಲವು ನ ಭವಿಷ್ಯತಿ=ಆಗಲಾರದು. ಯದಾ=ಯಾವಾಗ ಸಂಭಾವಿತಸ್ಯ=ಸಾತ್ವಿಕನಾದವನಿಗೆ ಸ್ವಜನಾತ್=ಸ್ವಕೀಯರಿಂದ ಪರಾಭವಃ=ಅವಮಾನವಾಗುವದೋ ಸಃ=ಅದು ಸದ್ಯಃ=ತಕ್ಷಣ ಮರಣಾಯ ಕಲ್ಪತೇ=ಸಾವಿಗೆ ಕಾರಣವಾಗುವದು. ॥೨೫॥

॥ ಇಲ್ಲಿಗೆ ಮೂರನೇ ಅಧ್ಯಾಯವು ಮುಗಿಯಿತು ॥

## ಅಥ ಚತುರ್ಥೋಽಧ್ಯಾಯಃ

**ಮೈತ್ರೇಯ ಉವಾಚ -**

**ಏತಾವದುಕ್ತ್ವಾ ವಿರರಾಮ ಶಂಕರಃ**
**ಪತ್ನ್ಯಂಗನಾಶಂ ಹ್ಯುಭಯತ್ರ ಚಿಂತಯನ್ ।**
**ಸುಹೃದ್ದಿದೃಕ್ಷುಃ ಪರಿಶಂಕಿತಾ ಭವಾನ್ನಿ**
**ಷ್ಕ್ರಾಮತೀ ನಿರ್ವಿಶತೀ ದ್ವಿಧಾ ಚ ಸಾ ॥೧॥**

ಶಂಕರಃ=ರುದ್ರದೇವರು ಉಭಯತ್ರ=ಹೋಗಲು ಅಪ್ಪಣೆಯನ್ನಿತ್ತ ಪಕ್ಷದಲ್ಲಿ ಹಾಗೂ ಬಲಾತ್ಕಾರದಿಂದ ಹೋಗಬೇಡವೆಂದು ತಡೆದ ಪಕ್ಷದಲ್ಲಿ (ಎರಡೂ ಪಕ್ಷಗಳಲ್ಲಿಯೂ) ಪತ್ನ್ಯಂಗನಾಶಂ ಚಿಂತಯನ್=ಹೆಂಡತಿಯ ದೇಹನಾಶವಾಗುವದೆಂದು ಆಲೋಚಿಸಿ ಏತಾವದುಕ್ತ್ವಾ=ಹಿಂದಿನ ಅಧ್ಯಾಯದಲ್ಲಿ ಹೇಳಿದಷ್ಟನ್ನು ಹೇಳಿ ವಿರರಾಮ=ಸುಮ್ಮನಾದರು. ಸಾ ಚ=ಸತೀದೇವಿಯಾದರೂ ಸುಹೃದ್ದಿದೃಕ್ಷುಃ=ಬಂಧುಗಳನ್ನು ನೋಡುವ ಅಪೇಕ್ಷೆಯುಳ್ಳವಳಾಗಿ ನಿಷ್ಕ್ರಾಮತೀ=ಹೊರಗೆ ಹೋಗುವಳು. ಭವಾತ್=ರುದ್ರದೇವರಿಂದ ಪರಿಶಂಕಿತಾ=ಪತಿಯ ಮಾತನ್ನು ಮೀರಿ ಹೋದರೆ ಏನೇನಾಗುವದೋ ? ಎಂದು ಹೆದರಿದವಳಾಗಿ ನಿರ್ವಿಶತೀ=ಮನೆಯನ್ನು ಪ್ರವೇಶಿಸುವಳು. ಹೀಗೆ ಸಾ ಚ=ಸತೀದೇವಿಯಾದರೂ ದ್ವಿಧಾ ಆಸ=ಎರಡು ಮನಸ್ಸಿನವಳಾದಳು.

**ಗೂಢಭಾವ :-**

ದಕ್ಷಯಜ್ಞಕ್ಕೆ ಹೋದರೆ ಅವಮಾನಿತಳಾಗಿ ದೇಹ ಬಿಡುವದು ನಿಶ್ಚಯವಿದ್ದಮೇಲೆ ಬೇಡವೆಂದು ತಡೆಯಬಹುದಿತ್ತಲ್ಲ ? ಎಂದರೆ, ಆದಕ್ಕೆ ''ಉಭಯತ್ರ ಪತ್ನ್ಯಂಗನಾಶಂ'' ಎಂದಿರುವರು. ಅಂದರೆ :- ಹೆಂಡತಿಯನ್ನು ತಡೆದರೆ ಅವಳ ಆಶೆಗೆ ವಿಘ್ನವಾಗಿ ಇಲ್ಲಿಯೇ ಅವಳ ಮರಣವಾದರೆ, ದಕ್ಷನು ''ನನ್ನ ಮೇಲಿನ ದ್ವೇಷದಿಂದ ನನ್ನ ಮಗಳನ್ನು ತಡೆದು

ಸಾಯಿಸಿದ್ದಾನೆ' ಎಂದು ತನಗೆ ಅಪಕೀರ್ತಿಯನ್ನು ಕೊಡುವನು. ಅವನ ಅಭಿಮಾನವೂ ಕಡಿಮೆಯಾಗದು. ಅಲ್ಲಿ ಹೋಗಿ ದಕ್ಷನು ಮಾಡಿದ ಅವಮಾನದಿಂದ ಹೆಂಡತಿಯು ದೇಹತ್ಯಾಗ ಮಾಡಿದರೆ, ಅದರಿಂದ ಅವನಿಗೇ ಅಪಕೀರ್ತಿ. ತನಗೆ ಇಲ್ಲ ಎಂಬ ಕಾರಣದಿಂದ ರುದ್ರದೇವರು ಉದಾಸೀನರಾಗಿ ಉಳಿದರು ಎಂದು ಭಾವ. ||೧||

**ಸುಹೃದ್ದಿದೃಕ್ಷಾಪ್ರತಿಘಾತದುರ್ಮನಾಃ**
**ಸ್ನೇಹಾದ್ರುದಂತ್ಯಶ್ರುಕಲಾತಿವಿಹ್ವಲಾ ।**
**ಭವಂ ಭವಾನ್ಯಪ್ರತಿಪೂರುಷಂ ರುಷಾ**
**ಪ್ರಧಕ್ಷತೀವೈಕ್ಷತ ಜಾತವೇಪಥುಃ** ||೨||

ಸುಹೃದ್ದಿದೃಕ್ಷಾಪ್ರತಿಘಾತದುರ್ಮನಾಃ=ಬಂಧುಗಳನ್ನು ನೋಡುವುದಕ್ಕೆ ಉಂಟಾದ ನಿವಾರಣೆಯಿಂದ ದುಃಖಿತವಾದ ಮನಸ್ಸುಳ್ಳವಳಾಗಿ ಸ್ನೇಹಾತ್=ಬಂಧುಗಳ ಮೇಲಿನ ಸ್ನೇಹದಿಂದ ರುದಂತೀ=ಅಳುತ್ತಿರುವ ಅಶ್ರುಕಲಾತಿವಿಹ್ವಲಾ=ಕಣ್ಣೀರಿನ ಬಿಂದುಗಳಿಂದ ವ್ಯಾಕುಲಳಾದ ಭವಾನೀ=ಸತೀದೇವಿಯು ಜಾತವೇಪಥುಃ=ಮೈಯಲ್ಲಿ ನಡುಕ ಹುಟ್ಟಿದವಳಾಗಿ ಅಪ್ರತಿಪೂರುಷಂ=ಇಂದ್ರಾದಿಗಳಲ್ಲಿ ತನಗೆ ಸಮಾನಪುರುಷರಿಲ್ಲದ ಭವಂ=ರುದ್ರದೇವರನ್ನು ರುಷಾ=ಸಿಟ್ಟಿನಿಂದ ಪ್ರಧಕ್ಷತೀ ಇವ=ಸುಟ್ಟು ಭಸ್ಮ ಮಾಡುವವಳಂತೆ ಐಕ್ಷತ=ನೋಡಿದಳು.

ಇದರಿಂದ ಸ್ತ್ರೀಯರಿಗೆ ಇರುವ ಪುರುಷವಶೀಕರಣಸಾಧನಗಳಾದ ಸಿಟ್ಟು ಮತ್ತು ಅಳುವದು ಇವುಗಳಿಂದ ಶಿವನು ಹೋಗಲು ಅನುಮತಿ ನೀಡಬಹುದು ಎಂದು ಅವಳ ಭಾವ ಸೂಚಿತವಾಗುವದು. ||೨||

**ತತೋ ವಿನಿಃಶ್ವಸ್ಯ ಸತೀ ವಿಹಾಯ ತಂ**
**ಶೋಕೇನ ರೋಷೇಣ ಚ ದೂಯತಾ ಹೃದಾ ।**
**ಪಿತ್ರೋರಗಾತ್ ಸ್ತ್ರೈಣವಿಮೂಢಧೀರ್ಗೃಹಾನ್**
**ಪ್ರೇಮ್ಣಾऽऽತ್ಮನೋ ಯೋऽರ್ಧಮದಾಸತ ಪ್ರಿಯಃ** ||೩||

ತತಃ=ಅನಂತರ ಸತೀ=ಸತೀದೇವಿಯು ವಿನಿಃಶ್ವಸ್ಯ=ನಿಟ್ಟುಸಿರು ಬಿಟ್ಟು ಶೋಕೇನ=ದುಃಖದಿಂದ ಚ=ಮತ್ತು ರೋಷೇಣ=ಸಿಟ್ಟಿನಿಂದಲೂ ದೂಯತಾ=ದುಃಖಿತವಾದ ಹೃದಾ=ಮನಸ್ಸಿನಿಂದ ಸ್ತ್ರೈಣವಿಮೂಢಧೀಃ=ಸ್ತ್ರೀಸ್ವಭಾವದಿಂದ ಮೋಹಿತವಾದ ಬುದ್ಧಿಯುಳ್ಳವಳಾಗಿ, ಯಃ ಪ್ರಿಯಃ=ಯಾವ ಪತಿಯು ಪ್ರೇಮ್ಣಾ=ಪ್ರೀತಿಯಿಂದ ಆತ್ಮನಃ=ತನ್ನ ಆತ್ಮನಃ=ದೇಹದ ಅರ್ಧಂ=ಅರ್ಧಭಾಗವನ್ನು ಅದಾಸತ=ಇವಳಿಗೆ ಇತ್ತನೋ ತಂ=ಅಂತಹ ಪತಿಯನ್ನು ವಿಹಾಯ=ಬಿಟ್ಟು ಪಿತ್ರೋಃ ಗೃಹಾನ್ ಅಗಾತ್=ತಂದೆ-ತಾಯಿಗಳ ಮನೆಗೆ ಹೋದಳು.

**ತಾಮನ್ವಗಚ್ಛನ್ ದ್ರುತವಿಕ್ರಮಾಂ ಸತೀ-**
**ಮೇಕಾಂ ತ್ರಿನೇತ್ರಾನುಚರಾಃ ಸಹಸ್ರಶಃ ।**
**ಸಪಾರ್ಷದಮುಖ್ಯಾ ಮಣಿಮನ್ಮದಾದಯಃ**
**ಪುರೋ ವೃಷೇಂದ್ರಾಸ್ತರಸಾऽऽಗತವ್ಯಥಾಃ ॥೪॥**

ಸಪಾರ್ಷದಮುಖ್ಯಾಃ=ಮುಖ್ಯಸೇವಕರಿಂದ ಸಹಿತರಾದ ಪುರೋವೃಷೇಂದ್ರಾಃ= ನಂದಿಯನ್ನು ಮುಂದುಮಾಡಿಕೊಂಡ ಮಣಿಮನ್ಮದಾದಯಃ=ಮಣಿಮಾನ್ ಮತ್ತು ಮದ ಮುಂತಾದ, ಸಹಸ್ರಶಃ=ಸಾವಿರಾರು ಸಂಖ್ಯೆಯಲ್ಲಿರುವ ತ್ರಿನೇತ್ರಾನುಚರಾಃ=ರುದ್ರನ ಸೇವಕರು ಆಗತವ್ಯಥಾಃ=ರುದ್ರದೇವರನ್ನು ಮೀರಿ ಹೊರಟಿದ್ದರಿಂದ ಬಂದ ಭಯವುಳ್ಳವರಾಗಿ ಅಥವಾ ಗತವ್ಯಥಾಃ=ನಿರ್ಭಯರಾಗಿ ದ್ರುತವಿಕ್ರಮಾಂ=ಶೀಘ್ರವಾಗಿ ನಡೆಯುತ್ತಿರುವ ಏಕಾಂ ತಾಂ ಸತೀಂ=ಒಬ್ಬಳೇ ಆಗಿರುವ ಆ ಸತೀದೇವಿಯನ್ನು ತರಸಾ=ಬೇಗನೇ ಅನ್ವಗಚ್ಛನ್=ಹಿಂಬಾಲಿಸಿದರು. ॥೪॥

**ತಾಂ ಸಾರಿಕಾಮಂಡುಕದರ್ಪಣಾಂಬುಜೈಃ**
**ಶ್ವೇತಾತಪತ್ರವ್ಯಜನಸ್ರಗಾದಿಭಿಃ ।**
**ಗೀತಾಯನೈರ್ದುಂದುಭಿಶಂಖವೇಣುಭಿ-**
**ರ್ವೃಷೇಂದ್ರಮಾರೋಪ್ಯ *ವಿಲಂಬಿತಾ ಯಯುಃ ॥೫॥**

ತಾಂ=ಸತೀದೇವಿಯನ್ನು ವೃಷೇಂದ್ರಂ ಆರೋಪ್ಯ=ನಂದೀಶ್ವರನ ಮೇಲೆ ಕೂಡಿಸಿ ಸಾರಿಕಾಮಂಡುಕದರ್ಪಣಾಂಬುಜೈಃ=(ಸಾರಿಕಾ) ಆಟದ ಗಿಳಿ, (ಮಂಡುಕ) ಜಲಕ್ರೀಡೆಯ ವಾದ್ಯ, (ದರ್ಪಣ) ಕನ್ನಡಿ, (ಅಂಬುಜ) ಕಮಲ ಇವುಗಳಿಂದ ಶ್ವೇತಾತಪತ್ರವ್ಯಜನ-ಸ್ರಗಾದಿಭಿಃ=(ಶ್ವೇತಾತಪತ್ರ) ಶ್ವೇತಚ್ಛತ್ರ, (ವ್ಯಜನ) ಬೀಸಣಿಕೆ, (ಸ್ರಕ್) ಮಾಲೆ ಇವುಗಳೇ ಮುಂತಾದವುಗಳಿಂದ ಗೀತಾಯನೈಃ=ಗಾನಕ್ಕೆ ಆಶ್ರಯಗಳಾದ ದುಂದುಭಿಶಂಖವೇಣುಭಿಃ= ನಗಾರಿ (ತಬಲ), ಶಂಖ, ಕೊಳಲುಗಳಿಂದಲೂ ಸಹಿತರಾಗಿ ವಿಲಂಬಿತಾಃ=ನಿಧಾನವಾಗಿ ಯಯುಃ=ಹೋದರು. ಒಬ್ಬಳೇ ಹೋಗುವದು ಅವಮಾನವೆಂದು ರಾಜಠೀವಿಯಿಂದ ಕರದೊಯ್ದರು ಎಂದು ಭಾವ.

*ವಿಟಂಕಿತಾಃ=ಎಂಬ ಪಾಠವಿದ್ದಲ್ಲಿ ಅಲಂಕೃತರಾಗಿ ಎಂದರ್ಥ. ॥೫॥

**ಆಬ್ರಹ್ಮಘೋಷೋರ್ಜಿತಯಜ್ಞವೈಶಸಂ**
**ವಿಪ್ರರ್ಷಿಜುಷ್ಟಂ ವಿಬುಧೈಶ್ಚ ಸರ್ವಶಃ ।**

ಸಾಯಿಸಿದ್ದಾನೆ' ಎಂದು ತನಗೆ ಅಪಕೀರ್ತಿಯನ್ನು ಕೊಡುವನು. ಅವನ ಅಭಿಮಾನವೂ ಕಡಿಮೆಯಾಗದು. ಅಲ್ಲಿ ಹೋಗಿ ದಕ್ಷನು ಮಾಡಿದ ಅವಮಾನದಿಂದ ಹೆಂಡತಿಯು ದೇಹತ್ಯಾಗ ಮಾಡಿದರೆ, ಅದರಿಂದ ಅವನಿಗೇ ಅಪಕೀರ್ತಿ. ತನಗೆ ಇಲ್ಲ ಎಂಬ ಕಾರಣದಿಂದ ರುದ್ರದೇವರು ಉದಾಸೀನರಾಗಿ ಉಳಿದರು ಎಂದು ಭಾವ. ।।೧।।

**ಸುಹೃದ್ದಿದೃಕ್ಷಾಪ್ರತಿಘಾತದುರ್ಮನಾಃ**
**ಸ್ನೇಹಾದ್ರುದಂತ್ಯಶ್ರುಕಲಾತಿವಿಹ್ವಲಾ ।**
**ಭವಂ ಭವಾನ್ಯಪ್ರತಿಪೂರುಷಂ ರುಷಾ**
**ಪ್ರಧಕ್ಷತೀವೈಕ್ಷತ ಜಾತವೇಪಥುಃ ।।೨।।**

ಸುಹೃದ್ದಿದೃಕ್ಷಾಪ್ರತಿಘಾತದುರ್ಮನಾಃ=ಬಂಧುಗಳನ್ನು ನೋಡುವುದಕ್ಕೆ ಉಂಟಾದ ನಿವಾರಣೆಯಿಂದ ದುಃಖಿತವಾದ ಮನಸ್ಸುಳ್ಳವಳಾಗಿ ಸ್ನೇಹಾತ್=ಬಂಧುಗಳ ಮೇಲಿನ ಸ್ನೇಹದಿಂದ ರುದಂತೀ=ಅಳುತ್ತಿರುವ ಅಶ್ರುಕಲಾತಿವಿಹ್ವಲಾ=ಕಣ್ಣೀರಿನ ಬಿಂದುಗಳಿಂದ ವ್ಯಾಕುಲಳಾದ ಭವಾನೀ=ಸತೀದೇವಿಯು ಜಾತವೇಪಥುಃ=ಮೈಯಲ್ಲಿ ನಡುಕ ಹುಟ್ಟಿದವಳಾಗಿ ಅಪ್ರತಿಪೂರುಷಂ=ಇಂದ್ರಾದಿಗಳಲ್ಲಿ ತನಗೆ ಸಮಾನಪುರುಷರಿಲ್ಲದ ಭವಂ=ರುದ್ರದೇವರನ್ನು ರುಷಾ=ಸಿಟ್ಟಿನಿಂದ ಪ್ರಧಕ್ಷತೀ ಇವ=ಸುಟ್ಟು ಭಸ್ಮ ಮಾಡುವವಳಂತೆ ಐಕ್ಷತ=ನೋಡಿದಳು.

ಇದರಿಂದ ಸ್ತ್ರೀಯರಿಗೆ ಇರುವ ಪುರುಷವಶೀಕರಣಸಾಧನಗಳಾದ ಸಿಟ್ಟು ಮತ್ತು ಅಳುವದು ಇವುಗಳಿಂದ ಶಿವನು ಹೋಗಲು ಅನುಮತಿ ನೀಡಬಹುದು ಎಂದು ಅವಳ ಭಾವ ಸೂಚಿತವಾಗುವದು. ।।೨।।

**ತತೋ ವಿನಿಃಶ್ವಸ್ಯ ಸತೀ ವಿಹಾಯ ತಂ**
**ಶೋಕೇನ ರೋಷೇಣ ಚ ದೂಯತಾ ಹೃದಾ ।**
**ಪಿತ್ರೋರಗಾತ್ ಸ್ತ್ರೈಣವಿಮೂಢಧೀರ್ಗೃಹಾನ್**
**ಪ್ರೇಮ್ಣಾಽಽತ್ಮನೋ ಯೋಽರ್ಧಮದಾಸತ ಪ್ರಿಯಃ ।।೩।।**

ತತಃ=ಅನಂತರ ಸತೀ=ಸತೀದೇವಿಯು ವಿನಿಃಶ್ವಸ್ಯ=ನಿಟ್ಟುಸಿರು ಬಿಟ್ಟು ಶೋಕೇನ= ದುಃಖದಿಂದ ಚ=ಮತ್ತು ರೋಷೇಣ=ಸಿಟ್ಟಿನಿಂದಲೂ ದೂಯತಾ=ದುಃಖಿತವಾದ ಹೃದಾ= ಮನಸ್ಸಿನಿಂದ ಸ್ತ್ರೈಣವಿಮೂಢಧೀಃ=ಸ್ತ್ರೀಸ್ವಭಾವದಿಂದ ಮೋಹಿತವಾದ ಬುದ್ಧಿಯುಳ್ಳವಳಾಗಿ, ಯಃ ಪ್ರಿಯಃ=ಯಾವ ಪತಿಯು ಪ್ರೇಮ್ಣಾ=ಪ್ರೀತಿಯಿಂದ ಆತ್ಮನಃ=ತನ್ನ ಆತ್ಮನಃ=ದೇಹದ ಅರ್ಧಂ=ಅರ್ಧಭಾಗವನ್ನು ಅದಾಸತ=ಇವಳಿಗೆ ಇತ್ತನೋ ತಂ=ಅಂತಹ ಪತಿಯನ್ನು ವಿಹಾಯ=ಬಿಟ್ಟು ಪಿತ್ರೋಃ ಗೃಹಾನ್ ಅಗಾತ್=ತಂದೆ-ತಾಯಿಗಳ ಮನೆಗೆ ಹೋದಳು.

**ತಾಮನ್ವಗಚ್ಛನ್ ದ್ರುತವಿಕ್ರಮಾಂ ಸತೀ-**
**ಮೇಕಾಂ ತ್ರಿನೇತ್ರಾನುಚರಾಃ ಸಹಸ್ರಶಃ ।**
**ಸಪಾರ್ಷದಮುಖ್ಯಾ ಮಣಿಮನ್ಮದಾದಯಃ**
**ಪುರೋ ವೃಷೇಂದ್ರಾಸ್ತರಸಾಽಽಗತವ್ಯಥಾಃ ॥೪॥**

ಸಪಾರ್ಷದಮುಖ್ಯಾಃ=ಮುಖ್ಯಸೇವಕರಿಂದ ಸಹಿತರಾದ ಪುರೋವೃಷೇಂದ್ರಾಃ= ನಂದಿಯನ್ನು ಮುಂದುಮಾಡಿಕೊಂಡ ಮಣಿಮನ್ಮದಾದಯಃ=ಮಣಿಮಾನ್ ಮತ್ತು ಮದ ಮುಂತಾದ, ಸಹಸ್ರಶಃ=ಸಾವಿರಾರು ಸಂಖ್ಯೆಯಲ್ಲಿರುವ ತ್ರಿನೇತ್ರಾನುಚರಾಃ=ರುದ್ರನ ಸೇವಕರು ಆಗತವ್ಯಥಾಃ=ರುದ್ರದೇವರನ್ನು ಮೀರಿ ಹೊರಟಿದ್ದರಿಂದ ಬಂದ ಭಯವುಳ್ಳವರಾಗಿ ಅಥವಾ ಗತವ್ಯಥಾಃ=ನಿರ್ಭಯರಾಗಿ ದ್ರುತವಿಕ್ರಮಾಂ=ಶೀಘ್ರವಾಗಿ ನಡೆಯುತ್ತಿರುವ ಏಕಾಂ ತಾಂ ಸತೀಂ=ಒಬ್ಬಳೇ ಆಗಿರುವ ಆ ಸತೀದೇವಿಯನ್ನು ತರಸಾ=ಬೇಗನೇ ಅನ್ವಗಚ್ಛನ್=ಹಿಂಬಾಲಿಸಿದರು. ॥೪॥

**ತಾಂ ಸಾರಿಕಾಮಂಡುಕದರ್ಪಣಾಂಬುಜೈಃ**
**ಶ್ವೇತಾತಪತ್ರವ್ಯಜನಸ್ರಗಾದಿಭಿಃ ।**
**ಗೀತಾಯನೈರ್ದುಂದುಭಿಶಂಖವೇಣುಭಿ-**
**ರ್ವೃಷೇಂದ್ರಮಾರೋಪ್ಯ * ವಿಲಂಬಿತಾ ಯಯುಃ ॥೫॥**

ತಾಂ=ಸತೀದೇವಿಯನ್ನು ವೃಷೇಂದ್ರಂ ಆರೋಪ್ಯ=ನಂದೀಶ್ವರನ ಮೇಲೆ ಕೂಡಿಸಿ ಸಾರಿಕಾಮಂಡುಕದರ್ಪಣಾಂಬುಜೈಃ=(ಸಾರಿಕಾ) ಆಟದ ಗಿಳಿ, (ಮಂಡುಕ) ಜಲಕ್ರೀಡೆಯ ವಾದ್ಯ, (ದರ್ಪಣ) ಕನ್ನಡಿ, (ಅಂಬುಜ) ಕಮಲ ಇವುಗಳಿಂದ ಶ್ವೇತಾತಪತ್ರವ್ಯಜನ-ಸ್ರಗಾದಿಭಿಃ=(ಶ್ವೇತಾತಪತ್ರ) ಶ್ವೇತಚ್ಛತ್ರ, (ವ್ಯಜನ) ಬೀಸಣಿಕೆ, (ಸ್ರಕ್) ಮಾಲೆ ಇವುಗಳೇ ಮುಂತಾದವುಗಳಿಂದ ಗೀತಾಯನೈಃ=ಗಾನಕ್ಕೆ ಆಶ್ರಯಗಳಾದ ದುಂದುಭಿಶಂಖವೇಣುಭಿಃ= ನಗಾರಿ (ತಬಲ), ಶಂಖ, ಕೊಳಲುಗಳಿಂದಲೂ ಸಹಿತರಾಗಿ ವಿಲಂಬಿತಾಃ=ನಿಧಾನವಾಗಿ ಯಯುಃ=ಹೋದರು. ಒಬ್ಬಳೇ ಹೋಗುವದು ಅವಮಾನವೆಂದು ರಾಜಶೀವಿಯಿಂದ ಕರದೊಯ್ದರು ಎಂದು ಭಾವ.

*ವಿಟಂಕಿತಾಃ=ಎಂಬ ಪಾಠವಿದ್ದಲ್ಲಿ ಅಲಂಕೃತರಾಗಿ ಎಂದರ್ಥ. ॥೫॥

**ಆಬ್ರಹ್ಮಘೋಷೋರ್ಜಿತಯಜ್ಞವೈಶಸಂ**
**ವಿಪ್ರರ್ಷಿಜುಷ್ಟಂ ವಿಬುಧೈಶ್ಚ ಸರ್ವಶಃ ।**

**ಮೃದ್ದಾರ್ವಯಃಕಾಂಚನದರ್ಭಚರ್ಮಭಿ-**
**ರ್ನಿಸೃಷ್ಟಭಾಂಡಂ ಯಜನಂ ಸಮಾವಿಶತ್ ॥೬॥**

ಆಬ್ರಹ್ಮಘೋಷೋರ್ಜಿತಯಜ್ಞವೈಶಸಂ=(ಆ) ಸುತ್ತಲೂ (ಬ್ರಹ್ಮಘೋಷೋರ್ಜಿತ) ವೇದದ ಧ್ವನಿಯಿಂದ ಕೂಡಿದ (ಯಜ್ಞವೈಶಸಂ) ಯಜ್ಞಕ್ಕಾಗಿ ಪಶುಸಂಹಾರವುಳ್ಳ ಸರ್ವಶಃ=ಎಲ್ಲಕಡೆಗೆ ವಿಬುಧೈಃ=ದೇವತೆಗಳಿಂದಲೂ ಚ=ಮತ್ತು ವಿಪ್ರರ್ಷಿಜುಷ್ಟಂ=ಬ್ರಾಹ್ಮಣರು ಮತ್ತು ಋಷಿಗಳಿಂದ ಸಂಕುಲವಾದ ಮೃದ್ದಾರ್ವಯಃಕಾಂಚನದರ್ಭಚರ್ಮಭಿಃ=(ಮೃತ್) ಮಣ್ಣು (ದಾರು) ಕಟ್ಟಿಗೆ, (ಅಯಃ) ಕಬ್ಬಿಣ, (ಕಾಂಚನ) ಬಂಗಾರ, (ದರ್ಭಚರ್ಮಭಿಃ) ದರ್ಭೆ ಮತ್ತು ಚರ್ಮಗಳಿಂದ ನಿಸೃಷ್ಟಭಾಂಡಂ=ನಿರ್ಮಿಸಲ್ಪಟ್ಟ ಪಾತ್ರೆಗಳುಳ್ಳ ಯಜನಂ=ಯಜ್ಞಮಂಟಪವನ್ನು ಸಮಾವಿಶತ್=ಪ್ರವೇಶಿದಳು. ॥೬॥

**ತಾಮಾಗತಾಂ ತತ್ರ ನ ಕಶ್ಚನಾದ್ರಿಯದ್**
**ವಿಮಾನಿತಾಂ ಯಜ್ಞಕೃತೋ ಭಯಾಜ್ಜನಃ ।**
**ಋತೇ ಸ್ವಸಾರೋ ಜನನೀಂ ಚ ಸಾದರಾಃ**
**ಪ್ರೇಮಾಶ್ರುಕಂಠ್ಯಃ ಪರಿಸಸ್ವಜುರ್ಮುದಾ ॥೭॥**

ತತ್ರ=ಆ ಯಜ್ಞಮಂಟಪದಲ್ಲಿ ಆಗತಾಂ=ಬಂದಿರುವ, ವಿಮಾನಿತಾಂ=ದಕ್ಷನಿಂದ ಅವಮಾನಿತಳಾದ ತಾಂ=ಸತೀದೇವಿಯನ್ನು, ಯಜ್ಞಕೃತಃ ಭಯಾತ್=ಯಜ್ಞ ಮಾಡುತ್ತಿರುವ ದಕ್ಷನ ಹೆದರಿಕೆಯಿಂದ ಸ್ವಸಾರಃ (ಸ್ವಸ್ರೂಃ) ಜನನೀಂ ಚ ವಿನಾ=ಅಕ್ಕಂದಿರು ಮತ್ತು ತಾಯಿಯನ್ನು ಹೊರತುಪಡಿಸಿ ಕಶ್ಚನ=ಯಾವನೊಬ್ಬನೂ ನ ಆದ್ರಿಯತ್=ಗೌರವಿಸಲಿಲ್ಲ. ಸಾದರಾಃ=ಪ್ರೀತಿಯುಳ್ಳ ಪ್ರೇಮಾಶ್ರುಕಂಠ್ಯಃ=ಪ್ರೇಮದಿಂದ ಬಂದ ಕಣ್ಣೀರಿನಿಂದ ಗದ್ಗದವಾದ ಕುತ್ತಿಗೆಯುಳ್ಳ ತಾಯಿ ಮತ್ತು ಭಗಿನಿಯರು ಮುದಾ=ಸಂತೋಷದಿಂದ ಪರಿಸಸ್ವಜುಃ= ಆಲಿಂಗಿಸಿದರು. ॥೭॥

***ಸೌಂದರ್ಯಸಂಪ್ರಶ್ನಸಮರ್ಥವಾರ್ತಯಾ**
**ಮಾತ್ರಾ ಚ ಮಾತೃಷ್ವಸೃಭಿಶ್ಚ ಸಾದರಮ್ ।**
**ದತ್ತಾಂ ಸಪರ್ಯಾಂ ವರಮಾಸನಂ ಚ ಸಾ**
**ನಾದತ್ತ ಪಿತ್ರಾಽಪ್ರತಿನಂದಿತಾ ಸತೀ ॥೮॥**

ಪಿತ್ರಾ=ತಂದೆಯಿಂದ ಅಪ್ರತಿನಂದಿತಾ=ಆದರಿಸಲ್ಪಡದ (ಅನಾದೃತಳಾದ) ಸಾ ಸತೀ=ಆ ಸತೀದೇವಿಯು ಸೌಂದರ್ಯಸಂಪ್ರಶ್ನಸಮರ್ಥವಾರ್ತಯಾ=(ಸೌಂದರ್ಯಸಂಪ್ರಶ್ನ) ಅಂಗಕುಶಲತೆಯ ಪ್ರಶ್ನೆಯಲ್ಲಿ ಅರ್ಥಾತ್ ಆರೋಗ್ಯಪ್ರಶ್ನೆಯಲ್ಲಿ (ಸಮರ್ಥ) ಯೋಗ್ಯವಾದ

(ವಾರ್ತಯಾ) ಸಹಮಾತುಗಳಿಂದ ಸಹಿತವಾಗಿ ಮಾತ್ರಾ=ತಾಯಿಯಿಂದ ಚ=ಮತ್ತು ಮಾತೃಷ್ವಸೃಭಿಃ=ತಾಯಿಯ ಅಕ್ಕ-ತಂಗಿಯರಿಂದ ಸಾದರಂ=ಪ್ರೀತಿಯಿಂದ ದತ್ತಾಂ=ಕೊಡಲ್ಪಟ್ಟ ಸಪರ್ಯಾಂ=ಪೂಜೆಯನ್ನು ಚ=ಮತ್ತು ವರಂ ಆಸನಂ=ಉತ್ಕೃಷ್ಟವಾದ ಆಸನವನ್ನು ನ ಆದತ್ತ=ಸ್ವೀಕರಿಸಲಿಲ್ಲ.

*ಸೌದರ್ಯ ಎಂಬ ಪಾಠವಿದ್ದಲ್ಲಿ ಸೋದರಿಯರು (ಅಕ್ಕ-ತಂಗಿಯರು) ಮಾಡಬೇಕಾದ ಪ್ರಶ್ನೆಯಲ್ಲಿ ಎಂದು ಅರ್ಥ. ॥೮॥

**ಅರುದ್ರಭಾಗಂ ತಮವೇಕ್ಷ್ಯ ಚಾಧ್ವರಂ**
**ಪಿತ್ರಾ ಚ ದೇವೇ ಕೃತಹೇಲನಂ ವಿಭೌ ।**
**ಅನಾದೃತಾ ಯಜ್ಞಸದಸ್ಯಧೀಶ್ವರೀ**
**ಚುಕೋಪ ಲೋಕಾನಿವ ಧಕ್ಷ್ಯತೀ ರುಷಾ ॥೯॥**

ಅರುದ್ರಭಾಗಂ=ರುದ್ರದೇವರಿಗೆ ಹವಿಸ್ಸನ್ನು ಕೊಡದಿರುವ ತಂ ಅಧ್ವರಂ=ಆ ಯಜ್ಞವನ್ನು ಚ=ಮತ್ತು ವಿಭೌ=ಸಮರ್ಥನಾದ ದೇವೇ=ರುದ್ರದೇವರಲ್ಲಿ ಪಿತ್ರಾ=ತಂದೆಯಿಂದ ಕೃತಹೇಲನಂ=ಮಾಡಲ್ಪಟ್ಟ ಅವಮಾನವನ್ನೂ ಅವೇಕ್ಷ್ಯ=ನೋಡಿ ಯಜ್ಞಸದಸಿ= ಯಜ್ಞಮಂಟಪದಲ್ಲಿ ಅನಾದೃತಾ=ತಾನೂ ಆದರಿಸಲ್ಪಡದೇ ಅಧೀಶ್ವರೀ= ಅತ್ಯಂತಸಮರ್ಥಳಾದ ಸತೀದೇವಿಯು ರುಷಾ=ಸಿಟ್ಟಿನಿಂದ ಲೋಕಾನ್=ಲೋಕಗಳನ್ನು ಧಕ್ಷ್ಯತೀ ಇವ=ಸುಟ್ಟು-ಬಿಡುವವಳಂತೆ ಚುಕೋಪ=ಕುಪಿತಳಾದಳು. ॥೯॥

ಅವಳ ಕೋಪಕ್ಕೆ ಜ್ಞಾಪಕ ಹೇಳುವರು -

**ಜಗರ್ಹ ಸಾಮರ್ಷವಿಪನ್ನಯಾ ಗಿರಾ**
**ಶಿವದ್ವಿಷಂ ಧೂಮಪಥಶ್ರಮಸ್ಮಯಮ್ ।**
**ಸ್ವತೇಜಸಾ ಭೂತಗಣಾನ್ ಸಮುತ್ಥಿತಾನ್**
**ನಿಗೃಹ್ಯ ದೇವೀ ಜಗತೋಽಭಿಶೃಣ್ವತಃ ॥೧೦॥**

ದೇವೀ ಸಾ=ಸತೀದೇವಿಯು ಸಮುತ್ಥಿತಾನ್=ದಕ್ಷನನ್ನು ಸಂಹರಿಸಲು ಎದ್ದಿರುವ ಭೂತಗಣಾನ್=ತನ್ನ ಪರಿವಾರದವರನ್ನು ಸ್ವತೇಜಸಾ=ತನ್ನ ಪ್ರಭಾವದಿಂದ ನಿಗೃಹ್ಯ=ಪಡೆದು ಜಗತಃ ಅಭಿಶೃಣ್ವತಃ=ಎಲ್ಲರೂ ಕೇಳುವಾಗಲೇ ಅಮರ್ಷವಿಪನ್ನಯಾ=ಸಿಟ್ಟಿನಿಂದ ಚೆನ್ನಾಗಿ ವ್ಯಕ್ತವಾಗದಿರುವ ಅಂದರೆ ಗದ್ಗದವಾದ ಗಿರಾ=ಮಾತಿನಿಂದ ಧೂಮಪಥಶ್ರಮಸ್ಮಯಂ= ಕರ್ಮಮಾರ್ಗದಲ್ಲಿ ಬಹಳ ಬುದ್ಧಿವಂತನೆಂಬ ಗರ್ವವುಳ್ಳ ಶಿವದ್ವಿಷಂ=ರುದ್ರದೇವರನ್ನು ದ್ವೇಷಿಸುವ ದಕ್ಷನನ್ನು ಜಗರ್ಹ=ನಿಂದಿಸಿದಳು. ॥೧೦॥

ನಿಂದೆಯನ್ನೇ ಹೇಳುವರು -

**ದೇವ್ಯುವಾಚ -**

**ನ ಯಸ್ಯ ಲೋಕೇಽಸ್ತ್ಯತಿಶಾಯನಃ ಪ್ರಿಯ-**
**ಸ್ತಥಾಽಪ್ರಿಯೋ ದೇಹಭೃತಾಂ ಪ್ರಿಯಾತ್ಮನಃ ।**
**ತಸ್ಮಿನ್ ಸಮಸ್ತಾತ್ಮನಿ ಮುಕ್ತವೈರಕೇ**
**ಋತೇ ಭವಂತಂ ಕತಮಃ ಪ್ರತೀಪಕಃ ॥೧೧॥**

ದೇಹಭೃತಾಂ=ಎಲ್ಲ ಜೀವರಿಗೆ ಪ್ರಿಯಾತ್ಮನಃ=ಅಭೀಷ್ಟರೂಪನಾದ ಯಸ್ಯ=ಯಾವ ರುದ್ರದೇವನಿಗೆ ಲೋಕೇ=ಜಗತ್ತಿನಲ್ಲಿ ಅತಿಶಾಯನಃ=ಯೋಗ್ಯತೆ ಮೀರಿ ಪ್ರಿಯಃ=ಪ್ರಿಯನು, ಅಪ್ರಿಯಃ=ಅಪ್ರಿಯನು ನ ಅಸ್ತಿ=ಇಲ್ಲವೋ ತಸ್ಮಿನ್=ಅಂತಹ ಮುಕ್ತವೈರಕೇ=ಯಾರಲ್ಲಿಯೂ ದ್ವೇಷವಿಲ್ಲದ, ಸಮಸ್ತಾತ್ಮನಿ=ಎಲ್ಲರ ಮನೋಭಿಮಾನಿಯಾದ ರುದ್ರನಲ್ಲಿ ಭವಂತಂ ಋತೇ=ನಿನ್ನನ್ನು ಬಿಟ್ಟು ಕತಮಃ=ಯಾರು ತಾನೆ ಪ್ರತೀಪಕಃ=ದ್ವೇಷ ಮಾಡುವವನಿದ್ದಾನೆ ? ನಿನ್ನನ್ನು ಬಿಟ್ಟರೆ ರುದ್ರದೇವನನ್ನು ದ್ವೇಷ ಮಾಡುವವನು ಯಾವನೂ ಇಲ್ಲವೆಂದರ್ಥ.

''ಸಮಸ್ತಾತ್ಮನಿ'' ಎಂಬ ಪದಕ್ಕೆ ಅರ್ಥಾಂತರ

ಸಮಸ್ತ=ವಿಷ್ಣು ರಮಾ, ಬ್ರಹ್ಮ-ಸರಸ್ವತೀ, ವಾಯು-ಭಾರತೀ ಈ ಆರು ಜನರನ್ನು ಬಿಟ್ಟು ಉಳಿದ ಇಂದ್ರಾದಿ ಸಮಸ್ತರಿಗೆ ಆತ್ಮನಿ=ಸ್ವಾಮಿಯಾದ ಎಂದೂ ಅರ್ಥ ತಿಳಿಯಬಹುದು. ॥೧೧॥

ಸಜ್ಜನರ ಸ್ವಭಾವಕ್ಕೆ ವಿರುದ್ಧವಾದುದರಿಂದ, ಅಸಜ್ಜನರ ಸ್ವಭಾವ ಇರುವದರಿಂದ ನೀನು ಸಾಧುವಲ್ಲ ಎಂಬ ಅಭಿಪ್ರಾಯದಿಂದ ಅವರಿಬ್ಬರ ಸ್ವಭಾವವನ್ನು ತಿಳಿಸುವಳು -

**ದೋಷಾನ್ ಪರೇಷಾಂ ಹಿ ಗುಣೇಷ್ವಸಾಧವೋ**
**ಗೃಹ್ಣಂತಿ ಕೇಚಿನ್ನ ಭವಾದೃಶಾ ದ್ವಿಜಾಃ ।**
**ಗುಣಾಂಶ್ಚ ಫಲ್ಗೂನ್ ಬಹುಲೀಕರಿಷ್ಣವೋ**
**ಮಹತ್ತಮಾಸ್ತೇಷ್ವವಿದದ್ ಭವಾನಘಮ್ ॥೧೨॥**

ಕೇಚಿತ್ ಅಸಾಧವಃ=ಕೆಲವು ದುರ್ಜನರು ಪರೇಷಾಂ=ಉತ್ತಮರಿಗೆ ಗುಣೇಷು ಸತ್ಸು=ಗುಣಗಳಿದ್ದರೂ ದೋಷಾನ್ ಗೃಹ್ಣಂತಿ=ದೋಷಗಳನ್ನೇ ಎಣಿಸುವರು. ಗುಣಗಳನ್ನು ಸ್ವೀಕರಿಸುವುದಿಲ್ಲ. ಭವಾದೃಶಾಃ=ನಿನ್ನಂತಹ ಮಹತ್ತಮಾಃ ದ್ವಿಜಾಃ=ಉತ್ತಮರಾದ ಬ್ರಾಹ್ಮಣರು ಫಲ್ಗೂನ್ ಗುಣಾನ್=ಸ್ವಲ್ಪಗುಣಗಳನ್ನೇ ಬಹುಲೀಕರಿಷ್ಣವಃ ಏವ=ದೊಡ್ಡದಾಗಿ ಮಾಡುವರು ಹೊರತು ದೋಷಗಳನ್ನು ಎಣಿಸರು. ತೇಷು (ಗಣಿತಃ)=ಅಂತಹ ಮಹತ್ತಮರಲ್ಲಿ

ಪರಿಗಣಿಸಲ್ಪಟ್ಟ ಭವಾನ್=ನೀನಾದರೂ ಅಘಂ ಅವಿದತ್=ಉತ್ತಮನಾದ ಗುಣವಂತನಾದ ಶಿವನಲ್ಲಿ ದೋಷವನ್ನು ತಿಳಿದಿರುವಿ. ಆದ್ದರಿಂದ ನೀನು ಸಜ್ಜನನಲ್ಲವೆಂದು ಭಾವ. ।।೧೨।।

**ನಾಶ್ಚರ್ಯಮೇತದ್ ಯದಸತ್ಸು ಸರ್ವದಾ**
**ಮಹದ್ವಿನಿಂದಾ ಕುಣಪಾತ್ಮವಾದಿಷು ।**
**ಸೇರ್ಷ್ಯಾ ಮಹಾಪೂರುಷಪಾದಪಾಂಸುಭಿಃ**
**ನಿರಸ್ತತೇಜಸ್ಸು ತದೇವ ಶೋಭನಮ್ ।।೧೩।।**

ಕುಣಪಾತ್ಮವಾದಿಷು=ಕರ್ಮಫಲವನ್ನು ಅನುಭವಿಸುವ ದೇಹವೇ ಜೀವನೆಂದು ತಿಳಿಯುವ (ಹೇಳುವ), ನಿಂದಿತೈಃ ಮಹಾಪೂರುಷಪಾದಪಾಂಸುಭಿಃ=ನಿಂದಿಸಲ್ಪಟ್ಟ ಮಹಾತ್ಮರ ಪಾದಧೂಳಿಗಳಿಂದ ನಿರಸ್ತತೇಜಸ್ಸು=ಕಾಂತಿಯನ್ನು (ಸಾರ್ಮರ್ಥ್ಯವನ್ನು) ಕಳೆದುಕೊಂಡ, ಅಸತ್ಸು=ದುರ್ಜನರಲ್ಲಿ ಯತ್ ಮಹದ್ವಿನಿಂದಾ ಅಸ್ತಿ=ಯಾವ ಮಹನ್ನಿಂದೆ ಇದೆ ತತ್ ನ ಆಶ್ಚರ್ಯಂ=ಅದು ಆಶ್ಚರ್ಯವೇನಲ್ಲ, ಕಿಂತು ತದೇವ ಶೋಭನಂ=ಅದೇ ಅವರಿಗೆ ಅವರ ಯೋಗ್ಯಗತಿಗೆ ಸಾಧನವು.

ಮಹಾತ್ಮರ ಪಾದಧೂಳಿಗಳೇ ನಿಂದಿಸಿದವರ ತೇಜಸ್ಸನ್ನು ಹರಣ ಮಾಡುವವು ಎಂದಮೇಲೆ ಇನ್ನು ಮಹಾಪುರುಷರ ನಿಂದೆ ಮಾಡಿದರೆ ಬಿಡುವರೆ ? ಎಂದು ಕೈಮುತ್ಯ ಸೂಚಿತವಾಗುವದು. ।।೧೩।।

ರುದ್ರದೇವನಿಗೆ ಮಹಾಪುರುಷತ್ವವನ್ನು ಸಮರ್ಥಿಸುವಳು -

**ಯದ್ ದ್ವ್ಯಕ್ಷರಂ ನಾಮ ಗಿರೇರಿತಂ ನೃಣಾಂ**
**ಸಕೃತ್ ಪ್ರಸಂಗಾದಘಮಾಶು ಹಂತಿ ತತ್ ।**
**ಪವಿತ್ರಕೀರ್ತಿಂ ತಮಲಂಘ್ಯಶಾಸನಂ**
**ಭವಾನಹೋ ದ್ವೇಷ್ಟಿ ಶಿವಂ ಶಿವೇತರಃ ।।೧೪।।**

ಯತ್=ಯಾವ ದ್ವ್ಯಕ್ಷರಂ=ಎರಡಕ್ಷರಗಳುಳ್ಳ ನಾಮ=ಶಿವ ಎಂಬ ಹೆಸರು ಇದೆಯೋ ತತ್=ಅದು ಪ್ರಸಂಗಾತ್=ಬೇರೆ ಏನನ್ನೋ ಹೇಳುವ ಸಂದರ್ಭದಲ್ಲಿ ಸಕೃತ್=ಒಂದುಸಲ ಗಿರಾ ಈರಿತಂ=ವಾಗಿಂದ್ರಿಯದಿಂದ ಉಚ್ಚರಿತವಾದದ್ದು ನೃಣಾಂ=ಜನರ ಅಘಂ=ಪಾಪವನ್ನು ಆಶು=ಶೀಘ್ರದಲ್ಲಿ ಹಂತಿ=ನಾಶಗೊಳಿಸುವದು. ಅಂತಹ ನಾಮವುಳ್ಳ ಪವಿತ್ರಕೀರ್ತಿಂ= ಮಂಗಲಕರವಾದ ಯಶಸ್ಸುಳ್ಳ ಅಲಂಘ್ಯಶಾಸನಂ=ಮೀರಲಾಗದ ಆಜ್ಞೆಯುಳ್ಳ ಶಿವಂ= ರುದ್ರದೇವನನ್ನು ಭವಾನ್=ನೀನು ದ್ವೇಷ್ಟಿ=ದ್ವೇಷ ಮಾಡಿರುವಿ. ಆ ಕಾರಣ ನೀನು ಶಿವೇತರಃ =ಅಮಂಗಲನು. ಅಹೋ=ಕಷ್ಟವು.

ಪಾಪನಾಶಕವಾದ ನಾಮದಿಂದ ವಾಚ್ಯನಾದ್ದರಿಂದ, ಮತ್ತು ಪವಿತ್ರಕೀರ್ತಿಯುಳ್ಳವನೂ ಅಲಂಘ್ಯಶಾಸನನೂ ಆದ್ದರಿಂದ ರುದ್ರದೇವನು ಮಹಾಪುರುಷನು ಎಂದು ಉಪಪಾದಿಸಿದಂತಾಯಿತು. ।।೧೪।।

**ಯತ್ಪಾದಪದ್ಮಂ ಮಹತಾಂ ಮನೋಽಲಿಭಿಃ**
**ನಿಷೇವಿತಂ ಬ್ರಹ್ಮರಸಾಸವಾರ್ಥಿಭಿಃ ।**
**ಲೋಕಸ್ಯ ಯದ್ ವರ್ಷತಿ ಚಾಶಿಷೋಽರ್ಥಿನಃ**
**ತಸ್ಮೈ ಭವಾನ್ ದ್ರುಹ್ಯತಿ ವಿಶ್ವಬಂಧವೇ ।।೧೫।।**

ಯತ್ಪಾದಪದ್ಮಂ=ಯಾವ ರುದ್ರದೇವರ ಪಾದಕಮಲವು ಬ್ರಹ್ಮರಸಾಸವಾರ್ಥಿಭಿಃ= ಬ್ರಹ್ಮಜ್ಞಾನದಿಂದ ಉಂಟಾಗುವ ಆನಂದವೆಂಬ ಮಕರಂದವನ್ನು ಅಪೇಕ್ಷಿಸುವ, ಮಹತಾಂ=ಇತರ ಯೋಗಿಗಳಿಂದ ಪೂಜ್ಯರಾದ, ರುದ್ರದೇವರ ಶಿಷ್ಯರಾದ ಸನಕಾದಿಗಳ ಮನೋಲಿಭಿಃ=ಮನಸ್ಸೆಂಬ ದುಂಬಿಗಳಿಂದ ನಿಷೇವಿತಂ=ಸೇವಿತವಾದುದೋ, ಮತ್ತು ಯತ್=ಯಾವ ಪಾದಕಮಲವು ಅರ್ಥಿನಃ=ಸಕಾಮರಾದ ಜನರಿಗೆ ಆಶಿಷಃ ವರ್ಷತಿ=ಅಭೀಷ್ಟವನ್ನು ಈಡೇರಿಸುವದೋ ತಸ್ಮೈ ವಿಶ್ವಬಂಧವೇ=ಅಂತಹ ಆ ಜಗದ್ಬಂಧುವಾದ ರುದ್ರದೇವನಿಗೆ ಭವಾನ್=ನೀನು ದ್ರುಹ್ಯತಿ=ದ್ರೋಹ ಬಗೆಯುತ್ತಿರುವಿ.

**ಭಾಗವತ ತಾತ್ಪರ್ಯ :-**

ಇಲ್ಲಿ ''ಮಹತಾಂ'' ಎಂಬುದಕ್ಕೆ ಬ್ರಹ್ಮಾದಿಗಳೆಂದು ಅರ್ಥ ತೋರುವದು. ಆದ್ದರಿಂದ ಅದನ್ನು ನಿವಾರಿಸುವವರಾಗಿ ''ಬ್ರಹ್ಮರಸಾಸರ್ವಾರ್ಥಿಭಿಃ'' ಎಂಬುದಕ್ಕೆ ಅನ್ವಯ ತಿಳಿಸುವರು -

**''ಬ್ರಹ್ಮರಸಾಸವಾರ್ಥಿಭಿಃ ಶಿಷ್ಯಾಣಾಂ ಮನೋಽಲಿಭಿಃ ।''**

ಮಹತಾಂ ಎಂಬುದರ ಅರ್ಥವೇ ಶಿಷ್ಯಾಣಾಂ ಎಂಬುದು. ರುದ್ರಶಿಷ್ಯರು ಯಾರು ? ಅವರು ಯಾರಿಗಿಂತ ದೊಡ್ಡವರು ? ಮಹತಾಂ ಎಂಬುದಕ್ಕೆ ಏಕೆ ಸಂಕೋಚ ಮಾಡಬೇಕು ? ಎಂಬ ವಿಷಯಗಳಿಗೆ ಪ್ರಮಾಣ ಹೇಳುವರು :-

**ಸನಾಕಾದಯೋ ರುದ್ರಶಿಷ್ಯಾಸ್ತೇಷಾಮನ್ಯೇ ತು ಯೋಗಿನಃ ।**
**ಬ್ರಹ್ಮಶಿಷ್ಯಸ್ತಥಾ ರುದ್ರೋ ಬ್ರಹ್ಮಾ ನಾರಾಯಣಸ್ಯ ಚ ।। ಇತಿ ಬ್ರಾಹ್ಮೇ**

ಸನಕಾದಿಗಳು ರುದ್ರದೇವರ ಶಿಷ್ಯರು. ಆ ಸನಕಾದಿಗಳಿಗೆ ಮಿಕ್ಕ ಯೋಗಿಗಳು ಶಿಷ್ಯರು. ರುದ್ರದೇವರು ಬ್ರಹ್ಮದೇವರ ಶಿಷ್ಯರು. ಬ್ರಹ್ಮದೇವರು ನಾರಾಯಣನ ಶಿಷ್ಯರು ಎಂದು ಬ್ರಾಹ್ಮಪುರಾಣದಲ್ಲಿದೆ.

ಬ್ರಹ್ಮದೇವರ ಶಿಷ್ಯರು ರುದ್ರದೇವರು ಎಂದು ಹೇಳಿದ್ದರಿಂದ, ಮಹತಾಂ ಎಂಬುದಕ್ಕೆ ಸಂಕೋಚ ಮಾಡಲು ಕಾರಣ ಹೇಳಿದಂತಾಯಿತು. ।।೧೫।।

ಹಿಂದೆ ದಕ್ಷನು ''ಶಿವಾಪದೇಶೋ ಹಿ ಅಶಿವಃ'' ''ಚಿತಾಭಸ್ಮಕೃತಸ್ನಾನಃ'' ''ಪ್ರೇತಾವಾಸೇಷು ಘೋರೇಷು'' ಮುಂತಾಗಿ ಅಂದಿರುವದರಿಂದ ರುದ್ರದೇವರು ಅಸಾಧುವೇ ಏಕಾಗಿರಬಾರದು ? ಎಂಬ ಶಂಕೆಗೆ ಸತಿಯು ಉತ್ತರಿಸುವಳು. ಒಂದುವೇಳೆ ಅಸಾಧುವೇ ಆಗಿದ್ದರೆ ಉಳಿದೆಲ್ಲ ಜ್ಞಾನಿಗಳು ಭಕ್ತಿಯಿಂದ ಅವನನ್ನು ವಂದಿಸುವರೇಕೆ ? ಆದಕಾರಣ ಸ್ಮಶಾನಭಸ್ಮಧಾರಣಾದಿಗಳು ಶ್ರೀಹರಿಯ ಆಜ್ಞೆಯಿಂದ ಮಾಡಿದುದು. ಅವುಗಳು ರುದ್ರದೇವರಿಗೆ ಶುದ್ಧಿಸಂಪಾದಕಗಳೇ ಹೊರತು ಅಮಂಗಲವಲ್ಲವೆಂದು ಹೇಳುವಳು :-

**ಕಿಂ ವಾ ಶಿವಾಖ್ಯಮಶಿವಂ ನ ವಿದುಸ್ತ್ವದನ್ಯೇ**
**ಬ್ರಹ್ಮಾದಯಸ್ತಮವಕೀರ್ಯ ಜಟಾಃ ಶ್ಮಶಾನೇ ।**
**ತನ್ಮಾಲ್ಯಭಸ್ಮನೃಕಪಾಲ್ಯವಸತ್ಪಿಶಾಚೈಃ**
**ಯೇ ಮೂರ್ಧಭಿರ್ದಧತಿ ತಚ್ಚರಣಾವಸೃಷ್ಟಮ್ ।।೧೬।।**

ಯಾವ ರುದ್ರದೇವನು ಜಟಾಃ ಅವಕೀರ್ಯ=ತಲೆಗೂದಲನ್ನು ಹರಿವಿಕೊಂಡು ಶ್ಮಶಾನೇ=ಸ್ಮಶಾನದಲ್ಲಿ ಪಿಶಾಚೈಃ=ಪಿಶಾಚಿಗಳೊಡನೆ ತನ್ಮಾಲ್ಯಭಸ್ಮನೃಕಪಾಲೀ=ಸ್ಮಶಾನದಲ್ಲಿರುವ ಪ್ರೇತಾಲಂಕಾರವಾದ ಮಾಲೆ, ಭಸ್ಮ, ತಲೆಬುರುಡೆಗಳೇ ಅಲಂಕಾರವಾಗಿ ಉಳ್ಳವನಾಗಿ ಅವಸತ್=ವಾಸಿಸುತ್ತಿದ್ದನೋ ತಂ=ಅವನನ್ನು ಅಶಿವಂ=ಅಮಂಗಳನು ಆದರೂ ಶಿವಾಖ್ಯಂ=ಶಿವನೆಂಬ ಹೆಸರಿನವನಷ್ಟೇ ಎಂಬುದಾಗಿ,

ಯೇ=ಯಾರು ತಚ್ಚರಣಾವಸೃಷ್ಟಂ=ಅವನ ಪಾದದಿಂದ ಬಿದ್ದ ನಿರ್ಮಾಲ್ಯವನ್ನು ಮೂರ್ಧಭಿಃ ದಧತಿ=ಶಿರಸಾ ಧರಿಸುವರೋ ಅಂತಹ, ತ್ವದನ್ಯೇ ಬ್ರಹ್ಮಾದಯಃ=ನಿನ್ನನ್ನು ಬಿಟ್ಟು ಉಳಿದ ಬ್ರಹ್ಮಾದಿಗಳು (ಬ್ರಹ್ಮ=ಬ್ರಹ್ಮನೇ ಆದಿ=ಕಾರಣವಾಗಿ ಉಳ್ಳವರು) ಅಂದರೆ ಬ್ರಹ್ಮಪುತ್ರರಾದ ಸನಕಾದಿಗಳು ನ ವಿದುಃ ಕಿಂ=ತಿಳಿಯಲಿಲ್ಲವೇನು ?

♦ ಅಂದರೆ :- ಒಂದುವೇಳೆ ಸನಕಾದಿಗಳು ಶಿವನನ್ನು ಅಮಂಗಲನೆಂದು ತಿಳಿದಿದ್ದರೆ ಅವನಿಗೆ ಭಕ್ತಿಪೂರ್ವಕನಮನಾದಿಗಳನ್ನು ಮಾಡುತ್ತಿರಲಿಲ್ಲ. ಈಗಲಾದರೋ ಭಕ್ತಿಪೂರ್ವಕನಮನಾದಿಗಳನ್ನು ಮಾಡುತ್ತಾರೆ, ಆದಕಾರಣ ನಿನ್ನಂತೆ ಅವರು ಶಿವನನ್ನು ಅಮಂಗಳನೆಂದು ತಿಳಿದಿಲ್ಲ ಎಂಬುದಾಗಿ ಸತೀದೇವಿಯು ತರ್ಕವನ್ನು ಸೂಚಿಸುತ್ತಿದ್ದಾಳೆ.

♦ ಮತ್ತು ಸ್ಮಶಾನಭಸ್ಮಧಾರಣಾದಿಗಳು ಶ್ರೀಹರಿಯ ಆಜ್ಞಾಪರಿಪಾಲನವಾದ್ದರಿಂದ ಶುದ್ಧಿಕಾರಕವೇ ಆಗಿವೆ ಎಂದು ಭಾವ. ।।೧೬।।

ಮಹಾತ್ಮರ ನಿಂದೆ ಪ್ರಸಕ್ತವಾದಾಗ ಸಜ್ಜನರಾದ ಶ್ರೋತೃಗಳು ಮಾಡಬೇಕಾದ ಧರ್ಮವನ್ನು ತಿಳಿಸುವಳು -

**ಕರ್ಣೌ ಪಿಧಾಯ ನಿರಯಾದ್ ಯದಕಲ್ಪ ಈಶೇ**
**ಧರ್ಮಾವಿತರ್ಯಸೃಣಿಭಿರ್ನೃಭಿರಸ್ಯಮಾನೇ ।**
**ಛಿಂದ್ಯಾತ್ ಪ್ರಸಹ್ಯ ರುಶತೀಮಸತಾಂ ಪ್ರಭುಶ್ಚೇತ್**
**ಜಿಹ್ವಾಮಸೂನಪಿ ತತೋ ವಿಸೃಜೇತ್ ಸ ಧರ್ಮಃ ॥೧೭॥**

ಧರ್ಮಾವಿತರಿ=ಧರ್ಮರಕ್ಷಕನಾದ ಈಶೇ=ಸ್ವಾಮಿಯು (ಮಹಾತ್ಮನು) ಅಸೃಣಿಭಿಃ=ನಿರ್ದಯಿಗಳಾದ ನೃಭಿಃ=ಜನರಿಂದ ಅಸ್ಯಮಾನೇ=ಆಕ್ಷೇಪಿಸಲ್ಪಡುತ್ತಿರಲು (ನಿಂದಿಸಲ್ಪಡುತ್ತಿರಲು) ಯದಕಲ್ಪಃ=ನಿಂದಕನನ್ನು ಶಿಕ್ಷಿಸಲು (ಶ್ರೋತೃವು) ಅಸಮರ್ಥನಾದರೆ ಕರ್ಣೌ ಪಿಧಾಯ=ಕಿವಿಗಳನ್ನು ಮುಚ್ಚಿಕೊಂಡು ತತಃ ನಿರಯಾತ್=ಆ ಸ್ಥಳದಿಂದ ತೆರಳಬೇಕು. ಪ್ರಭುಶ್ಚೇತ್=ನಿಂದಕನನ್ನು ಶಿಕ್ಷಿಸಲು (ಶ್ರೋತೃವು) ಸಮರ್ಥನಾಗಿದ್ದರೆ, ಅಸತಾಂ=ದುಷ್ಟರ ರುಶತೀಂ=ಕ್ರೂರನುಡಿಗಳನ್ನಾಡುವ ಜಿಹ್ವಾಂ=ನಾಲಿಗೆಯನ್ನು ಪ್ರಸಹ್ಯ=ಸೆಳೆದು ಛಿಂದ್ಯಾತ್=ಕತ್ತರಿಸಬೇಕು. ಎರಡೂ ಆಗದಿದ್ದಲ್ಲಿ ಅಸೂನಪಿ ವಿಸೃಜೇತ್=ತನ್ನ ಪ್ರಾಣವನ್ನಾದರೂ ಬಿಡಬೇಕು. ಸಃ=ಅದು ಧರ್ಮಃ=ಪುಣ್ಯಜನಕವು.

ಇಲ್ಲಿ ತತಃ=ನಾಲಿಗೆ ಕತ್ತರಿಸುವದರಿಂದ ಅಸೂನ್ ವಿಸೃಜೇದಪಿ ಸ ಧರ್ಮಃ=ನಿಂದಕನು ತನ್ನ ಪ್ರಾಣ ಬಿಟ್ಟರೂ ಸಹ ಅದರಿಂದ ಜೀವಹತ್ಯೆದೋಷ ಬರುವುದಿಲ್ಲ, ಅದು ಧರ್ಮವೇ ಆಗುತ್ತದೆ ಹೀಗೂ ಅರ್ಥವನ್ನು ಕೆಲವರು ಮಾಡುವರು.

**ವರ್ಣಭೇದದಿಂದ ಧರ್ಮಭೇದ**

ಇಲ್ಲಿ ಹೀಗೊಂದು ವ್ಯವಸ್ಥೆಯನ್ನು ಕೆಲವು ವ್ಯಾಖ್ಯಾನಕಾರರು ಹೇಳುವರು. ಅದೇನೆಂದರೆ :-

**ಕ್ಷತ್ರಿಯ** - ಅನ್ಯರಿಗೆ ಶಾರೀರಿಕದಂಡ ನೀಡುವ ಅಧಿಕಾರವುಳ್ಳ ಕ್ಷತ್ರಿಯನು ನಿಂದಕನ ನಾಲಿಗೆ ಕತ್ತರಿಸಬೇಕು.

**ವೈಶ್ಯ-ಶೂದ್ರ** - ಅನ್ಯರಿಗೆ ಶಾರೀರಿಕದಂಡ ನೀಡುವ ಅಧಿಕಾರವಿಲ್ಲದ ವೈಶ್ಯ-ಶೂದ್ರರು ತಮ್ಮ ದೇಹತ್ಯಾಗ ಮಾಡಬೇಕು.

**ಬ್ರಾಹ್ಮಣ** - ತನ್ನ ದೇಹತ್ಯಾಗಕ್ಕೂ ಅಧಿಕಾರವಿಲ್ಲದ, ಅನ್ಯರ ಶಿಕ್ಷೆಗೂ ಅಧಿಕಾರವಿಲ್ಲದ ಬ್ರಾಹ್ಮಣನು ಕಿವಿ ಮುಚ್ಚಿಕೊಂಡು ಸ್ಥಾನತ್ಯಾಗ ಮಾಡಬೇಕು ಎಂದು ಭಾವ. ॥೧೭॥

**ಅತಸ್ತವೋತ್ಪನ್ನಮಿದಂ ಕಲೇವರಂ**
**ನ ಧಾರಯಿಷ್ಯೇ ಶಿತಿಕಂಠಗರ್ಹಿಣಃ ।**
**ಜಗ್ಧಸ್ಯ ಮೋಹಾದ್ಧಿ ವಿಶುದ್ಧಿಮಂಧಸೋ**
**ಜುಗುಪ್ಸಿತಸ್ಯೋದ್ಧರಣಂ ಪ್ರಚಕ್ಷತೇ ॥೧೮॥**

ಅತಃ=ಶಿವನಿಂದೆಯನ್ನು ಕೇಳಿದ, ಹೆಣ್ಣಾದ ನನಗೆ ಬೇರೆಡೆ ಹೋಗುವದಾಗಲೀ, ನಾಲಿಗೆಯನ್ನು ಕತ್ತರಿಸುವದಾಗಲೀ ಅಶಕ್ಯವಾದುದರಿಂದ ಶಿತಿಕಂಠಗರ್ಹಿಣಃ=ಶಿವನನ್ನು ನಿಂದಿಸುವ ತವ ಉತ್ಪನ್ನಂ=ನಿನ್ನ ವೀರ್ಯದಿಂದ ಜನಿಸಿದ ಅಪವಿತ್ರವಾದ ಇದಂ ಕಲೇವರಂ=ಈ ದೇಹವನ್ನು ನ ಧಾರಯಿಷ್ಯೇ=ಧರಿಸಲಾರೆನು. ಮೋಹಾತ್=ಅಜ್ಞಾನದಿಂದ ಜಗ್ಧಸ್ಯ=ತಿಂದ ಜುಗುಪ್ಸಿತಸ್ಯ ಅಂಧಸಃ=ನಿಂದಿತವಾದ ಅನ್ನದ ಉದ್ಧರಣಂ ಏವ=ವಾಂತಿ ಮಾಡುವುದೇ ವಿಶುದ್ಧಿಂ ಪ್ರಚಕ್ಷತೇ=ತಿಂದವನಿಗೆ ಶುದ್ಧಿದಾಯಕವೆಂದು ಜ್ಞಾನಿಗಳು ಹೇಳುವರು. ಅದರಂತೆಯೇ ಪ್ರಮಾದದಿಂದ ಬಂದ ಈ ಅಪವಿತ್ರವಾದ ದೇಹದ ತ್ಯಾಗವೇ ನನಗೆ ಸೂಕ್ತವೆಂದು ಭಾವ. ॥೧೮॥

ಹಿಂದೆ ಲುಪ್ತಕ್ರಿಯಾಯ ಎಂದು ರುದ್ರದೇವರಿಗೆ ನಿಂದಿಸಿದ್ದಕ್ಕೆ ಉತ್ತರಿಸುವಳು -

**ನ ವೇದವಾದಾನನುವರ್ತತೇ ಮತಿಃ**
**ಸ್ವ ಏವ ಲೋಕೇ ರಮತೋ ಮಹಾಮುನೇಃ ।**
**ಯಥಾ ಗತಿರ್ದೇವಮನುಷ್ಯಯೋಃ ಪೃಥಕ್**
**ಸ್ವ ಏವ ಧರ್ಮೇ ನ ಪರಂ ಕ್ಷಿಪೇತ್ ಸ್ಥಿತಃ ॥೧೯॥**

ಸ್ವೇ=ತನ್ನ ಲೋಕೇ ಏವ=ಪ್ರಕಾಶಮಾನವಾಗಿರುವ ಬಿಂಬರೂಪಿಯಾದ ಶ್ರೀಹರಿಯಲ್ಲಿಯೇ ರಮತಃ=ಯಾವಾಗಲೂ ಸಂತೋಷಿಸುವ ಆದ್ದರಿಂದಲೇ ಅವನ ದರ್ಶನಾಮೃತಪಾನದಿಂದ ಯಾವಾಗಲೂ ತೃಪ್ತನಾಗಿರುವ ಮಹಾಮುನೇಃ=ಸರ್ವಜ್ಞನಾದ, ಮನನಶೀಲನಾದ ಈಶ್ವರನ ಮತಿಃ=ಜ್ಞಾನಿಯಾದ್ದರಿಂದ ಸ್ವೇಚ್ಛಾಪ್ರವೃತ್ತಿವುಳ್ಳ ಮನಸ್ಸು ವೇದವಾದಾನ್=ವೇದೋಕ್ತವಾದ ವರ್ಣಾಶ್ರಮಧರ್ಮಗಳ ವಿಧಿನಿಷೇಧಗಳನ್ನು ನ ಅನುವರ್ತತೇ=ಅನುಸರಿಸುವುದಿಲ್ಲ. ಯಥಾ=ಹೇಗೆ ದೇವಮನುಷ್ಯಯೋಃ=ದೇವತೆಗಳ ಮತ್ತು ಮನುಷ್ಯರ ಗತಿಃ=ಮಾರ್ಗವು (ನಡುವಳಿಕೆಯು) ಪೃಥಕ್=ಬೇರೆ ಬೇರೆಯೋ ತಥಾ=ಹಾಗೆ ನಮ್ಮಿಬ್ಬರ ಮಾರ್ಗಗಳು ಭಿನ್ನಗಳು. ಆದ್ದರಿಂದ ಸ್ವೇ ಧರ್ಮೇ ಏವ=ತನ್ನ ಧರ್ಮದಲ್ಲಿಯೇ ಸ್ಥಿತಃ=ನಿರತನಾದ ಮನುಷ್ಯನು ಪರಂ=ತನಗೆ ಯೋಗ್ಯವಾದ ಧರ್ಮವನ್ನು ಅನುಷ್ಠಾನ ಮಾಡುತ್ತಿರುವ ಉತ್ತಮನಾದ ಮತ್ತೊಬ್ಬನನ್ನು ನ ಕ್ಷಿಪೇತ್=ನಿಂದಿಸಬಾರದು.

ವೇದವಾದರತನಾದ ನೀನು ಜೀವನ್ಮುಕ್ತರ ಧರ್ಮದಲ್ಲಿ ರತನಾದ ಈಶ್ವರನನ್ನು ಕರ್ತವ್ಯಭ್ರಷ್ಟನೆಂದು ನಿಂದಿಸಿದ್ದು ನಿನ್ನದೇ ಅಪರಾಧವೆಂದು ತಾತ್ಪರ್ಯ.

**ಕರ್ಮ ಪ್ರವೃತ್ತಂ ಚ ನಿವೃತ್ತಮಪ್ಯೃತ**
**ವೇದೇ ವಿವಿಚ್ಯೋಭಯಲಿಂಗಮಾಶ್ರಿತಮ್ ।**
**ವಿರೋಧಿ ತದ್ ಯೌಗಪದೇಕಕರ್ತರಿ**
**ದ್ವಯಂ ಯಥಾಽಽಬ್ರಹ್ಮಣಿ ಕರ್ಮ ನರ್ಚ್ಛತಿ ॥೨೦॥**

ಅಪಿ=ಯದ್ಯಪಿ ವೇದೇ=ವೇದದಲ್ಲಿ ಪ್ರವೃತ್ತಂ=ಮೋಕ್ಷಭಿನ್ನವಾದ ಸ್ವರ್ಗಾದಿಕಾಮನೆಯಿಂದ ಮಾಡುವ ಸಕಾಮುಕರ್ಮಗಳು ಚ=ಮತ್ತು ನಿವೃತ್ತಂ=ಮುಕ್ತಿಗಾಗಿ ಮಾಡುವ ನಿಷ್ಕಾಮಕರ್ಮಗಳು ಇತಿ=ಎಂದು ಉಭಯಲಿಂಗಂ=ಎರಡುವಿಧವಾದ ಕರ್ಮಮಾರ್ಗವು ವಿವಿಚ್ಯ ಆಶ್ರಿತಂ=ಪ್ರತ್ಯೇಕವಾಗಿ ಹೇಳಿದೆ. ತಥಾಪಿ=ಆದರೂ ತತ್‌ದ್ವಯಂ=ಪ್ರವೃತ್ತ-ನಿವೃತ್ತರೂಪವಾದ ಎರಡೂ ಕರ್ಮಗಳು ಯೌಗಪತ್=ಏಕಕಾಲದಲ್ಲಿ ಏಕಕರ್ತರಿ=ಒಬ್ಬನಲ್ಲಿಯೇ ವಿರೋಧಿ=ಅಸಂಭಾವಿತವು. ಭಿನ್ನ-ಭಿನ್ನವಾದ ಅಧಿಕಾರಿಗಳುಳ್ಳ ಆ ಎರಡುವಿಧ ಕರ್ಮಗಳು ಒಬ್ಬರಲ್ಲಿರಲಾರವು ಎಂದು ಭಾವ. ಯಥಾ=ಹೇಗೋ ಹಾಗೆ ಆಬ್ರಹ್ಮಣಿ=ಬ್ರಹ್ಮಜ್ಞಾನಿಯಾದ ದೇವತೆಯಲ್ಲಿ ದ್ವಯಂ=ಪ್ರವೃತ್ತ-ನಿವೃತ್ತಕರ್ಮಗಳೆರಡೂ ನ ಋಚ್ಛತಿ=ಹೋಗಲಾರವು (ಇವೆರಡನ್ನೂ ಅವರು ಮಾಡಲಾರರೆಂದರ್ಥ).

ದೇವತೆಗಳು ಇವೆರಡರಿಂದ ಭಿನ್ನವಾದ ''ಮಹಾನಿಯಮ''ವೆಂಬ ಕರ್ಮಕ್ಕೆ ಮಾತ್ರ ಅಧಿಕಾರಿಗಳು. ರುದ್ರನಾದರೂ ದೇವೋತ್ತಮನಾದವನು. ಅಂತೆಯೇ ''ಮಹಾನಿಯಮ'' ದಲ್ಲಿ ಅಧಿಕೃತನು. ಆದ್ದರಿಂದ 'ಲುಪ್ತಕ್ರಿಯ'ನೆಂದು ನಿಂದಿಸುವದು ಅಜ್ಞಾನಮೂಲಕವೇ ಸರಿ.

**ಭಾಗವತತಾತ್ಪರ್ಯ :-**

ಈ ಶ್ಲೋಕದಲ್ಲಿ ''ಬ್ರಹ್ಮಣಿ ಕರ್ಮ ನ ಋಚ್ಛತಿ'' ಎಂದು ಅಸಂಗತವಾಗಿ ತೋರುವದು. ಆ ಕಾರಣ ವಿವಕ್ಷಿತ ಪದಚ್ಛೇದ ಮತ್ತು ಅರ್ಥ ತಿಳಿಸುವರು :-

''ಆಬ್ರಹ್ಮಣಿ ಬ್ರಹ್ಮಜ್ಞಾನಿನಿ''

ಆ ಸಮ್ಯಕ್ ವಿಜ್ಞಾತಂ ಬ್ರಹ್ಮ ಯೇನ ಸಃ ತಸ್ಮಿನ್ ಎಂಬುದಾಗಿ ಮಧ್ಯಮಪದಲೋಪಿ ಬಹುವ್ರೀಹಿ ಸಮಾಸ ಮಾಡಿಕೊಳ್ಳಬೇಕೆಂದು ಸೂಚಿತವಾಗುವದು. ಮೂಲದಲ್ಲಿ ದೇವೇ ಎಂದು ಶೇಷ ಮಾಡಿಕೊಳ್ಳಬೇಕು. ಆಬ್ರಹ್ಮಣಿ ಎಂದರೆ ಬ್ರಹ್ಮಜ್ಞಾನಿಯಾದ ದೇವತೆಯಲ್ಲಿ ಎಂದರ್ಥ.

ಶ್ಲೋಕದ ಸರಿಯಾದ ಅರ್ಥವಾಗದೇ ವಿಪರೀತ ಅರ್ಥವಾಗುವದನ್ನು ನಿವಾರಿಸಲು ಸಮಗ್ರಶ್ಲೋಕದ ತಾತ್ಪರ್ಯವನ್ನು ಪ್ರಮಾಣದಿಂದಲೇ ತಿಳಿಸುವರು ಃ-

**ಆಬ್ರಹ್ಮಸ್ಥಿತಧೀರ್ಜೀವನ್ಮುಕ್ತಶ್ಚೇತ್ಯಭಿಧೀಯತೇ ।**
**ಯಸ್ತಸ್ಯ ನ ನಿವೃತ್ತಂ ಚ ಪ್ರವೃತ್ತಂ ಕರ್ಮ ಚೇಷ್ಯತೇ ।**
**ಯತ್ತು ದೇವಾಃ ಪ್ರಕುರ್ವಂತಿ ಸ ಮಹಾನಿಯಮಃ ಸ್ಮೃತಃ ।**
**ಸ್ವರ್ಗಾದ್ಯರ್ಥಂ ಪ್ರವೃತ್ತಂ ಸ್ಯಾನ್ನಿವೃತ್ತಂ ಮುಕ್ತಯೇ ತು ಯತ್॥**
**ಸ ಮಹಾನಿಯಮೋ ನಾಮ ಕರ್ಮಯತ್ವಾಧಿಕಾರಿಕಮ್ ।**
**ಮಹತೋ ನಿಯಮಾದ್ವಿಷ್ಣೋಃ ಪ್ರೀತ್ಯಾ ಮುಕ್ತೌ ಸುಖೋನ್ನತಿಃ॥**
**ಕೇಚಿನ್ನಿವೃತ್ತಮಿತ್ಯಾಹುರ್ಮಹಾನಿಯಮಮಪ್ಯುತ ॥** ಇತಿ ಭವಿಷ್ಯತ್ಪುರಾಣೇ ॥

ಯಃ=ಯಾವ ದೇವತೆಯು ಆಬ್ರಹ್ಮ ಅಂದರೆ ಬ್ರಹ್ಮಜ್ಞಾನಿ ಸ್ಥಿತಪ್ರಜ್ಞ ಜೀವನ್ಮುಕ್ತ ಎಂದು ಮುಖ್ಯವಾಗಿ ಹೇಳಲ್ಪಡುವನೋ ಅವನಿಗೆ ಪ್ರವೃತ್ತಕರ್ಮ-ನಿವೃತ್ತಕರ್ಮಗಳೆರಡೂ ಇರುವದಿಲ್ಲ ಇನ್ನು ದೇವತೆಗಳು ಯಾವ ಕರ್ಮ ಮಾಡುವರೋ ಅದು ಮಹಾನಿಯಮ-ವೆನಿಸುವದು. ಸ್ವರ್ಗಾದಿಗಳಿಗಾಗಿ ಮಾಡುವ ಕರ್ಮವು ಪ್ರವೃತ್ತಕರ್ಮವೆನಿಸುತ್ತದೆ. ಮುಕ್ತಿಗಾಗಿ ಮಾಡುವ ಕರ್ಮವು ನಿವೃತ್ತಕರ್ಮವೆನಿಸುತ್ತದೆ. ಆಧಿಕಾರಿಕರು ಮಾಡುವ ಕರ್ಮವೇನಿದೆ ಅದು ಮಹಾನಿಯಮವೆನಿಸುವದು. (ಮಹಾನ್ ನಿಯಮಃ ಯಸ್ಮಿನ್ ಸಃ ಮಹಾನಿಯಮಃ ಎಂದು ವಿಗ್ರಹ.) ಇತರರಿಂದ ಮಾಡಲು ಅಸಾಧ್ಯವಾದ ನಿಯಮಗಳಿಂದ ಕೂಡಿದ ಕರ್ಮ ಮಹಾನಿಯಮವೆಂದರ್ಥ. ಇದರಿಂದ ವಿಷ್ಣುಪ್ರೀತಿ ಉಂಟಾಗಿ ಮುಕ್ತಿಯಲ್ಲಿ ವಿಶೇಷ ಸುಖಾಭಿವ್ಯಕ್ತಿಯಾಗುವದು. (ಎಲ್ಲ ದೇವತೆಗಳು ಮಹಾನಿಯಮವನ್ನು ಮಾಡುವವರಾದರೂ ಅವರವರಿಗೆ ತಾರತಮ್ಯೋಪೇತಸುಖ ಆಗುತ್ತದೆ.)

ಇನ್ನು ಕೆಲವರು ಮಹಾನಿಯಮವನ್ನೂ ನಿವೃತ್ತಕರ್ಮವೆಂದೇ ಕರೆಯುವರು. ಆದ್ದರಿಂದ ದೇವತೆಗಳು ನಿವೃತ್ತಕರ್ಮ ಮಾಡುವವರು ಎಂಬ ಪ್ರಸಿದ್ಧಿವಿರೋಧವಿಲ್ಲವೆಂದು ಭಾವ. ಈ ಸಂದರ್ಭದಲ್ಲಿ "ನಿಷ್ಕಾಮಂ ಜ್ಞಾನಪೂರ್ವಂ ತು ನಿವೃತ್ತಮಿಹ ಚೋಚ್ಯತೇ" ಎಂದು ಸ್ಮೃತಿಯಲ್ಲಿ ಹೇಳಿದ ಲಕ್ಷಣ ನಿವೃತ್ತಕರ್ಮಕ್ಕೆ ಹೇಳಬೇಕು. ಹೊರತು ಮುಕ್ತಿಗಾಗಿ ಮಾಡುವ ಕರ್ಮವೆಂದಲ್ಲ. ದೇವತೆಗಳು ಮುಕ್ತಿಯನ್ನೂ ಅಪೇಕ್ಷಿಸುವದಿಲ್ಲ. ಅವರು ಏಕಾಂತ ಭಕ್ತರು. ೨೦॥

ಹೀಗೆ ವೇದದಲ್ಲಿ ಹೇಳಿದ ಉಭಯವಿಧ ಕರ್ಮಾಧಿಕಾರವು ದೇವತೆಗಳಾದ ನಮಗೆ ಇಲ್ಲ ಎಂದು ಇಲ್ಲಿಯವರೆಗೆ ಹೇಳಿ, ಈಗ ನಮಗೆ ಅಧಿಕೃತವಾದ ಕರ್ಮಗಳಲ್ಲಿ ಅಧಿಕಾರವು ನಿನಗೆ ಇಲ್ಲವೆಂದು ಹೇಳುವಳು -

**ಮಾ ವಃ ಪದವ್ಯಃ ಪಿತರಸ್ಮದಾಸ್ಥಿತಾ**
**ಯಾ ಯಜ್ಞಶಾಲಾಸನಧೂಮವರ್ತ್ಮನಾಮ್ ।**
**ಕದನ್ನತೃಪ್ತೈರಸುಭೃದ್ಭಿರೀಡಿತಾ**
**ಅವ್ಯಕ್ತಲಿಂಗಾ ಅವಧೂತಸೇವಿತಾಃ ॥೨೦॥**

ಹೇ ಪಿತಃ=ಎಲೋ ತಂದೆಯೇ ! ಅಸ್ಮದಾಸ್ಥಿತಾಃ=ನಮ್ಮಲ್ಲಿರುವ ಅವಧೂತಸೇವಿತಾಃ=ಏಕಾಂತಭಕ್ತರಿಂದ ಮಾಡಲ್ಪಡುವ ಅವ್ಯಕ್ತಲಿಂಗಾಃ=ಬೇರೆಯವರಿಗೆ ತಿಳಿಯಲಾಗದ ಲಕ್ಷಣವುಳ್ಳ ಯಾಃ ಪದವ್ಯಃ=ಯಾವ ಕರ್ಮಮಾರ್ಗಗಳು ಉಂಟೋ ತಾಃ=ಅವು ವಃ ಮಾ=ನಿಮಗೆ ಯೋಗ್ಯವಲ್ಲ. ಆದರೆ ಯಜ್ಞಶಾಲಾಸನಧೂಮವರ್ತ್ಮನಾಂ=ಯಜ್ಞಶಾಲೆಯಲ್ಲಿ ದೀಕ್ಷೆಯನ್ನು ಪಡೆಯುವದೆಂಬ ಧೂಮಮಾರ್ಗವುಳ್ಳವರ ಕದನ್ನತೃಪ್ತೈಃ=ಪಶುಮಾಂಸ ಭಕ್ಷಣದಿಂದ ತೃಪ್ತರಾದ ಅಸುಭೃದ್ಭಿಃ=ಪ್ರಾಣಿಗಳಿಂದ ಈಡಿತಾಃ=ಹೇಳಲ್ಪಟ್ಟ ಯಾಃ ಪದವ್ಯಃ=ಯಾವ ಮಾರ್ಗಗಳಿವೆಯೋ ಅವೇ ವಃ=ನಿಮಗೆ ಯೋಗ್ಯವು. ಯದ್ಯಪಿ ದಕ್ಷನು ದೇವತೆಯೇ. ಆದರೆ ಪ್ರಾರಬ್ಧಕರ್ಮವಶಾತ್ ಪ್ರವೃತ್ತಕರ್ಮನಿಷ್ಠ ಎಂಬ ಅಭಿಪ್ರಾಯ ಇದೆ.

ಬಹಳ ಮಾತಿನಿಂದೇನು ಪ್ರಯೋಜನ ? ಈ ನನ್ನ ದೇಹ ಸರ್ವಥಾ ಬಿಡಬೇಕಾದುದೇ ಎಂದು ಎರಡು ಶ್ಲೋಕಗಳಿಂದ ಹೇಳುವಳು :-

**ಏತೇನ ದೇಹೇನ ಹರೇ ಕೃತಾಗಸೋ**
**ದೇಹೋದ್ಭವೇನಾಲಮಲಂ ಕುಜನ್ಮನಾ ।**
**ವ್ರೀಡಾ ಮಮಾಭೂತ್ ಕುಜನಪ್ರಸಂಗತಃ**
**ತಜ್ಜನ್ಮಧಿಗ್ ಯನ್ಮಹತಾಮವದ್ಯಕೃತ್ ॥೨೨॥**

ಹರೇ=ರುದ್ರದೇವರಲ್ಲಿ ಕೃತಾಗಸಃ=ಅಪರಾಧ ಮಾಡಿದ ನಿನ್ನ ದೇಹೋದ್ಭವೇನ=ದೇಹದಿಂದ ಹುಟ್ಟಿದ ಕುಜನ್ಮನಾ=ಕುತ್ಸಿತ(ನಿಂದಿತ)ವಾದ ಉತ್ಪತ್ತಿಯುಳ್ಳ ಏತೇನ ದೇಹೇನ ಅಲಂ ಅಲಂ=ಈ ದೇಹ ಸಾಕು ಸಾಕು ! ಏಕೆಂದರೆ, ಕುಜನಪ್ರಸಂಗತಃ=ನಿನ್ನಂಥ ದುಷ್ಟಜನರ ಪ್ರಸಂಗ(ಜನ್ಯ-ಜನಕರೂಪಸಂಬಂಧ)ದಿಂದ ತಂದೆ ಮಗಳು ಎನಿಸಿಕೊಳ್ಳಲು ಮಮ=ನನಗೆ ವ್ರೀಡಾ ಅಭೂತ್=ಲಜ್ಜೆಯಾಗಿದೆ. ಮತ್ತು ಯತ್=ಯಾವ ಜನ್ಮವು ಮಹತಾಂ=ದೊಡ್ಡವರಿಗೆ ಅವದ್ಯಕೃತ್=ದುಃಖಕಾರಕವಾಗಿದೆಯೋ ತಜ್ಜನ್ಮಧಿಕ್=ಆ ಜನ್ಮಕ್ಕೆ ಧಿಕ್ಕಾರವು. ॥೨೨॥

ತನ್ನ ಜನ್ಮವು ಮಹಾತ್ಮರಿಗೆ ದುಃಖಜನಕವೆಂಬುದನ್ನು ತೋರಿಸುವಳು :-

**ಗೋತ್ರಂ ತ್ವದೀಯಂ ಭಗವಾನ್ ವೃಷಧ್ವಜೋ**
**ದಾಕ್ಷಾಯಣೀತ್ಯಾಹ ಯದಾ ಸುದುರ್ಮನಾಃ ।**

**ವ್ಯಪೇತನರ್ಮಸ್ಮಿತಮಾಶು ತಾವತ್**
**ಉತ್ಸ್ರಕ್ಷ್ಯ ಏತತ್ಕುಣಪಂ ತ್ವದಂಗಜಮ್ ॥೨೩॥**

॥ ಇತಿ ಶ್ರೀಮದ್ಭಾಗವತೇ ಚತುರ್ಥಸ್ಕಂಧೇ ಚತುರ್ಥೋಽಧ್ಯಾಯಃ ॥

ಭಗವಾನ್ ವೃಷಧ್ವಜಃ=ಪೂಜ್ಯನಾದ ರುದ್ರದೇವನು ಯದಾ=ಯಾವಾಗ ಹೇ ದಾಕ್ಷಾಯಣಿ ಇತಿ=ಹೇ ದಕ್ಷಪುತ್ರಿಯೇ ಎಂಬುದಾಗಿ ತ್ವದೀಯಂ ಗೋತ್ರಂ=ನಿನ್ನ ಸಂಬಂಧವನ್ನು ತಿಳಿಸುವ ನಾಮವನ್ನು ಆಹ=ಹೇಳುವನೋ ತದಾ=ಆಗ ವ್ಯಪೇತನರ್ಮಸ್ಮಿತಂ= ಪರಿಹಾಸ-ಮಂದಹಾಸಗಳಿಲ್ಲದಂತೆ ಸುದುರ್ಮನಾಃ=ಬಹಳ ದುಃಖಿತನಾಗುವನು. ಕಾರಣ ತಾವತ್=ಮುಂಚೆಯೇ ತ್ವದಂಗಜಂ=ನಿನ್ನ ದೇಹದಿಂದ ಉಂಟಾದ ಏತತ್ ಕುಣಪಂ=ಕುತ್ಸಿತವಾದ ಈ ಶರೀರವನ್ನು ಉತ್ಸ್ರಕ್ಷ್ಯೇ=ತ್ಯಜಿಸುವೆನು.

ರುದ್ರದೇವನು ನನ್ನನ್ನು ದಾಕ್ಷಾಯಣಿ ಎಂದು ಕರೆಯುವಾಗ ನಿನ್ನ ಜ್ಞಾಪಕವಾಗಿ ಮುಖದ ಮೇಲಿನ ಮಂದಹಾಸ, ಚೇಷ್ಟೆಯ ಮಾತು(ಪರಿಹಾಸ)ಗಳು ಮಾಯವಾಗಿ ದುಃಖಿತನಾಗುವನು. ಆ ಕಾರಣ ದಾಕ್ಷಾಯಣಿ ಎಂದು ಕರೆಸಿಕೊಳ್ಳಲು ನಿಮಿತ್ತವಾದ, ನಿನ್ನ ದೇಹದಿಂದ ಬಂದಿರುವ ಈ ದೇಹವನ್ನು ತ್ಯಜಿಸುವೆನು ಎಂದು ಭಾವ.

ಇಲ್ಲಿ ನಿನಗೆ ಅವಮಾನವಾದರೆ ದೇಹ ಬಿಡುವುದೇಕೆ ? ಗಂಡನ ಮನೆಗೆ ಹೋಗಿ ಸುಖವಾಗಿರಬಹುದಲ್ಲ ? ಎಂದು ಪ್ರಶ್ನೆ ಬಂದರೆ, ನನಗೆ ಅಲ್ಲಿ ಹೋದರೂ ಸುಖವಿಲ್ಲ. ಪರಿಹಾಸಕ್ಕಾಗಿ ದಾಕ್ಷಾಯಣಿ ಎಂದು ನನ್ನನ್ನು ಕೂಗಿದಾಗ (ದಕ್ಷನಂತೆ ನಿನಗೆ ಮಹನ್ನಿಂದಾ ಮತ್ಸರ ಸಹಜ ಎಂಬ ಭಾವ ತೋರಿ) ಮಂದಹಾಸ-ಪರಿಹಾಸವಿಲ್ಲದೇ ನಾನು ಬಹಳ ದುಃಖಿತನಾಗುವೆನು. ಆ ಕಾರಣ ದೇಹ ತ್ಯಜುವುವದೇ ಸೂಕ್ತ ಎಂದೂ ಭಾವ ತಿಳಿಯಬಹುದು.

**ಭಾಗವತತಾತ್ಪರ್ಯ :-**

ಈ ಪ್ರಕರಣದಲ್ಲಿ ದಕ್ಷನಿಂದ ರುದ್ರನಿಂದೆಯು ಮಾಡಲ್ಪಟ್ಟಿದೆ. ಹಾಗೆ ಸತಿಯಿಂದ ದಕ್ಷನಿಂದೆ, ನಂದಿಯಿಂದ ಭೃಗು ಮುಂತಾದವರ ನಿಂದೆ ಮಾಡಲ್ಪಟ್ಟಿದೆ. ಇವರೆಲ್ಲ ಅಮೋಘವಚನರು. ಆದ್ದರಿಂದ ನಿಂದ್ಯರಾದ ರುದ್ರಾದಿಗಳಿಗೆ ಗುಣಹಾನಿಯಾಗುವುದೇ ? ಎಂಬ ಶಂಕೆಗೆ ಆಚಾರ್ಯರು ಪ್ರಮಾಣದಿಂದಲೇ ಉತ್ತರಿಸುವರು :-

**ಯದಿ ದೇವಾಶ್ಚ ಋಷ್ಯಾದ್ಯಾ ನಿಂದ್ಯಂತೇ ಯತ್ರ ಕುತ್ರಚಿತ್ ।**
**ನ ತಾವತಾ ಗುಣೈರ್ಹೀನಾಃ ಸ್ಥಿತಪ್ರಜ್ಞಾ ಹಿ ತೇ ಮತಾಃ ।**

**ಯಥಾಯೋಗ್ಯಂ ತು ತಾತ್ಪರ್ಯಂ ನಿಂದಾಯಾ ಅನ್ಯದೇವ ತು ॥ ಇತಿ ಗಾರುಡೇ ॥**

ಯಾವುದೇ ಗ್ರಂಥದಲ್ಲಿ ದೇವತೆಗಳಾಗಲೀ, ಋಷಿಗಳಾಗಲೀ, ರುದ್ರಪಾರ್ಷದರಾಗಲೀ ನಿಂದಿಸಲ್ಪಡುವರೋ ಅಲ್ಲಿ ಅಷ್ಟುಮಾತ್ರದಿಂದ ನಿಂದ್ಯರಿಗೆ ಗುಣಹಾನಿಯಾಗಲಾರದು. ಏಕೆಂದರೆ ಅವರು ಕ್ಲೃಪ್ತಜ್ಞಾನಾದಿಗಳುಳ್ಳವರು. ಕಾರಣ ನಿಂದೆಗೆ ಮೇಲೆ ತೋರುವ ಅರ್ಥ ಬಿಟ್ಟು ಬೇರೆ ಅರ್ಥದ ತಾತ್ಪರ್ಯ ತಿಳಿಯಬೇಕು ಎಂಬುದಾಗಿ ಗರುಡಪುರಾಣದಲ್ಲಿದೆ.

ಉತ್ತಮರು ಅಧಮರ ನಿಂದೆ ಮಾಡಿದರೆ ಅಲ್ಲಿ ಅಧಮರ ಶಿಕ್ಷೆಯಲ್ಲಿ ತಾತ್ಪರ್ಯ ತಿಳಿಯಬೇಕು. ಇನ್ನು ಅಧಮರು ಉತ್ತಮರ ನಿಂದೆ ಮಾಡಿದರೆ, ಅಧಮರಲ್ಲಿರುವ ಅಸುರರು ಮಾಡಿದ್ದರಿಂದ ಅದು ವ್ಯರ್ಥವೇ ಆಗುವದು. ಆದ್ದರಿಂದ ಪ್ರಕೃತದಲ್ಲಿ ನಿಂದ್ಯರ ಗುಣಹಾನಿ ಆಗಲಾರದು ಎಂದು ತಿಳಿಯಬೇಕು. ॥೨೩॥

॥ ಇಲ್ಲಿಗೆ ನಾಲ್ಕನೆಯ ಅಧ್ಯಾಯವು ಮುಗಿಯಿತು ॥

# ಅಥ ಪಂಚಮೋऽಧ್ಯಾಯಃ

ದೇಹವನ್ನು ಬಿಡುವದು ಸುಲಭವಾಗಿದ್ದರೂ (ಪ್ರಯತ್ನವಿಲ್ಲದೇ ಸಾಧ್ಯವಾಗಿದ್ದರೂ) ಒಂದು ಸಹಕಾರಿಸಹಿತವಾದರೆ ಹೆಚ್ಚಿನ ಫಲವು ಬರುವ ಕಾರಣ ಅದನ್ನು ಯೋಗಿಗಳಿಗೆ ಸೂಚಿಸಲು ದೇಹತ್ಯಾಗದಲ್ಲಿ ಇತಿಕರ್ತವ್ಯವನ್ನು (ಅನುಸರಿಸಬೇಕಾದ ಕ್ರಮವನ್ನು) ಈ ಅಧ್ಯಾಯದಲ್ಲಿ ತಿಳಿಸುವರು ಃ-

**ಮೈತ್ರೇಯ ಉವಾಚ -**

**ಇತ್ಯಧ್ವರೇ ದಕ್ಷಮನೂದ್ಯ ಶತ್ರುಹನ್**
**ಕ್ಷಿತಾವುದೀಚೀಂ ನಿಷಸಾದ ಶಾಂತವಾಕ್ ।**
**ಸ್ಪೃಷ್ಟ್ವಾ ಜಲಂ ಪೀತದುಕೂಲಸಂವೃತಾ**
**ನಿಮೀಲ್ಯ ದೃಗ್ ಯೋಗಪಥಂ ಸಮಾವಿಶತ್ ॥೧॥**

ಹೇ ಶತ್ರುಹನ್=ಬಾಹ್ಯ ಮತ್ತು ಆಂತರಿಕ ಶತ್ರುಸಂಹಾರಕನಾದ ವಿದುರನೇ ! ಇತಿ=ಈ ರೀತಿಯಾಗಿ ಅಧ್ವರೇ=ಯಜ್ಞಮಂಟಪದಲ್ಲಿ ದಕ್ಷಂ=ದಕ್ಷನನ್ನು ಕುರಿತು ಅನೂದ್ಯ=ಅವನ ದೋಷಗಳನ್ನು ಹೇಳಿ ಉದೀಚೀಂ ದಿಶಂ ಉದ್ದಿಶ್ಯ=ಉತ್ತರಾಭಿಮುಖಿಯಾಗಿ ಕ್ಷಿತೌ= ಭೂಮಿಯಲ್ಲಿ ನಿಷಸಾದ=ಕುಳಿತಳು. ಪೀತದುಕೂಲಸಂವೃತಾ=ಪೀತಾಂಬರವನ್ನುಟ್ಟು ಶಾಂತವಾಕ್=ಮೌನವನ್ನು ಸ್ವೀಕರಿಸಿ ಜಲಂ ಸ್ಪೃಷ್ಟ್ವಾ=ಆಚಮನ ಮಾಡಿ ದೃಕ್=ಕಣ್ಣುಗಳನ್ನು ನಿಮೀಲ್ಯ=ಮುಚ್ಚಿಕೊಂಡು ಯೋಗಪಥಂ=ದೇಹೋತ್ಕ್ರಮಣಮಾರ್ಗವನ್ನು ಸಮಾವಿಶತ್= ಪ್ರವೇಶಿಸಿದಳು. ॥೧॥

ಇದನ್ನೇ ವಿವರಿಸುವರು ಃ-

**ಕೃತ್ವಾ ಸಮಾನಾವನಿಲೌ ಜಿತಾಸನಾ**
**ಸೋದಾನಮುತ್ಥಾಪ್ಯ ಚ ನಾಭಿಚಕ್ರತಃ ।**

**ಶನೈರ್ಹೃದಿ ಸ್ಥಾಪ್ಯ ಧಿಯೋರಸಿ ಸ್ಥಿತಂ**
**ಕಂಠಾದ್ ಭ್ರುವೋರ್ಮಧ್ಯಮನಿಂದಿತಾಽನಯತ್ ॥೨॥**

ಜಿತಾಸನಾ=ಪ್ರಾಣ ಮೊದಲಾದ ವಾಯುಸಂಚಾರವೇಗದಿಂದ ಚಲಿಸದಿರುವ ದೇಹವುಳ್ಳವಳಾಗಿ ಅರ್ಥಾತ್ ಆಸನಜಯವನ್ನು ಹೊಂದಿದ ಆದ್ದರಿಂದಲೇ ಅನಿಂದಿತಾ=ಕುತ್ಸಿತ ಮನಸ್ಸಿಲ್ಲದ ಸಾ=ಸತೀದೇವಿಯು ಮೊದಲು ರೇಚಕ-ಪೂರಕಗಳನ್ನು ಮಾಡಿ ಅನಿಲೌ=ಪ್ರಾಣ-ಅಪಾನವೆಂಬ ಎರಡು ವಾಯುಗಳನ್ನು ಸಮಾನೌ=ಮೇಲಕ್ಕೆ ಹೋಗುವದು ಕೆಳಕ್ಕೆ ಹೋಗುವದೆಂಬ ವ್ಯಾಪಾರಗಳಿಲ್ಲದೇ, ಮೇಲಕ್ಕೆ ಮಾತ್ರ ಹೋಗುವಂತೆ ಕೃತ್ವಾ=ಮಾಡಿ ಉದಾನಂ=ಮೂಲಾಧಾರದಿಂದ ಮೇಲಕ್ಕೆ ಹೊರಟು ಸುಷುಮ್ನಾ ನಾಡಿಯಲ್ಲಿ ಸಂಚರಿಸುವ ಉದಾನ ವಾಯುವನ್ನು ಉತ್ಥಾಪ್ಯ=ಮೇಲಕ್ಕೆ ಹೋಗುವಂತೆ ಮಾಡಿ ನಾಭಿಚಕ್ರಕ್ಕೆ ತಂದು, ಅನಂತರ ನಾಭಿಚಕ್ರತಃ=ನಾಭಿಚಕ್ರದಿಂದ ಧಿಯಾ=ನಿಶ್ಚಲಮನಸ್ಸಿನಿಂದ ಶನೈಃ=ಉದ್ವೇಗವಿಲ್ಲದೇ ಮೆಲ್ಲನೇ ಹೃದಿ=ಹೃದಯದಲ್ಲಿ ಸ್ಥಾಪ್ಯ=ನಿಲ್ಲಿಸಿ ಉರಸಿ ಸ್ಥಿತಂ=ಹೃದಯದಲ್ಲಿದ್ದ ವಾಯುವನ್ನು ಕಂಠಕ್ಕೆ ತಂದು ಕಂಠಾತ್=ಕುತ್ತಿಗೆಯಿಂದ ಭ್ರುವೋಃ ಮಧ್ಯಂ=ಹುಬ್ಬುಗಳ ಮಧ್ಯದಲ್ಲಿ ಅನಯತ್=ತಂದಳು.

ಅಥವಾ ಎಲ್ಲ ಶರೀರ ಸಂಧಿಗಳಲ್ಲೂ ಸಂಚರಿಸುವ ವ್ಯಾನವಾಯುವನ್ನು ಅನಿಲೌ=ಪ್ರಾಣಾಪಾನಗಳನ್ನೂ ಸಮಾನೌ ಕೃತ್ವಾ=ಸಮಾನ ವಾಯುವನೊಂದಿಗೆ ಸೇರಿಸಿ ಅಸಮಾನ ವಾಯುವನ್ನು ಸೋದಾನಂ=ಉದಾನ ವಾಯುವಿನೊಡನೆ ಸೇರಿಸಿ ಉತ್ಥಾಪ್ಯ=ಮೇಲೆ ಮೇಲೆ ಇರುವ ಸ್ಥಾನಗಳಿಗೆ ಕ್ರಮವಾಗಿ ಅನಯತ್=ಜೀವನೊಟ್ಟಿಗೆ ತಂದಳು ಎಂದಾದರೂ ಅನ್ವಯಿಸಬಹುದು.

ವಾಯು ಒಂದನ್ನೇ ಮೇಲಕ್ಕೆ ತರುವದು ಯೋಗಿಗಳಿಗೆ ನಿತ್ಯ ಅಭ್ಯಾಸವಿರುವದರಿಂದ ಅಷ್ಟೇ ಅರ್ಥ ಮಾಡದೇ ದ್ರವ್ಯವನ್ನು ಕೊಂಡೊಯ್ಯುವ ವಾಯುವನ್ನು ಜೀವನೆಂಬ ದ್ರವ್ಯದೊಡನೆ ಮೇಲಕ್ಕೆ ಏರಿಸಿದಳು ಎಂದರ್ಥ ಮಾಡಬೇಕು. ॥೨॥

**ಏವಂ ಸ್ವದೇಹಂ ಮಹತಾಂ ಮಹೀಯಸಾ**
**ಮುಹುಃ ಸಮಾರೋಪಿತಮಂಕಮಾದರಾತ್ ।**
**ಜಿಹಾಸತೀ ದಕ್ಷರುಷಾ ಮನಸ್ವಿನೀ**
**ದಧಾರ ಗಾತ್ರೇಷ್ವನಿಲಾಗ್ನಿಧಾರಣಮ್ ॥೩॥**

ಏವಂ=ಮೇಲೆ ಹೇಳಿದಂತೆ ವಾಯುವನ್ನು ಭ್ರೂಮಧ್ಯಕ್ಕೆ ತಂದು, ತಾನೂ ಅಲ್ಲಿಯೇ ನಿಂತು ಮನಸ್ವಿನೀ=ಮನಸ್ಸನ್ನು ತನ್ನ ಅಧೀನದಲ್ಲಿರಿಸಿಕೊಂಡ ದಾಕ್ಷಾಯಣಿಯು

ಮಹತಾಂ=ಇಂದ್ರಾದಿಗಳಿಗೂ ಮಹೀಯಸಾ=ಉತ್ತಮನಾದ ರುದ್ರದೇವನಿಂದ ಮುಹುಃ=ಪುನಃ ಪುನಃ ಯಾವಾಗಲೂ ಆದರಾತ್=ಪ್ರೇಮದಿಂದ ಅಂಕಂ=ತೊಡೆಯ ಮೇಲೆ ಸಮಾರೋಪಿತಂ=ಕೂಡಿಸಿಕೊಂಡಿದ್ದ ಸ್ವದೇಹಂ=ತನ್ನ ದೇಹವನ್ನು ಜಿಹಾಸತೀ=ಬಿಡಲು ಬಯಿಸಿದ ಸಾ=ಸತೀದೇವಿಯು ದಕ್ಷರುಷಾ=ತಂದೆಯ ಮೇಲಿನ ಕೋಪದಿಂದ ಗಾತ್ರೇಷು=ತನ್ನ ಅವಯವಗಳಲ್ಲಿ ಅನಿಲಾಗ್ನಿಧಾರಣಂ=ವಾಯು ಅಗ್ನಿಗಳ ಉತ್ಪತ್ತಿಕಾರಣನಾದ, ಅವರಲ್ಲಿರುವ ಆ ಹೆಸರಿನ ಶ್ರೀಹರಿಯ ಧ್ಯಾನವನ್ನು ದಧಾರ=ಮಾಡಿದಳು.

♦ ಇಲ್ಲಿ ದಕ್ಷರುಷಾ ಎಂದು ಹೇಳಿದ್ದರಿಂದ ದಕ್ಷನಿಗೆ ತನ್ನ ದೇಹಸಂಸ್ಕಾರವೂ ಸಿಗಬಾರದು ಎಂಬ ಅಭಿಪ್ರಾಯವಿತ್ತೆಂದು ಸೂಚಿತವಾಗುವದು.

♦ ಮತ್ತು ಗುರುದ್ರೋಹ ಮಾಡಿದ ದಕ್ಷನಿಂದ ಬಂದ ದೇಹವನ್ನು ಬಿಡುವದರಿಂದ ಆತ್ಮಹತ್ಯಾದೋಷವೂ ಇಲ್ಲವೆಂದೂ ಸೂಚಿತವಾಗುವದು.

♦ ರುದ್ರದೇವನು ತನ್ನ ತೊಡೆಯ ಮೇಲೆ ಏರಿಸಿಕೊಂಡ ದೇಹ ಎಂದು ಹೇಳಿದ್ದರಿಂದ ಪತಿಯ ಪ್ರೀತಿಪಾತ್ರವಾದ ದೇಹವು ತ್ಯಾಗಯೋಗ್ಯವಲ್ಲವೆಂದೂ ಸೂಚಿತವಾಗುವದು.

**ತತಃ ಸ್ವಭರ್ತುಶ್ಚರಣಾಂಬುಜಾಸವಂ**
**ಜಗದ್ಗುರೋಶ್ಚಿಂತಯತೀ ನ ಚಾಪರಮ್ ।**
**ದದರ್ಶ ದೇಹೇ ಹತಕಲ್ಮಷಾ ಸತೀ**
**ಸದ್ಯಃ ಪ್ರಜಜ್ವಾಲ ಸಮಾಧಿಜಾಗ್ನಿನಾ ॥೪॥**

ತತಃ=ವಾಯು ಅಗ್ನಿಗಳ ಧ್ಯಾನ ಮಾಡಿದ ನಂತರ ಸತೀ=ಸತೀದೇವಿಯು ಜಗದ್ಗುರೋಃ=ಜ್ಞಾನೋಪದೇಶಕನಾದ್ದರಿಂದ ಇಂದ್ರಾದಿಜಗತ್ತಿಗೆ ಆಚಾರ್ಯನೆನಿಸಿದ ಸ್ವಭರ್ತುಃ=ತನ್ನ ಗಂಡನಾದ ರುದ್ರದೇವರ, ಹಾಗೂ ಅವರಿಗಿಂತ ಉತ್ತಮರಾದ ಅವರ ಅಂತರ್ಯಾಮಿಗಳಾದ ಭಾರತೀ-ಸರಸ್ವತೀ-ವಾಯು-ಬ್ರಹ್ಮ-ಲಕ್ಷ್ಮೀ ಮತ್ತು ಶ್ರೀಹರಿ ಇವರುಗಳ ಚರಣಾಂಬುಜಾಸವಂ=ಪಾದಕಮಲಗಳ ಧ್ಯಾನದಿಂದುಂಟಾದ ಆನಂದವನ್ನು ಚಿಂತಯತೀ=ಆಸ್ವಾದಿಸುತ್ತಾ ಅಪರಂ=ರುದ್ರದೇವರಿಗಿಂತ ತಾರತಮ್ಯದಲ್ಲಿ ಕಡಿಮೆಯಾದ ಇಂದ್ರಾದಿ ಇತರರನ್ನು ನ ಚಿಂತಯತೀ=ತನಗೆ ನಿಯಾಮಕರೆಂದು ಅನುಸಂಧಾನ ಮಾಡದೇ ಚ=ಉತ್ತಮರಾದ ವಾಯು ಮುಂತಾದವರನ್ನು ಚಿಂತಿಸುವವಳಾಗಿ ದೇಹೇ=ತನ್ನ ಮನಸ್ಸಿನಲ್ಲಿ ದದರ್ಶ=ತನಗಿಂತ ಉತ್ತಮರನ್ನು ನೋಡಿದಳು. (ಕಡಿಮೆಯಾದವರನ್ನು ನ ದದರ್ಶ= ನೋಡಲಿಲ್ಲ)

ಆದ್ದರಿಂದ ಹತಕಲ್ಮಷಾ=ಯೋಗಾಭ್ಯಾಸದಿಂದ ಮಾಡಿದ ದೇಹತ್ಯಾಗರೂಪವಾದ ಪ್ರಾಯಶ್ಚಿತ್ತದಿಂದಾಗಿ ಪಾಪರಹಿತಳಾಗಿ,

♦ ದೊಡ್ಡವರ ನಿಂದೆಯನ್ನು ಕೇಳಿದ್ದರಿಂದ ಬಂದಿದ್ದ ಪಾಪದಿಂದ ದೂರಳಾಗಿ,

♦ ತಂದೆಯ ಮೇಲೆ ಕೋಪ ಮಾಡಿಕೊಂಡದ್ದಕ್ಕೆ ಬಂದ ಪಾಪ ಹಾಗೂ ಹಾಗೂ ಗಂಡನ ಮಾತು ಕೇಳದೇ ಇಲ್ಲಿಗೆ ಬಂದುದರಿಂದ ಬಂದ ಪಾಪ ಇವುಗಳಿಂದ ದೂರಳಾಗಿ

ದೇಹಂ ತತ್ಯಾಜ=ದೇಹವನ್ನು ಬಿಟ್ಟಳು. ಸದ್ಯಃ=ಬಿಟ್ಟಕ್ಷಣದಲ್ಲಿಯೇ ಸಮಾಧಿ ಜಾಗ್ನಿನಾ=ಧ್ಯಾನದಿಂದ ಉತ್ಪನ್ನವಾದ ಅಗ್ನಿಯಿಂದ ಪ್ರಜಜ್ವಾಲ=ದೇಹವು ಉರಿದುಹೋಯಿತು.

**ಭಾಗವತತಾತ್ಪರ್ಯ :-**

ಇಲ್ಲಿ ''ಅಪರಂ ನ ಚಿಂತಯತೀ'' ಎಂದು ಹೇಳಿದ್ದರಿಂದ ಉತ್ತಮರಾದ ವಿಷ್ಣು ಮುಂತಾದವರನ್ನೂ ಧ್ಯಾನ ಮಾಡಲಿಲ್ಲವೆಂದು ತೋರುವದು. ಆ ಕಾರಣ ವಿವಕ್ಷಿತ ಅರ್ಥವನ್ನು ತಿಳಿಸುವರು :-

**ನ ಚಾಪರಂ ತಸ್ಮಾದವರಂ ನ ಚಿಂತಯತೀ । ಪರಂತು ವಿಷ್ಣ್ವಾದಿಕಂ ಚಿಂತಯತೀ ಚಶಬ್ದಾತ್ ।**

**ರುದ್ರಂ ಚ ಬ್ರಹ್ಮವಾಯೂ ಚ ವಿಷ್ಣುಂ ಚೈವ ಶ್ರಿಯಂ ಗಿರಮ್ ।**
**ಉಮಾ ಚಿಂತಯತೀ ದೇಹಂ ತತ್ಯಾಜಾನ್ಯಂ ನ ಚಾಸ್ಮರತ್ ॥ ಇತಿ ತತ್ವನಿರ್ಣಯೇ ।**

''ನ ಚ ಅಪರಂ'' ಎಂದರೆ ತನಗಿಂತ ಅಧಮರಾದವರನ್ನು ಧ್ಯಾನಿಸಲಿಲ್ಲ ಎಂದರ್ಥ. ಏಕೆಂದರೆ- ಮೂಲದಲ್ಲಿ ಚಶಬ್ದವಿದೆ. ಅದರಿಂದಾಗಿ ಉತ್ತಮರನ್ನು ಚಿಂತಿಸಿದಳೆಂದು ಅರ್ಥವಾಗುವದು. ಇಲ್ಲವಾದರೆ (ಅವರನ್ನೂ ಚಿಂತಿಸಲಿಲ್ಲ ಎಂದರೆ) ಚಶಬ್ದವು ವ್ಯರ್ಥವಾಗುವದು. ಹೀಗಾಗಿ ಇಲ್ಲಿ 'ಅಪರ'ಶಬ್ದವು ಅವರ (ಅಧಮ) ಎಂಬ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ. ಹೊರತು ಭಿನ್ನ ಎಂಬ ಅರ್ಥದಲ್ಲಿ ಅಲ್ಲ ಎಂದು ಭಾವ.

ಅಲ್ಲದೇ ತತ್ವನಿರ್ಣಯದಲ್ಲಿ :- ರುದ್ರ-ಶೇಷ-ಗರುಡ, ಬ್ರಹ್ಮ-ವಾಯುಗಳು ಮತ್ತು ವಿಷ್ಣು ಹಾಗೂ ಲಕ್ಷ್ಮೀ-ಸರಸ್ವತೀ ಇವರನ್ನು ಧ್ಯಾನ ಮಾಡುತ್ತಾ ಉಮೆಯು ದೇಹತ್ಯಾಗ ಮಾಡಿದಳು. ಹೊರತು ಬೇರೆಯವರನ್ನು ಸ್ಮರಿಸಲಿಲ್ಲವೆಂದು ಹೇಳಿದೆ. ।।೪।।

**ತತ್ ಪಶ್ಯತಾಂ ಖೇ ಭುವಿ ಚಾದ್ಭುತಂ ಮಹತ್**
**ಹಾಹೇತಿ ವಾದಃ ಸುಮಹಾನಜಾಯತ ।**

**ಹಂತ ಪ್ರಿಯಾ ದೇವತಮಸ್ಯ ದೇವೀ**
**ಜಹಾವಸೂನ್ ಕೇನ ಸತೀ ಪ್ರಕೋಪಿತಾ ॥೫॥**

ಖೇ=ಆಕಾಶದಲ್ಲಿ ಭುವಿ ಚ=ಭೂಮಿಯಲ್ಲಿಯೂ ಇರುವ ಪಶ್ಯತಾಂ=ನೋಡುವ ಜನರಿಗೆ ತತ್=ದೇಹತ್ಯಾಗರೂಪವಾದ ಕರ್ಮವು ಮಹತ್ ಅದ್ಭುತಂ ಅಭವತ್=ಬಹಳ ಆಶ್ಚರ್ಯಜನಕವಾಯಿತು. ದೇವತಮಸ್ಯ=ಅತ್ಯಂತಪೂಜ್ಯನಾದ ರುದ್ರದೇವನ ಪ್ರಿಯಾ=ಹೆಂಡತಿಯಾದ ಸತೀ ದೇವೀ=ಸತೀದೇವಿಯು ಕೇನ=ದಕ್ಷಪ್ರಜಾಪತಿಯಿಂದ ಪ್ರಕೋಪಿತಾ=ಕೋಪ ತರಿಸಲ್ಪಟ್ಟವಳಾಗಿ ಅಸೂನ್ ಜಹೌ=ಪ್ರಾಣಗಳನ್ನು ತೊರೆದಳು. ಹಂತ=ವಿಷಾದವು ಎಂದು ಹಾಹಾ ಇತಿ ವಾದಃ ಸುಮಹಾನ್ ಅಜಾಯತ=ಬಹಳ ದೊಡ್ಡ ಪ್ರಮಾಣದ ಹಾಹಾಕಾರ ಉಂಟಾಯಿತು. ॥೫॥

ಕೇವಲ ಕಥೆ ಹೇಳಿ ಏನು ಪ್ರಯೋಜನ ? ದೋಷ ಯಾರದು ಎಂದು ಹೇಳಬೇಕಲ್ಲವೇ ? ಎಂದರೆ ಹೇಳುವರು :-

**ಅಹೋ ತ್ವನಾರ್ಯಂ ಮಹದಸ್ಯ ಪಶ್ಯತ**
**ಪ್ರಜಾಪತೇರ್ಯಸ್ಯ ಚರಾಚರಾಃ ಪ್ರಜಾಃ ।**
**ಜಹಾವಸೂನ್ ಯದ್ವಿಮತಾಽಽತ್ಮಜಾ ಸತೀ**
**ಮನಸ್ವಿನೀ ಮಾನಮಭೀಕ್ಷ್ಣಮರ್ಹತೀ ॥೬॥**

ಅಭೀಕ್ಷ್ಣಂ=ಬಹಳವಾದ ಮಾನಂ=ಗೌರವವನ್ನು ಅರ್ಹತೀ=ಹೊಂದಲು ಯೋಗ್ಯಳಾದ, ಮನಸ್ವಿನೀ=ಜಿತಮನಸ್ಕಳಾದ, ಆತ್ಮಜಾ=ಮಗಳಾದ, ಸತೀ=ಸತೀದೇವಿಯು ಯದ್ವಿಮತಾ= ಯಾವನು ಮಾಡಿದ ಅಪಮಾನದಿಂದ ಅಸೂನ್ ಜಹೌ=ಪ್ರಾಣವನ್ನು ತ್ಯಜಿಸಿದಳೋ, ಚರಾಚರಾಃ ಪ್ರಜಾಃ=ಸ್ಥಾವರ-ಜಂಗಮರೂಪರಾದ ಪ್ರಜೆಗಳು ಯಸ್ಯ=ಯಾವನ ಅಧೀನರೋ ಅಥವಾ ಯಾವನ ಸಂತತಿಯಿಂದ ಹುಟ್ಟಿರುವವರೋ ಅಸ್ಯ=ಅಂತಹ ಪ್ರಜಾಪತೇಃ= ದಕ್ಷಪ್ರಜೇಶ್ವರನ *ಅನಾರ್ಯಂ=ಮೂರ್ಖತನದ ಕೆಲಸವನ್ನು ಪಶ್ಯತ=ನೋಡಿರಿ.

*''ಅನಾತ್ಮ್ಯಂ'' ಎಂಬ ಪಾಠವಿದ್ದಲ್ಲಿ ಜಾಡ್ಯವನ್ನು ಎಂದರ್ಥ ತಿಳಿಯಬೇಕು. ॥೬॥

**ಸೋಽಯಂ ದುರ್ಮರ್ಷಹೃದಯೋ ಬ್ರಹ್ಮಬಂಧುಃ**
**ಲೋಕೇಽಪಕೀರ್ತಿಂ ಮಹತೀಮವಾಪ್ಸ್ಯತಿ ।**
**ಯದಂಗಜಾಂ ಸ್ವಾಂ ಪುರುಷದ್ವಿಡುದ್ಯತಾಂ**
**ನ ಪ್ರತ್ಯಷೇಧನ್ಮೃತಯೇಽಪರಾಧತಃ ॥೭॥**

ಸಃ ಅಯಂ=ಯಾವನು ಮೇಲೆ ಹೇಳಿದ ಮೂರ್ಖತನವನ್ನು ಮಾಡಿದನೋ ಆ ದಕ್ಷನು ದುರ್ಮರ್ಷಹೃದಯಃ=ದುಃಖವನ್ನು ಸಹಿಸಲಶಕ್ಯವಾದ ಮನಸ್ಸುಳ್ಳವನು. ಆದ್ದರಿಂದಲೇ (ಬ್ರಾಹ್ಮಣರು ಮೃದುಹೃದಯದವರಾದ್ದರಿಂದಲೇ) ಬ್ರಹ್ಮಬಂಧುಃ=ದ್ವಿಜಾಧಮನಾಗಿದ್ದಾನೆ. ಯತ್=ಯಾವ ಕಾರಣ ಪುರುಷದ್ವಿಟ್=ರುದ್ರದೇವರನ್ನು ದ್ವೇಷಿಸುವ ಇವನು ಅಪರಾಧತಃ= ತಾನು ಮಾಡಿದ ಅವಮಾನದಿಂದಾಗಿ ಮೃತಯೇ=ಸಾಯಲು ಉದ್ಯತಾಂ= ಪ್ರಯತ್ನಿಸುವ ಸ್ವಾಂ ಆಗಜಾಂ=ತನ್ನ ಮಗಳನ್ನು ನ ಪ್ರತ್ಯಷೇಧತ್=ನಿವಾರಿಸಲಿಲ್ಲವೋ (ತಡೆಯಲಿಲ್ಲವೋ) ತತ್=ಆದಕಾರಣ ಲೋಕೇ ಜಗತ್ತಿನಲ್ಲಿ ಮಹತೀಂ ಅಪಕೀರ್ತಿಂ= ದೊಡ್ಡ ಅಪಯಶಸ್ಸನ್ನು ಅವಾಪ್ಸ್ಯತಿ=ಹೊಂದುವನು. ।।೭।।

**ದಕ್ಷಸ್ತು ದೃಷ್ಟ್ವಾ ದುಹಿತುಃ ಸ್ವನಿಮಿತ್ತಂ ವಿನಾಶನಮ್ ।**
**ಬಹ್ವತಪ್ಯತ ಘೋರೇಣ ಮಯಾಽಸಾಧು ಕೃತಂ ಬತ ।।೮।।**

ದಕ್ಷಸ್ತು=ದಕ್ಷನಾದರೂ ಸ್ವನಿಮಿತ್ತಂ=ತನ್ನಿಂದಾಗಿ ಆದ ದುಹಿತುಃ=ಮಗಳ ವಿನಾಶನಂ=ನಾಶವನ್ನು ದೃಷ್ಟ್ವಾ=ಕಂಡು ಘೋರೇಣ=ಕೋಪಗೊಂಡ ಮಯಾ=ನನ್ನಿಂದ ಅಸಾಧು ಕೃತಂ ಬತ=ತಪ್ಪು ಕೆಲಸ ಮಾಡಲ್ಪಟ್ಟಿತಲ್ಲ ! ಎಂದು ಬಹು ಅತಪ್ಯತ=ಬಹಳವಾಗಿ ಸಂತಾಪಗೊಂಡನು. ।।೮।।

**ಧಿಙ್ ಮಾಮವಿಜಿತಾತ್ಮಾನಂ ನಿರ್ಗುಣಂ ನಿರಪತ್ರಪಮ್ ।**
**ಯೋಽಹಂ ಸ್ವೀಕೃತ್ಯ ಮೃತಕಂ ವ್ಯರ್ಥಮೇನೋ ಮಹೀಯಸಿ ।।೯।।**

ಯಃ ಅಹಂ=ಯಾವ ನಾನು ಮೃತಕಂ ಸ್ವೀಕೃತ್ಯ=ಮರಣಸ್ವಭಾವದ ದೇಹವನ್ನು ಸ್ವೀಕರಿಸಿ (ದೇಹದಮೇಲೆ ಅಭಿಮಾನ ಮಾಡಿ) ಮಹೀಯಸಿ=ಉತ್ತಮರಾದ ರುದ್ರದೇವರ ವಿಷಯದಲ್ಲಿ ವ್ಯರ್ಥಂ=ಯಾವ ಪ್ರಯೋಜನವೂ ಇಲ್ಲದ ಏನಃ ಅಕಾರ್ಷಂ=ಅಪರಾಧವನ್ನು ಮಾಡಿದೆನೋ ಅಂತಹ ಅವಿಜಿತಾತ್ಮಾನಂ=ಮನೋನಿಗ್ರಹವಿಲ್ಲದ, ನಿರ್ಗುಣಂ=ಶಮಾದಿಗುಣ ರಹಿತನಾದ, ನಿರಪತ್ರಪಂ=ಲಜ್ಜೆಯಿಲ್ಲದ ಮಾಂ=ನನಗೆ ಧಿಕ್=ಧಿಕ್ಕಾರವಿರಲಿ. ।।೯।।

**ವದತ್ಯೇವಮಜೇ ಸತ್ಯಾ ದೃಷ್ಟ್ವಾಽಸುತ್ಯಾಗಮದ್ಭುತಮ್ ।**
**ದಕ್ಷಂ ಸುಪಾರ್ಷದಾ ಹಂತುಮುದತಿಷ್ಠನ್ನುದಾಯುಧಾಃ ।।೧೦।।**

ಅಜೇ=ದಕ್ಷನು ಏವಂ ವದತಿ ಸತಿ=ಈ ರೀತಿ ಮಾತಾಡುತ್ತಿರಲು ಸತ್ಯಾಃ=ಸತೀದೇವಿಯ ಅದ್ಭುತಂ=ಆಶ್ಚರ್ಯಕರವಾದ ಅಸುತ್ಯಾಗಂ=ಪ್ರಾಣತ್ಯಾಗವನ್ನು ದೃಷ್ಟ್ವಾ=ನೋಡಿ ಸುಪಾರ್ಷದಾಃ=ಸತಿಯ ಸೇವಕರು ದಕ್ಷಂ ಹಂತುಂ=ದಕ್ಷನನ್ನು ಕೊಲ್ಲಲು ಉದಾಯುಧಾಃ= ಆಯುಧಗಳನ್ನೆತ್ತಿಕೊಂಡವರಾಗಿ ಉದತಿಷ್ಠನ್=ಎದ್ದುನಿಂತರು. ।।೧೦।।

**ತೇಷಾಮಾಪತತಾಂ ವೇಗಂ ನಿಶಾಮ್ಯ ಭಗವಾನ್ ಭೃಗುಃ ।**
**ಯಜ್ಞಘ್ನಘ್ನೇನ ಯಜುಷಾ ದಕ್ಷಿಣಾಗ್ನೌ ಜುಹಾವ ಹ ।।೧೧।।**

ಆಪತತಾಂ=ಮೇಲೆರಗುವ ತೇಷಾಂ=ರುದ್ರಭೃತ್ಯರ ವೇಗಂ=ತ್ವರೆಯನ್ನು ನಿಶಾಮ್ಯ= ನೋಡಿ ಭಗವಾನ್=ಪೂಜ್ಯನಾದ ಭೃಗುಃ=ಭೃಗುಋಷಿಯು ಯಜ್ಞಘ್ನಘ್ನೇನ=ಯಜ್ಞದ ನಾಶಮಾಡುವವರನ್ನು ನಾಶಮಾಡುವ ಯಜುಷಾ="ಅಪಹತಾ ರಕ್ಷಾಂಸಿ" ಮುಂತಾದ ಯಜುರ್ವೇದ ಮಂತ್ರದಿಂದ ದಕ್ಷಿಣಾಗ್ನೌ=ದಕ್ಷಿಣಾಗ್ನಿಯಲ್ಲಿ ಜುಹಾವ=ಹೋಮ ಮಾಡಿದನು.

**ಯೇನೋರಸಿಂ ದುಸ್ತರಿತಾಸೋ ಹ್ಯನ್ಮತಾಸೋ ಅನೃತಂ ವಯಂತಃ ।**
**ತೇಷಾಂ ವಪೂಂಷ್ಯರ್ಚಿಷಾ ಜಾತವೇದ ಶುಷ್ಕಂ ನ ವೃಕ್ಷಮುತ ಸಂದಹಸ್ವ।।**

ಮುಂತಾದ ಯಜುರ್ವೇದಮಂತ್ರದಿಂದ ಹೋಮ ಮಾಡಿದನು ಎಂದು ವಿಜಯಧ್ವಜರು ಉಲ್ಲೇಖಿಸಿದ್ದಾರೆ. ।।೧೧।।

**ಅಧ್ವರ್ಯುಣಾ ಹೂಯಮಾನೇ ದೇವಾ ಉತ್ಪೇತುರೋಜಸಾ ।**
**ಋಭವೋ ನಾಮ ತಪಸಾ ಸೋಮಂ ಪ್ರಾಪ್ತಾಃ ಸಹಸ್ರಶಃ ।।೧೨।।**

ಅಧ್ವರ್ಯುಣಾ=ಯಜುರ್ವೇದ ಹೇಳುವ ಋತ್ವಿಕನಾದ ಭೃಗುವಿನಿಂದ ಹೂಯಮಾನೇ=ಹೋಮ ಮಾಡುತ್ತಿರಲು, ಯೇ=ಯಾರು ತಪಸಾ=ತಪಸ್ಸಿನಿಂದ ಓಜಸಾ= ಸಾಮರ್ಥ್ಯದಿಂದಲೂ ಸಹಸ್ರಶಃ=ಸಾವಿರಾರುಬಾರಿ ಸೋಮಂ ಪ್ರಾಪ್ತಾಃ=ಸೋಮಭಾಗವನ್ನು ಪಡೆದರೋ ಅಂತಹ ಋಭವೋ ನಾಮ ದೇವಾಃ=ಋಭು ಎಂಬ ಹೆಸರಿನ ದೇವತೆಗಳು ಉತ್ಪೇತುಃ=ಹುಟ್ಟಿದರು. ।।೧೨।।

**ತೈರಲಾತಾಯುಧೈಃ ಸರ್ವೇ ಪ್ರಮಥಾಃ ಸಹಗುಹ್ಯಕಾಃ ।**
**ಹನ್ಯಮಾನಾ ದಿಶೋ ಭೇಜುರುಶದ್ಭಿರ್ಬ್ರಹ್ಮತೇಜಸಾ ।।೧೩।।**

।। ಇತಿ ಶ್ರೀಮದ್ಭಾಗವತೇ ಚತುರ್ಥಸ್ಕಂಧೇ ಪಂಚಮೋಽಧ್ಯಾಯಃ ।।

ಬ್ರಹ್ಮತೇಜಸಾ=ಬ್ರಾಹ್ಮಣರ ಸಾಮರ್ಥ್ಯದಿಂದ ಉಶದ್ಭಿಃ=ಭೃಗುವಿನ ಇಚ್ಛಾಪೂರ್ಣ ಮಾಡಲು ಇಚ್ಛಿಸುವ, ಅಲಾತಾಯುಧೈಃ=ಕೊಳ್ಳಿಗಳೇ ಆಯುಧವಾಗಿವುಳ್ಳ ತೈಃ=ಆ ಋಭುಗಳಿಂದ ಸಹಗುಹ್ಯಕಾಃ=ಗುಹ್ಯಕರಿಂದ ಸಹಿತರಾದ ಪ್ರಮಥಾಃ=ಪ್ರಮಥರು (ಸತಿಯ ಸುಪಾರ್ಷದರು) ದಿಶಃ ಭೇಜುಃ=ದಿಕ್ಕುಗಳಿಗೆ ಕಳಿಸಲ್ಪಟ್ಟರು. ದಿಕ್ಕು-ದಿಕ್ಕುಗಳಲ್ಲಿ ಓಡಿಸಲ್ಪಟ್ಟರು ಎಂದರ್ಥ.

।। ಇಲ್ಲಿಗೆ ಐದನೇ ಅಧ್ಯಾಯವು ಮುಗಿಯಿತು ।।

# ಅಥ ಷಷ್ಠೋಽಧ್ಯಾಯಃ

**ಮೈತ್ರೇಯ ಉವಾಚ –**

**ಭವೋ ಭವಾನ್ಯಾ ನಿಧನಂ ಪ್ರಜಾಪತೇಃ**
**ಅಸತ್ಕೃತಾಯಾ ಹ್ಯವಗಮ್ಯ ನಾರದಾತ್ ।**
**ಸ್ವಪಾರ್ಷದಸೈನ್ಯಂ ಚ ತದಧ್ವರೇಶೈಃ**
**ವಿದ್ರಾವಿತಂ ಕ್ರೋಧಮಪಾರಮಾದಧೇ ॥೧॥**

ಭವಃ=ರುದ್ರದೇವರು ಪ್ರಜಾಪತೇಃ=ದಕ್ಷಪ್ರಜಾಪತಿಯಿಂದ ಅಸತ್ಕೃತಾಯಾಃ= ಅಪಮಾನಿತಳಾದ ಭವಾನ್ಯಾಃ=ಸತೀದೇವಿಯ ನಿಧನಂ=ಮರಣವನ್ನು ಚ=ಮತ್ತು ತದಧ್ವರೇಶೈಃ=ದಕ್ಷನ ಯಜ್ಞ ಮಾಡಿಸಲು ಸಮರ್ಥರಾದ ಭೃಗು ಮುಂತಾದವರಿಂದ ಸ್ವಪಾರ್ಷದಸೈನ್ಯಂ=ತನ್ನ ಭೃತ್ಯರ ಸೈನ್ಯವನ್ನು ವಿದ್ರಾವಿತಂ=ಓಡಿಸಲ್ಪಟ್ಟದ್ದನ್ನು ನಾರದಾತ್= ನಾರದರಿಂದ ಅವಗಮ್ಯ=ತಿಳಿದು ಅಪಾರಂ ಕ್ರೋಧಂ ಆದಧೇ=ಬಹಳ ಸಿಟ್ಟಾದನು. ॥೧॥

**ಕ್ರುದ್ಧಃ ಸುದಷ್ಟೋಷ್ಠಪುಟಃ ಸ ಧೂರ್ಜಟಿಃ**
**ಜಟಾಂ ತಟಿದ್ವಹ್ನಿಸಟೋಗ್ರರೋಚಿಷಮ್ ।**
**ಉತ್ಕೃತ್ಯ ರೌದ್ರಃ ಸಹಸೋತ್ಥಿತೋ ಹಸನ್**
**ಗಂಭೀರನಾದೋ ವಿಸಸರ್ಜ ತಾಂ ಭುವಿ ॥೨॥**

ಕ್ರುದ್ಧಃ=ಕುಪಿತನಾದ ಸುದಷ್ಟೋಷ್ಠಪುಟಃ=ಚೆನ್ನಾಗಿ ತುಟಿಗಳನ್ನು ಕಚ್ಚಿದ ಸಃ ಧೂರ್ಜಟಿಃ=ಪ್ರಲಯ ಮಾಡುವನೆಂದು ಪ್ರಸಿದ್ಧನಾದ, ಕಂಪಿಸುವ ಜಟಾವುಳ್ಳ ರುದ್ರದೇವನು ರೌದ್ರಃ ಸನ್=ಕ್ರೂರನಾಗಿ ಅರ್ಥಾತ್ ಮಧ್ಯಾಹ್ನದ ಸೂರ್ಯನಂತೆ ತೀಕ್ಷ್ಣನಾಗಿ ಸಹಸಾ=ಹಠಾತ್ತಾಗಿ ಉತ್ಥಿತಃ=ಎದ್ದು ಹಸನ್=ಅಟ್ಟಹಾಸ ಮಾಡುತ್ತಾ ಗಂಭೀರನಾದಃ=ಗಂಭೀರವಾದ ಧ್ವನಿ ಮಾಡುವವನಾಗಿ ತಟಿದ್ವಹ್ನಿಸಟೋಗ್ರರೋಚಿಷಮ್=

ಮಿಂಚಿನ ಬೆಂಕಿಯ ಜ್ವಾಲೆಯಂತೆ ಕ್ರೂರವಾದ ಕಾಂತಿಯುಳ್ಳ ಜಟಾಂ=ಜಟೆಯನ್ನು (ತಲೆಗೂದಲನ್ನು) ಉತ್ಕೃತ್ಯ=ಕಿತ್ತಿ ತಾಂ=ಅದನ್ನು ಭುವಿ ವಿಸಸರ್ಜ=ನೆಲಕ್ಕೆ ಅಪ್ಪಳಿಸಿದನು.

**ತತೋಽತಿಕಾಯಸ್ತನುವಾ ಸ್ಪೃಶನ್ ದಿವಂ**
**ಸಹಸ್ರಬಾಹುರ್ಘನರಕ್ತಸೂರ್ಯದೃಕ್ ।**
**ಕರಾಲದಂಷ್ಟ್ರೋ ಜ್ವಲದಗ್ನಿಮೂರ್ಧಜಃ**
**ಕಪಾಲಮಾಲೀ ವಿವಿಧೋದ್ಯತಾಯುಧಃ ॥೩॥**

ವಿವಿಧೋದ್ಯತಾಯುಧಃ=ಅನೇಕರೀತಿಯ ಆಯುಧಗಳನ್ನು ಎತ್ತಿಹಿಡಿದ, ಕಪಾಲಮಾಲೀ=ತಲೆಬುರುಡೆಗಳ ಮಾಲೆಯನ್ನು ಧರಿಸಿದ, ಜ್ವಲದಗ್ನಿಮೂರ್ಧಜಃ= ಉರಿಯುವ ಬೆಂಕಿಯಂತಿರುವ ಕೂದಲುಗಳುಳ್ಳ, ಕರಾಲದಂಷ್ಟ್ರಃ=ಭಯಂಕರವಾದ ಹಲ್ಲುಗಳುಳ್ಳ, ಘನರಕ್ತಸೂರ್ಯದೃಕ್=ಸಾಂದ್ರವಾಗಿ ಕೆಂಪಾದ ಸೂರ್ಯನಂತಿರುವ ಕಣ್ಣುಗಳುಳ್ಳ, ಸಹಸ್ರಬಾಹುಃ=ಸಾವಿರಕೈಗಳುಳ್ಳ, ತನುವಾ ದಿವಂ ಸ್ಪೃಶನ್=ಶರೀರದಿಂದ ಆಕಾಶವನ್ನು ಮುಟ್ಟುತ್ತಿರುವ (ಗಗನಚುಂಬಿಯಾದ ಶರೀರವುಳ್ಳ) ಅತಿಕಾಯಃ=ವೀರಭದ್ರನು ತತಃ=ರುದ್ರದೇವರ ಜಟೆಯಿಂದ ಜಾತಃ=ಹುಟ್ಟಿದನು. ॥೩॥

**ತಂ ಕಿಂ ಕರೋಮೀತಿ ಗೃಣಂತಮಾಹ**
**ಬದ್ಧಾಂಜಲಿಂ ಭಗವಾನ್ ಭೂತನಾಥಃ।**
**ದಕ್ಷಂ ಸಯಜ್ಞಂ ಜಹಿ ಮದ್ಭಟಾನಾಂ**
**ತ್ವಮಗ್ರಣೀ ರುದ್ರ ಜಟಾಂಶಕೋ ಮೇ ॥೪॥**

ಭಗವಾನ್ ಭೂತನಾಥಃ=ಪೂಜ್ಯನಾದ ರುದ್ರದೇವನು ಬದ್ಧಾಂಜಲಿಂ=ಕೈಜೋಡಿಸಿರುವ ಕಿಂ ಕರೋಮಿ ಇತಿ ಗೃಣಂತಂ=ಏನು ಮಾಡಲಿ ? ಎಂದು ಕೇಳುತ್ತಿರುವ ತಂ=ಆ ವೀರಭದ್ರನನ್ನು ಕುರಿತು ಹೇ ರುದ್ರ=ಎಲೋ ನನ್ನ ಭಟನಾದ ವೀರಭದ್ರನೆ ! ಮೇ ಜಟಾಂಶಕಃ=ಯಾವ ಕಾರಣ ನನ್ನ ಅಂಶಾವತಾರನೋ ಅತಃ=ಆದ್ದರಿಂದ ತ್ವಂ=ನೀನು ಮದ್ಭಟಾನಾಂ ಅಗ್ರಣೀ ಸನ್=ನನ್ನ ಭಟರ ನೇತಾರನು (ಪ್ರಮುಖನು) ಆಗಿ ಸಯಜ್ಞಂ ದಕ್ಷಂ ಜಹಿ=ಯಜ್ಞಸಹಿತನಾದ ದಕ್ಷನನ್ನು ಸಂಹರಿಸು ಇತಿ ಆಹ=ಎಂದು ಹೇಳಿದನು. ॥೪॥

**ಆಜ್ಞಪ್ತ ಏವಂ ಕುಪಿತೇನ ಮನ್ಯುನಾ**
**ಸ ದೇವದೇವಂ ಪರಿಚಕ್ರಮೇ ವಿಭುಮ್ ।**
**ಮೇನೇ ತದಾಽಽತ್ಮಾನಮಸಂಗರಂಹಸಂ**
**ಸಹೀಯಸಾಂ ತಾತ ಸಹಃ ಸಹಿಷ್ಣುಮ್ ॥೫॥**

ಕುಪಿತೇನ=ಸಿಟ್ಟಾದ ಮನ್ಯುನಾ=ರುದ್ರದೇವರಿಂದ ಏವಂ=ಈ ರೀತಿಯಾಗಿ ಆಜ್ಞಪ್ತಃ= ಆದೇಶಿತನಾದ ಸಃ=ವೀರಭದ್ರನು ವಿಭುಂ=ಸಮರ್ಥನಾದ ದೇವದೇವಂ=ದೇವಶ್ರೇಷ್ಠನಾದ ರುದ್ರದೇವನನ್ನು ಪರಿಚಕ್ರಮೇ=ಪ್ರದಕ್ಷಿಣೆ ಮಾಡಿದನು. ಹೇ ತಾತ=ವಿದುರನೇ ! ತದಾ=ಆಗ ಆತ್ಮಾನಂ=ತನ್ನನ್ನು ಸಹೀಯಸಾಂ=ಸಹನಶಕ್ತಿಯುಳ್ಳವರ ಸಹಃ=ಸಹನಶಕ್ತಿಯನ್ನು ಸಹಿಷ್ಣುಂ ಮೇನೇ=ಸಹಿಸುವನೆಂದು ತಿಳಿದ. ಅಸಂಗರಂಹಸಂ=ಎಲ್ಲಿಯೂ ಆಸಕ್ತವಾಗದ ವೇಗವುಳ್ಳವನು ಎಂದು ತಿಳಿದನು. ಭೃಗು ಮುಂತಾದ ಋತ್ವಿಕರ ಸಾಮರ್ಥ್ಯ ಸಾಲಲಾರದೆಂದು, ನನಗೇನೂ ಮಾಡಲಾರರೆಂದು ತಿಳಿದನು ಎಂದರ್ಥ. ।।೫।।

**ಅನ್ವೀಯಮಾನಃ ಸ ತು ರುದ್ರಪಾರ್ಷದೈ-**
**ರ್ಭೃಶಂ ನದದ್ಭಿರ್ವ್ಯನದತ್ ಸುಭೈರವಮ್ ।**
**ಉದ್ಯಮ್ಯ ಶೂಲಂ ಜಗದಂತಕಾಂತಕಂ**
**ಸಂಪ್ರಾದ್ರವದ್ ಘೋಷಣಭೂಷಣಾಂಘ್ರಿಃ ।।೬।।**

ಸ ತು=ಆ ವೀರಭದ್ರನಾದರೂ ಭೃಶಂ=ಬಹಳವಾಗಿ ನದದ್ಭಿಃ=ಗರ್ಜಿಸುವ ರುದ್ರಪಾರ್ಷದೈಃ=ರುದ್ರದೇವರ ಭೃತ್ಯರೊಡನೆ ಅನ್ವೀಯಮಾನಃ=ಸೇರಿಕೊಂಡು ಸುಭೈರವಂ=ಬಹಳ ಭಯಂಕರವಾಗಿ ವ್ಯನದತ್=ಗರ್ಜಿಸಿದನು. ಘೋಷಣಭೂಷಣಾಂಘ್ರಿಃ= ಶಬ್ದಮಾಡುವ ಭೂಷಣ ಎಂದರೆ ನೂಪುರವನ್ನು (ಕಾಲುಗೆಜ್ಜೆಯನ್ನು) ಧರಿಸಿದ ಕಾಲುಳ್ಳವನಾಗಿ ಜಗದಂತಕಾಂತಕಂ=ಯಮನಿಗೂ ನಾಶಕವಾದ ಶೂಲಂ ಉದ್ಯಮ್ಯ= ತ್ರಿಶೂಲವನ್ನು ಎತ್ತಿಕೊಂಡು ಸಂಪ್ರಾದ್ರವತ್=ಯಜ್ಞಮಂಟಪಕ್ಕೆ ಧಾವಿಸಿದನು. ।।೬।।

**ಅಥರ್ತ್ವಿಜೋ ಯಜಮಾನಃ ಸದಸ್ಯಾಃ**
**ಕಕುಭ್ಯುದೀಚ್ಯಾಂ ಪ್ರಸಮೀಕ್ಷ್ಯ ರೇಣುಮ್ ।**
**ತಮಃ ಕಿಮೇತತ್ ಕುತ ಏತದ್ ರಜೋऽಭೂ-**
**ದಿತಿ ದ್ವಿಜಾ ದ್ವಿಜಪತ್ನ್ಯಶ್ಚ ದಧ್ಯುಃ ।।೭।।**

ಅಥ=ಅನಂತರ ಋತ್ವಿಜಃ=ಯಜ್ಞವನ್ನು ನಡೆಸುವವರು, ಯಜಮಾನಃ= ಯಜ್ಞದೀಕ್ಷೆಯನ್ನು ಪಡೆದ ಯಜಮಾನನು, ಸದಸ್ಯಾಃ=ಸಭಾಸ್ಥಾನದಲ್ಲಿದ್ದು ಮಂತ್ರ-ತಂತ್ರ- ಕರ್ಮ-ಹವಿಸ್ಸು-ದೇವತಾ-ಅಗ್ನಿಗಳ ಸಂಬಂಧವನ್ನು ವಿವೇಚಿಸುವವರು ಇವರೆಲ್ಲರೂ ಉದೀಚ್ಯಾಂ ಕಕುಭಿ=ಉತ್ತರದಿಕ್ಕಿನಲ್ಲಿ ರೇಣುಂ=ಧೂಳಿಯನ್ನು ಪ್ರಸಮೀಕ್ಷ್ಯ=ನೋಡಿ ಕಿಂ ಏತತ್ ತಮಃ=ಇದು ಕತ್ತಲೆ ಏನು ? ಅಲ್ಲ ಧೂಳೇ ಎಂದು ನಿಶ್ಚಯಿಸಿ, ಏತದ್ ರಜಃ ಕುತೋऽಭೂತ್=ಈ ಧೂಳಿಯು ಯಾರಿಂದ ಉಂಟಾಯಿತು ? ಇತಿ=ಎಂದು ದ್ವಿಜಾಃ= ಬ್ರಾಹ್ಮಣರು ಚ=ಮತ್ತು ದ್ವಿಜಪತ್ನ್ಯಃ=ಬ್ರಾಹ್ಮಣರ ಹೆಂಡಂದಿರು ದಧ್ಯುಃ=ವಿಚಾರ ಮಾಡಿದರು.

ವಿಚಾರದ ರೀತಿಯನ್ನು ತಿಳಿಸುವರು -

**ವಾತಾ ನ ವಾಂತಿ ನ ಹಿ ಸಂತಿ ದಸ್ಯವಃ**
**ಪ್ರಾಚೀನಬರ್ಹಿರ್ಜೀವತಿ ಹೋಗ್ರದಂಡಃ ।**
**ಗಾವೋ ನ ಕಾಲ್ಯಂತ ಇದಂ ಕುತೋ ರಜೋ**
**ಲೋಕೋಽಧುನಾ ಕಿಂ ಪ್ರಲಯಾಯ ಕಲ್ಪತೇ ।।೮।।**

ವಾತಾಃ ನ ವಾಂತಿ=ಗಾಳಿ ಬೀಸುತ್ತಿಲ್ಲ, ಉಗ್ರದಂಡಃ=ಚಂಡಶಾಸನನಾದ ಪ್ರಾಚೀನಬರ್ಹಿಃ=ಪ್ರಾಚೀನಬರ್ಹಿ ಎಂಬ ರಾಜನು ಜೀವತಿ ಸತಿ ಬದುಕಿರಲು ದಸ್ಯವಃ ನ ಹಿ ಸಂತಿ=ಕಳ್ಳರೂ ಇಲ್ಲ, ಗಾವಃ=ದನಗಳು ನ ಕಾಲ್ಯಂತೇ=ಓಡಿಸಲ್ಪಡುತ್ತಿಲ್ಲ, ಅಂದಮೇಲೆ ಇದಂ ರಜಃ=ಈ ಧೂಳಿಯು ಕುತಃ=ಯಾವ ಕಾರಣದಿಂದಿರಬಹುದು ? ಅಧುನಾ=ಈಗ ಲೋಕಃ=ಜಗತ್ತು ಪ್ರಲಯಾಯ ಕಲ್ಪತೇ ಕಿಂ=ಪ್ರಳಯಕ್ಕೆ ಅಣಿಯಾಗುವದೇನೋ ?ಎಂದು ಚಿಂತಿಸಿದರು. ।।೮।।

**ಪ್ರಸೂತಿಮಿಶ್ರಾಃ ಸ್ತ್ರಿಯ ಉದ್ವಿಗ್ನಚಿತ್ತಾ**
**ಊಚುರ್ವಿಪಾಕೋ ವೃಜಿನಸ್ಯೈವ ತಸ್ಯ ।**
**ಯತ್ಪಶ್ಯತೀನಾಂ ದುಹಿತೄಣಾಂ ಪ್ರಜೇಶಃ**
**ಸುತಾಂ ಸತೀಮವದಧ್ಯಾವನಾಗಸಾಮ್ ।।೯।।**

ಉದ್ವಿಗ್ನಚಿತ್ತಾಃ=ಭಯಗ್ರಸ್ತರಾದ ಪ್ರಸೂತಿಮಿಶ್ರಾಃ=ದಕ್ಷನ ಹೆಂಡತಿಯಾದ ಪ್ರಸೂತಿಯೇ ಪ್ರಧಾನಳಾಗಿ ಉಳ್ಳ (ಪ್ರಸೂತಿ ಮೊದಲಾದ) ಸ್ತ್ರಿಯಃ=ಸ್ತ್ರೀಯರು, ದುಹಿತೄಣಾಂ ಪಶ್ಯತೀನಾಂ=ಇತರ ಹೆಣ್ಣುಮಕ್ಕಳು ನೋಡುವಾಗಲೇ ಪ್ರಜೇಶಃ=ದಕ್ಷನು ಅನಾಗಸಾಂ= ನಿರಪರಾಧಿಯಾದ ಸುತಾಂ=ಮಗಳಾದ ಸತೀಂ=ಸತೀದೇವಿಯನ್ನು ಅವದಧ್ಯೌ ಇತಿ ಯತ್ (ವೃಜಿನಂ)=ಅವಮಾನಗೊಳಿಸಿದನೆಂಬ ಪಾಪವೇನಿದೆಯೋ ತಸ್ಯ ವೃಜಿನಸ್ಯೈವ ವಿಪಾಕಃ=ಆ ಪಾಪದ ಫಲವೇ ಇದು ಎಂದು ಊಚುಃ=ಹೇಳಿದರು. ।।೯।।

ಇಲ್ಲಿಗೆ ರುದ್ರದೇವರ ಸೈನ್ಯ ಬರುತ್ತಿರುವುದು ಕೇವಲ ಸತೀದೇವಿಯನ್ನು ಅವಮಾನ ಮಾಡಿದ್ದರಿಂದ ಮಾತ್ರವಲ್ಲ, ರುದ್ರದೇವರನ್ನು ಅವಮಾನ ಮಾಡಿದ್ದರಿಂದಲೂ ಬರುತ್ತಿದೆ ಎಂಬ ಅಭಿಪ್ರಾಯದಿಂದ ರುದ್ರದೇವರ ಮಾಹಾತ್ಮ್ಯವನ್ನು ಎರಡು ಶ್ಲೋಕಗಳಿಂದ ವರ್ಣಿಸಿ ಹೇಳುವರು :-

**ಯಸ್ತ್ವಂತಕಾಲೇ ವ್ಯುಪ್ತಜಟಾಕಲಾಪಃ**
**ಸ್ವಶೂಲಸೂಚ್ಯರ್ಪಿತದಿಗ್ಗಜೇಂದ್ರಃ ।**

**ವಿತತ್ಯ ನೃತ್ಯತ್ಯುದಿತಾಸ್ತ್ರದೋರ್ಧ್ವಜೋ**
**ರೂಕ್ಷಾಟ್ಟಹಾಸಸ್ತನಯಿತ್ನುಭಿನ್ನ(ದೃಕ್)ದಿಕ್ ॥೧೧॥**

ಯಃ ತು=ಯಾವ ರುದ್ರದೇವನಾದರೂ ಅಂತಕಾಲೇ=ಪ್ರಲಯಕಾಲದಲ್ಲಿ ವ್ಯುಪ್ತಜಟಾಕಲಾಪಃ=ಹರಡಲ್ಪಟ್ಟ ಜಟಾಸಮೂಹವುಳ್ಳವನಾಗಿ, ಸ್ವಶೂಲಸೂಚ್ಯರ್ಪಿತ-ದಿಗ್ಗಜೇಂದ್ರಃ=ತನ್ನ ಶೂಲದ ತುದಿಯಲ್ಲಿ ದಿಗ್ಗಜಗಳನ್ನು ಸಿಕ್ಕಿಸಿಕೊಂಡವನಾಗಿ, ಉದಿತಾಸ್ತ್ರದೋರ್ಧ್ವಜಃ=ಆಯುಧಗಳನ್ನೆತ್ತಿಕೊಂಡ ಬಾಹುಗಳೆಂಬ ಧ್ವಜವುಳ್ಳವನಾಗಿ, ರೂಕ್ಷಾಟ್ಟಹಾಸಸ್ತನಯಿತ್ನುಭಿನ್ನದಿಕ್(ದೃಕ್)=ಕಠೋರವಾದ ಸಿಂಹನಾದವೆಂಬ ಪ್ರಲಯಕಾಲದ ಮೋಡಧ್ವನಿಯಿಂದ (ಗುಡುಗು-ಸಿಡಿಲುಗಳಿಂದ) ಸೀಳಲ್ಪಟ್ಟ ದಿಕ್ಕುಗಳುಳ್ಳವನಾಗಿ (**ದೃಕ್** ಎಂಬ ಪಾಠವಿದ್ದಲ್ಲಿ ವ್ಯಕ್ತವಾದ, ವಿಲಕ್ಷಣವಾದ ಕಣ್ಣುಗಳುಳ್ಳವನಾಗಿ ಎಂದು ಅರ್ಥ ತಿಳಿಯುವುದು) ವಿತತ್ಯ=ಬಾಹುಗಳನ್ನು ವಿಸ್ತಾರಮಾಡಿ ನೃತ್ಯತಿ=ಕುಣಿಯುವನು. ॥೧೧॥

**ಅಮರ್ಷಯಿತ್ವಾ ತಮಸಹ್ಯತೇಜಸಂ**
**ಮನ್ಯುಪ್ಲುತಂ ದುರ್ವಿಷಹಂ ಭ್ರುಕುಟ್ಯಾ ।**
**ಕರಾಲದಂಷ್ಟ್ರಾಭಿರುದಸ್ತಭಾಗಣಂ**
**ಸ್ಯಾತ್ ಸ್ವಸ್ತಿ ಕಿಂ ಕೋಪಯತೋ ವಿಧಾತುಃ ॥೧೧॥**

ತಂ=ಅಂತಹ ಅಸಹ್ಯತೇಜಸಂ=ಸಹಿಸಲಾಗದ ಸಾಮರ್ಥ್ಯವುಳ್ಳ ಮನ್ಯುಪ್ಲುತಂ=ಸಿಟ್ಟಿನಿಂದ ಕೂಡಿದ, ದುರ್ವಿಷಹಂ=ಅನ್ಯರಿಗೆ ಸಹಿಸಲು ಅಶಕ್ಯನಾದ, ಭ್ರುಕುಟ್ಯಾ=ಕುಟಿಲವಾದ ಹುಬ್ಬಿನಿಂದ ಕರಾಲದಂಷ್ಟ್ರಾಭಿಃ=ಭಯಂಕರವಾದ ಹಲ್ಲುಗಳಿಂದ ಉದಸ್ತಭಾಗಣಂ=ನಿರಾಕೃತವಾದ ಸೂರ್ಯ-ನಕ್ಷತ್ರ ಮುಂತಾದವುಗಳ ಕಾಂತಿಯುಳ್ಳ ರುದ್ರದೇವರನ್ನು ಅಮರ್ಷಯಿತ್ವಾ=ಅಸಹನವುಳ್ಳವನನ್ನಾಗಿ ಮಾಡಿ ಕೋಪಯುತಃ=ಸಿಟ್ಟಿಗೆಬ್ಬಿಸುವ ವಿಧಾತುಃ=ದಕ್ಷಪ್ರಜೇಶ್ವರನಿಗೆ ಸ್ವಸ್ತಿ ಸ್ಯಾತ್ ಕಿಂ=ಮಂಗಲವಾದೀತೇ ? ಆಗಲಾರದು. ॥೧೧॥

**ಬಹ್ವೇವಮುದ್ವಿಗ್ನದೃಶೋಚ್ಯಮಾನೇ**
**ಜನೇನ ದಕ್ಷಸ್ಯ ಮಖೇ ಮಹಾತ್ಮನಃ ।**
**ಉತ್ಪೇತುರುತ್ಪಾತತಮಾಃ ಸಹಸ್ರಶೋ**
**ಭಯಾವಹಾ ದಿವಿ ಭೂಮೌ ಚ ಪರ್ಯಕ್ ॥೧೨॥**

ಏವಂ=ಈ ರೀತಿ ಬಹು=ಬಹಳವಾಗಿ ಉದ್ವಿಗ್ನದೃಶಾ=ಪ್ರಚಲಿತವಾದ ಕಣ್ಣುಗಳುಳ್ಳ ಜನೇನ=ಜನರಿಂದ ಉಚ್ಯಮಾನೇ(ಸತಿ)=ಹೇಳಲ್ಪಡುತ್ತಿರಲು, ಮಹಾತ್ಮನಃ ಅಪಿ ದಕ್ಷಸ್ಯ

ಮಖೇ=ದಕ್ಷನು ಮಹಾತ್ಮನಾದರೂ ಅವನ ಯಜ್ಞದಲ್ಲಿ ಸಹಸ್ರಶಃ=ಸಾವಿರಾರು ಉತ್ಪಾತತಮಾಃ=ದೊಡ್ಡ ದೊಡ್ಡ ಅಪಶಕುನಗಳು ಭಯಾವಹಾಃ=ಭಯಜನಕವಾದವುಗಳು ದಿವಿ=ಆಕಾಶದಲ್ಲಿ ಭೂಮೌ=ಭೂಮಿಯಲ್ಲಿ ಪರ್ಯಕ್=ಎಲ್ಲ ದಿಕ್ಕುಗಳಲ್ಲಿಯೂ (ಸುತ್ತಲೂ) ಉತ್ತೇತುಃ=ಕಾಣಿಸಿಕೊಂಡವು. ।।೧೨।।

**ತಾವತ್ ಸ ರುದ್ರಾನುಚರೈರ್ಮಖೋ ಮಹಾನ್**
**ನಾನಾವಿಧೈರ್ವಾಮನಕೈರುದಾಯುಧೈಃ ।**
**ಪಿಂಗೈಃ ಪಿಶಂಗೈರ್ಮಕರೋದರಾನನೈಃ**
**ಪರ್ಯಾಪ್ಲವದ್ಭಿರ್ವಿದುರಾನ್ವರುದ್ಧ್ಯತ ।।೧೩।।**

ವಿದುರ=ವಿದುರನೇ ! ತಾವತ್=ಅಷ್ಟರಲ್ಲಿ ಸಃ ಮಹಾನ್ ಮಖಃ=ಆ ದೊಡ್ಡ ಯಜ್ಞವು ವಾಮನಕೈಃ=ಗಿಡ್ಡರಾದ (ಗಿಡ್ಡವಾದ ತಲೆಯುಳ್ಳ) ಉದಾಯುಧೈಃ=ಆಯುಧಗಳನ್ನು ಧರಿಸಿದ ಪಿಂಗೈಃ=ಕಪಿಲವರ್ಣದ ಪಿಶಂಗೈಃ=ಹಳದಿಬಣ್ಣದ ಮಕರೋದರಾನನೈಃ=ಮೊಸಳೆಯಂತಿರುವ ಹೊಟ್ಟೆ ಮತ್ತು ಮುಖವುಳ್ಳ ಪರ್ಯಾಪ್ಲವದ್ಭಿಃ=ಸುತ್ತಲೂ ಧಾವಿಸಿದ ನಾನಾವಿಧೈಃ= ಅನೇಕರೀತಿಯ ರುದ್ರಾನುಚರೈಃ=ರುದ್ರದೇವರ ಸೇವಕರಿಂದ ಅನ್ವರುಧ್ಯತ=ತಡೆಯಲ್ಪಟ್ಟಿತು.

**ಕೇಚಿದ್ಬಭಂಜುಃ ಪ್ರಾಗ್ವಂಶಂ ಪತ್ನೀಶಾಲಾಂ ತಥಾಽಪರೇ ।**
**ಸದ ಆಗ್ನೀಧ್ರಶಾಲಾಂ ಚ ತದ್ವಿಹಾರಂ ಮಹಾನಸಮ್ ।।೧೪।।**

ಕೇಚಿತ್=ಕೆಲವರು ಪ್ರಾಗ್ವಂಶಂ=ಯಜ್ಞಶಾಲೆಯಲ್ಲಿದ್ದ ಕಂಬವನ್ನು (ಯಜ್ಞಶಾಲೆಯ ಪೂರ್ವ-ಪಶ್ಚಿಮಕಂಬಗಳ ಮೇಲೆ ಮಧ್ಯದ ಬಿದುರುಗಳಿಗೆ ಆಶ್ರಯವಾದ, ಪೂರ್ವ-ಪಶ್ಚಿಮವಾಗಿ ಇರಿಸಿದ ಕಟ್ಟಿಗೆಗೆ ಪ್ರಾಗ್ವಂಶ ಎನ್ನುವರು. ಅದನ್ನು) ಬಭಂಜುಃ= ಮುರಿದರು. ತಥಾ=ಹಾಗೆಯೇ ಅಪರೇ=ಇನ್ನು ಕೆಲವರು ಪತ್ನೀಶಾಲಾಂ=ಯಜ್ಞಶಾಲೆಯ ಹಿಂಬದಿಯಲ್ಲಿ (ಪಶ್ಚಿಮಕ್ಕೆ) ಯಜಮಾನನ ಪತ್ನಿಯಿರುವ ಸ್ಥಳವನ್ನು ಬಭಂಜುಃ=ಮುರಿದರು. ಮತ್ತೆ ಕೆಲವರು ಸದಃ=ಯಜ್ಞಶಾಲೆಯ ಮುಂದಿರುವ ಸಭಾಮಂಟಪವನ್ನು ಬಭಂಜುಃ=ಮುರಿದರು. ಆಗ್ನೀಧ್ರಶಾಲಾಂ=ಸಭಾಮಂಟಪದ ಮುಂದೆ ಹವಿರ್ಧಾನೀ ಇರುವದು, ಅದರ ಉತ್ತರಕ್ಕಿರುವ ಪಶುಸಂಹಾರಸ್ಥಳವನ್ನು, ತದ್ವಿಹಾರಂ=ಯಜಮಾನನ ಮನೆಯನ್ನು, ಮಹಾನಸಂ=ಪಾಕಶಾಲೆಯನ್ನೂ ಬಭಂಜುಃ=ಮುರಿದರು. ।।೧೪।।

**ರುರುಜುರ್ಯಜ್ಞಪಾತ್ರಾಣಿ ತಥೈಕೇಽಗ್ನೀನನಾಶಾಯನ್ ।**
**ಕುಂಡೇಷ್ವಮೂತ್ರಯನ್ ಕೇಚಿದ್ಬಿಭಿದುರ್ವೇದಿಮೇಖಲಾಃ ।।೧೫।।**

ಏಕೇ=ಕೆಲವರು ಯಜ್ಞಪಾತ್ರಾಣಿ=ಯಜ್ಞಸಾಧನಗಳಾದ ಪಾತ್ರೆಗಳನ್ನು ರುರುಜುಃ= ಮುರಿದರು. (ರುಜ ಭಂಗೇ ಎಂದು ಧಾತು ಇದೆ.) ತಥಾ=ಅದೇ ರೀತಿ ಏಕೇ=ಮತ್ತೆ

ಕೆಲವರು ಅಗ್ನೀನ್ ಅನಾಶಯನ್=ಅಗ್ನಿಯನ್ನು ಹಾಳು ಮಾಡಿದರು. ಕೇಚಿತ್=ಇನ್ನು ಕೆಲವರು ಕುಂಡೇಷು=ಅಗ್ನಿಕುಂಡಗಳಲ್ಲಿ ಅಮೂತ್ರಯನ್=ಮೂತ್ರವಿಸರ್ಜನೆ ಮಾಡಿದರು. ಕೇಚಿತ್=ಮತ್ತೆ ಕೆಲವರು ವೇದಿಮೇಖಲಾಃ=ಉತ್ತರವೇದಿಯ ಸೀಮಾದಾರಗಳನ್ನು ಬಿಭಿಧುಃ=ಭೇದಿಸಿದರು. ||೧೫||

**ಅಬಾಧಂತ ಮುನೀನನ್ಯ ಏಕೇ ಪತ್ನೀರತರ್ಜಯನ್ ।**
**ಅಪರೇ ಜಗೃಹುರ್ದೇವಾನ್ ಪ್ರತ್ಯಾಸನ್ನಾನ್ ಪಲಾಯಿತಾನ್ ||೧೬||**

ಅನ್ಯೇ=ಮತ್ತೆ ಹಲವರು ಮುನೀನ್=ಋಷಿಗಳನ್ನು ಅಬಾಧಂತ=ಪೀಡಿಸಿದರು. ಏಕೇ=ಇತರರು ಪತ್ನೀಃ=ಎಲ್ಲರ ಹೆಂಡತಿಯರನ್ನು ಅತರ್ಜಯನ್=ತರ್ಜನಿಯನ್ನು (ತೋರ್ಬೆರಳನ್ನು) ತೋರಿಸಿ "ನಿಲ್ಲಿರಿ ಈಗಲೇ ನಿಮ್ಮನ್ನು ವಿಧವೆಯರನ್ನಾಗಿ ಮಾಡುವೆವು" ಎಂಬುದಾಗಿ ಕೆಟ್ಟ ಮಾತುಗಳಿಂದ ಗಾಬರಿಪಡಿಸಿದರು. ಅಪರೇ=ಇನ್ನು ಕೆಲವರು ಪಲಾಯಿತಾನ್=ಓಡಿಹೋದ ಪ್ರತ್ಯಾಸನ್ನಾನ್=ಸಮೀಪಿಸಿದ ದೇವಾನ್=ದೇವತೆಗಳನ್ನು ಜಗೃಹುಃ=ಹಿಡಿದುಕೊಂಡರು.

ತಮ್ಮ ಸಮೀಪದಿಂದ ಓಡುವವರನ್ನು ಅಥವಾ ದೇವತೆಗಳು ಓಡಿದಾಗ ತಾವೂ ಹಿಂಬಾಲಿಸಿ ಸಮೀಪಿಸಿದವರನ್ನು ಹಿಡಿದರೆಂದು ಭಾವ. ||೧೬||

**ಭೃಗುಂ ಬಬಂಧ ಮಣಿಮಾನ್ ವೀರಭದ್ರಃ ಪ್ರಜಾಪತಿಮ್ ।**
**ಚಂಡೀಶಃ ಪೂಷಣಂ ದೇವಂ ಭಗಂ ನಂದೀಶ್ವರೋಽಗ್ರಹೀತ್ ||೧೭||**

ಮಣಿಮಾನ್=ಮಣಿಮಾನ್ ಎಂಬ ಹೆಸರಿನ ಒಬ್ಬ ಗಣನಾಥನು ಭೃಗುಂ ಬಬಂಧ= ಭೃಗುಮುನಿಯನ್ನು ಕಟ್ಟಿದನು. ವೀರಭದ್ರಃ=ವೀರಭದ್ರನು ಪ್ರಜಾಪತಿಂ=ದಕ್ಷಪ್ರಜೇಶ್ವರನನ್ನು ಬಬಂಧ=ಕಟ್ಟಿದನು. ಚಂಡೀಶಃ=ಚಂಡೀಶ್ವರನು ಪೂಷಣಂ-ಪೂಷಣ ಎಂಬ ಹೆಸರಿನ ದೇವನನ್ನು ಅಗ್ರಹೀತ್=ಹಿಡಿದು ಹಾಕಿದನು. ನಂದೀಶ್ವರಃ=ನಂದೀಶ್ವರನು ದೇವಂ= ಪ್ರಕಾಶಮಾನನಾದ ಭಗಂ=ಭಗನೆಂಬ ಸೂರ್ಯನನ್ನು ಅಗ್ರಹೀತ್=ಹಿಡಿದು ಹಾಕಿದನು.

**ಸರ್ವ ಏವರ್ತ್ವಿಜೋ ದೃಷ್ಟ್ವಾ ಸದಸ್ಯಾಃ ಸದಿವೌಕಸಃ ।**
**ತೈರರ್ದ್ಯಮಾನಾಃ ಸುಭೃಶಂ ಗ್ರಾವಭಿರ್ನೈಕಧಾಽದ್ರವನ್ ||೧೮||**

ಋತ್ವಿಜಃ=ಋತ್ವಿಕರು ದೃಷ್ಟ್ವಾ=ರುದ್ರಭಟರ ಗಲಾಟೆಯನ್ನು ನೋಡಿ ಸರ್ವೇ ಸದಸ್ಯಾಃ=ಎಲ್ಲ ಸಭಿಕರು ಸದಿವೌಕಸಃ=ದೇವತೆಗಳಿಂದ ಸಹಿತರಾಗಿ ತೈಃ=ರುದ್ರಭಟರಿಂದ ಸುಭೃಶಂ=ಬಹಳವಾಗಿ ಗ್ರಾವಭಿಃ=ಕಲ್ಲುಗಳಿಂದ ಅರ್ದ್ಯಮಾನಾಃ=ಹೊಡೆತ ತಿಂದವರಾಗಿ ನೈಕಧಾ ಅದ್ರವನ್=ಅನೇಕ ಕಡೆಗಳಲ್ಲಿ ಓಡಿದರು. ||೧೮||

**ಜುಹ್ವತಃ ಸ್ರುವಹಸ್ತಸ್ಯ ಶ್ಮಶ್ರೂಣಿ ಭಗವಾನ್ ಭವಃ ।**
**ಭೃಗೋರ್ಲುಲುಂಚೇ ಸದಸಿ ಯೋಽಹಸತ್ ಶ್ಮಶ್ರು ದರ್ಶಯನ್ ॥೧೯॥**

ಭಗವಾನ್ ಭವಃ=ಸಮರ್ಥರಾದ ರುದ್ರದೇವರಿಂದ ಸಾಮರ್ಥ್ಯ ಪಡೆದ ವೀರಭದ್ರನು ಜುಹ್ವತಃ=ಇಷ್ಟು ಉಪದ್ರವವಾದರೂ ಯಜಮಾನನ ಕಾರ್ಯಸಾಧಿಸುವೆನು ಎಂಬ ಅಭಿಮಾನದಿಂದ ಆಭಿಚಾರಿಕಹೋಮ ಮಾಡುತ್ತಿರುವ, ಆದ್ದರಿಂದಲೇ ಸ್ರುವಹಸ್ತಸ್ಯ= ಕೈಯಲ್ಲಿ ಸ್ರುವ ಹಿಡಿದಿರುವ ಮತ್ತು ಯಃ=ಯಾವನು ಸದಸಿ=ಹಿಂದೆ ವಿಶ್ವಸೃಜರ ಸಭೆಯಲ್ಲಿ ಶಾಪಾದಿಗಳು ನಡೆದಾಗ ಶ್ಮಶ್ರು ದರ್ಶಯನ್=ಮೀಸೆ ತೋರಿಸಿ ಅಹಸತ್=ನಕ್ಕಿದ್ದನೋ ತಸ್ಯ ಭೃಗೋಃ=ಅಂಥಹ ಭೃಗುವಿನ ಶ್ಮಶ್ರೂಣಿ=ಮೀಸೆಗಳನ್ನು ಲುಲುಂಚೇ=ಕಿತ್ತಿದನು.

''ಉಪದ್ರವಕಾಲದಲ್ಲಿಯೂ ಹೋಮ ಮಾಡುತ್ತಿರುವ'' ಎಂದು ಹೇಳುವುದರಿಂದ ಭೃಗುವಿಗೆ ದಕ್ಷನಲ್ಲಿ ಅಧಿಕಸ್ನೇಹ, ಶಿವನಲ್ಲಿ ದ್ವೇಷಾಧಿಕ್ಯವು ತಿಳಿಯುವದರಿಂದ ಅಪರಾಧಾದಿಕ್ಯವೂ ಸೂಚಿತವಾಗುವದು. ಮತ್ತು ಮೀಸೆ ಕಿತ್ತಿದ ನಂತರ ಕಟ್ಟಿಹಾಕಿದನೆಂದು ತಿಳಿಯುವದು. ॥೧೯॥

**ಭಗಸ್ಯ ನೇತ್ರೇ ಭಗವಾನ್ ಪತಿತಸ್ಯ ರುಷಾ ಭುವಿ ।**
**ಉಜ್ಜಹಾರ ಸದಸ್ಥೋಽಕ್ಷ್ಣಾ ಯಃ ಶಪಂತಮಸೂಚಯತ್ ॥೨೦॥**

ಯಃ=ಯಾವನು ಸದಸ್ಥಃ=ವಿಶ್ವಸೃಜರ ಸಭೆಯಲ್ಲಿದ್ದು ಶಪಂತಂ=ರುದ್ರನನ್ನು ಶಪಿಸುವ ದಕ್ಷನನ್ನು ಅಕ್ಷ್ಣಾ=ಕಣ್ಣಿನ ಸನ್ನೆಯಿಂದ ಅಸೂಚಯತ್=ಪ್ರೇರಿಸಿದನೋ ತಸ್ಯ=ಅಂತಹ ಭುವಿ ಪತಿತಸ್ಯ=ಭೂಮಿಯಲ್ಲಿ ಬಿದ್ದ ಭಗಸ್ಯ=ಸೂರ್ಯನ ನೇತ್ರೇ=ಕಣ್ಣುಗಳನ್ನು ಭಗವಾನ್= ವೀರಭದ್ರನು ರುಷಾ=ಸಿಟ್ಟಿನಿಂದ ಉಜ್ಜಹಾರ=ಕಿತ್ತಿದನು. ॥೨೦॥

**ಪೂಷ್ಣಶ್ಚಾಪಾತಯದ್ದಂತಾನ್ ಕಲಿಂಗಸ್ಯ ಯಥಾ ಬಲಃ ।**
**ಶಪ್ಯಮಾನೇ ಗರಿಮಣಿ ಯೋಽಹಸದ್ದರ್ಶಯನ್ ದತಃ ॥೨೧॥**

ಗರಿಮಣಿ=ಗುರುತಮನಾದ ಮಹದೇವನು ಶಪ್ಯಮಾನೇ=ದಕ್ಷನಿಂದ ಶಪಿಸಲ್ಪಡುತ್ತಿರಲು ಯಃ=ಯಾವನು ದತಃ ದರ್ಶಯನ್=ಹಲ್ಲನ್ನು ತೋರಿಸಿ ಅಹಸತ್=ನಕ್ಕನೋ ತಸ್ಯ=ಅಂಥಹ ಪೂಷ್ಣಃ=ಪೂಷಾ ಎಂಬ ಸೂರ್ಯನ ದಂತಾನ್=ಹಲ್ಲುಗಳನ್ನು ಯಥಾ=ಯಾವ ರೀತಿಯಾಗಿ ಬಲಃ=ಬಲರಾಮನು (ಅನಿರುದ್ಧನ ವಿವಾಹದಲ್ಲಿ) ಕಲಿಂಗಸ್ಯ=ಕಲಿಂಗದೇಶದ ರಾಜನಾದ ದಂತವಕ್ತ್ರನ ಹಲ್ಲನ್ನು ಬೀಳಿಸಿದನೋ ಅದರಂತೆ ಅಪಾತಯತ್=ಉದರಿಸಿದನು. ॥೨೧॥

**ಆಕ್ರಮ್ಯೋರಸಿ ದಕ್ಷಸ್ಯ ಶಿತಧಾರೇಣ ಹೇತಿನಾ ।**
**ಛಿಂದನ್ನಪಿ ತದುದ್ಧರ್ತುಂ ನಾಶಕ್ನೋತ್ ತ್ರ್ಯಂಬಕಸ್ತದಾ ॥೨೨॥**

ತದಾ=ಆಗ ತ್ರ್ಯಂಬಕಃ=ರುದ್ರಾವೇಶವುಳ್ಳವನಾದ್ದರಿಂದ ಮುಕ್ಕಣ್ಣನೆನಿಸುವ ವೀರಭದ್ರನು ದಕ್ಷಸ್ಯ=ದಕ್ಷನ ಉರಸಿ=ಎದೆಯಲ್ಲಿ ಆಕ್ರಮ್ಯ=ಹತ್ತಿ ಶಿತಧಾರೇಣ ಹೇತಿನಾ=ನಿಶಿತವಾದ (ಚೂಪಾದ) ಖಡ್ಗಾಯುಧದಿಂದ ತಸ್ಯ=ದಕ್ಷನ ಶಿರಃ=ತಲೆಯನ್ನು ಛಿಂದನ್ನಪಿ=ಕತ್ತರಿಸಿದರೂ ಸಹ ತದುದ್ಧರ್ತುಂ=ತಲೆಯನ್ನು ತೆಗೆಯಲು ನ ಅಶಕ್ನೋತ್=ಸಮರ್ಥನಾಗಲಿಲ್ಲ. ॥೨೨॥

**ಶಸ್ತ್ರೈರಸ್ತ್ರಾನ್ವಿತೈರೇನಮನಿರ್ಭಿಣ್ಣತ್ವಚಂ ಹರಃ ।**
**ವಿಸ್ಮಯಂ ಪರಮಾಪನ್ನೋ ದಧ್ಯೌ ಪಶುಪತಿಶ್ಚಿರಮ್ ॥೨೩॥**

ಹರಃ=ವೀರಭದ್ರನು ಅಸ್ತ್ರಾನ್ವಿತೈಃ=ಮಂತ್ರಪೂತವಾದ ಶಸ್ತ್ರೈಃ=ಶಸ್ತ್ರಗಳಿಂದಲೂ ಸಹ ಅನಿರ್ಭಿಣ್ಣತ್ವಚಂ=ಚರ್ಮವೂ ಕತ್ತರಿಸದಿರುವ ದಕ್ಷನನ್ನು ದೃಷ್ಟ್ವಾ=ನೋಡಿ ಪರಂ ವಿಸ್ಮಯಂ ಆಪನ್ನಃ=ಬಹಳ ಆಶ್ಚರ್ಯಪಟ್ಟು ಪಶುಪತಿಃ=ವೀರಭದ್ರನು ದಧ್ಯೌ=ತನ್ನ ಮೂಲರೂಪವನ್ನು ಧ್ಯಾನಿಸಿದನು. ಅನಂತರ ಸಃ=ಆ ಮೂಲರೂಪಿಯು ಅಲ್ಲಿಗೆ ಬಂದು ದಧೌ=ಯುದ್ಧವು ಯಜ್ಞವಾಗುವಂತೆ ಮನಸ್ಸಿನಲ್ಲಿ ಚಿಂತಿಸಿದನು. ॥೨೩॥

**ದೃಷ್ಟ್ವಾ ಸಂಜ್ಞಪನೇ ಯೋಗಂ ಪಶೂನಾಂ ಸ ಪತಿರ್ಮಖೇ ।**
**ಯಜಮಾನಪಶೋಃ ಕಸ್ಯ ಕಾಯಾತ್ ತೇನಾಹರಚ್ಛಿರಃ ॥೨೪॥**

ಸಃ ಪಶೂನಾಂ ಪತಿಃ=ಪಶುಪತಿಯಾದ ಆ ವೀರಭದ್ರನು ಮಖೇ=ಯಜ್ಞದಲ್ಲಿ ಸಂಜ್ಞಪನೇ ಯೋಗಂ=ಮಂತ್ರಪೂರ್ವಕವಾಗಿ ಕುತ್ತಿಗೆಯನ್ನು ಹಿಸುಕುವದೇ ಮೊದಲಾದ ಉಪಾಯವನ್ನು ದೃಷ್ಟ್ವಾ=ಕಂಡು (ಈ ಉಪಾಯದಿಂದ ಇವನ ಪ್ರಾಣ ಹೋಗುವದೆಂದು ತಿಳಿದು), ದಕ್ಷನನ್ನು ಪಶು ಎಂದು ಸಂಕಲ್ಪಿಸಿ ತೇನ=ಅದೇ ಉಪಾಯದಿಂದ ಯಜಮಾನ-ಪಶೋಃ=ಪಶುವೆಂದು ಸಂಕಲ್ಪಿಸಿದ ಯಜಮಾನನಾದ ಕಸ್ಯ=ದಕ್ಷನ ಕಾಯಾತ್=ದೇಹದಿಂದ ಶಿರಃ ಅಹರತ್=ತಲೆಯನ್ನು ಹೊರತೆಗೆದನು. ॥೨೪॥

**ಸಾಧುವಾದಸ್ತದಾ ತೇಷಾಂ ಕರ್ಮ ತತ್ತಸ್ಯ ಶಂಸತಾಮ್ ।**
**ಭೂತಪ್ರೇತಪಿಶಾಚಾನಾಮನ್ಯೇಷಾಂ ತದ್ವಿಪರ್ಯಯಃ ॥೨೫॥**

ತದಾ=ಆಗ ತಸ್ಯ=ವೀರಭದ್ರನ ತತ್ ಕರ್ಮ=ದಕ್ಷಶಿರಚ್ಛೇದ ಮಾಡಿದ್ದನ್ನು ಶಂಸತಾಂ=ಹೊಗಳುವ ಭೂತಪ್ರೇತಪಿಶಾಚಾನಾಂ=ರುದ್ರದೇವರ ಅನುಚರರಾದ ಭೂತ-ಪ್ರೇತ-ಪಿಶಾಚಗಳ ಸಾಧುವಾದಃ=ಇವನು ಸತ್ತದ್ದು ಒಳ್ಳೆಯದೇ ಆಯಿತು ಎಂಬ ಮಾತುಗಳು

ವ್ಯಕ್ತವಾದವು. ತದನ್ಯೇಷಾಂ=ದಕ್ಷಪಕ್ಷೀಯರಾದ ಇತರ ಬ್ರಾಹ್ಮಣರೆಲ್ಲರಿಗೆ ತದ್‌ವಿಪರ್ಯಯಃ=ಇದು ಸರಿಯಾಗಲಿಲ್ಲ ಎಂಬ ವಿಪರೀತದ ಮಾತುಗಳು ವ್ಯಕ್ತವಾದವು.

ಮಂತ್ರಶಕ್ತಿಯಿಂದ ತಲೆ ಸೇರಿಸಬಾರದೆಂದು ಅದನ್ನು ಸುಟ್ಟನೆಂದು ಹೇಳುವರು -

**ಜುಹಾವೈತಚ್ಛಿರಸ್ತಸ್ಯ ದಕ್ಷಿಣಾಗ್ನಾವಮರ್ಷಿತಃ ।**
**ತದ್ದೇವಯಜನಂ ದಗ್ಧ್ವಾ ಪ್ರಾತಿಷ್ಠದ್ ಗುಹ್ಯಕಾಲಯಮ್ ॥೨೬॥**

॥ ಇತಿ ಶ್ರೀಮದ್ಭಾಗವತೇ ಚತುರ್ಥಸ್ಕಂಧೇ ಪಂಚಮೋಽಧ್ಯಾಯಃ ॥

ಅಮರ್ಷಿತಃ=ದಕ್ಷನ ಅಪರಾಧವನ್ನು ಸಹಿಸದ ರುದ್ರದೇವರು ತಸ್ಯ=ದಕ್ಷನ ಏತಚ್ಛಿರಃ=ಈ ತಲೆಯನ್ನೂ ದಕ್ಷಿಣಾಗ್ನೌ=ದಕ್ಷಿಣಾಗ್ನಿಯಲ್ಲಿ ಜುಹಾವ=ಹೋಮ ಮಾಡಿದನು. ತತ್ ದೇವಯಜನಂ=ಆ ಯಜ್ಞವನ್ನು ದಗ್ಧ್ವಾ=ನಾಶಮಾಡಿ ಗುಹ್ಯಕಾಲಯಂ ಪ್ರಾತಿಷ್ಠತ್=ಕೈಲಾಸಕ್ಕೆ ತೆರಳಿದನು.

**ಭಾಗವತ ತಾತ್ಪರ್ಯ :-**

''ದೃಷ್ಟ್ವಾ ಸಂಜ್ಞಪನೇ'' ಎಂಬ ಶ್ಲೋಕವನ್ನು ರುದ್ರದೇವರ ಮೂಲರೂಪಪರವಾಗಿಯೇ ಯೋಜಿಸಬೇಕು. ವೀರಭದ್ರನ ಪರವಾಗಿ ಅಲ್ಲ ಎಂಬುದಕ್ಕೆ ಶ್ರೀಮದಾಚಾರ್ಯರು ಪ್ರಮಾಣ ತಿಳಿಸುವರು :-

**ವೀರಭದ್ರಾಖ್ಯರೂಪೇಣ ಸ್ವೇನ ಪೂರ್ವಂ ಯಯೌ ಹರಃ ।**
**ಮೂಲರೂಪೇಣ ಪಶ್ಚಾತ್ತು ಗತ್ವಾ ದಕ್ಷಮಥಾವಧೀತ್ ॥**
**ತತ್ರೋಪೇಂದ್ರೇಣ ಹರಿಣಾ ಜಿತೋ ಧರ್ಮಾತ್ಮಜೇನ ಚ ।**
**ಅನ್ಯಾಞ್ಜಿತ್ವಾ ಯಯೌ ಕೈಲಾಸಂ ಸ್ವನಿಕೇತನಂ ॥ ಇತಿ ಬ್ರಾಹ್ಮೇ ॥**

ರುದ್ರದೇವನು ಮೊದಲು ತನ್ನ ವೀರಭದ್ರರೂಪದಿಂದ ಹೋದನು. ನಂತರ ಮೂಲರೂಪದಿಂದ ಹೋಗಿ ದಕ್ಷನನ್ನು ಸಂಹರಿಸಿದನು. ಅಲ್ಲಿ ಉಪೇಂದ್ರನಿಂದ ಹಾಗೂ ಧರ್ಮನ ಮಗನಾದ ನರಸಖನಾರಾಯಣನಿಂದಲೂ ಸೋತು ಮಿಕ್ಕವರನ್ನು ಗೆದ್ದು ಕೈಲಾಸದಲ್ಲಿರುವ ತನ್ನ ಮನೆಗೆ ಹೋದನು.

ಉಪೇಂದ್ರ-ನಾರಾಯಣರು ಅಲ್ಲಿದ್ದರೂ ''ದೇವಯಜನಂ ದಗ್ಧ್ವಾ'' ಎಂಬುದಾಗಿ ಎಲ್ಲರನ್ನು ಗೆದ್ದನೆಂದು ಹೇಳಿದ್ದು ಹೇಗೆ ? ಎಂಬ ಶಂಕೆಗೆ ಅವಕಾಶವಿಲ್ಲ. ಕಾರಣ ಉಪೇಂದ್ರ-ನಾರಾಯಣರನ್ನು ಬಿಟ್ಟು ಮಿಕ್ಕವರನ್ನು ಗೆದ್ದನು ಎಂದು ಅಭಿಪ್ರಾಯ. ॥೨೬॥

॥ ಇಲ್ಲಿಗೆ ಆರನೇ ಅಧ್ಯಾಯವು ಮುಗಿಯಿತು ॥

## ಅಥ ಸಪ್ತಮೋऽಧ್ಯಾಯಃ

ಭಗವಂತನ ಅಪರೋಕ್ಷಜ್ಞಾನಕ್ಕೆ ಭಗವಂತನ ಪ್ರಸಾದ ಹೇಗೆ ಆವಶ್ಯಕವೋ ಹಾಗೆ ತನಗಿಂತ ಹೆಚ್ಚಿನ ಭಕ್ತಿ ಯಾರಲ್ಲಿ ಇದೆಯೋ ತಾರತಮ್ಯಾನುಸಾರ ಅವರೆಲ್ಲರ ಅನುಗ್ರಹವೂ ಸಹ ಅವಶ್ಯ ಸಂಪಾದಿಸಬೇಕಾದುದು ಎಂದು ಈ ಅಧ್ಯಾಯದಲ್ಲಿ ವರ್ಣಿಸುವರು. ಮೊದಲಿಗೆ ಎಲ್ಲ ಭಕ್ತರಲ್ಲಿ ಉತ್ತಮರಾದ ರುದ್ರದೇವರ ಪ್ರಸಾದಸಂಪಾದನೆಗಾಗಿ ದೇವತೆಗಳು ಬ್ರಹ್ಮದೇವರಲ್ಲಿಗೆ ಬಂದು ತಮ್ಮ ಸಂಕಟವನ್ನು ವಿಜ್ಞಾಪಿಸಿದ ರೀತಿಯನ್ನು ತಿಳಿಸುವರು :-

**ಮೈತ್ರೇಯ ಉವಾಚ -**

**ಅಥ ದೇವಗಣಾಃ ಸರ್ವೇ ರುದ್ರಾನೀಕೈಃ ಪರಾಜಿತಾಃ ।**
**ಶೂಲಪಟ್ಟಿಶನಿಸ್ತ್ರಿಂಶಗದಾಪರಿಘಮುದ್ಗರೈಃ ॥೧॥**

**ಸಂಭಿನ್ನಭಿನ್ನಸರ್ವಾಂಗಾಃ ಸರ್ತ್ವಿಕ್‌ಸಭ್ಯಾಃ ಸಮಾಕುಲಾಃ ।**
**ಸ್ವಯಂಭುವೇ ನಮಸ್ಕೃತ್ಯ ಕಾರ್ತ್ಸ್ನ್ಯೇನೈತನ್ನ್ಯವೇದಯನ್ ॥೨॥**

ಅಥ=ಅನಂತರ ಸರ್ತ್ವಿಕ್‌ಸಭ್ಯಾಃ=ಋತ್ವಿಜರು ಮತ್ತು ಸಭಿಕರಿಂದ ಸಹಿತರಾದ, ಸಮಾಕುಲಾಃ=ಬಹಳ ಭಯಯುತರಾದ, ರುದ್ರಾನೀಕೈಃ=ರುದ್ರದೇವರ ಸೈನಿಕರಿಂದ ಪರಾಜಿತಾಃ=ಸೋಲಲ್ಪಟ್ಟ, ಶೂಲಪಟ್ಟಿಶನಿಸ್ತ್ರಿಂಶಗದಾಪರಿಘಮುದ್ಗರೈಃ=ತ್ರಿಶೂಲ, ಪಟ್ಟಿಶ, ಖಡ್ಗ, ಗದೆ, ಪರಿಘ, ಒನಕೆ ಮುಂತಾದ ಆಯುಧಗಳಿಂದ ಸಂಭಿನ್ನಭಿನ್ನಸರ್ವಾಂಗಾಃ= ಕತ್ತರಿಸಲ್ಪಟ್ಟ (ಬೇರ್ಪಡಿಸಲ್ಪಟ್ಟ), ಸೀಳಲ್ಪಟ್ಟ ಎಲ್ಲ ಅವಯವಗಳುಳ್ಳ ಸರ್ವೇ ದೇವಗಣಾಃ=ಎಲ್ಲ ದೇವತೆಗಳು ಸ್ವಯಂಭುವೇ=ಬ್ರಹ್ಮದೇವರಿಗೆ ನಮಸ್ಕೃತ್ಯ=ನಮಸ್ಕಾರ ಮಾಡಿ ಏತತ್=ಈ ವೃತ್ತಾಂತವನ್ನು ಕಾರ್ತ್ಸ್ನ್ಯೇನ=ಸಂಪೂರ್ಣವಾಗಿ ನ್ಯವೇದಯನ್=ಅರಿಕೆ ಮಾಡಿದರು. ॥೧-೨॥

**ಉಪಲಭ್ಯ ಪುರೈವೈತದ್ ಭಗವಾನಬ್ಜಸಂಭವಃ ।**
**ನಾರಾಯಣಶ್ಚ ವಿಶ್ವಾತ್ಮಾ ನ ಕಸ್ಯಾಧ್ವರಮೀಯತುಃ ॥೩॥**

ಪುರಾ ಏವ=ಮೊದಲೇ ಏತತ್=ಮುಂದೆ ಆಗುವ ಈ ಯಜ್ಞನಾಶವನ್ನು ಉಪಲಭ್ಯ=ತಿಳಿದು ಅಬ್ಜಸಂಭವಃ=ಬ್ರಹ್ಮದೇವರು ಚ=ಮತ್ತು ವಿಶ್ವಾತ್ಮಾ=ವ್ಯಾಪ್ತನಾದ ಭಗವಾನ್ ನಾರಾಯಣಃ=ನಾರಾಯಣನು ಕಸ್ಯ=ದಕ್ಷನ ಅಧ್ವರಂ=ಯಜ್ಞವನ್ನು ಕುರಿತು ನ ಈಯತುಃ=ಹೋಗಿರಲಿಲ್ಲ.

**ಭಾಗವತತಾತ್ಪರ್ಯ :-**

ಇಲ್ಲಿ ''ನಾರಾಯಣನು ದಕ್ಷಯಜ್ಞಕ್ಕೆ ಹೋಗಿರಲಿಲ್ಲ'' ಎಂದು ಹೇಳಿದ್ದು ಹಿಂದೆ ಉದಾಹರಿಸಿದ ಬ್ರಾಹ್ಮವಚನಕ್ಕೆ ವಿರುದ್ಧವಾಗುತ್ತದೆ. ಅಲ್ಲಿ ಧರ್ಮಪುತ್ರನಾದ ನಾರಾಯಣನು ಯಜ್ಞದಲ್ಲಿ ಇದ್ದನೆಂದು ಹೇಳಿದೆ. ಮತ್ತು ಅವನಿದ್ದಮೇಲೆ ಯಜ್ಞನಾಶವಾದರೂ ಹೇಗೆ ಸಾಧ್ಯ ? ಆದ್ದರಿಂದ ಇಲ್ಲಿ ವಿವಕ್ಷಿತವಾದ ತಾತ್ಪರ್ಯವನ್ನು ಆಚಾರ್ಯರು ಹೇಳುವರು -

**ತ್ರಿಮೂರ್ತಿಗೇನ ರೂಪೇಣ ನಾರಾಯಣೋ ನಾಯಯೌ ॥**

ತ್ರಿಮೂರ್ತಿಗಳಲ್ಲಿ ಒಂದಾದ ವಿಷ್ಣುರೂಪದಿಂದ ನಾರಾಯಣನು ಬಂದಿರಲಿಲ್ಲವೆಂದು ಭಾವ. ॥೩॥

**ತದಾಕರ್ಣ್ಯ ವಿಭುಃ ಪ್ರಾಹ ತೇಜೀಯಸಿ ಕೃತಾಗಸಾಮ್ ।**
**ಕ್ಷೇಮಾಯ ಭೂಯಸೇ ಭೂಯಾನ್ನ ಪ್ರಾಯೇಣ ಬುಭೂಷತಾಮ್ ॥೪॥**

ವಿಭುಃ=ಬ್ರಹ್ಮದೇವರು ತದಾಕರ್ಣ್ಯ=ದೇವತೆಗಳು ಹೇಳಿದ ಆ ವೃತ್ತಾಂತವನ್ನು ಕೇಳಿ ತೇಜೀಯಸಿ=ಅತ್ಯಂತ ತೇಜಸ್ವಿಗಳ ವಿಷಯದಲ್ಲಿ ಕೃತಾಗಸಾಂ=ಅಪರಾಧ ಮಾಡಿದವರಿಗೆ ತತ್=ಆ ಅಪರಾಧವು ಬುಭೂಷತಾಂ=ಬದುಕಲಿಚ್ಛಿಸುವವರಿಗೆ ಪ್ರಾಯೇಣ=ಬಹುಶಃ ಭೂಯಸೇ ಕ್ಷೇಮಾಯ ನ (ಭವತಿ)=ಮೋಕ್ಷಕ್ಕೆ ಸಾಧನವಾಗಲಾರದು ಇತಿ ಪ್ರಾಹ= ಎಂಬುದಾಗಿ ಹೇಳಿದರು.

ಇಲ್ಲಿ ವಿಜಯಧ್ವಜರು ''ವಿಷ್ಣುವಾಯೂ ವಿನಾ ಇತ್ಯತಃ ಪ್ರಾಯೇಣೇತ್ಯುಕ್ತಂ'' ಎಂದಿದ್ದಾರೆ. ಇದರ ಅಭಿಪ್ರಾಯ - ಇವರಿಬ್ಬರು ಯಾರಿಗಾದರೂ ಏನುಬೇಕಾದರೂ ಮಾಡಬಹುದು. ಆದರಿಂದ ಇವರಿಗೆ ಹಾನಿ ಇಲ್ಲ. ಯಾಕೆ ? ಇವರಿಗಿಂತ ಬಲಿಷ್ಠರೇ ಇಲ್ಲವಷ್ಟೇ ! ಎಂದಿರಬಹುದು.

ಯಾದವಾರ್ಯರು "ದುರ್ಯೋಧನಾದಿವ್ಯಾವೃತ್ತ್ಯರ್ಥಂ ಪ್ರಾಯೇಣ ಇತಿ" ಎಂದಿರುವರು. "ದುರ್ಯೋಧನ ಬಲಿಷ್ಠನಾದರೂ ಅವನ ವಿರೋಧವು ಅಪರಾಧವಾಗಲಾರದು. ವಿಷ್ಣುದ್ವೇಷಿಯ ವಿರೋಧ ಮುಮುಕ್ಷುವಿಗೆ ಶ್ರೇಯಸ್ಕರವೇ" ಎಂದು ಅವರ ಭಾವ.

ಈ ಯೋಜನೆಯಲ್ಲಿ "ಬುಭೂಷತಾಂ ವಿಷಯೇ ಕೃತಾಗಸಾಂ" ಎಂದು ಅನ್ವಯಿಸಬೇಕು. ಮೋಕ್ಷಯೋಗ್ಯರಾದ ಬಲಿಷ್ಠರ ವಿರೋಧ ಕಲ್ಯಾಣಕರವಲ್ಲವೆಂದು ಭಾವ.

**ಅಥಾಪಿ ಯೂಯಂ ಕೃತಕಿಲ್ಬಿಷಾ ಭವೇ**
**ಯೇ ಬರ್ಹಿಷೋ ಭಾಗಭಾಜಂ ಪರಾದುಃ ।**
**ಪ್ರಸಾದಯಧ್ವಂ ಪರಿಶುದ್ಧಚೇತಸಾ**
**ಕ್ಷಿಪ್ರಪ್ರಸಾದಂ ಪ್ರಗೃಹೀತಾಂಘ್ರಿಪದ್ಮಾಃ ॥೫॥**

ಯೇ=ಯಾವ ನೀವು ಬರ್ಹಿಷಃ=ಯಜ್ಞದ ಭಾಗಭಾಜಂ=ತನಗೆ ವಿಹಿತವಾದ ಹವಿರ್ಭಾಗವನ್ನು ಹೊಂದಬೇಕಾದ ರುದ್ರದೇವರನ್ನು ಪರಾದುಃ=ದೂರದಿಂದಲೇ ಖಂಡಿಸಿದಿರಿ (ಹವಿಸ್ಸು ನೀಡದೇ ನಿರಾಕರಿಸಿದಿರಿ, ಹವಿಸ್ಸನ್ನು ಬೇರೆಯವರಿಗೆ ಕೊಟ್ಟಿರಿ) ಆ ಕಾರಣ ಯೂಯಂ=ನೀವು ಕೃತಕಿಲ್ಬಿಷಾಃ=ಅಪರಾಧ ಎಸಗಿದವರು. ಅಥಾಪಿ=ಆದರೂ ಕ್ಷಿಪ್ರಪ್ರಸಾದಂ=ಬೇಗನೇ (ಅನುಗ್ರಹ ಮಾಡುವ) ಪ್ರಸನ್ನನಾಗುವ ರುದ್ರದೇವರನ್ನು ಪರಿಶುದ್ಧಚೇತಸಾ=ಶುದ್ಧವಾದ ಮನಸ್ಸಿನಿಂದ ಪ್ರಗೃಹಿತಾಂಘ್ರಿಪದ್ಮಾಃ=ಅವರ ಪಾದಕಮಲಗಳನ್ನು ಹಿಡಿದವರಾಗಿ ಪ್ರಸಾದಯಧ್ವಂ=ಕ್ಷಮೆ ಯಾಚಿಸಿರಿ. (ಸಂತೋಷಪಡಿಸಿರಿ.) ॥೫॥

**ಆಶಾಸಾನಾ ಜೀವಿತಮಧ್ವರಸ್ಯ**
**ಲೋಕಃ ಸಪಾಲಃ ಕುಪಿತೇ ನ ಯಸ್ಮಿನ್ ।**
**ತಮಾಶು ದೇವಂ ಪ್ರಿಯಯಾ ವಿಹೀನಂ**
**ಕ್ಷಮಾಪಯಧ್ವಂ ಹೃದಿ ವಿದ್ಧಂ ದುರುಕ್ತೈಃ ॥೬॥**

ಯಸ್ಮಿನ್=ಯಾವ ರುದ್ರದೇವರು ಕುಪಿತೇ(ಸತಿ)=ಸಿಟ್ಟಾದರೆ ಸಪಾಲಃ ಲೋಕಃ ನ=ಲೋಕಪಾಲಕರಿಂದ ಸಹಿತವಾದ ಲೋಕವೇ ಇಲ್ಲದಾಗುವದು. ಇನ್ನು ನಿಮ್ಮಗಳ ಪಾಡೇನು ? ಅಂತಹ, ಪ್ರಿಯಯಾ ವಿಹೀನಂ=ಹೆಂಡತಿಯಿಂದ ರಹಿತನಾದ, ದುರುಕ್ತೈಃ= ದಕ್ಷನ ಬಿರುನುಡಿಗಳಿಂದ ಹೃದಿ=ಮನಸ್ಸಿನಲ್ಲಿ ವಿದ್ಧಂ=ನೊಂದುಕೊಂಡಂತಹ ತಂ ದೇವಂ= ರುದ್ರದೇವರನ್ನು ಅಧ್ವರಸ್ಯ=ಯಜ್ಞದ ಜೀವಿತಂ=ಪುನಃಸಂಧಾನವನ್ನು ಆಶಾಸಾನಾಃ= ಅಪೇಕ್ಷಿಸುವ ನೀವು ಆಶು=ಬೇಗನೆ ಕ್ಷಮಾಪಯಧ್ವಂ=ಕ್ಷಮೆ ಕೇಳಿಕೊಳ್ಳಿರಿ ಇತಿ ಪ್ರಾಹ=ಎಂದು ಹೇಳಿದನು.

ಕೇವಲ ಹವಿಸ್ಸನ್ನು ಕೊಡದಿರುವದಷ್ಟೇ ರುದ್ರದೇವರ ಕೋಪಕ್ಕೆ ಕಾರಣವಲ್ಲ. ಪತ್ನಿಯ ವಿಯೋಗ ಹಾಗೂ ಮಾವನ ದುರುಕ್ತಿಗಳೂ ಸಹ ಕಾರಣವಾಗಿವೆ ಎಂದು ಭಾವ. ।।೬।।

ಮುಂದೆ ಹೇಳುವ ಕಾರಣದಿಂದಲೂ ಶಿವನ ವಿಷಯದಲ್ಲಿ ಅಪರಾಧ ಮಾಡಬಾರದು ಎಂದು ಹೇಳುವರು ಃ-

**ನಾಹಂ ನ ಯಜ್ಞೋ ನ ಚ ಯೂಯಮನ್ಯೇ**
**ಯೇ ದೇಹಭಾಜೋ ಮುನಯಶ್ಚ ತತ್ತ್ವಮ್ ।**
**ವಿದುಃ ಪ್ರಮಾಣಂ ಬಲವೀರ್ಯಯೋರ್ವಾ**
**ತಸ್ಮಾತ್ಮತಂತ್ರಸ್ಯ ಕ ಉದ್ವಿಧಿತ್ಸೇತ್ ।।೭।।**

ಯಸ್ಯ=ಯಾವ ವಿಷ್ಣುವಿನ ತತ್ತ್ವಂ=ಯಥಾಸ್ಥಿತಸ್ವರೂಪವನ್ನು ಬಲವೀರ್ಯಯೋಃ ಪ್ರಮಾಣಂ=ಶರೀರಬಲ-ಪರಾಕ್ರಮಗಳ, ಉಪಲಕ್ಷಣತಯಾ ಗುಣಗಳ ಪರಿಮಾಣವನ್ನು (ಮಿತಿಯನ್ನು) ಅಹಂ=ಬ್ರಹ್ಮನಾದ ನಾನು ನ ವೇದ್ಮಿ=ತಿಳಿಯಲಾರೆನು. ಯಜ್ಞಃ=ಇಂದ್ರನೂ ನ ವೇದ=ತಿಳಿಯಲಾರನು. ಚ=ಮತ್ತು ಯೂಯಂ=ನೀವುಗಳೂ ಸಹ ನ ವಿದುಃ=ತಿಳಿಯಲಾರಿರಿ. ಅನ್ಯೇ ಚ=ಪ್ರಜಾಪತಿ ಮುಂತಾದ ದೇಹಭಾಜಃ=ಜೀವರು, ಮುನಯಃ= ಸನಕಾದಿಗಳು ನ ವಿದುಃ=ತಿಳಿಯಲಾರರು. ತಸ್ಯ=ಅಂತಹ ವಿಷ್ಣುವಿನ ಆತ್ಮತಂತ್ರಸ್ಯ= ಮನೋವಶನಾದ, ಅಥವಾ ಆತ್ಮಾ ಎಂದರೆ ಬ್ರಹ್ಮ-ವಾಯುಗಳು. ಅವರ ತಂತ್ರಸ್ಯ=ಅಧೀನನಾದ, ಆತ್ಮತಂತ್ರಸ್ಯ= ಸ್ವತಂತ್ರನಾದ (ಈ ಮೂವರನ್ನು ಬಿಟ್ಟು ಉಳಿದವರ ಅಧೀನನಲ್ಲದ) ತಸ್ಯ=ರುದ್ರದೇವರಿಗೆ ಕಃ=ಯಾವನು ತಾನೇ ಉದ್ವಿಧಿತ್ಸೇತ್=ಉಚ್ಚವಾದ ಅಪರಾಧ ಮಾಡಲು ಇಚ್ಛಿಸಿಯಾನು ? ಹಾಗೆ ಯಾರೂ ಇಚ್ಛಿಸಲಾರರು. ಅತೋ ಯುಷ್ಮಾಭಿಃ ಕುತಃ ಇತ್ಥಂ ಕೃತಂ=ಆದ್ದರಿಂದ ನೀವೇಕೆ ಹೀಗೆ ಮಾಡಿದಿರಿ ? ಎಂದು ಶೇಷಪೂರ್ತಿ ಮಾಡಿಕೊಂಡು ಅರ್ಥ ಮಾಡಿಕೊಳ್ಳಬೇಕು.

**ಭಾಗವತ ತಾತ್ಪರ್ಯ ಃ-**

ಮೇಲಿನ ಶ್ಲೋಕದಲ್ಲಿ ಯಜ್ಞಶಬ್ದಕ್ಕೆ ವಿಷ್ಣು ಎಂದರ್ಥ ಮಾಡಿಕೊಡು ''ಬ್ರಹ್ಮನಾಗಲೀ ವಿಷ್ಣುವಾಗಲೀ ರುದ್ರನ ಮಾಹಾತ್ಮ್ಯವನ್ನು ತಿಳಿಯುವದಿಲ್ಲವಾದ್ದರಿಂದ ಶಿವನೇ ಸರ್ವೋತ್ತಮನು'' ಎಂದು ಅಪವ್ಯಾಖ್ಯಾನ ಮಾಡಬಾರದು ಎಂಬುದನ್ನು ತಿಳಿಸಲು ಶ್ರೀಮದಾಚಾರ್ಯರು ಈ ಭಾಗವತಶ್ಲೋಕಕ್ಕೆ ವ್ಯಾಖ್ಯಾನ ಮಾಡುವರು -

''ಯಜ್ಞಃ ಇಂದ್ರಃ ।''

ಇಲ್ಲಿನ ಯಜ್ಞ ಎಂಬ ಶಬ್ದಕ್ಕೆ ಇಂದ್ರ ಎಂದು ಅರ್ಥ. ಈ ವಿಷಯದಲ್ಲಿ ಪ್ರಮಾಣವಾಗಿ ಅಭಿಧಾನ ಹೇಳುವರು -

'ಯಜ್ಞೋ ಯಜ್ಞಪತಿಸ್ತ್ವಿಂದ್ರಃ ಪುರುಹೂತಃ ಪುರುಷ್ಟುತಃ' ಇತ್ಯಭಿಧಾನಮ್ ।

ಈ ಎಲ್ಲ ಶಬ್ದಗಳಿಂದ ಇಂದ್ರನು ಹೇಳಲ್ಪಡುವನು ಎಂದರ್ಥ.

ಸರಿ, ಬ್ರಹ್ಮದೇವರು "ನಾನು ರುದ್ರದೇವರ ಸ್ವರೂಪವನ್ನು ತಿಳಿದಿಲ್ಲ" ಎಂದು ಹೇಗೆ ಹೇಳುವರು ? ಎಂದರೆ, ಇಲ್ಲಿ ತಸ್ಯ ಎಂದರೆ ರುದ್ರದೇವರ ಎಂದರ್ಥವಲ್ಲ, ಕಿಂತು ವಿಷ್ಣುವಿನ ಎಂದರ್ಥ ಎಂಬುದಾಗಿ ಹೇಳುವರು -

"ತಸ್ಯ ಆತ್ಮತಂತ್ರಸ್ಯ । ತಸ್ಯ ವಿಷ್ಣೋಃ ಮನೋವಶ್ಯಸ್ಯ ।"

ತಸ್ಯ ಎಂಬ ಪದಕ್ಕೆ ವಿಷ್ಣುವಿನ ಮನೋಧೀನನಾದ ಎಂದರ್ಥ. ಇಲ್ಲಿ ತಸ್ಯ ಎಂಬ ಪದದ ಆವೃತ್ತಿಯೂ ಸೂಚಿತವಾಗಿದೆ. ಶ್ರೀಮದಾಚಾರ್ಯರು ತಾವು ಈ ರೀತಿ ವ್ಯಾಖ್ಯಾನ ಮಾಡಲು ಅದಕ್ಕೆ ಪ್ರಮಾಣ ಕೊಡುವರು -

"ನಾಹಂ ಚೇಂದ್ರೋ ನ ಚೈವಾನ್ಯೇ ಯತ್ತತ್ತ್ವಂ ನ ವಿದುಃ ಪರಮ್ ।
ತಸ್ಯ ವಿಷ್ಣೋರ್ವಶೇ ರುದ್ರೋ ಮಮ ವಾಯೋರಥಾಪಿ ವಾ॥
ನಾನ್ಯಸ್ಯ ಕಸ್ಯಚಿತ್ತುಂಸಸ್ತಸ್ಯೇತ್ಥಂ ವಃ ಕುತಃ ಕೃತಮ್ ॥ ಇತಿ ಬ್ರಹ್ಮವೈವರ್ತೇ

ನಾನಾಗಲೀ ಇಂದ್ರನಾಗಲೀ ಇನ್ನಿತರರಾಗಲೀ ಯಾವನ ಸ್ವರೂಪವನ್ನು ತಿಳಿಯಲಾರೆವೋ ಅಂತಹ ವಿಷ್ಣುವಿನ ವಶದಲ್ಲಿ ರುದ್ರದೇವರಿದ್ದಾರೆ. ಮತ್ತು ರುದ್ರದೇವರು ನನ್ನ ಅಧೀನರೂ, ವಾಯುವಿನ ಅಧೀನರೂ ಆಗಿದ್ದಾರೆ. ಬೇರೆ ಯಾರ ಅಧೀನರೂ ಅಲ್ಲ. ಅಂತಹ ರುದ್ರದೇವರಿಗೆ ನೀವು ಹೀಗೇಕೆ ಮಾಡಿದಿರಿ ? (ಯಜ್ಞಭಾಗ ಕೊಡಲಿಲ್ಲವೇಕೆ ?) ಎಂದು ಬ್ರಹ್ಮವೈವರ್ತದಲ್ಲಿ ಹೇಳಿದೆ. ॥೭॥

**ಸ ಇತ್ಥಮಾದಿಶ್ಯ ಸುರಾನಜಸ್ತು ತೈಃ**
**ಸಮನ್ವಿತಃ ಪಿತೃಭಿಃ ಸಪ್ರಜೇಶೈಃ ।**
**ಯಯೌ ಸ್ವಧಿಷ್ಣ್ಯಾನ್ನಿಲಯಂ ಪುರದ್ವಿಷಃ**
**ಕೈಲಾಸಮದ್ರಿಪ್ರವರಂ ಪ್ರಿಯಂ ಪ್ರಭೋಃ ॥೮॥**

ಸಃ ಅಜಃ ತು=ಆ ಬ್ರಹ್ಮದೇವರಾದರೋ ಸುರಾನ್=ದೇವತೆಗಳನ್ನು ಇತ್ಥಂ=ಈ ರೀತಿ ಆದಿಶ್ಯ=ಆಜ್ಞಾಪಿಸಿ ತೈಃ=ಆ ದೇವತೆಗಳಿಂದ, ಸಪ್ರಜೇಶೈಃ=ಪ್ರಜೇಶ್ವರರಿಂದ ಸಹಿತರಾದ ಪಿತೃಭಿಃ=ಪಿತೃಗಳಿಂದಲೂ ಸಮನ್ವಿತಃ=ಕೂಡಿಕೊಂಡು ಸ್ವಧಿಷ್ಣ್ಯಾತ್=ತನ್ನ ಸ್ಥಾನದಿಂದ ಎದ್ದು ಪ್ರಭೋಃ=ಸಮರ್ಥನಾದ ಪುರದ್ವಿಷಃ=ರುದ್ರದೇವರಿಗೆ ಪ್ರಿಯಂ=ಪ್ರಿಯವಾದ ಅದ್ರಿಪ್ರವರಂ ಕೈಲಾಸಂ ಯಯೌ=ಪರ್ವತಶ್ರೇಷ್ಠವಾದ ಕೈಲಾಸಕ್ಕೆ ತೆರಳಿದರು. ॥೮॥

೧೪ ಶ್ಲೋಕಗಳಿಂದ ಕೈಲಾಸವನ್ನು ವರ್ಣಿಸುವರು -

**ಜನ್ಮೌಷಧತಪೋಮಂತ್ರಯೋಗಸಿದ್ಧೈರ್ನರೇತರೈಃ ।**
**ಜುಷ್ಟಂ ಕಿನ್ನರಗಂಧರ್ವೈರಪ್ಸರೋಭಿರ್ವೃತಂ ಸದಾ ॥೯॥**

ಜನ್ಮೌಷಧತಪೋಮಂತ್ರಯೋಗಸಿದ್ಧೈರ್ನರೇತರೈಃ ಜನ್ಮ=ಉತ್ತಮಕುಲದಲ್ಲಿ ಹುಟ್ಟುವದರಿಂದ ಔಷಧ=ಅಲ್ಲಿರುವ ಕೃಷ್ಣ-ಚಿತ್ರಕ ಮುಂತಾದ ಔಷಧಸೇವನೆಯಿಂದ ತಪ=ಕೃಚ್ಛ್ರಚಾಂದ್ರಾಯಣಾದಿ ತಪಸ್ಸಿನಿಂದ ಮಂತ್ರ=ಮೃತ್ಯುಂಜಯಾದಿ ಮಂತ್ರಗಳಿಂದ ಯೋಗಸಿದ್ಧೈಃ=ಅಷ್ಟಾಂಗಯೋಗದಿಂದ ಸಿದ್ಧಿಯನ್ನು ಪಡೆದ, ನರೇತರೈಃ=ಮನುಷ್ಯರಲ್ಲದ ಕಿನ್ನರಗಂಧರ್ವೈಃ=ಕಿನ್ನರರು ಗಂಧರ್ವರು ಇವರುಗಳಿಂದ ಅಪ್ಸರೋಭಿಃ=ಅಪ್ಸರಾಸ್ತ್ರೀಯರಿಂದ ಸದಾ=ಯಾವಾಗಲೂ ಜುಷ್ಟಂ=ಸುತ್ತವರಿದ (ತುಂಬಿದ) ॥೯॥

**ನಾನಾಮಣಿಮಯೈಃ ಶೃಂಗೈರ್ನಾನಾಧಾತುವಿಚಿತ್ರಿತೈಃ ।**
**ನಾನಾದ್ರುಮಲತಾಗುಲ್ಮೈರ್ನಾನಾಮೃಗಗಣಾವೃತೈಃ ॥೧೦॥**

ನಾನಾಮಣಿಮಯೈಃ=ಅನೇಕರೀತಿಯ ಮಣಿಪ್ರಧಾನಗಳಾದ ಶೃಂಗೈಃ=ಶಿಖರಗಳಿಂದ ನಾನಾಧಾತುವಿಚಿತ್ರಿತೈಃ=ಅನೇಕರೀತಿಯ ಗೈರಿಕಾದಿ ಧಾತುಗಳಿಂದ ಆಶ್ಚರ್ಯಕರವಾದ ನಾನಾಮೃಗಗಣಾವೃತೈಃ=ಅನೇಕ ಮೃಗಗಳ ಸಮೂಹದಿಂದ ಆವೃತವಾದ ನಾನಾದ್ರುಮಲತಾಗುಲ್ಮೈಃ=ಅನೇಕ ಗಿಡ, ಬಳ್ಳಿ, ಪೊದರುಗಳಿಂದ ॥೧೦॥

**ನಾನಾಽಮಲಪ್ರಸ್ರವಣೈರ್ನಾನಾಕಂದರಸಾನುಭಿಃ ।**
**ರಮಣಂ ವಿಹರಂತೀನಾಂ ರಮಣೈಃ ಸಿದ್ಧಯೋಷಿತಾಮ್ ॥೧೧॥**

ನಾನಾಽಮಲಪ್ರಸ್ರವಣೈಃ ನಾನಾ=ಅನೇಕರೀತಿಯ ಅಮಲ=ನಿರ್ಮಲವಾದ ಪ್ರಸ್ರವಣೈಃ=ಝರಿಗಳಿಂದ, ನಾನಾಕಂದರಸಾನುಭಿಃ ನಾನಾ=ಅನೇಕರೀತಿಯ ಕಂದರ=(ಎರಡು ಪರ್ವತಗಳ ಮಧ್ಯಭಾಗ)ಕಣಿವೆಗಳು ಸಾನುಭಿಃ=ಉಪಶಿಖರಗಳಿಂದಲೂ ರಮಣೈಃ=ಪತಿಗಳಿಂದ ಕೂಡಿಕೊಂಡು ವಿಹರಂತೀನಾಂ=ವಿಹಾರ ಮಾಡುವ ಸಿದ್ಧಯೋಷಿತಾಂ=ಸಿದ್ಧರ ಪತ್ನಿಯರಿಗೆ ರಮಣಂ=ರತಿಪ್ರದವಾದ, ಸಂತೋಷಜನಕವಾದ ಎಂದರ್ಥ. ॥೧೧॥

**ಮಯೂರಕೇಕಾಭಿರುತಂ ಮದಾಂಧಾಲಿವಿಮೂರ್ಚ್ಛಿತಮ್ ।**
**ಪ್ಲಾವಿತೈ ರಕ್ತಕಂಠಾನಾಂ ಕೂಜಿತೈಶ್ಚ ಪತತ್ರಿಣಾಮ್ ॥೧೨॥**

ಮಯೂರಕೇಕಾಭಿರುತಂ=ನವಿಲುಗಳ ಧ್ವನಿಗಳಿಂದ ಶಬ್ದಿತವಾದ, ಮದಾಂಧಾಲಿ-ವಿಮೂರ್ಚ್ಛಿತಮ್ ಮದಾಂಧ=ಸಂತುಷ್ಟವಾದ ಅಲಿ=ಭ್ರಮರಗಳಿಂದ ವಿಮೂರ್ಚ್ಛಿತಂ=ವಿವಿಧರಾಗಗಳಿಂದ ವ್ಯಾಪಿಸಿದ ರಕ್ತಕಂಠಾನಾಂ=ಕೋಗಿಲೆಗಳ ಪ್ಲಾವಿತೈಃ=ಎತ್ತರಸ್ವರದಿಂದ, ಚ=ಮತ್ತು ಪತತ್ರಿಣಾಂ=ಉಳಿದ ಪಕ್ಷಿಗಳ ಕೂಜಿತೈಃ=ಕೂಗುಗಳಿಂದಲೂ ಶಬ್ದಿತವಾದ।।೧೨।।

**ಆಹ್ವಯಂತಮಿವೋದ್ಧಸ್ತೈರ್ದ್ವಿಜೈಃ ಕಾಮದುಘೈರ್ದ್ರುಮೈಃ ।**
**ವ್ರಜಂತಮಿವ ಮಾತಂಗೈರ್ಗೃಣಂತಮಿವ ನಿರ್ಝರೈಃ ।।೧೩।।**

ಕಾಮದುಘೈಃ=ಅಭೀಷ್ಟಪ್ರದಗಳಾದ ಉದ್ಧಸ್ತೈಃ=ಎತ್ತರವಾದ ದ್ರುಮೈಃ=ಟೊಂಗೆಗಳಿಂದ ದ್ವಿಜೈಃ=ಪಕ್ಷಿಗಳಿಂದ ಆಹ್ವಯಂತಮಿವ=ಕರೆಯುತ್ತಿರುವಂತೆ ಇರುವ, (ಅಂದರೆ ಪಕ್ಷಿಗಳ ಧ್ವನಿಮೂಲಕ ಗಿಡಗಳ ಟೊಂಗೆಗಳಿಂದ ಕೈಮಾಡಿ ಕರೆಯುವಂತಿತ್ತು ಎಂದು ಭಾವ) ಮಾತಂಗೈಃ ವ್ರಜಂತಮಿವ=ಚಲಿಸುವ ಆನೆಗಳಿಂದ ಚಲಿಸುವಂತೆ ಕಾಣುವ ನಿರ್ಝರೈಃ ಗೃಣಂತಮಿವ=ನೀರಿನ ಝುರಿಗಳ ಶಬ್ದದಿಂದ ಮಾತಾಡುವಂತಿರುವ।।೧೩।।

**ಮಂದಾರೈಃ ಪಾರಿಜಾತೈಶ್ಚ ಸರಲೈಶ್ಚೋಪಶೋಭಿತಮ್ ।**
**ತಮಾಲೈಃ ಸಾಲತಾಲೈಶ್ಚ ಕೋವಿದಾರಾಸನಾರ್ಜುನೈಃ ।।೧೪।।**

ಮಂದಾರೈಃ=ಉಮ್ಮತ್ತಿವೃಕ್ಷಗಳಿಂದ, ಪಾರಿಜಾತೈಶ್ಚ=ಪಾರಿಜಾತವೃಕ್ಷಗಳಿಂದಲೂ ಸರಲೈಃ=ಸರಳವೆಂಬ ದೇವದಾರು ವೃಕ್ಷಗಳಿಂದಲೂ ತಮಾಲೈಃ=ಹೊಂಗೆಮರಗಳಿಂದಲೂ ಸಾಲತಾಲೈಃ=ಸಾಲ ತಾಲ ವೃಕ್ಷಗಳಿಂದಲೂ ಕೋವಿದಾರಾಸನಾರ್ಜುನೈಃ ಕೋವಿದಾರ=ಕೆಂಗಾಂಜಾಳದ ಗಿಡಗಳಿಂದಲೂ ಆಸನ=ಹೊನ್ನೆಮರದಿಂದಲೂ ಅರ್ಜುನೈಃ=ಅರ್ಜುನ ವೃಕ್ಷದಿಂದಲೂ ಉಪಶೋಭಿತಂ=ಅಲಂಕೃತವಾದ।।೧೪।।

**ಚೂತೈಃ ಕದಂಬನೀಪೈಶ್ಚ ನಾಗಪುನ್ನಾಗಚಂಪಕೈಃ ।**
**ಪಾಟಲಾಶೋಕಬಕುಲೈಃ ಕುಂದೈಃ ಕುರಬಕೈರಪಿ ।।೧೫।।**

ಚೂತೈಃ=ಮಾವಿನಗಿಡಗಳಿಂದಲೂ ಕದಂಬನೀಪೈಶ್ಚ ಕದಂಬ=ಈಚಲಗಿಡ, ನೀಪ=ದಾಸಾಳಗಿಡಗಳಿಂದಲೂ ನಾಗಪುನ್ನಾಗಚಂಪಕೈಃ ನಾಗ=ನಾಗಸಂಪಿಗೆಗಿಡ, ಪುನ್ನಾಗ=ಸುರಗಿಮರ, ಚಂಪಕ=ಸಂಪಿಗೆಗಿಡಗಳಿಂದಲೂ ಪಾಟಲಾಶೋಕಬಕುಲೈಃ ಪಾಟಲ=ಪಾದರೀಗಿಡ, ಅಶೋಕ-ಅಶೋಕವೃಕ್ಷ, ಬಕುಲ-ಬಕುಲವೃಕ್ಷಗಳಿಂದಲೂ ಕುಂದೈಃ=ಕೊಲುಮಲ್ಲಿಗೆಬಳ್ಳಿಗಳಿಂದಲೂ ಕುರುಬಕೈಃ ಅಪಿ=ಗೋರಂಟಿ ಗಿಡಗಳಿಂದಲೂ ।।೧೫।।

**ಸುವರ್ಣಶತಪತ್ರೈಶ್ಚ ವೀರರೇಣುಕಜಾತಿಭಿಃ ।**
**ಕುಬ್ಜಕೈರ್ಮಲ್ಲಿಕಾಭಿಶ್ಚ ಮಾಧವೀಭಿಶ್ಚ ಮಂಡಿತಮ್ ॥೧೬॥**

ಸುವರ್ಣಶತಪತ್ರೈಃ ಸುವರ್ಣ=ದತ್ತೂರಿಪುಷ್ಪ, ಶತಪತ್ರೈಃ=ಕಮಲಪುಷ್ಪಗಳಿಂದ ಚ=ಮತ್ತು ವೀರರೇಣುಕಜಾತಿಭಿಃ ವೀರ=ಕರವೀರ (ಕಲ್ಹಾರ) ಪುಷ್ಪ, ರೇಣುಕ=ಕ್ಯಾದಗಿಪುಷ್ಪ ಜಾತಿಭಿಃ=ಜಾಜಿಮಲ್ಲಿಗೆ ಪುಷ್ಪಗಳಿಂದ ಚ=ಮತ್ತು ಕುಬ್ಜಕೈಃ=ಕುಂಕುಮಪುಷ್ಪಗಳಿಂದ ಚ=ಮತ್ತು ಮಾಧವೀಭಿಃ=ವಾಸಂತಿಕೆಗಳಿಂದ ಹಾಗೂ ಮಲ್ಲಿಕಾಭಿಃ=ಮಲ್ಲಿಗೆ ಪುಷ್ಪಗಳಿಂದ ಮಂಡಿತಂ=ಅಲಂಕೃತವಾದ॥೧೬॥

**ಪನಸೋದುಂಬರಾಶ್ವತ್ಥಪ್ಲಕ್ಷನ್ಯಗ್ರೋಧಹಿಂಗುಭಿಃ ।**
**ಭೂರ್ಜೈರೋಷಧಿಭಿಃ ಪೂಗೈಃ ರಾಜಪೂಗೈಶ್ಚ ಜಂಬುಭಿಃ ॥೧೭॥**

ಪನಸೋದುಂಬರಾಶ್ವತ್ಥಪ್ಲಕ್ಷನ್ಯಗ್ರೋಧಹಿಂಗುಭಿಃ ಪನಸ=ಹಲಸು ಉದುಂಬರ=ಅತ್ತಿಮರ ಅಶ್ವತ್ಥ=ಅರಳಿ ಪ್ಲಕ್ಷ=ಬಸುರಿಮರ ನ್ಯಗ್ರೋಧ=ಆಲದಮರ ಹಿಂಗು=ಅಂಕೆಲೆಮರ (ರಾಮಠ) ಇವುಗಳಿಂದ ಭೂರ್ಜೈಃ=ಭುಜಪತ್ರಗಿಡಗಳಿಂದ ಓಷಧಿಭಿಃ=ಫಲ ನೀಡಿ ಒಣಗುವ ಕುಂಬಳ-ಪಡವಲ-ಸೌತೆ-ಭತ್ತ ಮುಂತಾದವುಗಳಿಂದ ಪೂಗೈಃ=ಅಡಿಕೆಮರಗಳಿಂದ ರಾಜಪೂಗೈಃ=ಅಡಿಕೆಯ ಪ್ರಭೇದವಿಶೇಷಮರದಿಂದ ಜಂಬುಭಿಃ=ನೀರಲಮರಗಳಿಂದಲೂ ಅಲಂಕೃತವಾದ॥೧೭॥

**ಖರ್ಜೂರಾಮ್ರಾತಕಾಮ್ರಾದ್ಯೈಃ ಪ್ರಿಯಾಲಮಧುಕೇಂಗುದೈಃ ।**
**ದ್ರುಮಜಾತಿಭಿರನ್ಯೈಶ್ಚ ರಾಜಿತಂ ವೇಣುಕೀಚಕೈಃ ॥೧೮॥**

ಖರ್ಜೂರಾಮ್ರಾತಕಾಮ್ರಾದ್ಯೈಃ ಖರ್ಜೂರ=ಖರ್ಜೂರ, ಆಮ್ರಾತಕ=ಆಮಟೆಮರ, ಆಮ್ರಾದ್ಯೈಃ=ಮಾವಿನಮರ ಮೊದಲಾದ ಮರಗಳಿಂದ ಪ್ರಿಯಾಲಮಧುಕೇಂಗುದೈಃ ಪ್ರಿಯಾಲ=ಲವಂಗ ಮಧುಕ=ಅತಿಮಧುರ ಇಂಗುದೈಃ=ಇಂಗಳಾಗಿಡಗಳಿಂದ ಅನ್ಯೈಃ ಧ್ರುಮಜಾತಿಭಿಃ=ಇನ್ನೂ ಅನೇಕಜಾತಿಯ ಗಿಡಗಳಿಂದ ಚ=ಮತ್ತು ವೇಣುಕೀಚಕೈಃ= ರಂಧ್ರವಿರುವ ಹಾಗೂ ರಂಧ್ರವಿರದ ಬಿದರುಗಳಿಂದ ರಾಜಿತಂ=ಶೋಭಿತವಾದ॥೧೮॥

**ಕುಮುದೋತ್ಪಲಕಹ್ಲಾರಶತಪತ್ರವನರ್ದ್ಧಿಭಿಃ ।**
**ನಲಿನೀಷು ಕಲಂ ಕೂಜತ್ಖಗವೃಂದೋಪಶೋಭಿತಮ್ ॥೧೯॥**

ಕುಮುದೋತ್ಪಲಕಹ್ಲಾರಶತಪತ್ರವನರ್ದ್ಧಿಭಿಃ ಕುಮುದ=ಕೆಂದಾವರೆ ಉತ್ಪಲ=ಕೆನ್ನೈದಲೇ ಕಹ್ಲಾರ=ಬಿಳಿನೈದಿಲೇ ಶತಪತ್ರ=ಕಮಲ ಮುಂತಾದ ವನರ್ಧಿಭಿಃ=ವನದ ಸಮೃದ್ಧಿಯಿಂದ

ನಲಿನೀಷು=ಸರೋವರಗಳಲ್ಲಿ ಕಲಂ=ಮಧುರವಾಗಿ ಕೂಜತ್ಖಗವೃಂದೋಪಶೋಭಿತಮ್ ಕೂಜತ್=ಧ್ವನಿಮಾಡುವ ಖಗವೃಂದ=ಪಕ್ಷಿಗಳ ಸಮೂಹದಿಂದ ಉಪಶೋಭಿತಂ=ಅಲಂಕೃತವಾದ||೧೯||

**ಮೃಗೈಃ ಶಾಖಾಮೃಗೈಃ ಕ್ರೋಢೈರ್ಮೃಗೇಂದ್ರೈರೃಕ್ಷಶಲ್ಯಕೈಃ ।**
**ಗವಯೈಃ ಶರಭೈರ್ವ್ಯಾಘ್ರೈ ರುರುಭಿರ್ಮಹಿಷಾದಿಭಿಃ ||೨೦||**

ಮೃಗೈಃ=ಜಿಂಕೆಗಳಿಂದ ಶಾಖಾಮೃಗೈಃ=ಮಂಗಗಳಿಂದ ಕ್ರೋಢೈಃ=ಹಂದಿಗಳಿಂದ ಮೃಗೇಂದ್ರೈಃ=ಸಿಂಹಗಳಿಂದ ಋಕ್ಷಶಲ್ಯಕೈಃ ಋಕ್ಷ=ಕರಡಿ ಶಲ್ಯಕೈಃ=ಮುಳ್ಳುಹಂದಿಗಳಿಂದಲೂ ಗವಯೈಃ=ಅಡವಿಯ ಆಕಳುಗಳಿಂದ ಶರಭೈಃ=ಎಂಟುಕಾಲಿನ ಕ್ರೂರಮೃಗಗಳಿಂದ ವ್ಯಾಘ್ರೈಃ=ಹುಲಿಗಳಿಂದಲೂ ರುರುಭಿಃ=ಸರ್ಪಕ್ಕಿಂತ ಕ್ರೂರವಾದ ಪ್ರಾಣಿಯಿಂದಲೂ ಮಹಿಷಾದಿಭಿಃ=ಎಮ್ಮೆ ಮುಂತಾದವುಗಳಿಂದಲೂ ಕೂಡಿದ||೨೦||

**ಕರ್ಣಾಂತ್ರೈಕಪದಾಶ್ವಾಸ್ಯೈರ್ನಿರ್ಜುಷ್ಟಂ ಮೃಗನಾಭಿಭಿಃ ।**
**ಕದಲೀಖಂಡಸಂರುದ್ಧನಲಿನೀಪುಲಿನಶ್ರಿಯಮ್ ||೨೧||**

ಕರ್ಣಾಂತ್ರೈಕಪದಾಶ್ವಾಸ್ಯೈಃ (ಕರ್ಣಾಶ್ಚ ಔರ್ಣಾಶ್ಚ ಏಕಪದಾಶ್ಚ ಅಶ್ವಾಸ್ಯಾಶ್ಚ ತೈಃ ಎಂದು ವಿಗ್ರಹ) ಕರ್ಣ=(ಕಿವಿ ಇಲ್ಲದ ಪ್ರಾಣಿ)ಗೋಕರ್ಣ ಔರ್ಣ=ಕುರಿ ಏಕಪಾದ=ಒಂದು ಕಾಲಿನ ಮನುಷ್ಯಪ್ರಾಣಿ ಅಶ್ವಾಸ್ಯ=ಕುದುರೆಯಂತೆ ಮುಖವುಳ್ಳ ಪ್ರಾಣಿಗಳಿಂದ ಮತ್ತು ಮೃಗನಾಭಿಭಿಃ=ಕಸ್ತೂರಿ ಮೃಗಗಳಿಂದ ನಿರ್ಜುಷ್ಟಂ=ಸೇವಿತವಾದ, ಕದಲೀಖಂಡಸಂರುದ್ಧ-ನಲಿನೀಪುಲಿನಶ್ರಿಯಂ=ಬಾಳೆಯ ಸಮೂಹದಿಂದ ಆಚ್ಛಾದಿತವಾದ ಸರೋವರವುಳ್ಳ ಎತ್ತರವಾದ ಉಸಗಿನ ಪ್ರದೇಶದ ಸಂಪತ್ತುಳ್ಳ||೨೧||

**ಪರ್ಯಸ್ತಂ ನಂದಯಾ ಸತ್ಯಾಃ ಸ್ನಾನಪುಣ್ಯತಮೋದಯಾ ।**
**ವಿಲೋಕ್ಯ ಭೂತೇಶಗಿರಿಂ ವಿಬುಧಾ ವಿಸ್ಮಯಂ ಯಯುಃ ||೨೨||**

ಸತ್ಯಾಃ=ಭವಾನಿಯ ಸ್ನಾನಪುಣ್ಯತಮೋದಯಾ=ಸ್ನಾನದಿಂದ ಪವಿತ್ರವಾದ ನೀರುಳ್ಳ ನಂದಯಾ=ನಂದಾ ಎಂಬ ಗಂಗೆಯ ಶಾಖೆಯಿಂದ ಪರ್ಯಸ್ತಂ=ಸುತ್ತುವರಿದ ಭೂತೇಶಗಿರಿಂ =ಕೈಲಾಸಪರ್ವತವನ್ನು ವಿಲೋಕ್ಯ=ನೋಡಿ ವಿಬುಧಾಃ=ದೇವತೆಗಳು ವಿಸ್ಮಯಂ ಯಯುಃ=ಆಶ್ಚರ್ಯವನ್ನು ಹೊಂದಿದರು.

**ಭವಾನಿಯ ಅಂಗಸಂಗದಿಂದ ಭಾಗೀರಥಿಗೆ ಪವಿತ್ರತೆ !**

ಯದ್ಯಪಿ ಶ್ರೀಹರಿಯ ಚರಣಸಂಬಂಧದಿಂದ ಗಂಗೆಯು ಪರಮಪವಿತ್ರಳೇ. ಆದರೂ ಪಾಪಿಗಳು ಸ್ನಾನ ಮಾಡುವದರಿಂದ ಅವಳಿಗೆ ಮಾಲಿನ್ಯ ಬಂದಿತು. ಭಗವದ್ಭಕ್ತಳಾದ ಸತಿಯ

ಸಂಬಂಧದಿಂದ ಆ ಮಾಲಿನ್ಯ ಹೋಗಿ ಪವಿತ್ರತೆ ಉಳಿಯಿತೆಂದು ಭಾವ. ಇದನ್ನೇ ನವಮಸ್ಕಂಧದಲ್ಲಿ ಹೀಗೆ ಹೇಳಿದೆ :-

**ಸಾಧವೋ ನ್ಯಾಸಿನಃ ಶಾಂತಾ ಬ್ರಹ್ಮಿಷ್ಠಾ ಲೋಕಪಾವನಾಃ ।**
**ಹರಂತ್ಯಘಂ ತೇಽಂಗಸಂಗಾತ್ ತೇಷ್ವಾಸ್ತೇ ಹ್ಯಘಭಿದ್ಧರಿಃ ॥**

''ಪಾಪನಾಶಕನಾದ ಶ್ರೀಹರಿಯು ಜ್ಞಾನಿಗಳಲ್ಲಿ ವಿಶೇಷವಾಗಿ ಸನ್ನಿಧಾನ ಇಟ್ಟಿರುವದರಿಂದ ಅವರು ತಮ್ಮ (ಅಂಗಸಂಗದಿಂದ) ಸ್ನಾನಾದಿಗಳಿಂದ ನಿನ್ನ ಪಾಪವನ್ನು ಕಳೆಯುವರು'' ಎಂಬುದಾಗಿ ಭಾಗೀರಥಿಗೆ ಸಮಾಧಾನ ಹೇಳಿ ಭೂಮಿಗೆ ಬರಲು ಒಪ್ಪಿಸಿದರು ಎಂದು ಭಾವ. ॥೨೨॥

**ದದೃಶುಸ್ತತ್ರ ತೇ ರಮ್ಯಾಮಲಕಾಂ ನಾಮ ವೈ ಪುರೀಮ್ ।**
**ವನಂ ಸೌಗಂಧಿಕಂ ಚಾಪಿ ತತ್ರ ತನ್ನಾಮ ಪಂಕಜಮ್ ॥೨೩ ॥**

ತೇ=ದೇವತೆಗಳು ತತ್ರ=ಕೈಲಾಸದಲ್ಲಿ ರಮ್ಯಾಂ=ಮನೋಹರವಾದ ಅಲಕಾಂ ನಾಮ=ಅಲಕಾ ಎಂಬ ಹೆಸರಿನ ಪುರೀಂ=ಊರನ್ನು ಚ=ಮತ್ತು ಸೌಗಂಧಿಕಂ ವನಂ=ಸೌಗಂಧಿಕ ಎಂಬ ವನವನ್ನು ಅಪಿ=ಮತ್ತು ತನ್ನಾಮ ಪಂಕಜಂ=ಸೌಗಂಧಿಕ ಎಂಬ ಹೆಸರಿನ ಕಮಲವನ್ನು ದದೃಶುಃ=ನೋಡಿದರು. ॥೨೩ ॥

ನಾಲ್ಕು ಶ್ಲೋಕಗಳಿಂದ ಪುರವನ್ನು ವರ್ಣಿಸುವರು -

**ನಂದಾ ಚಾಲಕನಂದಾ ಚ ಸರಿತೌ ಬಾಹ್ಯತಃ ಪುರಃ ।**
**ತೀರ್ಥಪಾದಪದಾಂಭೋಜರಜಸಾಽತೀವಪಾವನೇ ॥೨೪॥**

ಪುರಃ=ಅಲಕಾಪಟ್ಟಣದ ಮುಂದೆ, ಬಾಹ್ಯತಃ=ಹೊರಗೆ ತೀರ್ಥಪಾದಪದಾಂಭೋಜ-ರಜಸಾ=ಶ್ರೀಹರಿಯ ಪಾದಕಮಲಗಳ ಧೂಳಿಯಿಂದ ಅತೀವಪಾವನೇ=ಪರಮ-ಪವಿತ್ರಗಳಾದ ನಂದಾ ಚ ಅಲಕನಂದಾ ಚ ಸರಿತೌ=ನಂದಾ ಮತ್ತು ಅಲಕನಂದಾ ಎಂಬ ಎರಡು ನದಿಗಳು ಭವತಃ=ಇದ್ದವು. ॥೨೪॥

**ಯಯೋಃ ಸುರಸ್ತ್ರಿಯಃ ಕ್ಷತ್ತರವರುಹ್ಯ ಸ್ವಧಿಷ್ಣ್ಯತಃ ।**
**ಕ್ರೀಡಂತಿ ಪುಂಸಃ ಸಿಂಚಂತ್ಯೋ ವಿಗಾಹ್ಯ ರತಿಕರ್ಶಿತಾಃ ॥೨೫॥**

ಹೇ ಕ್ಷತ್ತಃ=ಎಲೈ ವಿದುರನೇ ! ರತಿಕರ್ಶಿತಾಃ=ಸಂಭೋಗದಿಂದ ಶ್ರಾಂತರಾದ ಸುರಸ್ತ್ರಿಯಃ=ದೇವತಾಸ್ತ್ರೀಯರು ಸ್ವಧಿಷ್ಣ್ಯತಃ=ತಮ್ಮ ಸ್ಥಾನವಾದ ದೇವಲೋಕದಿಂದ ಅಥವಾ ವಿಮಾನದಿಂದ ಅವರುಹ್ಯ=ಇಳಿದು ಯಯೋಃ=ಯಾವ ನಂದಾ-ಅಲಕನಂದಾ ಎಂಬ

ನದಿಗಳಲ್ಲಿ ವಿಗಾಹ್ಯ=ಪ್ರವೇಶಿಸಿ ಪುಂಸಃ=ಪತಿಗಳನ್ನು ಸಿಂಚಂತ್ಯಃ=ನೀರನ್ನು ಸಿಡಿಸುತ್ತ ಕ್ರೀಡಂತಿ=ವಿರಹಿಸುವರು. ॥೨೫॥

**ಯಯೋಸ್ತತ್ಸ್ನಾನವಿಭ್ರಷ್ಟಕುಚಕುಂಕುಮಪಿಂಜರಮ್ ।**
**ವಿತೃಷೋಽಪಿ ಪಿಬಂತ್ಯಂಭಃ ಪಾಯಯಂತೋ ಗಜಾ ಗಜೀಃ ॥೨೬॥**

ತತ್ಸ್ನಾನವಿಭ್ರಷ್ಟಕುಚಕುಂಕುಮಪಿಂಜರಂ=ದೇವತಾಸ್ತ್ರೀಯರು ಸ್ನಾನ ಮಾಡುವದರಿಂದ ಉದರಿದ, ಸ್ತನಲೇಪನವಾದ ಕುಂಕುಮದ ಮಿಶ್ರಣದಿಂದ ಕೆಂಪಾದ ಸುಗಂಧವಾದ ಯಯೋಃ=ಯಾವ ನದಿಗಳ ಅಂಭಃ=ನೀರನ್ನು ವಿತೃಷಃ ಅಪಿ ಗಜಾಃ=ನೀರಡಿಕೆ ಇಲ್ಲದಿದ್ದರೂ ಆನೆಗಳು ಗಜೀಃ=ಹೆಣ್ಣಾನೆಗಳನ್ನು ಪಾಯಯಂತಃ=ಕುಡಿಸುತ್ತ ಪಿಬಂತಿ=ತಾವೂ ಕುಡಿಯುವವು. ॥೨೬॥

**ತಾರಹೇಮಮಹಾರತ್ನವಿಮಾನಶತಸಂಕುಲಾಮ್ ।**
**ಜುಷ್ಟಾಂ ಪುಣ್ಯಜನಸ್ತ್ರೀಭಿರ್ಯಥಾ ಖಂ ಸತಡಿದ್ಘನಮ್ ॥೨೭॥**

ತಾರಹೇಮಮಹಾರತ್ನವಿಮಾನಶತಸಂಕುಲಾಮ್ ತಾರ=ಬೆಳ್ಳಿ ಅಥವಾ ಮುತ್ತು ಹೇಮ=ಭಂಗಾರ ಮಹಾರತ್ನ=ಅಮೂಲ್ಯರತ್ನಗಳುಳ್ಳ ವಿಮಾನಶತಸಂಕುಲಾಂ=ನೂರಾರು ವಿಮಾನಗಳಿಂದ ನಿಬಿಡವಾದ, ಪುಣ್ಯಜನಸ್ತ್ರೀಭಿಃ ಜುಷ್ಟಾಂ=ಪುಣ್ಯಜನರು (ಯಕ್ಷರು) ಯಾತಧಾನರು, ಅವರ ಸ್ತ್ರೀಯರುಗಳಿಂದ ಕೂಡಿದ, ಸತಡಿದ್ಘನಮ್ ಖಂ ಯಥಾ= ಮೋಡಮಿಂಚುಗಳಿಂದ ಸಹಿತವಾದ ಆಕಾಶದಂತೆ ಇರುವ ಎಂದರ್ಥ.

ವಿಮಾನಗಳು ಆಕಾಶವಿದ್ದಂತೆ. ಪುಣ್ಯಜನರು ಮೋಡವಿದ್ದಂತೆ. ಅವರ ಸ್ತ್ರೀಯರೇ ಮಿಂಚಿನಂತೆ ಎಂದು ತಿಳಿಯಬೇಕು. ॥೨೭॥

**ಹಿತ್ವಾ ಯಕ್ಷೇಶ್ವರಪುರೀಂ ವನಂ ಸೌಗಂಧಿಕಂ ಚ ತತ್ ।**
**ದ್ರುಮೈಃ ಕಾಮದುಘೈರ್ಹೃದ್ಯಂ ಚಿತ್ರಮಾಲ್ಯಫಲಚ್ಛದೈಃ ॥೨೮॥**

ಯಕ್ಷೇಶ್ವರಪುರೀಂ=ಕುಬೇರನ ಅಲಕಾಪಟ್ಟಣವನ್ನು ಚ=ಮತ್ತು ಕಾಮದುಘೈಃ= ಅಭೀಷ್ಟಗಳನ್ನು ಕೊಡುವ ಚಿತ್ರಮಾಲ್ಯಫಲಚ್ಛದೈಃ=ಚಿತ್ರವಿಚಿತ್ರಗಳಾದ ಹೂವು-ಹಣ್ಣು-ಎಲೆಗಳುಳ್ಳ ದ್ರುಮೈಃ=ಗಿಡಗಳಿಂದ ಹೃದ್ಯಂ=ಮನೋಹರವಾದ ತತ್=ಆ ಸೌಗಂಧಿಕಂ ವನಂ=ಸೌಗಂಧಿಕಾವನವನ್ನೂ ಹಿತ್ವಾ=ಬಿಟ್ಟು (ದಾಟಿ)॥೨೮॥

**ರಕ್ತಕಂಠಖಗಾನೀಕಸ್ವರಮಂಡಿತಷಟ್ಪದಮ್ ।**
**ಕಲಹಂಸಕುಲಪ್ರೇಷ್ಠಖರದಂಡಜಲಾಶಯಮ್ ॥೨೯॥**

ರಕ್ತಕಂಠಖಗಾನೀಕಸ್ವರಮಂಡಿತಷಟ್ಪದಂ=ಕೋಗಿಲೆಗಳ ಸಮೂಹದ ಸ್ವರದಿಂದ ಅಲಂಕೃತಗಳಾದ ಭ್ರಮರಗಳುಳ್ಳ, (ಕೊಗಿಲೆಸ್ವರ ಪಕ್ಕವಾದ್ಯವಿದ್ದಂತೆ, ಭ್ರಮರಗಳೇ ಗಾಯಕಗಳು.) ಕಲಹಂಸಕುಲಪ್ರೇಷ್ಠಖರದಂಡಜಲಾಶಯಂ=ರಾಜಹಂಸಗಳ ಸಮೂಹಕ್ಕೆ ಅತಿಶಯಪ್ರಿಯವಾದ ಕಮಲಗಳುಳ್ಳ ಸರೋವರವುಳ್ಳ||೨೯||

**ವನಕುಂಜರಸಂಘೃಷ್ಟಹರಿಚಂದನವಾಯುನಾ ।**
**ಅಧಿಪುಣ್ಯಜನಸ್ತ್ರೀಣಾಂ ಮುಹುರುನ್ಮಥಯನ್ಮನಃ ||೩೦||**

ವನಕುಂಜರಸಂಘೃಷ್ಟಹರಿಚಂದನವಾಯುನಾ ವನಕುಂಜರ=ಅಡವಿಯಲ್ಲಿರುವ ಆನೆಗಳಿಂದ ಸಂಘೃಷ್ಟ=ನವೆಯನ್ನು (ತುರುಸನ್ನು) ಕಳೆದುಕೊಳ್ಳಲು ತಿಕ್ಕಲ್ಪಟ್ಟ ಹರಿಚಂದನ=ಶ್ರೀಗಂಧದ ಗಿಡದ ಸಂಬಂಧಿಯಾದ ವಾಯುನಾ=ಗಾಳಿಯಿಂದ ಪುಣ್ಯಜನಸ್ತ್ರೀಣಾಂ=ಯಕ್ಷಸ್ತ್ರೀಯರ ಮನಃ=ಮನಸ್ಸು ಅಧಿ=ಬಹಳವಾಗಿ ಮುಹುಃ=ಮತ್ತೆ ಮತ್ತೆ ಉನ್ಮಥಯತ್=ಕ್ಷೋಭೆಗೊಂಡಿತು. ||೩೦||

**ವೈಡೂರ್ಯಕೃತಸೋಪಾನಾ ವಾಪ್ಯ ಉತ್ಪಲಮಾಲಿನೀಃ ।**
**ವ್ಯಾಪ್ತಂ ಕಿಂಪುರುಷೈರ್ದೃಷ್ಟ್ವಾ ತ ಆರಾದ್ದದೃಶುರ್ವಟಮ್ || ೩೧ ||**

ವೈಡೂರ್ಯಕೃತಸೋಪಾನಾಃ=ವೈಡೂರ್ಯ ಎಂಬ ಮಣಿಗಳಿಂದ ನಿರ್ಮಿಸಿದ ಮೆಟ್ಟಲುಗಳುಳ್ಳ ಉತ್ಪಲಮಾಲಿನೀಃ=ಕಮಲಗಳ ಸಾಲು(ಪಂಕ್ತಿ)ಗಳುಳ್ಳ ಕಿಂಪುರುಷೈಃ ವ್ಯಾಪ್ತಂ=ವಿಹಾರಕ್ಕಾಗಿ ಪುರುಷರಿಂದ ತುಂಬಿದ ವಾಪ್ಯಃ=ಭಾವಿಯುಳ್ಳ ವನವನ್ನು ದೃಷ್ಟ್ವಾ=ನೋಡಿ ಆರಾತ್=ದೂರದಲ್ಲಿ ತೇ=ದೇವತೆಗಳು ವಟಂ ದದೃಶುಃ=ಆಲದಮರವನ್ನು ನೋಡಿದರು. || ೩೧ ||

**ಸ ಯೋಜನಶತೋತ್ಸೇಧಃ ಪಾದೋನವಿಟಪಾಯತಃ ।**
**ಪರ್ಯಗ್ಗತಾಮಲಚ್ಛಾಯೋ ನಿರ್ನೀಡಸ್ತಾಪವರ್ಜಿತಃ ||೩೨||**

ಸಃ=ಆ ವಟವೃಕ್ಷವು ಯೋಜನಶತೋತ್ಸೇಧಃ=ನೂರುಯೋಜನ ಎತ್ತರವಾದುದು. ಪಾದೋನವಿಟಪಾಯತಃ=ಎಪ್ಪತ್ತೈದು ಯೋಜನ ಉಳ್ಳ ಟೊಂಗೆಗಳಿಂದ ವಿಸ್ತೃತವಾದುದು. ಪರ್ಯಗ್ಗತಾಮಲಚ್ಛಾಯಃ ಪರ್ಯಕ್=ಸುತ್ತಲೂ ಗತ=ಮಾಡಲ್ಪಟ್ಟ ಅಮಲಚ್ಛಾಯಃ=ನಿರ್ಮಲನಗರಗಳುಳ್ಳದ್ದು. ನಿರ್ನೀಡಃ=ಪಕ್ಷಿಗಳ ಗೂಡುಗಳಿಲ್ಲದ್ದು. ತಾಪವರ್ಜತಃ=ಬಿಸಿಲಿನ ತಾಪವಿಲ್ಲದ್ದು. (ತ್ರಿವಿಧತಾಪಗಳೂ ಇಲ್ಲದ್ದು - ಪಕ್ಷಿಗಳ ಕಾಟವಿಲ್ಲದ್ದು.)||೩೨||

**ತಸ್ಮಿನ್ ಮಹಾಯೋಗಮಯೇ ಮುಮುಕ್ಷುಶರಣೇ ಸುರಾಃ ।**
**ದದೃಶುಃ ಶಿವಮಾಸೀನಂ ತ್ಯಕ್ತಾಮರ್ಷಮಿವಾಂತಕಮ್ ||೩೩||**

ಸುರಾಃ=ದೇವತೆಗಳು ಮಹಾಯೋಗಮಯೇ=ಭಾರಿ ಮೋಕ್ಷೋಪಾಯ ಉಳ್ಳವರಿಂದ ಪ್ರಚುರವಾದ, ಮುಮುಕ್ಷುಶರಣೇ=ಮೋಕ್ಷಾಪೇಕ್ಷಿಗಳಿಗೆ ಆಶ್ರಯವಾದ ತಸ್ಮಿನ್=ಆ ವಟವೃಕ್ಷದಲ್ಲಿ ಆಸೀನಂ=ಕುಳಿತಿರುವ ತ್ಯಕ್ತಾಮರ್ಷಂ ಅಂತಕಮಿವ=ಕೋಪವನ್ನು ತೊರೆದ ಯಮನಂತಿರುವ ಶಿವಂ=ರುದ್ರದೇವರನ್ನು ದದೃಶುಃ=ನೋಡಿದರು.

**ಭಾಗವತ ತಾತ್ಪರ್ಯ :-**

ಶಿವನು ಮೋಕ್ಷಪ್ರದನೆಂಬ ವಿಷಯದಲ್ಲಿ ಆಚಾರ್ಯರು ಪ್ರಮಾಣ ಹೇಳುವರು :-

**ಮುಮುಕ್ಷವೋ ಬ್ರಹ್ಮಣಶ್ಚ ಶಿವಾದಿಂದ್ರಾದಿಭಿಸ್ತಥಾ ।**
**ಶ್ರುತ್ವಾ ಜ್ಞಾನಂ ಪರಂ ಗುಹ್ಯಂ ಮುಚ್ಯಂತೇ ಬ್ರಹ್ಮಣಾ ಸಹ ॥ ಇತಿ ಕೌರ್ಮೇ ॥**

"ಮೋಕ್ಷಾಪೇಕ್ಷಿಗಳು ಬ್ರಹ್ಮದೇವರಿಂದ, ರುದ್ರದೇವರಿಂದ, ಇಂದ್ರಾದಿದೇವತೆಗಳಿಂದಲೂ ಅತ್ಯಂತ ರಹಸ್ಯವಾದ ಜ್ಞಾನಸಾಧಕಮಾತುಗಳನ್ನು ಕೇಳಿ ಬ್ರಹ್ಮದೇವರ ಜೊತೆಗೆ ಮುಕ್ತರಾಗುವರು" ಎಂಬುದಾಗಿ ಕೂರ್ಮಪುರಾಣದಲ್ಲಿದೆ. ಅಪರೋಕ್ಷಜ್ಞಾನಕ್ಕಾಗಿ ಬ್ರಹ್ಮೋಪದೇಶದಂತೆ ರುದ್ರಾದಿದೇವತೆಗಳ ಉಪದೇಶವೂ ಆವಶ್ಯಕವಾಗಿದೆ. ಕಾರಣ ಉಪದೇಶ ಮಾಡುವ ಮೂಲಕ ಶಿವನೂ ಮೋಕ್ಷ ಕೊಡುವವನೆಂದು ಭಾವ. ।।೩೩।।

**ಸನಂದನಾದಿಭಿಃ ಸಿದ್ಧೈಃ ಶಾಂತೈಃ ಸಂಶಾಂತವಿಗ್ರಹಮ್ ।**
**ಉಪಾಸ್ಯಮಾನಂ ಸಖ್ಯಾ ಚ ಭರ್ತ್ರಾ ಗುಹ್ಯಕರಕ್ಷಸಾಮ್ ।।೩೪ ।।**

ಶಾಂತೈಃ=ಭಗವನ್ನಿಷ್ಠರಾದ ಸನಂದನಾದಿಭಿಃ=ಸನಕ ಸನಂದನ ಸನತ್ಕುಮಾರ ಸನತ್ಸುಜಾತರುಗಳೇ ಮೊದಲಾದ ಸಿದ್ಧೈಃ=ಜ್ಞಾನಿಗಳಿಂದ, ಗುಹ್ಯಕರಕ್ಷಸಾಂ=ಗುಹ್ಯಕರಿಗೂ ರಾಕ್ಷಸರಿಗೂ ಭರ್ತ್ರಾ=ಒಡೆಯನಾದ ಸಖ್ಯಾ ಚ=ತನ್ನ ಗೆಳೆಯನಾದ ಕುಬೇರನಿಂದಲೂ ಉಪಾಸ್ಯಮಾನಂ=ಸೇವಿತನಾದ ಸಂಶಾಂತವಿಗ್ರಹಂ=ಒಳ್ಳೆಯ ಶಾಂತಸ್ವರೂಪನಾದ (ಅಂದರೆ ಅಪರಾಧ ಮಾಡಿದವರ ಮೇಲೆಯೂ ಕೋಪವಿರದ ಎಂದರ್ಥ),।।೩೪ ।।

**ವಿದ್ಯಾತಪೋಯೋಗಪಥಮಾಸ್ಥಿತಂ ತದಧೀಶ್ವರಮ್ ।**
**ಧ್ಯಾಯಂತಂ ವಿಶ್ವಸುಹೃದಂ ವಾತ್ಸಲ್ಯಾಲ್ಲೋಕಮಂಗಲಮ್ ।।೩೫ ।।**

ವಿದ್ಯಾತಪೋಯೋಗಪಥಂ ವಿದ್ಯಾ=ಜ್ಞಾನ ತಪ=ತಪಸ್ಸು ಯೋಗ=ಅಷ್ಟಾಂಗಯೋಗಗಳ ಪಥಂ=ಮಾರ್ಗವನ್ನು ಆಸ್ಥಿತಂ=ಅನುಷ್ಠಾನ ಮಾಡುವ ತದಧೀಶ್ವರಂ=ವಿದ್ಯಾ ತಪ ಯೋಗಗಳಿಗೆ ಉಪದೇಶಕನೂ ನಿಯಾಮಕನೂ ಆದ ಲೋಕಮಂಗಲಂ=ಜಗತ್ತಿಗೆ ಮಂಗಳದಾಯಕನಾದ ಆದ್ದರಿಂದಲೇ ವಿಶ್ವಸುಹೃದಂ=ಜಗತ್ತಿಗೆ ಅನಿಮಿತ್ತೋಪಕಾರಕನಾದ ಶ್ರೀಹರಿಯನ್ನು ವಾತ್ಸಲ್ಯಾತ್=ಭಕ್ತ್ಯುದ್ರೇಕದಿಂದ ಧ್ಯಾಯಂತಂ=ಧ್ಯಾನ ಮಾಡುತ್ತಿರುವ,

**ಲಿಂಗಂ ಚ ತಾಪಸಾಭೀಷ್ಟಂ ಭಸ್ಮದಂಡಜಟಾಜಿನಮ್ ।**
**ಅಂಗೇನ ಸಂಧ್ಯಾಭ್ರರುಚಾ ಚಂದ್ರಲೇಖಾಂ ಚ ಬಿಭ್ರತಮ್ ॥೩೬ ॥**

ತಾಪಸಾಭೀಷ್ಟಂ=ತಪಸ್ವಿಗಳಿಗೆ ಅಪೇಕ್ಷಿತವಾದ ಭಸ್ಮದಂಡಜಟಾಜಿನಂ=ಭಸ್ಮ, ದಂಡ, ಜಟೆ, ಕೃಷ್ಣಾಜಿನಗಳೆಂಬ ಲಿಂಗಂ=ಚಿಹ್ನವನ್ನು ಚಂದ್ರಲೇಖಾಂ ಚ=ಚಂದ್ರಕಲೆಯನ್ನೂ ಸಂಧ್ಯಾಭ್ರರುಚಾ=ಸ್ವಲ್ಪ ಕೆಂಪುಮಿಶ್ರ ಬಿಳಿಕಾಂತಿಯುಳ್ಳ ಅಂಗೇನ=ದೇಹದಿಂದ ಬಿಭ್ರತಂ=ಧರಿಸಿದ,॥೩೬ ॥

**ಉಪವಿಷ್ಟಂ ದರ್ಭಮಯ್ಯಾಂ ಬೃಸ್ಯಾಂ ಬ್ರಹ್ಮ ಸನಾತನಮ್ ।**
**ನಾರದಾಯ ಪ್ರವೋಚಂತಂ ಪೃಚ್ಛತೇ ಶೃಣ್ವತಾಂ ಸತಾಮ್ ॥೩೭॥**

ಧರ್ಭಮಯ್ಯಾಂ=ದರ್ಭದಿಂದ ತಯಾರಾದ ಬೃಸ್ಯಾಂ=ಯತಿಗಳ ಆಸನದಲ್ಲಿ ಉಪವಿಷ್ಟಂ=ಕುಳಿತಿರುವ, ಶೃಣ್ವತಾಂ=ಕೇಳುತ್ತಿರುವ ಸತಾಂ=ಸಜ್ಜನರಿಗೆ, ಪೃಚ್ಛತೇ=ಪ್ರಶ್ನಿಸುವ ನಾರದಾಯ=ನಾರದನಿಗೆ ಸನಾತನಂ ಬ್ರಹ್ಮ=ವೇದವೇದ್ಯನಾದ ಪರಬ್ರಹ್ಮನನ್ನು ಪ್ರವೋಚಂತಂ=ಉಪದೇಶಿಸುವ,॥೩೭॥

**ಕೃತ್ವೋರೌ ದಕ್ಷಿಣೇ ಸವ್ಯಂ ಪಾದಪದ್ಮಂ ಚ ಜಾನುನಿ ।**
**ಬಾಹುಂ ಪ್ರಕೋಷ್ಠೇಽಕ್ಷಮಾಲಾಮಾಸೀನಂ ತರ್ಕಮುದ್ರಯಾ ॥ ೩೮ ॥**

ದಕ್ಷಿಣೇ ಊರೌ=ಬಲತೊಡೆಯ ಮೇಲೆ ಸವ್ಯಂ ಪಾದಪದ್ಮಂ ಕೃತ್ವಾ=ಎಡದ ಪಾದಕಮಲವನ್ನು ಇಟ್ಟು ಜಾನುನಿ=ಎಡ ಮೊಣಕಾಲು ಮಂಡೆಮೇಲೆ ಬಾಹುಂ= ಎಡಗೈಯನ್ನು ಇರಿಸಿ ತರ್ಕಮುದ್ರಯಾ ಆಸೀನಂ=ಬಲ ಕೈಯಲ್ಲಿ ಜ್ಞಾನಮುದ್ರೆಯಿಂದ ಯುಕ್ತನಾಗಿ ಕುಳಿತಿರುವ, ಪ್ರಕೋಷ್ಠೇ=ಮಣಿಕಟ್ಟಿನಲ್ಲಿ ಅಕ್ಷಮಾಲಾಂ ಕೃತ್ವಾ ಆಸೀನಂ= ಕಮಲಾಕ್ಷಮಣಿಯನ್ನು ಧರಿಸಿ ಕುಳಿತಿರುವ,॥ ೩೮ ॥

**ತಂ ಬ್ರಹ್ಮನಿರ್ವಾಣಸಮಾಧಿಮಾಸ್ಥಿತಂ**
**ವ್ಯಪಾಶ್ರಿತಂ ಗಿರಿಶಂ ಯೋಗಕಕ್ಷ್ಯಾಮ್।**
**ಸಲೋಕಪಾಲಾ ಮುನಯೋ ಮನೂನಾ-**
**ಮಾದ್ಯಂ ಮನುಂ ಪ್ರಾಂಜಲಯಃ ಪ್ರಣೇಮುಃ ॥೩೯॥**

ಸಲೋಕಪಾಲಾಃ ಮುನಯಃ=ಲೋಕಪಾಲಕರಿಂದ ಸಹಿತರಾದ ಋಷಿಗಳು ಮನೂನಾಂ=ಮನನಶೀಲರಾದವರಿಗೆ ಆದ್ಯಂ=ಮೊದಲಿಗನಾದ, ಮನುಂ=ಮನನಶೀಲನಾದ, ಯೋಗಕಕ್ಷ್ಯಾಂ=ಎಡಗಾಲನ್ನು ದೃಢಪಡಿಸಲು ಯೋಗಪಟ್ಟಿಕೆಯನ್ನು ವ್ಯಪಾಶ್ರಿತಂ=

ವಿಶೇಷವಾಗಿ ಕಟ್ಟಿಕೊಂಡಿರುವ ಬ್ರಹ್ಮನಿರ್ವಾಣಸಮಾಧಿಂ ಆಸ್ಥಿತಂ=ಪರಬ್ರಹ್ಮವಿಷಯದಲ್ಲಿ ದೇಹಾಭಿಮಾನರಹಿತವಾದ ಚಿತ್ತೈಕಾಗ್ರತಾರೂಪವಾದ ಸಮಾಧಿಯನ್ನು ಹೊಂದಿದ ತಂ ಗಿರಿಶಂ=ಆ ರುದ್ರದೇವರನ್ನು ಪ್ರಾಂಜಲಯಃ ಪ್ರಣೇಮುಃ=ಕೈಜೋಡಿಸಿ ನಮಸ್ಕರಿಸಿದರು.

**ಸ ತೂಪಲಭ್ಯಾಗತಮಾತ್ಮಯೋನಿಂ**
**ಸುರಾಸುರೇಶೈರಭಿವಂದಿತಾಂಘ್ರಿಃ ।**
**ಉತ್ಥಾಯ ಚಕ್ರೇ ಶಿರಸಾಽಭಿವಂದನಂ**
**ಮಹತ್ತಮೋಽರ್ಕಸ್ಯ ಯಥೈವ ವಿಷ್ಣೋಃ ॥೪೦॥**

ಸುರಾಸುರೇಶೈಃ=ದೇವದಾನವ ಪತಿಗಳಿಂದ ಅಭಿವಂದಿತಾಂಘ್ರಿಃ=ನಮಸ್ಕೃತವಾದ ಪಾದಗಳುಳ್ಳ ಅರ್ಕಸ್ಯ ಸಕಾಶಾತ್ ಮಹತ್ತಮಃ=ಸೂರ್ಯನಿಗಿಂತಲೂ ತೇಜಸ್ವಿಯಾದ ಸಃ= ರುದ್ರದೇವನು ಆತ್ಮಯೋನಿಂ=ತನಗೆ ಕಾರಣನಾದ ಅಥವಾ ಪರಮಾತ್ಮನೇ ಕಾರಣವಾಗಿ ಉಳ್ಳ ಬ್ರಹ್ಮದೇವನನ್ನು ಆಗತಂ ಉಪಲಭ್ಯ=ಬಂದದ್ದನ್ನು ತಿಳಿದು ಉತ್ಥಾಯ=ಎದ್ದು ವಿಷ್ಣೋಃ ಯಥಾ=ಶ್ರೀಹರಿಗೆ ನಮಸ್ಕರಿಸುವಂತೆ ಶಿರಸಾ=ತಲೆಬಾಗಿ ಅಭಿವಂದನಂ ಚಕ್ರೇ=ನಮಸ್ಕಾರ ಮಾಡಿದನು.

**ಭಾಗವತ ತಾತ್ಪರ್ಯ :-**

ಇಲ್ಲಿ ಶಿವನ ಮಹತ್ವ ಹೇಳಲು ''ಅರ್ಕಸ್ಯ ಮಹತ್ತಮಃ'' ಎಂದಿರುವರು. ಇಲ್ಲಿ ಮಹಚ್ಛಬ್ದಕ್ಕೆ ಶ್ರೇಷ್ಠ ಎಂದರ್ಥವಾದರೆ, ಸೂರ್ಯನಿಂಗಿಂತ ಶ್ರೇಷ್ಠ ಬೃಹಸ್ಪತಿಯೂ ಆಗುವನು. ಹಾಗಾದರೆ ಶಿವಮಾಹಾತ್ಮ್ಯವಾಗಲಾರದು. ಆ ಕಾರಣ ಇಲ್ಲಿ ಮಹಚ್ಛಬ್ದಕ್ಕೆ ಶ್ರೇಷ್ಠವೆಂದರ್ಥವಲ್ಲ. ಹೀಗಾಗಿ ಆಚಾರ್ಯರು ಇಲ್ಲಿ ವಿವಕ್ಷಿತವಾದ ಅರ್ಥವನ್ನು ತಿಳಿಸುತ್ತಾ, ಮಾಡಿಕೊಳ್ಳಬೇಕಾದ ಅಧ್ಯಾಹಾರವನ್ನು ಮಾಡಿ ಶ್ಲೋಕವನ್ನು ಯೋಜಿಸುವರು :-

**ಮಹತ್ತಮಸ್ತೇಜಸ್ವಿತಮೋಽರ್ಕಸ್ಯ ಸಕಾಶಾದಪಿ ।**
**ತೇಜೋಽರ್ಥ ಉತ್ತಮಾರ್ಥೇ ಚ ಪೂಜ್ಯಾರ್ಥೇ ಚ ಪ್ರಯುಜ್ಯತೇ ।**
**ಮಹಚ್ಛಬ್ದೋ ಮಹಃಶಬ್ದೋ ಮಾನ್ಯಶಬ್ದಸ್ತಥೈವ ಚ । ಇತಿ ಶಬ್ದನಿರ್ಣಯೇ ॥**

ತೇಜಸ್ವಿ, ಉತ್ತಮ, ಪೂಜ್ಯ ಎಂಬ ಅರ್ಥಗಳಲ್ಲಿ ಮಹಚ್ಛಬ್ದ-ಮಹಃಶಬ್ದ-ಮಾನ್ಯಶಬ್ದಗಳು ಪ್ರಯೋಗಿಸಲ್ಪಡುವವು ಎಂದು ಶಬ್ದನಿರ್ಣಯದಲ್ಲಿ ಹೇಳಿದ್ದರಿಂದ ಭಾಗವತಮೂಲದಲ್ಲಿ ಮಹತ್ತಮ ಎಂದರೆ (ಸೂರ್ಯನಿಗಿಂತ ಹೆಚ್ಚು) ತೇಜಸ್ವಿಯಾದವನು ಎಂದರ್ಥ.

ತಾತ್ಪರ್ಯಶ್ಲೋಕದಲ್ಲಿ ಮುಂದೆ ''ಉತ್ತಮಾರ್ಥೇ'' ''ಪೂಜ್ಯಾರ್ಥೇ'' ಎಂಬುದಾಗಿ ಉತ್ತಮ ಪೂಜ್ಯ ಎಂಬ ಧರ್ಮಿವಾಚಕಪದಗಳಿರುವ ಕಾರಣ ''ತೇಜೋಽರ್ಥೇ'' ಎನ್ನುವಲ್ಲಿ ತೇಜಶ್ಶಬ್ದಕ್ಕೆ ತೇಜಸ್ವೀ ಎಂದರ್ಥ ತಿಳಿಯಬೇಕು. ॥೪೦॥

**ತಥಾಽಪರೇ ಸಿದ್ಧಗಣಾ ಮಹರ್ಷಿಭಿ-**
**ರ್ಯೇ ವೈ ಸಮಂತಾದನು ನೀಲಲೋಹಿತಮ್ ।**
**ನಮಸ್ಕೃತಃ ಪ್ರಾಹ ಶಶಾಂಕಶೇಖರಂ**
**ಕೃತಪ್ರಣಾಮಂ ಪ್ರಹಸನ್ನಿವಾತ್ಮಭೂಃ ॥೪೧॥**

ತಥಾ=ಅದೇ ರೀತಿಯಾಗಿ ಯೇ ವೈ=ಯಾರು ನೀಲಲೋಹಿತಂ ಅನು(ವರ್ತಂತೇ)= ರುದ್ರದೇವರನ್ನು ಅನುಸರಿಸಿರುವರೋ ಅಂತಹ ಸಮಂತಾತ್=ಸುತ್ತಲೂ ಇರುವ ಅಪರೇ= ಉಳಿದ ಸಿದ್ಧಗಣಾಃ=ಜ್ಞಾನಿಗಳು ಮಹರ್ಷಿಭಿಃ ಸಹಿತಾಃ=ಋಷಿಗಳಿಂದ ಕೂಡಿಕೊಂಡು ಅಭಿವಂದನಂ ಚಕ್ರುಃ=ನಮಸ್ಕರಿಸಿದರು. ನಮಸ್ಕೃತಃ ಆತ್ಮಭೂಃ=ವಂದಿತನಾದ ಬ್ರಹ್ಮದೇವನು ಪ್ರಹಸನ್ನಿವ=ನಗುತ್ತ ಕೃತಪ್ರಣಾಮಂ=ತನಗೆ ನಮಸ್ಕರಿಸಿದ ಶಶಾಂಕಶೇಖರಂ= ಚಂದ್ರಚೂಡನನ್ನು (ರುದ್ರದೇವರನ್ನು) ಕುರಿತು ಪ್ರಾಹ=ಹೇಳಿದನು. ॥೪೧॥

**ಜಾನೇ ತ್ವಾಮೀಶ ವಿಶ್ವಸ್ಯ ಜಗತೋ ಯೋನಿಬೀಜಯೋಃ ।**
**ಶಕ್ತೇಃ ಶಿವಸ್ಯ ಚ ಪರಂ ಯತ್ತದ್ ಬ್ರಹ್ಮ ನಿರಂತರಮ್ ॥೪೨ ॥**

ಹೇ ಈಶ=ರುದ್ರಾಂತರ್ಗತನೇ ! ಶಕ್ತೇಃ=ಉಮಾದೇವಿಗಿಂತಲೂ, ಶಿವಸ್ಯ= ರುದ್ರದೇವನಿಗಿಂತಲೂ, ವಿಶ್ವಸ್ಯ=ಎಲ್ಲ ಜಗತಃ=ಜಗತ್ತಿನ ಯೋನಿಬೀಜಯೋಃ=ತಾಯಿ- ತಂದೆಗಳಾದ ಇವರಿಗಿಂತಲೂ ಪರಂ=ಉತ್ತಮನೆಂದು, ಯದ್ ಬ್ರಹ್ಮ=ಗುಣಪೂರ್ಣನೆಂದು, ನಿರಂತರಂ=ಸ್ಥಾನಭೇದನಿಮಿತ್ತ ಭೇದವಿಲ್ಲದವನೆಂದು ತ್ವಾಂ=ನಿನ್ನನ್ನು ಜಾನೇ=ಪ್ರಮಾಣಗಳಿಂದಲೂ ಪ್ರತ್ಯಕ್ಷವಾಗಿಯೂ ತಿಳಿದಿರುವೆನು.

**ಭಾಗವತ ತಾತ್ಪರ್ಯ :-**

ಇಲ್ಲಿ ಬ್ರಹ್ಮದೇವರು ಶಿವನನ್ನೇ ಸ್ತೋತ್ರ ಮಾಡುತ್ತಿದ್ದಾರೆ ಎಂದಾದರೆ, ಶಿವನನ್ನು ಕುರಿತು ''ಶಿವಸ್ಯ ಚ ಪರಂ'' ''ಶಿವನಿಗಿಂತ ಉತ್ತಮನೆಂದು ನಿನ್ನನ್ನು ತಿಳಿದಿದ್ದೇನೆ'' ಎಂಬುದಾಗಿ ಹೇಳುವುದು ಅನುಪಪನ್ನವಾಗುವದು. ಆ ಕಾರಣ ಆಚಾರ್ಯರು ಇಲ್ಲಿ ವಿವಕ್ಷಿತವಾದ ತಾತ್ಪರ್ಯವನ್ನು ಹೇಳುವರು :-

**ಅಂತರ್ಯಾಮ್ಯಪೇಕ್ಷಯಾ ಶಕ್ತೇಃ ಶಿವಸ್ಯ ಚ ಪರಂ ಇತಿ ।**
**ಕ್ರಿಯಂತೇ ಸ್ತುತಯೋಽನ್ಯತ್ರ ತದಂತರ್ಯಾಮ್ಯಪೇಕ್ಷಯಾ ।**
**ನ ಜೀವೇಷು ಗುಣಾಃ ಪೂರ್ಣಾ ಯಥಾಯೋಗ್ಯಾ ಹಿ ತದ್ಗತಾಃ ॥ ಇತಿಬ್ರಾಹ್ಮೇ**

ಅನ್ಯತ್ರ ರುದ್ರಾದಿಗಳಲ್ಲಿ ಅವರ ಅಂತರ್ಯಾಮಿಯ ವಿವಕ್ಷೆಯಿಂದ ಉತ್ತಮ- ಗುಣವಾಚಕ ಸ್ತುತಿಗಳು ಮಾಡಲ್ಪಡುವದು. ಪ್ರತಿಪಾದ್ಯಗುಣಗಳು ಜೀವರಲ್ಲಿ ಪೂರ್ಣವಾಗಿ

ಇರುವದಿಲ್ಲ. ಯೋಗ್ಯತಾನುಸಾರ ಇರುವವು ಎಂದು ಬ್ರಾಹ್ಮಪುರಾಣದಲ್ಲಿದೆ. ಅಂದರೆ ಜೀವರಲ್ಲಿ ಅಸಂಭಾವಿತವಾದ ಗುಣಗಳಿಂದ ಸ್ತುತಿಸಿದರೆ ಅದು ಕೇವಲ ಅಂತರ್ಯಾಮಿಪರವೆಂದು ತಿಳಿಯಬೇಕು. ಜೀವರಲ್ಲಿ ಸಂಭಾವಿತವಾದ ಗುಣಗಳಿಂದ ಸ್ತುತಿಸಿದ್ದರೆ ಅಲ್ಲಿ ಉಭಯಪರವೆಂದು ತಿಳಿಯಬೇಕು ಎಂದು ಭಾವ. ||೪೨||

ನಾನೇಕೆ ಪರಬ್ರಹ್ಮನೆಂದರೆ ಅವನ ಲಕ್ಷಣವಿರುವದರಿಂದ ಎಂದು ಹೇಳುವರು -

**ತ್ವಮೇವ ಭಗವನ್ನೇತಚ್ಛಿವಶಕ್ತ್ಯೋಃ ಸ್ವರೂಪಯೋಃ ।**
**ವಿಶ್ವಂ ಸೃಜಸಿ ಪಾಸ್ಯತ್ಸಿ ಕ್ರೀಡಯೋರ್ಣಪದೋ ಯಥಾ ||೪೩||**

ಹೇ ಭಗವನ್=ಶ್ರೀಹರಿಯೇ ! ತ್ವಂ ಏವ=ನೀನೇ ಸ್ವರೂಪಯೋಃ=ನಿನ್ನ ಅಧೀನರಾದ ಶಿವಶಕ್ತ್ಯೋಃ (ದ್ವಾರಾ)=ಶಿವಪಾರ್ವತಿಯರನ್ನು ದ್ವಾರ ಮಾಡಿಕೊಂಡು, ಊರ್ಣಪದೋ ಯಥಾ=ಜೇಡರ ಹುಳವು ದಾರವನ್ನು ಸೃಷ್ಟಿಸಿ ಅದರ ಮಧ್ಯದಲ್ಲಿ ಆಟವಾಡಿ ಕೊನೆಗೆ ತಿಂದುಬಿಡುವದು ಹೇಗೋ ಅದರಂತೆ ಕ್ರೀಡಯಾ=ಲೀಲಾರೂಪವಾಗಿ (ಅನಾಯಾಸವಾಗಿ) ಏತ್ ವಿಶ್ವಂ=ಈ ಪ್ರಪಂಚವನ್ನು ಸೃಜಸಿ=ಸೃಷ್ಟಿಸುವಿ, ಪಾಸಿ=ರಕ್ಷಿಸುವಿ, ಅತ್ಸಿ=ಸಂಹರಿಸುವಿ.

**ಭಾಗವತ ತಾತ್ಪರ್ಯ :-**

ಇಲ್ಲಿ ''ಶಿವಶಕ್ತ್ಯೋಃ ಸ್ವರೂಪಯೋಃ'' ಎಂಬುದಾಗಿ ಶಿವಶಕ್ತಿಗಳಿಗೆ ಶ್ರೀಹರಿಯ ಸ್ವರೂಪತ್ವವನ್ನು ಹೇಳಿದಂತೆ ಕಾಣುವದು. ಮತ್ತು ''ತ್ವಮೇವ ಏತದ್ವಿಶ್ವಂ'' ಎಂದು ಪ್ರಪಂಚಾಭೇದವು ತೋರುವದು. ಇದು ಹಿಂದೆ ಹೇಳಿದ ''ಶಕ್ತೇಃ ಶಿವಸ್ಯ ಚ ಪರಂ'' ಎಂಬುದರಿಂದಲೂ ಪ್ರಮಾಣಾಂತರದಿಂದಲೂ ವಿರುದ್ಧವಾಗಿದೆ. ಅಲ್ಲದೇ ಶ್ರೀಹರಿಯಲ್ಲಿ ಎಲ್ಲ ದೋಷಗಳೂ ಬರಬೇಕಾಗುವವು. ಆ ಕಾರಣ ಆಚಾರ್ಯರು ಇಲ್ಲಿ ವಿವಕ್ಷಿತವಾದ ತಾತ್ಪರ್ಯವನ್ನು ಪ್ರಮಾಣದಿಂದಲೇ ತಿಳಿಸುವರು :-

**ತದ್ವಶತ್ವಾತ್ ಸ್ವರೂಪಂ ತು ವಿಷ್ಣೋಃ ಸರ್ವಮುದೀರ್ಯತೇ ।**
**ಸ್ವರೂಪಂ ಸ ಚ ಸರ್ವತ್ರ ಬಿಂಬತ್ವಾದೇವ ತೂಚ್ಯತೇ ॥**

**ಸಾಕ್ಷಾತ್ಸ್ವರೂಪಂ ಮತ್ಸ್ಯಾದ್ಯಾ ವಿಷ್ಣೋರ್ನಾನ್ಯತ್ ಕಥಂಚನ ।**
**ತಸ್ಮಾದನ್ಯಗತಾ ದೋಷಾ ನ ತಸ್ಮಿನ್ ಪುರುಷೋತ್ತಮೇ ॥ ಇತಿ ತತ್ವನಿರ್ಣಯೇ ।**

ಬ್ರಹ್ಮರುದ್ರಾದಿಗಳೆಲ್ಲರೂ ಶ್ರೀಹರಿಯ ಅಧೀನರಾದುದರಿಂದಲೇ ಅವನ ಸ್ವರೂಪರೆಂದು ಶ್ರುತಿಯಲ್ಲಿ ಹೇಳಲ್ಪಡುವವರು (ಯದಧೀನಾ ಯಸ್ಯ ಸತ್ತಾ ತತ್ ತದಿತ್ಯೇವ ಭಣ್ಯತೇ.) ವಿಷ್ಣುವಾದರೂ ಬಿಂಬನಾದುದರಿಂದಲೇ ಸ್ವರೂಪನೆನಿಸುವನು. ಬಿಂಬದಲ್ಲಿ

ಪ್ರತಿಬಿಂಬೈಕ್ಯವ್ಯವಹಾರ ''ವಾರಿಸ್ಥಂ ಆದಿತ್ಯಂ ನ್ಯೆಕ್ಷತ'' ಎಂಬಲ್ಲಿ ಕಂಡಿದೆ. ಮತ್ಸ್ಯಾದಿಗಳು ಮಾತ್ರ ಸಾಕ್ಷಾತ್ ಸ್ವರೂಪಗಳು. ಉಳಿದ ಬ್ರಹ್ಮ-ರುದ್ರಾದಿಗಳು ಸಾಕ್ಷಾತ್ ಸ್ವರೂಪರಲ್ಲ. ಕಾರಣ ಅವರಲ್ಲಿನ ದೋಷಗಳು ಪುರುಷೋತ್ತಮನಲ್ಲಿ ಬರಲಾರವು ಎಂದು ತತ್ವನಿರ್ಣಯದಲ್ಲಿದೆ. ।।೪೩।।

ದಕ್ಷಯಜ್ಞನಾಶ ಮಾಡಿದ್ದು ದಕ್ಷನಿಗೆ ಅನುಗ್ರಹ ಮಾಡಲೆಂದೇ ನೀನು ಮಾಡಿದ್ದು ಎಂದು ಹೇಳುವರು :-

**ತ್ವಮೇವ ಧರ್ಮಾರ್ಥದುಘಾಽಭಿಪತ್ತಯೇ**
**ದಕ್ಷೇಣ ಸೂತ್ರೇಣ ವಿಸರ್ಜಿತಾಧ್ವರಃ ।**
**ತ್ವಯ್ಯೆವ ಲೋಕೇಽವಸಿತಾಶ್ಚ ಸೇತವೋ**
**ಯಾನ್ ಬ್ರಾಹ್ಮಣಾಃ ಶ್ರದ್ದಧತೇ ಧೃತವ್ರತಾಃ ।।೪೪।।**

ಧೃತವ್ರತಾಃ=ವಿಹಿತವಾದ ವ್ರತಗಳನ್ನು ನಿನ್ನಿಂದ ಧಾರಣ ಮಾಡಿದ ಬ್ರಾಹ್ಮಣಾಃ= ಬ್ರಹ್ಮಜ್ಞಾನಿಗಳು ಯಾನ್=ಯಾವ ಧರ್ಮಮರ್ಯಾದೆಗಳನ್ನು ಶ್ರದ್ಧದತೇ=ಶ್ರದ್ಧೆಯಿಂದ ಅನುಷ್ಠಾನ ಮಾಡುವರೋ ತೇ ಸೇತವಃ=''ಭಕ್ತರು ಸ್ವೋತ್ತಮದ್ರೋಹ ಮಾಡಬಾರದು'' ಎಂಬ ಆ ಧರ್ಮಮರ್ಯಾದೆಯಗಳು ತ್ವಯಾ ಏವ=ನಿನ್ನಿಂದಲೇ ಲೋಕೇ=ಜಗತ್ತಿನಲ್ಲಿ ಅವಸಿತಾಃ=ನಿರ್ಣಯಿಸಿ ಹೇಳಲ್ಪಟ್ಟಿವೆ. ಆದಕಾರಣ ಧಮಾರ್ಥದುಘಾ=ಧರ್ಮ ಮತ್ತು ಅರ್ಥಗಳನ್ನು ದೋಹನ ಮಾಡುವ ಅಂದರೆ ಮೋಕ್ಷೇತರ ಪುರುಷಾರ್ಥದಲ್ಲಿ ಆಸಕ್ತನಾದ ಸೂತ್ರೇಣ=ತನ್ನ ಯಜ್ಞದಲ್ಲಿ ಭಾಗವನ್ನು ಕೊಡದಿರುವ (ದೋಷಕ್ಕೆ ಸೂಚಕನಾದ) ದೋಷವನ್ನು (ಅಪರಾಧವನ್ನು) ಮಾಡಿರುವ ದಕ್ಷೇಣ=ದಕ್ಷಪ್ರಜಾಪತಿಯಿಂದ ವಿಸರ್ಜಿತಾಧ್ವರಃ=ಯಜ್ಞವನ್ನು ಬಿಡಿಸಿದವನು ತ್ವಮೇವ=ನೀನೇ ಆಗಿರುವಿ. ಅದು ಯಾಕೆ ? ಅಭಿಪತ್ತಯೇ=ಪ್ರತೀಕಾರ ಮಾಡಲು.

ಅಂದರೆ ದಕ್ಷನು ನಿನ್ನ ಭಕ್ತನು. ಅವನು ತನಗಿಂತ ಉತ್ತಮನಾದ ರುದ್ರನಿಗೆ ಭಾಗ ಕೊಡದೇ ಅಪರಾಧ ಮಾಡಿದಾಗ ಅವನ ಯಜ್ಞನಾಶ ಮಾಡಿದ್ದು ಅವನ ಗರ್ವಪರಿಹಾರ ಮಾಡಿ ಮತ್ತೆ ನಿನ್ನಲ್ಲಿ ಭಕ್ತಿ ಹುಟ್ಟಲು ನಿನೇ ಮಾಡಿದ್ದು ಎಂದು ಭಾವ.

**ಭಾಗವತ ತಾತ್ಪರ್ಯ :-**

ಈ ಶ್ಲೋಕದಲ್ಲಿ ''ಅಭಿಪತ್ತಯೇ'' ''ಸೂತ್ರೇಣ'' ಎಂಬ ಪದಗಳಿಗೆ ಪ್ರಕೃತೋಪಯುಕ್ತ ಅರ್ಥವನ್ನು ಆಚಾರ್ಯರು ತಿಳಿಸುವರು :-

**ಅಭಿಪತ್ತಯೇ ಪ್ರತೀಕಾರಾಯ । ಸೂತ್ರೇಣ ದೋಷಸೂಚಕೇನ ।।**

ಅಭಿಪತ್ತಯೇ ಎಂದರೆ ದಕ್ಷನ ಗರ್ವಪರಿಹಾರ ಮಾಡಲು ಅರ್ಥಾತ್ ದಕ್ಷನಮೇಲೆ ಅನುಗ್ರಹ ಮಾಡಲು ಎಂದರ್ಥ.

ಸೂತ್ರ ಎಂಬ ಶಬ್ದವು ಸೂಚಕ ಎಂಬ ಅರ್ಥದಲ್ಲಿದ್ದರೂ ಯೋಗ್ಯತಯಾ ದೋಷಸೂಚಕ ಎಂದು ಅರ್ಥ ಪ್ರಾಪ್ತವಾಗುವದು. ॥೪೪॥

ನೀನು ಕೇವಲ ಅಪರಾಧಿಗಳಿಗೆ ಶಿಕ್ಷಕನಲ್ಲ ಕಿಂತು ಎಲ್ಲ ಪ್ರಾಣಿಗಳಲ್ಲಿ ಇದ್ದು ನೀನೇ ಯೋಗ್ಯತಾನುಸಾರೇಣ ಕೆಲಸಗಳನ್ನು ಮಾಡಿಸುವವನು ಫಲ ನೀಡುವವನೂ ಎಂದು ಹೇಳುವರು -

**ತ್ವಂ ಕರ್ಮಣಾಂ ಮಂಗಲ ಮಂಗಲಾನಾಂ**
**ಕರ್ತಾಸಿ ಲೋಕೇ ತನುಷೇ ಸ್ವಯಂ ಫಲಮ್ ।**
**ಅಮಂಗಲಾನಾಂ ಚ ತಮಿಸ್ರಮುಲ್ಬಣಂ**
**ವಿಪರ್ಯಯಃ ಕೇನಚಿದೇವ ಕಸ್ಯಚಿತ್ ॥೪೫॥**

ಹೇ ಮಂಗಲ=ವಿಷ್ಣುವೇ ! ಲೋಕೇ=ಪ್ರಾಣಿಗಳ ದೇಹದಲ್ಲಿ ಇದ್ದು ಮಂಗಲಾನಾಂ ಕರ್ಮಣಾಂ=ಪುಣ್ಯಕರ್ಮಗಳ ಚ=ಮತ್ತು ಅಮಂಗಲಾನಾಂ ಕರ್ಮಣಾಂ=ಪಾಪಕರ್ಮಗಳ ಕರ್ತಾ ಅಸಿ=ಮಾಡಿಸುವವನಾಗಿರುವಿ. ತೇಷಾಂ ಫಲಂ=ಆ ಕರ್ಮಗಳ ಫಲವನ್ನು ಪುಣ್ಯದ ಫಲವಾದ ಸ್ವರ್ಗಾದಿಗಳನ್ನು, ಪಾಪಫಲವಾದ ಉಲ್ಬಣಂ=ಕ್ರೂರವಾದ ನರಕಾದಿಗಳನ್ನು ತಮಿಸ್ರಂ=ತಮಸ್ಸನ್ನು ಸ್ವಯಮೇವ=ಅನ್ಯರ ಅಪೇಕ್ಷೆ ಇಲ್ಲದೇ ತನುಷೇ=ಅವರವರ ಯೋಗ್ಯತಾನುಸಾರ ವಿಸ್ತರಿಸಿ ಕೊಡುವಿ. ವಿಪರ್ಯಯಃ=ಫಲದಲ್ಲಿ ವ್ಯತ್ಯಾಸವಾಗುವದು ಕೇನಚಿದೇವ=ಸ್ತೋತ್ರಮಾಪರಾಧ ಮುಂತಾದ ಕಾರಣಗಳಿಂದ ಕಸ್ಯಚಿತ್=ಕೆಲವು ಕರ್ಮಗಳಿಗೆ ಮಾತ್ರ. ಎಲ್ಲ ಕರ್ಮಗಳಿಗೆ ಅಲ್ಲ. ಆ ಕಾರಣ ಅಜ್ಞಾನಿಗಳಿಗೆ ಧರ್ಮಸೂಕ್ಷ್ಮ ತಿಳಿಯುವುದು ಕಷ್ಟವೆಂದು ಭಾವ. ॥೪೫॥

ದಕ್ಷನ ಯಜ್ಞನಾಶ ಮಾಡಿದ್ದು ಅವನ ಅನುಗ್ರಹಕ್ಕಾಗಿ ಎಂದು ಹೇಳಿದ್ದು ಸರಿಯಲ್ಲ. ಅವನ ಮೇಲಿನ ದ್ವೇಷದಿಂದ ಮಾಡಿರಬಹುದಲ್ಲ ? ಎಂದರೆ ಶ್ರೀಹರಿಗೆ ರೋಷ (ದ್ವೇಷ) ಬರುವುದು ಅಸಂಭಾವಿತವೆಂದು ಕೈಮುತ್ಯದಿಂದ ಹೇಳುವರು :-

**ನ ವೈ ಸತಾಂ ತ್ವಚ್ಚರಣಾರ್ಪಿತಾತ್ಮನಾಂ**
**ಭೂತೇಷು ಸರ್ವೇಷ್ವಭಿಪಶ್ಯತಾಂ ತವ ।**
**ಭೂತಾನಿ ಚಾತ್ಮನ್ಯಪೃಥಗ್ ದಿದೃಕ್ಷತಾಂ**
**ಪ್ರಾಯೇಣ ರೋಷೋಽಭಿಭವೇದ್ಯಥಾ ಪಶೋಃ ॥೪೬॥**

ತ್ವಚ್ಚರಣಾರ್ಪಿತಾತ್ಮನಾಂ=ನಿನ್ನ ಪಾದಗಳಲ್ಲಿ ಮನಸ್ಸನ್ನು ಇಟ್ಟಂತಹ, ಸರ್ವೇಷು ಭೂತೇಷು=ಎಲ್ಲ ಪ್ರಾಣಿಗಳಲ್ಲಿ (ಇರುವ) ತವ (ತ್ವಾಂ)=ನಿನ್ನನ್ನು ಅಭಿಪಶ್ಯತಾಂ=ಕಾಣುವ, ಆತ್ಮನಿ=ಪರಮಾತ್ಮನ ವಿಷಯದಲ್ಲಿ ಅಪೃಥಗ್‌ದಿದೃಕ್ಷತಾಂ=ಪರಮಾತ್ಮನಿಂದಲೇ ಸತ್ತಾದಿಗಳನ್ನು ಪಡೆದವರು ನಾವು, ಅವರಿಗೆ ಹೊರತಾಗಿ ಇಲ್ಲ ಎಂದು ತಿಳಿಯುವ ಸತಾಂ=ಸಜ್ಜನರಿಗೆ ಪ್ರಾಯೇಣ=ಬಹುಶಃ ಪಶೋಃ ಯಥಾ=ಅಜ್ಞಾನಿಗಳಿಗೆ ತೊಂದರೆ ಕೊಡುವಂತೆ ರೋಷಃ=ಕೋಪವು ನ ಅಭಿಭವೇತ್=ಪರಾಜಯಗೊಳಿಸಲಾರದು.

ಕೋಪವು ನಿನ್ನ ಭಕ್ತರನ್ನೇ ಪರಾಭವಗೊಳಿಸುವುದಿಲ್ಲ ಎಂದಮೇಲೆ ನಿನ್ನನ್ನು ಪರಾಭವಗೊಳಿಸುವದಿಲ್ಲವೆಂದು ಏನು ಹೇಳುವದು ? ಎಂದು ಭಾವ.

**ಭಾಗವತ ತಾತ್ಪರ್ಯ :-**

ಮೇಲಿನ ಶ್ಲೋಕದಲ್ಲಿ 'ತವ' ಎಂಬ ಷಷ್ಠಿಗೆ ಅನ್ವಯವಾಗುವುದಿಲ್ಲ ಎಂದು ಆಲೋಚಿಸಿ ದ್ವಿತೀಯಾರ್ಥಕವೆಂದು ಹೇಳುವರು :-

''ತವ ತ್ವಾಂ ।''

'ತವ' ಎಂಬ ಷಷ್ಠಿಯನ್ನು ತ್ವಾಂ ಎಂದು ದ್ವಿತೀಯಾರ್ಥಕವನ್ನಾಗಿ ಮಾಡಿಕೊಂಡಾಗ ''ತ್ವಾಂ ಅಭಿಪಶ್ಯತಾಂ'' ಎಂದು ಅನ್ವಯ ಮಾಡಬಹುದು. ಷಷ್ಠಿಗೆ ದ್ವಿತೀಯಾ ಅರ್ಥ ಹೇಳಲು ಅದಕ್ಕೆ ನಿಯಾಮಕವಾದ ಮಹಾವ್ಯಾಕರಣಸೂತ್ರ ಹೇಳುವರು :-

''ಚತುರ್ಷು ಷಷ್ಠೀ'' ಇತಿ ಸೂತ್ರಾತ್ ॥

ದ್ವಿತೀಯಾ ಮೊದಲಾದ ನಾಲ್ಕು ವಿಭಕ್ತಿಗಳ ಅರ್ಥದಲ್ಲಿ ಷಷ್ಠೀವಿಭಕ್ತಿಯಾಗುವದು ಎಂದು ಸೂತ್ರಾರ್ಥ.

''ಅಪೃಥಕ್ ದಿದೃಕ್ಷತಾಂ'' ಎನ್ನುವದಕ್ಕೆ ''ಅಭಿನ್ನವಾಗಿ ಕಾಣಲಿಚ್ಛಿಸುವ'' ಎಂಬುದಾಗಿ ಭ್ರಮ ಬರಲು ಅವಕಾಶವಿರುವ ಕಾರಣ ಆ ಅಪಾರ್ಥವನ್ನು ನಿವಾರಿಸಲು ಆ ಶಬ್ದಗಳನ್ನು ಪ್ರಮಾಣದಿಂದಲೇ ವ್ಯಾಖ್ಯಾನಿಸುವರು :-

ವಿಷ್ಣ್ವಧೀನಾ ಜಗತ್ಸತ್ತಾ ಪ್ರತೀತಿಶ್ಚೇಷ್ಟಿತಂ ಗತಿಃ ।
ಇತಿ ಯನ್ನಿಯತಂ ಜ್ಞಾನಮಪೃಥಗ್ದರ್ಶನಂ ಸ್ಮೃತಮ್ ॥

ಜಗತ್ತಿನ ಸತ್ತಾ (ಇರುವಿಕೆ), ಪ್ರತೀತಿ (ಜ್ಞಾನ), ಚೇಷ್ಟಿತ (ಪ್ರಯತ್ನ), ಗತಿ (ನಡೆಯುವದು) ಮುಂತಾದುದು ವಿಷ್ಣುವಿನ ಅಧೀನವಾಗಿದೆ ಎಂಬ ಯಾವ ನಿಯತವಾದ ಜ್ಞಾನವಿದೆಯೋ ಅದು ಅಪೃಥಗ್‌ದರ್ಶನ ಎನಿಸುವದು. ಅಂದರೆ ಜಗತ್ತಿನ ಸತ್ತಾದಿಗಳು

ಪೃಥಕ್ ಹರಿಯನ್ನು ಬಿಟ್ಟು ಸ್ವತಃ ಆಗುವವು ಅಲ್ಲ ಎಂದು ತಿಳಿಯುವದು. ಅರ್ಥಾತ್ ಹರಿಯಿಂದಲೇ ಆಗುವವು ಎಂದು ತಿಳಿಯುವುದು ಅಪೃಥಕ್‌ದರ್ಶನ.

ಮುಂದಿನ ಶ್ಲೋಕದಲ್ಲಿ ಪೃಥಗ್ಧಿಯಃ ಎಂಬುದಕ್ಕೆ ಭಿನ್ನಜ್ಞಾನವುಳ್ಳವರು ಎಂದು ಅಪಾರ್ಥವಾಗದಿರಲೆಂದು ಅದನ್ನು ವ್ಯಾಖ್ಯಾನಿಸಿರುವರು :-

**ಮಿಥ್ಯಾಜ್ಞಾನಂ ಪೃಥಗ್‌ಜ್ಞಾನಮಿತಿ ವೇದವಿದೋ ವಿದುಃ ।**
**ಯಥೈವಾರ್ಥಸ್ತಥಾ ಜ್ಞಾನಮಪೃಥಗ್‌ದೃಷ್ಟಿರುಚ್ಯತೇ ॥ ಇತಿ ಗಾರುಡೇ ॥**

ಮಿಥ್ಯಾಜ್ಞಾನವೇ ಪೃಥಗ್‌ಜ್ಞಾನ ಎಂದು ಕರೆಸಿಕೊಳ್ಳಲ್ಪಡುತ್ತದೆ ಎಂಬುದಾಗಿ ವೇಗಳನ್ನು ಬಲ್ಲವರು ಹೇಳುವರು. ವಸ್ತು ಯಾವ ರೀತಿ ಇರುವದೋ ಅದೇ ರೀತಿ ತಿಳಿಯುವದು ಅಪೃಥಗ್‌ದೃಷ್ಟಿ ಎನಿಸುತ್ತದೆ. ಕಾರಣ ಇಲ್ಲದಿರುವದನ್ನು ತಿಳಿಯುವ ಮಿಥ್ಯಾದೃಷ್ಟಿಯು ಪೃಥಗ್‌ದೃಷ್ಟಿಯಾಗುವದು ಎಂದು ಭಾವ. ॥೪೬॥

ಯಾರು ಕೊಲ್ಲಲು ಯೋಗ್ಯವಾದ ಅಪರಾಧ ಮಾಡುವ ಮಿಥ್ಯಾಜ್ಞಾನಿಗಳಿರುವರೋ ಅವರೆಲ್ಲ ರೋಷ ಮಾಡುವದು ಯೋಗ್ಯವೇ ಅಲ್ಲವೇ ? ಎಂದು ಶಂಕಿಸಿ, ಆದರೆ ತಮ್ಮ ರೋಷದಿಂದಲೇ ಹತರಾದವರ ಮೇಲೆ ರೋಷ ಮಾಡಬಾರದು, ಹನನವೂ ವ್ಯರ್ಥವೇ ಎಂಬ ಅಭಿಪ್ರಾಯದಿಂದ ಹೇಳುವರು :-

**ಪೃಥಗ್ಧಿಯಃ ಕರ್ಮದೃಶೋ ದುರಾಶಯಾಃ**
**ಪರೋದಯೇನಾರ್ಪಿತಹೃದ್ರುಜೋಽನಿಶಮ್ ।**
**ಪರಾನ್ ದುರುಕ್ತೈರ್ವಿತುದಂತ್ಯರುಂತುದಾ-**
**ಸ್ತಾನ್ ಮಾ ವಧೀರ್ದೇವ ಭವಾನ್ ಪೃಥಗ್ವಿಧಾನ್ ॥೪೭॥**

ಪೃಥಗ್ಧಿಯಃ=ಮಿಥ್ಯಾಜ್ಞಾನಿಗಳು, ಕರ್ಮದೃಶಃ=ಕರ್ಮವೇ ಮಹಾಪುರುಷಾರ್ಥಪ್ರದವೆಂದು ತಿಳಿದವರು, ಪರೋದಯೇನಾರ್ಪಿತಹೃದ್ರುಜಃ=ಬೇರೆಯವರಿಗೆ ಬಂದ ಸಂಪತ್ತಿನಿಂದ ಉಂಟಾದ ಹೃದಯರೋಗವುಳ್ಳವರು (ಪರೊತ್ಕರ್ಷವನ್ನು ಸಹಿಸದವರು ಎಂದರ್ಥ) ಅನಿಶಂ=ಯಾವಾಗಲೂ ಪರಾನ್=ಬೇರೆಯವರನ್ನು ದುರುಕ್ತೈಃ=ಕೆಟ್ಟ ಮಾತುಗಳಿಂದ ವಿತುದಂತಿ=ಉಪದ್ರವಪಡಿಸುವರು. ಅರುಂತುದಾಃ=ಮರ್ಮಭೇದಕರು ದುರಾಶಯಾಃ= ದುರಭಿಪ್ರಾಯದವರು ಯೇ=ಯಾರಿರುವರೋ ತಾನ್=ಅಂತಹ ಪೃಥಗ್ವಿಧಾನ್=ಜ್ಞಾನಿಗಳಿಂದ ವಿಲಕ್ಷಣರಾದವರನ್ನು ಹೇ ದೇವ=ಸ್ವಾಮಿಯೇ ಭವಾನ್=ನೀನು ಮಾ ವಧೀಃ= ಸಂಹರಿಸಬೇಡ. ತಮ್ಮ ದೋಷದಿಂದಲೇ ಅವರು ಹತರಾಗಿರುವರು ಎಂದು ಭಾವ.

ದಕ್ಷನ ಮೇಲೆ ಅನುಗ್ರಹ ಮಾಡಬೇಕೆಂದು ರುದ್ರದೇವವರಿಗೆ ಎರಡು ಶ್ಲೋಕಗಳಿಂದ ಹೇಳುವರು :-

**ಯೇಽಸ್ಮಿನ್ ಯದಾ ಪುಷ್ಕರನಾಭಮಾಯಯಾ**
**ದುರ್ಲಂಘ್ಯಯಾ ಸ್ಪೃಷ್ಟಧಿಯಃ ಪೃಥಗ್ದೃಶಃ ।**
**ಕುರ್ವಂತಿ ತತ್ರ ಹ್ಯನುಕಂಪಯಾ ಕೃಪಾಂ**
**ನ ಸಾಧವೋ ದೈವಬಲಾತ್ಕೃತಾಃ ಕಥಮ್ ।।೪೮।।**

ಅಸ್ಮಿನ್=ಈ ಲೋಕದಲ್ಲಿ ಯೇ=ಯಾವ ದಕ್ಷಾದಿ ಸಜ್ಜನರು ಯದಾ=ಯಾವ ಕಾರಣ ದುರ್ಲಂಘ್ಯಯಾ=ದಾಟಲಾಗದ ಪುಷ್ಕರನಾಭಮಾಯಯಾ=ಪದ್ಮನಾಭನ ಬಂಧಕಶಕ್ತಿಯಿಂದ ಸ್ಪೃಷ್ಟಧಿಯಃ=ಪ್ರತಿಬದ್ಧವಾದ ಬುದ್ಧಿಯುಳ್ಳವರು ಆದ್ದರಿಂದಲೇ ಪೃಥಗ್ದೃಶಃ= ವಿಪರೀತಜ್ಞಾನವುಳ್ಳವರು. ದೈವಬಲಾತ್ ಕೃತಾಃ ಇತಿ=ಹಿಂದಿನ ಪ್ರಾರಬ್ಧಕರ್ಮಪ್ರೇರಕನಾದ ಶ್ರೀಹರಿಯ ಬಂಧಕಶಕ್ತಿಬಲದಿಂದ ದಕ್ಷನು ಈ ಅಪರಾಧವನ್ನು ಮಾಡಿರುವರನು ಎಂದು ತಿಳಿದು ಸಾಧವಃ=ಸಜ್ಜನರು ಅನುಕಂಪಯಾ=ಹೃದಯಕರಗಿ ಕೃಪಾಂ=ಉಪಕಾರವನ್ನು ಮಾಡುವ ಇಚ್ಛೆಯನ್ನು ಕಥಂ ನ ಕುರ್ವಂತಿ=ಹೇಗೆ ಮಾಡಲಾರರು ?

**ಭಾಗವತ ತಾತ್ಪರ್ಯ :-**

ಇಲ್ಲಿ 'ಯದಾ'ಶಬ್ದವು ಕಾಲವಾಚಕವಾದರೆ (ಯಾವಾಗ ಎಂದು ಅರ್ಥವಾದರೆ) ಅನ್ವಯವಾಗುವದಿಲ್ಲ. ಆ ಕಾರಣ ಇಲ್ಲಿನ ಯದಾಶಬ್ದವು ಹೇತ್ವರ್ಥಕವೆಂದು ಆಚಾರ್ಯರು ಹೇಳುವರು :-

''ಯದಾ ಯಸ್ಮಾತ್''

ಎಂದು. ಅನುಕಂಪಾ-ಕೃಪಾಶಬ್ದಗಳಿಗೆ ಪೌನರುಕ್ತ್ಯ ಬರದಿರಲು ಪ್ರಮಾಣಪುರಸ್ಸರವಾಗಿ ಬೇರೆಬೇರೆ ಅರ್ಥಗಳನ್ನು ಹೇಳುವರು :-

**ಹೃದಯಸ್ಯ ದ್ರವೀಭಾವಸ್ತ್ವನುಕಂಪೇತಿ ಕಥ್ಯತೇ ।**
**ಉಪಕಾರಂ ಕರ್ತುಮಿಚ್ಛಾ ಕೃಪೇತ್ಯಾಹುರ್ಮನೀಷಿಣಃ ।। ಇತಿ ಶಬ್ದನಿರ್ಣಯೇ ।।**

ಜ್ಞಾನಿಗಳು ಹೃದಯ ಕರಗುವಿಕೆಗೆ ಕೃಪಾ ಎಂದು ಕರೆದರೆ, ಉಪಕಾರ ಮಾಡುವ ಇಚ್ಛೆಗೆ ಅನುಕಂಪಾ ಎಂದು ಕರೆಯುವರು ಎಂಬುದಾಗಿ ಶಬ್ದನಿರ್ಣಯದಲ್ಲಿದೆ. ।।೪೮।।

ನಾನೂ ಸಹ ಶ್ರೀಹರಿಯ ಬಂಧಕಶಕ್ತಿಗೆ ಸಿಲುಕಿದವನೇ. ಆ ಕಾರಣ ಅವರ ಮೇಲೆ ಹೇಗೆ ಅನುಗ್ರಹ ಮಾಡಲಿ ? ಎಂದರೆ, ನೀನು ಹಾಗಲ್ಲವೆಂದು ಹೇಳುವರು :-

**ಭವಾನ್ ಹಿ ಪುಂಸಃ ಪರಮಸ್ಯ ಮಾಯಯಾ**
**ದುರಂತಯಾಽಸ್ಪೃಷ್ಟಮತಿಃ ಸಮಸ್ತದೃಕ್ ।**
**ತಯಾ ಹತಾತ್ಮಸ್ವನುಕರ್ಮಚೇತಃ**
**ಸ್ವನುಗ್ರಹಂ ಕರ್ತುಮಿಹಾರ್ಹತಿ ಪ್ರಭೋ ॥೪೯॥**

ಪ್ರಭೋ=ಸಮರ್ಥನಾದ ರುದ್ರದೇವನೇ ! ಸಮಸ್ತದೃಕ್=ಯಥಾಯೋಗ್ಯವಾಗಿ ಸರ್ವಜ್ಞನೂ ಆದ ಭವಾನ್=ನೀನು ಪರಮಸ್ಯ ಪುಂಸಃ=ಶ್ರೀಹರಿಯ ಅಧೀನವಾದ ದುರಂತಯಾ=ದುಸ್ಸಾಧ್ಯವಾದ ಮಾಯಯಾ=ಬಂಧಕಶಕ್ತಿಯಿಂದ ಅಸ್ಪೃಷ್ಟಮತಿಃ= ಮೋಹಿತವಾದ ಬುದ್ಧಿಯುಳ್ಳವನಲ್ಲ. ಆ ಕಾರಣ ತಯಾ=ಪರಮಾತ್ಮನ ಬಂಧಕಶಕ್ತಿಯಿಂದ ಹತಾತ್ಮಸು=ಮೋಹಿತವಾದ ಬುದ್ಧಿಯುಳ್ಳವರಲ್ಲಿ ಆದ್ದರಿಂದಲೇ ಅನುಕರ್ಮಚೇತಸ್ಸು= ಕರ್ಮಾನುಸಾರವಾದ ಬುದ್ಧಿಯುಳ್ಳ ದಕ್ಷಾದಿಗಳಲ್ಲಿ ಇಹ=ಅಧಿಕಾರಿ-ಅನಧಿಕಾರವರ್ಗದಲ್ಲಿ ಅನುಗ್ರಹಂ ಕರ್ತುಂ ಅರ್ಹತಿ=ಅನುಗ್ರಹ ಮಾಡಲು ಸಮರ್ಥನಾಗಿರುವಿ.

**ಭಾಗವತ ತಾತ್ಪರ್ಯ :-**

ಈ ಶ್ಲೋಕದಲ್ಲಿ "ಮಾಯಯಾ ಅಸ್ಪೃಷ್ಟಮತಿಃ" ಎಂಬುದಾಗಿ ಹೇಳುವುದರಿಂದ ಭಗವಂತನ ಇಚ್ಛೆಯ ಸಂಬಂಧವೂ ರುದ್ರನಿಗೆ ಇಲ್ಲವೆಂಬಂತೆ ತೋರುವದು. ಆ ಕಾರಣ ಇಲ್ಲಿ ವಿವಕ್ಷಿತವಾದ ಮಾಯಾಶಬ್ದಾರ್ಥವನ್ನು ಆಚಾರ್ಯರು ವ್ಯಾಖ್ಯಾನಿಸುವರು :-

**ಮಾಯಯಾ ವಿಷ್ಣ್ವಧೀನಯಾ ಬಂಧಕಶಕ್ತ್ಯಾ ।**
**ವಿಷ್ಣುಮಾಯಾ ಹರೇರಿಚ್ಛಾ ಬಂಧಶಕ್ತಿಶ್ಚ ತದ್ವಶಾ ।**
**ಸರ್ವತ್ರಗಾ ಹರೇರಿಚ್ಛಾ ಬಂಧಶಕ್ತಿರ್ಜ್ಞವರ್ಜಿತಾ ॥ ಇತಿ ಶಬ್ದನಿರ್ಣಯೇ ॥**

ಇಲ್ಲಿ "ಮಾಯಯಾ ಅಸ್ಪೃಷ್ಟಮತಿಃ" ಎಂದರೆ ಪರಮಾತ್ಮನ ಅಧೀನವಾದ ಬಂಧಕಶಕ್ತಿಯ ಸ್ಪರ್ಶ ರುದ್ರದೇವರಿಗೆ ಇಲ್ಲ ಎಂದರ್ಥ.

ವಿಷ್ಣುಮಾಯಾ ಎಂದರೆ ಹರಿಯ ಇಚ್ಛೆ ಹಾಗೂ ಅವನ ಅಧೀನವಾದ ಬಂಧಕಶಕ್ತಿ ಎರಡೂ ಆಗುವವು. ಶ್ರೀಹರಿಯ ಇಚ್ಛೆಯು ಸರ್ವವಿಷಯಕವಾಗಿದೆ. ಬಂಧಕಶಕ್ತಿಯು ಸರ್ವಜ್ಞರನ್ನು ಬಿಟ್ಟು ಉಳಿದವರ ವಿಷಯಕವಾಗಿದೆ ಎಂದು ಭಾವ. ॥೪೯॥

**ಕುರ್ವಧ್ವರಸ್ಯೋದ್ಧರಣಂ ಹತಸ್ಯ ಭೋ**
**ತ್ವಯಾಽಸಮಾಪ್ತಸ್ಯ ಮನೋಃ ಪ್ರಜಾಪತೇಃ ।**
**ನ ಯತ್ರ ಭಾಗಂ ತವ ಭಾಗಿನೋ ದದುಃ**
**ಕುಶ್ರ್ವರ್ಧಿನೋ ಯೇನ ಮಖೋ ನಿನೀಯತೇ ॥೫೦॥**

ಯೇನ=ಯಾವ ನಿನ್ನಿಂದ ಮಖಃ=ಯಜ್ಞವು ನಿನೀಯತೇ=ಫಲವನ್ನು ಹೊಂದುವದೋ ಅಂತಹ ನಿನಗೆ ಕುಸ್ಪರ್ದಿನಃ=ದುಷ್ಪಸ್ಪರ್ಧೆಯುಳ್ಳ ದೇವತೆಗಳು ಭಾಗಿನಃ=ಹವಿರ್ಭಾಗ ಪಡೆಯಲು ಯೋಗ್ಯನಾದ ನಿನಗೆ ಯತ್ರ=ಯಾವ ಯಜ್ಞದಲ್ಲಿ ಭಾಗಂ=ಹವಿಸ್ಸನ್ನು ನ ದದುಃ=ಕೊಡಲಿಲ್ಲವೋ, ತ್ವಯಾ=ನಿನ್ನಿಂದ ಹತಸ್ಯ=ವಿಘ್ನ ಮಾಡಲ್ಪಟ್ಟ ಆದ್ದರಿಂದಲೇ ಅಸಮಾಪ್ತಸ್ಯ=ಪೂರ್ಣವಾಗದಿರುವ ಮನೋಃ=ಜ್ಞಾನಿಯಾದ ಪ್ರಜಾಪತೇಃ=ದಕ್ಷನ ಅಧ್ವರಸ್ಯ=ಯಜ್ಞದ ಉದ್ಧರಣಂ ಕುರು=ಉಜ್ಜೀವನವನ್ನು (ಸಮಾಪನವನ್ನು) ಮಾಡು.

**ಜೀವತಾದ್ಯಜಮಾನೋಽಯಂ ಪ್ರಪದ್ಯೇತಾಕ್ಷಿಣೀ ಭಗಃ ।**
**ಭೃಗೋಃ ಶ್ಮಶ್ರೂಣಿ ರೋಹಂತು ಪೂಷ್ಣೋ ದಂತಾಶ್ಚ ಪೂರ್ವವತ್ ॥೫೧॥**

ಅಯಂ ಯಜಮಾನಃ ಜೀವತಾತ್=ಈ ದಕ್ಷನು ಬದುಕಲಿ. ಭಗಃ ಅಕ್ಷಿಣೀ ಪ್ರಪದ್ಯೇತ=ಸೂರ್ಯನು ಕಣ್ಣುಗಳನ್ನು ಪಡೆಯಲಿ. ಭೃಗೋಃ ಶ್ಮಶ್ರೂಣಿ ರೋಹಂತು= ಭೃಗುವಿಗೆ ಮೀಸೆ ಬೆಳೆಯಲಿ. ಪೂಷ್ಣಃ=ಸೂರ್ಯನಿಗೆ ದಂತಾಃ=ಹಲ್ಲುಗಳು ಪೂರ್ವವತ್= ಮೊದಲಿನಂತೆಯೇ ಆಗಲಿ. ॥೫೧॥

**ದೇವಾನಾಂ ಭಗ್ನಗಾತ್ರಾಣಾಮೃತ್ವಿಜಾಂ ಚಾಯುಧಾಶ್ಮಭಿಃ ।**
**ಭವತಾಽನುಗೃಹೀತಾನಾಮಾಶು ಮನ್ಯೋ ತ್ವನಾತುರಮ್ ॥೫೨॥**

ಹೇ ಮನ್ಯೋ=ರುದ್ರನೇ ! ಆಯುಧಾಶ್ಮಭಿಃ=ಆಯುಧಗಳಿಂದಲೂ, ಕಲ್ಲುಗಳಿಂದಲೂ ಭಗ್ನಗಾತ್ರಾಣಾಂ=ಅವಯವಗಳನ್ನು ಮುರಿದುಕೊಂಡ ದೇವಾನಾಂ=ದೇವತೆಗಳಿಗೆ ಋತ್ವಿಜಾಂ ಚ=ಋತ್ವಿಕ್‌ಗಳಿಗೂ ಸಹ ಭವತಾ ಅನುಗೃಹೀತಾನಾಂ=ನಿನ್ನಿಂದ ಅನುಗ್ರಹ ಪಡೆದವರಿಗೆ ಆಶು=ಬೇಗನೆ ಅನಾತುರಂ=ಆರೋಗ್ಯವು ಅಸ್ತು=ಇರಲಿ. ॥೫೨॥

**ಏಷ ತೇ ರುದ್ರ ಭಾಗೋಽಸ್ತು ಯದುಚ್ಛಿಷ್ಟೋಽಧ್ವರಸ್ಯ ವೈ ।**
**ಯಜ್ಞಸ್ತೇ ರುದ್ರ ಭಾಗೇನ ಕಲ್ಪತಾಮದ್ಯ ಯಜ್ಞಹನ್ ॥೫೩ ॥**

॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ ಸಪ್ತಮೋಽಧ್ಯಾಯಃ ॥

ಯಜ್ಞಹನ್=ಯಜ್ಞಾನಾಶಕನಾದ ಹೇ ರುದ್ರ=ಎಲೋ ರುದ್ರನೇ ! ಅಧ್ವರಸ್ಯ ಯತ್ ಉಚ್ಛಿಷ್ಟಃ=ಯಜ್ಞದಲ್ಲಿ ಯಾವದು ಉಳಿಯುವುದೋ ತತ್=ಅದು ತೇ=ನಿನ್ನ ಭಾಗಃ ಅಸ್ತು ಭಾಗವಾಗಲಿ. ಹೇ ರುದ್ರ=ರುದ್ರನೇ ! ಭಾಗೇನ=ನಿನ್ನ ಭಾಗದಿಂದ ಅದ್ಯ=ಈಗ ಏಷಃ ಯಜ್ಞಃ ಕಲ್ಪತಾಂ=ಈ ಯಜ್ಞವು ಸಂಪಾದಿಸಲ್ಪಡಲಿ.

॥ ಇಲ್ಲಿಗೆ ಏಳನೆಯ ಅಧ್ಯಾಯವು ಮುಗಿಯಿತು ॥

# ಅಥ ಅಷ್ಟಮೋಽಧ್ಯಾಯಃ

**ಅಧ್ಯಾಯ-ಅಂತರಂಗ**

ಭಗವಂತನ ಜ್ಞಾನದಿಂದ ಸಹಕೃತವಾದ ಕರ್ಮವು ಶ್ರೀಹರಿಯ ಸಾಕ್ಷಾತ್ಕಾರಕ್ಕೇ ಕಾರಣವಾಗುವದು ಎಂಬುದಾಗಿ ಈ ಅಧ್ಯಾಯದಲ್ಲಿ ತಾತ್ಪರ್ಯಪೂರ್ವಕವಾಗಿ ನಿರೂಪಿಸುವರು.

ಮೊದಲಿಗೆ ಬ್ರಹ್ಮದೇವರು ಹೇಳಿದ್ದನ್ನು ಕೇಳಿ ಸಂತುಷ್ಟರಾದ ರುದ್ರದೇವರು ಹೇಳಿದ ಉತ್ತರದ ರೀತಿಯನ್ನು ತಿಳಿಸುವರು -

**ಇತ್ಯಜೇನಾನುನೀತೇನ ಭವೇನ ಪರಿತುಷ್ಯತಾ ।**
**ಅಭ್ಯಧಾಯಿ ಮಹಾಬಾಹೋ ಪ್ರಹಸ್ಯ ಶ್ರೂಯತಾಮಿತಿ ॥೧॥**

ಹೇ ಮಹಾಬಾಹೋ=ಧರ್ಮವಿರೋಧಿಗಳನ್ನು ಬಾಧಿಸುವ ವಿದುರನೇ ಇತಿ=ಈ ರೀತಿಯಾಗಿ ಅಜೇನ=ಬ್ರಹ್ಮದೇವರಿಂದ ಅನುನೀತೇನ=ಸಾಂತ್ವನಗೊಳಿಸಲ್ಪಟ್ಟ ಪರಿತುಷ್ಯತಾ= ಸಂತುಷ್ಟನಾದ ಭವೇನ=ರುದ್ರದೇವರಿಂದ ಪ್ರಹಸ್ಯ=ನಕ್ಕು ಶ್ರೂಯತಾಂ=ಕೇಳಿರಿ ಎಂದು ಇತಿ= ಮುಂದೆ ಹೇಳುವ ರೀತಿಯಲ್ಲಿ ಅಭ್ಯಧಾಯಿ=ಹೇಳಲ್ಪಟ್ಟಿತು. ॥೧॥

**ರುದ್ರ ಉವಾಚ -**

**ನಾಘಂ ಪ್ರಜೇಶ ಬಾಲಾನಾಂ ವರ್ಣಯೇ ನಾನುಚಿಂತಯೇ ।**
**ದೇವಮಾಯಾಭಿಭೂತಾನಾಂ ದಂಡಸ್ತತ್ರ ಧೃತೋ ಮಯಾ ॥೨॥**

ಹೇ ಪ್ರಜೇಶ=ನನ್ನನ್ನು ಮೊದಲುಮಾಡಿ ಎಲ್ಲ ಜೀವರಿಗಿಂತಲೂ ಉತ್ತಮರಾದ ಬ್ರಹ್ಮದೇವರೇ ! ಬಾಲಾನಾಂ ಅಘಂ=ಹುಡುಗರು ಮಾಡಿದ ಅಪರಾಧವನ್ನು ನ ವರ್ಣಯೇ=ಹೇಳುವುದಿಲ್ಲ ನ ಅನುಚಿಂತಯೇ=ಪಶ್ಚಾತ್ತಾಪವನ್ನೂ ಪಡುವದಿಲ್ಲ ಏಕೆಂದರೆ

ದೇವಮಾಯಾಭಿಭೂತಾನಾಂ=ಭಗವಂತನ ಬಂಧಕಶಕ್ತಿಗೆ ಒಳಗಾದವರಿಗೆ ತತ್ರ=ಅಪರಾಧಕ್ಕೆ ಮಯಾ=ನನ್ನಿಂದ ದಂಡಃ=ಶಿಕ್ಷೆಯು ಧೃತಃ=ಮಾಡಲ್ಪಟ್ಟಿದೆ.

ಅಪರಾಧಾನುಸಾರವಾಗಿ ಶಿಕ್ಷೆ ವಿಧಿಸಲು ಅಪರಾಧಗಳನ್ನು ಹೇಳಬೇಕು. ಶಿಕ್ಷೆ ಆಗದಿದ್ದಲ್ಲಿ ಪರಿತಪಿಸಬೇಕು. ಆದರೆ ಪ್ರಕೃತ ನಾನೇ ಅಪರಾಧಾನುಗುಣವಾಗಿ ಶಿಕ್ಷೆ ವಿಧಿಸಿದ್ದರಿಂದ ಅದನ್ನು ಹೇಳುವ ಕಾರಣವಿಲ್ಲ ಮತ್ತು ಪರಿತಪಿಸುವ ಕಾರಣವೂ ಇಲ್ಲ ಎಂದು ಅಭಿಪ್ರಾಯ. ॥೨॥

ಮಕ್ಕಳು-ಶಿಷ್ಯರು ಗುರುಗಳು ಹೇಳಿದ ಮಾತನ್ನು ಗೌರವದಿಂದ ಸ್ವೀಕರಿಸಬೇಕು ಎಂಬ ಅಭಿಪ್ರಾಯದಿಂದ, ಬ್ರಹ್ಮದೇವರು ಹೇಳಿದ ಮಾತನ್ನು ಗೌರವದಿಂದ ಸ್ವೀಕರಿಸಿ ರುದ್ರದೇವರು ದಕ್ಷನಿಗೆ ಅನುಗ್ರಹಿಸುವರು -

**ಪ್ರಜಾಪತೇರ್ದಗ್ಧಶೀರ್ಷ್ಣೋ ಭವತ್ವಜಮುಖಂ ಶಿರಃ ।**
**ಮಿತ್ರಸ್ಯ ಚಕ್ಷುಷೇಕ್ಷೇತ ಭಾಗಂ ಸ್ವಂ ಬರ್ಹಿಷೋ ಭಗಃ ॥೩॥**

ದಗ್ಧಶೀರ್ಷ್ಣಃ=ಸುಡಲ್ಪಟ್ಟ ತಲೆಯುಳ್ಳ ಪ್ರಜಾಪತೇಃ=ದಕ್ಷನ ಶಿರಃ=ಕುತ್ತಿಗೆಯು ಅಜಮುಖಂ=ಆಡಿನ ಮುಖವುಳ್ಳದ್ದು ಭವತು=ಆಗಲಿ. ಭಗಃ=ಈ ಹೆಸರಿನ ಸೂರ್ಯನು ಬರ್ಹಿಷಃ=ಯಜ್ಞದ ಸ್ವಂ=ತನ್ನ ಭಾಗಂ=ಭಾಗವನ್ನು ಮಿತ್ರಸ್ಯ=ಮಿತ್ರನೆಂಬ ಸೂರ್ಯನ ಚಕ್ಷುಷಾ=ಕಣ್ಣಿನಿಂದ ಈಕ್ಷೇತ=ನೋಡಲಿ. ॥೩॥

**ಪೂಷಾ ತು ಯಜಮಾನಸ್ಯ ದದ್ಭಿರ್ಜಕ್ಷತು ಪಿಷ್ಟಭುಕ್ ।**
**ದೇವಾಃ ಪ್ರಕೃತಸರ್ವಾಂಗಾ ಯೇ ಮ ಉಚ್ಛೇಷಣಂ ದದುಃ ॥೪॥**

ಪೂಷಾ=ಈ ಹೆಸರಿನ ಸೂರ್ಯನು ಯಜಮಾನಸ್ಯ=ಯಜಮಾನನ ದದ್ಭಿಃ= ಹಲ್ಲುಗಳಿಂದ ಜಕ್ಷತು=ಕಠಿಣ ಪದಾರ್ಥಗಳನ್ನು ತಿನ್ನಲಿ. ಅಥವಾ ಪಿಷ್ಟಭುಕ್ ಭವತು=ಅವನು ಕೇವಲ ಹಿಟ್ಟನ್ನು ತಿನ್ನುವವನಾಗಲಿ. ಅಂದರೆ ಅವನಿಗೆ ಪ್ರಾಯಃ ಹಿಟ್ಟಿನ ಹವಿಸ್ಸೇ (ಹಲ್ಲಿಲ್ಲದೇ ತಿನ್ನುವ ಹವಿಸ್ಸೇ) ಕೊಡುವಂತಾಗಲಿ. ಯೇ=ಯಾರು ಮೇ=ನನಗೆ-ಉಚ್ಛೇಷಣಂ=ಯಜ್ಞದಲ್ಲಿ ಉಳಿದದ್ದನ್ನು ದದುಃ=ಭಾಗವನ್ನಾಗಿ ಕೊಟ್ಟರೋ ತೇ ದೇವಾಃ=ಆ ದೇವತೆಗಳು ಪ್ರಕೃತಸರ್ವಾಂಗಾಃ ಭವಂತು=ಭಗ್ನವಾದ ಎಲ್ಲ ಅವಯವಗಳನ್ನೂ ಮೊದಲಿನಂತೆ ಪಡೆಯುವಂತವರಾಗಲಿ. (ಪ್ರಕರ್ಷೇಣ ಕೃತಾನಿ ಭಗ್ನಾನಿ ಸರ್ವಾಣ್ಯಂಗಾನಿ ಯೇಷಾಂ ತೇ ಎಂದು ಸಮಾಸ.)॥೪॥

**ಬಾಹುಭ್ಯಾಮಶ್ವಿನೋಃ ಪೂಷ್ಣೋ ಹಸ್ತಾಭ್ಯಾಂ ಕೃತಬಾಹವಃ ।**
**ಭವಂತ್ವಧ್ವರ್ಯವಶ್ಚಾನ್ಯೇ ಬಸ್ತಶ್ಮಶ್ರುರ್ಭೃಗುರ್ಭವೇತ್ ॥೫ ॥**

ಅನ್ಯೇ=ಇನ್ನುಳಿದ ಅಧ್ವರ್ಯವಃ=ಋತ್ವಿಜರು ಅವರಲ್ಲಿ ಕೆಲವರು ಬಾಹುಗಳನ್ನು ಕತ್ತರಿಸಿಕೊಂಡವರು, ಹಲವರು ಹಸ್ತವನ್ನು ಕತ್ತರಿಸಿಕೊಂಡವರು, ಯಾರು ಬಾಹು ಇಲ್ಲದವರೋ ಅವರು ಅಶ್ವಿನೋಃ=ಅಶ್ವಿನೀದೇವತೆಗಳ ಬಾಹುಭ್ಯಾಂ=ಬಾಹುಗಳಿಂದ ಕೃತಬಾಹವಃ ಭವಂತು=ಬಾಹುವಿನ ಪ್ರಯೋಜನವುಳ್ಳವರಾಗಲಿ. ಯಾರು ಹಸ್ತ ಇಲ್ಲದವರೋ ಅವರು ಪೂಷ್ಣಃ ಹಸ್ತಾಭ್ಯಾಂ ಕೃತಹಸ್ತಾಃ ಭವಂತು=ಪೂಷಾನ ಹಸ್ತಗಳಿಂದ ಹಸ್ತವುಳ್ಳವರಾಗಲಿ. ಭೃಗುಃ=ಭೃಗುಋಷಿಯು ಬಸ್ತಶ್ಮಶ್ರುಃ ಭವೇತ್=ಹೋತಿನ ಮೀಸೆ ಉಳ್ಳವನಾಗಲಿ.

**ಬಾಹು-ಹಸ್ತಗಳಲ್ಲಿ ಏನು ವ್ಯತ್ಯಾಸ ?**

''ಕೃತಬಾಹವಃ ಭವಂತು'' ''ಕೃತಹಸ್ತಾಃ ಭವಂತು'' ಎಂಬುದಾಗಿ ಹೇಳಿದರೆ ಬಾಹು-ಹಸ್ತಗಳಲ್ಲಿ ಏನು ವ್ಯತ್ಯಾಸ ? ಎಂದು ಪ್ರಶ್ನೆ ಬರುತ್ತದೆ.

ಅದಕ್ಕೆ ಉತ್ತರ :- ಮೊಣಕೈ ಮೇಲ್ಭಾಗಕ್ಕೆ ಬಾಹು ಎನ್ನುವರು. ಮೊಣಕೈ ಕೆಳಭಾಗಕ್ಕೆ ಹಸ್ತವೆಂದು ತಿಳಿಯಬೇಕು. ॥೫ ॥

**ಮೈತ್ರೇಯ ಉವಾಚ -**

**ತದಾ ಸರ್ವಾಣಿ ಭೂತಾನಿ ಶ್ರುತ್ವಾ ಮೀಢುಷ್ಟಮೋದಿತಮ್ ।**
**ಪರಿತುಷ್ಟಾತ್ಮಭಿಸ್ತತ್ರ ಸಾಧು ಸಾಧ್ವಿತ್ಯಥಾಬ್ರುವನ್ ॥೬॥**

ಹೇ ತಾತ=ವಿದುರನೇ ! ಮೀಢುಷ್ಟಮೋದಿತಂ=ಭಕ್ತಾಭೀಷ್ಟ ಕೊಡುವವರಲ್ಲಿ ಶ್ರೇಷ್ಠನಾದ ರುದ್ರದೇವನಿಂದ ಹೇಳಿದ್ದನ್ನು ಶ್ರುತ್ವಾ=ಕೇಳಿ ಸರ್ವಾಣಿ ಭೂತಾನಿ=ಎಲ್ಲ ಜನರು ಪರಿತುಷ್ಟಾತ್ಮಭಿಃ=ಸಂತುಷ್ಟವಾದ ಮನಸ್ಸಿನಿಂದ ತದಾ=ಆಗ ಸಾಧು ಸಾಧು ಇತಿ ಅಥ ಅಬ್ರುವನ್=ಸಾಧು ಸಾಧು ಎಂದು ಮಂಗಲ ಹೇಳಿದರು. ॥೬॥

**ತತೋ ಮೀಢ್ವಾಂಸಮಾಮಂತ್ರ್ಯ ಶುನಾಸೀರಾಃ ಸಹರ್ಷಿಭಿಃ ।**
**ಭೂಯಸ್ತದ್ದೇವಯಜನಂ ಸಮೀಢ್ವದ್ವೇಧಸೋ ಯಯುಃ ॥೭॥**

ತತಃ=ಅನಂತರ ಮೀಢ್ವಾಂಸಂ=ರುದ್ರದೇವರನ್ನು ಕುರಿತು ಆಮಂತ್ರ್ಯ=ತಾವು ಬಂದು ಎಲ್ಲಿ ಕಾರ್ಯವನ್ನು ಸಾಂಗಗೊಳಿಸಬೇಕೆಂದು ಪ್ರಾರ್ಥಿಸಿ ಸಮೀಢ್ವದ್ವೇಧಸಃ=ರುದ್ರ ಮತ್ತು ಬ್ರಹ್ಮದೇವರಿಂದ ಸಹಿತರಾದ ಶುನಾಸೀರಾಃ=ದೇವತೆಗಳು ಋಷಿಭಿಃ ಸಹ=ಋಷಿಗಳಿಂದ

ಕೂಡಿಕೊಂಡು ಭೂಯಃ=ಮತ್ತೆ ತದ್ ದೇವಯಜನಂ ಯಯುಃ=ಆ ದಕ್ಷನ ಯಜ್ಞಸ್ಥಾನಕ್ಕೆ ತೆರಳಿದರು. ।।೭।।

**ವಿಧಾಯ ಕಾರ್ತ್ಸ್ನ್ಯೇನ ಚ ತದ್ಯದಾಹ ಭಗವಾನ್ ಭವಃ ।**
**ಸಂದಧುಃ ಕಸ್ಯ ಕಾಯೇನ ಸವನೀಯಪಶೋಃ ಶಿರಃ ।।೮।।**

ಭಗವಾನ್ ಭವಃ=ಪೂಜ್ಯನಾದ ರುದ್ರದೇವನು ಯದಾಹ=ಏನು ಹೇಳಿದನೋ ತತ್=ಅದನ್ನು ಕಾರ್ತ್ಸ್ನ್ಯೇನ=ಸಂಪೂರ್ಣವಾಗಿ ವಿಧಾಯ=ಮಾಡಿ ("ದಗ್ಧಶೀರ್ಷ್ಣಃ" ಮುಂತಾಗಿ ಹೇಳಿದ ಅಂದರೆ ಮಿತ್ರನ ಕಣ್ಣು ಭಗನಿಗೆ, ಯಜಮಾನನ ಹಲ್ಲು ಪುಷಾಗೆ, ಅಶ್ವಿನೀದೇವತೆಗಳ ಬಾಹುಗಳು, ಪೂಷಾನ ಹಸ್ತಗಳು, ಬಸ್ತದ ಮೀಸೆ ಎಲ್ಲವನ್ನೂ ಮಾಡಿ ಎಂದರ್ಥ) ಸವನೀಯಪಶೋಃ=ಯಜ್ಞಪಶುವಾದ ಮೇಕೆಯ ಶಿರಃ=ತಲೆಯನ್ನು ಕಸ್ಯ=ದಕ್ಷನ ಕಾಯೇನ=ದೇಹದಿಂದ ಸಂದಧುಃ=ಸೇರಿಸಿದರು. ।।೮।।

**ಸಂಧೀಯಮಾನೇ ಶೀರ್ಷಣಿ ದಕ್ಷೋ ರುದ್ರಾಭಿವೀಕ್ಷಿತಃ ।**
**ಸದ್ಯಃ ಸುಪ್ತ ಇವೋತ್ತಸ್ಥೌ ದದೃಶೇ ಚಾಗ್ರತೋ ಮೃಡಮ್ ।।೯।।**

ಶೀರ್ಷಣಿ=ತಲೆಯು ಸಂಧೀಯಮಾನೇ ಸತಿ=ಜೋಡಿಸಲ್ಪಡುತ್ತಿರಲು ದಕ್ಷಃ=ದಕ್ಷನು ರುದ್ರಾಭಿವೀಕ್ಷಿತಃ=ರುದ್ರದೇವರಿಂದ ಕೃಪಾದೃಷ್ಟಿಯಿಂದ ನೋಡಲ್ಪಟ್ಟವನಾಗಿ ಸದ್ಯಃ=ಆಗಲೇ ಸುಪ್ತ ಇವ=ಮಲಗಿದವನಂತೆ ಉತ್ತಸ್ಥೌ=ಎದ್ದನು. ಅಗ್ರತಃ=ಎದುರಿಗೆ ಮೃಡಂ=ರುದ್ರದೇವರನ್ನು ದದೃಶೇ=ನೋಡಿದನು. ।।೯।।

**ತದಾ ವೃಷಧ್ವಜದ್ವೇಷಕಲಿಲಾತ್ಮಾ ಪ್ರಜಾಪತಿಃ ।**
**ಶಿವಾವಲೋಕಾದಭವಚ್ಛರದಭ್ರ ಇವಾಮಲಃ ।।೧೦।।**

ತದಾ=ಆಗ ವೃಷಧ್ವಜದ್ವೇಷಕಲಿಲಾತ್ಮಾ=ಮೊದಲು ರುದ್ರದೇವರ ಮೇಲೆ ಮಾಡಿದ ದ್ವೇಷದಿಂದ ಕಲುಷಿತವಾದ ಮನಸ್ಸುಳ್ಳ ಪ್ರಜಾಪತಿಃ=ದಕ್ಷನು ಶಿವಾವಲೋಕಾತ್=ರುದ್ರದೇವರನ್ನು ನೋಡುವುದರಿಂದ (ಅಥವಾ ಶಿವನು ದಕ್ಷನನ್ನು ನೋಡಿದ್ದರಿಂದ) ಶರದಭ್ರ ಇವ ಅಮಲಃ ಅಭವತ್=ಶರತ್ಕಾಲದ ಮೋಡದಂತೆ ನಿರ್ಮಲನಾದನು. ।।೧೦।।

**ಭವಸ್ತವಾಯ ಕೃತಧೀರ್ನಾಶಕ್ನೋದನುರಾಗತಃ ।**
**ಔತ್ಕಂಠ್ಯಬಾಷ್ಪಕಲಯಾ ಸಂಪರೇತಾಂ ಸುತಾಂ ಸ್ಮರನ್ ।।೧೧।।**

**ಕೃಚ್ಛ್ರಾತ್ ಸಂಸ್ತಭ್ಯ ಚ ಮನಃ ಪ್ರೇಮವಿಹ್ವಲಿತಃ ಸುಧೀಃ ।**
**ಶಶಂಸ ನಿರ್ವ್ಯಲೀಕೇನ ಭಾವೇನೇಶಂ ಪ್ರಜಾಪತಿಃ ।।೧೨।।**

ಪ್ರಜಾಪತಿಃ=ದಕ್ಷಪ್ರಜೇಶ್ವರನು ಭವಸ್ತವಾಯ=ರುದ್ರದೇವರ ಸ್ತೋತ್ರ ಮಾಡಲು ಕೃತಧೀಃ ಮನಸ್ಸು ಮಾಡಿದನು, ಆದರೂ ಅನುರಾಗತಃ=ಪ್ರೀತಿಯಿಂದ ಔತ್ಕಂಠ್ಯಬಾಷ್ಪಕಲಯಾ= ಉತ್ಸುಕತೆಯಿಂದ ಉಂಟಾದ ಕಣ್ಣೀರುಗಳಿಂದ ನ ಅಶಕ್ನೋತ್=ಸ್ತುತಿಸಲು ಸಮರ್ಥನಾಗಲಿಲ್ಲ. ಸಂಪರೇತಾಂ ಸುತಾಂ ಸ್ಮರನ್=ಸತ್ತುಹೋದ ಮಗಳನ್ನು ಸ್ಮರಿಸುತ್ತ ಕೃಚ್ಛ್ರಾತ್=ಕಷ್ಟದಿಂದ ಮನಃ ಸಂಸ್ತಭ್ಯ=ಮನಸ್ಸನ್ನು ನಿಗ್ರಹಿಸಿ ಪ್ರೇಮವಿಹ್ವಲಿತಃ=ಸ್ನೇಹಪರವಶನಾಗಿ ನಿರ್ವ್ಯಲೀಕೇನ ಭಾವೇನ=ನಿಷ್ಕಪಟವಾದ ಮನಸ್ಸಿನಿಂದ ಈಶಂ=ರುದ್ರದೇವರನ್ನು ಶಶಂಸ=ಸ್ತುತಿಸಿದನು. ॥೧೧॥೧೨॥

**ದಕ್ಷ ಉವಾಚ-**

**ಭೂಯಾನನುಗ್ರಹ ಅಹೋ ಭವತಾ ಕೃತೋ ಮೇ**
**ದಂಡಸ್ತ್ವಯಾ ಮಯಿ ಧೃತೋ ಯದಪಿ ಪ್ರಸಹ್ಯ ।**
**ನ ಬ್ರಹ್ಮಬಂಧುಷು ಚ ವಾಂ ಭಗವನ್ನವಜ್ಞಾ**
**ತುಭ್ಯಂ ಹರೇಶ್ಚ ಕುತ ಏವ ಧೃತವ್ರತೇಷು ॥೧೩॥**

ತ್ವಯಾ=ನಿಮ್ಮಿಂದ ಪ್ರಸಹ್ಯ ಅಪಿ=ಬಲವಂತವಾಗಿಯಾದರೂ ಮಯಿ=ನನ್ನಲ್ಲಿ ದಂಡಃ ಧೃತಃ=ಶಿಕ್ಷೆಯು ಮಾಡಲ್ಪಟ್ಟಿತು ಇತಿ ಯತ್=ಎಂಬುದೇನಿದೆಯೋ ಅದು ಭವತಾ=ನಿಮ್ಮಿಂದ ಭೂಯಾನ್ ಅನುಗ್ರಹಃ ಕೃತಃ=ಬಹಳ ಅನುಗ್ರಹವೇ ಮಾಡಲ್ಪಟ್ಟಿತು. ಉದಾಸೀನ ಮಾಡಲ್ಪಡಲಿಲ್ಲ. ಇಲ್ಲವಾದರೆ ನಿನ್ನ ದ್ವೇಷ ಮಾಡಿದ ನನಗೆ ತಮಸ್ಸೇ ಆಗುತ್ತಿತ್ತು ಎಂದು ಭಾವ. ಹೇ ಭಗವನ್=ಪೂಜ್ಯನಾದ ರುದ್ರನೇ ! ಬ್ರಹ್ಮಬಂಧುಷು=ಬ್ರಾಹ್ಮಣಾಭಾಸರಲ್ಲಿಯೂ ಸಹ ತುಭ್ಯಂ=ನಿನ್ನ ಚ=ಮತ್ತು ಹರೇಃ=ಶ್ರೀಹರಿಯ ವಾಂ=ನಿಮ್ಮಿಬ್ಬರ ಅವಜ್ಞಾ=ಔದಾಸಿನ್ಯವು ಇಲ್ಲ. ಇನ್ನು ಧೃತವ್ರತೇಷು=ದೀಕ್ಷಿತರ ಮೇಲೆ ಅವಜ್ಞಾ=ಅವಜ್ಞೆಯು ಕುತ ಏವ=ಹೇಗೆ ಇದ್ದೀತು ? ಸರ್ವಥಾ ಇರಲಾರದು ಎಂದು ಭಾವ. ॥೧೩॥

ಅನುಗ್ರಹ ಮಾಡಲು ನಿಮಿತ್ತವನ್ನು ತೋರಿಸುತ್ತ ಹಿಂದೆ ಹೇಳಿದ್ದನ್ನೇ ಉಪಪಾದಿಸುವರು :-

**ವಿದ್ಯಾತಪೋವ್ರತಧರಾನ್ಮುಖತಃ ಸ್ಮ ವಿಪ್ರಾನ್**
**ಬ್ರಹ್ಮಾತ್ಮತಾಂ ಪ್ರಥಯಿತುಂ ಪ್ರಥಮಂ ತ್ವಮಸ್ರಾಃ ।**
**ತದ್ ಬ್ರಾಹ್ಮಣಾನ್ ಪರಮ ಸರ್ವವಿಪತ್ಸು ಪಾಸಿ**
**ಪಾಲಃ ಪಶೂನಿವ ವಿಭೋ ಪ್ರಗೃಹೀತದಂಡಃ ॥೧೪॥**

ಹೇ ಪರಮ=ಉತ್ತಮನಾದ ಹೇ ರುದ್ರನೇ ! ತ್ವಂ=ನೀನು ಬ್ರಹ್ಮಾತ್ಮತಾಂ=ಪರಬ್ರಹ್ಮನಾದ ಶ್ರೀಹರಿಯ ಸ್ವಾಮಿತ್ವವನ್ನು ಪ್ರಥಯಿತುಂ=ಸಂಪ್ರದಾಯಪ್ರವರ್ತಕರಾಗಿ ವಿಸ್ತಾರಗೊಳಿಸಲು ವಿದ್ಯಾತಪೋವ್ರತಧರಾನ್=ಜ್ಞಾನ, ತಪಸ್ಸು, ವ್ರತಗಳುಳ್ಳ ವಿಪ್ರಾನ್=ಬ್ರಾಹ್ಮಣರನ್ನು ಪ್ರಥಮಂ=ಕ್ಷತ್ರಿಯಾದಿಗಳಿಗಿಂತ ಮೊದಲು ಮುಖತಃ=ಮುಖದಿಂದ ಅಸ್ರಾಃ=ಸೃಷ್ಟಿಸಿರುವಿ. ತತ್=ಆದಕಾರಣ ಬ್ರಾಹ್ಮಣಾನ್=ಪರಮಾತ್ಮನ ಸ್ವಾಮಿತ್ವದ ವಿಷಯದಲ್ಲಿ ಸಂಪ್ರದಾಯ-ಪ್ರವರ್ತಕರಾದವರನ್ನು ಸರ್ವವಿಪತ್ಸು=ಎಲ್ಲ ಆಪತ್ತುಗಳ ಪ್ರಸಂಗಗಳಲ್ಲಿಯೂ ಪಾಲಃ= ದನಕಾಯುವವನು ಪಶೂನ್ ಇವ=ದನಗಳನ್ನು ರಕ್ಷಿಸುವಂತೆ ಪ್ರಗೃಹೀತದಂಡಃ=ಅಪರಾಧಕ್ಕೆ ತಕ್ಕ ಶಿಕ್ಷೆಯನ್ನು ಮಾಡಿ ಪಾಸಿ=ರಕ್ಷಿಸುವಿ. ॥೧೪॥

**ಯೋಽಸೌ ಮಯಾಽವಿದಿತತತ್ತ್ವದೃಶಾ ಸಭಾಯಾಂ**
**ಕ್ಷಿಪ್ತೋ ದುರುಕ್ತಿವಿಶಿಖೈರಗಣಯ್ಯ ತನ್ಮಾಮ್ ।**
**ಅರ್ವಾಕ್ ಪತಂತಮರ್ಹತ್ತಮನಿಂದಯೈಕ್ಷದ್**
**ದೃಷ್ಟ್ಯಾಽರ್ದ್ರಯಾ ಸ ಭಗವಾನ್ ಸ್ವಕೃತೇನ ತುಷ್ಯೇತ್ ॥೧೫॥**

ಯಃ=ಯಾರು ಅವಿದಿತತತ್ತ್ವದೃಶಾ=ತತ್ತ್ವಜ್ಞಾನ ಪಡೆಯದಿರುವ ಮಯಾ=ನನ್ನಿಂದ ಸಭಾಯಾಂ=ಸಭೆಯಲ್ಲಿ ದುರುಕ್ತಿವಿಶಿಖೈಃ=ದುಷ್ಟಮಾತುಗಳೆಂಬ ಬಾಣಗಳಿಂದ ಕ್ಷಿಪ್ತಃ=ತಾಡಿತನಾದನೋ ಅಸೌ=ಆ ರುದ್ರದೇವನು ತತ್=ಆ ದುರುಕ್ತಿಯನ್ನು ಅವಿಗಣಯ್ಯ= ಲೆಕ್ಕಿಸದೇ (ಮರೆತು), ಅರ್ಹತ್ತಮನಿಂದಯಾ=ಪೂಜ್ಯತಮನಾದ ನಿನ್ನ ನಿಂದನೆಯಿಂದ ಅರ್ವಾಕ್=ಕೆಳಗೆ ಪತಂತಂ=ಬೀಳುವ ಮಾಂ=ನನ್ನನ್ನು ಆರ್ದ್ರಯಾ=ಕೃಪೆಯಿಂದ ಕೂಡಿದ ದೃಷ್ಟ್ಯಾ=ದೃಷ್ಟಿಯಿಂದ ಐಕ್ಷತ್=ನೋಡಿದನು. ಸಃ ಭಗವಾನ್=ಅಂತಹ ಆ ರುದ್ರದೇವನು ಸ್ವಕೃತೇನ=ನನ್ನಮೇಲೆ ತಾನು ಮಾಡಿದ ಅನುಗ್ರಹದಿಂದಲೇ ತುಷ್ಯೇತ್=ಸಂತುಷ್ಟನಾಗಲಿ, ನನ್ನಿಂದ ಪ್ರತಿಯಾಗಿ ಏನೂ ಮಾಡಲಾಗದೆಂದು ಭಾವ. ॥೧೫॥

**ಮೈತ್ರೇಯ ಉವಾಚ –**

**ಕ್ಷಮಾಪ್ಯೈವಂ ಸಮೀಢ್ವಾಂಸಂ ಬ್ರಹ್ಮಣಾ ಚಾನುಮಂತ್ರಿತಃ ।**
**ಕರ್ಮ ಸಂತಾನಯಾಮಾಸ ಸೋಪಾಧ್ಯಾಯರ್ತ್ವಿಗಗ್ನಿಭಿಃ ॥೧೬॥**

ಏವಂ=ಈ ರೀತಿಯಾಗಿ ಸಃ=ದಕ್ಷಪ್ರಜಾಪತಿಯು ಸಮೀಢ್ವಾಂಸಂ=ಅನುಗ್ರಹದೃಷ್ಟಿ-ಗೈಯುವ ರುದ್ರದೇವರನ್ನು ಕ್ಷಮಾಪ್ಯ=ಕ್ಷಮೆ ಕೇಳಿ ಬ್ರಹ್ಮಣಾ=ಬ್ರಹ್ಮದೇವರಿಂದ ಅನುಮಂತ್ರಿತಃ=ಅಪ್ಪಣೆ ಪಡೆದವನಾಗಿ ಸೋಪಾಧ್ಯಾಯರ್ತ್ವಿಗಗ್ನಿಭಿಃ=ಉಪಾಧ್ಯಾಯರಿಂದ ಸಹಿತರಾದ ಋತ್ವಿಕ್‌ಗಳು ಅಗ್ನಿಗಳಿಂದಲೂ ಕರ್ಮ=ಯಜ್ಞವನ್ನು ಸಂತಾನಯಾಮಾಸ= ಮುಂದುವರೆಸಿದನು. ॥೧೬॥

**ವೈಷ್ಣವಂ ಯಜ್ಞಸಂತತ್ಯೈ ತ್ರಿಕಪಾಲಂ.ದ್ವಿಜೋತ್ತಮಾಃ ।**
**ಪುರೋಡಾಶಂ ನಿರವಪನ್ ವೀರಸಂಸರ್ಗಶುದ್ಧಯೇ ॥೧೭॥**

ದ್ವಿಜೋತ್ತಮಾಃ=ಬ್ರಾಹ್ಮಣಶ್ರೇಷ್ಠರು ಯಜ್ಞಸಂತತ್ಯೈ=ಭಗ್ನವಾದ ಯಜ್ಞವು ಮುಂದುವರೆಯುವದಕ್ಕಾಗಿ ಮತ್ತು ವೀರಸಂಸರ್ಗಶುದ್ಧಯೇ=ವೀರರಾದ ರುದ್ರಭೃತ್ಯರ (ಪ್ರಮಥಾದಿಗಳ) ಸಂಸರ್ಗದ (ಅವರು ಮಾಡಿದ ಯಜ್ಞಭಂಗದೋಷದ) ಪರಿಹಾರಕ್ಕಾಗಿ (ಪ್ರಾಯಶ್ಚಿತ್ತರೂಪವಾಗಿ) ತ್ರಿಕಪಾಲಂ=ಮೂರುಕಪಾಲಗಳೇ ಆಸನವಾಗಿವುಳ್ಳ ವೈಷ್ಣವಂ=ವಿಷ್ಣುದೇವತಾಕವಾದ ಪುರೋಡಾಶಂ=ಈ ಹೆಸರಿನ ಹವಿಸ್ಸನ್ನು ನಿರಪವನ್=ಮಂತ್ರಪೂರ್ವಕವಾಗಿ ಹೋಮ ಮಾಡಿದರು. ॥೧೭॥

**ಅಧ್ವರ್ಯುಣಾಽತ್ತಹವಿಷಾ ಹೂಯಮಾನೇ ಯಜುಷ್ಟತೌ ।**
**ಯಥಾ ವಿಶುದ್ಧಯಾ ದಧ್ಯೌ ತಥಾ ಪ್ರಾದುರಭೂದ್ಧರಿಃ ॥೧೮॥**

ಆತ್ತಹವಿಷಾ=ಹವಿಸ್ಸನ್ನು (ಗ್ರಹಣ ಮಾಡಿದ) ಸ್ವೀಕರಿಸಿದ ಅಧ್ವರ್ಯುಣಾ (ಸಹ)=ಅಧ್ವರ್ಯುವಿನಿಂದ ಸಹಿತನಾಗಿ ಯಜುಷ್ಟತೌ=ಮಂತ್ರದೇವತೆಯು ಹೂಯಮಾನೇ (ಸತಿ)=ಹೋಮ ಮಾಡುತ್ತಿರಲು, ಯಥಾ=ಹೇಗೆ ವಿಶುದ್ಧಯಾ=ಶುದ್ಧವಾದ ಬುದ್ಧಿಯಿಂದ ದಧ್ಯೌ=ಧ್ಯಾನ ಮಾಡಿದನೋ ತಥಾ=ಹಾಗೆಯೇ ಹರಿಃ=ಶ್ರೀಹರಿಯು ಪ್ರಾದುರಭೂತ್=ಕಾಣಿಸಿಕೊಂಡನು. ॥೧೮॥

**ತದಾ ಸ್ವಪ್ರಭಯಾ ತೇಷಾಂ ದ್ಯೋತಯಂತ್ಯಾ ದಿಶೋ ದಶ ।**
**ಮುಷ್ಣಂಸ್ತೇಜ ಉಪಾನೀತಸ್ತಾರ್ಕ್ಷ್ಯೇಣ ಸ್ತೋತ್ರನಿರ್ಜಿತಃ ॥೧೯॥**

ತದಾ=ಆಗ ದಶ=ಹತ್ತು ದಿಶಃ=ದಿಕ್ಕುಗಳನ್ನು ದ್ಯೋತಯಂತ್ಯಾ=ಪ್ರಕಾಶಗೊಳಿಸುವ ಸ್ವಪ್ರಭಯಾ=ತನ್ನ ಕಾಂತಿಯಿಂದ ತೇಷಾಂ=ಅಲ್ಲಿರುವವರ ತೇಜಃ=ಕಾಂತಿಯನ್ನು ಮುಷ್ಣನ್=ತಿರಸ್ಕರಿಸುತ್ತ ತಾರ್ಕ್ಷ್ಯೇಣ=ಗರುಡನಿಂದ ಉಪಾನೀತಃ=ಸಮೀಪಬಂದವನಾಗಿ ಸ್ತೋತ್ರನಿರ್ಜಿತಃ=ಸಾಮಗಾನದಿಂದ ವಶನಾದನು. ॥೧೯॥

**ಶ್ಯಾಮೋ ಹಿರಣ್ಯರಶನೋಽರ್ಕಕಿರೀಟಜುಷ್ಟೋ**
**ನೀಲಾಲಕಭ್ರಮರಕುಂಡಲಮಂಡಿತಾಸ್ಯಃ ।**
**ಕಂಬ್ವಬ್ಜಚಕ್ರಶರಚಾಪಗದಾಸಿಚರ್ಮ-**
**ವ್ಯಗ್ರೈರ್ಹಿರಣ್ಮಯಭುಜೈರಿವ ಕರ್ಣಿಕಾರಃ ॥೨೦॥**

ಶ್ಯಾಮಃ=ಇಂದ್ರನೀಲ ಮಣಿಯಂತೆ ಕಪ್ಪುಬಣ್ಣ ಉಳ್ಳ, ಹಿರಣ್ಯರಶನಃ=ಚಿನ್ನದ ಉಡದಾರ ಧರಿಸಿದ ಅಥವಾ (ರಶನಾ ಶಬ್ದವು ವಸ್ತ್ರಕ್ಕೆ ಲಕ್ಷ್ಯಕವು) ಚಿನ್ನದಂತೆ ಇರುವ ಪೀತಾಂಬರ ಧರಿಸಿದ, ಅರ್ಕಕಿರೀಟಜುಷ್ಟಃ=ಸೂರ್ಯನಂತೆ ಹೊಳೆಯುವ ಕಿರೀಟವನ್ನು ಧರಿಸಿದ, ನೀಲಾಲಕಭ್ರಮರಕುಂಡಲಮಂಡಿತಾಸ್ಯಃ ನೀಲ=ಕಪ್ಪಾದ ಅಲಕ=ಕೂದಲುಗಳೆಂಬ ಭ್ರಮರ=ಗುಂಗಿ ಹುಳುಗಳು ಮತ್ತು ಕುಂಡಲ=ಕಿವಿಗೆ ಹಾಕುವ ಆಭರಣಗಳು ಇವುಗಳಿಂದ ಮಂಡಿತ=ಅಲಂಕೃತವಾದ ಆಸ್ಯಃ=ಮುಖವುಳ್ಳ ಕಂಬು=ಶಂಖ ಅಬ್ಜ=ಕಮಲ ಚಕ್ರ=ಚಕ್ರ ಶರ=ಬಾಣ ಚಾಪ=ಧನುಸ್ಸು ಗದಾ=ಗದಾ ಅಸಿ=ಖಡ್ಗ ಚರ್ಮ=ಡಾಲು ಇವುಗಳಿಂದ ವಿ=ವಿಶಿಷ್ಟಗಳಾದ ಅಥವಾ ವಿಲಕ್ಷಣಗಳಾದ ಅಗ್ರೈಃ=ಮುಂಗೈಗಳುಳ್ಳ ಹಿರಣ್ಮಯಭುಜೈಃ=ಚಿನ್ನದ ಆಭರಣಗಳಿಂದ ಅಲಂಕೃತಗಳಾದ ಭುಜಗಳಿಂದ ಕರ್ಣಿಕಾರ ಇವ=ಹೂಬಿಟ್ಟ ಕರ್ಣಕಾರಗಿಡದಂತೆ ಇರುವ (ಕಣಗಲ ಗಿಡದಂತೆ ಇರುವ ಎಂದರ್ಥ). ।।೨೦।।

**ವಕ್ಷಸ್ಯಧಿಶ್ರಿತವಧೂರ್ವನಮಾಲ್ಯುದಾರ-**
**ಹಾಸಾವಲೋಕಕಲಯಾ ರಮಯಂಶ್ಚ ವಿಶ್ವಮ್ ।**
**ಪಾರ್ಶ್ವಭ್ರಮದ್ವ್ಯಜನಚಾಮರರಾಜಹಂಸಃ**
**ಶ್ವೇತಾತಪತ್ರಶಶಿನೋಪರಿ ಲಕ್ಷ್ಯಮಾಣಃ ।।೨೧।।**

ವಕ್ಷಸಿ=ಹೃದಯದಲ್ಲಿ ಅಧಿಶ್ರಿತವಧೂಃ=ಇರಿಸಲ್ಪಟ್ಟ (ಇರುವ) ಹೆಂಡತಿಯಾದ ಲಕ್ಷ್ಮೀದೇವಿಯುಳ್ಳ ವನಮಾಲೀ=ವನಮಾಲೆಯನ್ನು ಧರಿಸಿದ, ಉದಾರಹಾಸಾವಲೋಕಕಲಯಾ ಉದಾರ=ಉತ್ಕೃಷ್ಟವಾದ ಹಾಸ=ನಗು ಅವಲೋಕ=ನೋಟಗಳ ಕಲಯಾ=ಅಂಶದಿಂದ ವಿಶ್ವಂ=ಜಗತ್ತನ್ನು ರಮಯನ್=ಸಂತೋಷಪಡಿಸುತ್ತಾ, ಪಾರ್ಶ್ವಭ್ರಮದ್ವ್ಯಜನಚಾಮರ-ರಾಜಹಂಸಃ ಪಾರ್ಶ್ವ=ಎಡಬಲಗಳಲ್ಲಿ ಭ್ರಮತ್=ಚಲಿಸುವ ವ್ಯಜನ=ಬೀಸಣಿಕೆ ಚಾಮರ=ಚಾಮರಗಳೆಂಬ ರಾಜಹಂಸಃ=ರಾಜಹಂಸವುಳ್ಳ, ಶ್ವೇತಾತಪತ್ರಶಶಿನಾ=ಶ್ವೇತಚ್ಛತ್ರವೆಂಬ ಚಂದ್ರನಿಂದ ಉಪರಿ=ಮೇಲೆ ಲಕ್ಷ್ಯಮಾಣಃ=ಕಾಣಿಸುವನಾಗಿ ವಿಷ್ಣುವು ಗರುಡನಿಂದ ಕರೆತರಲ್ಪಟ್ಟನು ಎಂದು ಭಾವ. ।।೨೧।।

**ತಮುಪಾಗತಮಾಲಕ್ಷ್ಯ ಸರ್ವೇ ಸುರಗಣಾದಯಃ ।**
**ಪ್ರಣೇಮುಃ ಸಹಸೋತ್ಥಾಯ ಬ್ರಹ್ಮೇಂದ್ರತ್ರ್ಯಕ್ಷನಾಯಕಾಃ ।।೨೨।।**

ಉಪಾಗತಂ=ಸಮೀಪಬಂದಿರುವ ತಂ=ಶ್ರೀಹರಿಯನ್ನು ಆಲಕ್ಷ್ಯ=ನೋಡಿ ಬ್ರಹ್ಮೇಂದ್ರತ್ರ್ಯಕ್ಷನಾಯಕಾಃ=ಬ್ರಹ್ಮದೇವರು ವಾಯುದೇವರು ರುದ್ರದೇವರುಗಳೇ ನಾಯಕರಾಗಿವುಳ್ಳ ಸರ್ವೇ ಸುರಗಣಾದಯಃ=ಎಲ್ಲ ದೇವತೆಗಳು ಸಹಸಾ=ತಟ್ಟನೆ ಉತ್ಥಾಯ=ಎದ್ದು ಪ್ರಣೇಮುಃ=ನಮಸ್ಕರಿಸಿದರು. ।।೨೨।।

**ತತ್ತೇಜಸಾ ಹತರುಚಃ ಸನ್ನಜಿಹ್ವಾಃ ಸಸಾಧ್ವಸಾಃ ।**
**ಮೂರ್ಧ್ನಿ ಕೃತಾಂಜಲಿಪುಟಾ ಉಪತಸ್ಥುರಧೋಕ್ಷಜಮ್ ॥೨೩॥**

ತತ್ತೇಜಸಾ=ಆ ಶ್ರೀಹರಿಯ ಕಾಂತಿಯಿಂದ ಹತರುಚಃ=ತಮ್ಮ ಕಾಂತಿಯನ್ನು ಕಳೆದುಕೊಂಡ(ಕಾಂತಿಹೀನರಾದ)ವರಾಗಿ ಸನ್ನಜಿಹ್ವಾಃ=ಗದ್ಗದಮಾತುಗಳುಳ್ಳವರಾಗಿ ಸಸಾಧ್ವಸಾಃ=ಭಯಸಹಿತರಾಗಿ ಮೂರ್ಧ್ನಿ=ಶಿರದಲ್ಲಿ ಕೃತಾಂಜಲಿಪುಟಾಃ=ಕೈಜೋಡಿಸಿದವರಾಗಿ ಅಧೋಕ್ಷಜಂ=ಶ್ರೀಹರಿಯನ್ನು ಉಪತಸ್ಥುಃ=ಸ್ತೋತ್ರಮಾಡಿದರು. ॥೨೩॥

**ಅಪ್ಯರ್ವಾಗ್ವೃತ್ತಯೋ ಯಸ್ಯ ಮಹಿತ್ವೇ ಸ್ವಭುವಾದಯಃ ।**
**ಯಥಾಮತಿ ಗೃಣಂತಿ ಸ್ಮ ಕೃತಾನುಗ್ರಹವಿಗ್ರಹಮ್ ॥೨೪॥**

ಅಪಿ=ಯದ್ಯಪಿ ಸ್ವಭುವಾದಯಃ=ಬ್ರಹ್ಮಾದಿದೇವತೆಗಳು ಯಸ್ಯ=ಯಾವ ಶ್ರೀಹರಿಯ ಮಹಿತ್ವೇ=ಮಹಿಮಾ ವಿಷಯದಲ್ಲಿ ಅರ್ವಾಗ್ವೃತ್ತಯಃ=ಸಂಪೂರ್ಣವಾಗಿ ತಿಳಿಯದಿರುವವರು, ಅಪಿ (ತಥಾಪಿ)=ಆದರೂ ಯಥಾಮತಿ=ತಮ್ಮ ಬುದ್ಧಿಗನುಗುಣವಾಗಿ ಕೃತಾನುಗ್ರಹವಿಗ್ರಹಂ= ಅನುಗ್ರಹ ಮಾಡಲು ಪ್ರಕಟಗೊಳಿಸಿದ ಸ್ವರೂಪವುಳ್ಳ ಶ್ರೀಹರಿಯನ್ನು ಗೃಣಂತಿ ಸ್ಮ=ಸ್ತುತಿಸಿದರು.

**ಭಾಗವತ ತಾತ್ಪರ್ಯ :-**

ಇಲ್ಲಿ ಭಗವಂತನ ವಿಗ್ರಹಕ್ಕೆ ಜೀವನ ಶರೀರದಂತೆ ಉತ್ಪತ್ತಿ ಇಲ್ಲ ಎಂದು ಪ್ರಮಾಣದಿಂದ ತಿಳಿಸುವರು -

> ಉತ್ಪತ್ತಿರ್ಹರಿರೂಪಾಣಾಂ ವ್ಯಕ್ತಿರೇವ ನ ಸಂಶಯಃ ।
> ಉತ್ಪತ್ತಿರೇವ ಜೀವಾನಾಂ ದೇಹೋತ್ಪತ್ತಿರಿತೀರ್ಯತೇ ॥ ಇತಿ ತತ್ವನಿರ್ಣಯೇ ॥

ಎಲ್ಲಿಯೇ ಆದರೂ ಶ್ರೀಹರಿಯ ರೂಪಗಳಿಗೆ ಉತ್ಪತ್ತಿ ಹೇಳಿದರೆ ಅಲ್ಲಿ ಉತ್ಪತ್ತಿ ಎಂಬ ಶಬ್ದಕ್ಕೆ ಅಭಿವ್ಯಕ್ತಿಯೆಂದೇ ಅರ್ಥ ತಿಳಿಯಬೇಕು. ಇನ್ನು ಜೀವರಿಗೆ ಉತ್ಪತ್ತಿ ಹೇಳಿದಲ್ಲಿ ದೇಹೋತ್ಪತ್ತಿ ಹೇಳಿರುವರೆಂದು ತಿಳಿಯಬೇಕು ಎಂದು ಭಾವ. ॥೨೪॥

**ದಕ್ಷೋ ಗೃಹೀತಾರ್ಹಣಸಾಧನೋತ್ತಮಂ**
**ಯಜ್ಞೇಶ್ವರಂ ವಿಶ್ವಸೃಜಂ ಪರಂ ಗುರುಮ್ ।**
**ಸುನಂದನಂದಾದ್ಯನುಗೈರ್ವೃತಂ ಮುದಾ**
**ಗೃಣನ್ ಪ್ರಪೇದೇ ಪ್ರಯತಃ ಕೃತಾಂಜಲಿಃ ॥೨೫॥**

ದಕ್ಷಃ=ದಕ್ಷಪ್ರಜಾಪತಿಯು ಕೃತಾಂಜಲಿಃ=ಕೈಜೋಡಿಸಿದವನಾಗಿ ಪ್ರಯತಃ=ಸಮಾಹಿತ ಮನಸ್ಸುಳ್ಳವನಾಗಿ ಗೃಹೀತಾರ್ಹಣಸಾಧನೋತ್ತಮಂ=ಶ್ರೇಷ್ಠವಾದ ಪೂಜಾಸಾಧನಗಳನ್ನು ಸ್ವೀಕರಿಸಿದ, ಯಜ್ಞೇಶ್ವರಂ=ಯಜ್ಞಸ್ವಾಮಿಯಾದ, ವಿಶ್ವಸೃಜಂ=ಜಗುದುತ್ಪಾದಕನಾದ, ಪರಂ ಗುರುಂ=ಮುಖ್ಯಗುರುವಾದ, ಸುನಂದನಂದಾದ್ಯನುಗೈಃ=ಸುನಂದ ನಂದರೇ ಮೊದಲಾದ ಭೃತ್ಯರಿಂದ ವೃತಂ=ಸುತ್ತುವರೆಯಲ್ಪಟ್ಟ ಶ್ರೀಹರಿಯನ್ನು ಮುದಾ=ಸಂತೋಷದಿಂದ ಗೃಣನ್=ಸ್ತೋತ್ರ ಮಾಡುತ್ತಾ ಪ್ರಪೇದೇ=ಶರಣುಹೊಂದಿದನು. ।।೨೫।।

**ದಕ್ಷ ಉವಾಚ -**

**ಶುದ್ಧಂ ಸ್ವಧಾಮ್ನ್ಯುಪರತಾಖಿಲಬುದ್ಧ್ಯವಸ್ಥಂ**
**ಚಿನ್ಮಾತ್ರಮೇಕಮಭಯಂ ಪ್ರತಿಷಿಧ್ಯ ಮಾಯಾಮ್ ।**
**ತಿಷ್ಠಂಸ್ತಯೈವ ಪುರುಷತ್ವಮುಪೇತ್ಯ ತಸ್ಯಾ-**
**ಮಾಸ್ತೇ ಭವಾನಪರಿಶುದ್ಧಮಿವಾಮನಂತಿ ।।೨೬।।**

ಶುದ್ಧಂ=ನಿರ್ದುಷ್ಟನಾದ ಸ್ವಧಾಮ್ನಿ=ನಿನ್ನ ಸ್ವರೂಪದಲ್ಲಿ ಉಪರತಾಖಿಲಬುದ್ಧ್ಯವಸ್ಥಂ ಉಪರತ=ಯಾವಾಗಲೂ ಇಲ್ಲದಿರುವ ಅಖಿಲ=ಎಲ್ಲ ಬುದ್ಧ್ಯವಸ್ಥಂ=ಜೀವನ ಜಾಗ್ರದಾದಿ ಅವಸ್ಥೆಯುಳ್ಳ (ಜಾಗ್ರತ್ ಸ್ವಪ್ನ ಸುಷುಪ್ತಿಗಳೆಂಬ ಜೀವನ ಅವಸ್ಥೆಗಳಿಲ್ಲದಿರುವ ಎಂದರ್ಥ), ಚಿನ್ಮಾತ್ರಂ=ಜಡಾಮಿಶ್ರನಾದ, ಏಕಂ=ಸರ್ವೋತ್ತಮನಾದ, ಅಭಯಂ=ಭಯರಹಿತನಾದ ನಿನ್ನ ರೂಪವನ್ನು ಶ್ರುತಿಗಳು ಆಮನಂತಿ=ಈ ರೀತಿ ಹೇಳುವವು. ಭವಾನ್=ನೀನು ಮಾಯಾಂ=ಜಡಪ್ರಕೃತಿಯನ್ನು ಅದರ ಕಾರ್ಯವಾದ ಶರೀರವನ್ನೂ ಪ್ರತಿಷಿಧ್ಯ=ದೂರೀಕರಿಸಿ ಸದಾ ತಿಷ್ಠನ್=ಇರುವವನಾಗಿ ಸೃಷ್ಟಿಕಾಲದಲ್ಲಿ ತಯೈವ=ಆ ಪ್ರಕೃತಿಯಿಂದಲೇ ಮಹದಾದಿ-ಸೃಷ್ಟಿದ್ವಾರಾ ಪುರಾಣಿ=ಶರೀರಗಳನ್ನು ಸೃಷ್ಟಿಸಿ ಅದರಲ್ಲಿ ಇರುವ ಕಾರಣದಿಂದ ಪುರುಷತ್ವಂ ಉಪೇತ್ಯ=ಪುರುಷಶಬ್ದವಾಚ್ಯತ್ವವನ್ನು ಪಡೆದು ತಸ್ಯಾಂ=ಪ್ರಕೃತಿಯಲ್ಲಿ ಶರೀರದಲ್ಲಿ ಆಸ್ತೇ=ನಿಯಾಮಕನಾಗಿ ಇರುವಿ ಆದ ಕಾರಣ ನಿನ್ನನ್ನು ಅಪರಿಶುದ್ಧಮಿವ=ಪ್ರಕೃತಿಬದ್ಧ ಜೀವನಂತೆ ಆಮನಂತಿ=ಹೇಳುವರು. ವಸ್ತುತಃ ನೀನು ಜೀವನಂತೆ ಪ್ರಾಕೃತನಲ್ಲವೆಂದು ಭಾವ.

**ಭಾಗವತ ತಾತ್ಪರ್ಯ :-**

ಈ ಶ್ಲೋಕದಲ್ಲಿ ''ಮಾಯಾವನ್ನು ಎಂದರೆ ಅನಿರ್ವಾಚ್ಯವಾದ ಅವಿದ್ಯಾವನ್ನು ಕಾಲತ್ರಯದಲ್ಲಿಯೂ ನಿರಾಕರಿಸರುವ ಭಗವಂತನೇ ಆ ಅವಿದ್ಯೆಯಿಂದಲೇ ಜೀವನಾಗಿ ಅವಿದ್ಯೆಯಲ್ಲಿ ಇರುವನು'' ಎಂದು ವಿಪರೀತ ಅರ್ಥವಾಗುವದು. ಆ ಕಾರಣ ಆಚಾರ್ಯರು ಪ್ರಮಾಣದಿಂದಲೇ ಈ ಶ್ಲೋಕದ ತಾತ್ಪರ್ಯವನ್ನು ಹೇಳುವರು :-

**ಜಡಮಾಯಾ ನ ತಸ್ಯಾಸ್ತಿ ಶರೀರತ್ವೇನ ಕುತ್ರಚಿತ್ ।**
**ಸೃಷ್ಟ್ವಾ ತಯಾ ಶರೀರಾಣಿ ತತ್ಸ್ಥಿತೇಃ ಪುರುಷಃ ಸ್ಮೃತಃ॥**
**ಮಾಯಾಮಯಶರೀರಾಯಾಮಪಿ ವಿಷ್ಣುಃ ಸ್ವಯಂ ಸ್ಥಿತಃ ।**
**ತಸ್ಮಾತ್ ಪ್ರಾಕೃತ ಇತ್ಯೇವ ಜೀವವತ್ತಂ ವದಂತಿ ಹಿ ।**
**ಅಸ್ಪೃಷ್ಟತ್ವೇಽಪಿ ತದ್ಧರ್ಮೈಸ್ತದ್ಗತ್ವಾದೇವ ಕಾರಣಾತ್ ॥ ಇತಿ ತತ್ವವಿವೇಕೇ ॥**

ಶ್ರೀಹರಿಗೆ ಜಡಪ್ರಕೃತಿಯು ಯಾವ ಕಾಲದಲ್ಲಿಯೂ ಶರೀರವಾಗಿ ಇಲ್ಲ. ಆದರೂ ಜಡಪ್ರಕೃತಿಯಿಂದ ಇತರರ ಶರೀರಗಳನ್ನೇ ಸೃಷ್ಟಿಸಿ ಅವುಗಳಲ್ಲಿ ನಿಯಾಮಕನಾಗಿ ಇರುವದರಿಂದ ಪುರುಷನೆನಿಸುವನು. ತನಗೆ ಶರೀರವಾಗದ ಪ್ರಕೃತಿಯಲ್ಲಿಯೂ ವಿಷ್ಣುವು ಪರಿಣಾಮನಿಯಾಮಕನಾಗಿ ಇರುವನು. ಆದ ಕಾರಣ ಜೀವನಂತೆ ಅವನನ್ನು ಪ್ರಾಕೃತನೆನ್ನುವರು. ಅವನಿಗೆ ಪ್ರಕೃತಿಕಾರ್ಯವಾದ ದುಃಖಾದಿಗಳ ಸಂಬಂಧವಿಲ್ಲದಿದ್ದರೂ ಅದರಲ್ಲಿ ಇರುವವನೆಂಬ ಕಾರಣದಿಂದ ಮಾತ್ರ ಹಾಗೆ ಕರೆಯುವರು ಎಂದು ಭಾವ.

ಋತ್ವಿಜರು ತಮ್ಮ ಅಪರಾಧಪರಿಹಾರಕ್ಕಾಗಿ ಸ್ತುತಿಸುವರು -

**ಋತ್ವಿಜ ಊಚುಃ -**

**ತತ್ತ್ವಂ ನ ತೇ ವಯಮನಂಜನ ರುದ್ರಶಾಪಾತ್**
**ಕರ್ಮಣ್ಯವಗ್ರಹಧಿಯೋ ಭಗವನ್ ವಿದಾಮಃ ।**
**ಧರ್ಮೋಪಲಕ್ಷಣಮಿದಂ ತ್ರಿವೃದಧ್ವರಾಖ್ಯಂ**
**ಜ್ಞಾತಂ ಯದರ್ಥಮಧಿದೈವಮದಸ್ತ್ವಮಾಸ್ಥಾಃ ॥೨೭॥**

ಭಗವನ್=ಪೂಜ್ಯನಾದ ಹೇ ಅನಂಜನ=ಪುಣ್ಯಪಾಪಲೇಪವಿಲ್ಲದವನೇ ! ಯದರ್ಥಂ= ಯಾವ ಯಜ್ಞಭೋಗ ಮಾಡಲು ಅದಃ=ವೇದಪ್ರಸಿದ್ಧವಾದ ಅಧಿದೈವಂ=ಉತ್ತಮ ಯಜ್ಞಭುಕ್‌ದೇವತಾಶರೀರದಲ್ಲಿ ತ್ವಂ=ನೀನು ಆಸ್ಥಾಃ=ಇರುವಿಯೋ ತತ್ ಇದಂ= ಯಜ್ಞರೂಪವಾದ ಕರ್ಮವು ಅಧ್ವರಾಖ್ಯಂ=ಶುದ್ಧಮಾರ್ಗದಲ್ಲಿ ರಮಿಸುವದರಿಂದ ಅಧ್ವರವೆನಿಸುವ ತ್ರಿವೃತ್=ಮೂರು ವೇದಗಳಿಂದ ತಿಳಿಯಲ್ಪಡುವ ಧರ್ಮೋಪಲಕ್ಷಣಂ= ಹರಿಪ್ರೀತಿಜನಕಪುಣ್ಯಕ್ಕೆ ಜ್ಞಾಪಕವೆಂದು ಜ್ಞಾತಂ=ಜ್ಞಾನಿಗಳಿಂದ ತಿಳಿಯಲ್ಪಟ್ಟ ತತ್ವಂ=ತತ್ವವನ್ನು ತೇ=ನಿನ್ನ ತತ್ವಂ=ನಿಜವಾದ ಸ್ವರೂಪವನ್ನು ರುದ್ರಶಾಪಾತ್=ರುದ್ರಭಕ್ತನಾದ ನಂದಿಯ ಶಾಪದಿಂದ ಕರ್ಮಣಿ=ಕರ್ಮಮಾರ್ಗದಲ್ಲಿಯೇ ಅವಗ್ರಹಧಿಯಃ=ದುರಾಗ್ರಹ- ಬುದ್ಧಿಯುಳ್ಳವರಾಗಿ (ಪ್ರಸಿದ್ಧ ಇಂದ್ರಾದಿಗಳೇ ಯಜ್ಞಭೋಕ್ತೃಗಳೆಂದು ತಿಳಿದವರಾಗಿ ಎಂದರ್ಥ) ನ ವಿದಾಮಃ=ತಿಳಿಯಲಾರೆವು ಎಂದು ಭಾವ.

**ಭಾಗವತ ತಾತ್ಪರ್ಯ :-**

**ಅಧಿದೈವಂ ಉತ್ತಮದೈವಮ್ ।**
**ಯದ್ಯಜ್ಞಭಾಗಾರ್ಥಂ ಯಜ್ಞಭುಗ್ದೇವತಾಶರೀರೇ ಆಸ್ಥಾಃ ।**
**'ಭುಂಕ್ತೇ ಯಜ್ಞಭುಜೋ ದೇವಾನಾವಿಶ್ಯ ಪುರುಷೋತ್ತಮ' ಇತಿ ಚ ॥**

ಮೂಲದಲ್ಲಿ ಅಧಿಶಬ್ದವು ಉತ್ತಮ ಎಂಬರ್ಥದಲ್ಲಿದೆ. ದೇವಾನ್ ಅಧಿಕೃತ್ಯ ಎಂಬ ಅರ್ಥದಲ್ಲಿ ಅಲ್ಲವೆಂದು ತಿಳಿಸಲು ದೈವಂ ಎಂದು ಅನುವಾದ ಮಾಡಿರುವರು. ಹಾಗೆ ದೇವಾನ್ ಅಧಿಕೃತ್ಯ ಎಂಬ ಅರ್ಥದಲ್ಲಿಯೇ ಇರುವುದಾಗಿದ್ದರೆ ಅಧಿದೇವಂ ಎಂದಾಗಬೇಕಿತ್ತು. ಉತ್ತಮರಾದ ಬ್ರಹ್ಮಾದಿಗಳಿಗೆ ಇಂದ್ರಶರೀರವು ಅಧಿದೈವ (ಪ್ರವೇಶಾಧಿಕರಣ) ಆಗಿದೆ ಎಂದಂತಾಯಿತು.

ಇದನ್ನೇ ವಿವರಿಸುತ್ತಾ ಯದರ್ಥಂ ಇತ್ಯಾದಿಮೂಲವಾಕ್ಯಗಳ ಯೋಜನೆಯನ್ನು ತೋರಿಸುವರು- ಯದ್ಯಜ್ಞಭಾಗರ್ಥಂ ಎಂದು. ಭಾಗಾರ್ಥಂ ಎಂದರೆ ಭೋಗಾರ್ಥಂ ಎಂದರ್ಥ. ದೇವಶಬ್ದವು ಯಜ್ಞಭುಕ್‌ದೇವತಾಪರವೆಂದಂತಾಯಿತು.

ನೀನು ಯಜ್ಞಭೋಗ ಮಾಡಲು ಯಜ್ಞಭೋಗ ಮಾಡುವ ದೇವತೆಗಳಲ್ಲಿ ಪ್ರವೇಶ ಮಾಡಿರುವಿ. ಪುರುಷೋತ್ತಮನು ಯಜ್ಞಭೋಕ್ತೃದೇವತೆಗಳಲ್ಲಿ ಪ್ರವೇಶ ಮಾಡಿ ಭೋಗ ಮಾಡುವನು ಎಂದು ತಾತ್ಪರ್ಯದ ಭಾವ. ॥೨೭॥

**ಸದಸ್ಯಾ ಊಚುಃ -**

**ಉತ್ಪತ್ತ್ಯಧ್ವನ್ಯಶರಣ ಉರುಕ್ಲೇಶದುರ್ಗಾಂತಕೋಗ್ರ-**
**ವ್ಯಾಲಾಕೃಷ್ಟೇ ವಿಷಯಮೃಗತೃಷ್ಣಾತ್ಮಗೇಹೋರುಭಾರಃ ।**
**ದ್ವಂದ್ವಶ್ವಭ್ರೇ ಖಲಮೃಗಭಯೇ ಶೋಕದಾವೇಽಜ್ಞಸಾರ್ಥಃ**
**ಪಾದೌ ಶಸ್ತೌ ಶರಣದ ಕದಾ ಯಾತಿ ಕಾಮೋಪಸೃಷ್ಟಃ ॥೨೮ ॥**

ಹೇ ಶರಣದ=ಮೋಕ್ಷವೆಂಬ ಗೃಹಪ್ರದನೇ ಅಶರಣೇ=ರಕ್ಷಕನಿಲ್ಲದ, ಉರುಕ್ಲೇಶ-ದುರ್ಗಾಂತಕೋಗ್ರವ್ಯಾಲಾಕೃಷ್ಟೇ ಉರು=ಬಹಳವಾದ ಕ್ಲೇಶ=ಅವಿದ್ಯಾ ಅಸ್ಮಿತ, ರಾಗ, ದ್ವೇಷ, ಅಭಿನಿವೇಶಗಳಿಂದ ದುರ್ಗ=ಹೋಗಲು ಅಶಕ್ಯವಾದ ಅಂತಕ=ಯಮನೆಂಬ ಉಗ್ರ=ಕ್ರೂರವಾದ ವ್ಯಾಲಾಕೃಷ್ಟೇ=ಅಜಗರ ಸರ್ಪದಿಂದ ನುಂಗಲ್ಪಡುವ, ದ್ವಂದ್ವಶ್ವಭ್ರೇ=ಸುಖದುಃಖಗಳೆಂಬ ಸುಳಿಗಳುಳ್ಳ, ಖಲಮೃಗಭಯೇ=ದುಷ್ಟರೆಂಬ ಹುಲಿ ಮುಂತಾದ ಕ್ರೂರಪ್ರಾಣಿಗಳ ಭಯವುಳ್ಳ, ಶೋಕದಾವೇ=ಮನಃಪೀಡೆ ಎಂಬ (ದಾವಾಗ್ನಿ ಉಳ್ಳ) ಕಾಡ್ಗಿಚ್ಚುಳ್ಳ, ಉತ್ಪತ್ತ್ಯಧ್ವನಿ=ಸಂಸಾರಮಾರ್ಗದಲ್ಲಿ ಇರುವ ವಿಷಯಮೃಗತೃಷ್ಣಾತ್ಮ-

ಗೇಹೋರುಭಾರಃ ವಿಷಯಮೃಗತೃಷ್ಣ=ವಿಷಯಗಳೆಂಬ ಬಿಸಿಲುಕುದುರೆಯನ್ನು ಕುರಿತು ಆತ್ಮ=ಅಹಂಕಾರಾಸ್ಪದವಾದ ದೇಹವು ಮತ್ತು ಗೇಹ=ಮಮತಾಸ್ಪದವಾದದ್ದು ಮನೆ ಇವೇ ಬಹಳ ಭಾರವಾಗಿ ಉಳ್ಳ ಆದ್ದರಿಂದಲೇ ಕಾಮೋಪಸೃಷ್ಟಃ=ಕಾಮದಿಂದ ಪೀಡಿತವಾದ ಅಜ್ಞಸಾರ್ಥಃ=ಅಜ್ಞಾನಿಗಳ ಸಮೂಹವು ತೇ=ನಿನ್ನ ಶಸ್ತೌ=ಪ್ರಶಸ್ತವಾದ ಪಾದೌ=ಪಾದಗಳನ್ನು ಕದಾ ಯಾತಿ=ಯಾವಾಗ ತಲುಪುವನು ? ಎಂದಿಗೂ ತಲುಪಲಾರನೆಂದರ್ಥ. ।।೨೮।।

**ರುದ್ರ ಉವಾಚ -**

> **ತವ ವರದ ವರಾಂಘ್ರಾವಾಶಿಷಾ ಚಾನಭಿಧ್ಯೇ**
> **ಹ್ಯಪಿ ಮುನಿಭಿರಸಕ್ತೈರಾದರೇಣಾರ್ಹಣೀಯೇ ।**
> **ಯದಿ ರಚಿತಧಿಯಂ ಮಾಂ ವಿದ್ಧಿ ಲೋಕಾಪವಿದ್ಧಂ**
> **ಜಗತಿ ನ ಗಣಯೇಯಂ ತ್ವತ್ಪರಾನುಗ್ರಹೇಣ ।।೨೯।।**

ಹೇ ವರದ=ಅಭೀಷ್ಟಪ್ರದನೇ ! ಅಸಕ್ತೈಃ=ವಿರಕ್ತರಾದ ಮುನಿಭಿಃ=ಜ್ಞಾನಿಗಳಿಂದ ಆಶಿಷಾ=ಅಪೇಕ್ಷೆಗಳಿಗಾಗಿ ಅನಭಿಧ್ಯೇ=ಧ್ಯಾನ ಮಾಡಲು ಯೋಗ್ಯವಲ್ಲದ, ಆದರೇಣ ಅರ್ಹಣೀಯೇ=ಬ್ರಹ್ಮಾದಿಜ್ಞಾನಿಗಳಿಂದ ಭಕ್ತಿಯಿಂದ ಪೂಜನೀಯವಾದ, ತವ=ನಿನ್ನ ವರಾಂಘ್ರೌ=ಭಜನೀಯವಾದ ಗುಣವುಳ್ಳ ಪಾದದಲ್ಲಿ ಲೋಕಾಪವಿದ್ಧಂ=ಲೋಕಬಾಹ್ಯನಾದ ಅಥವಾ ದಕ್ಷಾದಿಗಳಿಂದ ನಿಂದಿತನಾದ ಮಾಂ=ನನ್ನನ್ನು ಯದಿ=ಒಂದುವೇಳೆ ರಚಿತಧಿಯಂ ವಿದ್ಧಿ=ಮನಸ್ಸು ಮಾಡಿರುವನೆಂದು (ನಿನ್ನ ಪಾದದಲ್ಲಿ ಮನಿಸಿಟ್ಟಿರುವೆನೆಂದು) ತಿಳಿದರೆ ತರ್ಹಿ=ಆಗ ಜಗತಿ=ಪ್ರಪಂಚದಲ್ಲಿ ತ್ವತ್ಪರಾನುಗ್ರಹೇಣ=ನಿನ್ನ ಶ್ರೇಷ್ಠವಾದ ಅನುಗ್ರಹದಿಂದ ನ ಗಣಯೇಯಂ=ಯಾರನ್ನೂ ಏನನ್ನೂ ಪ್ರಾರ್ಥಿಸಲಾರೆನು.

**ಭಾಗವತ ತಾತ್ಪರ್ಯ :-**

ಇಲ್ಲಿ ಚಶಬ್ದದಿಂದ ವಿಷಯಾಸಕ್ತರು ಕಾಮನೆಯಿಂದಲೂ ಧ್ಯಾನ ಮಾಡುವರೆಂದು ಅರ್ಥ ಬರುವದರಿಂದ ಅಪಿಶಬ್ದ ವ್ಯರ್ಥ ಎಂದು ಶಂಕೆ ಬಂದರೆ, ಅದಕ್ಕಾಗಿ ಅದರ ತಾತ್ಪರ್ಯ ಹೇಳುವರು :-

> **ಆಶಿಷೋಽಪಿ ತತ ಏವ ಭವಂತೀತ್ಯತಃ ಚಶಬ್ದಃ''**

ವಿಷಯಾಸಕ್ತರಾದವರಿಗೂ ಅಪೇಕ್ಷೆಗಳೂ ನಿಷ್ಕಾಮಧ್ಯಾನದಿಂದಲೇ ಆಗುವವು ಎಂದು ಸೂಚಿಸಲು ಅಪಿಶಬ್ದವೆಂದು ಭಾವ. ।।೨೯।।

ಬ್ರಹ್ಮಾದಿಗಳಿಗೇನೇ ಶ್ರೀಮನ್ನಾರಯಣನ ತತ್ವಜ್ಞಾನ ದುರ್ಲಭ ಎಂದಮೇಲೆ ನಮ್ಮ ಪಾಡೇನು ? ಆ ಕಾರಣ ರುದ್ರದೇವರ ದ್ವೇಷ ಮಾಡಿದ್ದು ತತ್ವಜ್ಞಾನವಿಲ್ಲದ್ದರಿಂದಲೇ ಎಂಬ

ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾ ಭೃಗುಮುನಿಯು ಪರಮಾತ್ಮನನ್ನು ಎರಡು ಶ್ಲೋಕಗಳಿಂದ ಸ್ತುತಿಸುವನು :-

**ಭೃಗುರುವಾಚ -**

**ಯನ್ಮಾಯಯಾ ಗಹನಯಾಽಪಹೃತಾತ್ಮಬೋಧಾ**
**ಬ್ರಹ್ಮಾದಯಸ್ತನುಭೃತಸ್ತಮಸಿ ಸ್ವಪಂತಃ ।**
**ನಾತ್ಮಾಶ್ರಿತಂ ತವ ವಿದಂತ್ಯಧುನಾಽಪಿ ತತ್ತ್ವಂ**
**ಸೋಽಯಂ ಪ್ರಸೀದತು ಭವಾನ್ ಪ್ರಣತಾತ್ಮಬಂಧುಃ ॥೩೦॥**

ಗಹನಯಾ=ಗಂಭೀರವಾದ ಯನ್ಮಾಯಯಾ=ಯಾರ ಬಂಧಕಶಕ್ತಿಯಿಂದ ಅಪಹೃತಾತ್ಮಬೋಧಾಃ=ಆಚ್ಛಾದಿತವಾದ ಪರಮಾತ್ಮನ ಜ್ಞಾನವುಳ್ಳ ತನುಭೃತಃ=ಶರೀರಧಾರಣ ಮಾಡಿದ, ತಮಸಿ=ಅಜ್ಞಾನದಲ್ಲಿ ಸ್ವಪಂತಃ=ಮಗ್ನರಾಗಿರುವ, ಬ್ರಹ್ಮಾದಯಃ★=ಬ್ರಹ್ಮದೇವರೇ ಕಾರಣವಾಗಿವುಳ್ಳ ಎಲ್ಲ ದೇವತೆಗಳು ಆತ್ಮಾಶ್ರಿತಂ=ಜೀವರಲ್ಲಿ ಪ್ರೇರಕನಾಗಿ ಇರುವ (ತಮ್ಮವಿಷಯಕವಾದ) ತವ=ನಿನ್ನ ತತ್ತ್ವಂ=ಕರ್ಮಾನುಸಾರವಾದ ಪ್ರೇರಕತ್ವವನ್ನು ಅಧುನಾಽಪಿ=ಈಗಲೂ ಸಹ ನ ವಿದಂತಿ=ತಿಳಿಯಲಾರರೋ ಸಃ=ಅಂತಹ ಪ್ರಣತಾತ್ಮಬಂಧುಃ=ಆಶ್ರಿತರಾದ ಜೀವರಿಗೆ ಬಂಧುವಾದ ಅಯಂ=ಶ್ರೀಹರಿಯಾದ ಭವಾನ್=ನೀನು ಪ್ರಸೀದತು=ಪ್ರಸನ್ನನಾಗಲಿ.

★"ಬ್ರಹ್ಮಾ ಆದಿಃ ಕಾರಣಂ ಯೇಷಾಂ ತೇ ಬ್ರಹ್ಮಾದಯಃ" ಎಂದು ವಿಗ್ರಹ ಮಾಡಿ ಬ್ರಹ್ಮದೇವರೇ ಕಾರಣರಾಗಿ ಉಳ್ಳ ದೇವತೆಗಳು ಎಂದರ್ಥ ಮಾಡಬೇಕು. ॥೩೦॥

**ನೈತತ್ ಸ್ವರೂಪಂ ಭವತೋಽಸೌ ಪದಾರ್ಥ-**
**ಭೇದಗ್ರಹಃ ಪುರುಷೋ ಯಾವದೀಕ್ಷೇತ್ ।**
**ಜ್ಞಾನಸ್ಯ ಚಾರ್ಥಸ್ಯ ಗುಣಸ್ಯ ಚಾಶ್ರಯಾನ್**
**ಮಾಯಾಮಯಾದ್ ವ್ಯತಿರಿಕ್ತೋ ಯತಸ್ತ್ವಮ್ ॥೩೧॥**

ಪದಾರ್ಥಭೇದಗ್ರಹಃ=ಅವ್ಯಕ್ತ ಮೊದಲಾದ ಪದಾರ್ಥವಿಶೇಷಗಳನ್ನು ತಿಳಿದ ಅಸೌ ಪುರುಷಃ=ಈ ಬ್ರಹ್ಮಾದಿಗಳಲ್ಲಿ ಯಾರೊಬ್ಬ ಪುರುಷನು ಯಾವತ್=ಪ್ರಾಕೃತವಾದ ಪದಾರ್ಥಸಮೂಹವನ್ನು ಈಕ್ಷೇತ್=ನೋಡುವನೋ ಏತತ್=ಅದೆಲ್ಲವೂ ಭವತಃ=ನಿನ್ನ ಸ್ವರೂಪಂ=ಸ್ವರೂಪಭೂತವಾದ ದೇಹವು ನ=ಅಲ್ಲ ಕಿಂತು=ಆದರೆ ಜ್ಞಾನಸ್ಯ=ಜ್ಞಾನೇಂದ್ರಿಯ-ಗಳಿಗೆ ಉಪಲಕ್ಷಣಯಾ ಕರ್ಮೇಂದ್ರಿಯಗಳಿಗೆ ಅರ್ಥಸ್ಯ=ಶಬ್ದಾದಿವಿಷಯಗಳಿಗೆ ಗುಣಸ್ಯ=ಸತ್ವಾದಿಗುಣಗಳಿಗೆ ಆಶ್ರಯಾತ್=ಆಶ್ರಯವಾದ ಮಾಯಾಮಯಾತ್=

ಪ್ರಾಕೃತದೇಹದಿಂದ ತ್ವಂ=ನೀನು ವ್ಯತಿರಿಕ್ತಃ=ಭಿನ್ನನಾದವನು. ಜ್ಞಾನಾನಂದಾತ್ಮಕ ದೇಹವೇನಿದೆಯೋ ಅದು ಜ್ಞಾನಿಗಳಿಗೂ ತಿಳಿಯಲು ಅಶಕ್ಯವು ಎಂದು ಶೇಷಪೂರ್ತಿ ಮಾಡಿಕೊಂಡು ಅರ್ಥ ತಿಳಿಯಬೇಕು.

**ಭಾಗವತ ತಾತ್ಪರ್ಯ :-**

ಈ ಶ್ಲೋಕದ ಅರ್ಥ ಸರಿಯಾಗಿ ಆಗದಿರುವದರಿಂದ ಪ್ರಮಾಣದಿಂದಲೇ ಈ ಶ್ಲೋಕದ ತಾತ್ಪರ್ಯವನ್ನು ತಿಳಿಸುವರು :-

**ಅವ್ಯಕ್ತಾದಿಪದಾರ್ಥಾನಾಂ ವಿಶೇಷಜ್ಞಾನಿನಾऽಪಿ ತು ।**
**ನ ದೇಹೋ ವೈಷ್ಣವೋ ಜ್ಞೇಯ ಆನಂದಃ ಪ್ರಾಕೃತೋ ನ ಹಿ ॥ ಇತಿ ತಂತ್ರಸಾರೇ ॥**
**ಪದಾರ್ಥಭೇದಗ್ರಹಃ ಪದಾರ್ಥವಿಶೇಷಜ್ಞಃ ।**
**'ಭೇದೋऽಂತರಂ ವಿಶೇಷಶ್ಚ ಸೂಕ್ಷ್ಮೇಕ್ಷಾ ಚಾಭಿಧೀಯತೇ'' ಇತಿ ತತ್ವನಿರ್ಣಯೇ ।**

ಅವ್ಯಕ್ತ ಮೊದಲಾದ ಪದಾರ್ಥವಿಶೇಷಗಳನ್ನು ತಿಳಿದ ಜ್ಞಾನಿಯೂ ಕೂಡ ಶ್ರೀಹರಿಯ ಆನಂದಜ್ಞಾನಾತ್ಮಕ ದೇಹವನ್ನು ತಿಳಿಯಲಾರನು. ಶ್ರೀಹರಿಗೆ ಪ್ರಾಕೃತದೇಹವು ಇಲ್ಲ ಎಂದು ತಂತ್ರಸಾರದಲ್ಲಿ ಹೇಳಿದೆ.

ಪದಾರ್ಥಭೇದಗ್ರಹ ಎಂದರೆ ಪದಾರ್ಥವಿಶೇಷವನ್ನು ತಿಳಿದವನೆಂದರ್ಥ. ಭೇದ, ಅಂತರ, ವಿಶೇಷ, ಸೂಕ್ಷ್ಮಬುದ್ಧಿ ಎಲ್ಲವೂ ಭೇದಶಬ್ದದಿಂದ ಹೇಳಲ್ಪಡುವವು ಎಂದು ತತ್ವನಿರ್ಣಯದಲ್ಲಿದೆ. ॥೩೧॥

ಭಗವಂತನ ದೇಹ ಅವನಿಂದ ಅಭಿನ್ನವಾದ ಕಾರಣ ಪ್ರಾಕೃತವಲ್ಲ ಎಂಬ ಅಭಿಪ್ರಾಯದಿಂದ ಭಗವಾದಾತ್ಮಕವೆಂದು ಇಂದ್ರನ ಸ್ತುತಿವ್ಯಾಜದಿಂದ ಹೇಳುವರು (ಅನುಮಾನ ಹೇಳುವರು) :-

**ಇಂದ್ರ ಉವಾಚ -**

**ಇದಮಚ್ಯುತ ವಿಶ್ವಭಾವನಂ ವಪುರಾನಂದಕರಂ ಮನೋದೃಶಾಮ್ ।**
**ಸುರವಿದ್ವಿಟ್‌ಕ್ಷಪಣೈರುದಾಯುಧೈರ್ಭುಜದಂಡೈರುಪಪನ್ನಮಷ್ಟಭಿಃ ॥೩೨॥**

ಹೇ ಅಚ್ಯುತ=ಹೇಯೋಪಾದೇಯರಹಿತನೇ ! ಇದಂ ವಪುಃ=ಕಣ್ಣಿಗೆ ಕಾಣುವ ಈ ನಿನ್ನ ದೇಹವು ವಿಶ್ವಭಾವನಂ=ಜಗತ್ತಿಗೆ ಉತ್ಪಾದಕನಾದ ಬ್ರಹ್ಮನೇ ಎಂದರ್ಥ. ಮನೋದೃಶಾಂ=ಕಣ್ಮನಗಳಿಗೆ ಆನಂದಕರಂ=ಆನಂದದಾಯಕವು. ಸುರವಿದ್ವಿಟ್‌ಕ್ಷಪಣೈಃ ಸುರವಿದ್ವಿಟ್=ದೇವತೆಗಳ ಶತ್ರುಗಳಾದ ದೈತ್ಯರನ್ನು ಕ್ಷಪಣೈಃ=ನಾಶಮಾಡುವ

ಉದಾಯುಧೈಃ=ಆಯುಧಗಳನ್ನು ಧರಿಸಿದ ಅಷ್ಟಭಿಃ ಭುಜದಂಡೈಃ=ಎಂಟು ಕೈಗಳಿಂದ ಉಪಪನ್ನಂ=ಯುಕ್ತವಾದುದು.

ಇದರಿಂದ (ಭಗವದ್ವಪುಃ ಭಗವತಾಽಭಿನ್ನಂ ಜಗಜ್ಜನ್ಮಾದಿಕಾರಣತ್ವರೂಪ-ಲಕ್ಷಣಯುಕ್ತತ್ವಾತ್) ''ಜಗಜ್ಜನ್ಮಾದಿಕಾರಣತ್ವರೂಪವಾದ ಭಗವಂತನ ಲಕ್ಷಣವಿರುವದರಿಂದ ಭಗವಂತನ ದೇಹವು ಭಗವಂತನಿಂದ ಅಭಿನ್ನ'' ಎಂದು ಅನುಮಾನ ಮಾಡಿದಂತಾಯಿತು.

**ಯಜ್ಞಪತ್ನ್ಯ ಊಚುಃ -**

**ಯಜ್ಞೋಽಯಂ ತವ ಯಜನಾಯ ಕೇನ ಸೃಷ್ಟೋ**
**ವಿಧ್ವಸ್ತಃ ಪಶುಪತಿನಾಽದ್ಯ ದಕ್ಷಕೋಪಾತ್ ।**
**ತನ್ನಸ್ತ್ವಂ ಕುಶೇಶಯನಾಭ ಶಾಂತಮೇಧಂ**
**ಯಜ್ಞಾತ್ಮನ್ನಲಿನರುಚಾ ದೃಶಾ ಪುನೀಹಿ ॥೩೩॥**

ಹೇ ಕುಶೇಶಯನಾಭ=ಪದ್ಮನಾಭನೇ ! ಯಜ್ಞಾತ್ಮನ್=ಯಜ್ಞಸ್ವಾಮಿಯೇ ! ಅಯಂ ಯಜ್ಞಃ=ಈ ಯಜ್ಞವು ತವ=ನಿನ್ನ ಯಜನಾಯ=ಪೂಜಿಸುವದಕ್ಕಾಗಿ ಕೇನ=ದಕ್ಷಪ್ರಜಾಪತಿಯಿಂದ ಸೃಷ್ಟಃ=ಪ್ರಾರಂಭಿಸಲ್ಪಟ್ಟಿತು. ದಕ್ಷಕೋಪಾತ್=ದಕ್ಷನ ಮೇಲಿನ ಕೋಪದಿಂದ ಪಶುಪತಿನಾ=ರುದ್ರದೇವರಿಂದ ವಿಧ್ವಸ್ತಃ=ನಾಶಮಾಡಲ್ಪಟ್ಟಿತು. ಅದ್ಯ=ಈಗ ಶಾಂತಮೇಧಂ=ನಶಿಸಿಹೋದ ಯಜ್ಞೋತ್ಸವವುಳ್ಳ ತತ್=ಆ ಯಜ್ಞವನ್ನು ತ್ವಂ=ನೀನು ನಲಿನರುಚಾ=ಕಮಲದಂತೆ ಕಾಂತಿಯುಳ್ಳ ದೃಶಾ=ಕಣ್ಣುಗಳಿಂದ ಪುನೀಹಿ=ಶುದ್ಧ ಮಾಡು.

ವಿಘ್ನಗಳಿಂದ ಕೆಟ್ಟುಹೋದ ಕರ್ಮಗಳು ಶ್ರೀನಾರಾಯಣನ ಕಟಾಕ್ಷವೀಕ್ಷಣದಿಂದ ಶುದ್ಧವಾಗಿ ಪೂರ್ಣಫಲಕಾರಿ ಆಗುವವು ಎಂದು ಇದರಿಂದ ತಿಳಿಸಿದಂತಾಯಿತು. ॥೩೩॥

**ಋಷಯ ಊಚುಃ -**

**ಅನನ್ವಿತಂ ತೇ ಭಗವನ್ ವಿಚೇಷ್ಟಿತಂ**
**ಯದಾತ್ಮನಾ ಚರಸಿ ಹಿ ಕರ್ಮ ನಾಜ್ಯಸೇ ।**
**ವಿಭೂತಯೋ ಯತ ಉಪಸೇದುರೀಶ್ವರಾ-**
**ನ್ನ ಮನ್ಯತೇ ಸ್ವಯಮನುವರ್ತಿನೀಂ ಭವಾನ್ ॥೩೪॥**

ಹೇ ಭಗವನ್=ಶ್ರೀಹರಿಯೇ ! ಯದಾತ್ಮನಾ=ಯಾವ ಬೇರೆಯವರ ಸಹಾಯವಿಲ್ಲದೇ ತಾನೇ ಕರ್ಮ ಚರಸಿ=ಕ್ರಿಯೆಗಳನ್ನು ಮಾಡುವಿ. ತೇನ=ಆ ಕರ್ಮಗಳಿಂದ ನ ಆಜ್ಯಸೇ=ಲೇಪಉಳ್ಳವನಾಗುವದಿಲ್ಲ. ಯತಃ=ಯಾವ ಲಕ್ಷ್ಮೀದೇವಿಯಿಂದ ವಿಭೂತಯಃ=

ಐಶ್ವರ್ಯಗಳು ಈಶ್ವರಾನ್=ಬ್ರಹ್ಮಾದಿಗಳನ್ನು ಉಪಸೇದುಃ=ಹೊಂದಿದವೋ ಅಂತಹ ಸ್ವಯಂ ಅನುವರ್ತಿನೀಂ=ತಾನಾಗಿಯೇ ನಿನ್ನನ್ನು ಅನುಸರಿಸುವ ತಾಂ=ಅವಳನ್ನು ಭವಾನ್=ನೀನು ನ ಮನ್ಯತೇ=ಸ್ತ್ರೀಕಾಮನೆಯಿಂದ ಆದರಿಸುವದಿಲ್ಲ. ಭಕ್ತಿಯುಳ್ಳವಳೆಂದೇ ಸ್ವೀಕರಿಸುವಿ. ಅವಳೂ ಯಾವದೋ ಫಲಕ್ಕಾಗಿ ಸೇವಿಸುವಳೆಂದು ತಿಳಿಯುವದಿಲ್ಲ. ಭಕ್ತಿ ಮಾಡುವದು ಅವಳ ಸ್ವಭಾವವೆಂದೇ ತಿಳಿಯುವಿ, ಹೀಗೂ ಅರ್ಥ. ಕಾರಣ ತೇ=ನಿನ್ನ ವಿಚೇಷ್ಟಿತಂ=ವ್ಯಾಪಾರವು ಅನನ್ವಿತಂ=ಲೋಕವಿಲಕ್ಷಣವೆಂದು ಭಾವ. ।।೩೪।।

**ಸಿದ್ಧಾ ಊಚುಃ -**

**ಅಯಂ ತೇ ಕಥಾಮೃಷ್ಟಪೀಯೂಷನದ್ಯಾಂ**
**ಮನೋವಾರಣಃ ಕ್ಲೇಶದಾವಾಗ್ನಿದಗ್ಧಃ ।**
**ತೃಷಾರ್ತೋಽವಗಾಢೋ ನ ಸಸ್ಮಾರ ದಾವಂ**
**ನ ನಿಷ್ಕ್ರಾಮತಿ ಬ್ರಹ್ಮಸಂಪನ್ನ ಏವ ।।೩೫।।**

ಕ್ಲೇಶದಾವಾಗ್ನಿದಗ್ಧಃ=ಕಷ್ಟಗಳೆಂಬ ಕಾಡ್ಗಿಚ್ಚಿನಿಂದ ಸುಡಲ್ಪಟ್ಟ ತೃಷಾರ್ತಃ= ವಿಷಯಾಭಿಲಾಷೆಯಿಂದ ದುಃಖಿತವಾದ ಮನೋವಾರಣಃ=ಮನಸ್ಸೆಂಬ ಆನೆಯು ತೇ=ನಿನ್ನ ಕಥಾಮೃಷ್ಟಪೀಯೂಷನದ್ಯಾಂ=ಕಥೆಯೆಂಬ ಶುದ್ಧವಾದ ಅಮೃತನದಿಯಲ್ಲಿ ಅವಗಾಢಃ= ಪ್ರವೇಶ ಮಾಡಿದ್ದಾಗಿ ದಾವಂ=ಕಾಡ್ಗಿಚ್ಚಿಗೆ ಸಮಾನವಾದ ಸಂಸಾರದುಃಖವನ್ನು ನ ಸಸ್ಮಾರ=ಸ್ಮರಿಸುವುದಿಲ್ಲ. ಬ್ರಹ್ಮಸಂಪನ್ನ ಏವ=ಪರಮಾತ್ಮನನ್ನು ಹೊಂದಿದ ಮುಕ್ತನಂತೆ ನ ನಿಷ್ಕ್ರಾಮತಿ=ಪುನಃ ಹೊರಗೆ ಬರಲಾರದು. ।।೩೫।।

**ಯಜಮಾನ್ಯುವಾಚ -**

**ಸ್ವಾಗತಂ ತೇ ಪ್ರಸೀದೇಶ ತುಭ್ಯಂ ನಮಃ**
**ಶ್ರೀನಿವಾಸ ಶ್ರಿಯಾ ಕಾಂತಯಾ ತ್ರಾಹಿ ನಃ ।**
**ತ್ವಾಮೃತೇಽಧೀಶ ನಾಂಗೈರ್ಮಖಃ ಶೋಭತೇ**
**ಶೀರ್ಷಹೀನಃ ಕಬಂಧೋ ಯಥಾ ಪೂರುಷಃ ।।೩೬।।**

ಹೇ ಈಶ=ಎಲೋ ಸ್ವಾಮಿಯೇ ! ತೇ=ನಿನಗೆ ಸ್ವಾಗತಂ=ಶುಭಾಗಮನವು. ತುಭ್ಯಂ= ನಿನಗೆ ನಮಃ=ನಮಸ್ಕಾರವು. ತ್ವಂ ಪ್ರಸೀದ=ನೀನು ಪ್ರೀತನಾಗು. ಕಾಂತಯಾ=ಪತ್ನಿಯಾದ ಶ್ರಿಯಾ ಸಹ=ಲಕ್ಷ್ಮಿಯಿಂದೊಡಗೂಡಿ ನಃ ತ್ರಾಹಿ=ನಮ್ಮನ್ನು ರಕ್ಷಿಸು. ಅಧೀಶ=ಸ್ವಾಮಿಯೇ ! ಶೀರ್ಷಹೀನಃ=ತಲೆಯಿಲ್ಲದ ಕಬಂಧಃ=ದೇಹದಲ್ಲಿರುವ (ರುಂಡವಿಲ್ಲದ ಮುಂಡದಲ್ಲಿರುವ) ಪುರುಷಃ=ಜೀವನು ಅಂಗೈಃ=ಕೈಕಾಲುಗಳಿಂದ ಯಥಾ=ಹೇಗೆ ನ ಶೋಭತೇ=

ಶೋಭಿಸಲಾರನೋ ತಥಾ=ಹಾಗೆಯೇ ತ್ವಾಂ ಋತೇ=ನೀನಿಲ್ಲದೇ ಮಖಃ=ಯಜ್ಞವು ಅಂಗೈಃ=ಪ್ರಯಾಜಾದಿಗಳಿಂದ (ಋತ್ವಿಗಾದಿಗಳಿಂದ) ನ ಶೋಭತೇ=ಶೋಭಿಸಲಾರದು ಎಂದು ಭಾವ. ।।೩೬।।

**ಲೋಕಪಾಲಾ ಊಚುಃ -**

> **ದೃಷ್ಟಃ ಕಿಂ ನೋ ದೃಗ್ಭಿರಸದ್ಗ್ರಹೈಸ್ತ್ವಂ**
> **ಪ್ರತ್ಯಗ್ದೃಷ್ಟ್ಯಾ ದೃಶ್ಯತೇ ಯೇನ ವಿಶ್ವಮ್ ।**
> **ಮಾಯಾ ಹ್ಯೇಷಾ ಭವದೀಯಾ ಹಿ ಭೂಮನ್**
> **ಯಸ್ತ್ವಂ ಷಷ್ಠಃ ಪಂಚಭಿರ್ಭಾಸಿ ಭೂತೈಃ ।।೩೭।।**

ಯೇನ=ಯಾವ ನಿನ್ನಿಂದ ವಿಶ್ವಂ=ಪ್ರಪಂಚವು ದೃಶ್ಯತೇ=ನೋಡಲ್ಪಡುವದು ಯಚ್ಚ ತ್ವಂ=ಯಾವ ಕಾರಣ ನೀನು ಪೃಥಗ್‌ದೃಷ್ಟ್ಯಾ=ಒಳದೃಷ್ಟಿಯಿಂದ (ದಿವ್ಯದೃಷ್ಟಿಯಿಂದ) ದೃಷ್ಟಃ=ಜ್ಞಾನಿಗಳಿಂದ ನೋಡಲ್ಪಟ್ಟಿರುವಿ ತ್ವಂ=ಅಂತಹ ನೀನು ಅಸದ್ಗ್ರಹೈಃ=ಅಮಂಗಲ ವಿಷಯಗಳನ್ನು ತಿಳಿಯುವ ನಮ್ಮಿಂದ ನಃ ದೃಗ್ಭಿಃ=ನಮ್ಮ ಮಾಂಸದ ಕಣ್ಣುಗಳಿಂದ ಕಿಂ ದೃಷ್ಟಃ=ಯಾವ ಪ್ರಯೋಜನಕ್ಕಾಗಿ ಕಾಣಿಸಿದೆ ? ಯಾವ ಪ್ರಯೋಜನಕ್ಕೂ ಅಲ್ಲ, ಕೇವಲ ಅನುಗ್ರಹವಷ್ಟೇ ಎಂದು ಭಾವ. ಹೇ ಭೂಮನ್=ಪೂರ್ಣನೇ ! ಪಂಚಭಿಃ ಭೂತೈಃ= ಪಂಚಮಹಾಭೂತಗಳಿಂದ ಉಪಚಿತವಾದ ಮಾಂಸಮಯ ಇಂದ್ರಿಯಗಳಿಂದ ಷಷ್ಠಃ= ಭೌತಿಕಶರೀರವಿಲ್ಲದ ತ್ವಂ=ನೀನು ಭಾಸಿ=ತೋರುವಿ. ಇತಿ ಏಷಾ=ಎಂಬುದೇನಿದೆಯೋ ತತ್=ಅದು ಭವದೀಯಾ ಮಾಯಾ=ನಿನ್ನ ಅಘಟಿತ ಘಟಕಸಾಮರ್ಥ್ಯವೇ ಸರಿ. ಇಲ್ಲವಾದರೆ ದಿವ್ಯದೃಷ್ಟಿಗೋಚರಸ್ವಭಾವದವನಿಗೆ ಸಾಮಾನ್ಯದೃಷ್ಟಿಗೋಚರಸ್ವಭಾವತ್ವವು ಸಾಮರ್ಥ್ಯವಿಲ್ಲದೇ ನೂರಾರುಸಾಧನೆಗಳಿಂದಲೂ ಕೂಡುವುದಿಲ್ಲ ಎಂದು ಭಾವ.

**ಭಾಗವತ ತಾತ್ಪರ್ಯ :-**

ಈ ಶ್ಲೋಕದಲ್ಲಿ ಮಾಯಾಶಬ್ದಕ್ಕೆ ಅನಿರ್ವಾಚ್ಯವಾದ ಅವಿದ್ಯಾ ಎಂಬ ಅರ್ಥವು ತೋರಲು ಅವಕಾಶವಿದೆ. ಅದನ್ನು ನಿರಾಕರಿಸಿ ಪ್ರಕೃತೋಪಯುಕ್ತವಾದ ಅರ್ಥ ಹೇಳುವರು -

> **ಮಾಯಾಹ್ಯೇಷಾ ಭವದೀಯಾ । ಭಗವತ್ಸಾಮರ್ಥ್ಯಮೇವ ।**
> **ಭಗವನ್ಮಹಿಮ್ನೈವಾಸೌ ಯದೃಶ್ಯೋ ಭಗವಾನ್ ಸ್ವಯಂ'' ಇತಿ ಚ ।**

ಮೂಲದಲ್ಲಿ ಮಾಯಾಶಬ್ದಕ್ಕೆ ಸಾಮರ್ಥ್ಯವೆಂದರ್ಥ. ಹಿಶಬ್ದಕ್ಕೆ ಅವಧಾರಣ ಎಂದರ್ಥ.

ಸಮಗ್ರ ಶ್ಲೋಕದ ತಾತ್ಪರ್ಯವನ್ನು ಪ್ರಮಾಣದಿಂದ ತಿಳಿಸಿರುವರು :- ಭಗವಂತನು ಸ್ವಯಂ ಅದೃಶ್ಯಸ್ವಭಾವದವನಾದರೂ ದೃಶ್ಯನಾಗುವದು (ಕಾಣಿಸುವದು) ಅವನ ಅಘಟಿತಘಟನಸಮರ್ಥನಾದ ಭಗವಂತನ ಸಾಮರ್ಥ್ಯವೇ ಎಂದು ಭಾವ. ಇಲ್ಲವಾದರೆ ದಿವ್ಯದೃಷ್ಟಿಗೆ ಗೋಚರನಾಗುವವನು ಅಜ್ಞದೃಷ್ಟಿಗೋಚರನಾಗಲು ಹೇಗೆ ಸಾಧ್ಯ ? (ನೂರಾರುಸಾಧನೆಗಳಿಂದ ಮನುಷ್ಯನನ್ನು ಮಂಗನನ್ನಾಗಿ ಮಾಡಲು ಸಾಧ್ಯವಿಲ್ಲವಷ್ಟೇ ?)

**ಯೋಗೇಶ್ವರಾ ಊಚುಃ -**

**ಪ್ರೇಯಾನ್ನ ತೇಽನ್ಯೋಽಸ್ತ್ಯಮೃತಪ್ರಿಯ ಪ್ರಭೋ**
**ವಿಶ್ವಾತ್ಮನೀಕ್ಷೇನ್ನ ಪೃಥಗ್ಗ್ ಯ ಆತ್ಮನಃ ।**
**ಅಥಾಪಿ ಭೃತ್ಯೇಶ ತಯೋಪಧಾವತಾ-**
**ಮನನ್ಯವೃತ್ತ್ಯಾಽನುಗೃಹಾಣ ವತ್ಸಲ ॥೩೮॥**

**ಯಾದವಾರ್ಯರ ಪ್ರಕಾರ :-**

ಅಮೃತಪ್ರಿಯ=ಮುಕ್ತಪ್ರಿಯನೇ ! ಪ್ರಭೋ=ಸಮರ್ಥನಾದ ವಿಷ್ಣುವೇ ! ಯಃ=ಯಾವ ಜೀವನು ವಿಶ್ವಾತ್ಮನಿ=ಜಗದಂತರ್ಯಾಮಿಯಾದ ನಿನ್ನಲ್ಲಿ ಪೃಥಕ್=ಪೃಥಕ್ತ್ವವನ್ನು (ಅನ್ಯಥಾತ್ವವನ್ನು) ನೇಕ್ಷೇತ್=ತಿಳಿಯಲಾರನು ಅಂದರೆ ಸುರ-ನರ-ತಿರ್ಯಕ್ ಮುಂತಾದ ಜೀವರಾಶಿಗಳಲ್ಲಿ ಪ್ರೇರಕನಾಗಿರುವ ನಿನ್ನ ರೂಪಗಳಿಗೆ ಗುಣಗಳಿಗೆ ಅಣುಮಾತ್ರ ಭೇದವನ್ನೂ ತಿಳಿಯಲಾರನೆಂದರ್ಥ. ಆತ್ಮನಃ=ಅಂತಹ ಜೀವನಿಂದ ಅನ್ಯಃ=ಬೇರೆಯಾದವನು (ಅಂತಹ ಜೀವನನ್ನು ಬಿಟ್ಟು ಉಳಿದವನು) ತೇ=ನಿನಗೆ ಪ್ರೇಯಾನ್=ಪ್ರಿಯತಮನು ನ=ಇರುವದಿಲ್ಲ. ಹೇ ಭೃತ್ಯೇಶ=ದಾಸರಾದ ನಮ್ಮೆಲ್ಲರಿಗೆ ಒಡೆಯನಾದವನೇ ! ವತ್ಸಲ=ಭಕ್ತವತ್ಸಲನೇ ! ತಯಾ=''ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂವಿಧೋಽರ್ಜುನ'' ಎಂದು ಪ್ರಸಿದ್ಧವಾದ ಅನನ್ಯವೃತ್ತ್ಯಾ=ಅನನ್ಯಭಕ್ತಿಯಿಂದ ಉಪಧಾವತಾಂ=ಸೇವೆ ಮಾಡುವ ನಮ್ಮ ಮೇಲೆ ಅನುಗ್ರಹವಿದ್ದೇ ಇದೆ, ಅಥಾಪಿ=ಆದರೂ ಪುನಃ ಅನುಗೃಹಾಣ=ಮತ್ತೆ ವಿಶೇಷ ಅನುಗ್ರಹ ಮಾಡು.

**ವಿಜಯಧ್ವಜರ ಪ್ರಕಾರ -**

ಹೇ ಅಮೃತಪ್ರಿಯ=ಮುಕ್ತಪ್ರಿಯನೇ ! ಪ್ರಭೋ=ಪರಮಸಮರ್ಥನೇ ! ವಿಶ್ವಾತ್ಮನಿ=ಸರ್ವಸ್ವಾಮಿಯಾದ ತ್ವಯಿ=ನಿನ್ನಲ್ಲಿ ಸ್ಥಿತಾನ್=ಇರುವ ಆತ್ಮನಃ=ಜೀವರನ್ನು ವಾಸ್ತವಿಕವಾಗಿ ಆಶ್ರಯ-ಆಶ್ರಿತಭಾವ ಸಂಬಂಧವಿರುವದರಿಂದ ನಿನ್ನಿಂದಲೂ ಪರಸ್ಪರವಾಗಿಯೂ ಭಿನ್ನರಾದ ಜೀವರನ್ನು ಯಃ=ಯಾವ ಅಧಿಕಾರಿಯು ಪೃಥಕ್=ಅನ್ಯಥಾ

ಅಭಿನ್ನರೆಂದು (ಸ್ವರೂಪಾಪೇಕ್ಷಯಾ) ನೇಕ್ಷೇತ್=ತಿಳಿಯಲಾರನು. ಕಿಂತು ನ ಪೃಥಕ್ ಅನನ್ಯಯಾ=ಭಿನ್ನವೆಂದೇ ಪಶ್ಯತಿ=ತಿಳಿಯುವನೋ ತಸ್ಮಾದನ್ಯಃ=ಅವನಿಂದ ಭಿನ್ನನಾದವನು (ಅವನನ್ನು ಬಿಟ್ಟು ಉಳಿದವನು) ತೇ=ನಿನಗೆ ಪ್ರೇಯಾನ್=ಅತಿಶಯಪ್ರಿಯನು ನ=ಇರುವದಿಲ್ಲ. ಅಥಾಪಿ=ಈ ರೀತಿಯಾಗಿ ಜ್ಞಾನಿಗಳಾದ ನಾವು ನಿನಗೆ ಪ್ರಿಯರಾಗಿದ್ದರೂ ಹೇ ಭೃತ್ಯೇಶ=ಸೇವಕರಿಗೆ ಸ್ವಾಮಿಯಾದವನೇ ! ವತ್ಸಲ=ಭಕ್ತಪ್ರಿಯನೇ ! ತಯಾ=ಹಿಂದೆ ಹೇಳಿದ ಅನನ್ಯವೃತ್ಯಾ=ಯಥಾರ್ಥಜ್ಞಾನದಿಂದ ಉಪಧಾವತಾಂ=ಸೇವಿಸುವ ನಮಗೆ ಅನುಗೃಹಾಣ=ಹೆಚ್ಚಿನ ಸುಖಕ್ಕಾಗಿ ಅನುಗ್ರಹ ಮಾಡು.

**ಭಾಗವತ ತಾತ್ಪರ್ಯ :-**

ಮೇಲಿನ ಶ್ಲೋಕದಲ್ಲಿ ''ಆತ್ಮನಃ=ಜೀವರನ್ನು ಪೃಥಕ್ ನೇಕ್ಷೇತ್=ಭಿನ್ನವೆಂದು ತಿಳಿಯಬಾರದು. ತಸ್ಮಾದನ್ಯಃ=ಅಭೇದಜ್ಞಾನಿಯನ್ನು ಬಿಟ್ಟು ಬೇರೆಯವನು ತೇ ಪ್ರೇಯಾನ್ ನ=ನಿನಗೆ ಪ್ರಿಯನಾದವನು ಇಲ್ಲ'' ಎಂದು ವಿಪರೀತ ಅರ್ಥವಾಗುವದನ್ನು ಪರಿಹರಿಸಲು ಪೃಥಕ್ ಎಂಬುದಕ್ಕೆ ಅನ್ಯಥಾ ಎಂಬ ಅರ್ಥವನ್ನು, ನೇಕ್ಷೇತ್=ಎಂಬುದರೊಡನೆ ಅನ್ವಯವನ್ನು, ಲಙ್‌ಗೆ ಲಟ್ ಅರ್ಥವನ್ನು ತಿಳಿಸುವರು -

**''ನ ಪೃಥಕ್ ಯಃ ಆತ್ಮನಃ । ಅನ್ಯಥಾ ಯೋ ನ ಪಶ್ಯತಿ ।''**

ಅನ್ಯಥಾ ಅಂದರೆ ಜ್ಞೇಯವಾದ ವಸ್ತುವಿನ ಸ್ವರೂಪದ ವಿರುದ್ಧವಾದ ರೀತಿಯಿಂದ ಎಂದರ್ಥ. ಇಲ್ಲಿ ಆತ್ಮನಃ ಎನ್ನುವುದು ಅನುವಾದವಾಗಿದೆ. ಆತ್ಮನಃ ಎಂದು ಬಹುವಚನದಿಂದ, ಮತ್ತು ಯಃ=ಯಾವನು (ಕರ್ತೃವಾಚಕಪದ) ಆತ್ಮನಃ=ಜೀವರನ್ನು (ಕರ್ಮವಾಚಕಪದ) ಎಂದು ಕರ್ತೃಕರ್ಮಭಾವವನ್ನು ಹೇಳಿದ್ದರಿಂದ ಭೇದವೇ ಪ್ರಾಪ್ತವಾಗುತ್ತದೆ. ಹೀಗಾಗಿ ಪ್ರಕೃತ ಅಭೇದಜ್ಞಾನಿಯನ್ನು ವಿವಕ್ಷಿಸಿದರೆ ಜ್ಞಾನ-ಜ್ಞೇಯಗಳಿಗೆ ವಿರೋಧ ಬರುವದು ಎಂಬ ಬಾಧಕ ತಿಳಿಸಲು ''ಜ್ಞೇಯವಿರುದ್ಧಪ್ರಕಾರವಾಗಿ ತಿಳಿಯುವ (ವಿಷಯೀಕರಿಸುವ) ಜ್ಞಾನ ಅನ್ಯಥಾಜ್ಞಾನ'' ಎಂದು ಹೇಳಬೇಕು ಎಂಬ ವಿಷಯದಲ್ಲಿ ಪ್ರಮಾಣ ತಿಳಿಸುವರು -

**ಪೃಥಗ್‌ಜ್ಞಾನಂ ತದಿತ್ಯಾಹುರ್ಯತ್ಕಿಂಚಿದ್ವೀಕ್ಷ್ಯತೇ ಅನ್ಯಥಾ ।**
**ಜ್ಞಾನಜ್ಞೇಯಾವಿರೋಧೇನ ತ್ವಪೃಥಗ್ವಸ್ತುನೋ ದೃಶಿಃ ॥**

ಯಾವ ವಸ್ತು ಹೇಗಿದೆ ಅದನ್ನು ಹಾಗೇ ತಿಳಿಯದೇ ಅದರಲ್ಲಿ ಇಲ್ಲದಿರುವ ಧರ್ಮದಿಂದ ಕೂಡಿದ್ದೆಂದು ತಿಳಿಯುವುದೇನಿದೆ ಅದನ್ನು ಪೃಥಗ್‌ಜ್ಞಾನವೆನ್ನುವರು. ವಸ್ತು ಹೇಗಿದೆ ಅದನ್ನು ಹಾಗೆಯೇ (ಅದರಲ್ಲಿರುವ ಧರ್ಮದಿಂದ ಕೂಡಿದ್ದೆಂದು) ತಿಳಿಯುವದು

ಅಪೃಥಗ್ಜ್ಞಾನ, ಅಂದರೆ ಯಥಾರ್ಥಜ್ಞಾನವೆನಿಸುವದು. ಆದ್ದರಿಂದ ಪ್ರಕೃತ ನ ಪೃಥಕ್ ಅಂದರೆ ಅನ್ಯಥಾ ತಿಳಿಯದೇ ವಸ್ತುತತ್ವಾನುಸಾರವಾಗಿ ಯಾವನು ತಿಳಿಯುವವನು ಎಂದು ಮೂಲವನ್ನು ಯೋಜಿಸಬೇಕು ಎಂದು ಸೂಚಿತವಾಗುವದು.

ಮೇಲ್ನೋಟಕ್ಕೆ ಕಾಣುವ ಅಭೇದಜ್ಞಾನವು ನಿಂದಿತವಾದದ್ದರಿಂದ ಅದು ಇಲ್ಲಿ ಅಭಿಪ್ರೇತವಲ್ಲ ಎಂಬ ಅಭಿಪ್ರಾಯದಿಂದ ಅದನ್ನು ನಿಂದಿಸುವರು -

**ಕೇಚಿದ್ಭೇದಂ ವಿನಿಂದಂತಿ ಹ್ಯಾಸುರಜ್ಞಾನವೃತ್ತಯಃ ।**
**ನಿರಾಕುರ್ವಂತ್ಯಥೋ ಮಂದಾ ಭೇದಸ್ಯ ಪರಮಾರ್ಥತಾಂ ॥**

ಕೆಲವರು ಭೇದವನ್ನು ನಿಂದಿಸುವರು ಅರ್ಥಾತ್ ಭೇದವು ಇಲ್ಲವೆಂದೇ ಹೇಳುವರು. ಅವರು ಅಸುರಸಂಬಂಧಿಯಾದ ಜ್ಞಾನಸ್ವಭಾವವುಳ್ಳವರು. ಅವರಿಗಿಂತ ನೀಚರಾದವರು ಭೇದಕ್ಕೆ ಪಾರಮಾರ್ಥಿಕಸತ್ತ್ವವನ್ನು ನಿರಾಕರಿಸುವರು.

ಈ ವಾಕ್ಯಕ್ಕೆ ಪಾರಮಾರ್ಥಿಕಭೇದಪರತ್ವವನ್ನೇ ಹೇಳಬೇಕು ಎಂಬ ಅಭಿಪ್ರಾಯದಿಂದ ಸ್ತುತಿಸುವರು :-

**ಯೇ ತು ತತ್ತ್ವವಿದೋ ಮುಖ್ಯಾ ಭೇದಂ ಬ್ರಹ್ಮಾನ್ಯವಸ್ತುನೋಃ ।**
**ಪರಮಾರ್ಥಮಿತಿ ಜ್ಞಾತ್ವಾ ನಿತ್ಯಂ ವಿಷ್ಣುಮುಪಾಸತೇ ॥ ಇತಿ ಗಾರುಡೇ ॥**

ತತ್ತ್ವಜ್ಞಾನಿಗಳಾದ ಯಾರು ಬ್ರಹ್ಮನಿಗೂ ಬೇರೆ ವಸ್ತುಗಳಿಗೂ ಪಾರಮಾರ್ಥಿಕಭೇದವನ್ನು ತಿಳಿದು, ವಿಷ್ಣುವನ್ನು ಎಲ್ಲರಿಂದ ಭಿನ್ನನೆಂದು ಉಪಾಸಿಸುವರೋ ಅವರು ಮುಖ್ಯರು ಎಂದು ಗರುಡಪುರಾಣದಲ್ಲಿದೆ.

ಮೂಲದಲ್ಲಿ ದ್ವಿತೀಯಾರ್ಧದಲ್ಲಿ ''ಅಥಾಪಿ=ಭೇದವಿಲ್ಲದಿದ್ದರೂ ಭೃತ್ಯೇಶತಯಾ= ಸ್ವಾಮಿಭೃತ್ಯಭಾವದಿಂದ ಸೇವಿಸುವ'' ಎಂದು ವಿಪರೀತವಾಗಿ ತೋರುವ ಅರ್ಥವನ್ನು ನಿರಾಕರಿಸಲು ಅಲ್ಲಿ ಅಭಿಪ್ರೇತವಾದ ಪದಚ್ಛೇದ ತಿಳಿಸುವರು -

**ಹೇ ಭೃತ್ಯೇಶ । ತಯಾಽನನ್ಯವೃತ್ತ್ಯಾ ಉಪಧಾವತಾಂ ಅಸ್ಮಾಕಂ ಅನುಗ್ರಹೋಽಸ್ತ್ಯೇವ । ತಥಾಪಿ ಪುನಃ ಅನುಗೃಹಾಣ ।**

ಭೃತ್ಯರಿಗೆ ಒಡೆಯನೇ ! ಪೂರ್ವೋಕ್ತವಾದ ಯಥಾರ್ಥಜ್ಞಾನದಿಂದ ಸೇವಿಸುವ ನಮ್ಮ ಮೇಲೆ ಅನುಗ್ರಹ ಇದ್ದೇ ಇದೆ. ಆದರೂ ಮತ್ತೆ ಅನುಗ್ರಹಿಸು ಎಂದು ಭಾವ.

ಮತ್ತೆ ಅನುಗ್ರಹ ಮಾಡುವುದು ವ್ಯರ್ಥ ಎಂಬ ಶಂಕೆಗೆ ಉತ್ತರಿಸಲು ಸಂಪೂರ್ಣ ಶ್ಲೋಕತಾತ್ಪರ್ಯವನ್ನು ಪ್ರಮಾಣದಿಂದ ತಿಳಿಸುವರು -

**ಯಥಾರ್ಥಜ್ಞಾನಿನೋ ನಾನ್ಯಃ ಪ್ರಿಯೋ ವಿಷ್ಣೋಸ್ತು ಕಶ್ಚನ ।**
**ತಥಾಪ್ಯಧಿಕಸಂತುಷ್ಟ್ಯೈ ಪ್ರಸೀದೇತ್ಯರ್ಥನಂ ಪುನಃ ॥ ಇತಿ ಚ ॥**

ಶ್ರೀಹರಿಗೆ ಯಥಾರ್ಥಜ್ಞಾನಿಗಳ ಹೊರತು ಬೇರೆ ಯಾರೂ ಪ್ರಿಯರಲ್ಲ. ಆದರೂ ಹೆಚ್ಚಿನ ಸುಖಕ್ಕಾಗಿ ಅನುಗ್ರಹ ಮಾಡು ಎಂದು ಪ್ರಾರ್ಥಿಸುವದು ಎಂಬುದಾಗಿ ಗರುಡಪುರಾಣದಲ್ಲಿದೆ. ॥೩೮॥

ಹಿಂದೆ ಹೇಳಿದ ಪ್ರಪಂಚದ ಒಡೆತನವನ್ನು ಪ್ರಕಟಿಸುತ್ತ ಹೇಳುವರು -

**ಜಗದುದ್ಭವಸ್ಥಿತಿಲಯೇಷು ಲೀಲಯಾ**
**ಪ್ರವಿಭಜ್ಯಮಾನಗುಣಯಾಽತ್ಮಮಾಯಯಾ ।**
**ರಚಿತಾತ್ಮಭೇದಮತಯೇ ಸ್ವಸಂಸ್ಥಯಾ**
**ಹ್ಯತಿವರ್ತಿತಭ್ರಮಗುಣಾತ್ಮನೇ ನಮಃ ॥೩೯॥**

ಜಗದುದ್ಭವಸ್ಥಿತಿಲಯೇಷು=ಜಗತ್ತಿನ ಸೃಷ್ಟಿಗೆ ರಜೋಗುಣ, ಸ್ಥಿತಿಗೆ ಸತ್ವಗುಣ, ಸಂಹಾರಕ್ಕೆ ತಮೋಗುಣ ಈ ರೀತಿಯಾಗಿ ಪ್ರವಿಭಜ್ಯಮಾನಗುಣಯಾ=ವಿಭಾಗಿಸಲ್ಪಟ್ಟ ಸತ್ವಾದಿಗುಣಗಳುಳ್ಳ ಆತ್ಮಮಾಯಯಾ=ತನ್ನ ಅಧೀನವಾದ ಜಡಪ್ರಕೃತಿಯಿಂದ ರಚಿತಾತ್ಮಭೇದಮತಯೇ=ಜೀವರುಗಳಿಗೆ ಮಿಥ್ಯಾಜ್ಞಾನವನ್ನುಂಟುಮಾಡಿದ ಸ್ವಸಂಸ್ಥಯಾ=ತನ್ನ ಸಾಮರ್ಥ್ಯದಿಂದಲೇ ಅತಿವರ್ತಿತಭ್ರಮಗುಣಾತ್ಮನೇ ಅತಿವರ್ತಿತ=ದೂರೀಕರಿಸಲ್ಪಟ್ಟ ಭ್ರಮ=ಮಿಥ್ಯಾಜ್ಞಾನ ಗುಣ=ಸತ್ವಾದಿಗಳುಳ್ಳ ಹಾಗೂ ಆತ್ಮನೇ=ಸ್ವಾಮಿಯಾದ ಶ್ರೀಹರಿಗೆ ನಮಃ=ನಮಸ್ಕಾರವು.

**ಭಾಗವತ ತಾತ್ಪರ್ಯ :-**

ಈ ಶ್ಲೋಕಕ್ಕೆ ಇದೇರೀತಿ ವ್ಯಾಖ್ಯಾನಿಸಬೇಕು ಎಂದು ತಿಳಿಸಲು ಆಚಾರ್ಯರು ಸಮಾಖ್ಯಾಪ್ರಮಾಣವನ್ನು ಉದಾಹರಿಸುವರು -

**ಪ್ರಕೃತ್ಯಾ ಜಡಯಾ ಮಿಥ್ಯಾಜ್ಞಾನಂ ಜನಯತೀಶ್ವರಃ ।**
**ತಸ್ಯ ಭ್ರಮಶ್ಚ ಸತ್ವಾದ್ಯಾ ನ ಸಂತಿ ಪರಮೇಶಿತುಃ ॥ ಇತಿ ಚ ॥**

ಶ್ರೀಹರಿಯು ಜಡಪ್ರಕೃತಿಯಿಂದ ಜೀವರಿಗೆ ಮಿಥ್ಯಾಜ್ಞಾನವನ್ನು ಹುಟ್ಟಿಸುವನು. ಆದರೆ ಸರ್ವೇಶ್ವರನಾದ ಅವನಿಗೆ ಭ್ರಮವಾಗಲೀ, ಸತ್ವಾದಿಗುಣಗಳಾಗಲೀ ಇರುವದಿಲ್ಲ. ॥೩೯॥

**ಬ್ರಹ್ಮೋವಾಚ-**

**ನಮಸ್ತೇಽಮಿತತತ್ತ್ವಾಯ ಧರ್ಮಾದೀನಾಂ ಚ ಸೂತಯೇ ।**
**ನಿರ್ಗುಣಾಯ ಚ ಯತ್ಕಾಷ್ಠಾಂ ನಾಹಂ ವೇದಾಪರೇ ಕುತಃ ॥೪೦॥**

ಅಮಿತತತ್ತ್ವಾಯ=ಅಪರಿಮಿತವಾದ ಸ್ವರೂಪ ಉಳ್ಳ, ಧರ್ಮಾದೀನಾಂ=ಯಮ ಮೊದಲಾದ ದೇವತೆಗಳಿಗೆ ಚ=ಮತ್ತು ನಮ್ಮಗಳಿಗೆ ಸೂತಯೇ=ಉತ್ಪಾದಕನಾದ, ನಿರ್ಗುಣಾಯ=ಸತ್ವಾದಿಗುಣಬದ್ಧನಾಗದ ತೇ=ನಿನಗೆ ನಮಃ=ನಮಸ್ಕಾರವು. ಯತ್ಕಾಷ್ಠಾಂ=ಯಾವನ ಉತ್ಕರ್ಷವನ್ನು ಅಹಂ ನ ವೇದ=ನಾನೇ ತಿಳಿದಿಲ್ಲ! ಇನ್ನು ಅಪರೇ ಕುತಃ=ನನಗಿಂತ ಚಿಕ್ಕವರು ಹೇಗೆ ತಿಳಿದಾರು?

ಹೇ ಅಮಿತ=ಎಲೋ ಅನಂತನೇ ! ತತ್ತ್ವಾಯ=ಅನಾರೋಪಿತ ಸ್ವರೂಪನಾದ ನಿನಗೆ ನಮಃ=ನಮಸ್ಕಾರ ಹೀಗೂ ಅನ್ವಯಾರ್ಥ ಮಾಡಬಹುದು. ।।೪೦।।

ನಾನು ನಿನ್ನ ಅಧೀನನಾಗಿ ಕಾರ್ಯವನ್ನು ಮಾಡುವೆನು ಎಂಬುದಾಗಿ ಅಗ್ನಿಯು ಸ್ತುತಿಸುವನು -

**ಅಗ್ನಿರುವಾಚ -**

**ಯತ್ತೇಜಸಾಽಹಂ ಸುಸಮಿದ್ಧತೇಜಾ**
**ಹವ್ಯಂ ವಹಾಮ್ಯಧ್ವರ ಆಜ್ಯಸಿಕ್ತಮ್ ।**
**ತಂ ಯಜ್ಞಿಯಂ ಪಂಚವಿಧಂ ಚ ಪಂಚಭಿಃ**
**ಸ್ವಿಷ್ಟಂ ಯಜುರ್ಭಿಃ ಪ್ರಣತೋಽಸ್ಮಿ ಯಜ್ಞಮ್ ।।೪೧।।**

ಯತ್ತೇಜಸಾ=ಯಾವ ನಿನ್ನ ಸಾಮರ್ಥ್ಯದಿಂದ ಸುಸಮಿದ್ಧತೇಜಾಃ=ಪೂಜ್ಯವೆಂದು ಚೆನ್ನಾಗಿ ಪ್ರವೃದ್ಧವಾದ ಬಲವುಳ್ಳ ಅಹಂ=ನಾನು (ಅಗ್ನಿಯು) ಅಧ್ವರೇ=ಯಜ್ಞದಲ್ಲಿ ಕೊಡುವ ಆಜ್ಯಸಿಕ್ತಂ=ತುಪ್ಪದಿಂದ ಕೂಡಿದ ಹವ್ಯಂ=ಹವಿಸ್ಸನ್ನು ವಹಾಮಿ=ಕೊಂಡೊಯ್ದು ದೇವತೆಗಳಿಗೆ ವಿಭಾಗ ಮಾಡಿ ಅರ್ಪಿಸುವೆನೋ ತಂ=ಅಂತಹ, ಪಂಚಭಿಃ ಯಜುರ್ಭಿಃ=ಯಜುರ್ವೇದ-ದಲ್ಲಿರುವ ಐದು ಮಂತ್ರಗಳಿಂದ ಸ್ವಿಷ್ಟಂ=ಚೆನ್ನಾಗಿ ಪೂಜಿತನಾದ, ಪಂಚವಿಧಂ=ಐದು ರೀತಿಗಳಲ್ಲಿ ವಿಭಕ್ತವಾದ ವಿಗ್ರಹವುಳ್ಳ (ಯಜ್ಞ-ಯಜ್ಞಪುರುಷ-ಯಜ್ಞೇಶ-ಯಜ್ಞಭಾವನ-ಯಜ್ಞಭುಕ್ ಎಂಬುದಾಗಿ ಐದುವಿಧನಾದ) ಯಜ್ಞಿಯಂ=ಯಜ್ಞನಿಯಾಮಕನಾದ ಆದ್ದರಿಂದಲೇ ಯಜ್ಞಂ=ಯಜ್ಞನೆಂದು ಕರೆಸಿಕೊಳ್ಳುವ ಶ್ರೀಹರಿಯನ್ನು ಪ್ರಣತೋಽಸ್ಮಿ=ನಮಸ್ಕಾರ ಮಾಡುವೆನು.

**ಭಾಗವತ ತಾತ್ಪರ್ಯ :-**

ಭಗವಂತನಿಗೆ ಇಲ್ಲಿ ಹೇಳಿದ ಪಂಚವಿಧತೆಯನ್ನು ಪ್ರಮಾಣದಿಂದ ತಿಳಿಸುವರು -

**ಯಜ್ಞೋ ಯಜ್ಞಪುಮಾಂಶ್ಚೈವ ಯಜ್ಞೇಶೋ ಯಜ್ಞಭಾವನಃ ।**
**ಯಜ್ಞಭುಕ್ ಚೇತಿ ಪಂಚಾತ್ಮಾ ಯಜ್ಞೇಷ್ವಿಜ್ಯೋ ಹರಿಃ ಸ್ವಯಂ ।।**

ಐದು ಯಜುರ್ಮಂತ್ರಗಳನ್ನು ತಿಳಿಸುವರು -

**ಆಶ್ರಾವಯಾಸ್ತುಶ್ರೌಷಡ್ಯಜಾಥೋ ಯೇಯಜಾಮಹೇ ।**
**ವಷಟ್ಕಾರಾಂತಕೈರ್ನಿತ್ಯಂ ಯಜುರ್ಭಿಃ ಪಂಚಭಿರ್ವಿಭುಃ ।। ಇತಿ ತಂತ್ರಸಾರೇ ।।**

ಯಜ್ಞ, ಯಜ್ಞಪುರುಷ, ಯಜ್ಞೇಶ, ಯಜ್ಞಭಾವನ, ಯಜ್ಞಭುಕ್ ಹೀಗೆ ಐದುರೂಪಗಳಿಂದ ಯಜ್ಞದಲ್ಲಿ ಶ್ರೀಹರಿಯು ಪೂಜ್ಯನು. ಅಸ್ತುಶ್ರೌಷಟ್, ಆಶ್ರಾವಯ, ಯಜಯೇ ಯಜಾಮಹೇ, ವೌಷಟ್ ಈ ರೀತಿ ವಷಟ್ ಎಂಬ ಮಂತ್ರವೇ ಕೊನೆಯಲ್ಲಿ ಉಳ್ಳ ಯಜುರ್ವೇದದಲ್ಲಿರುವ ಐದು ಮಂತ್ರಗಳಿಂದ ಪೂಜಿತನು ಎಂದು ಭಾವ. ಇದೇ ರೀತಿ ಶ್ರುತಿಯುಂಟು -

''ಆಶ್ರಾವಯೇತಿ ಚತುರಕ್ಷರಂ । ಅಸ್ತುಶ್ರೌಷಟ್ ಇತಿ ಚತುರಕ್ಷರಂ । ಯಜೇತಿ ದ್ವ್ಯಕ್ಷರಂ । ಯೇಯಜಾಮಹೇ ಇತಿ ಪಂಚಾಕ್ಷರಂ । ದ್ವ್ಯಕ್ಷರೋ ವಷಟ್‌ಕಾರಃ'' ।

ಸ್ಮೃತಿಯೂ ಉಂಟು -

**''ಚತುರ್ಭಿಶ್ಚ ಚತುರ್ಭಿಶ್ಚ ದ್ವಾಭ್ಯಾಂ ಪಂಚಭಿರೇವ ಚ ।**
**ಹೂಯತೇ ಚ ಪುನರ್ದ್ವಾಭ್ಯಾಂ ....................।।''**

ಎಂದು. ಆಶ್ರಾವಯ ಎಂಬುವುದು ನಾಲ್ಕಕ್ಷರದ ಮಂತ್ರ. ಅಸ್ತುಶ್ರೌಷಟ್ ಎಂಬುವುದು ನಾಲ್ಕಕ್ಷರದ್ದು. ಜಯ ಎಂಬುವುದು ಎರಡಕ್ಷರದ್ದು. ಯೇಯಜಾಮಹೇ ಎಂಬುವುದು ಐದಕ್ಷರದ್ದು. ವಷಟ್ ಎಂಬುವುದು ಎರಡಕ್ಷರದ್ದು. ಹೀಗೆ ನಾಲ್ಕಕ್ಷರದ ಎರಡು ಮಂತ್ರ, ಎರಡಕ್ಷರದ ಎರಡುಮಂತ್ರ, ಐದಕ್ಷರದ ಒಂದು ಮಂತ್ರ. ಈ ರೀತಿಯಾಗಿ ಐದು ಮಂತ್ರಗಳಿಂದ ಶ್ರೀಹರಿಯು ಹೋಮಿಸಲ್ಪಡುವನು ಎಂದು ಶ್ರುತಿಸ್ಮೃತಿಗಳ ಭಾವ. ।।೪೧।।

**ದೇವಾ ಊಚುಃ -**

**ಪುರಾ ಕಲ್ಪಾಪಾಯೇ ಸ್ವಕೃತಮುದರೀಕೃತ್ಯ ವಿಕೃತಂ**
**ತ್ವಮೇವಾದ್ಯಸ್ತಸ್ಮಿನ್ ಸಲಿಲ ಉರಗೇಂದ್ರಾಧಿಶಯನೇ ।**
**ಪುಮಾನ್ ಶೇಷೇ ಸಿದ್ಧೈರ್ಹೃದಿ ವಿಮೃಶಿತಾಧ್ಯಾತ್ಮಪದವಿಃ**
**ಸ ಏವಾದ್ಯಾಕ್ಷ್ಣೋರ್ಯಃ ಪಥಿ ಚರಸಿ ಭೃತ್ಯಾನವಸಿ ಚ ।।೪೨।।**

ಪುರಾ=ಹಿಂದೆ ಕಲ್ಪಾಪಾಯೇ=ಬ್ರಹ್ಮಕಲ್ಪವು ಮುಗಿದಾಗ ಅರ್ಥಾತ್ ಪ್ರಲಯಕಾಲದಲ್ಲಿ ಸ್ವಕೃತಂ=ನಿನ್ನಿಂದ ನಿರ್ಮಿತವಾದ ವಿಕೃತಂ=ಎಲ್ಲ ಕಾರ್ಯಪ್ರಪಂಚವನ್ನು ಉದರೀಕೃತ್ಯ= ಹೊಟ್ಟೆಯಲ್ಲಿರಿಸಿಕೊಂಡು ತಸ್ಮಿನ್ ಸಲಿಲೇ=ಅಂತಹ ಪ್ರಸಿದ್ಧವಾದ ಬ್ರಹ್ಮಾಂಡೋದಕದಲ್ಲಿ

ಉ.ರಗೇಂದ್ರಾಧಿಶಯನೇ=ಶೇಷನೆಂಬ ಶ್ರೇಷ್ಠವಾದ ಹಾಸಿಗೆಯಲ್ಲಿ ಸಿದ್ಧೈಃ=ಮುಕ್ತರಿಂದ ಅಥವಾ ಜನಲೋಕವಾಸಿಗಳಾದ ಸನಕಾದಿ ಜ್ಞಾನಿಗಳಿಂದ ಹೃದಿ=ಹೃದಯದಲ್ಲಿ ವಿಮೃಶಿತಾಧ್ಯಾತ್ಮಪದವಿಃ=ವಿಚಾರಿತವಾದ ಪರಮಾತ್ಮನ ಪದವಿಯುಳ್ಳ (ಜ್ಞಾನಮಾರ್ಗವುಳ್ಳ) ತ್ವಮೇವ=ನೀನೇ ಪುಮಾನ್=ಪುರುಷರೂಪಿಯಾಗಿ ಅದ್ಯ=ಈಗ ಶೇಷೇ=ಮಲಗಿರುವಿ. ಸಃ ಏವ=ಅದೇ ನೀನು ಅದ್ಯ=ಈಗ ನಃ=ನಮ್ಮ ಅಕ್ಷ್ಣೋಃ ಪಥಿ ಚರಸಿ=ಕಣ್ಣಿಗೆ ಕಾಣುವಂತೆ ಸಂಚರಿಸುವಿ. ಭೃತ್ಯಾನ್=ಸೇವಕರಾದ ನಮ್ಮನ್ನು ಅವಸಿ=ರಕ್ಷಿಸುವಿ. ಹೊರತು ಬೇರೆ ಪ್ರಯೋಜನವೇನೂ ಇಲ್ಲ. ॥೪೨॥

**ಗಂಧರ್ವಾ ಊಚುಃ -**

**ಆಶಾಸಾನಾ ದೇವ ಮರೀಚ್ಯಾದಯ ಏತೇ**
**ಬ್ರಹ್ಮೇಂದ್ರಾದ್ಯಾ ದೇವಗಣಾ ರುದ್ರಪುರೋಗಾಃ ।**
**ಕ್ರೀಡಾಭಾಂಡಂ ವಿಶ್ವಮಿದಂ ಯಸ್ಯ ವಿಭೂಮ್ನ-**
**ಸ್ತಸ್ಮೈ ನಿತ್ಯಂ ನಾಥ ನಮಸ್ತೇ ಕರವಾಮಃ ॥೪೩॥**

ನಾಥ=ಸ್ವಾಮಿಯಾದ ಹೇ ದೇವ=ಎಲೋ ಪರಮಾತ್ಮನೇ ! ಆಶಾಸಾನಾಃ= ಫಲಾಪೇಕ್ಷಿಗಳಾದ ಮರೀಚ್ಯಾದಯಃ=ಮರೀಚಿ ಮುಂತಾದ ಋಷಿಗಳು, ಬ್ರಹ್ಮೇಂದ್ರಾದ್ಯಾಃ ದೇವಗಣಾಃ=ಬ್ರಹ್ಮ ಇಂದ್ರ ಮುಂತಾದ ದೇವತೆಗಳ ಸಮೂಹಗಳು, ರುದ್ರಪುರೋಗಾಃ= ರುದ್ರದೇವರೇ ಮೊದಲಾಗಿ ಉಳ್ಳ ಭೂತಗಣಗಳು, ಇಂತಹ ಇದಂ ವಿಶ್ವಂ=ಈ ಪ್ರಪಂಚವು ಯಸ್ಯ ವಿಭೂಮ್ನಃ=ಯಾವ ಪೂರ್ಣನಾದ ನಿನ್ನ ಕ್ರಿಡಾಭಾಂಡಂ=ಕ್ರೀಡಾಸಾಧನವಾಗಿದೆಯೋ ತಸ್ಮೈ=ಅಂತಹ ತೇ=ನಿನಗೆ ನಮಃ ಕರವಾಮಃ=ನಮಸ್ಕಾರವನ್ನು ಮಾಡುವೆವು. ॥೪೩॥

**ವಿದ್ಯಾಧರಾ ಊಚುಃ -**

**ತ್ವನ್ಮಾಯಯಾಽರ್ಥಮಭಿಪದ್ಯ ಕಲೇವರೇಽಸ್ಮಿನ್**
**ಕೃತ್ವಾ ಮಮಾಹಮಿತಿ ದುರ್ಮತಿರುತ್ಪಥೈಃ ಸ್ವೈಃ ।**
**ಕ್ಷಿಪ್ತೋಽಪ್ಯಸದ್ವಿಷಯಲಾಲಸ ಆತ್ಮಮೋಹಂ**
**ಯುಷ್ಮತ್ಕಥಾಮೃತನಿಷೇವಕ ಉದ್ವ್ಯುದಸ್ಯೇತ್ ॥೪೪॥**

ದುರ್ಮತಿಃ=ದುಷ್ಟಬುದ್ಧಿಯುಳ್ಳ ಮನುಷ್ಯನು ತ್ವನ್ಮಾಯಯಾ=ನಿನ್ನ ಇಚ್ಛೆಯಿಂದ (ನಿನ್ನ ಅಧೀನವಾದ ಪ್ರಕೃತಿಯಿಂದಲೂ) ಅರ್ಥಂ=ದೇಹ, ಹೆಂಡತಿ, ಮಕ್ಕಳು ಮೊದಲಾದವರನ್ನು ಅಭಿಪದ್ಯ=ಪಡೆದು ಅಸ್ಮಿನ್ ಕಲೇವರೇ=ಈ ಶರೀರದಲ್ಲಿ ಮತ್ತು ಹೆಂಡತಿ-ಮಕ್ಕಳಲ್ಲಿಯೂ ಮಮಾಹಂ ಇತಿ ಮತಿಂ ಕೃತ್ವಾ=ದೇಹವೇ ನಾನೆಂದು, ಹೆಂಡತಿ-ಮಕ್ಕಳು ನನ್ನವರೆಂದು

ತಿಳಿದವನಾಗಿ ಉತ್ಪಥೈಃ=ದುರ್ಮಾರ್ಗದಲ್ಲಿ ನಡೆಯುವ ಸ್ವೈಃ=ತನ್ನ ಇಂದ್ರಿಯಗಳಿಂದ ಕ್ಷಿಪ್ತೋಽಪಿ=ತಿರಸ್ಕೃತನಾದರೂ (ದುಃಖಿತನಾದರೂ) ಅಸದ್ವಿಷಯಲಾಲಸಃ ಭವತಿ= (ಪತ್ನಿ-ಪುತ್ರರಿಂದ) ಅಮಂಗಲವಾದ ವಿಷಯಗಳಲ್ಲಿ ಆಸಕ್ತನಾಗುವನು (ವೈರಾಗ್ಯ ಹುಟ್ಟುವದಿಲ್ಲ). ಇಂತಹವನು ಯುಷ್ಮತ್‌ಕಥಾಮೃತನಿಷೇವಕಃ ಸನ್=ನಿನ್ನ ಕಥಾ ಎಂಬ ಅಮೃತಪಾನ ಮಾಡಿ ಆತ್ಮಮೋಹಂ=ಅಹಂಕಾರ-ಮಮಕಾರರೂಪವಾದ ಮಿಥ್ಯಾಜ್ಞಾನವನ್ನು ಉದ್ವ್ಯುದಸ್ಯೇತ್=ಪರಿತ್ಯಾಗ ಮಾಡಬೇಕು.

ಅಹಂಕಾರ-ಮಮಕಾರದಿಂದ ಬರುವ ಈ ಸಂಸಾರದ ನಿವೃತ್ತಿಗೆ ನಿನ್ನ ಕಥಾಸೇವನೆಯೇ ಮುಖ್ಯ ಉಪಾಯವಾಗಿದೆ. ಅದನ್ನೇ ನಮಗೆ ದಯಪಾಲಿಸು ಎಂದು ಭಾವ. ।।೪೪।।

ಇಲ್ಲಿ ಹಿಂದೆ ಹೇಳಿದ ಯಜ್ಞೇಶತ್ವವನ್ನು ಉಪಪಾದಿಸುವವರಾಗಿ ಬ್ರಾಹ್ಮಣರು ಭಗವಂತನನ್ನು ಸ್ತುತಿಸುವರು -

**ಬ್ರಾಹ್ಮಣಾ ಊಚುಃ -**

**ತ್ವಂ ಕ್ರತುಸ್ತ್ವಂ ಹವಿಸ್ತ್ವಂ ಹುತಾಶಃ ಸ್ವಯಂ**
**ತ್ವಂ ಹಿ ಮಂತ್ರಾಃ ಸಮಿದ್ದರ್ಭಪಾತ್ರಾಣಿ ಚ ।**
**ತ್ವಂ ಸದಸ್ಯರ್ತ್ವಿಜೋ ದಂಪತೀ ದೇವತಾ**
**ಅಗ್ನಿಹೋತ್ರಂ ಸ್ವಧಾ ಸೋಮ ಆಜ್ಯಂ ಪಶುಃ ।।೪೫।।**

**ಗ.ಅಂ.** - ಅನ್ವಯಾರ್ಥವು ಮುಂದೆ ತಾತ್ಪರ್ಯದ ನಂತರ ಇದೆ.

**ಭಾಗವತ ತಾತ್ಪರ್ಯ :-**

ಇಲ್ಲಿ ಕ್ರತು ಮುಂತಾದ ಶಬ್ದಗಳಿಂದ ಶ್ರೀಹರಿಯನ್ನು ಹೇಳಿರುವದು ಅವುಗಳಿಂದ ಅಭೇದವಿರುವ ಕಾರಣದಿಂದಲ್ಲ ಎಂದು ತಿಳಿಸಲು ಶ್ಲೋಕತಾತ್ಪರ್ಯವನ್ನು ಪ್ರಮಾಣದಿಂದ ತಿಳಿಸುವರು -

**ಸರ್ವಶಬ್ದಾಭಿಧೇಯತ್ವಂ ಸರ್ವಾಂತರ್ಯಾಮಿಕತ್ವತಃ ।**
**ನ ತು ಸರ್ವಸ್ವರೂಪತ್ವಾತ್ ಸರ್ವಭಿನ್ನೋ ಯತೋ ಹರಿಃ ।। ಇತಿ ಮಾತ್ಸ್ಯೇ ।।**

ಯಾವ ಕಾರಣ ಶ್ರೀಹರಿಯು ಎಲ್ಲ ಪದಾರ್ಥಗಳಿಂದ ಭಿನ್ನನಾಗಿರುವನೋ ಆ ಕಾರಣ ಸರ್ವಪದಾರ್ಥಗಳಲ್ಲಿದ್ದು ಅವುಗಳನ್ನು ನಿಯಮಿಸುವದರಿಂದ ಆ ಆ ಶಬ್ದಗಳಿಂದ ಕರೆಯಲ್ಪಡುವನು. ಹೊರತು ಎಲ್ಲ ಪದಾರ್ಥಗಳ ಸ್ವರೂಪನಾದ್ದರಿಂದ (ಎಲ್ಲ ಪದಾರ್ಥಗಳಿಂದ ಅಭಿನ್ನನಾದ್ದರಿಂದ) ಅಲ್ಲ ಎಂದು ಮತ್ಸ್ಯಪುರಾಣದಲ್ಲಿದೆ.

ಹಾಗಾದರೆ ಇದಕ್ಕನುಗುಣವಾಗಿ ಮೂಲದ ಅರ್ಥವನ್ನು ತಿಳಿಯುವುದಾದರೆ -

ತ್ವಂ=ನೀನು ಕ್ರತುಃ=ಕ್ರತುವಿನಲ್ಲಿದ್ದು ಕ್ರತುಶಬ್ದವಾಚ್ಯನಾಗಿರುವಿ. ತ್ವಂ=ನೀನು ಹವಿಃ=ಹವಿಸ್ಸಿನಲ್ಲಿ ಇದ್ದು ಹವಿಶ್ಶಬ್ದವಾಚ್ಯನಾಗಿದ್ದಿ. ಹುತಾಶಃ=ಅಗ್ನಿನಿಯಾಮಕನಾಗಿ ಹುತಾಶನೆನಿಸುವಿ. ಮಂತ್ರಾಃ=ಮಂತ್ರಗಳಿಗೆ ವಾಚಕತ್ವಶಕ್ತಿಪ್ರದನಾಗಿ ಮಂತ್ರನೆನಿಸುವಿ. ಸಮಿದ್ ದರ್ಭಪಾತ್ರಾಣಿ=ಸಮಿತ್ ದರ್ಭಪ್ರಾತ್ರೆಗಳಿಗೂ ನಿಯಾಮಕನಾದ ಕಾರಣ ಆ ಶಬ್ದಗಳಿಂದ ಕರೆಸಿಕೊಳ್ಳುವಿ. ತ್ವಂ=ನೀನು ಸದಸ್ಯರ್ತ್ವಿಜಃ=ಸದಸ್ಯ ಋತ್ವಿಕ್ ನಿಯಾಮಕನು. ದಂಪತೀ=ಯಜಮಾನ-ಯಜಮಾನಿನಿಗಳಲ್ಲಿರುವವನು. ದೇವತಾ=ದೇವತೆಯು, ಅಗ್ನಿಹೋತ್ರಂ=ಅಗ್ನಿಯಲ್ಲಿ ಹವನವು, ಸ್ವಧಾ=ದೇವತೆಗಳಿಗೆ ಹವಿಸ್ಸನ್ನು ಅರ್ಪಿಸುವ ಮಂತ್ರವು, ಸೋಮಃ=ಬಳ್ಳಿ ಪಶುಃ=ಪಶು, ಆಜ್ಯಂ=ತುಪ್ಪ ಈ ಎಲ್ಲ ಯಜ್ಞಾಂಗಗಳೂ ತ್ವಂ=ನಿನ್ನ ಅಧಿ ೕನವೆಂದು ಭಾವ. ॥೪೫॥

**ತ್ವಂ ಪುರಾ ಗಾಂ ರಸಾಯಾ ಮಹಾನ್ ಸೂಕರೋ**
**ದಂಷ್ಟ್ರಯಾ ಪದ್ಮಿನೀಂ ವಾರಣೇಂದ್ರೋ ಯಥಾ ।**
**ಸ್ತೂಯಮಾನೋ ನದಲ್ಲೀಲಯಾ ಯೋಗಿಭಿ-**
**ರ್ವ್ಯುಜ್ಜಹರ್ಥ ತ್ರಯೀಗಾತ್ರ ಯಜ್ಞಕ್ರತುಃ ॥೪೬॥**

ಹೇ ತ್ರಯೀಗಾತ್ರ=ವೇದಪ್ರತಿಪಾದ್ಯವಾದ ದೇಹವುಳ್ಳವನೇ ! ಯಜ್ಞಕ್ರತುಃ=ಯಜ್ಞಜನಕ ಅವಯವವುಳ್ಳವನಾದ ತ್ವಂ=ನೀನು ಪುರಾ=ಹಿಂದೆ ಯೋಗಿಭಿಃ=ಜ್ಞಾನಿಗಳಿಂದ ಸ್ತೂಯಮಾನಃ =ಸ್ತೋತ್ರ ಮಾಡಲ್ಪಟ್ಟು ಯಥಾ=ಹೇಗೆ ವಾರಣೇಂದ್ರಃ=ಆನೆಯು ಪದ್ಮಿನೀಂ=ಕಮಲವನ್ನು ತರುವಂತೆ ಮಹಾನ್ ಸೂಕರಃ=ದೊಡ್ಡವರಾಹನಾಗಿ ನದನ್=ಗರ್ಜಿಸುತ್ತ ಲೀಲಯಾ=ಅನಾಯಾಸವಾಗಿ ಗಾಂ=ಭೂಮಿಯನ್ನು ರಸಾಯಾಃ=ರಸಾತಲದಿಂದ ದಂಷ್ಟ್ರಯಾ=ಕೋರೆಹಲ್ಲಿನಿಂದ ವ್ಯುಜ್ಜಹರ್ಥ=ಮೇಲೆತ್ತಿ ತಂದಿರುವಿ. ॥೪೬॥

**ಸಾಮಗಾ ಊಚುಃ -**

**ಸಂಪ್ರಸೀದ ತ್ವಮಸ್ಮಾಕಮಾಕಾಂಕ್ಷತಾಂ**
**ದರ್ಶನಂ ತೇ ಪರಿಭ್ರಷ್ಟಸತ್ಕರ್ಮಣಾಮ್ ।**
**ಕೀರ್ತ್ಯಮಾನಾ ನೃಭಿಃ ಸಾಮಗಿರೀಶ**
**ತೇ ಯಜ್ಞವಿಘ್ನಾಃ ಕ್ಷಯಂ ಯಾಂತಿ ತಸ್ಮೈ ನಮಃ ॥೪೭॥**

ಪರಿಭ್ರಷ್ಟಸತ್ಕರ್ಮಣಾಂ=ನಷ್ಟವಾದ ಪುಣ್ಯವುಳ್ಳ ಆದ್ದರಿಂದಲೇ ತೇ ದರ್ಶನಂ=ನಿನ್ನ ದರ್ಶನವನ್ನು ಆಕಾಂಕ್ಷತಾಂ=ಇಚ್ಛಿಸುವ ಅಸ್ಮಾಕಂ=ನಮ್ಮ ಮೇಲೆ ತ್ವಂ=ನೀನು

ಪ್ರಸೀದ=ಪ್ರಸನ್ನನಾಗು. ಹೇ ಈಶ=ಎಲೋ ಸ್ವಾಮಿಯೇ ! ತೇ=ನಿನ್ನ ನೃಭಿಃ=ಜನರಿಂದ ಕೀರ್ತ್ಯಮಾನಾ=ಹೇಳಲ್ಪಡುವ ಸಾಮಗೀಃ=ಸಾಮಗಾಯನಧ್ವನಿಯೇನುಂಟೋ ತಯಾ=ಅದರಿಂದ ಯಜ್ಞವಿಘ್ನಾಃ=ರಾಕ್ಷಸರು (ರುದ್ರಭಟರು) ಕ್ಷಯಂ ಯಾಂತಿ=ನಾಶ ಹೊಂದುವರು. ತಸ್ಮೈ=ಅಂತಹ ನಿನಗೆ ನಮಃ=ನಮಸ್ಕಾರ.

''ಕೀರ್ತ್ಯಮಾನೇ ನೃಭಿರ್ನಾಮ್ನಿ ಯಜ್ಞೇಶ್ವರಸ್ಯೇಶ ತೇ'' ಎಂಬ ಪಾಠದಲ್ಲಿ ನಿನ್ನ ಹೆಸರನ್ನು ಹೇಳುವಾಗಲೇ ರಾಕ್ಷಸರು ನಾಶವಾಗುವರು. ಹೇಳಿದ ಮೇಲೇನು ಕೇಳುವದು ? ನಿನ್ನ ದರ್ಶನವಾದ ಮೇಲಂತೂ ನಿಶ್ಚಿತವಾಗಿ ನಾಶವಾಗುವರು ಎಂದು ಭಾವ. ।।೪೭।।

**ಮೈತ್ರೇಯ ಉವಾಚ -**

**ಇತಿ ದಕ್ಷಃ ಕವಿರ್ಯಜ್ಞಂ ಭದ್ರ ರುದ್ರಾವಮರ್ಶಿತಮ್ ।**
**ಕೀರ್ತ್ಯಮಾನೇ ಹೃಷೀಕೇಶೇ ಉನ್ನಿನ್ಯೇ ಯಜ್ಞಭಾವನೇ ।।೪೮।।**

ಹೇ ಭದ್ರ=ವಿದುರನೇ ! ಯಜ್ಞಭಾವನೇ=ಯಜ್ಞಕ್ಕೆ ಜನಕನಾದ ಹೃಷೀಕೇಶೇ=ಶ್ರೀಹರಿಯು ಇತಿ=ಈ ರೀತಿಯಾಗಿ ಕೀರ್ತ್ಯಮಾನೇ (ಸತಿ)=ಎಲ್ಲರಿಂದ ಸ್ತುತಿಸಲ್ಪಡುತ್ತಿರಲು, ಕವಿಃ=ಕುಶಲನಾದ ದಕ್ಷಃ=ದಕ್ಷಪ್ರಜಾಪತಿಯು ರುದ್ರಾವಮರ್ಶಿತಂ=ರುದ್ರದೇವರಿಂದ ನಾಶಮಾಡಲ್ಪಟ್ಟ ಯಜ್ಞಂ=ಯಜ್ಞವನ್ನು ಉನ್ನಿನ್ಯೇ=ಸಮಾಪ್ತಿಗೊಳಿಸಿದನು.

**ಅರ್ಥಾಂತರ :-** ರುದ್ರಾವಮರ್ಶಿತಂ ಎಂದರೆ ರುದ್ರನಿಂದ ಸಂಬದ್ಧವಾದ ಎಂದರ್ಥ. ಅಂದರೆ ಮೊದಲು ರುದ್ರನಿಗೆ ಹವಿರ್ಭಾಗ ಕೊಟ್ಟಿಲ್ಲವಾದ್ದರಿಂದ ರುದ್ರಾನವಮರ್ಶಿತ (ಅಸಂಬದ್ಧ)ವಾಗಿತ್ತು. ಈಗ ಅವನಿಗೆ ಅವನ ಹವಿರ್ಭಾಗವಿತ್ತದ್ದರಿಂದ ರುದ್ರಾವಮರ್ಶಿತ-ವಾಯಿತು. ಹೀಗೂ ಅರ್ಥ ಮಾಡಬಹುದು. ।।೪೮।।

**ಭಗವಾನ್ ಸ್ವೇನ ಭಾಗೇನ ಸರ್ವಾತ್ಮಾ ಸರ್ವಭಾಗಭುಕ್ ।**
**ದಕ್ಷಂ ಬಭಾಷ ಆಭಾಷ್ಯ ಪ್ರೀಯಮಾಣ ಇವಾನಘ ।।೪೯।।**

ಸರ್ವಾತ್ಮಾ ಸನ್=ಇಂದ್ರಾದಿ ಸರ್ವದೇವತಾಂತರ್ಯಾಮಿಯಾಗಿ ಸರ್ವಭಾಗಭುಕ್ ಅಪಿ=ಎಲ್ಲ ಭಾಗವನ್ನು ಸ್ವೀಕರಿಸುವವನಾದರೂ ಸಹ ಸ್ವೇನ ಭಾಗೇನ=ತನ್ನ ಭಾಗವಾದ ತ್ರಿಕಪಾಲ ಪುರೋಡಾಶದಿಂದ ಪ್ರೀಯಮಾಣಃ ಇವ=ಪ್ರೀತನಾದವನಂತೆ ದಕ್ಷಂ ಆಭಾಷ್ಯ=ದಕ್ಷನನ್ನು ಅಭಿಮುಖನನ್ನಾಗಿ ಮಾಡಿ ದಕ್ಷಂ ಬಭಾಷೇ=ದಕ್ಷನನ್ನು ಕುರಿತು ಮಾತನಾಡಿದನು.

ವಿ.ವಿ. ಪರಮಾತ್ಮನು ಪೂರ್ಣನಾದ್ದರಿಂದ ನಿತ್ಯತೃಪ್ತನಾಗಿದ್ದಾನೆ. ಹವಿಸ್ಸಿನಿಂದ ಹೊಸದಾಗಿ ಪ್ರೀತನಾಗಬೇಕಿಲ್ಲ. ಆದ್ದರಿಂದ "ಪ್ರೀಯಮಾಣ ಇವ" ಎಂದಿರುವರು. ಪ್ರೀತನಾದವನು ಪ್ರಿಯವಾದ ಮಾತನಾಡುವಂತೆ ಆಡಿದನೆಂದರ್ಥ. ।।೪೯।।

**ಶ್ರೀಭಗವಾನುವಾಚ -**

**ಅಹಂ ಬ್ರಹ್ಮಾ ಚ ಶರ್ವಶ್ಚ ಜಗತಃ ಕಾರಣಂ ಪರಮ್ ।**
**ಆತ್ಮೇಶ್ವರ ಉಪದ್ರಷ್ಟಾ ಸ್ವಯಂದೃಗವಿಶೇಷಣಃ ।।೫೦।।**

ಅಹಂ=ವಿಷ್ಣುನಾಮಕನಾದ ನಾನು (ವಿಷ್ಣುವು) ಚ=ಮತ್ತು ಬ್ರಹ್ಮಾ=ಬ್ರಹ್ಮಾಂತ-ರ್ಯಾಮಿಯಾಗಿ ಬ್ರಹ್ಮನಾಮಕನು, ಚ=ಮತ್ತು ಶರ್ವಃ=ರುದ್ರಾಂತರ್ಯಾಮಿಯಾಗಿ ರುದ್ರನಾಮಕನು, ಹೀಗೆ ಮೂರು ರೂಪನಾಗಿ ಜಗತಃ=ಪ್ರಪಂಚಕ್ಕೆ ಪರಂ ಕಾರಣಂ= ಸೃಷ್ಟಿ-ಸ್ಥಿತಿ-ಲಯಗಳಿಗೆ ಮುಖ್ಯಕಾರಣನಾಗಿದ್ದೇನೆ. ಆತ್ಮಾ=ಎಲ್ಲರಲ್ಲಿ ಅಂತರ್ಯಾಮಿ-ಯಾಗಿದ್ದೇನೆ. ಈಶ್ವರಃ=ಎಲ್ಲರಿಗೂ ಸ್ವಾಮಿಯಾಗಿದ್ದೇನೆ. ಉಪದ್ರಷ್ಟಾ=ಉತ್ತಮದ್ರಷ್ಟ್ರುವಾಗಿದ್ದೇನೆ (ಸಾಕ್ಷಿ ಎಂದರ್ಥ). ಸ್ವಯಂದೃಕ್=ಸ್ವಪ್ರಕಾಶನಾಗಿದ್ದೇನೆ. ಅವಿಶೇಷಣಃ=ವಿಶೇಷರಹಿತ-ನಾಗಿದ್ದೇನೆ. ತಾರತಮ್ಯಾನಂತರ್ಗತನಾಗಿದ್ದೇನೆಂದು ಭಾವ.

**ಭಾಗವತ ತಾತ್ಪರ್ಯ :-**

ಈ ಶ್ಲೋಕದಲ್ಲಿ ಶ್ರೀಹರಿಗೆ ರುದ್ರ-ಬ್ರಹ್ಮರಿಂದ ಅಭೇದ ತೋರುವದು. ಮತ್ತು "ಜಗತಃ ಆತ್ಮಾ" ಎಂದು ಅನ್ವಯ ಮಾಡಿದರೆ ಎಲ್ಲ ಜಗತ್ತಿನಿಂದ ಅಭೇದ ತೋರುವದು. ಆ ಕಾರಣ ವಿವಕ್ಷಿತವಾದ ತಾತ್ಪರ್ಯವನ್ನು ಪ್ರಮಾಣದಿಂದಲೇ ಹೇಳುವರು -

**ಅಂತರ್ಯಾಮಿಸ್ವರೂಪೇಣ ಬ್ರಹ್ಮರುದ್ರಾದ್ಯಭಿನ್ನತಾ ।**
**ನ ತು ಜೀವಸ್ವರೂಪೇಣ ಜೀವಾ ಭಿನ್ನಾ ಯತೋ ಹರೇಃ ।।**
**ವಿಶೇಷಾಭೇದವಚನಂ ಸನ್ನಿಧಾನವಿಶೇಷತಃ ।**
**ಸನ್ನಿಧಾನಂ ತು ತತ್ಪ್ರೋಕ್ತಂ ಸಾಮರ್ಥ್ಯವ್ಯಂಜನಂ ಹರೇಃ ।। ಇತಿ ಭವಿಷ್ಯತ್ಪರ್ವಣಿ ।।**

ಯಾವ ಕಾರಣ ಬ್ರಹ್ಮ-ರುದ್ರಾದಿ ಜೀವರು ಭಗವಂತನಿಂದ ಭಿನ್ನರೇ ಆಗಿದ್ದಾರೆಯೋ ಆ ಕಾರಣ, ಬ್ರಹ್ಮನಾಮಕನಾಗಿ ಬ್ರಹ್ಮಾಂತರ್ಯಾಮಿಯಾದ, ರುದ್ರನಾಮಕನಾಗಿ ರುದ್ರಾಂತರ್ಯಾಮಿಯಾದ ಭಗವತ್ಸ್ವರೂಪದಿಂದ ಭಗವಂತನಿಗೆ ಅಭೇದ ಹೇಳಲ್ಪಡುವದೇ ಹೊರತು ಬಹ್ಮ-ರುದ್ರರೆಂಬ ಜೀವರಿಂದ ಅಭೇದ ಹೇಳಲ್ಪಡುವುದಿಲ್ಲ.

ಹಾಗಾದರೆ ಬ್ರಹ್ಮ-ರುದ್ರರಿಂದ ಮಾತ್ರ ಶ್ರೀಹರಿಗೆ ಅಭೇದ ಹೇಳಲು ಏನು ಕಾರಣ ? ಎಂದರೆ, ಅವರಲ್ಲಿ ಶ್ರೀಹರಿಯ ಸನ್ನಿಧಾನ ಉಳಿದವರಲ್ಲಿರುವುದಕ್ಕಿಂತಲೂ ಹೆಚ್ಚಾಗಿರುವದರಿಂದ

ಹಾಗೆ ಅಭೇದವಚನವು ಉಪಪನ್ನವಾಗುತ್ತದೆ. ಅಂತರ್ಯಾಮಿ- ಯಾಗುವುದಲ್ಲದೇ ಬೇರೆ ಸನ್ನಿಧಾನವೆಂದರೆ ತನ್ನ ಸಾಮರ್ಥ್ಯವನ್ನು ವ್ಯಕ್ತಗೊಳಿಸುವದು ಎಂಬುದಾಗಿ ಭವಿಷ್ಯತ್ಪರ್ವದಲ್ಲಿ ಹೇಳಿದೆ.

ಬ್ರಹ್ಮ-ರುದ್ರರೆಂಬ ಜೀವರಲ್ಲಿರುವ ಶ್ರೀಹರಿಯು ತನ್ನ ಸೃಷ್ಟಿಸಾಮರ್ಥ್ಯಸಂಹಾರ-ಸಾಮರ್ಥ್ಯವನ್ನು ವ್ಯಕ್ತಗೊಳಿಸುವದರಿಂದ ಇತರ ಜೀವರಲ್ಲಿರುವ ಹರಿಸ್ವರೂಪಕ್ಕಿಂತ ಅವರಲ್ಲಿರುವ ಹರಿಸ್ವರೂಪದಿಂದ ಅಭೇದ ಹೇಳುವದು ಎಂದು ಭಾವ. ।।೫೦।।

**ಸ ಆತ್ಮಮಾಯಾಮಾವಿಶ್ಯ ಯೋಽಹಂ ಗುಣಮಯೀಂ ದ್ವಿಜ ।**
**ಸೃಜನ್ ರಕ್ಷನ್ ಹರನ್ ವಿಶ್ವಂ ದಧ್ರೇ ಸಂಜ್ಞಾಃ ಕ್ರಿಯೋಚಿತಾಃ ।।೫೧।।**

ಹೇ ದ್ವಿಜ=ಎಲೋ ಬ್ರಾಹ್ಮಣನೇ ! ಯಃ ಹಂ=ಯಾವ ನಾನು ತ್ರಿರೂಪನೋ ಸಃ ಅಹಂ=ಅಂತಹ ನಾನು ಗುಣಮಯೀಂ=ಸತ್ವಾದಿಗುಣಾತ್ಮಕವಾದ ಆತ್ಮಮಾಯಾಂ=ನನ್ನ ಅಧಿೀನವಾದ ಜಡಪ್ರಕೃತಿಯನ್ನು ಆವಿಶ್ಯ=ಪ್ರವೇಶ ಮಾಡಿ, ವಿಶ್ವಂ=ಪ್ರಪಂಚವನ್ನು ಸೃಜನ್=ರಜೋಗುಣಪ್ರವರ್ತಕವಾದ ಬ್ರಹ್ಮಾಂತರ್ಯಾಮಿಯಾದ ಬ್ರಹ್ಮರೂಪದಿಂದ ಸೃಷ್ಟಿ ಮಾಡುವವನಾಗಿ, ವಿಶ್ವಂ=ಪ್ರಪಂಚವನ್ನು ರಕ್ಷನ್=ಸತ್ವಗುಣಪ್ರವರ್ತಕವಾದ ವಿಷ್ಣುರೂಪದಿಂದ ಪಾಲನ ಮಾಡುವವನಾಗಿ, ವಿಶ್ವಂ=ಪ್ರಪಂಚವನ್ನು ಹರನ್=ತಮೋಗುಣಪ್ರವರ್ತಕವಾದ ರುದ್ರಾಂತರ್ಯಾಮಿಯಾದ ರುದ್ರರೂಪದಿಂದ ಸಂಹಾರ ಮಾಡುವವನಾಗಿ ಕ್ರಿಯೋಚಿತಾಃ= ಸೃಷ್ಟಿ-ಸ್ಥಿತಿ-ಸಂಹಾರರೂಪ ಕ್ರಿಯಾವಾಚಕಗಳಾದ ಸಂಜ್ಞಾಃ=ಬ್ರಹ್ಮ ವಿಷ್ಣು ಹರ ಎಂಬ ನಾಮಗಳನ್ನು ದಧ್ರೇ=ಧಾರಣ ಮಾಡಿರುವೆನು.

''ಬೃಂಹಣಾತ್ಸರ್ಜನಾತ್ ಬ್ರಹ್ಮಾ, ವೇಶನಾದ್ರಕ್ಷಣಾತ್ ವಿಷ್ಣುಃ, ಹರಣಾತ್ ಸಂಹರಣಾತ್ ರುದ್ರಃ'' ಎಂದಿರುವದರಿಂದ ಸೃಷ್ಟಿ-ಸ್ಥಿತಿ-ಸಂಹಾರ ಮಾಡುವದರಿಂದ ಈ ನಾಮಗಳು ನನಗೆ ಇವೆ ಎಂದು ಭಾವ. ಹೀಗೆ ರುದ್ರನು ನನ್ನ ವಿಶೇಷಸನ್ನಿಧಾನಕ್ಕೆ ಪಾತ್ರನಾದ್ದರಿಂದ ಅವನ ದ್ರೋಹ ನಿನಗೆ ಉಚಿತವಲ್ಲವೆಂದು ಅಭಿಪ್ರಾಯ. ।।೫೧।।

ಹೀಗಿದ್ದಮೇಲೆ ಕೆಲವರು ''ಬ್ರಹ್ಮಾದಿಗಳು ವಿಷ್ಣುವಿನ ಅಧೀನರಲ್ಲ'' ಎಂದು ಹೇಗೆ ತಿಳಿಯುವರು ? ಎಂದರೆ, ಆ ರೀತಿ ತಿಳಿಯುವವರನ್ನು ನಿಂದಿಸುವರು -

**ತಸ್ಮಿನ್ ಬ್ರಹ್ಮಣ್ಯದ್ವಿತೀಯೇ ಕೇವಲೇ ಪರಮಾತ್ಮನಿ ।**
**ದೇಹಾತ್ಮಬುದ್ಧಿರ್ಭೂತಾನಿ ಭೇದೇನಾಜ್ಞೋಽನುಪಶ್ಯತಿ ।।೫೨।।**

ತಸ್ಮಿನ್=ಅಂತಹ (ಯಾವ ನಾನು ಹಿಂದೆ ಹೇಳಿದಂತೆ ಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡುವೆನೋ ಅಂತಹ) ಬ್ರಹ್ಮಣಿ=ಗುಣಪೂರ್ಣನಾದ ಅದ್ವಿತೀಯೇ=ಸಮಾಧಿಕರಹಿತನಾದ ಕೇವಲೇ=ಜಡಾಮಿಶ್ರನಾದ ಪರಮಾತ್ಮನಿ=ಸಕಲಜೀವೋತ್ತಮನಾದ ನನ್ನಲ್ಲಿ ಸ್ಥಿತಾನಿ=ಇರುವ, ನನ್ನ ಅಧೀನರಾದ ಭೂತಾನಿ=ಜೀವರನ್ನು ಭೇದೇನ=(ಪೃಥಕ್ತ್ವೇನ)ನನ್ನ ಅಧೀನವಲ್ಲವೆಂದು ಯಃ ಅನುಪಶ್ಯತಿ=ಯಾವನು ತನ್ನ ಶಾಸ್ತ್ರಾನುಸಾರವಾಗಿ ತಿಳಿಯುವನೋ ಸಃ=ಅವನು ದೇಹಾತ್ಮಬುದ್ಧಿಃ=ದೇಹವನ್ನೇ ತಾನೆಂದು ತಿಳಿದವನು. ಭ್ರಾಂತನೆಂದು ಭಾವ. ಏಕೆಂದರೆ ಅವನು ಅಜ್ಞಃ=ನನ್ನ ಮತ್ತು ಪ್ರಾಣಿಗಳ ಸ್ವರೂಪವನ್ನು ತಿಳಿಯದವನು. ಆ ಕಾರಣ ಎಲ್ಲವೂ ಹರಿಯ ಅಧೀನವೆಂದು ತಿಳಿಯಬೇಕು ಎಂದು ಅಭಿಪ್ರಾಯ.

**ಭಾಗವತ ತಾತ್ಪರ್ಯ :-**

ಈ ಶ್ಲೋಕದಲ್ಲಿ ''ಭೂತಗಳನ್ನು ಭೇದೇನ ತಿಳಿಯುವವನು ಅಜ್ಞ'' ಎಂಬುದಾಗಿ ಭೇದಜ್ಞಾನಿಯನ್ನು ನಿಂದಿಸಿದಂತೆ ತೋರುವದು. ಆ ಕಾರಣ ವಿವಕ್ಷಿತವಾದ ತಾತ್ಪರ್ಯವನ್ನು ಪ್ರಮಾಣದಿಂದಲೇ ತಿಳಿಸುವರು -

> **ಹರೇರ್ವಶತ್ವದೃಷ್ಟಿಸ್ತು ಭೂತಾನಾಮಪೃಥಗ್‌ದೃಶಿಃ ।**
> **ಪ್ರಿಯತ್ವದೃಷ್ಟಿರಥವಾ ಬ್ರಹ್ಮಾದೀನಾಂ ವಿಶೇಷತಃ ।। ಇತಿ ಗಾರುಡೇ ।।**

ಎಲ್ಲಿಯಾದರೂ ಶ್ರೀಹರಿಯಿಂದ ಜೀವರಿಗೆ ಅಭೇದವನ್ನು ಹೇಳಿದರೆ, ಅಲ್ಲಿ ''ಅಭಿನ್ನರು'' ಎಂಬ ಮಾತಿಗೆ ''ಶ್ರೀಹರಿಯ ಅಧೀನರು'' ಎಂದು ವ್ಯಾಖ್ಯಾನಿಸಬೇಕು. ಇನ್ನು ಶ್ರೀಹರಿಯು ತನ್ನಿಂದ ಅಭೇದವನ್ನು ಜೀವರಿಗೆ ಹೇಳಿದರೆ, ಆ ಮಾತಿಗೆ ''ಅವರು ತನಗೆ ಪ್ರಿಯರು'' ಎಂದು ಅರ್ಥ ತಿಳಿಯಬೇಕು. (ಯದಧೀನಾ ಯಸ್ಯ ಸತ್ತಾ ತತ್ತದಿತ್ಯೇವ ಭಣ್ಯತೇ) ಯಾವುದು ಸಂಪೂರ್ಣವಾಗಿ ಯಾರ ಅಧೀನವೋ ಅದು ಅವನೇ ಎಂದು ಹೇಳುವದುಂಟು. ಮತ್ತು ಯಾರು ತಮಗೆ ಅತಿಪ್ರಿಯರೋ ಅವರನ್ನು ''ನಾವು ಅವರು ಒಂದೇ'' ಎಂದು ಹೇಳುವದುಂಟು. ಆ ಕಾರಣ ಬ್ರಹ್ಮಾದಿ ಉತ್ತಮಜೀವರಿಗೆ ತನ್ನಿಂದ ಅಭೇದ ಹೇಳಿದಲ್ಲಿ ಇತರರಿಗಿಂತ ವಿಶೇಷವಾಗಿ ಬ್ರಹ್ಮಾದಿಗಳು ಪ್ರೀತಿಪಾತ್ರರು ಎಂದು ವ್ಯಾಖ್ಯಾನಿಸಬೇಕು ಎಂದು ಭಾವ. ।।೫೨।।

ಇಲ್ಲಿಯವರೆಗೆ ರುದ್ರಾದಿಗಳ ದ್ರೋಹ ಮಾಡುವದು ಉಚಿತವಲ್ಲವೆಂದು ಹೇಳಿ, ಅಷ್ಟೇ ಅಲ್ಲ ಅಧಿಕಾರಿಯು ಉತ್ತಮರಾದ ರುದ್ರಾದಿಗಳಲ್ಲಿ ಪ್ರೀತಿಯನ್ನೇ ಮಾಡಬೇಕು ಎಂದು ದೃಷ್ಟಾಂತ ಕೊಟ್ಟು ತಿಳಿಸುವರು-

**ಯಥಾ ಪುಮಾನ್ನ ಸ್ವಾಂಗೇಷು ಶಿರಃಪಾಣ್ಯಾದಿಷು ಕ್ವಚಿತ್ ।**
**ಪಾರಕ್ಯಬುದ್ಧಿಂ ಕುರುತ ಏವಂ ಭೂತೇಷು ಮತ್ಪರಃ ॥೫೩॥**

ಪುಮಾನ್=ಮನುಷ್ಯನು ಸ್ವಾಂಗೇಷು ಶಿರಃಪಾಣ್ಯಾದಿಷು=ತನ್ನ ಅವಯವಗಳಾದ ತಲೆ, ಕೈ ಮುಂತಾದವುಗಳಲ್ಲಿ ಕ್ವಚಿತ್=ಯಾವಕಾಲದಲ್ಲಿಯೂ ಪಾರಕ್ಯಬುದ್ಧಿಂ=ತನ್ನದಲ್ಲವೆಂಬ ಬುದ್ಧಿಯನ್ನು ನ ಕುರುತೇ=ಮಾಡುವದಿಲ್ಲ ಯಥಾ=ಹೇಗೋ ಏವಂ=ಅದೇ ರೀತಿಯಾಗಿ ಮತ್ಪರಃ=ನಾನೇ ಉತ್ತಮನೆಂದು ತಿಳಿದ ಜ್ಞಾನಿಯು ಭೂತೇಷು=ಪ್ರಾಣಿಗಳಲ್ಲಿ ಪಾರಕ್ಯಬುದ್ಧಿಂ ನ ಕುರುತೇ=ಬೇರೆಯವರೆಂದು ತಿಳಿಯುವದಿಲ್ಲ, ತನ್ನವರೆಂದೇ ತಿಳಿಯುವನು. ಉತ್ತಮರಲ್ಲಂತೂ ವಿಶೇಷವಾಗಿ ಪ್ರೀತಿ ಮಾಡುವನು. ನೀನೂ ಸಹ ನನ್ನ ಭಕ್ತ, ಜ್ಞಾನಿಯಾದ್ದರಿಂದ ಉತ್ತಮರಾದ ರುದ್ರಾದಿಗಳ ವಿಷಯದಲ್ಲಿ ನನ್ನವರೆಂದು ತಿಳಿಯುವದು ಆವಶ್ಯಕವೆಂದು ಭಾವ. ॥೫೩॥

೫೦ ನೇ ಶ್ಲೋಕದಲ್ಲಿ ಈ ರೀತಿ ''ಅಹಂ ಬ್ರಹ್ಮಾ ಚ ಶರ್ವಶ್ಚ'' ಮುಂತಾಗಿ ತ್ರಿಮೂರ್ತಿಗಳಿಗೆ ಐಕ್ಯವನ್ನು ಉಪಪಾದಿಸಿ ''ಜಗತ ಆತ್ಮಾ'' ಎಂದು ಹೇಳಿದ ಸರ್ವಾಂತರ್ಯಾಮಿತ್ವದಿಂದ ಬಂದ ಭೇದಶಂಕೆಯನ್ನು ಪರಿಹರಿಸುತ್ತಾ ಅಭೇದದಲ್ಲಿ ತಾತ್ಪರ್ಯ ತಿಳಿಸುವುದಕ್ಕಾಗಿ ಅದನ್ನು ತಿಳಿಯುವನಿಗೆ ಫಲ ಹೇಳುವರು -

**ತ್ರಯಾಣಾಮೇಕಭಾವಾನಾಂ ಯೋ ನ ಪಶ್ಯತಿ ವೈ ಭಿದಾಂ ।**
**ಸರ್ವಭೂತಾತ್ಮನಾ ಬ್ರಹ್ಮನ್ ಸ ಶಾಂತಿಮಧಿಗಚ್ಛತಿ ॥೫೪॥**

**ಭಾಗವತ ತಾತ್ಪರ್ಯ :-**

ಸರ್ವಭೂತಾತ್ಮನಾ ಎಂಬುದಕ್ಕೆ ಪ್ರಕೃತೋಪಯುಕ್ತವಾದ ಅರ್ಥವನ್ನು ತಿಳಿಸುವರುಃ-

*''ಸರ್ವಭೂತಾತ್ಮನಾ ಸರ್ವಭೂತಾಂತರ್ಯಾಮಿತ್ವೇನ'' ॥*

ಬ್ರಹ್ಮನ್=ದಕ್ಷನೇ ! ಏಕಭಾವಾನಾಂ=ಒಂದೇ ಧರ್ಮವುಳ್ಳ ಅಂದರೆ ಎಲ್ಲ ಸ್ಥಳದಲ್ಲಿ ಜ್ಞಾನಾನಂದಪೂರ್ಣವೆಂದು ಪ್ರಮಿತವಾದ ತ್ರಯಾಣಾಂ=ಬ್ರಹ್ಮ-ವಿಷ್ಣು-ಹರ ಎಂಬ ಹೆಸರಿನ (ಸ್ವಯಂ ವಿಷ್ಣು, ಬ್ರಹ್ಮಾಂತರ್ಗತ ಬ್ರಹ್ಮ, ರುದ್ರಾಂತರ್ಗತ ರುದ್ರ ಎಂಬ) ನನ್ನ ಮೂರು-ರೂಪಗಳಿಗೆ ಸರ್ವಭೂತಾತ್ಮನಾ=ಎಲ್ಲ ಪ್ರಾಣಿಗಳಲ್ಲಿ ಅಂತರ್ಯಾಮಿಯಾಗಿರುವದರಿಂದ ಪ್ರಸಕ್ತವಾದ ಭಿದಾಂ=ಭೇದವನ್ನು ನ ಪಶ್ಯತಿ=ತಿಳಿಯುವದಿಲ್ಲವೋ ಸಃ=ಅವನು ಶಾಂತಿಂ=ಮೋಕ್ಷವನ್ನು ಅಧಿಗಚ್ಛತಿ=ಹೊಂದುವನು.

ಅಥವಾ ಏಕಭಾವಾನಾಂ=ಏಕಾಭಿಪ್ರಾಯವುಳ್ಳ ತ್ರಯಾಣಾಂ=ಬ್ರಹ್ಮವಿಷ್ಣುಮಹೇಶ್ವರರಿಗೆ ಭಿದಾಂ=ವಿರೋಧವನ್ನು ಯಃ=ಯಾವನು ನ ಪಶ್ಯತಿ=ತಿಳಿಯುವದಿಲ್ಲವೋ ಸಃ=ಅವನು ಶಾಂತಿಂ ಅಧಿಗಚ್ಛತಿ=ಮೋಕ್ಷವನ್ನು ಪಡೆಯುವನು ಹೀಗೂ ಅರ್ಥ. ।।೫೪।।

**ಮೈತ್ರೇಯ ಉವಾಚ -**

**ಏವಂ ಭಗವತಾಽದಿಷ್ಟಃ ಪ್ರಜಾಪತಿಪತಿರ್ಹರಿಮ್ ।**
**ಅರ್ಚಿತ್ವಾ ಕ್ರತುನಾ ಸ್ವೇನ ದೇವಾನುಭಯತೋಽಯಜತ್ ।।೫೫।।**

**ಭಾಗವತ ತಾತ್ಪರ್ಯ -**

**ಉಭಯತಃ ಸೋಮತೋ ಹವಿಷಶ್ಚ।**

ಏವಂ=ಈ ರೀತಿಯಾಗಿ ಭಗವತಾ=ಪರಮಾತ್ಮನಿಂದ ಆದಿಷ್ಟಃ=ಉಪದೇಶಿಸಲ್ಪಟ್ಟ ಪ್ರಜಾಪತಿಪತಿಃ=ದಕ್ಷನು ಹರಿಂ=ಪರಮಾತ್ಮನನ್ನು ಸ್ವೇನ=ತನ್ನ ಕ್ರತುನಾ=ಯಜ್ಞದಿಂದ ಅರ್ಚಿತ್ವಾ=ಪೂಜಿಸಿ, ದೇವತೆಗಳನ್ನು ಕುರಿತು ಉಭಯತಃ=ಸೋಮದಿಂದಲೂ ಪುರೋಡಾಶಾದಿಗಳಿಂದಲೂ ಅಯಜತ್=ಹೋಮ ಮಾಡಿದನು. ।।೫೫।।

**ರುದ್ರಂ ಚ ಸ್ವೇನ ಭಾಗೇನ ಹ್ಯುಪಾಧಾವತ್ಸಮಾಹಿತಃ ।**
**ಕರ್ಮಣೋದವಸಾನೇನ ಸೋಮಪಾನಿತರಾನಪಿ ।।೫೬।।**

ಸಮಾಹಿತಃ=ಸಮಾಧಾನಗೊಂಡ ಮನಸ್ಸುಳ್ಳವನಾಗಿ ರುದ್ರಂ ಚ=ರುದ್ರದೇವರನ್ನೂ ಸಹ ಸ್ವೇನ ಭಾಗೇನ=ಅವರಿಗೆ ಸಲ್ಲಬೇಕಾದ ಭಾಗದಿಂದ (ಯಜ್ಞದಲ್ಲಿ ಉಳಿದ ಭಾಗಗಳಿಂದ) ಉಪಾಧಾವತ್=ಆರಾಧಿಸಿದನು. ಉದವಸಾನೇನ ಕರ್ಮಣಾ=ಸಮಾಪ್ತಿ-ಇಷ್ಟಿ ಎಂಬ ಕರ್ಮದಿಂದ ಸೋಮಪಾನ್=ಸೋಮಪಾನ ಮಾಡುವವರನ್ನು ಅಪಿ=ಮತ್ತು ಇತರಾನ್=ಸೋಮಪಾನ ಮಾಡದವರನ್ನೂ ಸಹ ಉಪಾಧಾವತ್=ಉಪಾಸಿಸಿದನು.

**ಉದವಸ್ಯ ಸಹರ್ತ್ವಿಗ್ಭಿಃ ಸಸ್ನಾವವಭೃತಂ ತತಃ ।**
**ತಸ್ಮಾ ಅಪ್ಯನುಭಾವೇನ ಸ್ವೇನೈವಾವಾಪ್ತರಾಧಸೇ ।**
**ಧರ್ಮ ಏವ ಮತಿಂ ದತ್ವಾ ತ್ರಿದಶಾಸ್ತೇ ದಿವಂ ಯಯುಃ ।।೫೭।।**

ತತಃ=ಅನಂತರ ಉದವಸ್ಯ=ಸಮಾಪ್ತಿ ಇಷ್ಟಿಯನ್ನು ಮಾಡಿ ಋತ್ವಿಗ್ಭಿಃ ಸಹ=ಋತ್ವಿಜರಿಂದ ಕೂಡಿ ಅವಭೃತಂ ಸಸ್ನೌ=ಅವಭೃತ (ನಾಗುವಂತೆ) ಸ್ನಾನ ಮಾಡಿದನು. (ಯಜ್ಞದ ಕೊನೆಗೆ ವಿಧಿಪೂರ್ವಕವಾಗಿ ಮಾಡುವ ಸ್ನಾನವು ಅವಭೃತವೆನಿಸುವದು.) ಸ್ವೇನೈವ ಅನುಭಾವೇನ=ಭಗವಂತನ ಮಹಿಮೆಯಿಂದಲೇ ಅವಾಪ್ತರಾಧಸೇ ಅಪಿ=ಎಲ್ಲ ಸಿದ್ಧಿಯನ್ನು

ಪಡೆದವನಾದರೂ ತಸ್ಮೈ=ದಕ್ಷನಿಗೆ ಧರ್ಮೇ ಏವ=ಧರ್ಮದಲ್ಲಿಯೇ ಮತಿಂ ದತ್ವಾ= ಬುದ್ಧಿಯನ್ನಿತ್ತು ತೇ ತ್ರಿದಶಾಃ=ಆ ದೇವತೆಗಳು ದಿವಂ ಯಯುಃ=ಸ್ವರ್ಗಕ್ಕೆ ತೆರಳಿದರು.

ಸ್ತ್ರೀಯರಿಗೆ ಗಂಡನ ಜೊತೆಗೆ ಮುಕ್ತಿ ಹೇಳಿದ್ದರಿಂದ, ದೇಹತ್ಯಾಗ ಮಾಡಿದ ಸತಿಯ ಗತಿ ಏನಾಯಿತು ? ಎಂಬ ಶಂಕೆಗೆ ಉತ್ತರಿಸುವರು -

**ಏವಂ ದಾಕ್ಷಾಯಣೀ ಹಿತ್ವಾ ಸತೀ ಪೂರ್ವಕಲೇವರಮ್ ।**
**ಜಜ್ಞೇ ಹಿಮವತಃ ಕ್ಷೇತ್ರೇ ಮೇನಾಯಾಮಿತಿ ಶುಶ್ರುಮಃ ।।೫೮।।**

ಏವಂ=ಈ ರೀತಿಯಾಗಿ ದಾಕ್ಷಾಯಣೀ=ದಕ್ಷನ ಮಗಳಾದ ಸತೀ=ಸತೀದೇವಿಯು ಪೂರ್ವಕಲೇವರಂ=ಹಿಂದಿನ ದೇಹವನ್ನು ಹಿತ್ವಾ=ಬಿಟ್ಟು ಹಿಮವತಃ ಕ್ಷೇತ್ರೇ=ಹಿಮವಂತನ (ಹಿಮಾಲಯನ) ಪತ್ನಿಯಾದ ಮೇನಾಯಾಂ=ಮೇನಕಾಳಲ್ಲಿ ಜಜ್ಞೇ=ಜನಿಸಿದಳು ಇತಿ= ಎಂದು ಶುಶ್ರುಮಃ=ಕೇಳಿರುವೆವು. ।।೫೮।।

**ತಮೇವ ದಯಿತಂ ಭೂಯಸ್ತ ್ವಾಪ ಪತಿಮಂಬಿಕಾ ।**
**ಅನನ್ಯಭಾವೈಕಗತಿಃ ಶಕ್ತಿಃ ಸುಪ್ತೇವ ಪೂರುಷಮ್ ।।೫೯।।**

ಅನನ್ಯಭಾವೈಕಗತಿಃ=ಮತ್ತೊಬ್ಬರಲ್ಲಿ ಭಕ್ತಿ ಮಾಡದೇ ರುದ್ರನೊಬ್ಬನೇ ಗಮ್ಯನಾಗಿ ಉಳ್ಳ ಅಂಬಿಕಾ=ಪಾರ್ವತಿಯು ಭೂಯಃ=ಮತ್ತೆ ದಯಿತಂ=ಪ್ರಿಯನಾದ ತಂ ಏವ=ರುದ್ರನನ್ನೇ ಪತಿಂ ಅವಾಪ=ಗಂಡನನ್ನಾಗಿ ಪಡೆದಳು. ಈ ವಿಷಯದಲ್ಲಿ ದೃಷ್ಟಾಂತ ಕೊಡುವರು :- ಸುಪ್ತಾ ಶಕ್ತಿಃ=ಪ್ರಲಯಕಾಲದಲ್ಲಿ ಸೃಷ್ಟಿವ್ಯಾಪಾರವನ್ನು ಬಿಟ್ಟು ಕೇವಲ ಶ್ರೀಹರಿಯಲ್ಲಿಯೇ ರತಳಾದ ಲಕ್ಷ್ಮೀದೇವಿಯು ಪೂರುಷಂ ಇವ=ವಿಷ್ಣುವನ್ನು ಮಾತ್ರ ಭಜಿಸುವಂತೆ ಪಾರ್ವತಿಯು ಅನನ್ಯವಾಗಿ ರುದ್ರನನ್ನು ಭಜಿಸಿ, ಅವನನ್ನೇ ಪತಿಯನ್ನಾಗಿ ಪಡೆದಳು.

**ಭಾಗವತ ತಾತ್ಪರ್ಯ :-**

ಈ ಶ್ಲೋಕದಲ್ಲಿರುವ ಶಕ್ತಿ ಯಾರು ? ಅವಳಿಗೆ ಸುಪ್ತಿ ಎಂದರೆ ಏನು ? ಎಂಬುದನ್ನು ಪ್ರಮಾಣದಿಂದ ತಿಳಿಸುವರು -

**ಶಕ್ತಿತ್ವಾತ್ ವಿಷ್ಣುಶಕ್ತಿಸ್ತು ಶಕ್ತಿಶಬ್ದೇನ ಚೋಚ್ಯತೇ ।**
**ಶಕ್ಯತ್ವಾತ್ ಪ್ರಕೃತಿಶ್ಚಾಪಿ ಸ್ವಾಪಃ ಸೃಷ್ಟಿಂ ವಿನಾ ಹರೌ ।**
**ರತಿಃ ತಸ್ಯಾಸ್ತು ಕಥಿತೋ ನಹ್ಯನ್ಯಃ ಸ್ವಾಪ ಉಚ್ಯತೇ ।। ಇತಿ ತಂತ್ರಸಾರೇ ।।**

ಶಕ್ತಿತ್ವ ಇರುವದರಿಂದ ವಿಷ್ಣುವಿನ ಸ್ವರೂಪಶಕ್ತಿಯು ಪರಮಮುಖ್ಯವೃತ್ತಿಯಿಂದ ಶಕ್ತಿ ಎಂದು ಕರೆಸಿಕೊಳ್ಳುವದು. ಶಕ್ಯವಾದ್ದರಿಂದ ಅರ್ಥಾತ್ ಶ್ರೀಹರಿಯ ಶಕ್ತಿಗೆ ವಿಷಯವಾದ್ದರಿಂದ

ಚೇತನಪ್ರಕೃತಿ ಮತ್ತು ಅಚೇತನಪ್ರಕೃತಿಗಳೂ ಶಕ್ತಿ ಎಂದು ಕರೆಸಿಕೊಳ್ಳುವವು. ಅಂತಹ ಚೇತನಪ್ರಕೃತಿಯಾದ ಲಕ್ಷ್ಮೀದೇವಿಗೆ ಸ್ವಾಪ ಎಂದರೆ ಸೃಷ್ಟ್ಯಾದಿವ್ಯಾಪಾರವಿಲ್ಲದೇ ಶ್ರೀಹರಿಯಲ್ಲಿ ರತಳಾಗುವದೇ ಸ್ವಾಪ. ಇನ್ನು ಜಡಪ್ರಕೃತಿಗೆ (ಸೃಷ್ಟಿ) ವಿಕಾರ ಹೊಂದದೇ ಇರುವದೇ ಸ್ವಾಪ. ಹೊರತು ಪ್ರಸಿದ್ಧವಾದ ನಿದ್ರೆ ಎಂಬ ಸ್ವಾಪವು ಚೇತನ-ಅಚೇತನ ಪ್ರಕೃತಿಗೆ ಇರುವದಿಲ್ಲ ಎಂದು ತಂತ್ರಸಾರದಲ್ಲಿದೆ. ।।೫೯।।

**ಏತದ್ಭಗವತಃ ಶಂಭೋಃ ಕರ್ಮ ದಕ್ಷಾಧ್ವರದ್ರುಹಃ ।**
**ಶ್ರುತಂ ಭಾಗವತಾಚ್ಛಿಷ್ಯಾದುದ್ಧವಾನ್ಮೇ ಬೃಹಸ್ಪತೇಃ ।।೬೦।।**

ದಕ್ಷಾಧ್ವರದ್ರುಹಃ=ದಕ್ಷನ ಯಜ್ಞವನ್ನು ನಾಶಮಾಡಿದ, ಭಗವತಃ=ಪೂಜ್ಯನಾದ, ಶಂಭೋಃ=ರುದ್ರದೇವನ ಏತತ್=ಈ ಕರ್ಮ=ಕಾರ್ಯವನ್ನು ಭಾಗವತಾತ್=ಭಗವದ್ಭಕ್ತನಾದ, ಬೃಹಸ್ಪತೇಃ ಶಿಷ್ಯಾತ್=ಬೃಹಸ್ಪತಿಯ ಶಿಷ್ಯನಾದ, ಬೃಹಸ್ಪತಿಯ ಅವತಾರನೂ ಆದ ಉದ್ಧವಾತ್=ಉದ್ಧವನಿಂದ ಮೇ=ನನ್ನಿಂದ ಶ್ರುತಂ=ಕೇಳಲ್ಪಟ್ಟಿದೆ. ।।೬೦।।

**ಇದಂ ರಹಸ್ಯಂ ಪರಮೀಶಚೇಷ್ಟಿತಂ**
**ಯಶಸ್ಯಮಾಯುಷ್ಯಮಘೌಘಮರ್ಷಣಮ್ ।**
**ಯೋ ನಿತ್ಯದಾಽಕರ್ಣ್ಯ ತು ಕೀರ್ತಯೇದ್ಬುಧೋ**
**ಧುನೋತ್ಯಘಂ ಕೌರವ ಭಕ್ತಿಭಾವಿತಃ ।।೬೧।।**

ಕೌರವ=ವಿದುರನೇ ! ಇದಂ=ಈ ರಹಸ್ಯಂ=ಗೌಪ್ಯವಾದ ಪರಂ=ಶ್ರೇಷ್ಠವಾದ ಯಶಸ್ಯಂ=ಕೀರ್ತಿದಾಯಕವಾದ ಆಯುಷ್ಯಂ=ಆಯುಷ್ಯವನ್ನು ಕೊಡುವ ಅಘೌಘಮರ್ಷಣಂ=ಪಾಪರಾಶಿಗಳನ್ನು ನಾಶಮಾಡುವ ಈಶಚೇಷ್ಟಿತಂ=ರುದ್ರದೇವರ ವ್ಯಾಪಾರವನ್ನು ಯಃ=ಯಾರು ನಿತ್ಯದಾ=ದಿನವೂ ಆಕರ್ಣ್ಯ=ಕೇಳಿ ಕೀರ್ತಯೇತ್=ಮತ್ತೊಬ್ಬರಿಗೆ ಹೇಳುವನೋ ಸಃ=ಅವನು ಭಕ್ತಿಭಾವಿತಃ=ಭಕ್ತಿಯಿಂದ ಶೋಧಿತನಾಗಿ ಅಘಂ=ಪಾಪವನ್ನು ಧುನೋತಿ=ನಾಶಪಡಿಸುವನು. ।।೬೧।।

**ಸತೀಂ ಮೇನಾತ್ಮಜಾಂ ತಾತ ಪ್ರಾಪ್ಯ ಜಾಯಾಂ ಭವಃ ಪುನಃ ।**
**ತಯಾ ಮೈಥುನಮಾರಭ್ಯ ರೇಮೇ ದೇವಃ ಸಮಾಃ ಶತಮ್ ।।೬೨।।**

ತಾತ=ವಿದುರನೇ ! ಭವಃ=ರುದ್ರದೇವನು ಪುನಃ=ಮತ್ತೆ ಮೇನಾತ್ಮಜಾಂ=ಮೇನಕಾಳ ಮಗಳಾದ ಸತೀಂ=ಸತೀದೇವಿಯನ್ನು ಜಾಯಾಂ ಪ್ರಾಪ್ಯ=ಹೆಂಡತಿಯನ್ನಾಗಿ ಪಡೆದು ತಯಾ=ಅವಳೊಡನೆ ಮೈಥುನಂ ಆರಭ್ಯ=ಸಂಭೋಗವನ್ನು ಆರಂಭಿಸಿ ಶತಂ ಸಮಾಃ=ನೂರುವರ್ಷಗಳವರೆಗೆ ಅರ್ಥಾತ್ ಬಹುಕಾಲಪರ್ಯಂತವಾಗಿ ರೇಮೇ=ಕ್ರೀಡಿಸಿದನು.

**ಸ್ವವೀರ್ಯಧಾರಣೇಽಕಲ್ಪಾಂ ಜ್ಞಾತ್ವಾ ಜಾಯಾಂ ಸ ಧೂರ್ಜಟಿಃ ।**
**ಉತ್ಸಸರ್ಜಾಂಬರೇ ರೇತೋ ಗಂಗಾ ಜಗ್ರಾಹ ತನ್ನದೀ ॥೬೩॥**

ಸಃ ದೂರ್ಜಟಿಃ=ಆ ರುದ್ರದೇವನು ಜಾಯಾಂ=ತನ್ನ ಪತ್ನಿಯನ್ನು ಸ್ವವೀರ್ಯಧಾರಣೇ= ತನ್ನ ರೇತಸ್ಸನ್ನು ಧರಿಸುವುದರಲ್ಲಿ ಅಕಲ್ಪಾಂ=ಅಸಮರ್ಥಳೆಂದು ಜ್ಞಾತ್ವಾ=ತಿಳಿದು ಅಂಬರೇ=ಆಕಾಶದಲ್ಲಿ ರೇತಃ=ತನ್ನ ವೀರ್ಯವನ್ನು ಉತ್ಸಸರ್ಜ=ವಿಸರ್ಜಿಸಿದನು. ತತ್=ಆ ರೇತಸ್ಸನ್ನು ಗಂಗಾ ನದೀ=ಗಂಗಾ ಎಂಬ ನದಿಯು ಜಗ್ರಾಹ=ಸ್ವೀಕರಿಸಿದಳು. ॥೬೩॥

**ಪೀತ್ವಾಽಂತರಜರಂ ವಹ್ನಿಶ್ಚಚ್ಛರ್ದ ಶರಕಾನನೇ ।**
**ಕುಮಾರೋಽಭೂತ್ತತಸ್ತಸ್ಮೈ ಸ್ತನಂ ಷಟ್ಕೃತ್ತಿಕಾ ದದುಃ ॥೬೪॥**

ಗಂಗೆಯ ಅಸಾಮರ್ಥ್ಯವನ್ನು ಕಂಡು ವಹ್ನಿಃ=ಅಗ್ನಿಯು ಪೀತ್ವಾ=ಆ ರೇತಸ್ಸನ್ನು ಪಾನ ಮಾಡಿ ಅಂತಃ=ಒಳಗೆ ಅಜರಂ=ಜೀರ್ಣವಾಗದ ಅದನ್ನು ಶರಕಾನನೇ=ಹುಲ್ಲಿನ ಅಡವಿಯಲ್ಲಿ ಚಚ್ಛರ್ದ=ಸ್ವಾಹಾ ದ್ವಾರಾ ಚೆಲ್ಲಿದನು (ಉಗುಳಿದನು). ತತಃ=ಆ ರೇತಸ್ಸಿನಿಂದ ಕುಮಾರಃ=ಸ್ಕಂದನು ಅಭೂತ್=ಜನಿಸಿದನು. ತಸ್ಮೈ=ಆ ಸ್ಕಂದನಿಗೆ ಷಟ್‌ಕೃತ್ತಿಕಾಃ=ಆರುಜನ ಕೃತ್ತಿಕೆಯರು ಸ್ತನಂ ದದುಃ=ಸ್ತನವನ್ನಿತ್ತರು (ಸ್ತನಪಾನ ಮಾಡಿಸಿದರು).

**ಭಾಗವತ ತಾತ್ಪರ್ಯ -**

ಈ ಶ್ಲೋಕದಲ್ಲಿ "ರುದ್ರದೇವರ ರೇತಸ್ಸನ್ನು ಅಗ್ನಿಯೇ ಸಾಕ್ಷಾತ್ತಾಗಿ ಹುಲ್ಲುಗಾಡಿನಲ್ಲಿ ಹಾಕಿದನು" ಎಂದು ತೋರುವದು. ಅದನ್ನು ನಿವಾರಿಸಿ ನಿಜವಾದ ಕಥೆಯನ್ನು ತಿಳಿಸಲು ಹೇಳುವರು -

**ಸ್ವಾಹಾದ್ವಾರೇಣ ನದೀತೀರೇ ಶರಕಾನನೇ ಚಚ್ಛರ್ದ । ಇತಿ ಭಾರತೋಕ್ತೇಃ ।**

ಅಗ್ನಿಯು ಆ ರೇತಸ್ಸನ್ನು ತನ್ನ ಪತ್ನಿಯಾದ ಸ್ವಾಹಾಳಲ್ಲಿ ಇರಿಸಿದನು. ಅವಳೂ ಅದನ್ನು ತಡೆಯಲಾಗದೇ ಹುಲ್ಲುಗಾಡಿನಲ್ಲಿ ಚೆಲ್ಲಿದಳು ಎಂಬುದಾಗಿ ಭಾರತದಲ್ಲಿದೆ. ಅದು ನಿರ್ಣಾಯಕವಾದ್ದರಿಂದ ಅದರನುಸಾರ ಅರ್ಥ ಮಾಡಬೇಕು.

**ಉಳಿದ ಪುರಾಣಗಳಿಗೆ ಅನುಸಾರವಾಗಿ ಕಥೆ ತಿಳಿಯುವುದಾದರೆ :-**

ರುದ್ರದೇವರು ಪಾರ್ವತಿಯ ಜೊತೆ ಸಂಭೋಗ ಮಾಡುವ ಸಮಯದಲ್ಲಿ ದೇವತೆಗಳು ಅಗ್ನಿಯನ್ನು ಕಳಿಸಿದರು. ಅವನ ಸಮಕ್ಷಮದಲ್ಲಿ ಲಜ್ಜೆಯಿಂದ ಪಾರ್ವತಿಯು ವೀರ್ಯಧಾರಣ ಮಾಡಲು ಅಸಮರ್ಥಳಾದಳು. ಅದನ್ನರಿತು ರುದ್ರದೇವರು ಆಕಾಶದಲ್ಲಿ ಆ ವೀರ್ಯವನ್ನು ವಿಸರ್ಜಿಸಿದರು. ಅದು ಗಂಗೆಯಲ್ಲಿ ಬಿದ್ದಿತು. ಹರನು ಸಿಟ್ಟಿನಿಂದ ಅದನ್ನು

ತೆಗೆದುಕೊಂಡು ಅಗ್ನಿಯ ಮುಖದಲ್ಲಿ ಹಾಕಿದನು. ಅಗ್ನಿಯು ತಡೆಯಲಶಕ್ಯವಾದ ಆ ವೀರ್ಯವನ್ನು ಸ್ವಾಹಾಳಲ್ಲಿ ಇರಿಸಿದನು. ಅವಳೂ ಅದನ್ನು ತಡೆಯಲಾಗದೇ ನದೀತೀರದಲ್ಲಿ ಹುಲ್ಲುಗಾಡಿನಲ್ಲಿ ಹಾಕಿದಳು ಎಂಬುದಾಗಿ ಕಥೆಯ ರೀತಿಯನ್ನು ತಿಳಿಯಬೇಕು. ||೬೪||

ಒಂದೇ ಮುಖದಿಂದ ಆರುಜನರ ಸ್ತನಪಾನ ಸ್ಕಂದನಿಗೆ ಹೇಗೆ ಸಾಧ್ಯ ? ಎಂದರೆ, ಅದಕ್ಕೆ ಉತ್ತರ ಹೇಳುವರು -

**ಷಡ್ಭಿರ್ಮುಖೈಃ ಸ್ತನಂ ಪೀತ್ವಾ ಸ ಬಾಲಃ ಷಣ್ಮುಖೋಽಭವತ್ ।**
**ತತಶ್ಚಕ್ರುಃ ಸೈನ್ಯಪಾಲಂ ಸರ್ವಾಸುರಭಯಂಕರಮ್ ||೬೫ ||**

|| ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ ಅಷ್ಟಮೋಽಧ್ಯಾಯಃ ||

ಸಃ ಬಾಲಃ=ಆ ಶಿಶುವು ಷಡ್ಭಿಃ ಮುಖೈಃ=ಆರು ಮುಖಗಳಿಂದ ಸ್ತನಂ ಪೀತ್ವಾ=ಸ್ತನಪಾನ ಮಾಡಿ ಷಣ್ಮುಖಃ ಅಭವತ್=ಆರುಮುಖದವನಾದನು (ಷಣ್ಮುಖ ಎಂದು ಕರೆಸಿಕೊಂಡನು). ತತಃ=ಅನಂತರ ಸರ್ವಾಸುರಭಯಂಕರಂ=ಎಲ್ಲ ದೈತ್ಯರಿಗೆ ಭಯವನ್ನುಂಟುಮಾಡುವ ಅವನನ್ನು ದೇವಾಃ=ದೇವತೆಗಳು ಸೈನ್ಯಪಾಲಂ ಚಕ್ರುಃ=ಸೇನಾಪತಿಯನ್ನಾಗಿ ಮಾಡಿಕೊಂಡರು.

|| ಇಲ್ಲಿಗೆ ಎಂಟನೇ ಅಧ್ಯಾಯವು ಮುಗಿಯಿತು ||

## ಅಥ ನವಮೋಽಧ್ಯಾಯಃ

ಇಲ್ಲಿಯವರೆಗೆ ಮನುಕನ್ಯೆಯರ ಸಂತಾನವನ್ನು ನಿರೂಪಿಸುವದರಿಂದಲೇ ಬ್ರಹ್ಮಪುತ್ರರಾದ ಮರೀಚಿ ಮುಂತಾದವರ ಸಂತತಿಯು ವರ್ಣಿಸಲ್ಪಟ್ಟಿತು. ಈಗ ಉಳಿದ ಬ್ರಹ್ಮಪುತ್ರರ ಸ್ಥಿತಿಯನ್ನು ಹೇಳುವರು. ಮತ್ತು ಸಂಸಾರದಲ್ಲಿ ವಿರಕ್ತನಾದವನಿಗೆ ಶ್ರೀಹರಿಯ ಪಾದಗಳೇ ಶರಣವೆಂದು ಈ ಅಧ್ಯಾಯದಲ್ಲಿ ಹೇಳುವರು. ಅದರಲ್ಲಿಯೂ ಪರಮಭಗವದ್ಭಕ್ತನಾದ ಧ್ರುವನ ಚರಿತ್ರೆ ಹೇಳಲು, ಹೇಯವಾದುದರಿಂದ ಅಧರ್ಮನೆಂಬ ಬ್ರಹ್ಮಪುತ್ರನ ಚರಿತ್ರವನ್ನೂ ಹೇಳುವರು -

**ಸನಕಾದ್ಯಾ ನಾರದಶ್ಚ ಋಭುರ್ಹಂಸೋಽರುಣಿರ್ಯತಿಃ ।**
**ನೈತೇ ಗೃಹಾನ್ ಬ್ರಹ್ಮಸುತಾ ಹ್ಯವಸನ್ನೂರ್ಧ್ವರೇತಸಃ ॥೧॥**

ಸನಕಾದ್ಯಾಃ=ಸನಕ,ಸನಂದನ,ಸನತ್ಕುಮಾರ,ಸನತ್ಸುಜಾತರೇ ಮೊದಲಾದವರು ಚ=ಮತ್ತು ನಾರದಃ=ನಾರದರು ಋಭುಃ ಹಂಸಃ ಆರುಣಿಃ ಯತಿಃ ಏತೇ=ಇವರು ಒಂಭತ್ತು ಜನ ಬ್ರಹ್ಮಸುತಾಃ=ಬ್ರಹ್ಮನ ಮಕ್ಕಳು ಗೃಹಾನ್ ನಾವಸನ್=ಮನೆಯನ್ನು ಆಶ್ರಯಿಸಲಿಲ್ಲ. ಕಿಂತು ಊರ್ಧ್ವರೇತಸಃ=ಪರಮಹಂಸರು ಅರ್ಥಾತ್ ಸನ್ಯಾಸಿಗಳು ಆದರು. ಹುಟ್ಟುತ್ತಲೇ ಸನ್ಯಾಸಿಗಳಾದರು, ಗೃಹಸ್ಥಾಶ್ರಮ ಸ್ವೀಕರಿಸಲಿಲ್ಲವಾದ್ದರಿಂದ ಅವರ ಸಂತಾನವಿಲ್ಲವೆಂದು ಭಾವ. ॥೧॥

**ಮೃಷಾಽಧರ್ಮಸ್ಯ ಭಾರ್ಯಾಽಸೀದ್ದಂಭಂ ಮಾಯಾಂ ಚ ಶತ್ರುಹನ್ ।**
**ಅಸೂತ ಮಿಥುನಂ ತತ್ತು ನಿರ್ಋತಿರ್ಜಗೃಹೇಽಪ್ರಜಃ ॥೨॥**

ಹೇ ಶತ್ರುಹನ್=ಎಲೋ ಶತ್ರುಸಂಹಾರಕನಾದ ಪರೀಕ್ಷಿತನೇ ! ಮೃಷಾ=ಮೃಷಾ ಎಂಬುವಳು ಅಧರ್ಮಸ್ಯ=ಬ್ರಹ್ಮಪುತ್ರನಾದ ಅಧರ್ಮನ ಭಾರ್ಯಾ=ಹೆಂಡತಿಯು ಆಸೀತ್=ಆದಳು. ದಂಭಂ ಮಾಯಾಂ ಚ=ಇಲ್ಲದಿರುವ ಮಹತ್ವವನ್ನು ತೋರಿಸುವದು

ದಂಭ. ಮಾಯಾ ಎಂದರೆ ಕಾಪಟ್ಯ. ಇವುಗಳನ್ನು, ಅಸೂತ=ಹೆತ್ತಳು. ಅಪ್ರಜಃ=ಸಂತತಿ ಇಲ್ಲದ ನಿರ್ಋತಿಃ=ನಿರ್ಋತಿಯು ತತ್ ಮಿಥುನಂ=ದಂಭ ಮತ್ತು ಮಾಯಾ ಇವುಗಳ ದ್ವಂದ್ವವನ್ನು ಜಗೃಹೇ=ಸ್ವೀಕರಿಸಿದನು.

**ವಿ.ವಿ.** ಇಲ್ಲಿ ಮೃಷಾ-ಅಧರ್ಮ-ದಂಭ-ಮಾಯಾ ಮುಂತಾದ ಶಬ್ದಗಳಿಂದ ಅಭಿಮಾನಿ ಜೀವರನ್ನು ತಗೆದುಕೊಳ್ಳಬೇಕು. ಉದಾ :- ಅಧರ್ಮ=ಪಾಪಾಭಿಮಾನಿಯಾದ ಜೀವ, ಮೃಷಾ=ಸುಳ್ಳಿಗೆ ಅಭಿಮಾನಿಯಾದ ಜೀವ ಇತ್ಯಾದಿಯಾಗಿ. ।।೨।।

**ತಯೋಃ ಸಮಭವಲ್ಲೋಭೋ ನಿಕೃತಿಶ್ಚ ಮಹಾಮತೇ ।**
**ತಾಭ್ಯಾಂ ಕ್ರೋಧಶ್ಚ ಹಿಂಸಾ ಚ ದುರುಕ್ತಿಶ್ಚ ತಯೋಃ ಕಲಿಃ ।।೩।।**

ಹೇ *ಮಹಾಮತೇ=ಬುದ್ಧಿಶಾಲಿಯಾದ ಪರೀಕ್ಷಿತನೇ ! ತಯೋಃ=ದಂಭ ಮತ್ತು ಮಾಯಾ ಎಂಬ ದಂಪತಿಗಳಿಗೆ ಲೋಭಃ=ಲೋಭವು ಚ=ಮತ್ತು ನಿಕೃತಿಃ=ಶಠತೆಯೂ ಸಮಭವತ್=ಜನಿಸಿದರು. ತಾಭ್ಯಾಂ=ಲೋಭ ಮತ್ತು ಶಠತೆ ಎಂಬ ದಂಪತಿಗಳಿಂದ ಕ್ರೋಧಃ=ಸಿಟ್ಟು ಚ=ಮತ್ತು ಹಿಂಸಾ=ಹಿಂಸೆಯು ಸಮಭವತ್=ಹುಟ್ಟಿದರು. ತಯೋಃ=ಕ್ರೋಧ ಮತ್ತು ಹಿಂಸಾ ಎಂಬ ದಂಪತಿಗಳಿಗೆ ದುರುಕ್ತಿಃ=ದುಷ್ಟಮಾತುಗಳು ಚ=ಮತ್ತು ಕಲಿಃ=ಕಲಹ (ಜಗಳ) ಇವರು ಜನಿಸಿದರು.

*ಮಹ=ಸರ್ವಪೂಜ್ಯನಾದ ಶ್ರೀಹರಿಯಲ್ಲಿ ಆ=ಚೆನ್ನಾಗಿ ಮತಿ=ಬುದ್ಧಿಯುಳ್ಳವನೇ ಎಂಬುದಾಗಿ ಸಂಬೋಧನ ಮಾಡುವ ಮೂಲಕ ''ನಿನ್ನಲ್ಲಿ ಲೋಭಾದಿಗಳಿಲ್ಲವೆಂದು ಸೂಚಿಸುತ್ತಿರುವರು. ಮತ್ತು ಈ ವಂಶವನ್ನು ಹೇಳುವದು ಶ್ರೋತೃಗಳು ಈ ಲೋಭಾದಿಗಳನ್ನು ವರ್ಜಿಸಲೆಂದೇ ಹೊರತು ವಂಶವರ್ಣನೆಯು ಪುಣ್ಯದಾಯಕವೆಂದಲ್ಲ ಎಂದೂ ಸೂಚಿಸುತ್ತಿರುವರು. ।।೩।।

**ದುರುಕ್ತೌ ಕಲಿರಾಧತ್ತ ಭಯಂ ಮೃತ್ಯುಂ ಚ ಸತ್ತಮ ।**
**ತಯೋಶ್ಚ ಮಿಥುನಂ ಜಜ್ಞೇ ಯಾತನಾ ನಿರಯಸ್ತಥಾ ।।೪।।**

ಕಲಿಃ=ಕಲಿಯು ದುರುಕ್ತೌ=ದುರುಕ್ತಿಯಲ್ಲಿ ಭಯಂ=ಭಯನನ್ನು ಚ=ಮತ್ತು ಮೃತ್ಯುಂ=ಮೃತ್ಯುಳನ್ನು ಆಧತ್ತ=ಹುಟ್ಟಿಸಿದನು. ತಯೋಃ=ಆ ಭಯ ಮೃತ್ಯುಗಳಿಗೆ ಯಾತನಾ=ತೀವ್ರವಾದ ದುಃಖ ತಥಾ=ಹಾಗೂ ನಿರಯಃ=ನರಕವು ಎಂಬ ಮಿಥುನಂ= ಸ್ತ್ರೀಪುರುಷದ್ವಂದ್ವವು ಜಜ್ಞೇ=ಜನಿಸಿತು. ಇಲ್ಲಿ ಅಣ್ಣ ತಂಗಿಯರೇ ದಂಪತಿಗಳಾದದ್ದು ಅಧರ್ಮದಿಂದ ಎಂದು ತಿಳಿಯಬೇಕು. ।।೪।।

**ಏತೇ ಹ್ಯಧರ್ಮವೃಕ್ಷಸ್ಯ ವಂಶಾಃ ಸಂಸೃತಿಹೇತವಃ ।**
**ಶ್ರೇಯಸ್ಕಾಮೋ ನ ಸೇವೇತ ನಿತರಾಮಾಶ್ರಮೋತ್ತಮೀ ॥೫॥**

ಏತೇ=ಮೇಲೆ ಹೇಳಿದವುಗಳು ಅಧರ್ಮವೃಕ್ಷಸ್ಯ=ಅಧರ್ಮವೆಂಬ ಗಿಡದ ವಂಶಾಃ=ಸಂತತಿಗಳು ಹಿ=ಯಾವ ಕಾರಣ ಸಂಸೃತಿಹೇತವಃ=ಸಂಸಾರಕ್ಕೆ ಕಾರಣವಾಗಿವೆಯೋ ತಸ್ಮಾತ್=ಆದ್ದರಿಂದ ಶ್ರೇಯಸ್ಕಾಮಃ=ಸಂಸಾರಮೋಚನವನ್ನು ಇಚ್ಛಿಸುವವನು ನ ಸೇವೇತ=ಅಸತ್ಯವಚನ ಮುಂತಾದವುಗಳನ್ನು ಅನುಸರಿಸಬಾರದು. ಆಶ್ರಮೋತ್ತಮೀ= ಸನ್ಯಾಸಿಯಂತೂ ನಿತರಾಂ ನ ಸೇವೇತ=ಸುಳ್ಳು ಹೇಳುವದು, ಇಲ್ಲದಿರುವ ಮಹತ್ವ ತೋರಿಸುವದು ಮುಂತಾದವುಗಳನ್ನು ಮಾಡಲೇಬಾರದು ಎಂದು ಭಾವ. ॥೫॥

**ಸಂಗ್ರಹೇಣ ಮಯಾ ಖ್ಯಾತಃ ಅನುಸರ್ಗಸ್ತವಾನಘ ।**
**ತ್ರಿಃ ಶ್ರುತ್ವೈತತ್ ಪುಮಾನ್ ಪುಣ್ಯಂ ವಿಧುನೋತ್ಯಾತ್ಮನೋ ಮಲಮ್ ॥೬॥**

ಹೇ ಅನಘ=ಪಾಪರಹಿತನೇ (ವಿದುರನೇ) ! ಮಯಾ=ನನ್ನಿಂದ ಅನುಸರ್ಗಃ= ಅಮುಖ್ಯವಾದ ಸೃಷ್ಟಿಯು ಸಂಗ್ರಹೇಣ=ಸಂಕ್ಷೇಪವಾಗಿ ಖ್ಯಾತಃ=ಹೇಳಲ್ಪಟ್ಟಿತು. ಪುಮಾನ್=ಅಧಿಕಾರಿಯು ಪುಣ್ಯಂ=ತ್ಯಾಗ ಮಾಡುವದರಿಂದ ಪುಣ್ಯಜನಕವಾದ ಏತತ್=ಅಧರ್ಮದ ವಂಶವನ್ನು ತ್ರಿಃ=ಮೂರುಸಲ ಶ್ರುತ್ವಾ=ಕೇಳಿ ಆತ್ಮನಃ=ಮನಸ್ಸಿನ ಮಲಂ=ರಾಗಾದಿದೋಷಗಳನ್ನು ವಿಧುನೋತಿ=ಕಳೆದುಕೊಳ್ಳುವನು. ॥೬॥

**ಅಥಾತಃ ಕೀರ್ತಯೇ ವಂಶಂ ಪುಣ್ಯಕೀರ್ತೇಃ ಕುರೂದ್ವಹ ।**
**ಸ್ವಾಯಂಭುವಸ್ಯಾಪಿ ಮನೋರ್ಹರೇರಂಶಾಂಶಜನ್ಮನಃ ॥೭॥**

ಹೇ ಕುರೂದ್ವಹ=ವಿದುರನೇ ! ಅತಃ=ಪ್ರಯೋಜನವಿರುವದರಿಂದ ಅಥ=ಮಂಗಲ- ಕರವಾದ, ಪುಣ್ಯಕೀರ್ತೇಃ=ಒಳ್ಳೆಯ ಕೀರ್ತಿವಂತನಾದ ಹರೇಃ=ಬ್ರಹ್ಮಾಂಡಾಂತರ್ಗತನಾದ ಪುರುಷನಾಮಕನ ಅಂಶಾಂಶಜನ್ಮನಃ ಅಂಶಸ್ಯ=ಶ್ವೇತದ್ವೀಪದಲ್ಲಿರುವ ಅವತಾರವೇನಿದೆಯೋ ಅದರ ಅಂಶೇನ=ರಾಜರಾಜೇಶ್ವರ ಎಂಬ ಅಂಶದಿಂದ ಕೂಡಿದ ಜನ್ಮನಃ=ಉತ್ಪತ್ತಿಯುಳ್ಳ ಸ್ವಾಯಂಭುವಸ್ಯ ಮನೋಃ=ಸ್ವಾಯಂಭುವ ಮನುವಿನ ವಂಶಂ=ವಂಶವನ್ನು ಕೀರ್ತಯೇ=ಹೇಳುವೆನು.

**ಭಾಗವತ ತಾತ್ಪರ್ಯ -**

ಇಲ್ಲಿ ಸ್ವಾಯಂಭುವಮನುವು ಮತ್ಸ್ಯಾದಿಗಳಂತೆ ಸಾಕ್ಷಾತ್ ಹರಿಯ ಅವತಾರವೆಂದು ತೋರುವುದು. ಈ ಭ್ರಾಂತವಾದ ಅರ್ಥವನ್ನು ನಿವಾರಿಸಲು ಅದರ ತಾತ್ಪರ್ಯವನ್ನು ಪ್ರಮಾಣದಿಂದಲೇ ತಿಳಿಸುವರು -

**ಆವಿಷ್ಟಾ ಹರಿಣಾ ಜೀವಾ ಬ್ರಹ್ಮಾ ದಕ್ಷೋ ಮನುಃ ಪೃಥುಃ ।**
**ಶಕ್ರಾದ್ಯಾ ಋಷಯಶ್ಚೈವ ಮತ್ಸ್ಯವ್ಯಾಸಾದಯೋ ಹರಿಃ ॥ ಇತಿ ಬ್ರಹ್ಮವೈವರ್ತೇ ॥**

ಬ್ರಹ್ಮಾದಿದೇವತೆಗಳು, ಋಷಿಗಳು, ದಕ್ಷಪ್ರಜಾಪತಿ, ಸ್ವಾಯಂಭುವಮನು, ಪೃಥುಚಕ್ರವರ್ತಿ, ಇಂದ್ರ ಮುಂತಾದವರು ಶ್ರೀಹರಿಯ ಆವೇಶವುಳ್ಳವರು. ಮತ್ಸ್ಯ-ವ್ಯಾಸ ಮುಂತಾದವು ಶ್ರೀಹರಿಯ ಸಾಕ್ಷಾದವತಾರಗಳು ಎಂದು ಭಾವ. ।।೭।।

**ಪ್ರಿಯವ್ರತೋತ್ತಾನಪಾದೌ ಶತರೂಪಾಪತೇಃ ಸುತೌ ।**
**ವಾಸುದೇವಸ್ಯ ಕಲಯಾ ರಕ್ಷಾಯಾಂ ಜಗತಃ ಸ್ಥಿತೌ ।।೮।।**

ಶತರೂಪಾಪತೇಃ=ಶತರೂಪಾದೇವಿಯ ಗಂಡನಾದ ಸ್ವಾಯಂಭುವಮನುವಿನ ಸುತೌ=ಮಕ್ಕಳಾದ ಪ್ರಿಯವ್ರತೋತ್ತಾನಪಾದೌ=ಪ್ರಿಯವ್ರತ ಮತ್ತು ಉತ್ತಾನಪಾದರು ವಾಸುದೇವಸ್ಯ ಕಲಯಾ=ಶ್ರೀಹರಿಯ ರಾಜರಾಜೇಶ್ವರ ಎಂಬ ಅಂಶದಿಂದ ಆವಿಷ್ಟರಾಗಿ ಜಗತಃ=ಪ್ರಪಂಚದ ರಕ್ಷಾಯಾಂ ಸ್ಥಿತೌ=ಪಾಲನೆಯಲ್ಲಿ ರತರಾದರು.

**ಭಾಗವತ ತಾತ್ಪರ್ಯ -**

ಇಲ್ಲಿ ''ಪರಮಾತ್ಮನ ಸ್ವರೂಪಾಂಶರಾಗಿ ಜಗತ್ತಿನ ರಕ್ಷಣೆಯಲ್ಲಿ ತೊಡಗಿದರು'' ಎಂಬ ಅನ್ಯಥಾಪ್ರತೀತಿಯನ್ನು ನಿವಾರಿಸಲು ವಿವಕ್ಷಿತವಾದ ತಾತ್ಪರ್ಯವನ್ನು ಪ್ರಮಾಣದಿಂದಲೇ ತಿಳಿಸುವರು -

**ಪ್ರಿಯವ್ರತೋತ್ತಾನಪಾದಪ್ರಮುಖೇಷು ಹರಿಃ ಸ್ವಯಮ್ ।**
**ಆವಿಷ್ಟಃ ಸರ್ವಭೂತೇಷು ಋಷಭಾದ್ಯಾಃ ಸ್ವಯಂ ಹರಿಃ ॥ ಇತಿ ಹರಿವಂಶೇಷು ॥**

ಪ್ರಿಯವ್ರತ-ಉತ್ತಾನಪಾದ ಮುಂತಾದ ಪುಣ್ಯಕೀರ್ತಿಗಳಾದ ರಾಜರುಗಳಲ್ಲಿ ಶ್ರೀಹರಿಯು ರಾಜರಾಜೇಶ್ವರರೂಪದಿಂದ ಆವಿಷ್ಟನಾಗಿರುವನು. ಇನ್ನು ಋಷಭ-ತಾಪಸ ಮುಂತಾದವರು ಸಾಕ್ಷಾತ್ ಶ್ರೀಹರಿಯ ಅಂಶರಾಗಿದ್ದಾರೆ ಎಂದು ಭಾವ. ।।೮।।

ಪ್ರಿಯವ್ರತನವಂಶವು ಬಹಳ ದೊಡ್ಡದಾದುದರಿಂದ ಸೂಚೀಕಟಾಹನ್ಯಾಯದಿಂದ ಚಿಕ್ಕದಾದ ಉತ್ತಾನಪಾದನ ವಂಶವನ್ನು ನಿರೂಪಿಸುವರು-

**ಜಾಯೇ ಉತ್ತಾನಪಾದಸ್ಯ ಸುನೀತಿಃ ಸುರುಚಿಸ್ತಯೋಃ ।**
**ಸುರುಚಿಃ ಪ್ರೇಯಸೀ ಪತ್ಯುರ್ನೇತರಾ ಯತ್ಸುತೋ ಧ್ರುವಃ ।।೯।।**

ಉತ್ತಾನಪಾದಸ್ಯ=ಉತ್ತಾನಪಾದನಿಗೆ ಸುನೀತಿಃ=ಸುನೀತಿಯು ಸುರುಚಿಃ=ಸುರುಚಿಯೂ ಜಾಯೇ=ಪತ್ನಿಯರು. ತಯೋಃ=ಅವರೀರ್ವರಲ್ಲಿ ಸುರುಚಿಃ=ಸುರುಚಿಯು ಪತ್ಯುಃ=ಗಂಡನಿಗೆ

ಪ್ರೇಯಸೀ=ಬಹಳ ಪ್ರೀತಿಪಾತ್ರಳು. ಧ್ರುವಃ=ಧ್ರುವನೆಂಬುವನು ಯತ್ಸುತಃ=ಯಾವ ಸುನೀತಿಯ ಮಗನಾಗಿರುವನೋ ಅಂತಹ ಇತರಾ=ಸುರುಚಿಯಿಂದ ಭಿನ್ನಳಾದ ಸುನೀತಿಯು ಪತ್ಯುಃ=ಗಂಡನಿಗೆ ನ=ಪ್ರಿತಿಪಾತ್ರಳಾಗಿರಲಿಲ್ಲ. ॥೯॥

**ಏಕದಾ ಸುರುಚೇಃ ಪುತ್ರಮಂಕಮಾರೋಪ್ಯ ಲಾಲಯನ್ ।**
**ಉತ್ತಮಂ ನಾರುರುಕ್ಷಂತಂ ಧ್ರುವಂ ರಾಜಾऽಭ್ಯನಂದತ ॥೧೦॥**

ಏಕದಾ=ಒಂದು ದಿನ ರಾಜಾ=ಉತ್ತಾನಪಾದನು ಸುರುಚೇಃ ಪುತ್ರಂ ಉತ್ತಮಂ= ಸುರುಚಿಯ ಮಗನಾದ ಉತ್ತಮನನ್ನು ಅಂಕಂ ಆರೋಪ್ಯ ಲಾಲಯನ್=ತೊಡೆಯ ಮೇಲೆ ಕೂಡಿಸಿಕೊಂಡು ಆಡಿಸುತ್ತ ಇರುವಾಗ ಆರುರುಕ್ಷಂತಂ=ತೊಡೆಯ ಮೇಲೆ ಏರಲು ಇಚ್ಛಿಸುವ ಧ್ರುವಂ=ಧ್ರುವನನ್ನು ನ ಅಭ್ಯನಂದತ=ಸಮ್ಮತಿಸಲಿಲ್ಲ. ॥೧೦॥

**ತಥಾ ಚಿಕೀರ್ಷಮಾಣಂ ತಂ ಸಪತ್ನ್ಯಾಸ್ತನಯಂ ಧ್ರುವಮ್ ।**
**ಸುರುಚಿಃ ಶೃಣ್ವತೋ ರಾಜ್ಞಃ ಸೇರ್ಷ್ಯಮಾಹಾತಿಗರ್ವಿತಾ ॥೧೧॥**

ತಥಾ ಚಿಕೀರ್ಷಮಾಣಂ=ಉತ್ತಮನಂತೆ ತೊಡೆಯಮೇಲೆ ಕೂಡಲಿಚ್ಛಿಸುವ, ಸಪತ್ನ್ಯಾಃ ತನಯಂ=ಸವತಿಯ ಮಗನಾದ, ತಂ ಧ್ರುವಂ=ಆ ಧ್ರುವನನ್ನು ಕುರಿತು ಅತಿಗರ್ವಿತಾ ಸುರುಚಿಃ=ಬಹಳ ಗರ್ವಿಷ್ಠಳಾದ ಸುರುಚಿಯು ರಾಜ್ಞಃ=ರಾಜನು ಶೃಣ್ವತಃ=ಕೇಳುತ್ತಿರುವಾಗಲೇ ಸೇರ್ಷ್ಯಂ ಆಹ=ಈರ್ಷೆಯಿಂದ ಹೇಳಿದಳು. ॥೧೧॥

ಗರ್ವದ ಮಾತುಗಳನ್ನೇ ಮೂರು ಶ್ಲೋಕಗಳಿಂದ ಹೇಳುವರು -

**ನ ವತ್ಸ ನೃಪತೇರ್ಧಿಷ್ಣ್ಯಂ ಭವಾನಾರೋಢುಮರ್ಹತಿ ।**
**ನ ಗೃಹೀತೋ ಮಯಾ ಯತ್ತ್ವಂ ಕುಕ್ಷಾವಪಿ ನೃಪಾತ್ಮಜ ॥೧೨॥**

ವತ್ಸ ನೃಪಾತ್ಮಜ=ಮಗುವೇ ರಾಜಪುತ್ರನೇ ! ಭವಾನ್=ನೀನು ಯತ್=ಯಾವ ಕಾರಣ ಮಯಾ=ನನ್ನಿಂದ ಕುಕ್ಷೌ=ಗರ್ಭದಲ್ಲಿ ನ ಗೃಹೀತಃ=ಸ್ವೀಕರಿಸಲ್ಪಟ್ಟಿಲ್ಲವೋ ತತ್=ಆ ಕಾರಣ ನೃಪತೇಃ ಧಿಷ್ಣ್ಯಂ=ರಾಜನ ಸಿಂಹಾಸನವನ್ನು ಆರೋಢುಂ ನ ಅರ್ಹತಿ=ಏರಲು ಯೋಗ್ಯನಾಗಿರುವುದಿಲ್ಲ. ॥೧೨॥

**ಬಾಲೋऽಸಿ ಬತ ನಾತ್ಮಾನಮನ್ಯಸ್ತ್ರೀಗರ್ಭಸಂಭೃತಮ್ ।**
**ನೂನಂ ವೇದ ಭವಾನ್ ಯಸ್ಯ ದುರ್ಲಭೇऽರ್ಥೇ ಮನೋರಥಃ ॥೧೩॥**

ನೀನು, ಬಾಲಃ ಅಸಿ=ಚಿಕ್ಕವನಾಗಿರುವಿ. (ಮಂದಬುದ್ಧಿಯುಳ್ಳವನು ಎಂದರ್ಥ.) ಅನ್ಯಸ್ತ್ರೀಗರ್ಭಸಂಭೃತಂ=ಬೇರೆ ಹೆಣ್ಣುಮಗಳ ಹೊಟ್ಟೆಯಲ್ಲಿ ಜನಿಸಿದ ಆತ್ಮಾನಂ=ನಿನ್ನನ್ನು

ಭವಾನ್=ನೀನು ನೂನಂ ನ ವೇದ=ನಿಜವಾಗಿ ತಿಳಿದಿಲ್ಲ, ಯಸ್ಯ=ಯಾವ ನಿನಗೆ ದುರ್ಲಭೇ ಅರ್ಥೇ=ದೊರೆಯಲಾರದ ವಿಷಯದಲ್ಲಿ ಮನೋರಥಃ=ಅಭಿಲಾಷೆಯು ಹುಟ್ಟಿರುವುದು ಬತ=ಖೇದವು. ।।೧೩।।

**ತಪಸಾಽಽರಾಧ್ಯ ಪುರುಷಂ ತಸ್ಯೈವಾನುಗ್ರಹೇಣ ಮೇ ।**
**ಗರ್ಭೇ ತ್ವಂ ಸಾಧಯಾತ್ಮಾನಂ ಯದೀಚ್ಛಸಿ ನೃಪಾಸನಮ್ ।।೧೪।।**

ಯದಿ=ಒಂದುವೇಳೆ ನೃಪಾಸನಂ=ರಾಜನ ಸಿಂಹಾಸನವನ್ನು ಇಚ್ಛಸಿ ತರ್ಹಿ= ಅಪೇಕ್ಷಿಸುವಿಯಾದರೆ ಪುರುಷಂ=ಶ್ರೀಹರಿಯನ್ನು ತಪಸಾ ಆರಾಧ್ಯ=ತಪಸ್ಸಿನಿಂದ ಆರಾಧಿಸಿ ತಸ್ಯ ಅನುಗ್ರಹೇಣ ಏವ=ಅವನ ಅನುಗ್ರಹದಿಂದಲೇ ಮೇ ಗರ್ಭೇ=ಸಿಂಹಾಸನಕ್ಕೆ ಯೋಗ್ಯನಾದ ಮಗನನ್ನು ಪಡೆಯುವ ಈ ನನ್ನ ಉದರದಲ್ಲಿ ಆತ್ಮಾನಂ=ದೇಹವನ್ನು ಸಾಧಯ=ಸಂಪಾದಿಸು. ।।೧೪।।

ಧ್ರುವನು ಮಲತಾಯಿಯ ಮಾತು ಕೇಳಿ ಏನು ಮಾಡಿದನೆಂದು ಹೇಳುವರು -

**ಮೈತ್ರೇಯ ಉವಾಚ -**

**ಮಾತುಃ ಸಪತ್ನ್ಯಾಃ ಸುದುರುಕ್ತಿವಿದ್ಧಃ**
**ಶ್ವಸನ್ ರುಷಾ ದಂಡಹತೋ ಯಥಾಽಹಿಃ ।**
**ಹಿತ್ವಾ ಮಿಷಂತಂ ಪಿತರಂ ಸನ್ನವಾಚಂ**
**ಜಗಾಮ ಮಾತುಃ ಸ ರುದನ್ ಸಕಾಶಮ್ ।।೧೫।।**

ಸಃ=ಧ್ರುವನು ಯಥಾ ದಂಡಹತಃ ಅಹಿಃ=ಕೋಲಿನ ಏಟುತಿಂದ ಹಾವಿನಂತೆ ಸಪತ್ನ್ಯಾಃ ಮಾತುಃ=ಮಲತಾಯಿಯ ಸುದುರುಕ್ತಿವಿದ್ಧಃ=ಅತ್ಯಂತ ನಿಷ್ಠುರ ಮಾತುಗಳಿಂದ ದುಃಖಿತನಾಗಿ ಶ್ವಸನ್=ನಿಟ್ಟುಸಿರು ಬಿಡುತ್ತಾ ರುಷಾ=ಸಿಟ್ಟಿನಿಂದ ಮಿಷಂತಂ=ನೋಡುತ್ತಿರುವ ಸನ್ನವಾಚಂ=ಮಾತನಾಡದಿರುವ ಪಿತರಂ=ತಂದೆಯನ್ನು ಹಿತ್ವಾ=ಬಿಟ್ಟು ರುದನ್=ಅಳುತ್ತಾ ಮಾತುಃ ಸಕಾಶಂ ಜಗಾಮ=ತಾಯಿಯ ಹತ್ತಿರ ತೆರಳಿದನು. ।।೧೫।।

**ತಂ ನಿಃಶ್ವಸಂತಂ ಸ್ಫುರಿತಾಧರೋಷ್ಠಂ ಸುನೀತಿರುತ್ಸಂಗಮುದೂಹ್ಯ ಬಾಲಮ್ ।**
**ನಿಶಮ್ಯ ತತ್ಪೌರಮುಖಾನ್ನಿತಾಂತಂ ಸಾ ವಿವ್ಯಥೇ ಯದ್ಗದಿತಂ ಸಪತ್ನ್ಯಾ ।।೧೬।।**

ಸುನೀತಿಃ=ಸುನೀತಿಯು ನಿಃಶ್ವಸಂತಂ=ನಿಟ್ಟುಸಿರು ಬಿಡುತ್ತಿರುವ ಸ್ಫುರಿತಾಧರೋಷ್ಠಂ= ನಡಗುತ್ತಿರುವ ಕೆಳತುಟಿಯುಳ್ಳ ತಂ ಬಾಲಂ=ಬಾಲಕನಾದ ಆ ಧ್ರುವನನ್ನು ಉತ್ಸಂಗಂ= ತೊಡೆಯಮೇಲೆ ಉದೂಹ್ಯ=ಕೂಡಿಸಿಕೊಂಡು, ಸಪತ್ನ್ಯಾ=ಸವತಿಯಿಂದ ಯದ್ಗದಿತಂ=ಏನು

ಹೇಳಲ್ಪಟ್ಟಿತ್ತೋ ತತ್=ಅದನ್ನು ಪೌರಮುಖಾತ್=ಪಟ್ಟಣಿಗರ ಮುಖದಿಂದ ನಿಶಮ್ಯ=ಕೇಳಿ ಸಾ=ಸುನೀತಿಯು ನಿತಾಂತಂ=ಬಹಳವಾಗಿ ವಿವ್ಯಥೇ=ದುಃಖಿತಳಾದಳು. ||೧೬||

**ಸೋತ್ಸೃಜ್ಯ ಧೈರ್ಯಂ ವಿಲಲಾಪ ಶೋಕ-**
**ದಾವಾಗ್ನಿನಾ ದಾವಲತೇವ ದಗ್ಧಾ ।**
**ವಾಕ್ಯಂ ಸಪತ್ನ್ಯಾಃ ಸ್ಮರತೀ ಸರೋಜ-**
**ಶ್ರಿಯಾ ದೃಶಾ ಬಾಷ್ಪಕಲಾಮುವಾಹ ||೧೭||**

ಸಾ=ಸುನೀತಿಯು ಧೈರ್ಯಂ ಉತ್ಸೃಜ್ಯ=ಧೈರ್ಯವನ್ನು ಕಳೆದುಕೊಂಡವಳಾಗಿ ಶೋಕದಾವಾಗ್ನಿನಾ=ದುಃಖವೆಂಬ ಕಾಡ್ಗಿಚ್ಚಿನಿಂದ ಸುಡಲ್ಪಟ್ಟ ದಾವಲತಾ ಇವ=ಕಾಡಿನಲ್ಲಿ ಬೆಳೆದ ಬಳ್ಳಿಯಂತಿರುವ ಸಾ ಬಾಲಾ=ಆ ಸುನೀತಿಯು ಸಪತ್ನ್ಯಾಃ=ಸವತಿಯ ವಾಕ್ಯಂ= ಮಾತುಗಳನ್ನು ಸ್ಮರತೀ=ನೆನೆಯುವವಳಾಗಿ ಸರೋಜಶ್ರಿಯಾ ದೃಶಾ=ಕಮಲದಂತೆ ಕಾಂತಿಯುಳ್ಳ ಕಣ್ಣಿನಿಂದ ಬಾಷ್ಪಕಲಾಂ ಉವಾಹ=ನೀರನ್ನು ಹರಿಸಿದಳು. ||೧೭||

**ದೀರ್ಘಂ ಶ್ವಸಂತೀ ವೃಜಿನಸ್ಯ ಪಾರ-**
**ಮಪಶ್ಯತೀ ಬಾಲಕಮಾಹ ಬಾಲಾ ।**
**ಮಾಽಮಂಗಲಂ ತಾತ ಪರೇಷು ಮಂಸ್ಥಾ**
**ಭುಂಕ್ತೇ ಜನೋ ಯತ್ಪರದುಃಖದಸ್ತತ್ ||೧೮||**

ದೀರ್ಘಂ ಶ್ವಸಂತೀ=ಏದುಸಿರು ಬಿಡುತ್ತಿರುವ ವೃಜಿನಸ್ಯ ಪಾರಂ=ದುಃಖದ ಕೊನೆಯನ್ನು ಅಪಶ್ಯತೀ=ಕಾಣದಿರುವ ಬಾಲಾ=ಸುನೀತಿಯು ಬಾಲಕಂ=ಧ್ರುವನನ್ನು ಕುರಿತು ತಾತ=ಮಗುವೇ ! ಪರೇಷು=ಶತ್ರುಗಳಲ್ಲಿ ಅಮಂಗಲಂ=ಕಲ್ಯಾಣವಾಗದಿರಲಿ ಎಂದು (ಹಾನಿಯನ್ನು) ಮಾ ಮಂಸ್ಥಾಃ=ಹೇಳದಿರು. ಯತ್=ಯಾವ ಕಾರಣ ಪರದುಃಖದಃ ಜನಃ=ಇನ್ನೊಬ್ಬರಿಗೆ ದುಃಖ ಕೊಟ್ಟವನು ತತ್=ಆ ದುಃಖವನ್ನು ಭುಂಕ್ತೇ=ಸ್ವಯಂ ತಾನು ಅನುಭವಿಸುವನು. ||೧೮||

ಪರರು ದ್ವೇಷದಿಂದ ಹೇಳಿದರೂ ಗುಣಗ್ರಾಹಿಗಳಾದವರಿಗೆ ಅದು ಪಥ್ಯವೇ ಎಂಬ ಭಾವನೆಯಿಂದ ಹೇಳುವಳು -

**ಸತ್ಯಂ ಸುರುಚ್ಯಾಽಭಿಹಿತಂ ಭವಾನ್ ಮೇ**
**ಯದ್ದುರ್ಭಗಾಯಾ ಉದರೇ ಗೃಹೀತಃ ।**
**ಸ್ತನ್ಯೇನ ವೃದ್ಧಶ್ಚ ವಿಲಜ್ಜತೇ ಯಾಂ**
**ಭಾರ್ಯೇತಿ ವಾ ವೋಢುಮಿಡಸ್ಪತಿರ್ಮಾಮ್ ||೧೯||**

ಯತ್=ಯಾವ ಕಾರಣ ಇಡಸ್ಪತಿಃ=ರಾಜನು ಯಾಂ ಮಾಂ=ಯಾವ ನನ್ನನ್ನು ಭಾರ್ಯಾ ಇತಿ=ಹೆಂಡತಿ ಎಂದು ವಾ=ಅಥವಾ ದಾಸಿ ಎಂದಾಗಲೀ ವೋಢುಂ=ಸ್ವೀಕರಿಸಲು (ಹೇಳಲು) ವಿಲಜ್ಜತೇ=ನಾಚುವನೋ ತಸ್ಯಾಃ=ಅಂತಹ ದುರ್ಭಗಾಯಾಃ=ದುಃಖಕ್ಕೆ ಕಾರಣವಾದ ಅದೃಷ್ಟವುಳ್ಳ ಮೇ (ಮಯಾ)=ನನ್ನಿಂದ ಉದರೇ=ಗರ್ಭದಲ್ಲಿ ಗೃಹಿತಃ ಧರಿಸಲ್ಪಟ್ಟಿರುವಿ. ಸ್ತನ್ಯೇನೈವ ವೃದ್ಧಶ್ಚ=ನನ್ನ ಎದೆಹಾಲಿನಿಂದಲೇ ಬೆಳೆದಿರುವಿ. (ಹೊರತು ತಂದೆ ಇತ್ತ ರಸಾಯನದಿಂದಲ್ಲ.) ತತ್=ಆದಕಾರಣ ಸುರುಚ್ಯಾ ಅಭಿಹಿತಂ=ಸುರುಚಿಯಿಂದ ಹೇಳಲ್ಪಟ್ಟದ್ದು ಸತ್ಯಂ=ನಿಜವೇ. (ನೀನು ನನ್ನ ಉದರದಲ್ಲಿ ಜನಿಸಲು ಶ್ರೀಹರಿಯನ್ನು ಆರಾಧಿಸು ಎಂದು ಹೇಳಿರುವುದು ಸತ್ಯವೇ.)॥೧೯॥

**ಆತಿಷ್ಠ ತತ್ತಾತ ವಿಮತ್ಸರಸ್ತ್ವ-**
**ಮುಕ್ತಂ ಸುಮಾತ್ರಾಽಪಿ ಯದವ್ಯಲೀಕಮ್ ।**
**ಆರಾಧಯಾಧೋಕ್ಷಜಪಾದಪದ್ಮಂ**
**ಯದೀಚ್ಛಸೇಽಧ್ಯಾಸನಮುತ್ತಮೋ ಯಥಾ ॥೨೦॥**

ತಾತ=ಮಗುವೇ ! ಸುಮಾತ್ರಾ ಉಕ್ತಮಪಿ=ತಾಯಿಯ ಸಮಾನಳಾದ ಸುರುಚಿಯಿಂದ ಹೇಳಲ್ಪಟ್ಟದ್ದರೂ ಸಹ ಯತ್=ಯಾವ ಕಾರಣ ಅವ್ಯಲೀಕಂ=ಸತ್ಯವಾಗಿದೆಯೋ (ಪ್ರಿಯವಾಗಿದೆಯೋ) ತತ್=ಆದ್ದರಿಂದ ಉತ್ತಮೋ ಯಥಾ=ಉತ್ತಮನಂತೆ ಅಧ್ಯಾಸನಂ=ಸಿಂಹಾಸನವನ್ನು ಯದಿ ಇಚ್ಛಸೇ=ಇಚ್ಛಿಸುವಿಯಾದರೆ ವಿಮತ್ಸರಃ ತ್ವಂ=ಮಾತ್ಸರ್ಯವಿಲ್ಲದ ನೀನು ತತ್=ಅವಳು ಹೇಳಿದ್ದನ್ನು ಆತಿಷ್ಠ=ಆಚರಿಸು. ಅಧೋಕ್ಷಜಪಾದಪದ್ಮಂ ಆರಾಧಯ=ಪರಮಾತ್ಮನ ಪಾದಾರವಿಂದಗಳನ್ನು ಆರಾಧಿಸು. ॥೨೦॥

ಧ್ರುವನಿಗೆ ರುಚಿ ಹುಟ್ಟಿಸಲು ಹಿಂದಿನ ವೃತ್ತಾಂತವನ್ನು ಹೇಳುವರು -

**ಯತ್ಪಾದಪದ್ಮಂ ಪರಿಚರ್ಯ ವಿಶ್ವ-**
**ವಿಭಾವನಾಯಾತ್ತಗುಣಾಭಿಪತ್ತೇಃ ।**
**ಅಜೋಽಧ್ಯತಿಷ್ಠತ್ ಖಲು ಪಾರಮೇಷ್ಠ್ಯಂ**
**ಪದಂ ಜಿತಾತ್ಮಾ ಶ್ವಸನಾಭಿವಂದ್ಯಮ್ ॥೨೧॥**

ವಿಶ್ವವಿಭಾವನಾಯ=ಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡಲು ಆತ್ತಗುಣಾಭಿಪತ್ತೇಃ ಆತ್ತ=ಸ್ವೀಕೃತವಾದ ಗುಣಾಭಿಪತ್ತೇಃ=ಸತ್ವಾದಿಗುಣಸಮೂಹವುಳ್ಳ ಯತ್ಪಾದಪದ್ಮಂ ಯತ್(ಯಸ್ಯ)=ಯಾವ ಶ್ರೀಹರಿಯ ಪಾದಪದ್ಮಂ=ಚರಣಕಮಲಗಳನ್ನು ಪರಿಚರ್ಯ=ಸೇವಿಸಿ ಜಿತಾತ್ಮಾ=ಮನೋನಿಗ್ರಹವುಳ್ಳ ಅಜಃ=ಚತುರ್ಮುಖಬ್ರಹ್ಮನು ಶ್ವಸನಾಭಿವಂದ್ಯಂ=

ವಾಯುದೇವರಿಂದಲೂ ನಮಸ್ಕರಿಸಲ್ಪಡುವ ಪಾರಮೇಷ್ಠ್ಯಂ ಪದಂ=ಸರ್ವೋತ್ತಮವಾದ ಸತ್ಯಲೋಕಾಧಿಪತ್ಯವನ್ನು ಅಧ್ಯತಿಷ್ಠತ್=ಪಡೆದುಕೊಂಡನು. ಖಲು=ನಿಶ್ಚಿತ.

**ಪ್ರ :** ವಾಯುದೇವರು ಬ್ರಹ್ಮದೇವರಿಗೆ ಸಮರಾದವರು ಎಂದಮೇಲೆ ''ವಾಯುದೇವರಿಂದಲೂ ನಮಸ್ಕರಿಸಲ್ಪಡುವ ಪಾರಮೇಷ್ಠ್ಯ ಪದ'' ಎಂದು ಹೇಳುವುದು ಹೇಗೆ ಉಪಪನ್ನವಾಗುತ್ತದೆ ?

**ಉ :** ವಾಯುದೇವರು ಬ್ರಹ್ಮದೇವರಿಗೆ ಸಮರಾಗಿದ್ದರೂ ಸಹ ಪದವಿಪ್ರಯುಕ್ತ ನಮಸ್ಕಾರವೆಂದು ತಿಳಿಯಬೇಕು.

''ಜಿತಾತ್ಮಶ್ವಸನಾಭಿವಂದ್ಯಂ'' ಎಂಬ ಪಾಠವಿದ್ದಾಗ ಗೆಲ್ಲಲ್ಪಟ್ಟ ಮನಸ್ಸು-ಪ್ರಾಣಗಳುಳ್ಳವರಿಂದ ವಂದ್ಯವಾದ ಎಂದರ್ಥ ತಿಳಿಯಬೇಕು. ।।೨೦।।

ಚತುರ್ಮುಖನು ಭಗವಂತನ ಮಗನಾದ ಕಾರಣ ಅವನ ಪ್ರಸಾದಕ್ಕೆ ಯೋಗ್ಯನಾದ್ದರಿಂದ ಆ ವಿಧವಾದ ಐಶ್ವರ್ಯ ಲಭಿಸಿರಬಹುದು. ನಮ್ಮ ಪೂರ್ವಜರು ಯಾರಾದರೂ ಶ್ರೀಹರಿಯನ್ನು ಆರಾಧಿಸಿ ಏನಾದರೂ ಪಡೆದಿರುವರೇ ? ಹೇಳು. ಅಂದರೆ ನಮಗೆ ಶೀಘ್ರಪ್ರವೃತ್ತಿ ಉಂಟಾಗುವದು ಎಂದರೆ ಹೇಳುವರು -

**ತಥಾ ಮನುರ್ನೋ ಭಗವಾನ್ ಪಿತಾಮಹೋ**
**ಯಮೇಕಭಕ್ತ್ಯಾ ಪುರುದಕ್ಷಿಣೈರ್ಮಖೈಃ ।**
**ಇಷ್ಟ್ವಾಽಭಿಪೇದೇ ದುರವಾಪಮನ್ಯತೋ**
**ಭೌಮಂ ಸುಖಂ ದಿವ್ಯಮಥಾಪವರ್ಗ್ಯಮ್ ।।೨೨।।**

ತಥಾ=ಅದೇ ರೀತಿಯಾಗಿ ನಃ=ನಮ್ಮ ಪಿತಾಮಹಃ=ಅಜ್ಜನಾದ ಭಗವಾನ್=ಪೂಜ್ಯನಾದ ಮನುಃ=ವೈವಸ್ವತ ಮನುವು ಯಂ=ಯಾವ ಪರಮಾತ್ಮನನ್ನು ಪುರುದಕ್ಷಿಣೈಃ=ಬಹುದಕ್ಷಿಣೆಗಳುಳ್ಳ ಮಖೈಃ=ಯಜ್ಞಗಳಿಂದ ಇಷ್ಟ್ವಾ=ಪೂಜಿಸಿ ಅನ್ಯತಃ=ಬೇರೆಯವರಿಂದ (ಭಕ್ತಿ ಮುಂತಾದ ಸಾಧನಗಳಿಲ್ಲದೇ ಬೇರೆ ಯಾವುದರಿಂದಲೂ) ದುರವಾಪಂ=ಹೊಂದಲಾಗದ ಭೌಮಂ ಸುಖಂ=ಮನ್ವಂತರಾಧಿಪತ್ಯವನ್ನು ದಿವ್ಯಂ ಸುಖಂ=ಸ್ವರ್ಗಸುಖವನ್ನು ಅಥ=ದೇಹತ್ಯಾಗಾನಂತರವೇ (ಜನ್ಮಾಂತರ ಪಡೆಯದೇ) ಆಪವರ್ಗ್ಯಂ ಸುಖಂ=ಮೋಕ್ಷಸುಖವನ್ನು ಅಭಿಪೇದೇ=ಹೊಂದಿದನು. ।।೨೨।।

ಬಹಳೇ ಮಾತುಗಳಿಂದೇನು ? ಸಾರವನ್ನು ಹೇಳುವೆನು ಎಂದು ಹೇಳುವಳು -

**ತಮೇವ ವತ್ಸಾಶ್ರಯ ಭೃತ್ಯವತ್ಸಲಂ**
**ಮುಮುಕ್ಷುಭಿರ್ಮೃಗ್ಯಪದಾಬ್ಜಪದ್ಧತಿಮ್ ।**
**ಅನನ್ಯಭಾವೇ ನಿಜಧರ್ಮಭಾವಿತೇ**
**ಮನಸ್ಯವಸ್ಥಾಪ್ಯ ಭಜಸ್ವ ಪೂರುಷಮ್ ॥೨೩॥**

ಹೇ ವತ್ಸ=ಮಗುವೇ ! ಭೃತ್ಯವತ್ಸಲಂ=ಸೇವಕರಲ್ಲಿ ವಾತ್ಸಲ್ಯವುಳ್ಳ ಮುಮುಕ್ಷುಭಿಃ= ಮೋಕ್ಷೇಚ್ಛುಗಳಿಂದ ಮೃಗ್ಯಪದಾಬ್ಜಪದ್ಧತಿಂ=ಹುಡುಕಲ್ಪಡುವ ಪಾದಕಮಲಗಳ ಮಾರ್ಗವುಳ್ಳ ತಂ ಪೂರುಷಂ ಏವ=ಆ ಪರಮಾತ್ಮನನ್ನೇ ಅನನ್ಯಭಾವೇನ=ಬೇರೆಯವರಲ್ಲಿ ಭಕ್ತಿಯಿಲ್ಲದಿರುವ ನಿಜಧರ್ಮಭಾವಿತೇ=ಯಮ-ನಿಯಮಾದಿಗಳಿಂದ ನಿರ್ಮಲವಾದ ಮನಸಿ=ಮನಸ್ಸಿನಲ್ಲಿ ಅವಸ್ಥಾಪ್ಯ=ಇರಿಸಿ ಭಜಸ್ವ=ಆರಾಧಿಸು. ॥೨೩॥

ಇವನನ್ನೇ ಏಕೆ ಭಜಿಸಬೇಕು ? ಎಂದರೆ ಹೇಳುವಳು -

**ನಾನ್ಯಂ ತತಃ ಪದ್ಮಪಲಾಶಲೋಚನಾ-**
**ದ್ದುಃಖಚ್ಛಿದಂ ತೇ ಮೃಗಯಾಮಿ ಕಂಚನ ।**
**ಯೋ ಮೃಗ್ಯತೇ ಹಸ್ತಗೃಹೀತಪದ್ಮಯಾ**
**ಶ್ರಿಯೇತರೈರಂಗ ವಿಮೃಗ್ಯಮಾಣಯಾ ॥೨೪॥**

ಹೇ ಅಂಗ=ಎಲೋ ಮಗುವೇ ! ಇತರೈಃ=ಬ್ರಹ್ಮಾದಿಗಳಿಂದ ವಿಮೃಗ್ಯಮಾಣಯಾ= ವಿಶೇಷಾನುಗ್ರಹಕ್ಕಾಗಿ ಆರಾಧಿಸಲ್ಪಡುವ ಹಸ್ತಗೃಹೀತಪದ್ಮಯಾ=ಪೂಜೆಗಾಗಿ ಕೈಯಲ್ಲಿ ಪದ್ಮವನ್ನು ಧರಿಸಿದ ಶ್ರಿಯಾ=ಲಕ್ಷ್ಮೀದೇವಿಯಿಂದ ಯಃ ಮೃಗ್ಯತೇ=ಯಾವನು ಉಪಾಸಿತನೋ ತತಃ ಪದ್ಮಪಲಾಶಲೋಚನಾತ್=ಕಮಲದಳದಂತೆ ನಯನಗಳುಳ್ಳ ಭಗವಂತನಿಂದ ಅನ್ಯಂ=ಭಿನ್ನನಾದ, ತೇ ದುಃಖಚ್ಛಿದಂ=ನಿನ್ನ ದುಃಖಪರಿಹಾರಕನಾದವನನ್ನು ಕಂಚನ ನ ಮೃಗಯಾಮಿ=ಯಾವನನ್ನೂ ಕಾಣೆನು. ಶ್ರೀಹರಿಯು ಸರ್ವೋತ್ತಮನಾದ ಲಕ್ಷ್ಮೀಕಾಂತನಾದ್ದರಿಂದ ಇವನೇ ಭಜನೀಯನೆಂದು ಭಾವ. ॥೨೪॥

**ಮೈತ್ರೇಯ ಉವಾಚ -**

**ಏವಂ ಸಂಜಲ್ಪಿತಂ ಮಾತುರಾಕರ್ಣ್ಯಾರ್ಥಾಗಮಂ ವಚಃ ।**
**ಸನ್ನಿಯಮ್ಯಾತ್ಮನಾತ್ಮಾನಂ ನಿಶ್ಚಕ್ರಾಮ ಪಿತುಃ ಪುರಾತ್ ॥೨೫॥**

ಏವಂ=ಈ ರಿತಿಯ ಮಾತುಃ ಸಂಜಲ್ಪಿತಂ=ತಾಯಿಯು ನುಡಿದ ಅರ್ಥಾಗಮಂ= ಪುರುಷಾರ್ಥಪ್ರಾಪಕವಾದ ವಚಃ=ಮಾತುಗಳನ್ನು ಆಕರ್ಣ್ಯ=ಕೇಳಿ ಆತ್ಮನಾ=ಧೈರ್ಯದಿಂದ ಆತ್ಮಾನಂ=ಮನಸ್ಸನ್ನು ಸನ್ನಿಯಮ್ಯ=ವಿಷಯಗಳಿಂದ ನಿಗ್ರಹಿಸಿ ಪಿತುಃ ಪುರಾತ್=ತಂದೆಯ ಪಟ್ಟಣದಿಂದ ನಿಶ್ಚಕ್ರಾಮ=ಹೊರಹೊರಟನು. ।।೨೫।।

**ನಾರದಸ್ತದುಪಾಕರ್ಣ್ಯ ಜ್ಞಾತ್ವಾ ಚಾಸ್ಯ ಚಿಕೀರ್ಷಿತಮ್ ।**
**ಸ್ಪೃಷ್ಟ್ವಾ ಮೂರ್ಧನ್ಯಘಘ್ನೇನ ಪಾಣಿನಾ ಪ್ರಾಹ ವಿಸ್ಮಿತಃ ।।೨೬ ।।**

ನಾರದಃ=ನಾರದರು ತತ್=ತಾಯಿ ಮಗನ ಆ ಸಂವಾದವನ್ನು ಉಪಾಕರ್ಣ್ಯ★=ಕೇಳಿ, ಅಸ್ಯ ಚಿಕೀರ್ಷಿತಂ=ಧ್ರುವನ ಮನದಭಿಲಾಷೆಯನ್ನು ಜ್ಞಾತ್ವಾ=ತಿಳಿದು, ಮೂರ್ಧನಿ= ತಲೆಯಲ್ಲಿ ಅಘಘ್ನೇನ=ಪಾಪನಾಶಕವಾದ ಪಾಣಿನಾ=ಕೈಯಿಂದ ಸ್ಪೃಷ್ಟ್ವಾ★=ಮುಟ್ಟಿ ವಿಸ್ಮಿತಃ ಪ್ರಾಹ=ಆಶ್ಚರ್ಯದಿಂದ ಹೇಳಿದರು. ।।೨೬।।

★ಇದರಿಂದ ಯೋಗಿಗಳಾದುದರಿಂದ ದೂರದಲ್ಲಿರುವ ಶಬ್ದವನ್ನು ಕೇಳುವ ಶಕ್ತಿಯೂ ಅವರಿಗಿದೆ ಎಂದು ಸೂಚಿತವಾಗುತ್ತದೆ.

★ಇದರಿಂದ ತಂದೆಯ ದ್ವೇಷನಿಮಿತ್ತ ಬಂದ ದೋಷನಾಶ ಹಾಗೂ ಗುರುಗಳ ಸಮಗ್ರ ಅನುಗ್ರಹವು ಸೂಚಿತವಾಗುವುದು.

ಆಶ್ಚರ್ಯವನ್ನು ತಿಳಿಸುವರು -

**ಅಹೋ ತೇಜಃ ಕ್ಷತ್ರಿಯಾಣಾಂ ಮಾನಭಂಗಮಮೃಷ್ಯತಾಮ್ ।**
**ಬಾಲೋಽಪ್ಯಯಂ ಹೃದಾ ಧತ್ತೇ ಯತ್ಸಮಾತುರಸದ್ವಚಃ ।।೨೭।।**

ಮಾನಭಂಗಂ=ಅಪಮಾನವನ್ನು ಅಮೃಷ್ಯತಾಂ=ಸಹಿಸದಿರುವ ಕ್ಷತ್ರಿಯಾಣಾಂ=ಕ್ಷತ್ರಿಯರ ತೇಜಃ=ಧೈರ್ಯವು ಅಹೋ=ಆಶ್ಚರ್ಯಕರವು. ಯತ್=ಯಾಕೆಂದರೆ ಬಾಲೋಽಪಿ ಅಯಂ=ಚಿಕ್ಕಹುಡುಗನಾದರೂ ಇವನು ಸಮಾತುಃ=ಮಲತಾಯಿಯ ಅಸದ್ವಚಃ= ದುಷ್ಟನುಡಿಗಳನ್ನು ಹೃದಾ ಧತ್ತೇ=ಮನಸ್ಸಿನಲ್ಲಿ ಧರಿಸಿರುವನು. ।।೨೭।।

**ನಾರದ ಉವಾಚ -**

**ಕ್ವ ಯಾತ್ಯೇಕೋ ಭವಾನ್ ವತ್ಸ ಹಿತ್ವಾ ಸ್ವಗೃಹಮೃದ್ಧಿಮತ್ ।**
**ಲಕ್ಷಯೇ ತ್ವಾಽವಮತ್ಯಾಂಗ ಸಂತಪ್ತಂ ಸ್ವಜನೋತ್ಥಯಾ ।।೨೮ ।।**

ಹೇ ವತ್ಸ=ಮಗುವೆ ! ಋದ್ಧಿಮತ್=ಸಂಪದ್ಭರಿತವಾದ ಸ್ವಗೃಹಂ=ನಿನ್ನ ಮನೆಯನ್ನು ಹಿತ್ವಾ=ತ್ಯಜಿಸಿ ಭವಾನ್=ನೀನು ಕ್ವ ಯಾತಿ=ಎಲ್ಲಿಗೆ ಹೋಗುವಿ ? ಸ್ವಜನೋತ್ಥಯಾ=

ನಿಃಸ್ವವರಿಂದಲೇ ಆದ ಅವಮತ್ಯಾ=ಅಪಮಾನದಿಂದ ತ್ವಾ=ನಿನ್ನನ್ನು ಸಂತಪ್ತಂ=ಸಂತಾಪ ಹೊಂದಿದವನನ್ನಾಗಿ ಲಕ್ಷಯೇ ಹಿ=ಲಕ್ಷಣಗಳಿಂದ ನಿಶ್ಚಯವಾಗಿ ತಿಳಿಯುವೆನು. ।।೨೮ ।।

ಧ್ರುವನ ಉತ್ತರ ಹೇಳುವರು -

**ಧ್ರುವ ಉವಾಚ -**

**ಕಿಂ ನ ತೇ ಧ್ಯಾನಜಾತೇನ ದೃಷ್ಟಂ ವಾ ಯೋಗರಾಧಸಾ ।**
**ನೋತ್ಸಹೇ ಸುರುಚೇರ್ವಾಚಾ ಸಮಾಧಾತುಂ ಮನಃ ಕ್ಷತಮ್ ।।೨೯।।**

ತೇ=ನಿಮ್ಮಿಂದ ಧ್ಯಾನಜಾತೇನ=ಧ್ಯಾನಜನ್ಯವಾದ ಅಪರೋಕ್ಷಜ್ಞಾನದಿಂದುಂಟಾದ ಯೋಗರಾಧಸಾ=ಅಷ್ಟಾಂಗ ಯೋಗದಿಂದುಂಟಾದ ದೂರದರ್ಶನ ಸಾಮರ್ಥ್ಯದಿಂದ ದೃಷ್ಟಂ ನ ಕಿಂ=ನೋಡಲ್ಪಟ್ಟಿಲ್ಲವೇನು ? ನೀವು ನೋಡಿಯೇ ಇರುವಿರಿ. ಆದರೂ ಹೇಳುವೇನು - ಸುರುಚೇಃ ವಾಚಾ=ಸುರುಚಿಯ ಮಾತಿನಿಂದ ಆದ ಮನಃಕ್ಷತಂ=ಮನಸ್ಸಿನ ಗಾಯವನ್ನು ಸಮಾಧಾತುಂ=ಸಹನ ಮಾಡಲು ನೋತ್ಸಹೇ=ನಾನು ಶಕ್ತನಲ್ಲ. ।।೨೯।।

**ನಾರದ ಉವಾಚ -**

**ನಾಧುನಾऽಪ್ಯವಮಾನಂ ತೇ ಸನ್ಮಾನಂ ಚಾಪಿ ಪುತ್ರಕ ।**
**ಲಕ್ಷಯಾಮಃ ಕುಮಾರಸ್ಯ ಸಕ್ತಸ್ಯ ಕ್ರೀಡನಾದಿಷು ।।೩೦।।**

ಹೇ ಪುತ್ರಕ=ಎಲೋ ಚಿಕ್ಕಬಾಲಕನೇ ! ಕ್ರೀಡನಾದಿಷು ಸಕ್ತಸ್ಯ=ಆಟಪಾಟಗಳಲ್ಲಿ ತೊಡಗಿದ ಕುಮಾರಸ್ಯ=ಬಾಲಕನಾದ ತೇ=ನಿನಗೆ ಅಧುನಾಪಿ=ಈಗಲೂ (ಇನ್ನೂ) ಸನ್ಮಾನಂ= ಗೌರವವನ್ನಾಗಲೀ ಅವಮಾನಂ ಚ=ಅಪಮಾನವನ್ನಾಗಲೀ ನ ಲಕ್ಷಯಾಮಃ= ತಿಳಿಯಲಾರೆನು. ।।೩೦।।

ನಾನು ಎಲ್ಲ ಹುಡುಗರಂತೆ ಅಲ್ಲ ಎಂದರೆ, ವಿವೇಕಿಗಳಿಗೂ ಸಹ ವಿಮರ್ಶೆ ಮಾಡಿದರೆ ವೈರಿಗಳ ದುಷ್ಟಮಾತುಗಳು ದುಃಖಕಾರಣವಲ್ಲವೆಂದು ಹೇಳುವರು -

**ವಿಕಲ್ಪೇ ವಿದ್ಯಮಾನೇऽಪಿ ನ ಹ್ಯಸಂತೋಷಹೇತವಃ ।**
**ಪುಂಸೋ ಮೋಹಮೃತೇ ಭಿನ್ನಾ ಯಲ್ಲೋಕಾ ನಿಜಕರ್ಮಭಿಃ ।। ೩೧ ।।**

ಭಾಗವತ ತಾತ್ಪರ್ಯ -

ವಿವಿಧಕಲ್ಪನೇ ವಿದ್ಯಮಾನೇऽಪಿ ಪರಿಣತತಯಾ ।

ವಿಕಲ್ಪೇ ವಿದ್ಯಮಾನೇ ಅಪಿ=ಪ್ರಕೃತಿಪರಿಣಾಮಕ್ಕೊಳಗಾಗಿ ಶತ್ರು-ಮಿತ್ರ ಮುಂತಾಗಿ ಜನಿಸಿದ್ದರೂ ಪುಂಸಃ=ಜನರಿಗೆ ಮೋಹಂ ಋತೇ=ಇವನು ನನಗೆ ಸ್ವಾಭಾವಿಕವಾಗಿ ಶತ್ರುವು,

ಇವನು ನನಗೆ ಸ್ವಾಭಾವಿಕವಾಗಿ ಮಿತ್ರನು ಎಂಬ ಭ್ರಮವಿಲ್ಲದೇ ಅಸಂತೋಷಹೇತವಃ= ದುಃಖಕಾರಣರು ನ ಹಿ=ಅಲ್ಲ ಸುಖಕಾರಣರೂ ಅಲ್ಲ ಏಕೆಂದರೆ ಯತ್=ಯಾವ ಕಾರಣ ಲೋಕಾಃ=ಜನರು ನಿಜಕರ್ಮಭಿಃ ಭಿನ್ನಾಃ=ತಮ್ಮ ಅದೃಷ್ಟಪ್ರೇರಕ ಈಶ್ವರನಿಂದ ಹುಟ್ಟಿಸಿದ ಪ್ರಕೃತಿಪರಿಣಾಮವಶದಿಂದಾಗಿ ಭಿನ್ನಾಃ=ಶತ್ರು ಮುಂತಾಗಿ ಜನಿಸಿರುವರು.

ಸಜ್ಜೀವರಲ್ಲಿ ಶತ್ರುತ್ವ ಸ್ವಾಭಾವಿಕವಲ್ಲ. ದುರ್ಜೀವರಲ್ಲಿ ಮಿತ್ರತ್ವವು ಸ್ವಾಭಾವಿಕವಲ್ಲ. ಆ ರೀತಿ ತಿಳಿಯುವದು ಮೋಹವೇ. ಕಾರಣ ವಿವೇಕಿಗಳು ಶತ್ರು ಮುಂತಾಗಿ ಜನಿಸಿದ ಜನರಲ್ಲಿ ಮಿಥ್ಯಾಜ್ಞಾನವೇ ಸುಖದುಃಖಜನಕವು ಎಂದು ತಿಳಿಯುವರು. ಕಾರಣ ಈ ರೀತಿ ಪರಿಣಾಮಕಾರಣನಾದ ಈಶ್ವರನ ಸ್ವಾತಂತ್ರ್ಯ ತಿಳಿದು ಮೋಹವನ್ನು ತೊರೆದು ಮನಸ್ಸಿನ ಖೇದವನ್ನು ಪರಿಹರಿಸಿಕೊಳ್ಳಬೇಕು. ।। ೩೧ ।।

ಸಿಂಹಾಸನ ಸಿಗದಿದ್ದರೆ ನನ್ನ ಜೀವನ ಹೇಗೆ ? ಅಂದರೆ ಹೇಳುವರು -

**ಪರಿತುಷ್ಯೇತ್ತತಸ್ತಾತ ತಾವನ್ಮಾತ್ರೇಣ ಪೂರುಷಃ ।**
**ದೈವೋಪಸಾದಿತಂ ಯಾವದ್ ವೀಕ್ಷ್ಯೇಶ್ವರಗತಿಂ ಬುಧಃ ।।೩೨।।**

ತಾತ=ಮಗುವೇ ! ಪುರುಷಃ=ಮನುಷ್ಯನು ತತಃ=ಕರ್ಮಪ್ರೇರಕನಾದ ಈಶ್ವರನು ಸ್ವತಂತ್ರನಾದುದರಿಂದ ಈಶ್ವರಗತಿಂ ವೀಕ್ಷ್ಯ=ಈಶ್ವರನ ಸ್ವತಂತ್ರತ್ವವನ್ನು ಚೆನ್ನಾಗಿ ಅರಿತು ಬುಧಃ=ಜ್ಞಾನಿಯು ಯಾವತ್=ಎಷ್ಟು ದೈವೋಪಸಾದಿತಂ=ಈಶ್ವರನಿಂದ ಕೊಡಲ್ಪಟ್ಟಿದೆಯೋ ತಾವನ್ಮಾತ್ರೇಣ=ಅಷ್ಟರಿಂದಲೇ (ಅನ್ನಪಾನಾದಿಗಳಿಂದಲೇ) ಪರಿತುಷ್ಯೇತ್=ಅಲಂಬುದ್ಧಿಯನ್ನು ಹೊಂದಬೇಕು, ಹೆಚ್ಚಿನ ಆಶೆಪಡಬಾರದು ಎಂದು ಭಾವ. ।।೩೨।।

ಇನ್ನು ಸಿಂಹಾಸನಕ್ಕಾಗಿ ಪ್ರಯತ್ನ ಮಾಡುವದೂ ನಿನಗೆ ಸುಲಭವಲ್ಲ ಎಂದು ಹೇಳುವರು -

**ಅಥ ಮಾತ್ರೋಪದಿಷ್ಟೇನ ಯೋಗೇನಾವರುರುತ್ಸಸಿ ।**
**ಯತ್ಪ್ರಸಾದಾತ್ ಸ ವೈ ಪುಂಸಾಂ ದುರಾರಾಧ್ಯೋ ಮತೋ ಮಮ ।।೩೩।।**

ಅಥ=ಒಂದು ವೇಳೆ ಮಾತ್ರಾ=ತಾಯಿಯಿಂದ ಉಪದಿಷ್ಟೇನ=ತಿಳಿಸಲ್ಪಟ್ಟ ಯೋಗೇನ= ಉಪಾಯದಿಂದ ಯತ್ಪ್ರಸಾದಾತ್=ಯಾವ ಶ್ರೀಹರಿಯ ಪ್ರಸಾದದಿಂದ ಅವರುರುತ್ಸಸಿ= ಸಿಂಹಾಸನವನ್ನೇರಲು ಇಚ್ಛಿಸುವಿಯೋ ಅಥವಾ ಯಾವ ಶ್ರೀಹರಿಯನ್ನು ಅನುಗ್ರಹೋನ್ಮುಖ- ನನ್ನಾಗಿ ಮಾಡಲಿಚ್ಛಿಸುವಿಯೋ ಸಃ=ಆ ಶ್ರೀಹರಿಯು ಪುಂಸಾಂ=ಜನರಿಂದ ದುರಾರಾಧ್ಯಃ= ಕಷ್ಟದಿಂದ ಸಿಗುವವನೇ ಹೊರತು ಸುಲಭನಲ್ಲ ಎಂದು ಮಮ ಮತಃ=ನನ್ನ ತಿಳುವಳಿಕೆಯು.

ಅವನೇ ಸಿಗದಿದ್ದರೆ ಇನ್ನು ಅವನ ಪ್ರಸಾದವೆಲ್ಲಿ ? ಫಲ ಪಡೆಯುವದೆಂತು ? ಎಂದು ಭಾವ. 'ವೈ'ಶಬ್ದದಿಂದ ಸ್ವಾನುಭವಸಿದ್ಧವೆಂದು ತಿಳಿಸುವರು. ।।೩೩।।

ದುರಾರಾಧ್ಯತೆಯನ್ನೇ ಉಪಪಾದಿಸುವವರು -

**ಮುನಯಃ ಪದವೀಂ ಯಸ್ಯ ನಿಃಸಂಗೇನೋರುಜನ್ಮಭಿಃ ।**
**ನ ವಿದುರ್ಮೃಗಯಂತೋಽಪಿ ತೀವ್ರಯೋಗಸಮಾಧಿನಾ ।।೩೪।।**

ಮುನಯಃ=ಜ್ಞಾನಿಗಳು ಉರುಜನ್ಮಭಿಃ=ಬಹಳ ಜನ್ಮಗಳಿಂದ ನಿಃಸಂಗೇನ=ವಿಷಯಾಸಕ್ತಿ ಇಲ್ಲದಿರುವ ತೀವ್ರಯೋಗಸಮಾಧಿನಾ=ಬಹಳವಾದ ಭಕ್ತಿಯಿಂದ ಕೂಡಿದ ಚಿತ್ತೈಕಾಗ್ರತೆಯಿಂದ ಮೃಗಯಂತೋಽಪಿ=ಹುಡುಕಿದರೂ ಸಹ ಯಸ್ಯ ಪದವೀಂ=ಯಾವನ ಸ್ವರೂಪವನ್ನು (ಮಾರ್ಗವನ್ನು) ನ ವಿದುಃ=ತಿಳಿಯಲಿಲ್ಲವೋ ಅಂತಹ ಶ್ರೀಹರಿಯು ದುರಾರಾಧ್ಯನೇ ಸರಿ. ।।೩೪।।

ಹಾಗಾದರೆ ಶ್ರೇಯಸ್ಸಿಗಾಗಿ ಪ್ರಯತ್ನಿಸುವ ನನ್ನ ಜನ್ಮ ವ್ಯರ್ಥವಾಗುವದಲ್ಲ ? ಎಂದರೆ ಹಾಗೇನಿಲ್ಲ ಇದು ಕಾಲವಲ್ಲ ಮುಂದೆ ಯತ್ನ ಮಾಡುವಿಯಂತೆ ಎಂದು ಹೇಳುವರು -

**ಅತೋ ನಿವರ್ತತಾಮೇಷ ನಿರ್ಬಂಧಸ್ತವ ನಿಷ್ಫಲಃ ।**
**ಯತಿಷ್ಯತಿ ಭವಾನ್ ಕಾಲೇ ಶ್ರೇಯಸಾಂ ಸಮುಪಸ್ಥಿತೇ ।।೩೫।।**

ಅತಃ=ಆದ್ದರಿಂದ ನಿವರ್ತತಾಂ=ಮರಳಿಹೋಗು. ತವ ನಿರ್ಬಂಧಃ ನಿಷ್ಫಲಃ=ನಿನ್ನ ಹಟವು ವ್ಯರ್ಥವಾಗುವದು. ಶ್ರೇಯಸಾಂ ಕಾಲೇ ಸಮುಪಸ್ಥಿತೇ=ಮೋಕ್ಷಸಾಧನೆ ಮಾಡುವ ಮುಪ್ಪಿನ ಕಾಲ ಬಂದಾಗ ಭವಾನ್=ನೀನು ಯತಿಷ್ಯತಿ=ಪ್ರಯತ್ನಿಸುವಿಯಂತೆ. ।।೩೫।।

ಅಲ್ಲಿಯವರೆಗೆ ಹೆಚ್ಚಿನ ಆಶೆ ಮಾಡದೇ ಈಗ ಮಾಡಬೇಕಾದ ಸಾಧನವನ್ನು ಉಪದೇಶಿಸುವರು -

**ಯಸ್ಯ ದೈವೇನ ವಿಹಿತಂ ಸ ತೇನ ಸುಖದುಃಖಯೋಃ ।**
**ಆತ್ಮಾನಂ ತೋಷಯನ್ ದೇಹೀ ತಮಸಃ ಪಾರಮೃಚ್ಛತಿ ।।೩೬।।**

ಯಸ್ಯ=ಯಾವನಿಗೆ ಸುಖದುಃಖಯೋಃ=ಸುಖದುಃಖಗಳ ಮಧ್ಯದಲ್ಲಿ ಯತ್= ಯಾವದು ದೈವೇನ ವಿಹಿತಂ=ಶ್ರೀಹರಿಯಿಂದ ಕೊಡಲ್ಪಟ್ಟಿದೆಯೋ ಸಃ ದೇಹೀ=ಆ ಮನುಷ್ಯನು ತೇನ=ಅದರಿಂದ ಆತ್ಮಾನಂ=ತನ್ನನ್ನು ತೋಷಯನ್=ಸಂತೋಷಿಸಿ ಅಂದರೆ ಸುಖದಿಂದ ಹಿಗ್ಗದೇ ದುಃಖದಿಂದ ಕುಗ್ಗದೇ ಇದ್ದಲ್ಲಿ ತಮಸಃ ಪಾರಂ=ಅಜ್ಞಾನದ ಕೊನೆಯನ್ನು ಋಚ್ಛತಿ=ಹೊಂದುವನು, ಮೋಕ್ಷವನ್ನು ಪಡೆಯುವನು ಎಂದರ್ಥ. ।।೩೬।।

ದುಃಖವಾಗದಿರಲು ಬೇರೆ ಉಪಾಯ ಹೇಳುವರು -

**ಗುಣಾಧಿಕಾನ್ಮುದಂ ಲಿಪ್ಸೇದನುಕ್ರೋಶಂ ಗುಣಾಧಮಾತ್ ।**
**ಮೈತ್ರೀಂ ಸಮಾನಾದನ್ವಿಚ್ಛೇನ್ನ ತಾಪೈರಭಿಭೂಯತೇ ॥೩೭॥**

(ಈ ಶ್ಲೋಕದಲ್ಲಿ ಎಲ್ಲ ಪಂಚಮೀವಿಭಕ್ತಿಗಳು ಲ್ಯಬ್‌ಲೋಪನಿಮಿತ್ತವಾಗಿವೆ.)

ಗುಣಾಧಿಕಾತ್ (ಗುಣಾಧಿಕಂ ಪುರುಷಂ ಪ್ರಾಪ್ಯ) ಮುದಂ ಲಿಪ್ಸೇತ್=ನಮಗಿಂತ ಹೆಚ್ಚು ಗುಣವಂತನಾದ ಮನುಷ್ಯನನ್ನು ಕಂಡು ಸಂತೋಷಪಡಬೇಕು, ಪ್ರೀತಿ ಮಾಡಬೇಕು. ಹೊರತು ಅಸೂಯೆಪಡಬಾರದು. ಗುಣಾಧಮಾತ್ (ಗುಣಾಧಮಂ ಪುರುಷಂ ಪ್ರಾಪ್ಯ) ಅನುಕ್ರೋಶಂ ಲಿಪ್ಸೇತ್=ಗುಣಗಳಿಂದ ನಮಗಿಂತ ಕಡಿಮೆಯಾದವನನ್ನು ಹೊಂದಿದಾಗ ದಯೆ ಮಾಡಬೇಕು. ಹೊರತು ತಿರಸ್ಕಾರವನ್ನಲ್ಲ. ಸಮಾನಾತ್ (ಸಮಾನಂ ಪುರುಷಂ ಪ್ರಾಪ್ಯ) ಮೈತ್ರೀಂ ಅನ್ವಿಚ್ಛೇತ್=ಸಮಾನನಾದವನಲ್ಲಿ ಸ್ನೇಹವನ್ನು ಇಚ್ಛಿಸಬೇಕು. ಹೊರತು ಸ್ಪರ್ಧಿಸಬಾರದು. ಅಂದರೆ ತಾಪೈಃ ನ ಅಭಿಭೂಯತೇ=ಮನಸ್ಸಿಗೆ ತಾಪದಾಯಕ ಪದಾರ್ಥಗಳಿಂದ ನೋವಾಗುವದಿಲ್ಲ.

ನೀನು ಅದೃಷ್ಟಪ್ರೇರಕ ಈಶ್ವರನಿಷ್ಠೆ ಎಂಬ ಶಮವನ್ನು ಸಂಪಾದಿಸಿದರೆ, ದುಷ್ಟಮಾತು ಮುಂತಾದವುಗಳಿಂದ ಉಂಟಾಗುವ ಪರಿತಾಪಾದಿಗಳಿಂದ ನಿನಗೆ ತೊಂದರೆಯಾಗಲಾರದು.

**ಧ್ರುವ ಉವಾಚ -**

**ಸೋಽಯಂ ಶಮೋ ಭಗವತಾ ಸುಖದುಃಖಹತಾತ್ಮನಾಮ್ ।**
**ದರ್ಶಿತಃ ಕೃಪಯಾ ಪುಂಸಾಂ ದುರ್ದರ್ಶೋಽಸ್ಮದ್ವಿಧೈಸ್ತು ಯಃ ॥೩೮॥**

**ಅಥಾಪಿ ಮೇಽವಿನೀತಸ್ಯ ಕ್ಷಾತ್ರಂ ಘೋರಮುಪೇಯುಷಃ ।**
**ಸುರುಚ್ಯಾ ದುರ್ವಚೋಬಾಣೈರ್ನ ಭಿನ್ನೇ ಶ್ರಯತೇ ಹೃದಿ ॥೩೯॥**

ಯಃ=ಯಾವುದು ಅಸ್ಮದ್ವಿಧೈಃ=ನಮ್ಮಂಥವರಿಂದ ದುರ್ದರ್ಶಃ=ಶಾಸ್ತ್ರದೃಷ್ಟಿಯಿಂದ ತಿಳಿಯಲಾಗದೋ ಸಃ ಅಯಂ ಶಮಃ=ಆ ಭಗವನ್ನಿಷ್ಠೆಯು ಭಗವತಾ=ಪೂಜ್ಯರಾದ ತಮ್ಮಿಂದ ಸುಖದುಃಖಹತಾತ್ಮನಾಂ=ಸುಖದುಃಖಗಳಿಂದ ಪೀಡಿತರಾದ ಪುಂಸಾಂ ಕೃಪಯಾ=ಜನರ ಮೇಲಿನ ದಯೆಯಿಂದ ದರ್ಶಿತಃ=ತಿಳಿಸಲ್ಪಟ್ಟಿದೆ.

ಅಥಾಪಿ=ಆದರೂ ಸಹ ಸಃ=ಆ ಶಮವು ಕ್ಷಾತ್ರಂ=ಕ್ಷತ್ರಿಯರ ಘೋರಂ ಉಪೇಯುಷಃ ಕಠಿಣವಾದ (ಕ್ರೂರವಾದ) ಧರ್ಮವನ್ನು ಹೊಂದಿದ ಆದ್ದರಿಂದಲೇ ಅವಿನೀತಸ್ಯ= ಪೂಜ್ಯರಲ್ಲಿ ನಮ್ರನಾಗದಿರುವ ಮೇ=ನನ್ನ ಸುರುಚ್ಯಾ=ಸುರುಚಿಯಿಂದ ದುರ್ವಚೋಬಾಣೈಃ=

ದುಷ್ಟಮಾತುಗಳೆಂಬ ಬಾಣಗಳಿಂದ ಭಿನ್ನೇ=ಸೀಳಿಹೋದ ಹೃದಿ=ಮನಸ್ಸಿನಲ್ಲಿ ನ ಶ್ರಯತೇ=ನಿಲ್ಲಲಾರದಾಗಿದೆ. ।।೩೮,೩೯।।

ಹಾಗಾದರೆ ನಿನ್ನ ಇಚ್ಛೆಯಾದರೂ ಏನು ? ಎಂದರೆ ಹೇಳುವನು -

**ಪದಂ ತ್ರಿಭುವನೋತ್ಕೃಷ್ಟಂ ಜಿಗೀಷೋಃ ಸಾಧು ವರ್ತ್ಮ ಮೇ ।**
**ಬ್ರೂಹ್ಯಸ್ಮತ್ಪಿತೃಭಿರ್ಬ್ರಹ್ಮನ್ನನ್ಯೈರಪ್ಯನಧಿಷ್ಠಿತಮ್ ।।೪೦।।**

ಹೇ ಬ್ರಹ್ಮನ್=ಜ್ಞಾನಿಗಳಾದ ನಾರದರೇ ! ಅಸ್ಮತ್ಪಿತೃಭಿಃ=ನಮ್ಮ ಹಿರಿಯರಿಂದಾಗಲೀ ಅನ್ಯೈಃ ಅಪಿ=ಬೇರೆಯವರಿಂದಾಗಲೀ ಅನಧಿಷ್ಠಿತಂ=ಕೂಡದಿರುವ ಆದ್ದರಿಂದ ತ್ರಿಭುವನೋತ್ಕೃಷ್ಟಂ=ಮೂರು ಲೋಕಗಳಲ್ಲಿಯೇ ಶ್ರೇಷ್ಠವಾದ ಪದಂ=ಸ್ಥಾನವನ್ನು ಜೀಗಿಷೋಃ=ಹೊಂದಲಿಚ್ಛಿಸಿರುವ ಮೇ=ನನಗೆ ಸಾಧು ವರ್ತ್ಮ=ಒಳ್ಳೆಯ ಮಾರ್ಗವನ್ನು ಬ್ರೂಹಿ=ಹೇಳಿರಿ. ಇದರಿಂದ "ಸಿಂಹಾಸನವನ್ನು ಹೊಂದುವದೇ ನನ್ನ ಪ್ರಯತ್ನದ ಫಲ ಅಲ್ಲ" ಎಂದು ಸೂಚಿತವಾಗುವುದು. ।।೪೦।।

**ನೂನಂ ಭವಾನ್ ಭಗವತೋ ಯೋಽಂಗಜಃ ಪರಮೇಷ್ಠಿನಃ ।**
**ವಿನುದನ್ನಟತೇ ವೀಣಾಂ ಹಿತಾರ್ಥಂ ಜಗತೋಽರ್ಕವತ್ ।।೪೦।।**

ಭಗವತಃ=ಪೂಜ್ಯನಾದ ಪರಮೇಷ್ಠಿನಃ=ಬ್ರಹ್ಮದೇವರ ಅಂಗಜಃ=ತೊಡೆಯಿಂದ ಜನಿಸಿದ ಭವಾನ್=ತಾವು ಜಗತಃ ಹಿತಾರ್ಥಂ=ಜಗತ್ತಿನ ಕಲ್ಯಾಣಕ್ಕಾಗಿ ವೀಣಾಂ ವಿನುದನ್ (ವಿತುದನ್)=ವೀಣೆಯನ್ನು ನುಡಿಸುತ್ತ ಅಟತೇ=ಸಂಚರಿಸುವಿರಿ. ಜಗತ್ತಿನ ಹಿತಕ್ಕಾಗಿ ಸಂಚರಿಸುವ ತಾವು ಜಗತ್ತಿನಲ್ಲಿ ಸೇರಿದ ನನಗೂ ಹಿತೋಪದೇಶ ಮಾಡಿರಿ ಎಂದು ಭಾವ.

**ಮೈತ್ರೇಯ ಉವಾಚ -**

**ಇತ್ಯುದಾಹೃತಮಾಕರ್ಣ್ಯ ಭಗವಾನ್ನಾರದಸ್ತದಾ ।**
**ಪ್ರೀತಃ ಪ್ರತ್ಯಾಹ ತಂ ಬಾಲಂ ತದ್ವಾಕ್ಯಮನುಕಂಪಯಾ ।।೪೨।।**

ತದಾ=ಆಗ ಇತಿ=ಈ ರೀತಿಯಾಗಿ ಉದಾಹೃತಂ=ಧ್ರುವನು ಹೇಳಿದ್ದನ್ನು ಆಕರ್ಣ್ಯ=ಕೇಳಿ ಭಗವಾನ್ ನಾರದಃ=ಪೂಜ್ಯರಾದ ನಾರದರು ತದ್ವಾಕ್ಯಂ ಪ್ರತಿ ಪ್ರೀತಃ=ಅವನ ಮಾತಿಗೆ ಸಂತುಷ್ಟರಾಗಿ ಅನುಕಂಪಯಾ=ದಯೆಯಿಂದ ತಂ ಬಾಲಂ ಪ್ರತಿ ಆಹ=ಆ ಬಾಲಕನಾದ ಧ್ರುವನನ್ನು ಕುರಿತು ಹೇಳಿದರು. ।।೪೨।।

**ನಾರದ ಉವಾಚ -**

**ಜನನ್ಯಾಽಭಿಹಿತಃ ಪಂಥಾಃ ಸ ವೈ ನಿಃಶ್ರೇಯಸಸ್ಯ ತೇ ।**
**ಭಗವಾನ್ ವಾಸುದೇವಸ್ತಂ ಭಜ ತತ್ಪ್ರವಣಾತ್ಮನಾ ।।೪೩।।**

''ತಮೇವ ವತ್ಸಾಶ್ರಯ ಭೃತ್ಯವತ್ಸಲಂ'' ಇತ್ಯಾದಿಯಾಗಿ ಜನನ್ಯಾ=ತಾಯಿಯಿಂದ ಅಭಿಹಿತಃ=ಹೇಳಲ್ಪಟ್ಟ ಸಃ ಪಂಥಾಃ=ಅದೇ ಮಾರ್ಗವು ತೇ=ನಿನಗೆ ನಿಃಶ್ರೇಯಸಸ್ಯ= ಅಭೀಷ್ಟಸಿದ್ಧಿಗೆ ಕಾರಣವಾಗಿದೆ. ಯಃ ವಾಸುದೇವಃ ಭಗವಾನ್=ವಾಸುದೇವರೂಪಿಯಾದ ಯಾವ ಪರಮಾತ್ಮನಿರುವನೋ ತಂ=ಅವನನ್ನು ತತ್ಪ್ರವಣಾತ್ಮನಾ=ಅವನಲ್ಲಿ ಮನಸ್ಸನ್ನಿಟ್ಟು ಭಜ=ಸೇವಿಸು. ||೪೩||

**ಧರ್ಮಾರ್ಥಕಾಮಮೋಕ್ಷಾಖ್ಯಂ ಯ ಇಚ್ಛೇಚ್ಛ್ರೇಯ ಆತ್ಮನಃ ।**
**ಏಕಮೇವ ಹರೇಸ್ತತ್ರ ಕಾರಣಂ ಪಾದಸೇವನಮ್ ||೪೪ ||**

ಯಃ=ಯಾವನು ಆತ್ಮನಃ=ತನಗೆ ಧರ್ಮಾರ್ಥಕಾಮಮೋಕ್ಷಾಖ್ಯಂ=ಧರ್ಮ ಅರ್ಥ, ಕಾಮ, ಮೋಕ್ಷರೂಪವಾದ ಶ್ರೇಯಃ=ಶ್ರೇಯಸ್ಸನ್ನು ಇಚ್ಛೇತ್=ಇಚ್ಛಿಸುವನೋ ತತ್ರ=ಅದಕ್ಕೆ ಹರೇಃ ಪಾದಸೇವನಂ ಏಕಮೇವ ಕಾರಣಂ=ಶ್ರೀಹರಿಯ ಪಾದಸೇವೆ ಒಂದೇ ಮುಖ್ಯಕಾರಣವಾಗಿದೆ ಎಂದು ಭಾವ. ||೪೪||

**ತತ್ತಾತ ಗಚ್ಛ ಭದ್ರಂ ತೇ ಯಮುನಾಯಾಸ್ತಟಂ ಶುಚಿ ।**
**ಪುಣ್ಯಂ ಮಧುವನಂ ಯತ್ರ ಸಾನ್ನಿಧ್ಯಂ ನಿತ್ಯದಾ ಹರೇಃ ||೪೫||**

ಹೇ ತಾತ=ಮಗುವೇ ! ತತ್ (ತಸ್ಮಾತ್)=ಶ್ರೀಹರಿಯ ಆ ಪಾದಸೇವನೆಯೇ ಸಕಲಪುರುಷಾರ್ಥಸಾಧನವಾದ್ದರಿಂದ, ಯತ್ರ=ಎಲ್ಲಿ ಪುಣ್ಯಂ=ಪುಣ್ಯದಾಯಕವಾದ ಮಧುವನಂ=ಪೂರ್ಣಾನಂದನಾದ ಶ್ರೀಹರಿಯ ಭಜನಸಾಧನವಾದ ಮಧುವನವಿದೆಯೋ, ಯತ್ರ=ಎಲ್ಲಿ ನಿತ್ಯದಾ=ಯಾವಾಗಲೂ ಹರೇಃ ಸಾನ್ನಿಧ್ಯಂ=ಶ್ರೀಹರಿಯ ಸನ್ನಿಧಾನವಿರುವುದೋ ಅಂತಹ ಯಮುನಾಯಾಃ=ಯಮುನಾನದಿಯ ಶುಚಿ=ಶುದ್ಧವಾದ ತಟಂ ಗಚ್ಛ=ದಡಕ್ಕೆ ಹೋಗು. ||೪೫||

**ಸ್ನಾತ್ವಾನುಸವನಂ ತಸ್ಮಿನ್ ಕಾಲಿಂದ್ಯಾ ಸಲಿಲೇ ಶಿವೇ ।**
**ಕೃತ್ವೋಚಿತಾನಿ ನಿವಸನ್ನಾತ್ಮನಃ ಕಲ್ಪಿತಾಸನೇ ||೪೬||**

ತಸ್ಮಿನ್=ಅಂತಹ ಶಿವೇ=ಮಂಗಲದಾಯಕವಾದ ಕಾಲಿಂದ್ಯಾಃ ಸಲಿಲೇ=ಯಮುನಾ-ನದಿಯ ನೀರಿನಲ್ಲಿ ಅನುಸವನಂ=ಮೂರುಕಾಲದಲ್ಲಿ ಸ್ನಾತ್ವಾ=ಸ್ನಾನ ಮಾಡಿ (ಉಪನಯನವಾಗದಿದ್ದರಿಂದ ಸಂಧ್ಯಾವಂದನಾದಿಗಳಿಲ್ಲದಿದ್ದರೂ) ಆತ್ಮನಃ=ನಿನಗೆ ಉಚಿತಾನಿ=ಯೋಗ್ಯವಾದ ನಮಸ್ಕಾರಾದಿಗಳನ್ನು ಕೃತ್ವಾ=ಮಾಡಿ ಕಲ್ಪಿತಾಸನೇ=ದರ್ಭದಿಂದ ನಿರ್ಮಿತವಾದ ಆಸನದಲ್ಲಿ ನಿವಸನ್=ಇದ್ದುಕೊಂಡು.||೪೬||

**ಪ್ರಾಣಾಯಾಮೇನ ತ್ರಿವೃತಾ ಪ್ರಾಣೇಂದ್ರಿಯಮನೋಮಲಮ್ ।**
**ಶನೈರ್ವ್ಯುದಸ್ಯಾಭಿಧ್ಯಾಯೇನ್ಮನಸಾ ಗುರೂಣಾಂ ಗುರುಮ್ ॥೪೭॥**

ತ್ರಿವೃತಾ=ರೇಚಕ ಪೂರಕ ಕುಂಭಕಗಳಿಂದ ಸೇರಿದ ಪ್ರಾಣಾಯಾಮೇನ= ಪ್ರಾಣಾಯಾಮದಿಂದ ಪ್ರಾಣೇಂದ್ರಿಯಮನೋಮಲಂ=ಪ್ರಾಣಗಳು ವಶವಾಗದಿರುವದು ಎಂಬ, ಇಂದ್ರಿಯಗಳು ವಿಷಯಗಳ ಕಡೆಗೆ ಹೋಗುವದು ಎಂಬ, ಮನಸ್ಸಿನ ಚಾಂಚಲ್ಯವೆಂಬ ಕೊಳೆಯನ್ನು ಶನೈಃ=ಮೆಲ್ಲಗೆ ವ್ಯುದಸ್ಯ=ತೊಳೆದು ಮನಸಾ=ಮನಸ್ಸಿನಿಂದ ಗುರೂಣಾಂ ಗುರುಂ=ಬ್ರಹ್ಮಾದಿಗಳಿಗೂ ಗುರುವಾದ ಶ್ರೀಹರಿಯನ್ನು ಅಭಿಧ್ಯಾಯೇತ್=ಧ್ಯಾನ ಮಾಡಬೇಕು.

◆'ಗುರುಣಾಂ' ಎನ್ನುವಲ್ಲಿ ಹ್ರಸ್ವವು ಛಾಂದಸವೆಂದು ತಿಳಿಯಬೇಕು.

◆"ಗುರುಣಾಂ ಗುರುಂ" ಎಂದು ಹೇಳುವುದರಿಂದ ಮೊದಲು ಗುರುಪರಂಪರೆಯನ್ನು ಸ್ಮರಿಸಬೇಕು ಎಂಬ ತತ್ವವನ್ನು ಸೂಚಿಸುವರು. ॥೪೭॥

**ಪ್ರಸಾದಾಭಿಮುಖಂ ಶಶ್ವತ್ ಪ್ರಸನ್ನವದನೇಕ್ಷಣಮ್ ।**
**ಸುನಾಸಂ ಸುಭ್ರುವಂ ಚಾರುಕಪೋಲಂ ಸುಂದರಂ ಹರಿಂ ॥೪೮ ॥**

ಪ್ರಸಾದಾಭಿಮುಖಂ=ಯಾವಾಗಲೂ ಅನುಗ್ರಹ ಮಾಡಲು ಉದ್ಯುಕ್ತನಾದ ಪ್ರಸನ್ನವದನೇಕ್ಷಣಂ=ಸಂತುಷ್ಟವಾದ ಮುಖ ಮತ್ತು ಕಣ್ಣುಗಳುಳ್ಳ ಸುನಾಸಂ=ಸುಂದರವಾದ ಮೂಗುಳ್ಳ ಸುಭ್ರುವಂ=ಮನೋಹರವಾದ ಹುಬ್ಬುಳ್ಳ ಚಾರುಕಪೋಲಂ=ಮನೋಹರವಾದ ಗಲ್ಲ(ಕೆನ್ನೆ)ಗಳುಳ್ಳ ಸುಂದರಂ=ಸುಂದರನಾದ ಹರಿಂ=ಪರಮಾತ್ಮನನ್ನು (ಅಭಿಧ್ಯಾಯೇತ್= ಧ್ಯಾನ ಮಾಡಬೇಕು)

◆೫೪ನೇ ಶ್ಲೋಕದಲ್ಲಿರುವ ಅಭಿಧ್ಯಾಯೇತ್ ಎಂಬ ಕ್ರಿಯಾಪದದಿಂದ ಮುಂದಿನ ಶ್ಲೋಕಗಳಿಗೆ ಅನ್ವಯ ತಿಳಿಯಬೇಕು.

◆'ಸುರಸುಂದರಂ' ಎಂಬ ಪಾಠವಿದ್ದಲ್ಲಿ ಎಲ್ಲ ದೇವತೆಗಳಿಗಿಂತ ಸುಂದರನಾದ ಎಂದು ಅರ್ಥ ತಿಳಿಯಬೇಕು. ॥೪೮॥

**ತರುಣಂ ರಮಣೀಯಾಂಗ*ಮರುಣಾಬ್ಜೇಕ್ಷಣಾಧರಮ್ ।**
**ಪ್ರಣತಾಶ್ರಯಣಂ *ಕೃಷ್ಣಂ ಶರಣ್ಯಂ ಕರುಣಾರ್ಣವಮ್ ॥೪೯ ॥**

ತರುಣಂ=ಹದಿನಾರು ವರುಷದ ಯುವಕನಾದ ರಮಣೀಯಾಂಗಂ=ಸುಂದರವಾದ ಅವಯವಗಳುಳ್ಳ ಅರುಣಾಬ್ಜೇಕ್ಷಣಾಧರಂ=ಕೆಂಪಾದ ಕಮಲದಂತಿರುವ ಕಣ್ಣು ಮತ್ತು

ತುಟಿಯುಳ್ಳ ಪ್ರಣತಾಶ್ರಯಣಂ=ನಮಸ್ಕರಿಸಿದವರಿಗೆ ಆಶ್ರಯನಾದ (ಅಥವಾ ಪ್ರಯತಾಶ್ರಯಣಂ=ಯತ್ನಶೀಲರಾದವರಿಗೆ ಆಶ್ರಯನಾದ ಶರಣ್ಯಂ=ಶರಣು ಹೋಗಲು ಯೋಗ್ಯನಾದ ಕರುಣಾರ್ಣವಂ=ದಯಾಸಮುದ್ರನಾದ ಕೃಷ್ಣಂ=ನೀಲಮೇಘಶ್ಯಾಮ-ನಾದವನನ್ನು (ಅಭಿಧ್ಯಾಯೇತ್=ಧ್ಯಾನಿಸಬೇಕು.)

**ವಿಶೇಷ ವಿಚಾರ :**

ಹಿಂದಿನ ಶ್ಲೋಕದಲ್ಲಿ ಕಣ್ಣುಗಳನ್ನು ಹೇಳಿದರೂ ಅರುಣತ್ವ ತಿಳಿಸಲು ಮತ್ತೆ ಹೇಳಿರುವರು. ಕಣ್ಣು ಕೆಂಪಾಗಿರುವದು ಭಯಕಾರಣವಾದರೂ ಕೊನೆಯಲ್ಲಿ (ಪ್ರಾಂತಭಾಗೇ) ಕೆಂಪಿರುವದು ಸೌಂದರ್ಯಕಾರಣವಾದ್ದರಿಂದ ಹೇಳಿರುವರು.

**ಪಾಠಾಂತರ - ಅರ್ಥಾಂತರ**

*'ಕೃಷ್ಣಂ' ಎನ್ನುವಲ್ಲಿ 'ನೃಮ್ಣಂ' ಎಂಬ ಪಾಠವಿದ್ದಾಗ ಸರ್ವಪುರುಷಾರ್ಥನಿಧಿಯಾದ ಎಂದು ಅರ್ಥ ತಿಳಿಯಬೇಕು.

*'ಅರುಣೋಷ್ಠೇಕ್ಷಣಾಧರಂ' ಎಂದು ಪಾಠವಿದ್ದಾಗ ಓಷ್ಠವೆಂದರೆ ಮೇಲ್ತುಟಿ, ಅಧರವೆಂದರೆ ಕೆಳತುಟಿ, ಈಕ್ಷಣ ಎಂದರೆ ಕಣ್ಣು ಹಾಗಾಗಿ ಕೆಂಪಾದ ಕಣ್ಣು ಮತ್ತು ತುಟಿಗಳನ್ನು ಆಧಾರಯತಿ=ಧರಿಸಿರುವ ಎಂದರ್ಥ. ಅಧರೋಷ್ಠೇಕ್ಷಣಾರುಣಂ ಎಂದೂ ಪಾಠವಿದೆ. ಆಗ ತುಟಿ ಮತ್ತು ಕಣ್ಣು ಕೆಂಪಾಗಿರುವ ಎಂದರ್ಥ. ॥೪೯॥

**ಶ್ರೀವತ್ಸಾಂಕಂ ಘನಶ್ಯಾಮಂ ಪುರುಷಂ ವನಮಾಲಿನಮ್ ।**
**ಶಂಖಚಕ್ರಗದಾಪದ್ಮೈರಭಿವ್ಯಕ್ತಚತುರ್ಭುಜಮ್ ॥೫೦॥**

ಶ್ರೀವತ್ಸಾಂಕಂ=ಶ್ರೀವತ್ಸವೆಂಬ ಚಿಹ್ನದಿಂದ ಕೂಡಿದ ಘನಶ್ಯಾಮಂ=ಮೋಡದಂತೆ ಕಪ್ಪಾದ (ನೀಲವರ್ಣನಾದ) ಪುರುಷಂ=ಪುರುಷನ ೩೨ ಲಕ್ಷಣಗಳಿಂದ ಯುಕ್ತನಾದ ವನಮಾಲಿನಂ=ವನಮಾಲೆಯನ್ನು ಧರಿಸಿದ ಶಂಕಚಕ್ರಗದಾಪದ್ಮೈಃ=ಶಂಖಚಕ್ರಗದಾಪದ್ಮಗಳಿಂದ ಅಭಿವ್ಯಕ್ತಚತುರ್ಭುಜಂ=ಕಾಣಿಸುವ ನಾಲ್ಕು ಕೈಗಳುಳ್ಳವನನ್ನು (ಅಭಿಧ್ಯಾಯೇತ್=ಧ್ಯಾನಿಸಬೇಕು.)॥೫೦॥

**ಕಿರೀಟಿನಂ ಕುಂಡಲಿನಂ ಕೇಯೂರವಲಯಾನ್ವಿತಮ್ ।**
**ಕೌಸ್ತುಭಾಭರಣಗ್ರೀವಂ ಪೀತಕೌಶೇಯವಾಸಸಮ್ ॥೫೧॥**

ಕಿರೀಟಿನಂ=ಶಿರಸ್ಸಿನಲ್ಲಿ ಕಿರೀಟವನ್ನು ಧರಿಸಿದ ಕುಂಡಲಿನಂ=ಕಿವಿಯಲ್ಲಿ ಕುಂಡಲಗಳುಳ್ಳ ಕೇಯೂರವಲಯಾನ್ವಿತಂ=ತೋಳಿನಲ್ಲಿ (ಕೇಯೂರ) ವಂಕಿಗಳನ್ನೂ ಮುಂಗೈಯಲ್ಲಿ

(ವಲಯ) ಕಡಗಗಳನ್ನೂ ಧರಿಸಿದ ಕೌಸ್ತುಭಾಭರಣಗ್ರೀವಂ=ಕೌಸ್ತುಭಮಣಿಗೆ ಶೋಭೆಯನ್ನುಂಟುಮಾಡುವ ಕಂಠವುಳ್ಳ ಪೀತಕೌಶೇಯವಾಸಸಂ=ಹಳದಿಯ ರೇಷ್ಮೆ ವಸ್ತ್ರಗಳನ್ನು ಧರಿಸಿದವನನ್ನು (ಅಭಿಧ್ಯಾಯೇತ್=ಧ್ಯಾನಿಸಬೇಕು.)॥೫೧॥

**ಕಾಂಚೀಕಲಾಪಪರ್ಯಸ್ತಂ ಲಸತ್ಕಾಂಚನನೂಪುರಮ್ ।**
**ದರ್ಶನೀಯತಮಂ ಶಾಂತಂ ಮನೋನಯನವರ್ಧನಮ್ ॥೫೨॥**

ಕಾಂಚೀಕಲಾಪಪರ್ಯಸ್ತಂ=ಸೊಂಟದಲ್ಲಿ (ಡಾಬು ವಡ್ಯಾಣ) ಪಟ್ಟಿಯಿಂದ ಸುತ್ತುವರಿದ ಲಸತ್‌ಕಾಂಚನನೂಪುರಂ=ಹೊಳೆಯುವ ಚಿನ್ನದ ಕಾಲುಗೆಜ್ಜೆ(ಕಾಲ್ಗಡಗ)ಗಳುಳ್ಳ ದರ್ಶನೀಯತಮಂ=ಅತ್ಯಂತ ಸುಂದರನಾದ ಶಾಂತಂ=ಸೌಮ್ಯಸ್ವರೂಪನಾದ (ನಿರ್ವಿಕಾರನಾದ) ಮನೋನಯನವರ್ಧನಂ=ಕಣ್ಣು-ಮನಗಳಿಗೆ ಆನಂದವನ್ನೀಯುವವನನ್ನು (ಅಭಿಧ್ಯಾಯೇತ್=ಧ್ಯಾನಿಸಬೇಕು.)॥೫೨॥

**ಪದ್ಭ್ಯಾಂ ನಖಮಣಿಶ್ರೇಣ್ಯಾ ವಿಲಸದ್ಭ್ಯಾಂ ಸಮರ್ಚತಾಮ್ ।**
**ಹೃತ್ಪದ್ಮಕರ್ಣಿಕಾಧಿಷ್ಣ್ಯಮಾಕ್ರಮ್ಯಾತ್ಮನ್ಯವಸ್ಥಿತಮ್ ॥೫೩ ॥**

ನಖಮಣಿಶ್ರೇಣ್ಯಾ=ಉಗುರುಗಳೆಂಬ ಮಣಿಗಳ ಪಂಕ್ತಿಯಿಂದ ವಿಲಸದ್ಭ್ಯಾಂ=ಶೋಭಿಸುವ ಪದ್ಭ್ಯಾಂ=ಪಾದಗಳಿಂದ ಸಮರ್ಚತಾಂ=ತನ್ನನ್ನು ಪೂಜಿಸುವ ಭಕ್ತರ ಆತ್ಮನಿ=ದೇಹದಲ್ಲಿ ಹೃತ್ಪದ್ಮಕರ್ಣಿಕಾಧಿಷ್ಣ್ಯಂ=ಹೃದಯಕಮಲಕೋಶವೆಂಬ ಸ್ಥಾನವನ್ನು ಆಕ್ರಮ್ಯ=ಆಕ್ರಮಿಸಿ ಅವಸ್ಥಿತಂ ಇರುವವನನ್ನು (ಅಭಿಧ್ಯಾಯೇತ್=ಧ್ಯಾನಿಸಬೇಕು.)

ಆತ್ಮನಿ ಅವಸ್ಥಿತಂ=ಜೀವನಲ್ಲಿಯೂ ಇರುವ ಎಂದೂ ಅರ್ಥ. ॥೫೩ ॥

**ಸ್ಮಯಮಾನಮಭಿಧ್ಯಾಯೇತ್ ಸಾನುರಾಗಾವಲೋಕನಮ್ ।**
**ನಿಯಮೇನೈಕಭೂತೇನ ಮನಸಾ ವರದರ್ಷಭಮ್ ॥೫೪ ॥**

ಸಾನುರಾಗಾವಲೋಕನಂ=ಪ್ರೀತಿಯುತವಾದ ದೃಷ್ಟಿಯುಳ್ಳ (ಅನುಗ್ರಹದೃಷ್ಟಿಯುಳ್ಳ) ಸ್ಮಯಮಾನಂ=ಮಂದಹಾಸವುಳ್ಳ (ಮುಗುಳುನಗೆಯುಳ್ಳ) ವರದರ್ಷಭಂ=ಅಭೀಷ್ಟವನ್ನು ಕೊಡುವವರಲ್ಲಿ ಶ್ರೇಷ್ಠನಾದ ಶ್ರೀಹರಿಯನ್ನು ನಿಯಮೇನ=ಮತ್ತೊಬ್ಬರಲ್ಲಿ ಮನಸ್ಸಿಡದೇ ಏಕಭೂತೇನ ಮನಸಾ=ಕೇವಲ ಭಗವಂತನಲ್ಲಿ ಮಾತ್ರ ಇಟ್ಟಿರುವ (ಸದಾ ಬಾಹ್ಯವಿಷಯಗಳ ಬಗ್ಗೆ ಅಭಿನಿವೇಷರಹಿತವಾದ) ಮನಸ್ಸಿನಿಂದ ಅಭಿಧ್ಯಾಯೇತ್=ಚೆನ್ನಾಗಿ ಧ್ಯಾನ ಮಾಡಬೇಕು. ॥೫೪॥

**ಏವಂ ಭಗವತೋ ರೂಪಂ ಸುಭದ್ರಂ ಧ್ಯಾಯತೋ ಮನಃ ।**
**ನಿರ್ವೃತ್ಯಾ ಪರಯಾ ತೂರ್ಣಂ ಸಂಪನ್ನಂ ನ ನಿವರ್ತತೇ ॥೫೫॥**

ಏವಂ=ಈ ರೀತಿಯಾಗಿ ಸುಭದ್ರಂ=ಪರಮಮಂಗಲಕರವಾದ ಭಗವತಃ=ಪರಮಾತ್ಮನ ರೂಪಂ=ರೂಪವನ್ನು ಧ್ಯಾಯತಃ=ಧ್ಯಾನ ಮಾಡುವವನ ಮನಃ=ಮನಸ್ಸು ತೂರ್ಣಂ=ಶೀಘ್ರದಲ್ಲಿ ಪರಯಾ ನಿರ್ವೃತ್ಯಾ=ಪರಮಾನಂದದಿಂದ (ಆನಂದೋದ್ರೇಕದಿಂದ) ಸಂಪನ್ನಂ ಸತ್=ಪೂರ್ಣವಾಗಿ ನ ನಿವರ್ತತೇ=ಧ್ಯೇಯವಾದ ವಸ್ತುವನ್ನು ಬಿಟ್ಟು ಬೇರಡಗೆ ಹೋಗಲಾರದು. ॥೫೫॥

**ಜಪ್ಯಸ್ತು ಪರಮೋ ಗುಹ್ಯಃ ಶ್ರೂಯತಾಂ ಮೇ ನೃಪಾತ್ಮಜ ।**
**ಯಂ ಸಪ್ತರಾತ್ರಂ ಪ್ರಪಠನ್ ಪುಮಾನ್ ಪಶ್ಯತಿ ಖೇಚರಾನ್ ॥೫೬॥**

ಹೇ ನೃಪಾತ್ಮಜ=ಎಲೋ ರಾಜಕುಮಾರನೇ ! (ಈ ರೀತಿ ಸಂಬೋಧನದಿಂದ ''ನೀನು ಜನರನ್ನು ರಕ್ಷಿಸುವಿ. ಆದ್ದರಿಂದ ಗುಪ್ತವಾದರೂ ಉಪದೇಶಿಸುವೆನು'' ಎಂದು ಸೂಚಿಸುವರು) ಪರಮಃ=ಉತ್ಕೃಷ್ಟವಾದ ಆದ್ದರಿಂದಲೇ ಗುಹ್ಯಃ=ಗೌಪ್ಯವಾದ ಮತ್ತು ಯಂ=ಯಾವುದನ್ನು ಸಪ್ತರಾತ್ರಂ=ಏಳುದಿವಸ ಪ್ರಪಠನ್=ಚೆನ್ನಾಗಿ ಪಠಿಸುವ ಪುಮಾನ್=ಅಧಿಕಾರಿಯು ಖೇಚರಾನ್ ಪಶ್ಯತಿ=ಆಕಾಶದಲ್ಲಿ ಸಂಚರಿಸುವ ದೇವತೆಗಳನ್ನೂ, ಸಿದ್ಧರನ್ನೂ, ಪಾರ್ಷದರನ್ನೂ ನೋಡುವನೋ ಸಃ=ಅಂಥಹ ಜಪ್ಯಃ=ಜಪಿಸಲು ಯೋಗ್ಯವಾದ ಮಂತ್ರವು ಮೇ=ನನ್ನ ದೆಸೆಯಿಂದ ಶ್ರೂಯತಾಂ=ಕೇಳಲ್ಪಡಲಿ. ಬಲಕಿವಿಯನ್ನು ನೀಡು, ಮಂತ್ರ ಉಪದೇಶಿಸುವೆನು ಎಂದು ಭಾವ. ॥೫೬॥

**''ಓಂ ನಮೋ ಭಗವತೇ ವಾಸುದೇವಾಯ ಓಂ''**
**ಮಂತ್ರೇಣಾನೇನ ದೇವಸ್ಯ ಕುರ್ಯಾದ್ ದ್ರವ್ಯಮಯೀಂ ಬುಧಃ ॥**
**ಸಪರ್ಯಾಂ ವಿವಿಧೈರ್ದ್ರವ್ಯೈಃ ದೇಶಕಾಲವಿಭಾಗವಿತ್ ॥೫೭॥**

ಬುಧಃ=ಜ್ಞಾನವಂತನು ದೇಶಕಾಲವಿಭಾಗವವಿತ್=ಪೂಜೆಗೆ ಉಪಯುಕ್ತವಾದ ಮತ್ತು ಅನುಪಯುಕ್ತವಾದ ದೇಶ-ಕಾಲಗಳನ್ನು ತಿಳಿದವನಾಗಿ ದ್ರವ್ಯಮಯೀಂ=ಶಿಲಾದಿ ನಿರ್ಮಿತಪ್ರತಿಮೆಯಲ್ಲಿ (ದ್ವಿತೀಯಾವಿಭಕ್ತಿಯು ಸಪ್ತಮೀವಿಭಕ್ತಿಯ ಅರ್ಥದಲ್ಲಿದೆ) ವಿವಿಧೈಃ=ನಾನಾಬಗೆಯ ದ್ರವ್ಯೈಃ=ಪೂಜಾಸಾಮಗ್ರಿಗಳಿಂದ ದೇವಸ್ಯ=ಪರಮಾತ್ಮನ ಸಪರ್ಯಾಂ=ಪೂಜೆಯನ್ನು ಅನೇನ ಮಂತ್ರೇಣ= **''ಓಂ ನಮೋ ಭಗವತೇ ವಾಸುದೇವಾಯ ಓಂ''** ಎಂಬ ವಾಸುದೇವದ್ವಾದಶಾಕ್ಷರಮಂತ್ರದಿಂದ ಕುರ್ಯಾತ್= ಮಾಡಬೇಕು.

ಅಥವಾ ದ್ರವ್ಯಮಯೀಂ=ದ್ರವ್ಯಪ್ರಧಾನಕವಾದ ಸಪರ್ಯಾಂ=ಪೂಜೆಯನ್ನು ಕುರ್ಯಾತ್=ಮಾಡಬೇಕು. ಹೀಗೂ ಅನ್ವಯಾರ್ಥ ಮಾಡಬಹುದು.

ಮೇಲೆ ನಾರದರು ಪ್ರಣವಸಹಿತವಾದ ವಾಸುದೇವಮಂತ್ರವನ್ನು ಉಪದೇಶಿಸಿದ್ದರಿಂದ ವೈಷ್ಣವಮಂತ್ರಗಳ ಉಪದೇಶಕ್ಕೆ ದ್ವಿಜತ್ವ ಬೇಕಿಲ್ಲವೆಂದು ಸೂಚಿತವಾಗುವದು. ಧ್ರುವನ ಉಪನಯನವಾಗಿರಲಿಲ್ಲವಷ್ಟೇ ?

**ಪೂಜೆಗೆ ಉಪಯುಕ್ತವಾದ ಮತ್ತು ಅನುಪಯುಕ್ತವಾದ ದೇಶ-ಕಾಲಗಳು**

ಚಂಡಾಲ-ಪತಿತ-ಯವನರು ವಾಸಿಸದಿರುವ ದೇಶ, ಪ್ರಾತಃಕಾಲ-ಮಧ್ಯಾಹ್ನಕಾಲ-ಸಾಯಾಹ್ನಕಾಲ-ವಸಂತಾದಿಕಾಲಗಳು, ಒಳ್ಳೆಯ ಕ್ಷೇತ್ರಗಳು ಪೂಜೆಗೆ ಉಪಯುಕ್ತವಾದವು. ಮಿಕ್ಕವು ಅನುಪಯುಕ್ತ ಎಂದು ತಿಳಿಯಬೇಕು. ।।೫೭।।

ಪೂಜಾದ್ರವ್ಯಗಳನ್ನು ತಿಳಿಸುವರು -

**ಸಲಿಲೈಃ ಶುಚಿಭಿರ್ಮಾಲ್ಯೈರ್ವನ್ಯೈರ್ಮೂಲಫಲಾದಿಭಿಃ ।**
***ಶಸ್ತಾಂಕುರೈಃ ಕುಶೈಶ್ಚಾರ್ಚೇತ್ತುಲಸ್ಯಾ ಪ್ರಿಯಯಾ ಪ್ರಭುಮ್ ।।೫೮।।**

ಶುಚಿಭಿಃ=ಶುದ್ಧವಾದ (ಶೂದ್ರಾದಿಗಳಿಂದ, ಮೈಲಿಗೆಯಿಂದ, ಸ್ತ್ರೀಯರಿಂದ ತರದಿರುವ ಮತ್ತು ವಸ್ತ್ರದಿಂದ ಶೋಧಿಸಿದ) ಸಲಿಲೈಃ=ನೀರಿನಿಂದ, ವನ್ಯೈಃ=ವನದಲ್ಲಿ ಬೆಳೆದ ಮಾಲ್ಯೈಃ=ಹೂಗಳಿಂದ, ಮೂಲಫಲಾದಿಭಿಃ=ಬೇರು ಹಣ್ಣು ತೊಗಟೆಗಳಿಂದ, 1ಶಸ್ತಾಂಕುರೈಃ=ಪ್ರಶಸ್ತವಾದ ದುರ್ವಾ(ಗರಿಕೆ)ಗಳಿಂದ, ಕುಶೈಃ=ದರ್ಭೆಗಳಿಂದ, ಪ್ರಿಯಯಾ ತುಲಸ್ಯಾ=ಶ್ರೀಹರಿಗೆ ಪ್ರಿಯವಾದ ತುಲಸಿಯಿಂದ ಅರ್ಚಯೇತ್=ಪೂಜಿಸಬೇಕು.

*''ಶಸ್ತಾಂಕುರಾಂಶುಕೈಃ'' ಎಂಬ ಪಾಠವಿದ್ದಾಗ ಶಸ್ತ=ಪ್ರಶಸ್ತವಾದ ಅಂಕುರ=ದುರ್ವಾ(ಗರಿಕೆ)ಗಳಿಂದ, ಅಂಶುಕೈಃ=ಸೂಕ್ಷ್ಮವಸ್ತ್ರಗಳಿಂದ ಅಥವಾ ಪತ್ರಗಳಿಂದ ಎಂದು ಅರ್ಥ ತಿಳಿಯಬೇಕು. ''ಅಂಶುಕಂ ಸೂಕ್ಷ್ಮವಸ್ತ್ರೇ ಸ್ಯಾದ್ವಸ್ತುಮಾತ್ರೋತ್ತರೀಯಯೋಃ'' ಎಂದು ಮೇದಿನೀಕೋಶವಿದೆ.

**ಮಾನಾಧೀನಾ ಮೇಯಸಿದ್ಧಿಃ**

ಮೇಲೆ ಹೇಳಿದ ಅರ್ಥಕ್ಕೆ ಪುಷ್ಟೀಕರಿಸುವ ಪ್ರಮಾಣಗಳು ಕೆಳಗಿನಂತೆ ಇವೆ -

**ಶೂದ್ರಾನೀತೈಃ ಸ್ತ್ರಿಯಾನೀತೈರ್ಯಃ ಸ್ನಾಪಯತಿ ಕೇಶವಂ ।**
**ಸ ಯಾತಿ ನರಕಂ ಘೋರಂ ವಸ್ತ್ರಾಪೂತೈಸ್ತಥಾ ಜಲೈಃ ।।**

ಶೂದ್ರರಿಂದ, ಸ್ತ್ರೀಯರಿಂದ ತಂದ ನೀರಿನಿಂದ ಹಾಗೂ ವಸ್ತ್ರದಿಂದ ಶೋಧಿಸದ ನೀರಿನಿಂದ ದೇವರಿಗೆ ಅಭಿಷೇಕ ಮಾಡಿದರೆ ಘೋರನರಕವಾಗುವದು ಎಂದು ಪುರಾಣದಲ್ಲಿದೆ.

**ದುರ್ವಾಂಕುರಂ ತು ಹರಯೇ ಪೂಜಾಕಾಲೇ ಪ್ರಯಚ್ಛತಿ ।**
**ಪೂಜಾಫಲಂ ಶತಗುಣಂ ಸಮ್ಯಗಾಪ್ನೋತಿ ಮಾನವಃ ॥**
**ಶಮೀಪತ್ರೈಶ್ಚ ದೇವೇಶಂ ಪೂಜಯಂತ್ಯಸುರದ್ವಿಷಂ ।**
**ಯಮಮಾರ್ಗಂ ಮಹಾಘೋರಂ ನ ತೇ ಪಶ್ಯಂತಿ ನಾರದ ॥**

ಯಾರು ಪೂಜಾಕಾಲದಲ್ಲಿ ದೇವರಿಗೆ ಗರಿಕೆಯನ್ನು ಅರ್ಪಿಸುವರೋ ಅವರಿಗೆ ನೂರುಪಟ್ಟು ಪೂಜಾಫಲ ಬರುವುದು. ಬನ್ನಿಯ ಎಲೆಗಳಿಂದ ಭಗವಂತನನ್ನು ಪೂಜಿಸಿದಲ್ಲಿ ಘೋರವಾದ ಯಮಮಾರ್ಗವನ್ನು ಅವರು ನೋಡಲಾರರು.

**ಧಾತ್ರಿಪತ್ರೈರ್ಬಿಲ್ವಪತ್ರೈಃ ಸದ್ಯೈವಾಶ್ವತ್ಥಪತ್ರಕೈಃ ।**
**ನವೀನೈರ್ಮೃದುಭಿರ್ಯೇ ಚ ಪೂಜಯಂತಿ ಜನಾರ್ದನಮ್ ॥**
**ನ ತೇಷಾಂ ಪುನರಾವೃತ್ತಿರ್ವೈಕುಂಠಾಜ್ಜಾಯತೇ ದ್ವಿಜ ।**
**ಧಾತ್ರೀ ದುನೋತಿ ಪಾಪಾನಿ ಶಮೀ ಶಮಯತೇಽಶುಭಾನ್ ॥**
**ದುರ್ವಾ ಹರತಿ ದುಃಖಾನಿ ತುಲಸೀ ಸರ್ವಕಾಮದಾ ।**
**ಶ್ರಿಯಂ ದದಾತಿ ಬೈಲ್ವಾನ್ಯಶ್ವತ್ಥಾನ್ಯಾರೋಗ್ಯಸಂಪದಃ ॥**

ನಲ್ಲಿ, ಬಿಲ್ವ, ಅರಳಿ ಮುಂತಾದ ನೂತನವಾದ ಕೋಮಲವಾದ ಎಲೆಗಳಿಂದ ಪೂಜಿಸಿದಲ್ಲಿ ವೈಕುಂಠಕ್ಕೆ ಹೋದವನು ಮರಳಿ ಸಂಸಾರಕ್ಕೆ ಬರಲಾರನು. ನೆಲ್ಲಿಯು ಪಾಪವನ್ನು ಕಳೆಯುವದು. ಬನ್ನಿಯು ಅಶುಭವನ್ನು ಪರಿಹರಿಸುವದು, ಗರಿಕೆಯು ದುಃಖವನ್ನು ಪರಿಹರಿಸುವದು. ತುಲಸಿಯು ಸಕಲಾಭೀಷ್ಟಗಳನ್ನು ಕೊಡುವದು. ಬಿಲ್ವವು ಸಂಪತ್ತನ್ನು ಕೊಡುವದು. ಅರಳಿಯು ಆರೋಗ್ಯಭಾಗ್ಯವನ್ನೀಯುವುದು ಎಂದು ಪ್ರಮಾಣಗಳ ಭಾವ. ॥೫೮॥

**ಲಬ್ಧ್ವಾ ದ್ರವ್ಯಮಯೀಮರ್ಚಾಂ ಕ್ಷಿತ್ಯಂಬ್ವಾದಿಷು ಚಾರ್ಚಯೇತ್ ।**
**ಆಹೃತಾತ್ಮಾ ಮುನಿಃ ಶಾಂತೋ ಯತವಾಙ್ ಮಿತವನ್ಯಭುಕ್ ॥೫೯॥**

ಮಿತವನ್ಯಭುಕ್=ತನಗೆ ಬೇಕಾಗುವದಕ್ಕಿಂದ ಅರ್ಧದಷ್ಟುಪ್ರಮಾಣದ, ವನದಲ್ಲಿ ಬೆಳೆಯುವ ಹಣ್ಣು ಮುಂತಾದವುಗಳನ್ನು ತಿನ್ನುತ್ತ ಯತವಾಕ್=ಮೌನದಿಂದ ಶಾಂತಃ=ವಿಕ್ಷೇಪವಿಲ್ಲದಲೇ ಜಿತೇಂದ್ರಿಯನಾಗಿ ಆಹೃತಾತ್ಮಾ=ವಿಷಯಗಳಿಂದ ಸೆಳೆದು ತನ್ನ

ಅಥವಾ ದ್ರವ್ಯಮಯೀಂ=ದ್ರವ್ಯಪ್ರಧಾನಕವಾದ ಸಪರ್ಯಾಂ=ಪೂಜೆಯನ್ನು ಕುರ್ಯಾತ್=ಮಾಡಬೇಕು. ಹೀಗೂ ಅನ್ವಯಾರ್ಥ ಮಾಡಬಹುದು.

ಮೇಲೆ ನಾರದರು ಪ್ರಣವಸಹಿತವಾದ ವಾಸುದೇವಮಂತ್ರವನ್ನು ಉಪದೇಶಿಸಿದ್ದರಿಂದ ವೈಷ್ಣವಮಂತ್ರಗಳ ಉಪದೇಶಕ್ಕೆ ದ್ವಿಜತ್ವ ಬೇಕಿಲ್ಲವೆಂದು ಸೂಚಿತವಾಗುವದು. ಧ್ರುವನ ಉಪನಯನವಾಗಿರಲಿಲ್ಲವಷ್ಟೇ ?

**ಪೂಜೆಗೆ ಉಪಯುಕ್ತವಾದ ಮತ್ತು ಅನುಪಯುಕ್ತವಾದ ದೇಶ-ಕಾಲಗಳು**

ಚಂಡಾಲ-ಪತಿತ-ಯವನರು ವಾಸಿಸದಿರುವ ದೇಶ, ಪ್ರಾತಃಕಾಲ-ಮಧ್ಯಾಹ್ನಕಾಲ-ಸಾಯಾಹ್ನಕಾಲ-ವಸಂತಾದಿಕಾಲಗಳು, ಒಳ್ಳೆಯ ಕ್ಷೇತ್ರಗಳು ಪೂಜೆಗೆ ಉಪಯುಕ್ತವಾದವು. ಮಿಕ್ಕವು ಅನುಪಯುಕ್ತ ಎಂದು ತಿಳಿಯಬೇಕು. ।।೫೭।।

ಪೂಜಾದ್ರವ್ಯಗಳನ್ನು ತಿಳಿಸುವರು -

**ಸಲಿಲೈಃ ಶುಚಿಭಿರ್ಮಾಲ್ಯೈರ್ವನ್ಯೈರ್ಮೂಲಫಲಾದಿಭಿಃ ।**
***ಶಸ್ತಾಂಕುರೈಃ ಕುಶೈಶ್ಚಾರ್ಚೇತ್ತುಲಸ್ಯಾ ಪ್ರಿಯಯಾ ಪ್ರಭುಮ್ ।।೫೮।।**

ಶುಚಿಭಿಃ=ಶುದ್ಧವಾದ (ಶೂದ್ರಾದಿಗಳಿಂದ, ಮೈಲಿಗೆಯಿಂದ, ಸ್ತ್ರೀಯರಿಂದ ತರದಿರುವ ಮತ್ತು ವಸ್ತ್ರದಿಂದ ಶೋಧಿಸಿದ) ಸಲಿಲೈಃ=ನೀರಿನಿಂದ, ವನ್ಯೈಃ=ವನದಲ್ಲಿ ಬೆಳೆದ ಮಾಲ್ಯೈಃ=ಹೂಗಳಿಂದ, ಮೂಲಫಲಾದಿಭಿಃ=ಬೇರು ಹಣ್ಣು ತೊಗಟೆಗಳಿಂದ, 1ಶಸ್ತಾಂಕುರೈಃ=ಪ್ರಶಸ್ತವಾದ ದುರ್ವಾ(ಗರಿಕೆ)ಗಳಿಂದ, ಕುಶೈಃ=ದರ್ಭೆಗಳಿಂದ, ಪ್ರಿಯಯಾ ತುಲಸ್ಯಾ=ಶ್ರೀಹರಿಗೆ ಪ್ರಿಯವಾದ ತುಲಸಿಯಿಂದ ಅರ್ಚಯೇತ್=ಪೂಜಿಸಬೇಕು.

*''ಶಸ್ತಾಂಕುರಾಂಶುಕೈಃ'' ಎಂಬ ಪಾಠವಿದ್ದಾಗ ಶಸ್ತ=ಪ್ರಶಸ್ತವಾದ ಅಂಕುರ=ದುರ್ವಾ(ಗರಿಕೆ)ಗಳಿಂದ, ಅಂಶುಕೈಃ=ಸೂಕ್ಷ್ಮವಸ್ತ್ರಗಳಿಂದ ಅಥವಾ ಪತ್ರಗಳಿಂದ ಎಂದು ಅರ್ಥ ತಿಳಿಯಬೇಕು. ''ಅಂಶುಕಂ ಸೂಕ್ಷ್ಮವಸ್ತ್ರೇ ಸ್ಯಾದ್ವಸ್ತುಮಾತ್ರೋತ್ತರೀಯಯೋಃ'' ಎಂದು ಮೇದಿನೀಕೋಶವಿದೆ.

**ಮಾನಾಧೀನಾ ಮೇಯಸಿದ್ಧಿಃ**

ಮೇಲೆ ಹೇಳಿದ ಅರ್ಥಕ್ಕೆ ಪುಷ್ಟೀಕರಿಸುವ ಪ್ರಮಾಣಗಳು ಕೆಳಗಿನಂತೆ ಇವೆ -

**ಶೂದ್ರಾನೀತೈಃ ಸ್ತ್ರಿಯಾನೀತೈರ್ಯಃ ಸ್ನಾಪಯತಿ ಕೇಶವಂ ।**
**ಸ ಯಾತಿ ನರಕಂ ಘೋರಂ ವಸ್ತ್ರಾಪೂತೈಸ್ತಥಾ ಜಲೈಃ ।।**

ಶೂದ್ರರಿಂದ, ಸ್ತ್ರೀಯರಿಂದ ತಂದ ನೀರಿನಿಂದ ಹಾಗೂ ವಸ್ತ್ರದಿಂದ ಶೋಧಿಸದ ನೀರಿನಿಂದ ದೇವರಿಗೆ ಅಭಿಷೇಕ ಮಾಡಿದರೆ ಘೋರನರಕವಾಗುವದು ಎಂದು ಪುರಾಣದಲ್ಲಿದೆ.

ದುರ್ವಾಂಕುರಂ ತು ಹರಯೇ ಪೂಜಾಕಾಲೇ ಪ್ರಯಚ್ಛತಿ ।
ಪೂಜಾಫಲಂ ಶತಗುಣಂ ಸಮ್ಯಗಾಪ್ನೋತಿ ಮಾನವಃ ॥
ಶಮೀಪತ್ರೈಶ್ಚ ದೇವೇಶಂ ಪೂಜಯಂತ್ಯಸುರದ್ವಿಷಂ ।
ಯಮಮಾರ್ಗಂ ಮಹಾಘೋರಂ ನ ತೇ ಪಶ್ಯಂತಿ ನಾರದ ॥

ಯಾರು ಪೂಜಾಕಾಲದಲ್ಲಿ ದೇವರಿಗೆ ಗರಿಕೆಯನ್ನು ಅರ್ಪಿಸುವರೋ ಅವರಿಗೆ ನೂರುಪಟ್ಟು ಪೂಜಾಫಲ ಬರುವುದು. ಬನ್ನಿಯ ಎಲೆಗಳಿಂದ ಭಗವಂತನನ್ನು ಪೂಜಿಸಿದಲ್ಲಿ ಘೋರವಾದ ಯಮಮಾರ್ಗವನ್ನು ಅವರು ನೋಡಲಾರರು.

ಧಾತ್ರಿಪತ್ರೈರ್ಬಿಲ್ವಪತ್ರೈಃ ಸದ್ಯೈವಾಶ್ವತ್ಥಪತ್ರಕೈಃ ।
ನವೀನೈರ್ಮೃದುಭಿರ್ಯೇ ಚ ಪೂಜಯಂತಿ ಜನಾರ್ದನಮ್ ॥
ನ ತೇಷಾಂ ಪುನರಾವೃತ್ತಿರ್ವೈಕುಂಠಾಜ್ಜಾಯತೇ ದ್ವಿಜ ।
ಧಾತ್ರೀ ದುನೋತಿ ಪಾಪಾನಿ ಶಮೀ ಶಮಯತೇಽಶುಭಾನ್ ॥
ದುರ್ವಾ ಹರತಿ ದುಃಖಾನಿ ತುಲಸೀ ಸರ್ವಕಾಮದಾ ।
ಶ್ರಿಯಂ **ದದಾತಿ** ಬೈಲ್ವಾನ್ಯಶ್ವತ್ಥಾನ್ಯಾರೋಗ್ಯಸಂಪದಃ ॥

ನಲ್ಲಿ, ಬಿಲ್ವ, ಅರಳಿ ಮುಂತಾದ ನೂತನವಾದ ಕೋಮಲವಾದ ಎಲೆಗಳಿಂದ ಪೂಜಿಸಿದಲ್ಲಿ ವೈಕುಂಠಕ್ಕೆ ಹೋದವನು ಮರಳಿ ಸಂಸಾರಕ್ಕೆ ಬರಲಾರನು. ನೆಲ್ಲಿಯು ಪಾಪವನ್ನು ಕಳೆಯುವದು. ಬನ್ನಿಯು ಅಶುಭವನ್ನು ಪರಿಹರಿಸುವದು, ಗರಿಕೆಯು ದುಃಖವನ್ನು ಪರಿಹರಿಸುವದು. ತುಲಸಿಯು ಸಕಲಾಭೀಷ್ಟಗಳನ್ನು ಕೊಡುವದು. ಬಿಲ್ವವು ಸಂಪತ್ತನ್ನು ಕೊಡುವದು. ಅರಳಿಯು ಆರೋಗ್ಯಭಾಗ್ಯವನ್ನೀಯುವುದು ಎಂದು ಪ್ರಮಾಣಗಳ ಭಾವ. ॥೫೮॥

**ಲಬ್ಧ್ವಾ ದ್ರವ್ಯಮಯೀಮರ್ಚಾಂ ಕ್ಷಿತ್ಯಂಬ್ವಾದಿಷು ಚಾರ್ಚಯೇತ್ ।**
**ಆಹೃತಾತ್ಮಾ ಮುನಿಃ ಶಾಂತೋ ಯತವಾಙ್ ಮಿತವನ್ಯಭುಕ್ ॥೫೯॥**

ಮಿತವನ್ಯಭುಕ್=ತನಗೆ ಬೇಕಾಗುವದಕ್ಕಿಂದ ಅರ್ಧದಷ್ಟುಪ್ರಮಾಣದ, ವನದಲ್ಲಿ ಬೆಳೆಯುವ ಹಣ್ಣು ಮುಂತಾದವುಗಳನ್ನು ತಿನ್ನುತ್ತ ಯತವಾಕ್=ಮೌನದಿಂದ ಶಾಂತಃ=ವಿಕ್ಷೇಪವಿಲ್ಲದಲೇ ಜಿತೇಂದ್ರಿಯನಾಗಿ ಆಹೃತಾತ್ಮಾ=ವಿಷಯಗಳಿಂದ ಸೆಳೆದು ತನ್ನ

ವಶಪಡಿಸಿಕೊಂಡ ಮನಸ್ಸುಳ್ಳವನಾಗಿ ದ್ರವ್ಯಮಯೀಂ ಅರ್ಚಾಂ=ಶಿಲಾ ಮುಂತಾದ ಪ್ರತಿಮೆಗಳನ್ನು ಲಬ್ಧ್ವಾ=ಸಂಪಾದಿಸಿಕೊಂಡು ಅರ್ಚಯೇತ್=ಪೂಜಿಸಬೇಕು. ಕ್ಷಿತ್ಯಂಬ್ವಾದಿಷು ಚ, ಕ್ಷಿತಿ=ಚಕ್ರಾಬ್ಜಮಂಡಲಾದಿಗಳಿಂದ ಅಲಂಕರಿಸಿದ ಸ್ಥಂಡಿಲದಲ್ಲಿ ಅಂಬು=ಗಂಗಾನೀರಿನಲ್ಲಿ ಆದಿಷು ಚ=ಬ್ರಾಹ್ಮಣ, ಸೂರ್ಯ, ಅಗ್ನಿ ಮೊದಲಾದ ಅಧಿಷ್ಠಾನಗಳಲ್ಲಿಯೂ ಸಹ ಅರ್ಚಯೇತ್=ಪೂಜಿಸಬೇಕು.

**ವಿಶೇಷ ವಿಚಾರ :**

ವನ್ಯಪದದಿಂದ ಆಹಾರಗಳಲ್ಲಿ ಶುದ್ಧತೆಯನ್ನು ಸೂಚಿಸುವರು. ಕೃಷಿ ಮುಂತಾದವುಗಳಿಂದ ಉಂಟಾಗುವ ಆಹಾರವು ದನಗಳ ಪೀಡೆಗೆ ಕಾರಣವಾಗುವದರಿಂದ ಅಶುದ್ಧವು. ಮತ್ತು ಆಹಾರವು ಪಥ್ಯವೂ ಆಗಿರಬೇಕು. ಏಕೆಂದರೆ - ಶುದ್ಧವಾಗಿದ್ದರೂ ಬಹಳವಾಗಿ ಆಹಾರ ಸೇವನೆ ಮಾಡಿದರೆ ಅಜೀರ್ಣವಾಗಿ ಶರೀರ ಅಸ್ವಸ್ಥವಾದರೆ ಪೂಜೆ ಮಾಡಲಾಗದು.

ಹೊಟ್ಟೆಯಲ್ಲಿ ಎರಡು ಭಾಗಗಳನ್ನು ಅನ್ನದಿಂದ ತುಂಬಿಸಿ, ಒಂದು ಭಾಗವನ್ನು ನೀರಿನಿಂದ ತುಂಬಿಸಿ, ನಾಲ್ಕನೇ ಭಾಗವನ್ನು ವಾಯುಸಂಚಾರಕ್ಕಾಗಿ ಖಾಲಿ ಇರಿಸಬೇಕು ಎಂದಿದೆ. ॥೫೯॥

**ಸ್ವೇಚ್ಛಾವತಾರಚರಿತ್ರೈ ರಚಿತಂ ನಿಜಮಾಯಯಾ ।**
**ಕರಿಷ್ಯತ್ಯುತ್ತಮಶ್ಲೋಕಸ್ತಾನ್ ಧ್ಯಾಯೇದ್ಧೃದಯಂಗಮಾನ್ ॥೬೦॥**

ಸ್ವೇಚ್ಛಾವತಾರಚರಿತ್ರೈಃ=ತನ್ನ ಇಚ್ಛೆಯಿಂದಲೇ ಸ್ವೀಕರಿಸಿದ ಮತ್ಸ್ಯ ಮುಂತಾದ ಅವತಾರಗಳಿಂದ ರಚಿತಂ=ಮಾಡಲ್ಪಟ್ಟ ಈಶ್ವರತ್ವವನ್ನು ಉಪಪಾದಿಸುವ ಗುಣಸಮೂಹವನ್ನು (ಚರಿತ್ರೈಃ ಚರಿತಂ=ಕಂಸವಧಾದಿಗಳಿಂದ ವ್ಯಕ್ತಗೊಳಿಸಿದ ಗುಣಸಮೂಹಗಳನ್ನು ಎಂದು ಭಾವ) ಮತ್ತು ನಿಜಮಾಯಯಾ=ತನ್ನ ಸ್ವರೂಪಸಾಮರ್ಥ್ಯದಿಂದ ಉತ್ತಮಶ್ಲೋಕಃ= ಬ್ರಹ್ಮಾದಿಗಳಿಂದ ಕೀರ್ತ್ಯನಾದ ಶ್ರೀಹರಿಯು ರಾಮಕೃಷ್ಣಾದಿರೂಪಗಳಿಂದ ಯಾನ್ ಕರಿಷ್ಯತಿ=ಏನು ಕಂಸವಧ ರಾವಣವಧ ಮುಂತಾದವನ್ನು ಮಾಡುವನೋ ತಾನ್=ಅಂತಹ ಹೃದಯಂಗಮಾನ್=ಮನೋಹರವಾದ ಪರಾಕ್ರಮಗಳನ್ನೂ ಸಹ ಧ್ಯಾಯೇತ್=ಧ್ಯಾನ ಮಾಡಬೇಕು.

**ಅರ್ಥಾಂತರ :**

ಸ್ವೇಚ್ಛಾವತಾರಚರಿತ್ರೈಃ=ತನ್ನ ಭಕ್ತರ ಇಚ್ಛೆಯಂತೆ (ಪ್ರಾರ್ಥನಾನುಸಾರವಾಗಿ) ಮಾಡಿದ ಅವತಾರಗಳಿಂದ ಮಾಡಲ್ಪಟ್ಟ ಹೀಗೂ ಅರ್ಥ ತಿಳಿಯಬಹುದು. ನಿಜಮಾಯಯಾ=ತನ್ನ

ಅನನ್ಯಭಕ್ತರ ಮೇಲಿನ ದಯೆಯಿಂದ ಎಂದೂ ಅರ್ಥ ಮಾಡಬಹುದು. ''ಮಾಯಾ ದಂಭೇ ಕೃಪಾಯಾಂ ತು'' ಎಂದು ವಿಶ್ವಕೋಶವಿದೆ. ||೬೦||

**ಪರಿಚರ್ಯಾ ಭಗವತೋ ಯಾವತೀಃ ಪೂರ್ವಕಲ್ಪಿತಾಃ ।**
**ತಾ ಮಂತ್ರಹೃದಯೇನೈವ ಪ್ರಯುಂಜ್ಯಾನ್ಮಂತ್ರಮೂರ್ತಯೇ ||೬೧||**

ಯಾವತೀಃ=ಎಷ್ಟು ಪೂರ್ವಕಲ್ಪಿತಾಃ=ಪೂರ್ವಿಕರಾದ ಆಚಾರ್ಯರಿಂದ ವಿಹಿತವಾಗಿರುವವೋ ಅಥವಾ ಸೇವಿತಾಃ=ಪೂರ್ವಿಕರಿಂದ ಸಮರ್ಪಿಸಲ್ಪಟ್ಟಿರುವವೋ ಅವುಗಳೇ ಭಗವತಃ=ಶ್ರೀಹರಿಯ ಪರಿಚರ್ಯಾಃ=ಪೂಜಾಸಾಧನಗಳು ತಾಃ=ಗಂಧ-ಪುಷ್ಪ-ಧೂಪ-ದೀಪ ಮುಂತಾದವುಗಳನ್ನು ಮಂತ್ರಮೂರ್ತಯೇ=ಮಂತ್ರಪ್ರತಿಪಾದ್ಯನಾದ ಶ್ರೀಹರಿಗೆ ಮಂತ್ರಹೃದಯೇನೈವ=ಓಂ ನಮೋ ಭಗವತೇ ವಾಸುದೇವಾಯ ನಮಃ ಎಂದು ಪ್ರಯುಂಜ್ಯಾತ್=ಅರ್ಪಿಸಬೇಕು.

**ಭಾಗವತ ತಾತ್ಪರ್ಯ :-**

**ಮಂತ್ರಹೃದಯೇನ ಮಂತ್ರೇಣ ಚ ನಮಃಶಬ್ದೇನ ಚ ।**

ಮಂತ್ರಶಾಸ್ತ್ರದಲ್ಲಿ ಹೃದಯಶಬ್ದಕ್ಕೆ ನಮಃಶಬ್ದವೆಂದು ಅರ್ಥ ಇರುವದರಿಂದ ಹೃದಯೇನ ಎಂದರೆ ನಮಃಶಬ್ದದಿಂದ ಎಂದು ಆಚಾರ್ಯರು ವ್ಯಾಖ್ಯಾನ ಮಾಡಿರುವರು. ಮಂತ್ರದಿಂದಲೂ ಹೃದಯದಿಂದಲೂ ಅಂದರೆ ದ್ವಾದಶಾಕ್ಷರಮಂತ್ರ ಹೇಳಿ ನಮಃಶಬ್ದವನ್ನು ಉಚ್ಚರಿಸಿ ಅರ್ಪಿಸಬೇಕು ಎಂದರ್ಥ. ||೬೧||

**ಏವಂ ಕಾಯೇನ ಮನಸಾ ವಚಸಾ ಚ ಮನೋಗತಃ ।**
**ಪರಿಚರ್ಯಮಾಣೋ ಭಗವಾನ್ ಭಕ್ತಿಮತ್ಪರಿಚರ್ಯಯಾ || ೬೨ ||**

**ಪುಂಸಾಮಮಾಯಿನಾಂ ಸಮ್ಯಕ್ ಭಜತಾಂ ಭಾವವರ್ಧನಃ ।**
**ಶ್ರೇಯೋ ದಿಶತ್ಯಭಿಮತಂ ಯದ್ಧರ್ಮಾದಿಷು ದೇಹಿನಾಮ್ ||೬೩||**

ಏವಂ=ಈ ರೀತಿಯಾಗಿ ಕಾಯೇನ=ದೇಹದಿಂದ (ನೀರು ತಂದು ಅಭಿಷೇಕಾದಿಗಳನ್ನು ಮಾಡುವದರಿಂದ) ಮನಸಾ=ಮನಸ್ಸಿನಿಂದ (ಮನಸ್ಸಿನಲ್ಲಿ ಧ್ಯಾನ ಮುಂತಾದವುಗಳಿಂದ) ವಚಸಾ=ಮಾತಿನಿಂದ (ಜಪ ಮುಂತಾದವನ್ನು ಮಾಡುವದರಿಂದ) ಪರಿಚರ್ಯಮಾಣಃ=ಸೇವಿಸಲ್ಪಡುವ ಭಗವಾನ್=ಭಗವಂತನು (ಶ್ರೀಹರಿಯು) ಮನೋಗತಃ ಸನ್=ಮನಸ್ಸಿನಲ್ಲಿ ನೆಲೆಸಿದವನಾಗಿ ಭಕ್ತಿಮತ್ಪರಿಚರ್ಯಯಾ=ಭಕ್ತಿಯುಳ್ಳ ಸಜ್ಜನರ ಸೇವೆಯಿಂದ ಅಥವಾ ಭಕ್ತಿಯುಕ್ತವಾದ ಸೇವೆಯಿಂದ,

ಅಮಾಯಿನಾಂ=ವಂಚಕರಲ್ಲದ ಆದ್ದರಿಂದಲೇ ಸಮ್ಯಗ್ ಭಜತಾಂ=ಚೆನ್ನಾಗಿ ಭಜಿಸುವ ದೇಹಿನಾಂ=ಕರ್ಮಾಧೀನವಾಗಿ ಬಂದ ದೇಹವುಳ್ಳ ಪುಂಸಾಂ=ಜನರಿಗೆ ಭಾವವರ್ಧನಃ= ಭಕ್ತಿಯನ್ನು ಹೆಚ್ಚಿಸುವವನಾಗಿ ಧರ್ಮಾದಿಷು=ಧರ್ಮ ಅರ್ಥ ಕಾಮ ಮೋಕ್ಷಗಳಲ್ಲಿ ಯದ್ ಅಭಿಮತಂ=ಯಾವದು ಇಷ್ಟವೋ ತತ್ ಶ್ರೇಯಃ=ಆ ಶ್ರೇಯಸ್ಸನ್ನು ದಿಶತಿ=ಕೊಡುವನು.

'ಪುಂಸಾಂ' ಎಂದು ಹೇಳಿ 'ದೇಹಿನಾಂ' ಎಂದೂ ಹೇಳಿದ್ದರಿಂದ ಶ್ರೀಹರಿಯ ಪ್ರಸಾದಕ್ಕೆ ಹೆಣ್ಣು ಗಂಡು ಎಂಬುದಾಗಲೀ ವರ್ಣಾಶ್ರಮಗಳಾಗಲೀ ಕಾರಣವಲ್ಲ, ಕಿಂತು ಭಕ್ತಿಯೇ ಮುಖ್ಯಸಾಧನವೆಂದು ಸೂಚಿತವಾಗುವದು. ॥೬೨,೬೩॥

**ವಿರಕ್ತಶ್ಚೇಂದ್ರಿಯರತೌ ಭಕ್ತಿಯೋಗೇನ ಭೂಯಸಾ ।**
**ತನ್ನಿರಂತರಭಾವೇನ ಭಜೇತಾದ್ಧಾ ವಿಮುಕ್ತಯೇ ॥೬೪॥**

ಇಂದ್ರಿಯರತೌ=ವಿಷಯಭೋಗದಲ್ಲಿ ವಿರಕ್ತಃ=ವೈರಾಗ್ಯವನ್ನು ಪಡೆದು ಭೂಯಸಾ= ಬಹಳವಾದ (ಮಾಹಾತ್ಮ್ಯಜ್ಞಾನಸಹಿತವಾದ) ತನ್ನಿರಂತರಭಾವೇನ=ಸಾವಿರಾರು ವಿಘ್ನಗಳಿಂದಲೂ ಪ್ರತಿಬದ್ಧವಾಗದ ಪ್ರೇಮಪ್ರವಾಹರೂಪವಾದ ಭಕ್ತಿಯೋಗೇನ= ಭಕ್ತಿರೂಪವಾದ ಉಪಾಯದಿಂದ ವಿಮುಕ್ತಯೇ=ವಿಶಿಷ್ಟಮೋಕ್ಷಕ್ಕಾಗಿ ಭಜೇತ್= ಸೇವಿಸಬೇಕು. ಅಥವಾ ವಿರಕ್ತನಾಗಿ ಭಕ್ತಿಯಿಂದ ಭಜಿಸಿದ್ದಾದರೆ ಆ ಭಜನವು ನಿಶ್ಚಯವಾಗಿ ಮುಕ್ತಿಕಾರಣವಾಗುವದು. ಹೀಗೂ ಅರ್ಥ ಮಾಡಬಹುದು. ॥೬೪॥

**ಮೈತ್ರೇಯ ಉವಾಚ –**

**ಇತ್ಯುಕ್ತಸ್ತಂ ಪರಿಕ್ರಮ್ಯ ಪ್ರಣಮ್ಯ ಚ ನೃಪಾರ್ಭಕಃ ।**
**ಯಯೌ ಮಧುವನಂ ಪುಣ್ಯಂ ಹರೇಶ್ಚರಣಚರ್ಚಿತಮ್ ॥೬೫॥**

ನೃಪಾರ್ಭಕಃ=ರಾಜಕುವರನಾದ ಧ್ರುವನು ಇತ್ಯುಕ್ತಃ=ಈ ರೀತಿ ಹೇಳಿಸಿಕೊಳ್ಳಲ್ಪಟ್ಟವನಾಗಿ ತಂ=ನಾರದರನ್ನು ಪರಿಕ್ರಮ್ಯ=ಪ್ರದಕ್ಷಿಣೆ ಮಾಡಿ ಪ್ರಣಮ್ಯ=ನಮಸ್ಕರಿಸಿ ಹರೇಃ ಚರಣಚರ್ಚಿತಂ=ಶ್ರೀಹರಿಯ ಪಾದಗಳಿಂದ ಅಲಂಕೃತವಾದ ಆದ್ದರಿಂದಲೇ ಪುಣ್ಯಂ=ಪುಣ್ಯಕರವಾದ ಮಧುವನಂ ಯಯೌ=ಮಧುವನವನ್ನು ಕುರಿತು ಹೋದನು.

**ತಪೋವನಂ ಗತೇ ತಸ್ಮಿನ್ ಪ್ರವಿಷ್ಟೋಽಂತಃಪುರಂ ಮುನಿಃ ।**
**ಅರ್ಹಿತೋಽರ್ಹಣಯಾ ರಾಜ್ಞಾ ಸುಖಾಸೀನ ಉವಾಚ ತಮ್ ॥೬೬॥**

ತಸ್ಮಿನ್=ಧ್ರುವನು ತಪೋವನಂ=ತಪಸ್ಸು ಮಾಡಲು ಮಧುವನಕ್ಕೆ ಗತೇ ಸತಿ=ಹೋಗುತ್ತಿರಲು, ಇತ್ತ, ಮುನಿಃ=ನಾರದರು ಅಂತಃಪುರಂ ಪ್ರವಿಷ್ಟಃ=ರಾಜನ

ಅರಮನೆಯಲ್ಲಿಯ ರಾಣಿವಾಸ ಸ್ಥಳದಲ್ಲಿ ಪ್ರವೇಶಿಸಿ ರಾಜ್ಞಾ=ರಾಜನಿಂದ ಅರ್ಹಣಯಾ= ಪೂಜಾಸಾಮಗ್ರಿಗಳಿಂದ ಅರ್ಹಿತಃ=ಪೂಜಿತನಾಗಿ ಸುಖಾಸೀನಃ=ಸುಖವಾಗಿ ಕುಳಿತು ತಂ ಉವಾಚ=ರಾಜನಿಗೆ ಹೇಳಿದರು. ।।೬೬।।

ಧ್ರುವನು ತಪಸ್ಸು ಮಾಡುವದು ಭಗವದಿಚ್ಛೆ ಎಂದು ತಿಳಿದ ನಾರದರು, ರಾಜನು ಬಾಲಕನಿಗೆ ವ್ಯರ್ಥ ಮರಣವಾಗಬಾರದೆಂದು ಆಲೋಚಿಸಿ ತನ್ನ ಭಟರನ್ನು ಕಳುಹಿಸಿ ತಪಸ್ಸಿಗೆ ಪ್ರತಿಬಂಧ ಮಾಡಬಾರದು ಎಂದು ಮನಸ್ಸಿನಲ್ಲಿಟ್ಟುಕೊಂಡದ್ದು ತಮಗೆ ತಿಳಿದಿದ್ದರೂ ರಾಜನ ಮುಖದಿಂದಲೇ ಕೇಳಿ ತಿಳಿಯಲು ಪ್ರಶ್ನಿಸುವರು -

**ನಾರದ ಉವಾಚ -**

> **ರಾಜನ್ ಕಿಂ ಧ್ಯಾಯಸೇ ದೀರ್ಘಂ ಮುಖೇನ ಪರಿಶುಷ್ಯತಾ ।**
> **ಕಿಂ ವಾ ನ ರಿಷ್ಯತೇ ಕಾಮೋ ಧರ್ಮೋ ವಾರ್ಥೇನ ಸಂಯುತಃ ।।೬೭।।**

ಹೇ ರಾಜನ್=ಉತ್ತಾನಪಾದನೇ ! ಪರಿಶುಷ್ಯತಾ ಮುಖೇನ=ಬಾಡಿದ (ಮುಖದಿಂದ) ಮುಖಉಳ್ಳವನಾಗಿ ಕಿಂ ಧ್ಯಾಯಸೇ=ಏನು ವಿಚಾರ ಮಾಡುತ್ತಿರುವಿ ? ಅರ್ಥೇನ ಸಂಯುತಃ=ದ್ರವ್ಯದಿಂದ ಸಹಿತವಾದ ಕಾಮಃ=ಕಾಮವಾಗಲೀ, ಧರ್ಮೋ ವಾ=ಧರ್ಮವೇ ಆಗಲೀ ನ ರಿಷ್ಯತೇ ಕಿಂ=ನಾಶವಾಗಲಾರದೇ ? ಅಥವಾ ಕಿಂವಾ ನ ರಿಷ್ಯತೇ=ಯಾವುದು ನಾಶವಾಗುವದಿಲ್ಲ ? ಎಲ್ಲವೂ ನಾಶವಾಗುವದೆಂದು ಭಾವ. ।।೬೭।।

**ರಾಜೋವಾಚ -**

> **ಸುತೋ ಮೇ ಬಾಲಕೋ ಬ್ರಹ್ಮನ್ ಸ್ತ್ರೈಣೇನಾಕರುಣಾತ್ಮನಾ ।**
> **ನಿರ್ವಾಸಿತಃ ಪಂಚವರ್ಷಃ ಸಹ ಮಾತ್ರಾ ಮಹಾನ್ ಕವಿಃ ।।೬೮।।**

ಹೇ ಬ್ರಹ್ಮನ್=ಜ್ಞಾನಿಗಳಾದ ಹೇ ನಾರದರೆ ! ಸ್ತ್ರೈಣೇನ=ಸ್ತ್ರೀವಶನಾದ (ಸುರುಚಿಯ ವಶನಾದ) ಆದ್ದರಿಂದಲೇ ಅಕರುಣಾತ್ಮನಾ=ದಯಾರಹಿತವಾದ ಮನಸ್ಸುಳ್ಳ ಮಯಾ=ನನ್ನಿಂದ ಪಂಚವರ್ಷಃ=ಐದುವರ್ಷವಯಸ್ಸಿನ ಬಾಲಕಃ=ಚಿಕ್ಕವನಾದ ಮಹಾನ್=ವಿನಯಾದಿ-ಗುಣವಂತನಾದ ಕವಿಃ=ಜ್ಞಾನಿಯಾದ ಮೇ ಸುತಃ=ನನ್ನ ಮಗನು ಮಾತ್ರಾ ಸಹ=ತಾಯಿಯ ಜೊತೆಯೇ ನಿರ್ವಾಸಿತಃ=ಮನೆಯಿಂದ ಹೊರಗೆ ಕಳಿಸಲ್ಪಟ್ಟಿರುವನು.

**ಅಭಿಪ್ರಾಯ ವಿಶೇಷ :**

'ಮಾತ್ರಾ ಸಹ ಕವಿಃ' ಎಂದಿದ್ದರಿಂದ ತಾಯಿಯ ಜೊತೆ ಶಾಸ್ತ್ರಶ್ರವಣ ಮಾಡುತ್ತಿದ್ದನು ಎಂದು ಸೂಚಿತವಾಗುವದು. ಮತ್ತು -

**ವೃದ್ಧೌ ಚ ಮಾತಾಪಿತರೌ ಸಾಧ್ವೀ ಭಾರ್ಯಾ ಸುತಃ ಶಿಶುಃ ।**
**ಅಪ್ಯಕಾರ್ಯಶತಂ ಕೃತ್ವಾ ಭರ್ತವ್ಯಾ ಮನುರಭ್ರವೀತ್ ॥**

ಎಂದು ಹೇಳಿದ್ದರಿಂದ ಸಾಧ್ವಿಯಾದ ಹೆಂಡತಿ ಮತ್ತು ಚಿಕ್ಕಮಕ್ಕಳನ್ನು ಪರಿತ್ಯಾಗ ಮಾಡುವದು ಸರಿಯಲ್ಲ. ಪ್ರಕೃತ 'ಸುತಃ ಪಂಚವರ್ಷಃ ಬಾಲಕಃ' ಎಂದು ಹೇಳುವ ಮೂಲಕ ಮಗನಾದ ಧ್ರುವನು ಐದುವರ್ಷದ ಚಿಕ್ಕ ಬಾಲಕನಾದ್ದರಿಂದ ರಾಜನು ಮಗನನ್ನು ಪರಿತ್ಯಾಗ ಮಾಡಿದ್ದು ಸರಿಯಲ್ಲ ಎಂದು ಸೂಚಿಸುತ್ತಿದ್ದಾರೆ.

ಹೌದು, ''ತ್ಯಜದೇಕಂ ಕುಲಸ್ಯಾರ್ಥೇ'' ಎಂದಿರುವದರಿಂದ ದುರ್ಮಾರ್ಗದಲ್ಲಿದ್ದವ-ನಾದ್ದರಿಂದ ಮಗನೂ ತ್ಯಾಜ್ಯನೇ ಆಗಬಹುದಲ್ಲ ? ಎಂದರೆ, ಪ್ರಕೃತ ಧ್ರುವನು ಅಂಥವನಲ್ಲ. ಮಹಾನ್ ಕವಿಃ=ಗುಣವಂತನಾಗಿದ್ದಾನೆ, ಬುದ್ಧಿವಂತನಾಗಿದ್ದಾನೆ. ಆದ್ದರಿಂದಲೇ 'ಉತ್ತಮನು ಇರುವ ಕಾರಣ ಇವನು ಹೋದರೆ ಹೋಗಲಿ' ಎನ್ನುವಂತಿಲ್ಲ. ಆ ಉತ್ತಮನು ಈ ಧ್ರುವನಂತೆ ಗುಣವಂತನಲ್ಲ. ಹಾಗಾಗಿ ಧ್ರುವನು ತ್ಯಾಜ್ಯನಲ್ಲ. ಆದರೂ ಸ್ತ್ರೀವಶನಾಗಿ ಕಠಿಣ ಮನಸ್ಸಿನಿಂದ ಈ ಕೆಲಸ ಮಾಡಿರುವುದು ಜ್ಞಾನಿಗಳಾದ ನಿಮಗೆ ಎಲ್ಲ ವಿದಿತವೇ ಆಗಿದೆ. ಕಾರಣ ಅವನೆಲ್ಲಿರುವನು ? ಏನು ಮಾಡಲಿಚ್ಛಿಸುವನು ? ಎನ್ನುವುದನ್ನು ತಿಳಿಸಿರಿ ಎಂದು ಭಾವ. ॥೬೮॥

**ಅಪ್ಯನಾಥಂ ವನೇ ಬ್ರಹ್ಮನ್ ಮಾ ಖಾದಂತ್ಯರ್ಭಕಂ ವೃಕಾಃ ।**
**ಶ್ರಾಂತಂ ಶಯಾನಂ ಕ್ಷುಧಿತಂ ಪರಿಮ್ಲಾನಮುಖಾಂಬುಜಮ್ ॥೬೯॥**

**ಅಹೋ ಮೇ ಬತ ದೌರಾತ್ಮ್ಯಂ ಸ್ತ್ರೀಜಿತಸ್ಯೋಪಧಾರಯ ।**
**ಯೋಽಂಕಂ ಪ್ರೇಮ್ಣಾಽಽರುರುಕ್ಷಂತಂ ನಾಭ್ಯನಂದಮಸತ್ತಮಃ ॥೭೦॥**

ಹೇ ಬ್ರಹ್ಮನ್=ನಾರದರೇ ! ವನೇ=ಅಡವಿಯಲ್ಲಿ ಅನಾಥಂ=ರಕ್ಷಕರಹಿತನಾದ ಶ್ರಾಂತಂ=ಶ್ರಮದಿಂದ ಕೂಡಿದ ಕ್ಷುಧಿತಂ=ಹಸಿವಿನಿಂದ ಕೂಡಿದ ಪರಿಮ್ಲಾನಮುಖಾಂಬುಜಂ= ಸುತ್ತಲೂ ಒಣಗಿದ ಮುಖಕಮಲವುಳ್ಳ ಶಯಾನಂ=ಮಲಗಿದ ಅರ್ಭಕಂ=ಮಗುವನ್ನು ವೃಕಾಃ=ತೋಳಗಳು ಮಾ ಖಾದಂತು=ತಿನ್ನದಿರಲಿ.

ಸ್ತ್ರೀಜಿತಸ್ಯ=ಹೆಣ್ಣಿನ ವಶನಾದ ಮೇ=ನನ್ನ ದೌರಾತ್ಮ್ಯಂ=ದುಷ್ಟತನವನ್ನು ಉಪಧಾರಯ= ಕೇಳಿ. ಪ್ರೇಮ್ಣಾ=ಪ್ರೀತಿಯಿಂದ ಅಂಕಂ=ತೊಡೆಯನ್ನು ಆರುರುಕ್ಷಂತಂ= ಏರಲಿಚ್ಛಿಸುವವನ್ನು ಯಃ ಅಸತ್ತಮಃ=ದುಷ್ಟನಾದ ನಾನು ನ ಅಭ್ಯನಂದಂ=ಸಂತೋಷದಿಂದ ಅನುಮೋದಿಸಲಿಲ್ಲ ಅಹೋ=ಆಶ್ಚರ್ಯವು, ಬತ=ಖೇದವು. ॥೬೯, ೭೦॥

**ನಾರದ ಉವಾಚ -**

**ಮಾ ಮಾ ಶುಚಃ ಸ್ವತನಯಂ ದೇವಗುಪ್ತಂ ವಿಶಾಂಪತೇ ।**
**ತತ್ಪ್ರಭಾವಮವಿಜ್ಞಾಯ ಪ್ರಾವೃಂಕ್ತೇ ಯದ್ಯಶೋ ಜಗತ್ ॥ ೭೦ ॥**

ಹೇ ವಿಶಾಂಪತೇ=ಎಲೋ ರಾಜನೇ ! ಯದ್ಯಶಃ=ಯಾವ ನಿನ್ನ ಮಗನ ಕೀರ್ತಿಯು ಜಗತ್ ಪ್ರಾವೃಂಕ್ತೇ=ಜಗತ್ತನ್ನೇ ವ್ಯಾಪಿಸುವದೋ ಅಂತಹ, ದೇವಗುಪ್ತಂ=ಶ್ರೀಹರಿಯಿಂದ ರಕ್ಷಿತನಾದ, ಸ್ವತನಯಂ=ನಿನ್ನ ಮಗನನ್ನು (ಮಗನ ವಿಷಯದಲ್ಲಿ) ತತ್ಪ್ರಭಾವಂ=ಅವನ ಸಾಮರ್ಥ್ಯವನ್ನು ಅವಿಜ್ಞಾಯ=ತಿಳಿಯದೇ ಮಾ ಮಾ ಶುಚಃ=ಶೋಕಪಡಬೇಡ. ॥೭೦॥

ಕೇವಲ ಅವನ ಕೀರ್ತಿ ಅಷ್ಟೇ ಅಲ್ಲ, ನಿನ್ನ ಕೀರ್ತಿಯೂ ಹೆಚ್ಚುವದು ಎಂದು ಹೇಳುವರು-

**ಸುದುಷ್ಕರಂ ಕರ್ಮ ಕೃತ್ವಾ ಲೋಕಪಾಲೈರಪಿ ಪ್ರಭುಃ ।**
**ಏಷ ಏಷ್ಯತ್ಯಚಿರತೋ ಯಶೋ ವಿಪುಲಯಂಸ್ತವ ॥೭೨॥**

ಪ್ರಭುಃ=ಸಮರ್ಥನಾದ ಏಷಃ=ಧ್ರುವನು ಲೋಕಪಾಲೈಃ ಅಪಿ=ಲೋಕಪಾಲಕರಾದ ದೇವತೆಗಳಿಂದಲೂ ಸುದುಷ್ಕರಂ=ಅವರಿಗೆ ವಿಹಿತವಲ್ಲದ್ದರಿಂದ ಮಾಡಲಾಗದ ಕರ್ಮ ಕೃತ್ವಾ=ತಪಸ್ಸನ್ನು ಮಾಡಿ, ತವ ಯಶಃ=ನಿನ್ನ ಕೀರ್ತಿಯನ್ನು ವಿಪುಲಯನ್=ಹೆಚ್ಚಿಸುವವನಾಗಿ ಅಚಿರಾತ್=ಬೇಗನೇ ಏಷ್ಯತಿ=ಬರುವನು.

**ಭಾಗವತ ತಾತ್ಪರ್ಯ : -**

ಈ ಶ್ಲೋಕದಲ್ಲಿ ''ಲೋಕಪಾಲೈಃ ಅಪಿ ಸುದುಷ್ಕರಂ ಕರ್ಮ ಕೃತ್ವಾ'' ಎಂದು ಹೇಳಿದ್ದರಿಂದ ಧ್ರುವನು ಮಾಡಿದ ಕಾರ್ಯವನ್ನು ಮಾಡುವ ಸಾಮರ್ಥ್ಯ ದೇವತೆಗಳಿಗೂ ಇಲ್ಲ ಎಂದು ತೋರುವದು. ಆದರೆ ಅದು ಸರಿಯಲ್ಲ. ಆ ಕಾರಣ ವಿವಕ್ಷಿತವಾದ ಅರ್ಥವನ್ನು ಆಚಾರ್ಯರು ಹೇಳುವರು -

**ತಸ್ಯೈವ ಯೋಗ್ಯತ್ವಾಲ್ಲೋಕಪಾಲಾನಾಂ ದುಷ್ಕರಂ ।**

**ನಾಶಕ್ಯಂ ದೇವತಾನಾಂ ತು ಯದನ್ಯೈಃ ಶಕಿತಂ ಕ್ವಚಿತ್ ।**
**ಶಕ್ತಾ ಅಪಿ ನ ಕುರ್ವಂತಿ ಯದನ್ಯವಿಹಿತಂ ಬುಧಾಃ ॥ ಇತಿ ಬ್ರಾಹ್ಮೇ ॥**

ಧ್ರುವನು ಮಾಡಿದ ತಪಸ್ಸು ಧ್ರುವನಿಗೇನೇ ವಿಹಿತವಾದ್ದರಿಂದ, ದೇವತೆಗಳಿಗೆ ವಿಹಿತವಾಗಿಲ್ಲವಾದ್ದರಿಂದ ಆ ಅಭಿಪ್ರಾಯದಲ್ಲಿ ''ಲೋಕಪಾಲಕರಿಗೆ ದುಷ್ಕರ'' ಎಂದು ಹೇಳಿದ್ದು. ಹೊರತು ಅಶಕ್ತಿಯಿಂದಲ್ಲ.

ಧ್ರುವ ಮಾಡುವ ಕೆಲಸವನ್ನು ಮಾಡಲು ದೇವತೆಗಳಿಗೆ ಸಾಮರ್ಥ್ಯವಿದ್ದರೂ ಅವರಿಗೆ ಅದು ವಿಹಿತವಾಗಿಲ್ಲವಾದ್ದರಿಂದ, ವಿಹಿತವಾಗದದ್ದನ್ನು ಮಾಡಿದರೆ ಪಾಪ ಬರುವದರಿಂದ ಅದನ್ನು ಅವರು ಮಾಡಲಾರರು. ಈ ಅಭಿಪ್ರಾಯದಿಂದ ಅವರಿಗೆ ದುಷ್ಕರ ಎಂದು ಹೇಳುವದು ಯುಕ್ತ. ಹೊರತು ಧ್ರುವನು ಮಾಡಿದ ಕಾರ್ಯವನ್ನು ಮಾಡಲು ದೇವತೆಗಳಿಗೆ ಸಾಮರ್ಥ್ಯ ಇಲ್ಲ ಎಂದು ಅರ್ಥವಲ್ಲ.

ಬೇರೆಯವರಿಗೆ ಸಾಧ್ಯವಾದುದು ದೇವತೆಗಳಿಗೆ ಯಾವದೂ ಅಸಾಧ್ಯವಲ್ಲ. ಆದರೂ ಜ್ಞಾನಿಗಳು ಬೇರೆಯವರಿಗೆ ವಿಹಿತವಾದುದನ್ನು ತಾವು ಮಾಡಲಾರರು ಎಂದು ಬ್ರಾಹ್ಮಪುರಾಣದಲ್ಲಿ ಹೇಳಿದೆ. ।।೭೨।।

**ಮೈತ್ರೇಯ ಉವಾಚ -**

**ಇತಿ ದೇವರ್ಷಿಣಾ ಪ್ರೋಕ್ತಂ ವಿಸ್ರಭ್ಯ ಜಗತೀಪತಿಃ ।**
**ರಾಜ್ಯಲಕ್ಷ್ಮೀಮನಾದೃತ್ಯ ಪುತ್ರಮೇವಾನ್ವಚಿಂತಯತ್ ।।೭೩।।**

ಜಗತೀಪತಿಃ=ರಾಜನಾದ ಉತ್ತಾನಪಾದನು ಇತಿ=ಈ ರೀತಿಯಾಗಿ ದೇವರ್ಷಿಣಾ= ನಾರದರಿಂದ ಪ್ರೋಕ್ತಂ=ಹೇಳಿದ್ದನ್ನು ವಿಸ್ರಭ್ಯ=ವಿಶ್ವಾಸ ಮಾಡಿ, ರಾಜ್ಯಲಕ್ಷ್ಮೀಂ ಅನಾದೃತ್ಯ= ಸಂಪತ್ತನ್ನು ಗಮನಿಸದೇ ಪುತ್ರಮೇವ=ಧ್ರುವನನ್ನೇ ಅನ್ವಚಿಂತಯತ್=ಧ್ಯಾನಿಸುತ್ತಿದ್ದನು. (ಅವನನ್ನು ಕರೆಯಲು ಪ್ರಯತ್ನ ಮಾಡುವ ಮೂಲಕ ವಿಘ್ನ ಮಾಡದೇ ತಾನು ಇದ್ದಲ್ಲಿಯೇ ಮಗನನ್ನು ನೆನೆಯುತ್ತಿದ್ದನೆಂದು ಭಾವ). ।।೭೩।।

**ತತ್ರಾಭಿಷಿಕ್ತಃ ಪ್ರಯತಸ್ತಾಮುಪೋಷ್ಯ ವಿಭಾವರೀಮ್ ।**
**ಸಮಾಹಿತಃ ಪರ್ಯಚರದ್ದೃಷ್ಟ್ಯಾಽಽದೇಶೇನ ಪೂರುಷಮ್ ।। ೭೪ ।।**

ತತ್ರ=ಆ ಮಧುವನದಲ್ಲಿ ಅಭಿಷಿಕ್ತಃ=ಯಮುನೆಯಲ್ಲಿ ಮಿಂದು ತಾಂ ವಿಭಾವರೀಂ= ಮಧುವನಕ್ಕೆ ತಾನು ಯಾವ ರಾತ್ರಿ ಬಂದನೋ ಆ ರಾತ್ರಿಯನ್ನು ಉಪೋಷ್ಯ=ಉಪವಾಸ ಮಾಡಿ ಪ್ರಯತಃ=ಪ್ರಯತ್ನ ಉಳ್ಳವನಾಗಿ ಸಮಾಹಿತಃ=ಸಾವಧಾನಮನಸ್ಕನಾಗಿ ದೃಷ್ಟ್ಯಾ=ಯಥಾವತ್ತಾದ ಶಮಾದಿನಿರೂಪಣೆಯಿಂದ ಸಹಿತವಾದ ಆದೇಶೇನ=ನಾರದರು ಮಾಡಿದ ಮಂತ್ರೋಕ್ತಉಪದೇಶಾನುಸಾರವಾಗಿ ಪೂರುಷಂ=ವಾಸುದೇವನನ್ನು ಪರ್ಯಚರತ್=ಸೇವಿಸಿದನು.

ನಾರದರು ಭಗವಂತನ ನಿಷ್ಕೃಷ್ಟಸ್ವರೂಪವನ್ನು, ಜ್ಞಾನಸಾಧನವಾದ ಶಮಾದಿಗಳನ್ನು ಉಪದೇಶಿಸಿದ ಪ್ರಕಾರ ಉಪಾಸನೆ ಮಾಡಿದನು ಎಂದರ್ಥ.

**ಭಾಗವತ ತಾತ್ಪರ್ಯ :**

'ದೃಷ್ಟ್ಯಾ ಆದೇಶೇನ' ಎಂಬುದಕ್ಕೆ ಸರಿಯಾಗಿ ಅರ್ಥವಾಗದಿರುವದರಿಂದ ಆಚಾರ್ಯರು ಅರ್ಥ ಹೇಳುವರು -

**"ದೃಷ್ಟ್ಯಾ ನಿರೂಪಣಯಾ । ಆದೇಶೇನ ಉಪದೇಶೇನ ।**

ದೃಷ್ಟ್ಯಾ ಎಂದರೆ ನಿಷ್ಕೃಷ್ಟವಾದ ತತ್ವ ತಿಳಿಸುವದರಿಂದ ಎಂದರ್ಥ, ಆದೇಶೇನ ಎಂದರೆ ಉಪದೇಶದಿಂದ ಎಂದರ್ಥ. ॥೭೪॥

ಶಮಾದಿನಿರೂಪಣೆಯಿಂದ ಸಹಿತವಾದ ನಾರದರ ಉಪದೇಶದಿಂದ ಧ್ರುವನ ದೇಹಧಾರಣ ಪ್ರಕಾರವನ್ನು ತಿಳಿಸುವರು -

**ತ್ರಿರಾತ್ರಾಂತೇ ತ್ರಿರಾತ್ರಾಂತೇ ಕಪಿತ್ಥಬದರಾಶನಃ ।**
**ಆತ್ಮವೃತ್ತ್ಯನುಸಾರೇಣ ಮಾಸಂ ನಿನ್ಯೇಽರ್ಚಯನ್ ಹರಿಮ್ ॥೭೫॥**

ಅರ್ಭಕಃ=ಬಾಲಕನಾದ ಧ್ರುವನು ತ್ರಿರಾತ್ರಾಂತೇ ತ್ರಿರಾತ್ರಾಂತೇ=ಮೂರು ಮೂರು ದಿನಗಳಿಗೊಮ್ಮೆ ಕಪಿತ್ಥಬದರಾಶನಃ=ಬೇಲದ ಹಣ್ಣು ಬೋರೆ ಹಣ್ಣು ಇವುಗಳೇ ಆಹಾರವುಳ್ಳವನಾಗಿ ಆತ್ಮವೃತ್ತ್ಯನುಸಾರೇಣ=ತನ್ನ ದೇಹದ ಸ್ಥಿಗೆ ಎಷ್ಟು ಬೇಕೋ ಅಷ್ಟು ಮಾತ್ರ ಸೇವಿಸುತ್ತ ಹರಿಂ ಅರ್ಚಯನ್=ವಾಸುದೇವನನ್ನು ಪೂಜಿಸುತ್ತ ಮಾಸಂ ನಿನ್ಯೇ=ಮೊದಲನೇ ತಿಂಗಳನ್ನು ಕಳೆದನು. ॥೭೫॥

**ದ್ವಿತೀಯಂ ಚ ತಥಾ ಮಾಸಂ ಷಷ್ಠೇ ಷಷ್ಠೇಽರ್ಭಕೋ ದಿನೇ ।**
**ತೃಣಪರ್ಣಾದಿಭಿಃ ಶೀರ್ಣೈಃ ಕೃತಾನ್ನೋಽಭ್ಯರ್ಚಯದ್ವಿಭುಮ್ ॥೭೬॥**

ತಥಾ=ಹಾಗೆಯೇ ದ್ವಿತೀಯಂ ಮಾಸಂ=ಎರಡನೇ ತಿಂಗಳನ್ನು ಷಷ್ಠೇ ಷಷ್ಠೇ ದಿನೇ=ಆರಾರು ದಿನಕ್ಕೊಂದುಸಲ ಶೀರ್ಣೈಃ=ತಾನಾಗಿಯೇ ಉದುರಿದ ಒಣಗಿದ ತೃಣಪರ್ಣಾದಿಭಿಃ=ಹುಲ್ಲು ಎಲೆಗಳಿಂದ ಕೃತಾನ್ನಃ=ಆಹಾರ ಮಾಡಿಕೊಂಡವನಾಗಿ ವಿಭುಂ=ಶ್ರೀಹರಿಯನ್ನು ಅಭ್ಯರ್ಚಯತ್=ಪೂಜಿಸಿದನು. ॥೭೬॥

**ತೃತೀಯಂ ಚಾನಯನ್ಮಾಸಂ ನವಮೇ ನವಮೇಽಹನಿ ।**
**ಅಬ್ಭಕ್ಷ ಉತ್ತಮಶ್ಲೋಕಮುಪಾಧಾವತ್ಸಮಾಧಿನಾ ॥೭೭॥**

ನವಮೇ ನವಮೇ ಅಹನಿ=ಒಂಬತ್ತು ದಿನಕ್ಕೊಂದಾವರ್ತಿ ಅಬ್ಭಕ್ಷಃ=ನೀರು ಕುಡಿಯುವವನಾಗಿ ತೃತೀಯಂ ಮಾಸಂ=ಮೂರನೇ ತಿಂಗಳನ್ನು ಅನಯತ್=ಕಳೆದನು.

ಸಮಾಧಿನಾ=ಏಕಾಗ್ರಚಿತ್ತದಿಂದ ಉತ್ತಮಶ್ಲೋಕಂ=ಬ್ರಹ್ಮಾದಿಗಳಿಂದ ಸ್ತುತಿಸಲ್ಪಡುವ ಶ್ರೀಹರಿಯನ್ನು ಉಪಾಧಾವತ್=ಧ್ಯಾನ ಮಾಡಿದನು. ।।೭೭।।

**ಚತುರ್ಥಮಪಿ ವೈ ಮಾಸಂ ದ್ವಾದಶೇ ದ್ವಾದಶೇಽಹನಿ ।**
**ವಾಯುಭಕ್ಷೋ ಜಿತಶ್ವಾಸೋ ಧ್ಯಾಯನ್ ದೇವಮಪಾರಯತ್ ।।೭೮।।**

ದ್ವಾದಶೇ ದ್ವಾದಶೇ ಅಹನಿ=ಹನ್ನೆರಡು ದಿನಗಳಿಗೊಮ್ಮೆ ವಾಯುಭಕ್ಷಃ=ಗಾಳಿಯನ್ನೇ ಆಹಾರವಾಗಿಸಿಕೊಂಡವನಾಗಿ, ಜಿತಶ್ವಾಸಃ=ಶ್ವಾಸನಿರೋಧ ಮಾಡಿಕೊಂಡವನಾಗಿ, ದೇವಂ ಧ್ಯಾಯನ್=ಭಗವಂತನ್ನು ಧ್ಯಾನಿಸುತ್ತ ಚತುರ್ಥಂ ಮಾಸಂ ಅಪಿ=ನಾಲ್ಕನೇ ತಿಂಗಳನ್ನೂ ಸಹ ಅಪಾರಯತ್=ಕಳೆದನು. ।।೭೮।।

**ಪಂಚಮೇ ಮಾಸ್ಯನುಪ್ರಾಪ್ತೇ ಜಿತಶ್ವಾಸೋ ನೃಪಾತ್ಮಜಃ ।**
**ಧ್ಯಾಯನ್ ಬ್ರಹ್ಮ ಪದೈಕೇನ ತಸ್ಥೌ ಸ್ಥಾಣುರಿವಾಚಲಃ ।।೭೯।।**

ಪಂಚಮೇ ಮಾಸಿ ಅನುಪ್ರಾಪ್ತೇ (ಸತಿ)=ಐದನೇ ತಿಂಗಳು ಬರುತ್ತಿರಲು ನೃಪಾತ್ಮಜಃ= ರಾಜಕುವರನಾದ ಧ್ರುವನು ಬ್ರಹ್ಮ ಧ್ಯಾಯನ್=ಪರಬ್ರಹ್ಮನನ್ನು ಧ್ಯಾನ ಮಾಡುತ್ತ ಏಕೇನ ಪದೇನ=ಒಂದೇ ಕಾಲಿನಿಂದ ಸ್ಥಾಣುಃ ಇವ=ಮೋಟುಮರದಂತೆ ಅಚಲಃ= ಚಲಿಸದಂತೆ ತಸ್ಥೌ=ನಿಂತನು. ।।೭೯।।

**ದೇವಾಶ್ಚಕ್ರುಸ್ತಪೋವಿಘ್ನಂ ತ್ರಾಸಯಂತಃ ಸ್ವಮಾಯಯಾ ।**
**ಸರ್ಪೇಭಸಿಂಹಕೂಷ್ಮಾಂಡೈಸ್ತಾನ್ನಾಪಶ್ಯತ್ ಪರಂ ಗತಃ ।।೮೦।।**

ದೇವಾಃ=ದೇವತೆಗಳು ಸ್ವಮಾಯಯಾ=ತಮ್ಮ ಸಾಮರ್ಥ್ಯದಿಂದ (ನಿರ್ಮಿಸಲ್ಪಟ್ಟ) ಸರ್ಪೇಭಸಿಂಹಕೂಷ್ಮಾಂಡೈಃ ಸರ್ಪ=ಹಾವು ಇಭ=ಆನೆ ಸಿಂಹ=ಸಿಂಹ ಕೂಷ್ಮಾಂಡೈಃ= ಪಿಶಾಚಗಳಿಂದ ತ್ರಾಸಯಂತಃ=ಭಯಪಡಿಸುತ್ತ ತಪೋವಿಘ್ನಂ ಚಕ್ರುಃ=ತಪಸ್ಸಿಗೆ ವಿಘ್ನವನ್ನುಂಟುಮಾಡಿದರು. ಆದರೆ ಪರಂ ಗತಃ=ಮನಸ್ಸಿನಿಂದ ಪರಮಾತ್ಮನನ್ನು ಹೊಂದಿದ (ಏಕಾಗ್ರಚಿತ್ತದಿಂದ ಭಗವಂತನನ್ನೇ ಧ್ಯಾನ ಮಾಡುತ್ತಿರುವ ಧ್ರುವನು) ತಾನ್=ಅವುಗಳನ್ನು ನ ಅಪಶ್ಯತ್=ನೋಡಲೇ ಇಲ್ಲ

**ಭಾಗವತ ತಾತ್ಪರ್ಯ :-**

ಈ ಶ್ಲೋಕದಲ್ಲಿ ''ಧ್ರುವನ ತಪಸ್ಸಿಗೆ ಭಂಗವುಂಟುಮಾಡುವ ದೇವತೆಗಳ ಪ್ರಯತ್ನ ವ್ಯರ್ಥವಾಯಿತು'' ಎಂದು ಹೇಳಿದ್ದರಿಂದ ದೇವತೆಗಳು ಅಸತ್ಯಕಾಮರು ಅಶಕ್ತರು, ಧ್ರುವನು ಸಮರ್ಥ ಎಂದು ಭ್ರಾಮಕವಾದ ಅರ್ಥ ತೋರುವದು. ಆ ಕಾರಣ ಆಚಾರ್ಯರು ನಿಜವಾದ ಅಭಿಪ್ರಾಯವನ್ನು ಪ್ರಮಾಣದಿಂದಲೇ ಹೇಳುವರು -

**ಯತ್ರ ದೇವೈಃ ಕೃತೇ ವಿಘ್ನೇ ಖಂಡಿತೋ ನ ಪುಮಾನ್ ಭವೇತ್ ।**
**ತತ್ರ ತದ್ಯಶಸೇ ವಿಘ್ನಂ ಕುರ್ಯುರ್ನ ತು ವಿಘಾತನೇ ॥**

**ಯತ್ರ ಖಂಡಿತತಾ ತತ್ರ ಖಂಡನಾಯೈವ ಕೇವಲಮ್ ।**
**ಸತ್ಯಕಾಮಾ ಯತೋ ದೇವಾಸ್ತೇ ಚಿತ್ತಾದ್ಯಭಿಮಾನಿನಃ ॥**

**ಅತೋ ವಿಮೋಹನಾಯೈವ ಪ್ರಾಪ್ನುಯುಸ್ತೇ ಪರಾಜಯಂ ।**
**ತೇಷಾಂ ಅಶಕ್ತಿತೋಕ್ತಿಶ್ಚ ವಿಮೋಹಾಯ ಸುರದ್ವಿಷಾಂ ॥ ಇತಿ ಬ್ರಹ್ಮಾಂಡೇ ॥**

ಎಲ್ಲಿ ದೇವತೆಗಳು ಮಾಡಿದ ವಿಘ್ನದಿಂದ ಮನುಷ್ಯನು ಖಂಡಿತನಾಗುವದಿಲ್ಲವೋ ಅಲ್ಲಿ ದೇವತೆಗಳು ಆ ವ್ಯಕ್ತಿಗೆ ಕೀರ್ತಿ ಬರುವದಕ್ಕಾಗಿಯೇ ವಿಘ್ನ ಮಾಡುವಂತೆ ಮಾಡುವರು. ಹೊರತು ತಪಸ್ಸು ಕೆಡಿಸಬೇಕೆಂಬ ಉದ್ದೇಶದಿಂದಲೇ ಮಾಡಿರುವುದಿಲ್ಲ. ಇನ್ನು ಎಲ್ಲಿ ತಪಸ್ಸಿಗೆ ವಿಘ್ನ ಉಂಟಾಗಿದೆಯೋ ಅಲ್ಲಿ ತಪಸ್ಸನ್ನು ಕೆಡಿಸಬೇಕೆಂಬ ಉದ್ದೇಶದಿಂದಲೇ ವಿಘ್ನ ಮಾಡುವರು.

ಯಾವ ಕಾರಣ ಚಿತ್ತಾದಿಗಳಿಗೆ ಅಭಿಮಾನಿಗಳಾದ ದೇವತೆಗಳು ಯಥಾರ್ಥಕಾಮನೆ-ಯುಳ್ಳವರೋ ಆ ಕಾರಣ ಅಜ್ಞರನ್ನು ಮೋಹಿಸುವದಕ್ಕಾಗಿಯೇ ಹಾಗೆ ಪರಾಜಯ ಹೊಂದುವರು. ಅವರಿಗೆ ತಪೋಭಂಗ ಮಾಡಲು ಶಕ್ತಿ ಇಲ್ಲವೆಂದು ಹೇಳಿದ್ದು ದೈತ್ಯರನ್ನು ಮೋಹಿಸುವದಕ್ಕಾಗಿ ಎಂದು ಬ್ರಹ್ಮಾಂಡಪುರಾಣದಲ್ಲಿದೆ. ಆ ಕಾರಣ ದೇವತೆಗಳು ಸಮರ್ಥರು, ಧ್ರುವನ ಕೀರ್ತಿಗಾಗಿ ಸೋತಂತೆ ತೋರಿಸಿದರೆಂದು ಭಾವ. ॥೮೦॥

**ಸರ್ವತೋ ಮನ ಆಕೃಷ್ಯ ಹೃದಿ ಭೂತೇಂದ್ರಿಯಾಶ್ರಯಮ್ ।**
**ಧ್ಯಾಯನ್ ಭಗವತೋ ರೂಪಂ ನಾದ್ರಾಕ್ಷೀತ್ಕಿಂಚನಾಪರಮ್ ॥೮೧॥**

**ಭಾಗವತ ತಾತ್ಪರ್ಯ :**

ಶ್ಲೋಕದಲ್ಲಿ ''ಭೂತೇಂದ್ರಿಯಾಶ್ರಯಂ'' ಎನ್ನುವುದು ಮನಸ್ಸಿಗೆ ವಿಶೇಷಣವೆಂದು ಕಾಣುವದು. ಆ ಕಾರಣ ಸರಿಯಾದ ಅನ್ವಯ ತಿಳಿಸುವರು -

**''ಭೂತೇಂದ್ರಿಯಾಶ್ರಯಂ ಭಗವದ್ರೂಪಮ್''**

''ಭೂತೇಂದ್ರಿಯಾಶ್ರಯಂ'' ಎನ್ನುವುದು ಭಗವದ್ರೂಪಕ್ಕೆ ವಿಶೇಷಣವಾಗಿದೆ.

ಮನಃ=ಮನಸ್ಸನ್ನು ಸರ್ವತಃ=ಎಲ್ಲ ವಿಷಯಗಳಿಂದ ಆಕೃಷ್ಯ=ಸೆಳೆದು (ವಿಮುಖಮಾಡಿ) ಹೃದಿ=ಹೃದಯಕಮಲದಲ್ಲಿ ಭೂತೇಂದ್ರಿಯಾಶ್ರಯಂ=ಪಂಚಮಹಾಭೂತಗಳು, ಅವುಗಳಿಂದ ಜನಿಸಿದ ಪ್ರಾಣಿಗಳು, ಇಂದ್ರಿಯಗಳಿಗೆ ಆಶ್ರಯವಾದ ಭಗವತಃ ರೂಪಂ=ಶ್ರೀಹರಿಯ

ರೂಪವನ್ನು ಧ್ಯಾಯನ್=ಧ್ಯಾನ ಮಾಡುವವನಾಗಿ ಅಪರಂ ಕಿಂಚನ ನ ಅದ್ರಾಕ್ಷೀತ್=ಬೇರೆ ಯಾವದನ್ನೂ ನೋಡಲಿಲ್ಲ. ಅಥವಾ ಅಪರಂ=ಜಗತ್ತನ್ನು ಕಿಂಚನ=ಅಲ್ಪ ಅಸ್ವತಂತ್ರ ಎಂದು ಅದ್ರಾಕ್ಷೀತ್=ತಿಳಿದನು. ಸ್ವತಂತ್ರವೆಂದು ನ ಅದ್ರಾಕ್ಷೀತ್=ತಿಳಿಯಲಿಲ್ಲ. ಹೀಗೂ ಅರ್ಥ ತಿಳಿಯಬಹುದು. ||೮೧||

**ಆಧಾರಂ ಮಹದಾದೀನಾಂ ಪ್ರಧಾನಪುರುಷೇಶ್ವರಮ್ ।**
**ಬ್ರಹ್ಮ ಧಾರಯಮಾಣೇ ತು ತ್ರಯೋ ಲೋಕಾಶ್ಚಕಂಪಿರೇ || ೮೨ ||**

ಮಹದಾದೀನಾಂ=ಮಹತ್ತತ್ತ್ವಮುಂತಾದವುಗಳಗೆ ಆಧಾರಂ=ಆಶ್ರಯನಾದ ಪ್ರಧಾನಪುರುಷೇಶ್ವರಂ=ಪ್ರಕೃತಿ ಜೀವರಿಗೆ ನಿಯಮಕನಾದ ಬ್ರಹ್ಮ=ಪರಬ್ರಹ್ಮನಾದ ವಾಸುದೇವನನ್ನು ಧಾರಯಮಾಣೇ=ಧ್ಯಾನ ಮಾಡುತ್ತಿರುವಾಗ ತ್ರಯಃ=ಮೂರು ಲೋಕಾಃ=ಲೋಕಗಳು (ಚರಾಚರಪ್ರಪಂಚವು) ಚಕಂಪಿರೇ=ನಡುಗಿದವು. ಅವನ ತೇಜಸ್ಸನ್ನು ಸಹಿಸಲು ಅಸಮರ್ಥರಾದರೆಂದು ಭಾವ. || ೮೨ ||

**ಯದೈಕಪಾದೇನ ಸ ಪಾರ್ಥಿವಾರ್ಭಕ-**
**ಸ್ತಸ್ಥೌ ತದಂಗುಷ್ಠನಿಪೀಡಿತಾ ಮಹೀ ।**
**ನನಾಮ ತತ್ರಾರ್ಧಮಿಭೇಂದ್ರಧಿಷ್ಠಿತಾ**
**ತರೀವ ಸವ್ಯೇತರತಃ ಪದೇ ಪದೇ ||೮೩||**

ಸಃ ಪಾರ್ಥಿವಾರ್ಭಕಃ=ರಾಜಕುಮಾರನಾದ ಆ ಧ್ರುವನು ಯದಾ=ಯಾವಾಗ ಏಕಪಾದೇನ=ಒಂದುಕಾಲಿನಿಂದ ತಸ್ಥೌ=ನಿಂತನೋ ತತ್ರ=ಆಗ ತದಂಗುಷ್ಠನಿಪೀಡಿತಾ=ಅವನ ಹೆಬ್ಬೆರಳಿನಿಂದ ಒತ್ತಲ್ಪಟ್ಟ ಮಹೀ=ಭೂಮಿಯು ಅರ್ಧಂ=ಎರಡರ್ಧಗಳಲ್ಲಿ ಒಂದು ಭಾಗದಿಂದ ನನಾಮ=ಬಾಗಿತು. ಇಭೇಂದ್ರಧಿಷ್ಠಿತಾ=ಶ್ರೇಷ್ಠ ಆನೆಯಿಂದ ಕೂಡಿದ ತರೀ ಇವ=ನೌಕೆಯಂತೆ ಪದೇ ಪದೇ=ಹೆಜ್ಜೆ ಹೆಜ್ಜೆಗೂ ಸವ್ಯೇತರತಃ=ಎಡಬಲಗಳಲ್ಲಿ ನನಾಮ=ಬಾಗಿತು.

ನೌಕೆಯಲ್ಲಿ ಆನೆ ನಿಂತು ಎಡಗಾಲನ್ನು ಊರಿದಾಗ ಎಡಕ್ಕೆ ಬಲಗಾಲನ್ನು ಊರಿದಾಗ ಬಲಕ್ಕೆ ಬಾಗುವಂತೆ ಇವನು ಕಾಲು ಇಟ್ಟ ಕಡೆಗೆ ಭೂಮಿಯು ವಾಲುತ್ತಿತ್ತು ಎಂದು ಭಾವ.

ಮತ್ತೊಂದು ಆಶ್ಚರ್ಯ ನಡೆಯಿತು ಎಂದು ಹೇಳುವರು -

**ತಸ್ಮಿನ್ನಭಿಧ್ಯಾಯತಿ ವಿಶ್ವಮಾತ್ಮನೋ**
**ದ್ವಾರಂ ನಿರುದ್ಧ್ಯಾಸುಮನನ್ಯಯಾ ಧಿಯಾ ।**

**ಲೋಕಾ ನಿರುಚ್ಛ್ವಾಸನಿಪೀಡಿತಾ ಭೃಶಂ**
**ಸಲೋಕಪಾಲಾಃ ಶರಣಂ ಯಯುರ್ಹರಿಮ್ ।।೮೪।।**

ತಸ್ಮಿನ್=ಆ ಧ್ರುವನು ಅನನ್ಯಯಾ=ಬೇರೆ ವಿಷಯದಲ್ಲಿ ಹೋಗದ ಧಿಯಾ= ಬುದ್ಧಿಯಿಂದ ಅಸುಂ=ಶ್ವಾಸೋಚ್ಛ್ವಾಸಕಾರಣವಾದ ಪ್ರಾಣವನ್ನು ನಿರುಧ್ಯ=ತಡೆದು (ಕುಂಭಕದಲ್ಲಿದ್ದು) ಆತ್ಮನಃ=ಜೀವರಿಗೆ ದ್ವಾರಂ=ಉತ್ಪತ್ತ್ಯಾದಿಗಳಿಗೆ ಕಾರಣನಾದ ವಿಶ್ವಂ=ಪರಮಾತ್ಮನನ್ನು ಅಭಿಧ್ಯಾಯತಿ ಸತಿ=ಸುತ್ತಲಿರುವ ಇಂದ್ರಿಯಾಭಿಮಾನಿದೇವತೆಗಳಿಂದ ಸಹಿತನಾಗಿ ಧ್ಯಾನ ಮಾಡುತ್ತಿರಲು (ಧ್ರುವನ ಕೀರ್ತಿಯನ್ನು ಹೆಚ್ಚಿಸಲು ದೇವತೆಗಳಿಂದ ಜನರ ಶ್ವಾಸನಿರೋಧ ಮಾಡಲ್ಪಟ್ಟಾಗ) ಲೋಕಾಃ=ಜನರು ಭೃಶಂ=ಬಹಳವಾಗಿ ನಿರುಚ್ಛ್ವಾಸನಿಪೀಡಿತಾಃ=ಪ್ರಾಣನಿರೋಧದಿಂದ ಪೀಡಿತ(ದುಃಖಿತ)ರಾದವರಾಗಿ ಲೋಕಪಾಲಾನ್=ಲೋಕಪಾಲಕರನ್ನು ಶರಣಂ ಯಯುಃ=ಮೊರೆ ಹೋದರು. ನಂತರ ಅವರಿಗೆ ಶ್ವಾಸ ಕೊಡಲು ಸಾಮರ್ಥ್ಯ ಇಲ್ಲದ್ದರಿಂದ ಸಲೋಕಪಾಲಾಃ=ಲೋಕಪಾಲಕರಿಂದ ಸಹಿತರಾಗಿ ಶರಣಂ=ರಕ್ಷಕನಾದ ಹರಿಂ=ಶ್ರೀಹರಿಯ ಬಳಿ ಯಯುಃ=ಹೋದರು.

**ಭಾಗವತ ತಾತ್ಪರ್ಯ :**

ಈ ಶ್ಲೋಕದಲ್ಲಿಯ 'ವಿಶ್ವ'ಶಬ್ದಕ್ಕೆ ಯೋಗ್ಯವಾದ ಅರ್ಥ ತಿಳಿಸುವರು -

**''ವಿಶ್ವಂ ಭಗವಂತಮ್ ।''**

ಇಲ್ಲಿ ''ಆತ್ಮನಃ ಸಕಾಶಾತ್ ಅನನ್ಯಯಾ ಧಿಯಾ=ಆತ್ಮಾಭೇದದೃಷ್ಟಿಯಿಂದ ಅಸುಂ= ಪ್ರಾಣವನ್ನು ಅದರ ದ್ವಾರವನ್ನು ನಿರೋಧಿಸಿ'' ಎಂಬುದಾಗಿ ಭ್ರಾಮಕ ಅರ್ಥವಾಗುವದು. ಅದನ್ನು ನಿವಾರಿಸಲು 'ಆತ್ಮನಃ ದ್ವಾರಂ' ಎಂಬುದಕ್ಕೆ ಯೋಗ್ಯವಾದ ಅರ್ಥವನ್ನು ತಿಳಿಸುವರು -

**ಆತ್ಮನೋ ದ್ವಾರಂ ಜೀವೋತ್ಪತ್ತ್ಯಾದಿದ್ವಾರಮ್ ।**

ಈ ಶ್ಲೋಕದಲ್ಲಿ ಲೋಕಪಾಲಕರಿಗೂ ನಿರುಚ್ಛ್ವಾಸಪೀಡೆ ಆದಂತೆ ತೋರುವದು. ಆ ಕಾರಣ ತಾತ್ಪರ್ಯ ಹೇಳುವರು -

**''ಲೋಕಾನಾಮೇವ ನಿರುಚ್ಛ್ವಾಸಃ ಲೋಕಪಾಲಾಃ ತದರ್ಥಮೇವ ಶರಣಂ ಯಯುಃ''**

ಜನರಿಗೆ ಮಾತ್ರ ಶ್ವಾಸ ಕಟ್ಟಿದ್ದು. ಅದನ್ನು ನಿವಾರಿಸಲು ಲೋಕಪಾಲಕರು ಹರಿಯನ್ನು ಶರಣು ಹೋದರು.

ಧ್ರುವನು ಹರಿಧ್ಯಾನ ಮಾಡಿದರೆ ಜನರ ಶ್ವಾಸನಿರೋಧವಾದರೂ ಏಕಾಯಿತು ? ಎಂಬ ಶಂಕೆ ಪರಿಹರಿಸಲು ಮತ್ತು ತಾವು ಹೇಳಿದ್ದನ್ನು ಸಮರ್ಥಿಸಲು ಪ್ರಮಾಣ ಹೇಳುವರು -

**ಧ್ಯಾತುರ್ಧ್ರುವಸ್ಯ ಕೀರ್ತ್ಯರ್ಥಂ ಹರಿಣಾ ಸಹ ದೇವತಾಃ ।**
**ಲೋಕೋಚ್ಛ್ವಾಸಂ ನಿರುಧ್ಯಾಥ ಶ್ವಾಸಾರ್ಥಂ ಚ ಹರಿಂ ಯಯುಃ ॥**

ಲೋಕಪಾಲಕರಿಗೂ ಧ್ರುವನಿಂದಲೇ ಶ್ವಾಸನಿರೋಧ ಏಕಾಗಬಾರದು ? ಎಂದರೆ ಅದಕ್ಕೆ ಹೇಳುವರು -

**ಅನ್ಯಪ್ರವೃತ್ತಯಸ್ತೇಭ್ಯೋ ನ ತೇಷಾಮನ್ಯತಃ ಕ್ವಚಿತ್ ।**
**ಸ್ವೋತ್ತಮೇಭ್ಯಸ್ತು ದೇವೇಭ್ಯಃ ತೇಷಾಂ ಸ್ಯುಃ ಸ್ವಪ್ರವೃತ್ತಯೇ ॥ ಇತಿ ತತ್ವನಿರ್ಣಯೇ ॥**

(ಪರಿವಾರತಯಾ ತಮ್ಮನ್ನು ಧ್ಯಾನ ಮಾಡುವ ಧ್ರುವನಿಗೆ ಕೀರ್ತಿ ಕೊಡಲು ಶ್ರೀಹರಿಯಿಂದ ಸಹಿತರಾದ ದೇವತೆಗಳು ಜನರ ಶ್ವಾಸನಿರೋಧ ಮಾಡಿ, ನಂತರ ಅವರ ಶ್ವಾಸಕ್ಕಾಗಿ ಶ್ರೀಹರಿಯನ್ನು ಶರಣು ಹೋದರು.) ಉಳಿದ ಜನರ ಪ್ರವೃತ್ತಿಯು ದೇವತೆಗಳಿಂದ ಆಗುವದು. ಬೇರೆಯವರಿಂದ (ಚಿಕ್ಕವರಿಂದ) ಅವರ ಪ್ರವೃತ್ತಿ ಅಲ್ಲ. ತಮಗಿಂತ ಉತ್ತಮರಾದ ಬ್ರಹ್ಮಾದಿಗಳಿಂದ ಲೋಕಪಾಲಕರಾದ ಇಂದ್ರಾದಿಗಳ ಪ್ರವೃತ್ತಿಯಾಗುವದು ಎಂದು ತತ್ತ್ವನಿರ್ಣಯದಲ್ಲಿದೆ. ।।೮೪।।

**ದೇವಾ ಊಚುಃ -**

**ನೈವಂ ವಿದಾಮೋ ಭಗವನ್ ಪ್ರಾಣರೋಧಂ**
**ಚರಾಚರಸ್ಯಾಖಿಲಸತ್ತ್ವಧಾಮ್ನಃ ।**
**ವಿಧೇಹಿ ತನ್ನೋ ವೃಜಿನಾದ್ವಿಮೋಕ್ಷಂ**
**ಪ್ರಾಪ್ತಾ ವಯಂ ತ್ವಾಂ ಶರಣಂ ಶರಣ್ಯಮ್ ।।೮೫।।**

ಹೇ ಭಗವನ್=ಸ್ವಾಮಿಯಾದ ಶ್ರೀಪರಮಾತ್ಮನೇ ! ವಯಂ=ನಾವು ಚರಾಚರಸ್ಯ=ಜಂಗಮಸ್ಥಾವರಾತ್ಮಕವಾದ ಅಖಿಲಸತ್ವಧಾಮ್ನಃ=ಎಲ್ಲ ಪ್ರಾಣಿಸಮೂಹಕ್ಕೆ ಏವಂ=ಈ ವಿಧವಾದ ಪ್ರಾಣರೋಧಂ=ಶ್ವಾಸತಡೆಯನ್ನು ನ ವಿದಾಮಃ=ಎಂದೂ ನೋಡಿಲ್ಲ. ತತ್=ಆ ಕಾರಣ ಶರಣ್ಯಂ=ಶರಣು ಹೋಗಲು ಯೋಗ್ಯನಾದ ತ್ವಾಂ=ನಿನ್ನನ್ನು ಶರಣಂ ಪ್ರಾಪ್ತಾಃ=ಶರಣು ಬಂದಿರುವೆವು. ನಃ=ನಮಗೆ ವೃಜಿನಾತ್=ದುಃಖದಿಂದ ವಿಮೋಕ್ಷಂ ವಿದೇಹಿ=ಮೋಚನವನ್ನು ಮಾಡು ಎಂದು ದೇವತೆಗಳು ಪ್ರಾರ್ಥಿಸಿದರು.

**ಭಾಗವತ ತಾತ್ಪರ್ಯ : -**

'ಧಾಮ'ಶಬ್ದಕ್ಕೆ ಪ್ರಕೃತ ಸಂಗತವಾದ ಅರ್ಥವನ್ನು ತಿಳಿಸುತ್ತ ಆ ವಿಷಯದಲ್ಲಿ ಪ್ರಮಾಣ ಹೇಳುವರು -

**ಅಖಿಲಸತ್ವಸಮೂಹಸ್ಯ ।**

**ತೇಜಃ ಶಕ್ತಿಃ ಸಮೂಹಶ್ಚ ಗೃಹಂ ಧಾಮೇತಿ ಕಥ್ಯತೇ । ಇತಿ ತತ್ತ್ವನಿರ್ಣಯೇ ।**

ಧಾಮ ಎಂಬ ಶಬ್ದದಿಂದ ತೇಜಸ್ಸು, ಶಕ್ತಿ, ಸಮೂಹ, ಮನೆಗಳು ಕರೆಯಲ್ಪಡುವವು. ಪ್ರಕೃತದಲ್ಲಿ ಸಮೂಹ ಎಂದರ್ಥ ಎಂದು ಭಾವ. ।।೮೫।।

**ಶ್ರೀಭಗವಾನುವಾಚ -**

**ಮಾ ಭೈಷ್ಟ ಬಾಲಂ ತಪಸೋ ದುರತ್ಯಯಾ-**
**ನ್ನಿವರ್ತಯಿಷ್ಯೇ ಪ್ರತಿಯಾತ ಸ್ವಧಾಮ ।**
**ಯತೋ ಹಿ ವಃ ಪ್ರಾಣನಿರೋಧ ಆಸೀ-**
**ದೌತ್ತಾನಪಾದಿರ್ಮಯಿ ಸಂಗತಾತ್ಮಾ ।।೮೬।।**

।। ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ ನವಮೋಽಧ್ಯಾಯಃ ।।

ಯತಃ=ಯಾವ ಧ್ರುವನಿಂದ ವಃ=ನಿಮ್ಮಿಂದ ಪ್ರವೃತ್ತಿಯನ್ನು ಪಡೆಯುವ ಜನರಿಗೆ ಪ್ರಾಣನಿರೋಧಃ ಆಸೀತ್=ಶ್ವಾಸ ತಡೆಯಲ್ಪಟ್ಟಿತ್ತೋ ಸಃ ಔತ್ತಾನಪಾದಿಃ=ಅಂತಹ ಉತ್ತಾನಪಾದನ ಮಗನಾದ ಧ್ರುವನು ಮಯಿ ಸಂಗತಾತ್ಮಾ=ನನ್ನಲ್ಲಿ ಮನಸ್ಸಿಟ್ಟವನಾಗಿದ್ದಾನೆ. ತಂ ಬಾಲಂ=ಬಾಲಕನಾದ ಆ ಧ್ರುವನನ್ನು ದುರತ್ಯಯಾತ್ ತಪಸಃ=ಧ್ರುವನಿಗಿಂತಲೂ ಅಧಮರಿಂದ ಅಸಾಧ್ಯವಾದ ತಪಸ್ಸಿನಿಂದ ನಿವರ್ತಯಿಷ್ಯೇ=ಬಿಡಿಸುವೆನು. ಮಾ ಭೈಷ್ಟ=ಹೆದರಬೇಡಿ. ಸ್ವಧಾಮ=ನಿಮ್ಮ ಮನೆಗೆ ಪ್ರತಿಯಾತ=ಹೋಗಿರಿ ಎಂದು ಭಗವಂತನು ಹೇಳಿದನು. ।।೮೬।।

।। ಇಲ್ಲಿಗೆ ಒಂಭತ್ತನೇ ಅಧ್ಯಾಯವು ಮುಗಿಯಿತು ।।

## ಅಥ ದಶಮೋऽಧ್ಯಾಯಃ

ಶ್ರೀಹರಿಯಿಂದ ಕೇವಲ ಮೋಕ್ಷವಷ್ಟೇ ದೊರೆಯುವದಿಲ್ಲ. ಕಿಂತು ಐಹಿಕ ಅಭೀಷ್ಟಗಳೂ ದೊರೆಯುವವು ಎಂದು ಈ ಅಧ್ಯಾಯದಲ್ಲಿ ತಿಳಿಸುವರು.

ಅತ್ತ ದೇವತೆಗಳು ತಮ್ಮ ಲೋಕಕ್ಕೆ ತೆರಳುವುದನ್ನು, ಇತ್ತ ಶ್ರೀಹರಿಯು ಮಧುವನಕ್ಕೆ ಬರುವದನ್ನು ಈ ಶ್ಲೋಕದಲ್ಲಿ ತಿಳಿಸುವರು -

**ತ ಏವಮುತ್ಪನ್ನಭಯಾ ಉರುಕ್ರಮೇ**
**ಕೃತಪ್ರಣಾಮಾಃ ಪ್ರಯಯುಸ್ತ್ರಿವಿಷ್ಟಪಮ್ ।**
**ಸಹಸ್ರಶೀರ್ಷಾऽಪಿ ತತೋ ಗರುತ್ಮತಾ**
**ಮಧೋರ್ವನಂ ಭೃತ್ಯದಿದೃಕ್ಷಯಾ ಗತಃ ॥೧॥**

ಏವಂ=ಈ ರೀತಿಯಾಗಿ ಶ್ರೀಹರಿಯ ಮಾತಿನಿಂದ ಉತ್ಪನ್ನಭಯಾಃ=ನಷ್ಟವಾದ ಭಯ ಉಳ್ಳವರಾಗಿ (ಭಯರಹಿತರಾಗಿ) ತೇ=ದೇವತೆಗಳು ಉರುಕ್ರಮೇ=ಪರಮಾತ್ಮನ ವಿಷಯದಲ್ಲಿ (ಪರಮಾತ್ಮನಿಗೆ) ಕೃತಪ್ರಣಾಮಾಃ=ನಮಸ್ಕಾರ ಮಾಡಿ ತ್ರಿವಿಷ್ಟಪಂ=ಸ್ವರ್ಗಕ್ಕೆ ಪ್ರಯಯುಃ= ಹೋದರು. ತತಃ=ಅನಂತರ ಸಹಸ್ರಶೀರ್ಷಾ ಅಪಿ=ಶ್ರೀವಾಸುದೇವನೂ ಸಹ ಗರುತ್ಮತಾ ಸಹ= ಗರುಡನಿಂದ ಸಹಿತನಾಗಿ (ಗರುಡವಾಹನನಾಗಿ) ಭೃತ್ಯದಿದೃಕ್ಷಯಾ=ಭಕ್ತನಾದ ಧ್ರುವನನ್ನು ಕಾಣುವ ಇಚ್ಛೆಯಿಂದ ಮಧೋಃ ವನಂ=ಮಧುವನಕ್ಕೆ ಗತಃ=ಹೋದನು. ಭೃತ್ಯಪದದಿಂದ ಧ್ರುವನು ಅವಶ್ಯ ರಕ್ಷಣೀಯನಾಗಿರುವನು ಎಂದು ಸೂಚಿಸುತ್ತಿರುವರು. ॥೧॥

**ಸ ವೈ ಧಿಯಾ ಯೋಗವಿಪಾಕತೀವ್ರಯಾ**
**ಹೃತ್ಪದ್ಮಕೋಶೇ ಸ್ಫುರಿತಂ ತಡಿತ್ಪ್ರಭಮ್ ।**
**ತಿರೋಹಿತಂ ಸಹಸೈವೋಪಲಕ್ಷ್ಯ**
**ಬಹಿಃ ಸ್ಥಿತಂ ತದವಸ್ಥಂ ದದರ್ಶ ॥೨॥**

ಸಃ=ಧ್ರುವನು ಯೋಗವಿಪಾಕತೀವ್ರಯಾ=ಧ್ಯಾನದ ಪರಿಣಾಮದಿಂದಾಗಿ ತೀವ್ರವಾದ (ಪ್ರಯತ್ನವಿಲ್ಲದೇ ಅರ್ಥಾತ್ ಸ್ವಾಭಾವಿಕವಾಗಿಯೇ ಭಗವನ್ಮುಖವಾದ) ಧಿಯಾ=ಬುದ್ಧಿಯಿಂದ ಹೃತ್ಪದ್ಮಕೋಶೇ=ಹೃದಯಕಮಲದಲ್ಲಿ ಸ್ಫುರಿತಂ=ಕಾಣಿಸಿದ ತಡಿತ್ಪ್ರಭಂ=ಮಿಂಚಿನಂತೆ ಪ್ರಕಾಶಮಾನವಾಗಿರುವ, ಅದರಂತೆಯೇ ಸಹಸೈವ=ತಟ್ಟನೆ ತಿರೋಹಿತಂ=ಮರೆಯಾದದ್ದನ್ನು ಉಪಲಕ್ಷ್ಯ=ಗಮನಿಸಿ ಬಹಿಃ ಸ್ಥಿತಂ=ಹೊರಗಿರುವ ತದವಸ್ಥಂ=ಹೃದಯದಲ್ಲಿ ಕಂಡಂತೆಯೇ ಇರುವ ಶ್ರೀಹರಿಯನ್ನು ದದರ್ಶ=ನೋಡಿದನು.

ಶ್ರೀಹರಿಯು ಧ್ರುವನ ಧ್ಯಾನದಿಂದ ಅವನಿಗೆ ಹೃದಯದಲ್ಲಿ ಕಾಣಿಸಿದನು. ತದೇಕಚಿತ್ತನಾದ ಧ್ರುವನು ಹೊರಗೆ ಬಂದು ನಿಂತ ಶ್ರೀಹರಿಯನ್ನು ನೋಡದಿರುವಾಗ ಶ್ರೀಹರಿಯು ಒಳಗಿನ ರೂಪವನ್ನು ಮರೆಮಾಡಿದನು. ಆಗ ಧ್ರುವನು ಸಮಾಧಿಯಿಂದ ಎದ್ದು ಶ್ರೀಹರಿಯನ್ನು ನೋಡಿದನು ಎಂದು ಭಾವ. ।।೨।।

**ತದ್ದರ್ಶನೇನಾಗತಸಾಧ್ವಸಃ ಕ್ಷಿತಾ-**
**ವವಂದತಾಂಗಂ ವಿನಿಮಯ್ಯ ದಂಡವತ್ ।**
**ದೃಗ್ಭ್ಯಾಂ ಪ್ರಪಶ್ಯನ್ ಪ್ರಪಿಬನ್ನಿವಾರ್ಭಕ-**
**ಶ್ಚುಂಬನ್ನಿವಾಸ್ಯೇನ ಭುಜೇನ ಚಾಶ್ಲಿಷನ್ ।।೩।।**

ತದ್ದರ್ಶನೇನ=ಪರಮಾತ್ಮನ ದರ್ಶನದಿಂದ ಆಗತಸಾಧ್ವಸಃ=ಸಂಭ್ರಮವನ್ನು ಪಡೆದ ಅರ್ಭಕಃ=ಬಾಲಕನಾದ ಧ್ರುವನು ದೃಗ್ಭ್ಯಾಂ=ಕಣ್ಣುಗಳಿಂದ ಪ್ರಪಿಬನ್ ಇವ=ಕುಡಿದು ಬಿಡುವವನಂತೆ ಆಸ್ಯೇನ=ಮುಖದಿಂದ ಚುಂಬನ್ನಿವ=ಮುದ್ದಿಸುವವನಂತೆ ಭುಜೇನ ಆಶ್ಲಿಷನ್ ಇವ=ಕೈಗಳಿಂದ ಆಲಿಂಗಿಸುವವನಂತೆ ಪ್ರಪಶ್ಯನ್=ನೋಡುತ್ತ ಅಂಗಂ=ದೇಹವನ್ನು ಕ್ಷಿತೌ=ಭೂಮಿಯಲ್ಲಿ ದಂಡವತ್=ದಂಡದಂತೆ ವಿನಿಮಯ್ಯ=ಬಾಗಿಸಿ ವವಂದ=ನಮಸ್ಕರಿಸಿದನು.

**ಸ ತಂ ವಿವಕ್ಷಂತಮತದ್ವಿದಂ ಹರಿರ್ಜ್ಞಾತ್ವಾಸ್ಯ ಸರ್ವಸ್ಯ ಚ ಹೃದ್ಯವಸ್ಥಿತಃ ।**
**ಕೃತಾಂಜಲಿಂ ಬ್ರಹ್ಮಮಯೇನ ಕಂಬುನಾ ಪಸ್ಪರ್ಶ ಬಾಲಂ ಕೃಪಯಾ ಕಪೋಲೇ।।**

ಸರ್ವಸ್ಯ=ಎಲ್ಲರ ಚ=ಮತ್ತು ಧ್ರುವನ ಹೃದಿ ಅವಸ್ಥಿತಃ=ಹೃದಯದಲ್ಲಿದ್ದು ಪ್ರೇರಕನಾಗಿರುವ ಹರಿಃ=ವಾಸುದೇವನು ವಿವಕ್ಷಂತಂ=ಸ್ತುತಿ ಮಾಡಲು ಇಚ್ಛಿಸುವ, ಆದರೆ ಅತದ್ವಿದಂ=ಸ್ತುತಿ ಮಾಡಲು ಅರಿಯದವನನ್ನಾಗಿ ಜ್ಞಾತ್ವಾ=ತಿಳಿದು ಕೃತಾಂಜಲಿಂ=ಕೈ ಜೋಡಿಸಿ ನಮಸ್ಕರಿಸುವ ಬಾಲಂ=ಬಾಲಕನಾದ ತಂ=ಧ್ರುವನನ್ನು ಸಃ=ಶ್ರೀಹರಿಯು ಕೃಪಯಾ=ದಯೆಯಿಂದ ಕಪೋಲೇ=ಕೆನ್ನೆಯಲ್ಲಿ ಬ್ರಹ್ಮಮಯೇನ=ವೇದಾತ್ಮಕವಾದ ಅಂದರೆ ವೇದಾಭಿಮಾನಿಯಾದ ಲಕ್ಷ್ಮೀದೇವಿಯಿಂದ ಅಭಿಮನ್ಯಮಾನವಾದ ಕಂಬುನಾ=ಪಾಂಚಜನ್ಯ ಶಂಖದಿಂದ ಪಸ್ಪರ್ಶ=ಮುಟ್ಟಿದನು (ಸ್ಪರ್ಶಿಸಿದನು). ।।೪।।

**ಸ ವೈ ತದೈವ ಪ್ರತಿಪದ್ಯ ತಾಂ ಗಿರಂ ದೈವೀಂ ಪರಿಜ್ಞಾತಪರಾತ್ಮನಿರ್ಣಯಃ ।**
**ತದ್ಭಕ್ತಿಭಾವೋಽಭ್ಯಗೃಣಾದಸತ್ವರಂ ಪರಿಶ್ರಿತೋರುಶ್ರವಸಂ ಧ್ರುವಕ್ಷಿತಿಮ್ ॥೫॥**

ಸಃ=ಧ್ರುವನು ತದಾ ಏವ=ಶಂಖಸ್ಪರ್ಶವಾದ ನಂತರವೇ ತಾಂ=ಮೊದಲಿಗೆ ತಿಳಿಯದ ದೈವೀಂ=ಭಗವದ್ವಿಷಯಕವಾದ ಗಿರಂ=ವೇದರೂಪವಾದ ಸ್ತುತಿಯನ್ನು ಪ್ರತಿಪದ್ಯ=ಹೊಂದಿ, ಪರಿಜ್ಞಾತಪರಾತ್ಮನಿರ್ಣಯಃ=ತನ್ನ ಯೋಗ್ಯತಾನುಸಾರವಾಗಿ ಸುತ್ತಲೂ (ಸಮೀಪದಿಂದ) ಎಲ್ಲ ರೀತಿಯಿಂದ ತಿಳಿಯಲ್ಪಟ್ಟ ಪರಮಾತ್ಮನ ಸ್ವರೂಪ ನಿಶ್ಚಯವುಳ್ಳವನಾಗಿ ತದ್ಭಕ್ತಿಭಾವಃ= ಅವನ ಭಕ್ತಿಯಿಂದ ರೋಮಾಂಚನಾದಿಕ್ರಿಯೆಯುಳ್ಳವನಾಗಿ ಪರಿಶ್ರಿತೊರುಶ್ರವಸಂ= ಕೇಳುವದರಿಂದ ಪ್ರಾಪ್ತವಾದ, ಮಂಗಲದಾಯಕವಾದ, ಬಹಳವಾದ ಕೀರ್ತಿಯುಳ್ಳ ಧ್ರುವಕ್ಷಿತಂ=ನಿತ್ಯವಾದ ವೈಕುಂಠಾದಿ ಸ್ಥಾನವುಳ್ಳ ಶ್ರೀಹರಿಯನ್ನು ಅಸತ್ವರಂ=ನಿಧಾನವಾಗಿ ಅಭ್ಯಗೃಣಾತ್=ಸ್ತುತಿಸಿದನು.

ಅಸತ್ವರಂ=ತ್ವರೆಯಿಲ್ಲದ ಅರ್ಥಾತ್ ಸ್ಥಿರವಾಗಿ ನಿಂತಿರುವ ಶ್ರೀಹರಿಯನ್ನು ಹೀಗೂ ಅರ್ಥ ಮಾಡಬಹುದು. 'ಧ್ರುವಃ ಕ್ಷಿತಿಂ' ಎಂಬ ಪಾಠವಿದ್ದಲ್ಲಿ ಧ್ರುವನು ಗತಿಯಾದ ಪರಮಾತ್ಮನನ್ನು ಎಂದರ್ಥ ತಿಳಿಯಬೇಕು. ॥೫॥

**ಧ್ರುವ ಉವಾಚ -**

**ಯೋಽಂತಃ ಪ್ರವಿಶ್ಯ ಮಮ ವಾಚಮಿಮಾಂ ಪ್ರಸುಪ್ತಾಂ**
**ಸಂಜೀವಯತ್ಯಖಿಲಶಕ್ತಿಧರಃ ಸ್ವಧಾಮ್ನಾ ।**
**ಅನ್ಯಾಂಶ್ಚ ಹಸ್ತಚರಣಶ್ರವಣತ್ವಗಾದೀನ್**
**ಪ್ರಾಣಾನ್ನಮೋ ಭಗವತೇ ಪುರುಷಾಯ ತುಭ್ಯಮ್ ॥೬॥**

ಪ್ರಸುಪ್ತಾಂ=ನಿದ್ರಿಸಲ್ಪಟ್ಟ ಅಂದರೆ ಸ್ತೋತ್ರ ಮಾಡಲು ಅಸಮರ್ಥವಾದ ಇಮಾಂ=ಈ ಮಮ=ನನ್ನ ವಾಚಂ=ವಾಗಿಂದ್ರಿಯವನ್ನು ಚ=ಮತ್ತು ಅನ್ಯಾನ್=ಇತರವಾದ ಹಸ್ತಚರಣಶ್ರವಣತ್ವಗಾದೀನ್ ಹಸ್ತ=ಕೈಗಳು ಚರಣ=ಕಾಲುಗಳು ಶ್ರವಣ=ಕಿವಿಗಳು ತ್ವಗಾದೀನ್=ತ್ವಕ್ ಮೊದಲಾದ ಪ್ರಾಣಾನ್=ಇಂದ್ರಿಯಗಳನ್ನು ಅಖಿಲಶಕ್ತಿಧರಃ=ಇಂದ್ರಿಯಗಳು ಮತ್ತು ಅವುಗಳ ಅಭಿಮಾನಿ ದೇವತೆಗಳೆಲ್ಲರ ಶಕ್ತಿಪ್ರೇರಕನಾದ ಯಃ=ಯಾವ ಶ್ರೀಹರಿಯು ಅಂತಃ ಪ್ರವಿಶ್ಯ=ಒಳಗೆ ಪ್ರವೇಶ ಮಾಡಿ ಸ್ವಧಾಮ್ನಾ=ತನ್ನ ಸಾಮರ್ಥ್ಯದಿಂದ ಸಂಜೀವಯತಿ= ತಮ್ಮ ತಮ್ಮ ವಿಷಯಗಳನ್ನು ಗ್ರಹಿಸುವಂತೆ ಮಾಡುವನೋ ಅಥವಾ ತಮ್ಮ ತಮ್ಮ ವಿಷಯಗಳಿಂದ ವಿಮುಖ ಮಾಡಿ ಭಗವದ್ವಿಷಯಕವನ್ನಾಗಿ ಮಾಡುವನೋ ತಸ್ಮೈ=ಅಂತಹ ಪುರುಷಾಯ=ದೇಹಾಂತ- ರ್ನಿಯಾಮಕನಾದ ಭಗವತೇ=ಷಡ್ಗುಣೈಶ್ವರ್ಯಶಾಲಿಯಾದ ತುಭ್ಯಂ=ನಿನಗೆ ನಮಃ=ನಮಸ್ಕಾರವು.

ಇಲ್ಲಿ ಹಸ್ತಚರಣಪದದಿಂದ ಪಾಯು-ಉಪಸ್ಥ ಎಂಬ ಇನ್ನೆರಡು ಕರ್ಮೇಂದ್ರಿಯಗಳನ್ನು, ಶ್ರವಣತ್ವಕ್ ಪದದಿಂದ ಚಕ್ಷುರ್ಘ್ರಾಣರಸನಗಳೆಂಬ ಜ್ಞಾನೇಂದ್ರಿಯಗಳನ್ನು ಲಕ್ಷಣಯಾ ಸ್ವೀಕರಿಸಬೇಕು. ।।೬।।

ದೇಹಗಳು ಅನೇಕವಿರುವುದರಿಂದ ಅವುಗಳಲ್ಲಿರುವ ಹರಿಯೂ ಅನೇಕನಾಗಬೇಕು. ಆದ್ದರಿಂದ ಯಃ ಎಂದು ಏಕವಚನದಿಂದ ಏಕತ್ವ ಹೇಳಿದ್ದು ಹೇಗೆ ? ಎಂದರೆ ಹೇಳುವರು -

**ಏಕಸ್ತ್ವಮೇವ ಭಗವನ್ನಿದಮಾತ್ಮಶಕ್ತ್ಯಾ**
**ಮಾಯಾಖ್ಯಯೋರುಗುಣಯಾ ಮಹದಾದ್ಯಶೇಷಮ್ ।**
**ಸೃಷ್ಟ್ವಾಽನುವಿಶ್ಯ ಪುರುಷಸ್ತದಸದ್ಗುಣೇಷು**
**ನಾನೇವ ದಾರುಷು ವಿಭಾವಸುವದ್ವಿಭಾಸಿ ।।೭।।**

ಹೇ ಭಗವನ್=ವಾಸುದೇವನೇ ! ಆತ್ಮಶಕ್ತ್ಯಾ=ನಿನ್ನ ಅಧೀನವಾದ ನಿನ್ನ ಸ್ವರೂಪಶಕ್ತಿಗೆ ವಿಷಯವಾದ್ದರಿಂದ ಶಕ್ತಿಶಬ್ದವಾಚ್ಯವಾದ ಉರುಗಣಯಾ=ಸತ್ವರಜಸ್ತಮ ಎಂಬ ಬಹುಗುಣವುಳ್ಳ ಮಾಯಾಖ್ಯಯಾ=ಮಾಯೆ ಎಂಬ ಪ್ರಕೃತಿಯಿಂದ ಇದಂ=ಪ್ರತ್ಯಕ್ಷಸಿದ್ಧವಾದ ಮಹದಾದ್ಯಶೇಷಂ=ಮಹತ್ತತ್ವ ಮೊದಲಾದ ಪ್ರಪಂಚವನ್ನೆಲ್ಲ ಸೃಷ್ಟ್ವಾ=ನಿರ್ಮಿಸಿ ಅನುವಿಶ್ಯ=ಅವುಗಳಲ್ಲಿ ಪ್ರವೇಶ ಮಾಡಿ ತದಸದ್ಗುಣೇಷು=ಪ್ರಕೃತಿಯ ಅಮಂಗಲಗುಣಗಳುಳ್ಳ ಸಾತ್ವಿಕಾದಿಕಾರ್ಯಗಳಲ್ಲಿ ದಾರುಷು=ನಾನಾಕಟ್ಟಿಗೆಗಳಲ್ಲಿ ವಿಭಾವಸುವತ್=ಅಗ್ನಿಯಂತೆ ತ್ವಂ ಏಕ ಏವ=ನೀನೊಬ್ಬನೇ ವಿಭಾಸಿ=ತೋರುವಿ. ।।೭।।

ಈ ವಿಧವಾದ ನನ್ನ ಜ್ಞಾನ ನಿನ್ನ ಅಧೀನವೆಂದು ಬೇರೆ ಹೇಳಬೇಕಿಲ್ಲ, ಬ್ರಹ್ಮದೇವರ ಜ್ಞಾನವೇ ನಿನ್ನ ಅಧೀನವಾಗಿದೆ ಎಂದು ಹೇಳುವನು. ಮತ್ತು ನಿನ್ನ ಉಪಕಾರ ಮರೆತವರು ಕೃತಘ್ನರೆಂದು ಹೇಳುವನು -

**ತ್ವದ್ದತ್ತಯಾ ವಯುನಯೇದಮಚಷ್ಟ ವಿಶ್ವಂ**
**ಸುಪ್ತಃ ಪ್ರಬುದ್ಧ ಇವ ನಾಥ ಭವತ್ಪ್ರಪನ್ನಃ ।**
**ತಸ್ಯಾಪವರ್ಗ್ಯಶರಣಂ ತವ ಪಾದಮೂಲಂ**
**ವಿಸ್ಮರ್ಯತೇ ಕೃತಧಿಯಾ ಕಥಮಾರ್ತಬಂಧೋ ।।೮।।**

ಹೇ ನಾಥ=ಸ್ವಾಮಿಯೇ ಭವತ್ಪ್ರಪನ್ನಃ=ನನಗೆ ಶರಣಾಗತನಾದ ಬ್ರಹ್ಮದೇವನು ಸುಪ್ತಃ ಪ್ರಬುದ್ಧಃ ಇವ=ಮಲಗಿ ಎದ್ದವನಂತೆ ತ್ವದ್ದತ್ತಯಾ ವಯುನಯಾ=ನೀನಿತ್ತ ಜ್ಞಾನದಿಂದ ಇದಂ ವಿಶ್ವಂ=ಈ ಪ್ರಪಂಚವನ್ನು ಅಚಷ್ಟ=ತಿಳಿದನು. (ನೋಡಿದನು.) ಹೇ ಆರ್ತಬಂಧೋ= ಜನನಮರಣಗಳಿಂದ ದುಃಖಿತರಾದವರಿಗೆ ಬಂಧುವಾದ (ಮೋಚಕನಾದ) ಶ್ರೀಹರಿಯೇ!

ಽಸ್ಯ=ಅಂತಹ ತವ=ನಿನ್ನ ಆಪವರ್ಗ್ಯಶರಣಂ=ಮುಕ್ತರಿಗೂ ಆಶ್ರಯವಾದ ಪಾದಮೂಲಂ= ಪಾದತಲವು ಕೃತಧಿಯಾ=ಕೃತಜ್ಞನಾದವನಿಂದ ಕಥಂ ವಿಸ್ಮರ್ಯತೇ=ಹೇಗೆತಾನೇ ಮರೆಯಲು ಸಾಧ್ಯವಾಗುತ್ತದೆ ? ಮರೆಯಲು ಸಾಧ್ಯವಿಲ್ಲ, ಯಾವನು ಮರೆಯುವನೋ ಅವನು ಕೃತಘ್ನನೆಂದು ಭಾವ.

ಕಮಲದಿಂದ ಜನಿಸಿದ ಬ್ರಹ್ಮನು ತನಗೆ ಜನಕನಾರು ? ಜಗತ್ತನ್ನು ಸೃಜಿಸುವದು ಹೇಗೆ ? ಎಂದು ತಿಳಿಯದಿರುವಾಗ ಶ್ರೀಹರಿಗೆ ಶರಣಾಗಿ ತಪಸ್ಸು ಮಾಡಿ ಅವನ ಅನುಗ್ರಹದಿಂದ ಜ್ಞಾನ ಪಡೆದು ಜಗತ್ತಿನ ಸೃಷ್ಟಿ ಮಾಡಿದನೆಂದು ಭಾವ. ।।೮।।

ಈ ವಿಧ ಉಪಕಾರಕನಾದ ನನ್ನನ್ನು ಪೂಜಿಸಿದರೂ ಕೆಲವರೇಕೆ ಮುಕ್ತರಾಗುವದಿಲ್ಲ ? ಎಂದರೆ ಅವರು ನಿನ್ನಿಂದಲೇ ವಂಚಿತರಾಗಿ ಮತ್ತೆ ಸಂಸಾರದಲ್ಲಿರುವರು ಎಂದು ಹೇಳುವನು -

**ನೂನಂ ವಿಮುಷ್ಟಮತಯಸ್ತವ ಮಾಯಯಾ ತೇ**
**ಯೇ ತ್ವಾಂ ಭವಾಪ್ಯಯವಿಮೋಕ್ಷಣಮನ್ಯಹೇತೋಃ ।**
**ಅರ್ಚಂತಿ ಕಲ್ಪಕತರುಂ ಕುಣಪೋಪಭೋಗ್ಯ-**
**ಮಿಚ್ಛಂತಿ ಯತ್ಸ್ಪರ್ಶಜಂ ನಿರಯೇऽಪಿ ನೃಣಾಮ್ ।।೯।।**

ಯತ್=ಯಾವ ಕಾರಣ ಸ್ಪರ್ಶಜಂ=ವಿಷಯಾನುಭವಜನ್ಯಸುಖವು ನೃಣಾಂ=ಜನರಿಗೆ ನಿರಯೇ ಅಪಿ=ನರಕದಲ್ಲಿಯೂ ಆಗುವದೋ ಆ ಕಾರಣ ಯೇ=ಯಾರು ಭವಾಪ್ಯಯವಿಮೋಕ್ಷಣಂ=ಜನನಮರಣಾತ್ಮಕವಾದ ಸಂಸಾರದಿಂದ ಮೋಚಕನಾದ ಕಲ್ಪತರುಂ=ಕಲ್ಪವೃಕ್ಷದಂತೆ ಸರ್ವಾಭೀಷ್ಟಪ್ರದನಾದ ತ್ವಾಂ=ನಿನ್ನನ್ನು ಅನ್ಯಹೇತೋಃ=ಬೇರೆ ಬೇರೆ ಕಾಮನೆಗಳಿಗಾಗಿ ಅರ್ಚಂತಿ=ಪೂಜಿಸುವರು, ಕುಣಪೋಪಭೋಗ್ಯಂ=ಶವಸಮಾನವಾದ ದೇಹದಿಂದ ಅನುಭವಿಸುವ ವಿಷಯಸುಖವನ್ನು ಇಚ್ಛಂತಿ=ಇಚ್ಛಿಸುವರೋ ತೇ=ಅವರು ತವ=ನಿನ್ನ ಮಾಯಯಾ=ಬಂಧಕಶಕ್ತಿಯಿಂದ ನೂನಂ=ನಿಶ್ಚಯವಾಗಿ ವಿಮುಷ್ಟಮತಯಃ= ಮೋಹಿತವಾದ ಬುದ್ಧಿಯುಳ್ಳವರು. ಆದ್ದರಿಂದ ಉಳಿದ ಎಲ್ಲ ಕಾಮನೆಗಳನ್ನು ತೊರೆದು ಕೇವಲ ಮೋಕ್ಷಕ್ಕಾಗಿಯೇ ನಿನ್ನ ಧ್ಯಾನಾದಿಗಳನ್ನು ಮಾಡಬೇಕು ಎಂದು ಭಾವ. ।।೯।।

ಅನ್ಯಕಾಮನೆಯನ್ನು ಬಿಟ್ಟು ಮೋಕ್ಷಕಾಮನೆಯಿಂದ ನಿನ್ನ ಧ್ಯಾನಾದಿಗಳನ್ನು ಮಾಡುವವರಿಗೂ, ಮೋಕ್ಷಕಾಮನೆಯನ್ನೂ ಮಾಡದೇ ಕೇವಲ ನಿನ್ನ ಪ್ರೀತಿಗಾಗಿ ಧ್ಯಾನಾದಿಗಳನ್ನು ಮಾಡುವವರಿಗೂ, ಏನು ವಿಶೇಷ (ವ್ಯತ್ಯಾಸ) ? ಅಂತಹವರು ಯಾವ ಕಾರಣದಿಂದ ಮೋಕ್ಷದ ಆಶೆಯನ್ನು ಬಿಡುವರು ? ಎಂದರೆ, ಮೋಕ್ಷವನ್ನು ಇಚ್ಛಿಸುವವರಿಗೆ ಮುಕ್ತಿಯಲ್ಲಿ ಅಭಿವ್ಯಕ್ತವಾಗುವ ಪೂರ್ಣಸ್ವರೂಪಸುಖಕ್ಕಿಂತಲೂ ಹೆಚ್ಚಿನ ಸ್ವರೂಪಸುಖವು

ಮೋಕ್ಷಕಾಮನೆಯನ್ನು ಮಾಡದವರಿಗೆ ಜೀವನ್ಮುಕ್ತಿಕಾಲದಲ್ಲಿಯೇ ಧ್ಯಾನಾದಿಗಳಿಂದ ಅಭಿವ್ಯಕ್ತವಾಗುವದು ಎಂದಮೇಲೆ ಇನ್ನು ಪರಮಮುಕ್ತಿಯಲ್ಲಿ ಕೇಳಬೇಕೇ ? ಅಧಿಕವಾಗಿಯೇ ಆಗುವದು ಎಂದು ಹೇಳುವನು ''ಯಾ ನಿರ್ವೃತಿಸ್ತನುಭೃತಾಂ'' ಎಂಬ ಶ್ಲೋಕದಿಂದ :-

**ಯಾ ನಿರ್ವೃತಿಸ್ತನುಭೃತಾಂ ತವ ಪಾದಪದ್ಮ-**
**ಧ್ಯಾನಾದ್ಭವಜ್ಜನಕಥಾಶ್ರವಣೇನ ವಾ ಸ್ಯಾತ್ ।**
**ಸಾ ಬ್ರಹ್ಮಣಿ ಸ್ವಮಹಿಮನ್ಯಪಿ ನಾಥ ಮಾಭೂತ್**
**ಕಿಮ್ವಂತಕಾಸಿಲುಲಿತಾತ್ಪತತಾಂ ವಿಮಾನಾತ್ ॥೧೦॥**

**ಭಾಗವತ ತಾತ್ಪರ್ಯ -**

ಇಲ್ಲಿ ಬ್ರಹ್ಮಣಿ=ಚತುರ್ಮುಖನಲ್ಲಿ ನಾಸ್ತಿ=ಇಲ್ಲವೆಂದು ತೋರುವದು. ಆ ಕಾರಣ ಸ್ಥಿತಸ್ಯ ಎಂಬ ಪದವನ್ನು ಅಧ್ಯಾಹಾರ ಮಾಡಿ ಯೋಜಿಸುವರು.

**''ಪರಬ್ರಹ್ಮಣಿ ಸ್ಥಿತಸ್ಯ ಧ್ಯಾನಾದಿಕಂ ವಿನಾ ನ ಭವತಿ । ಸುಪ್ತೌ ದೃಷ್ಟತ್ವಾತ್।''**

ಪರಬ್ರಹ್ಮನಲ್ಲಿರುವವನಿಗೆ ಅಂದರೆ ಮುಕ್ತನಿಗೂ ಅಪರೋಕ್ಷಜ್ಞಾನಾನಂತರ ಧ್ಯಾನಾದಿಗಳನ್ನು ಮಾಡದೇ ಸ್ವರೂಪಸುಖಾಭಿವ್ಯಕ್ತಿಯು ಅತಿಶಯವಾಗಿ ಆಗಲಾರದು.

**ಶ್ಲೋಕಾರ್ಥ :-**

ತನುಭೃತಾಂ=ಮೋಕ್ಷಕಾಮನೆಯನ್ನೂ ಮಾಡದೇ ವಿಸ್ತಾರವಾಗಿ ಬ್ರಹ್ಮೋಪಾಸನೆ ಮಾಡುವ ರಸಿಕರಿಗೆ ತವ ಪಾದಪದ್ಮಧ್ಯಾನಾತ್=ನಿನ್ನ ಪಾದಕಮಲಗಳ ಧ್ಯಾನ ಮಾಡುವದರಿಂದ ವಾ=ಮತ್ತು ಭವಜ್ಜನಕಥಾಶ್ರವಣೇನ=ನಿನ್ನ ಜನ್ಮಕಥಾಶ್ರವಣದಿಂದ ಅಥವಾ ನಿನ್ನ ಮತ್ತು ನಿನ್ನ ಭಕ್ತರ ಕಥಾಶ್ರವಣದಿಂದ ಯಾ ನಿರ್ವೃತಿಃ=ಎಷ್ಟು ಸ್ವರೂಪಸುಖಾಭಿವ್ಯಕ್ತಿಯಾಗುವದೋ ಸಾ=ಆ ಸ್ವರೂಪಸುಖವು (ಅಭಿವ್ಯಕ್ತಿಯು) ಸ್ವಮಹಿಮ್ನಿ=ಅನನ್ಯಾಧೀನಮಾಹಾತ್ಮ್ಯ ಉಳ್ಳ ಬ್ರಹ್ಮಣಿ ಸ್ಥಿತಸ್ಯ=ಪರಬ್ರಹ್ಮನನ್ನು ಹೊಂದಿದ ಅಲ್ಪ ಮುಕ್ತನಿಗೆ ಮಾ ಭೂತ್(ನ ಭವತಿ)=ವ್ಯಂಜಕಗಳಾದ ಧ್ಯಾನಾದಿಗಳಿಲ್ಲದೇ ಪರಬ್ರಹ್ಮನನ್ನು ಹೊಂದಿದ ಮಾತ್ರದಿಂದ ಆಗಲಾರದು. ಅಂತಕಾಸಿಲುಲಿತಾತ್=ಶ್ರೀಹರಿಯ ಖಡ್ಗಸ್ಥಾನೀಯವಾದ ಕಾಲಚಕ್ರದಿಂದ ಖಂಡಿತವಾದ ವಿಮಾನದಿಂದ ಪತತಾಂ=ಕೆಳಗೆ ಬರುವ ಸ್ವರ್ಗಾದಿಗಳಲ್ಲಿರುವವರಿಗೆ ಆ ವಿಧವಾದ ಸುಖವಿಲ್ಲವೆಂಬುದು ಕಿಮು=ಪ್ರತ್ಯೇಕ ಹೇಳಬೇಕಿಲ್ಲ.

ಏಕಾಂತಭಕ್ತರಲ್ಲದ ಭಕ್ತರು ಮುಕ್ತಿಯನ್ನು ಪಡೆದ ನಂತರ ಅನುಭವಿಸುವ ಸ್ವಊಪಸುಖಕ್ಕಿಂತ ಹೆಚ್ಚಿನ ಸ್ವರೂಪಸುಖವನ್ನು ಏಕಾಂತಭಕ್ತರು ಜೀವನ್ಮುಕ್ತಿ ಅವಸ್ಥೆಯಲ್ಲಿಯೇ (ಅಪರೋಕ್ಷಜ್ಞಾನೋತ್ತರಕಾಲದಲ್ಲಿಯೇ) ಅನುಭವಿಸುವರು ಎಂದಮೇಲೆ ಇನ್ನು ಮುಕ್ತಿಯಲ್ಲಿ ಅತಿಶಯಸುಖವನ್ನು ಅನುಭವಿಸುವರು ಎಂದು ಏನು ಹೇಳುವುದು ? ಈ ವಿಧವಾದ ಸುಖವು ಅಲ್ಪಮುಕ್ತರಿಗೇ ಇಲ್ಲದಿರುವಾಗ ಸ್ವರ್ಗಾದಿಗಳಲ್ಲಿರುವವರಿಗೆ ಇಲ್ಲವೆಂದು ಹೇಳುವದು ಬೇಕಿಲ್ಲ.

ಸುಷುಪ್ತಿಕಾಲದಲ್ಲಿ ಪ್ರಾಜ್ಞನಾಮಕನಾದ ಬ್ರಹ್ಮನ ಪ್ರಾಪ್ತಿ ಆಗಿದ್ದರೂ ಧ್ಯಾನಾದಿಗಳಿಲ್ಲ-ದಿರುವದರಿಂದ ಹೆಚ್ಚಿನ ಸುಖಾಭಿವ್ಯಕ್ತಿಯು ಆಗುವದಿಲ್ಲ. ಆ ಕಾರಣ ಕೇವಲ ಬ್ರಹ್ಮಪ್ರಾಪ್ತಿಯು ಸುಖಾತಿಶಯಕ್ಕೆ ಕಾರಣವಲ್ಲ. ಕಿಂತು ಧ್ಯಾನಾದಿಗಳೂ ಬೇಕು (ಕಾಮನಾರಹಿತವಾದ ಸಾಧನೆ ಮತ್ತು ಅಪರೋಕ್ಷಜ್ಞಾನಾನಂತರವೂ ಧ್ಯಾನಾದಿಗಳನ್ನು ಮಾಡುವುದೂ ಕಾರಣ) ಎಂದು ಭಾವ. ।।೧೦।।

ಹಾಗಾದರೆ 'ಈ ವಿಧಭಕ್ತರ ಸಂಗವಾಗಿ ಕಥಾಶ್ರವಣ ನನಗೆ ಆಗಲಿ' ಎಂದು ಕೇಳುವನು -

**ಭಕ್ತಿಂ ಮುಹುಃ ಪ್ರವಹತಾಂ ತ್ವಯಿ ಮೇ ಪ್ರಸಂಗೋ**
**ಭೂಯಾದನಂತ ಮಹತಾಮಮಲಾಶಯಾನಾಮ್ ।**
**ಯೇನಾಂಜಸೋಲ್ಬಣಮುರುವ್ಯಸನಂ ಭವಾಬ್ಧಿಂ**
**ನೇಷ್ಯೇ ಭವದ್ಗುಣಕಥಾಮೃತಪಾನಮತ್ತಃ ।।೧೧।।**

ಹೇ ಅನಂತ=ಪರಮಾತ್ಮನೇ ! ತ್ವಯಿ=ನಿನ್ನಲ್ಲಿ ಭಕ್ತಿಂ=ಭಕ್ತಿಯನ್ನು ಮುಹುಃ=ಪುನಃ ಪುನಃ ಪ್ರವಹತಾಂ=ಅವಿಚ್ಛಿನ್ನವಾಗಿ ಮಾಡುವ ಅಮಲಾಶಯಾನಾಂ=ಶುದ್ಧಾಂತಃಕರಣವುಳ್ಳ ಮಹತಾಂ=ಜ್ಞಾನಿಗಳ ಪ್ರಸಂಗಃ=ಸಹವಾಸವು ಮೇ=ನನಗೆ ಭೂಯಾತ್=ಆಗಲಿ. ಯೇನ=ಯಾವ ಮಹತ್ಸಂಗದಿಂದ ಅಂಜಸಾ=ಚೆನ್ನಾಗಿ ಭವದ್ಗುಣಕಥಾಮೃತಪಾನಮತ್ತಃ= ನಿನ್ನ ಗುಣಗಳ ಕಥೆಯೆಂಬ ಅಮೃತಪಾನದಿಂದ ಇತರ ವಿಷಯಗಳನ್ನು ಮರೆತವನಾಗಿ ಉರುವ್ಯಸನಂ=ಬಹಳ ದುಃಖವುಳ್ಳ ಭವಾಬ್ಧಿಂ=ಸಂಸಾರಸಮುದ್ರವನ್ನು ನೇಷ್ಯೇ=ದಾಟುವೆನು.

ವಿಷಯಾಸ್ಮರಣರೂಪವಾದ ಕಥಾಪಾನಮತ್ತತೆಯಿಂದ ಏನು ಪ್ರಯೋಜನ ? ಅದಕ್ಕಾಗಿ ಸಜ್ಜನ ಸಂಗವೇಕೆ ? ಎಂದರೆ ಹೇಳುವರು -

**ತೇ ನ ಸ್ಮರಂತ್ಯತಿತರಾಂ ಪ್ರಿಯಮೀಶಮಾದ್ಯಂ**
**ಸ್ವಾನ್ ಸಂಪದಃ ಸುತಸುಹೃದ್ಗೃಹವಿತ್ತದಾರಾನ್ ।**

**ಯೇ ತ್ವಬ್ಜನಾಭ ಭವದೀಯಪದಾರವಿಂದ-**
**ಸೌಗಂಧ್ಯಲುಬ್ಧಹೃದಯೇಷು ಕೃತಪ್ರಸಂಗಾಃ ।।೧೨।।**

ಹೇ ಅಬ್ಜನಾಭ=ಪದ್ಮನಾಭನೇ ! ಯೇ=ಯಾರು ಸ್ವಾನ್=ತನ್ನವರಾದ ಸುತಸುಹೃದ್ಗೃಹ-ವಿತ್ತದಾರಾನ್=ಮಕ್ಕಳು, ಸ್ನೇಹಿತರು, ಮನೆ, ಹಣ, ಹೆಂಡತಿ ಇವರನ್ನು ಸಂಪದಃ=ಸಂಪತ್ತನ್ನೂ ಸ್ಮರಂತಿ=ಸ್ಮರಿಸುವರೋ ತೇ=ಅವರು ಅತಿತರಾಂ=ಅತ್ಯಂತವಾಗಿ ಪ್ರಿಯಂ=ಪ್ರಿಯನಾದ ಆದ್ಯಂ=ಕಾರಣನಾದ ಈಶಂ=ನಿಯಾಮಕನಾದ ನಿನ್ನನ್ನು ನ ಸ್ಮರಂತಿ=ಸ್ಮರಿಸಲಾರರು. ಯೇ ತು=ಯಾರು ಭವದೀಯಪದಾರವಿಂದಸೌಗಂಧ್ಯಲುಬ್ಧಹೃದಯೇಷು ಭವದೀಯ=ನಿನ್ನ ಪದಾರವಿಂದಸೌಗಂಧ್ಯ=ಪಾದಕಮಲದ ಸುವಾಸನೆಯಿಂದ ಲುಬ್ಧ=ವಶೀಕೃತವಾದ ಹೃದಯೇಷು=ಮನಸ್ಸುಳ್ಳ ನಿನ್ನ ಭಕ್ತರಲ್ಲಿ ಕೃತಪ್ರಸಂಗಾಃ=ಸಹವಾಸವನ್ನು ಪಡೆದವರೋ ಅವರು ಸಂಪತ್ತು ಮಕ್ಕಳು ಮುಂತಾದವನ್ನು ಸ್ಮರಿಸುವುದಿಲ್ಲ. ಅತಿತರಾಂ ಪ್ರಿಯಂ ತ್ವಾಮೇವ ಸ್ಮರಂತಿ=ಅತ್ಯಂತಪ್ರಿಯನಾದ ನಿನ್ನನ್ನೇ ಸ್ಮರಿಸುವರು.

**ಭಾಗವತ ತಾತ್ಪರ್ಯ -**

ಇಲ್ಲಿ ಅನ್ವಯ-ವ್ಯತಿರೇಕಗಳು ಸ್ಪಷ್ಟವಾಗಿ ತಿಳಿಯುವದಿಲ್ಲ. ಕಾರಣ 'ತೇ ನ ಸ್ಮರಂತಿ' ಮುಂತಾದವುಗಳನ್ನು ಆವೃತ್ತಿ ಮಾಡಿಕೊಂಡು ಯೋಜಿಸುವರು -

**ಯೇ ಸ್ವಾಃ ಸಂಪದಃ ಸ್ಮರಂತಿ ತೇ ತ್ವಾಂ ನ ಸ್ಮರಂತಿ । ಯೇ ಭಗವದ್ಭಕ್ತಸಂಗಾಃ ತೇ ಸ್ವಾಃ ಸಂಪದೋ ನ ಸ್ಮರಂತಿ।।**

ಯಾರು ತಮ್ಮ ಮಡದಿ-ಮಕ್ಕಳು-ಸಂಪತ್ತಿನಲ್ಲಿ ಆಸಕ್ತರೋ ಅವರಿಗೆ ನಿನ್ನಲ್ಲಿ ಆಸಕ್ತಿ ಇರುವದಿಲ್ಲ. ಯಾರು ಭಗವದ್ಭಕ್ತರ ಸಹವಾಸದಿಂದ ನಿನ್ನಲ್ಲಿ ಆಸಕ್ತರೋ ಅವರು ಸಂಪತ್ತು ಮೊದಲಾದವುಗಳಲ್ಲಿ ಆಸಕ್ತರಾಗಲಾರರು. ।।೧೨।।

ನನ್ನ ಭಕ್ತರ ಸಂಗದಿಂದ ಬರುವ ಸ್ಮರಣದಿಂದೇನು ಪ್ರಯೋಜನ ? ಅದರಿಂದಾಗುವ ನನ್ನ ದರ್ಶನರೂಪವಾದ ಪ್ರಯೋಜನವು ನಿನಗೆ ಈಗಲೇ ಸಿಕ್ಕಿದೆಯಲ್ಲ ? ಎಂದರೆ ವಿಶೇಷಜ್ಞಾನಕ್ಕಾಗಿ ಬೇಕು ಎಂದು ಹೇಳುವನು -

**ತಿರ್ಯಙ್‌ನಗದ್ವಿಜಸರೀಸೃಪದೇವದೈತ್ಯ-**
**ಮರ್ತ್ಯಾದಿಭಿರ್ವಿರಚಿತಂ ಸದಸದ್ವಿಶೇಷಮ್ ।**
**ರೂಪಂ ಸ್ಥವಿಷ್ಠಮಜತ ತೇ ಮಹದಾದ್ಯಶೇಷಂ**
**ನಾತಃ ಪರಂ ಪರಮ ವೇದ್ಮಿ ನ ಯತ್ರ ವಾಚಃ ।।೧೩।।**

ಹೇ ಅಜ=ಉತ್ಪತ್ತಿರಹಿತನಾದ ಶ್ರೀಹರಿಯೇ ! (ಅಶೇಷಂ ಮಹದಾದಿ ಯಸ್ಯ ತತ್ ಮಹದಾದ್ಯಶೇಷಂ, ಎಲ್ಲ ಮಹದಾದಿಕಾರ್ಯಕಾರಣಗಳು ಯಾವುದಕ್ಕಿದೆಯೋ ಅದು ಮಹದಾದ್ಯಶೇಷಂ) ಮಹದಾದ್ಯಶೇಷಂ=ಎಲ್ಲ ಅವಯವಗಳಿಂದ ಕೂಡಿದ ಮಹತ್ತತ್ವ ಮೊದಲಾದ ಎಲ್ಲ ಕಾರ್ಯಕಾರಣಗಳನ್ನೊಳಗೊಂಡ, ಸದಸದ್ವಿಶೇಷಂ=ಪಂಚಮಹಾ-ಭೂತಗಳಿಂದ ಕೂಡಿದ, ತಿರ್ಯಙ್‌ನಗದ್ವಿಜಸರೀಸೃಪದೇವದೈತ್ಯಮರ್ತ್ಯಾದಿಭಿಃ ತಿರ್ಯಕ್= ನೀಚ ಪಶು-ಪಕ್ಷಿಗಳು ನಗ=ಪರ್ವತ-ಗಿಡಗಳು ದ್ವಿಜ=ಬ್ರಾಹ್ಮಣರು ಸರೀಸೃಪ=ಹಾವು ದೇವ=ಸುರರು ದೈತ್ಯ=ಅಸುರರು ಮರ್ತ್ಯ=ಮನುಷ್ಯರು ಆದಿಭಿಃ=ಇವುಗಳಿಂದ ಸಹಿತವಾಗಿ ವಿರಚಿತಂ=ರಚಿಸಲ್ಪಟ್ಟ ಬ್ರಹ್ಮಾಂಡವು ತೇ=ನಿನ್ನ ಸ್ಥವಿಷ್ಠರೂಪಂ=ಸ್ಥೂಲರೂಪವಾಗಿದೆಯೋ ಅತಃಪರಂ=ಅದಕ್ಕಿಂತಲೂ ವಿಲಕ್ಷಣವಾದ ಚಿದಾನಂದಾತ್ಮಕವಾದ ಈ ರೂಪವನ್ನು ಹರಿಗುರುಗಳ ಅನುಗ್ರಹದಿಂದ ಸ್ವಲ್ಪ ತಿಳಿದಿದ್ದರೂ ಸಹ, ಹೇ ಪರಮ=ಸ್ವಾಮಿಯೇ ಯತ್ರ=ಯಾವ ಸೂಕ್ಷ್ಮರೂಪದ ವಿಷಯದಲ್ಲಿ ವಾಚಃ=ವೇದಾದಿರೂಪವಾದ ಮಾತುಗಳು ನ=ಸಾಕಲ್ಯೇನ ತಿಳಿಸಲು ಪ್ರವೃತ್ತವಾಗುವುದಿಲ್ಲವೋ (ವೇದಾಭಿಮಾನಿನಿಲಕ್ಷ್ಮ್ಯಾದಿಗಳೂ ಸಾಕಲ್ಯೇನ ತಿಳಿಯಲಾರರೋ) ಅಂತಹ ರೂಪವನ್ನು ಅಹಂ=ನಾನು ನ ವೇದ್ಮಿ=ವಿಶೇಷವಾಗಿ ತಿಳಿದಿಲ್ಲ. ಆದ್ದರಿಂದ ವಿಶೇಷ ಜ್ಞಾನಕ್ಕಾಗಿ ನಿನ್ನ ಭಕ್ತರ ಸಂಗವಾಗಲಿ ಎಂದು ಭಾವ.

**ಭಾಗವತ ತಾತ್ಪರ್ಯ -**

ಮೇಲಿನ ಶ್ಲೋಕದಲ್ಲಿ ''ತಿರ್ಯಗಾದಿಗಳಿಂದ ಸಹಿತವಾದ ಬ್ರಹ್ಮಾಂಡದಿಂದ ವಿಲಕ್ಷಣವಾದ ರೂಪವನ್ನು ನಾನು ತಿಳಿದಿಲ್ಲ'' ಎಂದು ಹೇಳಿದ್ದರಿಂದ ''ಈಗ ನೋಡಿದ್ದು ಭಗವಂತನ ರೂಪವಲ್ಲ. ಕಿಂತು ಮನುಷ್ಯನೇ'' ಎಂದು ತೋರುವದು. ಆ ಕಾರಣ ಈ ವಿಧವಾದ ಮಾತುಗಳ ತಾತ್ಪರ್ಯವನ್ನು ಪ್ರಮಾಣದಿಂದಲೇ ತಿಳಿಸುವರು -

**ಪಶ್ಯಮಾನೋऽಪಿ ತು ಹರಿಂ ನ ತು ವೇತ್ತಿ ಕಥಂಚನ ।**
**ವೇತ್ತಿ ಕಿಂಚಿತ್ ಪ್ರಸಾದೇನ ಹರೇರಥ ಗುರೋಸ್ತಥಾ ॥ ಇತಿ ಬ್ರಹ್ಮತರ್ಕೇ ॥**

ಶ್ರೀಹರಿಯನ್ನು ತಿಳಿದರೂ ಸಹ ಸಂಪೂರ್ಣವಾಗಿ ತಿಳಿದಿಲ್ಲ. ಹರಿ-ಗುರುಗಳ ಅನುಗ್ರಹದಿಂದ ತನ್ನ ಯೋಗ್ಯತಾನುಸಾರವಾಗಿ ತಿಳಿಯುತ್ತಾನೆ ಎಂದು ಬ್ರಹ್ಮವೈವರ್ತದಲ್ಲಿ ಹೇಳಿದೆ. ಅಂದರೆ ಬ್ರಹ್ಮಾಂಡವೆಂಬ ನಿನ್ನ ಸ್ಥೂಲರೂಪವನ್ನು ಸಾಮಾನ್ಯವಾಗಿ ತಿಳಿದರೂ ಸಹ ವಿಶೇಷವಾಗಿ ತಿಳಿದಿಲ್ಲವೆಂದು ಭಾವ. ಈಗ ನೋಡಿದ ನಿನ್ನ ರೂಪದ ವಿಶೇಷ ಜ್ಞಾನವಿಲ್ಲವೆಂದರ್ಥ. ॥೧೩॥

ಈಗ ನೋಡಿದ್ದು ಭಗವಂತನ ರೂಪವಲ್ಲ ಎಂದೇ ಏಕಾಗಬಾರದು ? ಎಂದರೆ, ಇದು ಭಗವಂತನ ರೂಪವೇ ಎಂದು ಉಪಪಾದಿಸುವರು -

**ಕಲ್ಪಾಂತ ಏತದಖಿಲಂ ಜಠರೇಣ ಗೃಹ್ಣನ್**
**ಶೇತೇ ಪುಮಾನ್ ಸ್ವದೃಗನಂತಸಖಸ್ತದಂಕೇ ।**
**ಯನ್ನಾಭಿಸಿಂಧುರುಹಕಾಂಚನಲೋಕಪದ್ಮ-**
**ಗರ್ಭೇ ದ್ಯುಮಾನ್ ಭಗವತೇ ಪ್ರಣತೋಽಸ್ಮಿ ತಸ್ಮೈ ॥೧೪॥**

ಅನಂತಸಖಃ=ಅನಂತನೇ (ಶೇಷದೇವನೇ) ಸಖನಾಗಿವುಳ್ಳ ಸ್ವದೃಕ್=ಸ್ವಪ್ರಕಾಶನಾದ ಪುಮಾನ್=ಪೂರ್ಣಷಡ್ಗುಣನಾದ ಇವನು ಕಲ್ಪಾಂತೇ=ಬ್ರಹ್ಮಕಲ್ಪದ ಕೊನೆಗೆ ಏತದಖಿಲಂ=ಈ ಎಲ್ಲ ಪ್ರಪಂಚವನ್ನು ಜಠರೇಣ ಗೃಣ್ಹನ್=ಹೊಟ್ಟೆಯಲ್ಲಿ ಹಾಕಿಕೊಂಡವನಾಗಿ (ಸಂಹರಿಸಿದವನಾಗಿ) ತದಂಕೇ=ಅನಂತನ ಶರೀರದಲ್ಲಿ ಶೇತೇ=ಮಲಗುವವನು. ಯನ್ನಾಭಿಸಿಂಧುರುಹಕಾಂಚನಲೋಕಪದ್ಮಗರ್ಭೇ=ಯಾವನ ಹೊಕ್ಕಳೆಂಬ ಸಮುದ್ರದಲ್ಲಿ ಜನಿಸಿದ ಚಿನ್ನದ ಕಮಲದ ಕರ್ಣಿಕೆಯಲ್ಲಿ ದ್ಯುಮಾನ್ ಜಾತಃ=ಪ್ರಕಾಶಮಾನನಾದ ಬ್ರಹ್ಮನು ಜನಿಸಿದನೋ ತಸ್ಮೈ=ಅಂತಹ ಭಗವತೇ=ಪರಮಾತ್ಮನಿಗೆ ಪ್ರಣತೋಽಸ್ಮಿ=ನಮಸ್ಕರಿಸಿದ್ದೇನೆ.

ಅಂದರೆ ಕಲ್ಪಾಂತಶಾಯಿತ್ವ ಬ್ರಹ್ಮಜನಕಪದ್ಮನಾಭತ್ವ ಮುಂತಾದ ಲಕ್ಷಣಗಳಿಂದ ಕೂಡಿದ ಭಗವಂತನಿಂದ ಅಭಿನ್ನವಾಗಿ ಕಂಡದ್ದರಿಂದ ಇದು ಭಗವಂತನ ರೂಪವೇ ಎಂದು ಭಾವ. ॥೧೪॥

ಇವನು ಪರಮಾತ್ಮನೇ ಎಂಬುದಕ್ಕೆ ಮತ್ತೊಂದು ಯುಕ್ತಿ ಹೇಳುವನು -

**ತ್ವಂ ನಿತ್ಯಮುಕ್ತಪರಿಶುದ್ಧವಿಬುದ್ಧ ಆತ್ಮಾ**
**ಕೂಟಸ್ಥ ಆದಿಪುರುಷೋ ಭಗವಾಂಸ್ತ್ರ್ಯಧೀಶಃ ।**
**ಯೇ ಬುದ್ಧ್ಯವಸ್ಥಿತಮಖಂಡಿತಯಾ ಸ್ವಬುದ್ಧ್ಯಾ**
**ದೃಷ್ಟ್ವಾಸ್ಥಿತಾ ವಧಿಮತೋ ವ್ಯತಿರಿಕ್ತ ಆಸ್ಸೇ ॥೧೫॥**

ತ್ವಂ=ನನ್ನಿಂದ ನೋಡಲ್ಪಡುವ ನೀನು ನಿತ್ಯಮುಕ್ತಪರಿಶುದ್ಧವಿಬುದ್ಧ ಆತ್ಮಾ= ನಿತ್ಯಮುಕ್ತನೂ, ಸರ್ವತ್ರ ಶುದ್ಧನೂ, ವಿಶೇಷವಾಗಿ ಸರ್ವಜ್ಞನೂ, ವ್ಯಾಪ್ತನೂ ಆಗಿರುವಿ. ಕೂಟಸ್ಥಃ=ವಿಕಾರರಹಿತನು, ಆದಿಪುರುಷಃ=ಜಗತ್ತಿನ ಆದಿಯಲ್ಲಿ ಅಂತದಲ್ಲಿರುವ ಪುರುಷನು, ಭಗವಾನ್=ಷಡ್ಗುಣೈಶ್ವರ್ಯವುಳ್ಳವನು, ತ್ರ್ಯಧೀಶಃ=ಮೂರು ಲೋಕಗಳಿಗೆ ಅಖಂಡನಿಯಾಮಕನು ಆಗಿರುವಿ. ಯೇ=ಯಾರು ಬುದ್ಧ್ಯವಸ್ಥಿತಂ=ತನ್ನ ಬುದ್ಧಿ ಮೊದಲಾದ ಇಂದ್ರಿಯಗಳಿಗೆ ನಿಯಾಮಕನಾದ ವಧಿಂ=ಸಂಸಾರಕ್ಕೆ ಅವಧಿಯಾದ ತ್ವಾಂ=ನಿನ್ನನ್ನು

ಅಖಂಡಿತಯಾ ಸ್ವಬುದ್ಧ್ಯಾ=ಅವಿಚ್ಛಿನ್ನವಾದ ತನ್ನ ಮನಸ್ಸಿನಿಂದ ಸ್ವರೂಪಜ್ಞಾನದಿಂದ ದೃಷ್ಟ್ವಾ=ನೋಡಿ ಆಸ್ಥಿತಾಃ=ಆಶ್ರಯಿಸಿರುವವರೋ (ಮುಕ್ತರಾಗಿರುವವರೋ) ತೈಃ=ಅವರೊಡನೆ ಅತಃ=ಮನುಷ್ಯರಿಂದ ವ್ಯತಿರಿಕ್ತಃ ಆಸ್ಸೇ=ವಿಲಕ್ಷಣನಾಗಿರುವಿ.

ಅಂದರೆ ಶ್ರುತಿಸಿದ್ಧವಾದ ನಿತ್ಯಮುಕ್ತತ್ವ ಸರ್ವಜ್ಞತ್ವ ಮುಂತಾದ ಧರ್ಮಗಳಿರುವುದರಿಂದ ನೀನು ಭಗವಂತನೇ. ಮತ್ತು ನಿನ್ನನ್ನು ಆಶ್ರಯಿಸಿದ ಮುಕ್ತರೇ ಮರಣರಹಿತರಾದ ಮೇಲೆ ನಿನಗೆ ಆ ವಿಧವಾದ ದೇಹವಿಲ್ಲವೆಂದು ಬೇರೆ ಹೇಳಬೇಕಿಲ್ಲ ಎಂದು ಭಾವ.

**ಭಾಗವತ ತಾತ್ಪರ್ಯ -**

ಈ ಶ್ಲೋಕದಲ್ಲಿ ''ಸ್ಥಿತಾವಧಿಂ'' ಎನ್ನುವುದು ಒಂದೇ ಪದವಾಗಿದೆ ಎಂಬ ಭ್ರಾಂತಿಯನ್ನು ಪರಿಹರಿಸಲು ಆಚಾರ್ಯರು ಪದಚ್ಛೇದ ಹಾಗೂ ಅನ್ವಯ ತಿಳಿಸುವರು -

**ವಧಿಂ ಅವಧಿಂ । ಅಲ್ಲೋಪೇನ । ಸಂಸಾರಸ್ಯಾವಧಿಭೂತಂ ತ್ವಾಮಾಸ್ಥಿತಾಃ । ಸಹೈವಾಸ್ತೇ॥**

**'ವಷ್ಟಿ ಭಾಗುರಿರಲ್ಲೋಪಮವಾಪ್ಯೋರುಪಸರ್ಗಯೋಃ ।'** ಎಂಬ ವಚನಾನುಸಾರವಾಗಿ ಅವಧಿ ಎಂಬಲ್ಲಿ ಅಕಾರ ಲೋಪವಾಗಿ ವಧಿಂ ಎಂದಾಗಿರುವುದು. ಕರ್ಮಬಂಧಕ್ಕೆ (ಸಂಸಾರಕ್ಕೆ) ಅವಧಿಯಾದ (ನಿವರ್ತಕನಾದ) ನಿನ್ನನ್ನು ಎಂದು ಅರ್ಥ. ॥೧೫॥

**ಯಸ್ಮಿನ್ ವಿರುದ್ಧಗತಯೋಽಪ್ಯನಿಶಂ ಪತಂತಿ**
**ವಿದ್ಯಾದಯೋ ವಿವಿಧಶಕ್ತಯ ಆನುಪೂರ್ವ್ಯಾ ।**
**ತದ್ ಬ್ರಹ್ಮ ವಿಶ್ವಭವಮೇಕಮವಿಶ್ವಮಾದ್ಯ-**
**ಮಾನಂದಮಾತ್ರಮವಿಕಾರಮಹಂ ಪ್ರಪದ್ಯೇ ॥೧೬॥**

ಯಸ್ಮಿನ್=ಯಾವನಲ್ಲಿ ವಿರುದ್ಧಗತಯಃ=ಲೋಕದಲ್ಲಿ ವಿರುದ್ಧವೆಂದು ತೋರುವ (ಒಂದೆಡೆ ಇಲ್ಲದಿರುವ) ವಿದ್ಯಾದಯಃ=ಪಂಚರಾತ್ರ ಮೊದಲಾದ ಪೌರುಷೇಯಗ್ರಂಥಗಳು ಮತ್ತು ಆದಿಪದೇನ ಅಣುತ್ವ-ಮಹತ್ವಗಳು ವಿವಿಧಶಕ್ತಯಃ=ಅನೇಕ ಪ್ರಕಾರವಾದ ಯೋಗ-ರೂಢಿ ಮುಂತಾದ ವೃತ್ತಿವುಳ್ಳ ವಿದ್ಯಾಗಳು, ವಿಚಿತ್ರವಾದ ಅಘಟಿತಘಟಕ ಶಕ್ತಿಯೇ ಸಾಮರ್ಥ್ಯನಿರ್ವಾಹಕವಾಗಿ ಉಳ್ಳ ಪದಾರ್ಥಗಳು ಅನಿಶಂ=ಯಾವಾಗಲೂ (ದೇಶಕಾಲವ್ಯವಸ್ಥೆ ಇಲ್ಲದೇ) ಆನುಪೂರ್ವ್ಯಾ='ಅಸ್ಥೂಲಮನಣು' ಇತ್ಯಾದಿ ವೇದಗಳಿಂದ ಸಹಿತವಾಗಿ ಪತಂತಿ=ಪ್ರತಿಪಾದಿಸುತ್ತವೆ ಮತ್ತು ಇರುತ್ತವೆ. ಯತ್=ಯಾವುದು ಬ್ರಹ್ಮ=ಗುಣಪರಿಪೂರ್ಣವು, ವಿಶ್ವಭವಂ=ಜಗದುತ್ಪಾದಕವು, ಏಕಂ=ಸರ್ವೋತ್ತಮವು, ಅವಿಶ್ವಂ=ಜಗತ್ತಿನಿಂದ ಭಿನ್ನವು, ('ಅನಂತಂ' ಎಂಬ ಪಾಠದಲ್ಲಿ ನಿತ್ಯವು ಎಂದರ್ಥ.)

ಆದ್ಯಂ=ಜಗತ್ತಿಗಿಂತ ಮೊದಲಿಗೂ ಆಮೇಲೆಯೂ ಇರುವ, ಆನಂದಮಾತ್ರಂ= ಕೇವಲಾನಂದರೂಪನು, ಅವಿಕಾರಂ=ವಿಕಾರರಹಿತನು ಎಂದು ಅನುಪೂರ್ವ್ಯಾ=ವೇದದಿಂದ ಪ್ರಸಿದ್ಧನಾಗಿರುವನೋ ತತ್ ಇದಂ=ಆ ಇವನನ್ನು ಪ್ರಪದ್ಯೇ=ಆಶ್ರಯಿಸುವೆನು.

**ಭಾಗವತ ತಾತ್ಪರ್ಯ -**

**'ಆನುಪೂರ್ವೀ ಶ್ರುತಿಶ್ಚೈವ ತ್ರಯೀ ಚಾಮ್ನಾಯ ಉಚ್ಯತೇ' ಇತ್ಯಭಿಧಾನಮ್ ।**

ಆನುಪೂರ್ವೀ ಶ್ರುತಿ ತ್ರಯೀ ಮುಂತಾದ ಶಬ್ದಗಳಿಂದ ವೇದವೇ ಹೇಳಲ್ಪಡುವುದು ಎಂದು ವಚನವಿದೆ. ಆದ್ದರಿಂದ ಮೇಲೆ ಹೇಳಿದ ಧರ್ಮಗಳಿರುವದರಿಂದ ಅವನು ಭಗವಂತನೇ ಎಂದು ಭಾವ. ॥೧೬॥

**ಸತ್ಯಾಶಿಷೋ ಹಿ ಭಗವಂಸ್ತವ ಪಾದಮೂಲ-**
**ಮಾಶಿಷ್ಟಯೋಽನುಭಜತಃ ಪುರುಷಾರ್ಥಮೂರ್ತೇಃ ।**
**ಅಪ್ಯೇವಮಾರ್ಯ ಭಗವಾನ್ ಪರಿಪಾತಿ ದೀನಾನ್**
**ವಾಶ್ರೇವ ವತ್ಸಕಮನುಗ್ರಹಕಾತರೋಽಸ್ಮಾನ್ ॥೧೭॥**

ಪುರುಷಾರ್ಥಮೂರ್ತೇಃ=ಆನಂದಾನುಭವವೇ ದೇಹವಾಗಿವುಳ್ಳ ತವ=ನಿನ್ನ ಪಾದಮೂಲಂ=ಪಾದತಲವನ್ನು ಅನುಭಜತಃ=ತನ್ನ ಯೋಗ್ಯನಾತುಸಾರ ಸೇವಿಸುವ ಆಚಾರ್ಯರಾದ ನಾರದಾದಿಗಳ ಆಶಿಷ್ಟಯಃ=ಅನುಗ್ರಹೂರ್ವಕವಾದ ಉಪದೇಶಗಳು ಯದ್ಯಪಿ ಸತ್ಯಾಶಿಷೋ ಹಿ=ಯದ್ಯಪಿ ಯಥಾರ್ಥಶುಭಫಲಪ್ರದಗಳಾಗಿವೆ. ಅಪ್ಯೇವಂ= ಹಾಗಿದ್ದರೂ ಸಹ ಹೇ ಆರ್ಯ=ಪೂಜ್ಯನೇ ! ಭಗವಾನ್=ಸಮಗ್ರ ಐಶ್ವರ್ಯವುಳ್ಳ ನೀನು ಅನುಗ್ರಹಕಾತರಃ=ಕೃಪಾಪರವಶನಾಗಿ, ವತ್ಸಕಂ=ಚಿಕ್ಕಕರುವನ್ನು ವಾಸ್ರಾ ಇವ=ಹೊಸದಾಗಿ ಪ್ರಸವಿಸಿದ ಗೋವಿನಂತೆ (ಗೋವು ರಕ್ಷಿಸುವಂತೆ) ದೀನಾನ್=ದಯನೀಯರಾದ ಅಸ್ಮಾನ್=ಶಿಷ್ಯರಾದ ನಮ್ಮನ್ನು ವಿಶಿಷ್ಟಫಲಪ್ರಾಪ್ತಿಗಾಗಿ ಪುನಃ ಪರಿಪಾತಿ=ಮತ್ತೆ ಮತ್ತೆ ರಕ್ಷಿಸುವಿ.

**ಭಾಗವತ ತಾತ್ಪರ್ಯ -**

ಈ ಶ್ಲೋಕಕ್ಕೆ ಅನ್ವಯವನ್ನು ತಿಳಿಸುತ್ತ ಆಚಾರ್ಯರು ವ್ಯಾಖ್ಯಾನಿಸುವರು -

**ತವ ಪಾದಮೂಲಂ ಭಜತ ಆಚಾರ್ಯಸ್ಯ ಆಶಿಷ್ಟಯಃ ಶಿಕ್ಷಾಃ ಸತ್ಯಾಶೀಃಪ್ರದಾ ಏವ । ತಥಾಽಪಿ ಅಸ್ಮಾನ್ ಶಿಷ್ಯಾನ್ ವಿಶಿಷ್ಟ ಫಲಪ್ರಾಪ್ತಯೇ ಪುನಃ ಪರಿಪಾತಿ ಭವಾನ್ ।**

ನಿನ್ನ ಪಾದತಲವನ್ನು ಸೇವಿಸುವ ನಾರದಾದಿಗಳ ಅನುಗ್ರಹಪೂರ್ವಕ ಉಪದೇಶಗಳು ಶುಭ ಇಷ್ಟಾರ್ಥಗಳನ್ನು ಕೊಟ್ಟೇ ಕೊಡುವವು. ಆದರೂ ಉತ್ತಮವಾದ ಫಲ ಕೊಡುವದಕ್ಕಾಗಿ ಶಿಷ್ಯರಾದ ನಮ್ಮನ್ನು ಕಾಪಾಡುವಿ ಎಂದು ಭಾವ. ॥೧೭॥

**ಮೈತ್ರೇಯ ಉವಾಚ -**

**ಅಥಾಭಿಷ್ಟುತ ಏವಂ ವೈ ಸತ್ಸಂಕಲ್ಪೇನ ಧೀಮತಾ ।**
**ಭೃತ್ಯಾನುರಕ್ತೋ ಭಗವಾನ್ ಪ್ರತಿನಂದ್ಯೇದಮಬ್ರವೀತ್ ॥೧೮॥**

ಸತ್ಸಂಕಲ್ಪೇನ=ಉತ್ತಮವಾದ ಇಚ್ಛೆಯುಳ್ಳ ಧೀಮತಾ=ಬುದ್ಧಿವಂತನಾದ ಧ್ರುವನಿಂದ ಏವಂ=ಈ ರೀತಿಯಾಗಿ ಅಭಿಷ್ಟುತಃ=ಸ್ತುತಿಸಲ್ಪಟ್ಟ ಭಗವಾನ್=ಶ್ರೀಹರಿಯು ಅಥ=ಸ್ತುತಿಯನ್ನು ಕೇಳಿದ ನಂತರ ಭೃತ್ಯಾನುರಕ್ತಃ=ಶಿಷ್ಯನ ಮೇಲೆ ಪ್ರೀತನಾಗಿ ಪ್ರತಿನದ್ಯ=ಶ್ಲಾಘನೆ ಮಾಡಿ ಇದಂ=ಮುಂದೆ ಹೇಳುವ ಮಾತನ್ನು ಅಬ್ರವೀತ್=ಹೇಳಿದನು. ॥೧೮॥

**ಶ್ರೀಭಗವಾನುವಾಚ -**

**ವೇದಾಹಂ ತೇ ವ್ಯವಸಿತಂ ಹೃದಿ ರಾಜನ್ಯಬಾಲಕ ।**
**ತತ್ಪ್ರಯಚ್ಛಾಮಿ ಭದ್ರಂ ತೇ ದುರಾಪಮಪಿ ಭೂಯಸಾಮ್ ॥೧೯॥**

ಹೇ ರಾಜನ್ಯಬಾಲಕ=ಎಲೋ ಕ್ಷತ್ರಿಯಕುವರನಾದ ಧ್ರುವನೇ ! ತೇ=ನಿನ್ನ ಹೃದಿ=ಮನಸ್ಸಿನಲ್ಲಿ ವ್ಯವಸಿತಂ=ಸಂಕಲ್ಪಿತವಾದುದನ್ನು ಅಹಂ ವೇದ=ನಾನು ಬಲ್ಲೆನು. ಭೂಯಸಾಂ ಅಪಿ=ಯೋಗಿಗಳಿಗೂ ಸಹ ದುರಾಪಂ=ಹೊಂದಲಾಗದ ತತ್=ಆ ಸ್ಥಾನವನ್ನು ಪ್ರಯಚ್ಛಾಮಿ=ಕೊಡುವೆನು. ತೇ=ನಿನಗೆ ಭದ್ರಂ ಅಸ್ತು=ಕಲ್ಯಾಣವಾಗಲಿ.

◆ 'ಭೂಯಸಾಂ ದುರಾಪಂ' ಎಂಬುದಕ್ಕೆ ಧ್ರುವನಿಗಿಂತ ಚಿಕ್ಕವರಾದ ಯೋಗಿಗಳಿಗೆ ಅಸಾಧ್ಯವಾದದ್ದು ಎಂದು ಭಾವ. ॥೧೯॥

**ನಾನ್ಯೈರಧಿಷ್ಠಿತಂ ಭದ್ರ ಯದ್‌ಭ್ರಾಜಿಷ್ಣು ಧ್ರುವಕ್ಷಿತಿ ।**
**ಯತ್ರ ಗ್ರಹರ್ಕ್ಷತಾರಾಣಾಂ ಜ್ಯೋತಿಷಾಂ ಚಕ್ರಮಾಹಿತಮ್ ।**
**ಮೇಢ್ಯಾಂ ಗೋಚಕ್ರವತ್ ಸ್ಥಾಸ್ನು °ಉದಸ್ತಾತ್ಕಲ್ಪವಾಸಿನಾಮ್ ॥೨೦॥**

ಹೇ ಭದ್ರ=ಮಂಗಲಸ್ವರೂಪನೇ ! ಯತ್=ಯಾವುದು ಅನ್ಯೈಃ=ಬೇರೆಯವರಿಂದ ನ ಅಧಿಷ್ಠಿತಂ=ಅಲಂಕರಿಸಲ್ಪಡದಿರುವ (ಹೊಂದಲ್ಪಡದಿರುವ, ಮತ್ತೊಬ್ಬರಿಗೆ ಕೂಡದಿರುವ), ಭ್ರಾಜಿಷ್ಣು=ಪ್ರಕಾಶಮಾನವಾದ, ಧ್ರುವಕ್ಷಿತಿ=ಸ್ಥಿರವಾಗಿ ವಾಸಮಾಡಲು ಯೋಗ್ಯವಾದ ಮತ್ತು ಯತ್ರ=ಎಲ್ಲಿ ಗ್ರಹರ್ಕ್ಷತಾರಾಣಾಂ ಜ್ಯೋತಿಷಾಂ=ಸೂರ್ಯ ಮೊದಲಾದ ಒಂಭತ್ತು ಗ್ರಹಗಳು, ಅಶ್ವಿನೀ ಮುಂತಾದ ಇಪ್ಪತ್ತೇಳು ನಕ್ಷತ್ರಗಳು, ಮಿಕ್ಕ ತಾರೆಗಳು ಪ್ರಕಾಶರೂಪಗಳಾದ ಇವುಗಳ ಚಕ್ರಂ=ಸಮೂಹವು ಆಹಿತಂ=ಸಮರ್ಪಿತವಾಗಿದೆಯೋ ಅಂತಹ,

ಮೇಢ್ಯಾಂ=ಮೇಟಿಕುಂಬದಲ್ಲಿ (ಧಾನ್ಯಗಳನ್ನು ತುಳಿಯಲು ಎತ್ತುಗಳನ್ನು ಕಟ್ಟುವ ಕಂಭಕ್ಕೆ ಕನ್ನಡದಲ್ಲಿ ಮೇಟಿಕುಂಬ, ಸಂಸ್ಕೃತದಲ್ಲಿ ಮೇಢೀ ಎನ್ನುತ್ತಾರೆ.) ಗೋಚಕ್ರವತ್=ಎತ್ತುಗಳ ಸಮೂಹದಂತೆ ಆಹಿತಂ=ಸಮರ್ಪಿತವಾದ, ಕಲ್ಪವಾಸಿನಾಂ=ಮನ್ವಂತರಕಲ್ಪದಲ್ಲಿ ಇರುವವರ ★ಉದಸ್ತಾತ್=ಅನಂತರದಲ್ಲಿಯೂ ಸಹ ಸ್ಥಾಸ್ನು=ಸ್ಥಿರವಾಗಿರುವ, ಅಂದರೆ ಮನ್ವಂತರ ಪ್ರಳಯದಲ್ಲಿಯೂ ನಾಶವಾಗದಿರುವ ಎಂದರ್ಥ. (ಅನ್ವಯವು ಮುಂದುವರೆಯುತ್ತದೆ)

**ಪಾಠಾಂತರ - ಅರ್ಥಾಂತರ**

★ಪುರಸ್ತಾತ್ ಎಂಬ ಪಾಠವಿದ್ದಾಗ ಮುಂದಿನ ಮುಂದಿನ ಮನುಕಲ್ಪದಲ್ಲಿರುವವರಿಗಿಂತ ಮೊದಲಿಗಿರುವ ಅರ್ಥಾತ್ ಮನುಪ್ರಲಯಕಾಲದಲ್ಲಿರುವ ಎಂದರ್ಥ. ಮನ್ವಂತರಪ್ರಳಯ-ದಲ್ಲಿ ಲೋಕತ್ರಯಗಳು ನಾಶವಾದರೂ ನಾಶವಾಗದಿರುವ ಎಂದರ್ಥ ಮಾಡಬೇಕು.

**ಧರ್ಮೋಽಗ್ನಿಃ ಕಶ್ಯಪಃ ಶಕ್ರೋ ಮುನಯೋ ಯೇ ವನೌಕಸಃ ।**
**ಚರಂತಿ ದಕ್ಷಿಣೀಕೃತ್ಯ ಭ್ರಮಂತೋ ವತ್ಸತಾರಕಾಃ ॥೨೧॥**

ಮತ್ತು ಯತ್=ಯಾವ ಶಿಂಶುಮಾರ ಚಕ್ರವನ್ನು ಮುನಯಃ=ಸಪ್ತಋಷಿಗಳು, ವನೌಕಸಾಃ=ವಾನಪ್ರಸ್ಥರಾದ ಬೇರೆ ಋಷಿಗಳು, ಧರ್ಮಃ ಅಗ್ನಿಃ ಕಶ್ಯಪಃ ಶಕ್ರಃ=ಧರ್ಮ ಅಗ್ನಿ ಕಶ್ಯಪ ಇಂದ್ರ ಮುಂತಾದವರು ವತ್ಸತಾರಕಾಃ ಸಂತಃ=ನಕ್ಷತ್ರದೇವತೆಗಳಾಗಿ ದಕ್ಷಿಣೀಕೃತ್ಯ=ಪ್ರದಿಕ್ಷಿಣೆ ಮಾಡುತ್ತ ಭ್ರಮಂತಃ=ತಿರುಗುತ್ತ ಚರಂತಿ=ಸಂಚರಿಸುವರೋ ತತ್=ಅಂತಹ ಶಿಂಶುಮಾರನ ಸನ್ನಿಧಾನ ಉಳ್ಳ ಸ್ಥಾನವನ್ನು ಪ್ರಯಚ್ಛಾಮಿ=ಕೊಡುತ್ತೇನೆ. ॥೨೧॥

ಐಹಿಕರಾಜ್ಯಪ್ರಾಪ್ತಿಯೂ ಆಗುವದು ಎಂದು ಹೇಳುವನು -

**ಪ್ರಸ್ಥಿತೇ ತು ವನಂ ಪಿತ್ರಾ ದತ್ತ್ವಾಂ ಗಾಂ ಧರ್ಮಸಂಶ್ರಯಃ ।**
**ಷಟ್ತ್ರಿಂಶದ್ವರ್ಷಸಾಹಸ್ರಂ ರಕ್ಷಿತಾಽವ್ಯಾಹತೇಂದ್ರಿಯಃ ॥೨೨॥**

ಗಾಂ ದತ್ವಾ=ನಿನಗೆ ಭೂಮಿಯನ್ನು ಕೊಟ್ಟು ಪಿತ್ರಾ=ತಂದೆಯಾದ ಉತ್ತಾನಪಾದನಿಂದ ವನಂ ಪ್ರತಿ=ವನವನ್ನು ಕುರಿತು ಪ್ರಸ್ಥಿತೇ ತು=ಹೊರಡಲ್ಪಡುತ್ತಿರಲು, ಧರ್ಮಸಂಶ್ರಯಃ=ರಾಜಧರ್ಮವನ್ನು ಆಶ್ರಯಿಸಿದವನಾಗಿ ಅವ್ಯಾಹತೇಂದ್ರಿಯಃ=ವಿರುದ್ಧ ವಿಷಯಗಳನ್ನು ಸೇವಿಸದಿರುವ ಇಂದ್ರಿಯವುಳ್ಳವನಾಗಿ (ವಿಷಯಾಸಕ್ತನಾಗದೇ) ಷಟ್ತ್ರಿಂಶದ್ವರ್ಷಸಾಹಸ್ರಂ=ಮೂವತ್ತಾರುಸಾವಿರ ವರ್ಷಗಳವರೆಗೆ ರಕ್ಷಿತಾ (ರಕ್ಷಿಷ್ಯತಿ)=ರಾಜ್ಯವನ್ನು ಪಾಲಿಸುವಿ.

ನನ್ನ ತಮ್ಮನಾದ ಉತ್ತಮನಿಗೆ ರಾಜ್ಯ ಕೊಡಿಸಲು ಸುರುಚಿ ಇರುವಾಗ ನನಗೆ ಹೇಗೆ ರಾಜ್ಯಪ್ರಾಪ್ತಿಯಾದೀತು ? ಎಂದರೆ ಹೇಳುವನು -

**ತ್ವದ್ಭ್ರಾತರ್ಯುತ್ತಮೇ ನಷ್ಟೇ ಮೃಗಯಾಯಾಂ ತು ತನ್ಮನಾಃ ।**
**ಅನ್ವೇಷತೀ ವನಂ ಮಾತಾ ದಾವಾಗ್ನಿಂ ಸಾ ಪ್ರವೇಕ್ಷ್ಯತಿ ॥೨೩॥**

ತ್ವದ್ಭ್ರಾತರಿ ಉತ್ತಮೇ=ನಿನ್ನ ತಮ್ಮನಾದ ಉತ್ತಮನು ಮೃಗಯಾಯಾಂ=ಬೇಟೆಗೆ ಹೋದಾಗ ನಷ್ಟೇ=ಮೃತನಾಗುತ್ತಿರಲು, ತನ್ಮನಾಃ=ಅವನಲ್ಲೇ ಮನಸಿಟ್ಟ ಸಾ ಮಾತಾ=ಅವನ ತಾಯಿಯಾದ ಸುರುಚಿಯು ವನಂ ಅನ್ವೇಷತೀ=ಅಡವಿಯಲ್ಲಿ ಹುಡುಕುತ್ತ ದಾವಾಗ್ನಿಂ ಪ್ರವೇಕ್ಷ್ಯತಿ=ಕಾಡ್ಗಿಚ್ಚನ್ನು ಪ್ರವೇಶಿಸುವಳು. ॥೨೩॥

**ಇಷ್ಟ್ವಾ ಮಾಂ ಯಜ್ಞಹೃದಯಂ ಯಜ್ಞೈಃ ಪುಷ್ಕಲದಕ್ಷಿಣೈಃ ।**
**ಭುಕ್ತ್ವಾ ಚೇಹಾಶಿಷಃ ಸತ್ಯಾ ಅಂತೇ ಮಾಽನುಸ್ಮರಿಷ್ಯಸಿ ॥೨೪ ॥**

ಯಜ್ಞಹೃದಯಂ=ಯಜ್ಞಪ್ರಿಯನಾದ ಮಾಂ=ನನ್ನನ್ನು ಪುಷ್ಕಲದಕ್ಷಿಣೈಃ=ಬಹುದಕ್ಷಿಣೆಯುಳ್ಳ ಯಜ್ಞೈಃ=ಯಜ್ಞಗಳಿಂದ ಇಷ್ಟ್ವಾ=ಪೂಜಿಸಿ ಇಹ=ಭೂಲೋಕದಲ್ಲಿ ಸತ್ಯಾ=ಹೆಂಡತಿಯಿಂದ ಆಶಿಷಃ=ಶುಭಕಾಮನೆಗಳನ್ನು ಭುಕ್ತ್ವಾ=ಅನುಭವಿಸಿ ಅಂತೇ=ಕೊನೆಗೆ ಮಾ=ನನ್ನನ್ನು ಅನುಸ್ಮರಿಷ್ಯಸಿ=ನಿರಂತರ ಸ್ಮರಣ ಮಾಡುವಿ. ॥೨೪ ॥

**ತತೋ ಗಂತಾಽಸಿ ಮತ್ಸ್ಥಾನಂ ಸರ್ವಲೋಕನಮಸ್ಕೃತಮ್ ।**
**ಉಪರಿಷ್ಟಾದೃಷಿಭ್ಯಸ್ತ್ವಂ ಯತೋ ನಾವರ್ತತೇ ಯತಿಃ ॥ ೨೫ ॥**

ತತಃ=ನನ್ನ ನಿರಂತರ ಸ್ಮರಣದಿಂದ ತ್ವಂ=ನೀನು ಸರ್ವಲೋಕನಮಸ್ಕೃತಂ=ಎಲ್ಲ ಜನರಿಂದ ನಮಸ್ಕರಿಸಲ್ಪಟ್ಟ ಯತಃ=ಯಾವ ಸ್ಥಾನದಿಂದ ಯತಿಃ=ತನ್ನ ಧರ್ಮಾನುಷ್ಠಾನದಿಂದ ಆ ಲೋಕವನ್ನು ಪಡೆದವನು ನ ಆವರ್ತತೇ=ಪುನಃ ಸಂಸಾರಕ್ಕೆ ಬರುವದಿಲ್ಲವೋ ಅಂತಹ, ಋಷಿಭ್ಯಃ ಉಪರಿಷ್ಟಾತ್=ಸಪ್ತಋಷಿಮಂಡಲಕ್ಕಿಂತ ಮೇಲಿರುವ, ಮತ್‌ಸ್ಥಾನಂ=ಪೂರ್ವದಲ್ಲಿ ಕೊಡಲ್ಪಟ್ಟ ಧ್ರುವಲೋಕವನ್ನು ಗಂತಾಽಸಿ=ಹೊಂದುವಿ. ॥೨೫॥

**ಮೈತ್ರೇಯ ಉವಾಚ –**

**ಇತ್ಯರ್ಚಿತಃ ಸ ಭಗವಾನತಿಸೃಜ್ಯಾತ್ಮನಃ ಪದಮ್ ।**
**ಬಾಲಸ್ಯ ಪಶ್ಯತೋ ಧಾಮ ಜಗಾಮ ಗರುಡಧ್ವಜಃ ॥೨೬॥**

ಇತಿ=ಈ ರೀತಿಯಾಗಿ ಅರ್ಚಿತಃ=ಪೂಜಿತನಾದ ಸಃ ಭಗವಾನ್=ಪ್ರಸಿದ್ಧನಾದ ಶ್ರೀಹರಿಯು ಆತ್ಮನಃ ಪದಂ=ತನ್ನ ಸ್ಥಾನವನ್ನು ಅತಿಸೃಜ್ಯ=ಕೊಟ್ಟು ಬಾಲಸ್ಯ ಪಶ್ಯತಃ=ಕುಮಾರನು ನೋಡುತ್ತಿರುವಾಗಲೇ ಗರುಡಧ್ವಜಃ=ಪರಮಾತ್ಮನು ಧಾಮ=ತನ್ನ ಸ್ಥಾನಕ್ಕೆ ಜಗಾಮ=ತೆರಳಿದನು. ॥೨೬॥

**ಸೋಽಪಿ ಸಂಕಲ್ಪಜಂ ವಿಷ್ಣೋಃ ಪಾದಸೇವೋಪಸಾದಿತಮ್ ।**
**ಪ್ರಾಪ್ಯ ಸಂಕಲ್ಪನಿರ್ವಾಣಂ ನಾತಿಪ್ರೀತೋಽಭ್ಯಗಾತ್ ಪುರಮ್ ॥೨೭॥**

ಸಃ ಅಪಿ=ಆ ಧ್ರುವನಾದರೂ ವಿಷ್ಣೋಃ ಸಂಕಲ್ಪಜಂ=ಶ್ರೀಹರಿಯ ಸಂಕಲ್ಪದಿಂದುಟಾದ ವಿಷ್ಣೋಃ ಪಾದಸೇವೋಪಸಾದಿತಂ=ಶ್ರೀಹರಿಯ ಪಾದಸೇವೆಯಿಂದ ಪ್ರಾಪ್ತವಾದ ಸಂಕಲ್ಪನಿರ್ವಾಣಂ=ತನ್ನ ಪ್ರತಿಜ್ಞೆಯ ಫಲವನ್ನು ಪ್ರಾಪ್ಯ=ಹೊಂದಿ ನಾತಿಪ್ರೀತಃ=ಬಹಳ ಸಂತೋಷಪಡದೇ ಪುರಂ ಅಭ್ಯಗಾತ್=ತನ್ನ ಪಟ್ಟಣಕ್ಕೆ ಹೋದನು. ॥೨೭॥

ವಿದುರನು ಮುಕ್ತಿಯನ್ನು ಬಿಟ್ಟು ಇತರ ಪುರುಷಾರ್ಥಗಳಲ್ಲಿ ವಿರಕ್ತನಾಗಿರಬೇಕು ಎಂಬುದನ್ನು ತಾನು ತಿಳಿದಿದ್ದರೂ ಸಹ ಅದನ್ನು ಜನರಿಗೆ ತಿಳಿಸಲು ಪ್ರಶ್ನಿಸುವನು -

**ವಿದುರ ಉವಾಚ -**

**ಸುದುರ್ಲಭಂ ಯತ್ಪರಮಂ ಪದಂ ಹರೇ-**
**ರ್ಮಾಯಾವಿನಸ್ತಚ್ಚರಣಾರ್ಚನಾರ್ಜಿತಮ್ ।**
**ಲಬ್ಧ್ವಾಽಪ್ಯಸಿದ್ಧಾರ್ಥಮಿವೈಕಜನ್ಮನಾ**
**ಕಥಂ ಸ್ವಮಾತ್ಮಾನಮಮನ್ಯತಾರ್ಥವಿತ್ ॥೨೮॥**

ಮಾಯಾವಿನಃ=ಸರ್ವಜ್ಞನಾದ ಅಥವಾ ಭಕ್ತಾಭೀಷ್ಟಫಲ ಕೊಡುವ ಸಾಮರ್ಥ್ಯವುಳ್ಳ ಹರೇಃ=ಶ್ರೀಹರಿಯ ಯತ್=ಯಾವ ಸುದುರ್ಲಭಂ=ಅನ್ಯರಿಂದ ಪಡೆಯಲಸಾಧ್ಯವಾದದ್ದೋ, ಆದರೂ ತಚ್ಚರಣಾರ್ಚನಾರ್ಜಿತಂ=ಅವನ ಪಾದಸೇವೆಯಿಂದ ಪಡೆದಂತಹ ತತ್=ಆ ಪರಮಂ ಪದಂ=ಧ್ರುವಲೋಕವು ಏಕಜನ್ಮನಾ=ಒಂದೇ ಜನ್ಮದಿಂದ ಲಬ್ಧಮಪಿ= ಪಡೆಯಲ್ಪಟ್ಟಿದ್ದರೂ ಸಹ ಆತ್ಮಾನಂ=ತನ್ನನ್ನು ಅರ್ಥವಿತ್=ಆ ಆ ಕಾಲೋಚಿತಪ್ರಯೋಜನ- ಜ್ಞಾನವುಳ್ಳ ಧ್ರುವನು ಸ್ವಂ=ತನ್ನನ್ನು ಅಸಿದ್ಧಾರ್ಥಂ ಇವ=ಪ್ರಯೋಜನವನ್ನು ಪಡೆಯದಿರುವವನಂತೆ ಕಥಂ=ಹೇಗೆ ಅಮನ್ಯತ=ತಿಳಿದನು ?

'ನಾತಿಪ್ರೀತಃ' ಎಂದು ಹೇಳಿದ್ದರಿಂದ ಈ ರೀತಿ ಪ್ರಶ್ನೆ ಮಾಡಿದನು ಎಂದು ಭಾವ.

ಜ್ಞಾನಿಗಳಿಗೂ ಸಾಂಸಾರಿಕ ನಿರ್ಬಂಧ ಬಿಡಲಾಗದೆಂದು ಅವನ ಶಂಕೆಯನ್ನು ಪರಿಹರಿಸುವನು

**ಮೈತ್ರೇಯ ಉವಾಚ -**

**ಮಾತುಃ ಸಪತ್ನ್ಯಾ ವಾಗ್ಬಾಣೈರ್ಹೃದಿ ವಿದ್ಧಸ್ತು ತಾನ್ ಸ್ಮರನ್ ।**
**ನೈಚ್ಛನ್ಮುಕ್ತಿಪತೇರ್ಮುಕ್ತಿಂ ತಸ್ಮಾತ್ತಾಪಮುಪೇಯಿವಾನ್ ॥೨೯॥**

ಸಪತ್ನ್ಯಾಃ ಮಾತುಃ=ಮಲತಾಯಿಯ ವಾಗ್ಬಾಣೈಃ=ಬಿರುಸುನುಡಿಗಳಿಂದ ಹೃದಿ ವಿದ್ಧಃ= ಮನಸ್ಸಿನಲ್ಲಿ ಗ್ಲಾನಿ ಹೊಂದಿದವನಾಗಿ ತಾನ್ ಸ್ಮರನ್=ಆ ಮಾತುಗಳನ್ನು ಸ್ಮರಿಸಿಕೊಳ್ಳುವವನಾಗಿ ಐಚ್ಛತ್=ರಾಜ್ಯ ಬೇಕೆಂದು ಬೇಡಿದನು. ಹೊರತು ಮುಕ್ತಿಪತೇಃ=ಮುಕ್ತಿಗೆ ಒಡೆಯನಾದ (ಮುಕ್ತಿಯನ್ನೇ ನೀಡುವ) ಶ್ರೀಹರಿಯಿಂದ ಮುಕ್ತಿಂ=ಮೋಕ್ಷವನ್ನು ನ ಐಚ್ಛತ್=ಇಚ್ಛಿಸಲಿಲ್ಲ ತಸ್ಮಾತ್=ಆ ಕಾರಣದಿಂದ ತಾಪಂ ಉಪೇಯಿವಾನ್=ಸಂತಾಪಗೊಂಡನು. ।।೨೯।।

ಪಶ್ಚಾತ್ತಾಪವನ್ನೇ ವಿವರಿಸುವರು -

**ಧ್ರುವ ಉವಾಚ -**

**ಸಮಾಧಿನಾऽನೇಕಭವೇನ ಯತ್ಪದಂ**
**ವಿದುಃ ಸನಂದಾದಯ ಊರ್ಧ್ವರೇತಸಃ ।**
**ಮಾಸೈರಹಂ ಷಡ್ಭಿರಮುಷ್ಯ ಪಾದಯೋ-**
**ಶ್ಛಾಯಾಮುಪೇತ್ಯಾಪಹತಃ ಪೃಥಙ್ಮತಿಃ ।।೩೦।।**

ಊರ್ಧ್ವರೇತಸಃ=ಸನ್ಯಾಸಿಗಳಾದ ಸನಂದಾದಯಃ=ಸನಂದ ಮೊದಲಾದವರು ಅನೇಕಭವೇನ=ಅನೇಕ ಜನ್ಮಗಳಲ್ಲಿ ಅಭ್ಯಾಸ ಮಾಡಲ್ಪಟ್ಟ ಸಮಾಧಿನಾ=ಏಕಾಗ್ರವಾದ ಧ್ಯಾನದಿಂದ ಯತ್ಪದಂ=ಯಾವನ ಸ್ವರೂಪವನ್ನು ವಿದುಃ=ತಿಳಿದರೋ ಅಮುಷ್ಯ=ಅಂತಹ ಶ್ರೀಹರಿಯ ಪಾದಯೋಃ ಛಾಯಾಂ=ಪಾದಾರವಿಂದಗಳ ಆಶ್ರಯವನ್ನು ಅಹಂ=ನಾನು ಷಡ್ಭಿಃ ಮಾಸೈಃ=ಅರ್ಧಸಹಿತ ಆರು ತಿಂಗಳಲ್ಲಿ (ಆರೂವರೆ ತಿಂಗಳಲ್ಲಿ) ಉಪೇತ್ಯಾಪಿ= ಹೊಂದಿಯೂ ಸಹ ಪೃಥಜಮತಿಃ=ಇತರ ವಿಷಯಾಸಕ್ತಬುದ್ಧಿಯುಳ್ಳವನಾಗಿ ಅಪಹತಃ= ವಂಚಿತನಾದೆನು. ಶ್ರೀಹರಿಯು ಕರೆದೊಯ್ಯಲಿಲ್ಲ (ಕೆಳಗೆ ಬಿದ್ದನು) ಪುನಃ ಸಂಸಾರದಲ್ಲೇ ಉಳಿದನು ಎಂದು ಭಾವ. ।।೩೦।।

**ಅಹೋ ಬತ ಮಮಾನಾತ್ಮ್ಯಂ ಮಂದಭಾಗ್ಯಸ್ಯ ಪಶ್ಯತ ।**
**ಭವಚ್ಛಿದಃ ಪಾದಮೂಲಂ ಗತ್ವಾ ಯಾಚೇ ತದಂತವತ್ ।।೩೧ ।।**

ಮಂದಭಾಗ್ಯಸ್ಯ=ಅಲ್ಪಭಾಗ್ಯವುಳ್ಳ ಮಮ=ನನ್ನ ಅನಾತ್ಮ್ಯಂ=ದಡ್ಡತನವನ್ನು ಪಶ್ಯತ= ನೋಡಿರಿ ! ಯಾಕೆ ? ಭವಚ್ಛಿದಃ=ಸಂಸಾರವನ್ನು ಕತ್ತರಿಸುವ ಶ್ರೀಹರಿಯ ಪಾದಮೂಲಂ ಗತ್ವಾ=ಪಾದತಲವನ್ನು ಹೊಂದಿ ಅಂತವತ್=ನಶ್ವರವಾದ ಸ್ಥಾನವನ್ನು ಯಾಚೇ=ಬೇಡಿದೆನು. ಅಹೋ ಬತ=ಆಶ್ಚರ್ಯವು ಖೇದವು.

**ಭಾಗವತ ತಾತ್ಪರ್ಯ :-**

ಈ ಶ್ಲೋಕದಲ್ಲಿ ಧ್ರುವಲೋಕವು ನಶ್ವರವೆಂದು ಹೇಳಿದ್ದು 'ಯತೋ ನಾವರ್ತತೇ ಯತಿಃ' ಎಂಬ ಹಿಂದಿನ ಮಾತಿಗೆ ವಿರುದ್ಧವಾಗುವದು. ಅಲ್ಲಿ ಧ್ರುವಲೋಕಕ್ಕೆ ಹೋದವರು ತಿರುಗಿಬರಲಾರರು ಎಂದು ಹೇಳಿದೆ. ಅದರಿಂದ ಆ ಸ್ಥಾನವು ಅಕ್ಷಯವೆಂದು ತಿಳಿಯುವುದು. ಆದರೆ ಈಗ ಧ್ರುವಲೋಕವು ನಶ್ವರವೆಂದು ಹೇಳಿದರೆ ವಿರೋಧ ಬರುವುದಲ್ಲ ? ಎಂದರೆ, ಅದರ ಪರಿಹಾರಕ್ಕಾಗಿ ವಿವಕ್ಷಿತ ತಾತ್ಪರ್ಯವನ್ನು ಪ್ರಮಾಣದಿಂದಲೇ ತಿಳಿಸುವರು -

**ಆಧಿಪತ್ಯಮನಿತ್ಯಂ ತು ಧ್ರುವಲೋಕಸ್ಯ ಯದ್‌ಧ್ರುವೇ ।**
**ನ ತು ತತ್ಸ್ಥಾನಗಂತೄಣಾಂ ಯತೀನಾಂ ಗತಿರುತ್ತಮಾ ।।**

**ತಸ್ಯಾಪಿ ಮುಕ್ತಿರ್ನಿಯತಾ ನಿಯತಂ ಚಾಪಿ ತತ್ಪದಂ ।**
**ತಥಾಪಿ ಕಾಮನಾನಿಂದಾ ಧ್ರುವೇಣ ಸುಕೃತಾ ಬತ ।। ಇತಿ ಭವಿಷ್ಯತ್ಪರ್ವಣಿ ।।**

ಧ್ರುವನಿಗೆ ಧ್ರುವಲೋಕದ ಆಧಿಪತ್ಯವೇನಿದೆಯೋ ಅದು ಮಾತ್ರ ಅನಿತ್ಯವು. ಆ ಸ್ಥಾನಕ್ಕೆ ಹೋಗುವ ಯತಿಗಳಿಗೆ ಆ ಧ್ರುವಲೋಕಾಧಿಪತ್ಯವು ಇಲ್ಲವೇ ಇಲ್ಲ. ಕಿಂತು ಪುನರಾವೃತ್ತಿಯಿಲ್ಲದ ಸ್ಥಿರವಾದ ಸ್ಥಿತಿಯು ಅವರಿಗಿದೆ. ಹಾಗಾಗಿ 'ಅಂತವತ್' ಎಂಬ ಮಾತು ಧ್ರುವನ ಆಧಿಪತ್ಯಕ್ಕೆ ಸಂಬಂಧಿಸಿದ್ದು. 'ಯತೋ ನಾವರ್ತತೇ ಯತಿಃ' ಎಂಬ ಮಾತು ಆ ಸ್ಥಾನಕ್ಕೆ ಹೋಗುವ ಯತಿಗಳ ಸ್ಥಿತಿವಿಷಯಕವಾಗಿದೆ. ಆ ಕಾರಣ ವಿರೋಧವಿಲ್ಲವೆಂದು ಭಾವ.

ಧ್ರುವನಿಗೂ ಮೋಕ್ಷವು ನಿಯತವೇ. ಆ ಸ್ಥಾನವೂ ಅವನಿಗೆ ನಿಶ್ಚಿತವೇ. ಆದಕಾರಣ ಶ್ರೀಹರಿ ಅದನ್ನು ಕೊಟ್ಟಿರುವನು. ಆ ಸ್ಥಾನ ತನಗೆ ನಿಯತವಾಗಿದ್ದರೂ ಕಾಮನಾನಿಂದೆಯು ಧ್ರುವನಿಂದ ಚೆನ್ನಾಗಿ ಮಾಡಲ್ಪಟ್ಟಿದೆ. (ಅಧಿಕಾರಿಗಳಿಗೆ ಸ್ವಾಧಿಕಾರಕಾಮನೆಯು ಹರಿಪ್ರೀತಿಕರವಾಗಿದ್ದರೂ, ತನಗೆ ನಿಯತವಾಗಿದ್ದರೂ ಮೋಕ್ಷೇಚ್ಛುಗಳು ವಿಷಯಕಾಮನೆ-ಯನ್ನು ಸರ್ವಥಾ ಮಾಡಬಾರದು ಎಂದು ಲೋಕಶಿಕ್ಷಣಕ್ಕಾಗಿ ನಿಂದೆ ಮಾಡಿರುವನು. ಅದು ಅವನ ಕ್ಷುಲ್ಲತೆಯನ್ನು ತಿಳಿಸುವದು ಎಂದು ಭಾವ.)

ಧ್ರುವಲೋಕಕ್ಕೆ ತೆರಳಿದ ಯತಿಗಳು ಹಾಗೆಯೇ ಮುಂದೆ ಮೋಕ್ಷಕ್ಕೆ ಹೋಗುವರು. ಕಾರಣ ಅವರಿಗೆ ಅಪುನರಾವೃತ್ತಿ. ಈ ವಿಧ ಅಪುನರಾವೃತ್ತಿ ಧ್ರುವನಿಗೂ ಇದೆ. ಆಧಿಪತ್ಯ ಮಾತ್ರ ಅನಿತ್ಯ. ಅಧಿಕಾರಿಗೆ ಪದದ ಇಚ್ಛೆಯೂ ದೋಷವಲ್ಲ. ಧ್ರುವಲೋಕ ಅನಿತ್ಯವೇ. ಮಹಾಪ್ರಳಯದಲ್ಲಿ ನಾಶವಾಗುವದು ಎಂದು ತಿಳಿಯಬೇಕು. ।।೩೧।।

ನಾರದರಿಂದ ತಿಳುವಳಿಕೆಯನ್ನು ಪಡೆದ ನಿನಗೆ ಜಾಡ್ಯ ಹೇಗೆ ಬಂತು ? ಎಂದರೆ ಹೇಳುವನು -

**ಮತಿರ್ವಿದೂಷಿತಾ ದೇವೈರ್ಯತದ್ಭಿರಸಹಿಷ್ಣುಭಿಃ ।**
**ಯೋ ನಾರದವಚಸ್ತಥ್ಯಂ ನಾಗ್ರಹೀಷಮಸತ್ತಮಃ ॥೩೨॥**

ಯತದ್ಭಿಃ=ನನಗಿಂತ ಮೊದಲು ಮನ್ವಂತರಪ್ರಲಯದಲ್ಲಿಯೇ ಅವಿನಾಶಿಯಾದ ಪದಕ್ಕಾಗಿ ಪ್ರಯತ್ನಿಸುವ ದೇವೈಃ=ಬುದ್ಧಿಗೆ ಅಭಿಮಾನಿಗಳಾದ ದೇವತೆಗಳಿಂದ ಅಸಹಿಷ್ಣುಭಿಃ=ನಾನು ಶೀಘ್ರದಲ್ಲಿ ಮುಕ್ತಿ ಪಡೆಯುವದನ್ನು ಸಹಿಸದವರಿಂದ ಮತಿಃ=ಬುದ್ಧಿಯು ವಿದೂಷಿತಾ=ಕಲುಷಿತವಾಯಿತು. ಅಸತ್ತಮಃ ಯಃ=ತಿಳಿಗೇಡಿಯಾದ ಯಾವ ನಾನು ನಾರದವಚಸ್ತಥ್ಯಂ=''ಈ ಚಿಕ್ಕವಯಸ್ಸಿನಲ್ಲಿ ಅವಮಾನಾದಿಗಳೇನು ? ಶತ್ರು-ಮಿತ್ರರಿರುವದು ದುಃಖಜನಕವಲ್ಲ, ಇವನು ಸ್ವಾಭಾವಿಕ ಶತ್ರು-ಮಿತ್ರ ಎಂಬ ಭ್ರಮೆಯು ದುಃಖಕಾರಣ'' ಎಂಬ ನಾರದರ ಮಾತಿನ ಸತ್ಯತೆಯನ್ನು ನ ಅಗ್ರಹೀಷಂ= ತಿಳಿದುಕೊಳ್ಳಲಿಲ್ಲ. ॥೩೨॥

**ದೈವೀಂ ಮಾಯಾಮುಪಾಶ್ರಿತ್ಯ ಪ್ರಸುಪ್ತ ಇವ ಭಿನ್ನದೃಕ್ ।**
**ತಪ್ಯೇ ದ್ವಿತೀಯೇಽಪ್ಯಸತಿ ಭ್ರಾತೃಭ್ರಾತೃವ್ಯಹೃದ್ರುಜಾ ॥೩೩॥**

ದೈವೀಂ=ಪ್ರಕಾಶಮಾನನಾದ ಶ್ರೀಹರಿಯಲ್ಲಿರುವ ಮಾಯಾಂ=ಬಂಧಕಶಕ್ತಿಯನ್ನು ಉಪಾಶ್ರಿತ್ಯ=ಆಶ್ರಯಿಸಿ ಅಂದರೆ ಅದರ ಅಧೀನನಾಗಿ ಸುಪ್ತ ಇವ=ಕನಸು ಕಾಣುವವನಂತೆ ಭಿನ್ನಧೃಕ್=ವಸ್ತು ಇರುವದಕ್ಕಿಂತ ಬೇರೆಯಾಗಿಯೇ ತಿಳಿಯುವವನಾಗಿ ದ್ವಿತೀಯೇ ಅಸತ್ಯಪಿ=ಶ್ರೀಹರಿಯನ್ನು ಬಿಟ್ಟು ಮತ್ತೊಬ್ಬ ಸ್ವತಂತ್ರ ಇಲ್ಲದಿದ್ದರೂ ಸಹ ಭ್ರಾತೃಭ್ರಾತೃವ್ಯ-ಹೃದ್ರುಜಾ=ತಮ್ಮನಾದ ಉತ್ತಮನೇ ಸ್ವತಂತ್ರವಾಗಿ ಶತ್ರು ಎಂಬ ಭಾವನೆಯಿಂದುಂಟಾದ ಮನೋರೋಗದಿಂದ ತಪ್ಯೇ=ಸಂತಾಪಪಡುವೆನು.

**ಭಾಗವತ ತಾತ್ಪರ್ಯ :-**

ಇಲ್ಲಿ 'ದ್ವಿತೀಯೇ ಅಸತಿ' ಎಂಬುದಕ್ಕೆ ತನ್ನಿಂದ ಭಿನ್ನವಾದುದೆಲ್ಲ ಸುಳ್ಳು (ಮಿಥ್ಯೆ) ಎಂದು ಅಪಾರ್ಥ ತೋರುವದು. ಆ ಕಾರಣ ವಿವಕ್ಷಿತವಾದ ತಾತ್ಪರ್ಯವನ್ನು ಪ್ರಮಾಣದಿಂದಲೇ ತಿಳಿಸುವರು -

ದ್ವಿತೀಯಸ್ಯ ಸ್ವತಂತ್ರಸ್ಯ ತ್ವಭಾವಾದ್ದ್ವಯವರ್ಜಿತಃ ।
ಈಶ್ವರಶ್ಚೇಶಿತವ್ಯಸ್ಯ ಭಾವಾತ್ ಸಃ ಪರಮೇಶ್ವರಃ ॥ ಇತಿ ಹರಿವಂಶೇಷು ॥

ನಿಯಮ್ಯರಾದ ಬ್ರಹ್ಮಾದಿಗಳು ಇರುವುದರಿಂದ ಪರಮಾತ್ಮನು ಈಶ್ವರನೆಂದು ಕರೆಯಲ್ಪಡುವನು. ತನಗಿಂತ ಭಿನ್ನವಾದ ಸ್ವತಂತ್ರವಸ್ತು ಇಲ್ಲದಿರುವುದರಿಂದಲೇ ಎರಡನೇ ವಸ್ತು ಇಲ್ಲದವನೆನಿಸುತ್ತಾನೆ. (ಹೊರತು ಎರಡನೇ ವಸ್ತುವೇ ಇಲ್ಲದಿರುವುದರಿಂದ ಅಲ್ಲ)

ಬ್ರಹ್ಮಾದಿಗಳಿಗೂ ನಿಯಾಮಕನಾದ್ದರಿಂದ ಪರಮಾತ್ಮನು ಪರಮೇಶ್ವರನು ಎನಿಸಿಕೊಳ್ಳುತ್ತಾನೆ ಎಂದು ಹರಿವಂಶಗಳಲ್ಲಿ ಹೇಳಿದೆ. ।।೩೩।।

**ಮಯ್ಯೈತತ್ ಪ್ರಾರ್ಥಿತಂ ವ್ಯರ್ಥಂ ಚಿಕಿತ್ಸೇವ ಗತಾಯುಷಿ ।**
**ಪ್ರಸಾದ್ಯ ಜಗದಾತ್ಮಾನಂ ತಪಸಾ ದುಷ್ಪ್ರಸಾದನಮ್ ।।೩೪।।**

ದುಷ್ಪ್ರಸಾದನಂ=ಸುಲಭವಾಗಿ ಪ್ರಸನ್ನನಾಗದ ಜಗದಾತ್ಮನಂ=ವಿಶ್ವೇಶ್ವರನನ್ನು ತಪಸಾ=ತಪಸ್ಸಿನಿಂದ ಪ್ರಸಾದ್ಯ=ಸಂತೋಷಗೊಳಿಸಿ, ಮಯಾ=ನನ್ನಿಂದ ಪ್ರಾರ್ಥಿತಂ=ಕೇಳಲ್ಪಟ್ಟ ಏತತ್=ಈ ಆಧಿಪತ್ಯವು (ನಶ್ವರವಾದ್ದರಿಂದ) ಗತಾಯುಷಿ=ಆಯುಷ್ಯ ತೀರಿದವನಿಗೆ ಚಿಕಿತ್ಸಾ ಇವ=ಔಷಧಿಯನ್ನು ಕೊಟ್ಟಂತೆ ವ್ಯರ್ಥಂ=ನಿಷ್ಫಲವು. ।।೩೪।।

**ಭವಚ್ಛಿದಮಯಾಚೇಽಹಂ ಭವಂ ಭಾಗ್ಯವಿವರ್ಜಿತಃ ।**
**ತಾದಾತ್ಮ್ಯಂ ಯಚ್ಛತೋ ಮೌಢ್ಯಾನ್ಮನೋ ಮೇ ಭಿಕ್ಷಿತಂ ಬತ ।।**
**ಈಶ್ವರಾತ್ ಕ್ಷೀಣಪುಣ್ಯೇನ ಫುಲಕಾನಿವ ಚಾಧನಃ ।।೩೫।।**

ಭಾಗ್ಯವಿವರ್ಜಿತಃ=ಭಾಗ್ಯರಹಿತನಾದ ಅಹಂ=ನಾನು ಭವಚ್ಛಿದಂ=ಸಂಸಾರಮೋಚಕನಾದ ಭಗವಂತನನ್ನು ಕುರಿತು ಭವಂ ಅಯಾಚೇ=ಸಂಸಾರವನ್ನೇ ಬೇಡಿದೆನು.

ತಾದಾತ್ಮ್ಯಂ=ಏಕಾಗ್ರಚಿತ್ತರೂಪವಾದ ಮುಕ್ತಿಯನ್ನು ಯಚ್ಛತಃ=ಕೊಡಲು ಸಮರ್ಥನಾದ ಈಶ್ವರಾತ್=ಶ್ರೀಹರಿಯ ದೆಸೆಯಿಂದ ಕ್ಷೀಣಪುಣ್ಯೇನ=ಪುಣ್ಯರಹಿತನಾದ ಮೇ= ನನ್ನಿಂದ ಮೌಢ್ಯಾತ್=ಅಜ್ಞಾನದಿಂದಾಗಿ ಈಶ್ವರಾತ್=ಚಕ್ರವರ್ತಿಯಿಂದ ಅಧನಃ= ದರಿದ್ರನು ಫುಲಕಾನ್ ಇವ=ತುಚ್ಛವಾದ ಮುಷ್ಟಿಧಾನ್ಯವನ್ನು ಅಪೇಕ್ಷಿಸುವಂತೆ ಮಾನಃ= ರಾಜ್ಯಾದಿ ವಿಷಯದಲ್ಲಿ ಅಭಿಮಾನವು ಭಿಕ್ಷಿತಃ=ಯಾಚಿಸಲ್ಪಟ್ಟಿತು. ಬತ=ಕಷ್ಟವು.

ಮನೋಭಿಕ್ಷಿತಂ=ಎಂಬ ಪಾಠವಿದ್ದಲ್ಲಿ 'ಮನಸಿನಲ್ಲಿ ಸಂಕಲ್ಪಿತವಾದದ್ದನ್ನು ಬೇಡಿದನು' ಎಂದರ್ಥ ತಿಳಿಯಬೇಕು.

**ಭಾಗವತ ತಾತ್ಪರ್ಯ :-**

ಈ ಶ್ಲೋಕದಲ್ಲಿ 'ತಾದಾತ್ಮ್ಯಂ ಯಚ್ಛತಃ' ಎಂಬ ಶಬ್ದಕ್ಕೆ ತನ್ನ ಅಭೇದ ಕೊಡುವ ಎಂಬುದಾಗಿ ಕೆಲವರು ವ್ಯಾಖ್ಯಾನ ಮಾಡುತ್ತಾರೆ. ಅದನ್ನು ನಿರಾಕರಿಸುವುದಕ್ಕಾಗಿ ಪ್ರಮಾಣವನ್ನು ಉದಾಹರಿಸುವ ಮೂಲಕ ವಿವಕ್ಷಿತವಾದ ಅರ್ಥವನ್ನು ಹೇಳುವರು -

**ಹರೌ ನಿಯತಚಿತ್ತತ್ವಾತ್ ಗ್ರಹವತ್ ತತ್ಪ್ರವೇಶನಾತ್ ।**
**ಮೋಕ್ಷಂ ತಾದಾತ್ಮ್ಯಮಿತ್ಯಾಹುರ್ನ ತದ್ರೂಪತ್ವತಃ ಕ್ವಚಿತ್ ।।ಇತಿ ಭವಿಷ್ಯತ್‌ಪರ್ವಣಿ।।**

**ತಚ್ಚಿತ್ತತೈವ ತಾದಾತ್ಮ್ಯಮ್ । 'ನೈಕಾತ್ಮತಾಂ ಮೇ ಸ್ಪೃಹಯಂತೀ'ತ್ಯುಕ್ತತ್ವಾತ್ । ಹರೀಚ್ಛಿತೇಚ್ಛುತ್ವೈಕಾತ್ಮ್ಯಂ ನ ತೇನೈಕಸ್ವರೂಪತೇ'ತಿ ಚ । 'ಕಾಮೇನ ಮೇ ಕಾಮ ಆಗಾತ್' ಇತಿ ಚ ಶ್ರುತಿಃ ॥**

ಮುಕ್ತರು ಶ್ರೀಹರಿಯಲ್ಲಿಯೇ ಯಾವಾಗಲೂ ಮನಸ್ಸಿಟ್ಟಿರುವದರಿಂದಲೂ ಮತ್ತು ಪಿಶಾಚಗಳು ಜನರನ್ನು ಪ್ರವೇಶಿಸುವಂತೆ ಶ್ರೀಹರಿಯಲ್ಲಿ ಪ್ರವೇಶಿಸುವುದರಿಂದಲೂ ಮೋಕ್ಷವನ್ನು ತಾದಾತ್ಮ್ಯವೆನ್ನುವರು. ಹೊರತು ಶ್ರೀಹರಿಯ ಸ್ವರೂಪವೇ ಆಗುವುದರಿಂದ ಅಲ್ಲ ಎಂದು ಭವಿಷ್ಯತ್ಪರ್ವದಲ್ಲಿ ಹೇಳಿರುವದರಿಂದ, ಪ್ರಕೃತದಲ್ಲಿ ತಾದಾತ್ಮ್ಯವೆಂದರೆ ಭಗವಂತನಲ್ಲಿ ಅತ್ಯಾಸಕ್ತವಾದ ಚಿತ್ತ ಇರುವಿಕೆಯೇ ವಿವಕ್ಷಿತವಾಗಿದೆ.

ಗ್ರಹವತ್ ತತ್ಪ್ರವೇಶನವೂ ತಾದಾತ್ಮ್ಯಶಬ್ದಾರ್ಥವೆಂದು ಏಕೆ ಇಲ್ಲಿ ಹೇಳಬಾರದು ? ಎಂದರೆ, ಈ ವಿಧವಾದ ಐಕಾತ್ಮ್ಯವು ಏಕಾಂತಭಕ್ತರಿಂದ ಅಪೇಕ್ಷಣೀಯವಾಗಿಲ್ಲ. ನನ್ನಲ್ಲಿ ಐಕಾತ್ಮ್ಯವನ್ನು ಕೆಲವರು ಇಚ್ಛಿಸುವದಿಲ್ಲ ಎಂದು ಹಿಂದೆ ಭಾಗವತದಲ್ಲಿಯೇ ಹೇಳಿದೆ.

ಏಕಾಂತಭಕ್ತನಾದ ಧ್ರುವನು ಇಚ್ಛಿಸುವ ಐಕ್ಯವು ಪ್ರವೇಶರೂಪವಾದುದಲ್ಲ. ಕಿಂತು ತದೇಕಚಿತ್ತತಯೇ ಎಂದು ತಿಳಿಯಬೇಕು. ಅಥವಾ ಭಗವಂತನ ಇಚ್ಛಾನುಸಾರಿ ಇಚ್ಛಾ ಮಾಡುವನೆಂಬ ಐಕಾತ್ಮ್ಯವನ್ನು ಇಲ್ಲಿ ತಿಳಿಯಬಹುದು. ಹೊರತು ಸ್ವರೂಪೈಕ್ಯವನ್ನು ಅಲ್ಲ ಎಂದು ಭವಿಷ್ಯತ್ಪುರಾಣದಲ್ಲಿದೆ.

ಜೀವನ್ಮುಕ್ತ್ಯವಸ್ಥೆಯಲ್ಲಿ ಸರ್ವಸಂಹಾರಕನಾದ ಶ್ರೀಹರಿಯ ಇಚ್ಛಾನುಸಾರವಾಗಿಯೇ ನನ್ನ ಇಚ್ಛೆ ಬರುವದು ಎಂದು ಪ್ರಾರ್ಥಿಸಿರುವದರಿಂದ, ಹರಿಯ ಇಚ್ಛಾನುಸಾರಿ ಇಚ್ಛಾ ಮುಕ್ತನಿಗೆ ಇರುವದು, ಇದೇ ತಾದಾತ್ಮ್ಯವೆಂದು ಭಾವ. ॥೩೫॥

ಹರಿಭಕ್ತನಾದ ಧ್ರುವನಿಗೆ ಈ ವಿಧವಾದ ಅನುತಾಪ ಯೋಗ್ಯವೇ ಆಗಿದೆ ಎಂದು ಹೇಳುವರು -

**ಮೈತ್ರೇಯ ಉವಾಚ -**

**ನ ವೈ ಮುಕುಂದಸ್ಯ ಪದಾರವಿಂದಯೋ**
**ರಜೋಜುಷಸ್ತಾತ ಭವಾದೃಶಾ ಜನಾಃ ।**
**ವಾಂಛಂತಿ ತದ್ದಾಸ್ಯಮೃತೇಽರ್ಥಮಾತ್ಮನೋ**
**ಯದೃಚ್ಛಯಾ ಲಬ್ಧಮನಃಸಮೃದ್ಧಯಃ ॥೩೬॥**

ಹೇ ತಾತ=ವಿದುರನೇ ! ಭವಾದೃಶಾಃ=ನಿನ್ನಂತಹ, ಮುಕುಂದಸ್ಯ=ಪರಮಾತ್ಮನ ಪದಾರವಿಂದಯೋಃ ರಜೋಜುಷಃ=ಪಾದಕಮಲಪರಾಗವನ್ನು ಸೇವಿಸುವ ಜನಾಃ=ಜನರು ಯದೃಚ್ಛಯಾ=ಯಾವ ಭಗವಂತನ ಇಚ್ಛೆಯಿಂದ ಲಬ್ಧಮನಃಸಮೃದ್ಧಯಃ=ದೊರಕಿರುವ ಧನಾದಿಗಳಿಂದ ಮನಸ್ತೃಪ್ತಿ ಪಡೆದವರಾಗಿರುವರೋ ತದ್ದಾಸ್ಯಂ ಋತೇ=ಆ ಭಗವಂತನ ದಾಸ್ಯವನ್ನು ಬಿಟ್ಟು ಅರ್ಥಂ=ಬೇರೆ ಪುರುಷಾರ್ಥವನ್ನು ಆತ್ಮನಃ=ಪರಮಾತ್ಮನಿಂದ ನ ವಾಂಛಂತಿ ವೈ=ಇಚ್ಛಿಸುವದಿಲ್ಲವೆಂಬುದು ಪ್ರಸಿದ್ಧ. ।।೩೬।।

**ಆಕರ್ಣ್ಯಾತ್ಮಜಮಾಯಾಂತಂ ಸಂಪರೇತ್ಯ ತಥಾಗತಮ್ ।**
**ರಾಜಾ ನ ಶ್ರದ್ದಧೇ ಭದ್ರಮಭದ್ರಸ್ಯ ಕುತೋ ಮಮ ।।೩೭।।**

ರಾಜಾ=ಉತ್ತಾನಪಾದನು ಆಯಾಂತಂ ಆತ್ಮಜಂ=ಬಂದಿರುವ ಮಗನನ್ನು ಆಕರ್ಣ್ಯ= ಕೇಳಿ ಯಥಾ=ಹೇಗೆ ಸಂಪರೇತ್ಯ=ಮೃತನಾಗಿ ಆಗತಂ=ಮತ್ತೆ ಬಂದನೆಂಬುದನ್ನು ನಂಬುವದಿಲ್ಲವೋ ತಥಾ=ಹಾಗೆಯೇ ನ ಶ್ರದ್ದಧೇ=ನಂಬಲಿಲ್ಲ. ಅಭದ್ರಸ್ಯ=ಅಮಂಗಲನಾದ ಮಮ=ನನಗೆ ಭದ್ರಂ ಕುತಃ=ಕಲ್ಯಾಣ ಹೇಗಾದೀತು ? ಸಾಧ್ಯವಿಲ್ಲವೆಂದುಕೊಂಡನು.

**ಶ್ರದ್ಧಾಯ ವಾಕ್ಯಂ ದೇವರ್ಷೇರ್ಹರ್ಷವೇಗೇನ ಧರ್ಷಿತಃ ।**
**ವಾರ್ತಾಹರ್ತುರತಿಪ್ರೀತೋ ಹಾರಂ ಪ್ರಾದಾನ್ಮಹಾಧನಮ್ ।।೩೮।।**

ಮೊದಲು ದುಃಖದಲ್ಲಿ ಮಗ ಬಂದನೆಂಬ ವಾರ್ತೆಯನ್ನು ನಂಬದಿದ್ದರೂ ಸಹ ಆನಂತರ ವಿವೇಕ ತಂದುಕೊಂಡು, ದೇವರ್ಷೇಃ=ನಾರದರ ವಾಕ್ಯಂ="ನಿನ್ನ ಕೀರ್ತಿಯನ್ನು ಹೆಚ್ಚಿಸಿ ಶೀಘ್ರದಲ್ಲಿ ಮಗನು ಬರುವನು" ಎಂಬುದಾಗಿ ಮೊದಲೇ ಹೇಳಿದ ಮಾತನ್ನು ಶ್ರದ್ಧಾಯ=ನಂಬಿ ಹರ್ಷವೇಗೇನ ಧರ್ಷಿತಃ=ಸಂತೋಷೋದ್ರೇಕ ಉಳ್ಳವನಾಗಿ ವಾರ್ತಾಹರ್ತುಃ=ಸುದ್ದಿಯನ್ನು ಹೇಳಿದವನಿಗೆ ಅತಿಪ್ರೀತಃ=ಬಹಳ ಸಂತೋಷಗೊಂಡವನಾಗಿ ಮಹಾಧನಂ=ಬಹಳ ಬೆಲೆಬಾಳುವ ಹಾರಂ=ರತ್ನಮಾಲೆಯನ್ನು ಪ್ರಾದಾತ್=ಕೊಟ್ಟನು.

**ಸದಶ್ವಂ ರಥಮಾರುಹ್ಯ ಕಾರ್ತಸ್ವರಪರಿಷ್ಕೃತಮ್ ।**
**ಬ್ರಾಹ್ಮಣೈಃ ಕುಲವೃದ್ಧೈಶ್ಚ ಪರ್ಯಸ್ತೋಽಮಾತ್ಯಬಂಧುಭಿಃ ।।೩೯।।**

ಕಾರ್ತಸ್ವರಪರಿಷ್ಕೃತಂ=ಚಿನ್ನದಿಂದ ಅಲಂಕೃತವಾದ ಸದಶ್ವಂ=ಒಳ್ಳೆಯ ಕುದುರೆಗಳನ್ನು ಕಟ್ಟಿದ ರಥಂ=ರಥವನ್ನು ಆರುಹ್ಯ=ಹತ್ತಿ ಬ್ರಾಹ್ಮಣೈಃ=ಬ್ರಾಹ್ಮಣರಿಂದಲೂ ಚ=ಮತ್ತು ಕುಲವೃದ್ಧೈಃ=ವಂಶದ ಹಿರಿಯರಿಂದಲೂ, ಅಮಾತ್ಯಬಂಧುಭಿಃ=ಮಂತ್ರಿಗಳಿಂದಲೂ, ದೇಹಸಂಬಂಧಿಗಳಿಂದಲೂ, ಆಪ್ತಮಿತ್ರರಿಂದಲೂ ಪರ್ಯಸ್ತಃ=ಸುತ್ತುವರೆಯಲ್ಪಟ್ಟವನಾಗಿ, (ಅನ್ವಯ ಮುಂದುವರೆದಿದೆ) ।।೩೯।।

**ಶಂಖದುಂದುಭಿನಾದೇನ ಬ್ರಹ್ಮಘೋಷೇಣ ವೇಣುಭಿಃ ।**
**ನಿಶ್ಚಕ್ರಾಮ ಪುರಾತ್ತೂರ್ಣಮಾತ್ಮಜಾಭೀಕ್ಷಣೋತ್ಸುಕಃ ॥೪೦॥**

ಶಂಖದುಂದುಭಿನಾದೇನ=ಶಂಖ ಮತ್ತು ನಗಾರಿಯ ಧ್ವನಿಯಿಂದಲೂ, ಬ್ರಹ್ಮಘೋಷೇಣ=ವೇದಗಳ ಧ್ವನಿಯಿಂದಲೂ ವೇಣುಭಿಃ=ಕೊಳಲುನಾದದಿಂದಲೂ ಸಹಿತನಾಗಿ ಆತ್ಮಜಾಭೀಕ್ಷಣೋತ್ಸುಕಃ=ಮಗನನ್ನು ನೋಡುವ ತವಕದಿಂದ ತೂರ್ಣಂ= ಶೀಘ್ರವಾಗಿ ಪುರಾತ್=ಪಟ್ಟಣದಿಂದ ನಿಶ್ಚಕ್ರಾಮ=ಹೊರಗೆ ಬಂದನು. ॥೪೦॥

**ಸುನೀತಿಃ ಸುರುಚಿಶ್ಚಾಸ್ಯ ಮಹಿಷ್ಯೌ ರುಕ್ಮಭೂಷಿತೇ ।**
**ಆರುಹ್ಯ ಶಿಬಿಕೇ ಸಾರ್ಧಮುತ್ತಮೇನಾಭಿಜಗ್ಮತುಃ ॥೪೧॥**

ಅಸ್ಯ=ಉತ್ತಾನಪಾದರಾಜನ ಮಹಿಷ್ಯೌ=ರಾಣಿಯರಾದ ಸುನೀತಿಃ ಸುರುಚಿಃ ಚ=ಸುನೀತಿ ಮತ್ತು ಸುರಿಚಿಯರು ರುಕ್ಮಭೂಷಿತೇ=ಚಿನ್ನದ ಆಭರಣಗಳಿಂದ ಅಲಂಕೃತರಾಗಿ ಉತ್ತಮೇನ ಸಾರ್ಧಂ=ಉತ್ತಮನೊಡನೆ ಕೂಡಿಕೊಂಡು ಶಿಬಿಕೇ=ಮೇಣೆಯಲ್ಲಿ ಆರುಹ್ಯ=ಹತ್ತಿಕೊಂಡು ಅಭಿಜಗ್ಮತುಃ=ಎದುರಾಗಿ ಹೋದರು.

**ಸೂಚಿತ ಅರ್ಥಗಳು :-**

ಸುರುಚಿಯೂ ಅಲಂಕಾರ ಮಾಡಿಕೊಂಡಿದ್ದರಿಂದ ಅವಳಿಗೂ ಉತ್ಸಾಹವಿತ್ತೆಂದು ಸೂಚಿತವಾಗುವದು.

ಒಂದೇ ಶಿಬಿಕೆಯಲ್ಲಿ ಮೂವರು ಹೋದದ್ದರಿಂದ ಎರಡು ಅಂಶಗಳು ಸೂಚಿತವಾಗುವವು -

೧) ಭಗವಂತನ ಮಹಿಮೆಯಿಂದ ದ್ವೇಷ ನಾಶವಾಗಿತ್ತು.

೨) ಧ್ರುವನು ವನಕ್ಕೆ ಹೋದಾಗಿನಿಂದ ಪಶ್ಚಾತ್ತಾಪಗೊಂಡ ರಾಜನು ನಾರದರ ಆದೇಶದಿಂದ ಧ್ರುವಮಾತೆಯಾದ ಸುನೀತಿಗೇನೇ ಸ್ಥಾನ-ಮಾನಗಳನ್ನು ನೀಡಲಾರಂಭಿಸಿದನು. ಸುರುಚಿಗೆ ಸೌಲಭ್ಯಗಳನ್ನು ನೀಡಿರಲಿಲ್ಲ. ಸುನೀತಿಯು ನೀತಿವಂತಳಾದ್ದರಿಂದ ಹಿಂದಿನ ಕ್ರೋಧ ಹಿಡಿಯದೇ, ತನ್ನ ಶಿಬಿಕೆಯಲ್ಲಿ ಸರುಚಿ ಮತ್ತು ಉತ್ತಮನನ್ನು ಕೂಡಿಸಿಕೊಂಡಳು ಎಂದು. ॥೪೧॥

**ತಂ ದೃಷ್ಟ್ವೋಪವನಾಭ್ಯಾಶ ಆಯಾಂತಂ ತರಸಾ ರಥಾತ್ ।**
**ಅವರುಹ್ಯ ನೃಪಸ್ತೂರ್ಣಮಾಸಾದ್ಯ ಪ್ರೇಮವಿಹ್ವಲಃ ॥೪೨॥**

ಉಪವನಾಭ್ಯಾಶೇ=ತೋಟದ ಸಮೀಪದಲ್ಲಿ ಆಯಾಂತಂ=ಬರುತ್ತಿರುವ ತಂ=ಧ್ರುವನನ್ನು ದೃಷ್ಟ್ವಾ=ನೋಡಿ ತರಸಾ=ಬೇಗನೇ ರಥಾತ್=ರಥದಿಂದ ಅವರುಹ್ಯ=ಇಳಿದು ತೂರ್ಣಂ=ಬೇಗನೇ ಆಸಾದ್ಯ=ಸಮೀಪಿಸಿ ಪ್ರೇಮವಿಹ್ವಲಃ=ಸ್ನೇಹಪರವಶನಾಗಿ, (ಅನ್ವಯ ಮುಂದುವರೆಯುತ್ತದೆ) ।।೪೨।।

**ಪರಿರೇಭೇಽಂಗಜಂ ದೋರ್ಭ್ಯಾಂ ದೀರ್ಘೋತ್ಕಂಠಮನಾಃ ಶ್ವಸನ್ ।**
**ವಿಷ್ವಕ್ಸೇನಾಂಘ್ರಿಸಂಸ್ಪರ್ಶಹತಾಶೇಷಾಘಬಂಧನಮ್ ।।೪೩।।**

ವಿಷ್ವಕ್ಸೇನಾಂಘ್ರಿಸಂಸ್ಪರ್ಶಹತಾಶೇಷಾಘಬಂಧನಮ್ ವಿಶ್ವಕ್ಸೇನ=ಶ್ರೀಹರಿಯ ಅಂಘ್ರಿಸಂಸ್ಪರ್ಶ=ಪಾದಸ್ಪರ್ಶದಿಂದ ಹತ=ನಾಶವಾದ ಅಶೇಷ=ಎಲ್ಲ ಅಘ=ಪಾಪ ಮತ್ತು ಬಂಧನಂ=ಪ್ರಕೃತಿಬಂಧವುಳ್ಳ ಅಂಗಜಂ=ಮಗನನ್ನು ದೀರ್ಘೋತ್ಕಂಠಮನಾಃ= ಬಹುಕಾಲದಿಂದ ಉತ್ಸುಕವಾದ ಮನಸ್ಸುಳ್ಳ ರಾಜನು ಶ್ವಸನ್=ದೀರ್ಘಶ್ವಾಸ ಬಿಡುತ್ತಾ ದೋರ್ಭ್ಯಾಂ=ಬಾಹುಗಳಿಂದ ಪರಿರೇಭೇ=ಆಲಿಂಗನ ಮಾಡಿಕೊಂಡನು.

ಪಾಪರಹಿತನಾದವನ ಸ್ಪರ್ಶದಿಂದ ರಾಜನ ಪಾಪ ಪರಿಹಾರವಾಯಿತು ಎಂದು ಸೂಚಿತವಾಗುವುದು. ।।೪೩।।

**ಅಥಾಜಿಘ್ರನ್ ಮುಹುರ್ಮೂರ್ಧ್ನಿ ಶಾಂತೈರ್ನಯನವಾರಿಭಿಃ ।**
**ಸ್ನಾಪಯಾಮಾಸ ತನಯಮಾಪ್ತೋದ್ದಾಮಮನೋರಥಮ್ ।।೪೪।।**

ಅಥ=ಅನಂತರ ಮುಹುಃ=ಪುನಃಪುನಃ ಮೂರ್ಧ್ನಿ=ತಲೆಯಲ್ಲಿ ಆಜಿಘ್ರನ್=ಮೂಸಿನೋಡಿ ಶಾಂತೈಃ=ತಣ್ಣಗಾದ ಅಥವಾ ಸುಖನಿರ್ಣಾಯಕಗಳಾದ (ಸುಖಸೂಚಕವಾದ) ನಯನವಾರಿಭಿಃ=ಕಣ್ಣೀರುಗಳಿಂದ (ಆನಂದಾಶ್ರುಗಳಿಂದ) ಆಪ್ತೋದ್ದಾಮಮನೋರಥಂ= ಉತ್ಕೃಷ್ಟವಾದ ಮನೋಭಿಲಾಷೆಯನ್ನು ಪಡೆದ ತನಯಂ=ಮಗನನ್ನು ಸ್ನಾಪಯಾಮಾಸ=ಸ್ನಾನ ಮಾಡಿಸಿದನು. ।।೪೪।।

**ಅಭಿವಂದ್ಯ ಪಿತುಃ ಪಾದಾವಾಶೀರ್ಭಿಶ್ಚಾನುಮಂತ್ರಿತಃ ।**
**ನನಾಮ ಮಾತರೌ ಶೀರ್ಷ್ಣಾ ಸತ್ಕೃತಃ ಸಜ್ಜನಾಗ್ರಣೀಃ ।।೪೫।।**

ಸಜ್ಜನಾಗ್ರಣೀಃ=ಸಜ್ಜನಶ್ರೇಷ್ಠನಾದ ಧ್ರುವನು ಪಿತುಃ=ತಂದೆಯ ಪಾದೌ=ಪಾದಗಳನ್ನು ಅಭಿವಂದ್ಯ=ನಮಸ್ಕರಿಸಿ, ಆಶೀರ್ಭಿಃ ಅನುಮಂತ್ರಿತಃ=ಮಂತ್ರಸಮಾನವಾದ ಆಶೀರ್ವಚನಗಳನ್ನು ಪಡೆದು, ಸತ್ಕೃತಃ=ಕುಶಲಪ್ರಶ್ನಾದಿಗಳಿಂದ ಸಂಮಾನಿತನಾಗಿ ಮಾತರೌ=ತಾಯಂದಿರನ್ನು (ಸುನೀತಿ-ಸುರುಚಿಯರನ್ನು) ಶೀರ್ಷ್ಣಾ ನನಾಮ=ತಲೆಬಾಗಿ ನಮಸ್ಕರಿಸಿದನು.

ಇದರಿಂದ ತಂದೆಗಿಂತ ತಾಯಿಗೆ ಗೌರವ ಹೆಚ್ಚೆಂದು ಸೂಚಿತವಾಗುವದು.

**ದಶಾಚಾರ್ಯಸಮೋ ಭ್ರಾತಾ ಶತಭ್ರಾತೃಸಮಃ ಪಿತಾ ।**
**ಪಿತುರ್ದಶಶತಂ ಮಾತಾ ಗೌರವೇಣಾತಿರಿಚ್ಯತೇ ॥**

ಎಂದೂ ಪ್ರಮಾಣವಿದೆ. ಇದು ಸಾಮಾನ್ಯನಿಯಮ. ಶಾಸ್ತ್ರಾರ್ಥ ಹೇಳುವ ತಂದೆಯೇ ಶ್ರೇಷ್ಠವೆಂದು ದಶಮಸ್ಕಂಧದಲ್ಲಿ ಶ್ರೀಸತ್ಯಧರ್ಮರು ತಿಳಿಸಿರುವರು. ಧ್ರುವನು ಮೊದಲು ಸುರುಚಿಯ ಮಾತಿನಿಂದ ಖೇದಗೊಂಡು ಅಡವಿಗೆ ಹೋದರೂ ಶ್ರೀಹರಿಯ ದರ್ಶನದಿಂದ ರಾಗ-ದ್ವೇಷಗಳನ್ನು ತೊರೆದು ಸ್ವಾಭಾವಿಕ ಸಜ್ಜನತೆ ಪಡೆದಿದ್ದನೆಂದು ಭಾವ. ।।೪೫।।

**ಸುರುಚಿಸ್ತಂ ಸಮುತ್ಥಾಪ್ಯ ಪಾದಾವಾನತಮರ್ಭಕಮ್ ।**
**ಪರಿಷ್ವಜ್ಯಾಹ ಜೀವೇತಿ ಬಾಷ್ಪಗದ್ಗದಯಾ ಗಿರಾ ।।೪೬।।**

ಸುರುಚಿಃ=ಸುರುಚಿಯು ಪಾದಾವಾನತಂ=ಕಾಲಿಗೆರಗಿದ ತಂ=ಆ ಧ್ರುವನನ್ನು ಅರ್ಭಕಂ=ಆಟವಾಡುವ ಮಗುವಿನಂತೆ ಸಮುತ್ಥಾಪ್ಯ=ಎಬ್ಬಿಸಿ ಪರಿಷ್ವಜ್ಯ=ಆಲಿಂಗಿಸಿ ಭಾಷ್ಪಗದ್ಗದಯಾ ಗಿರಾ=ಕಣ್ಣೀರುಸಹಿತವಾದ ಬಿಗಿದ ಕಂಠದಿಂದ, ಅಸ್ಪಷ್ಟವಾದ ಮಾತುಗಳಿಂದ ಜೀವ ಇತಿ ಆಹ=ಬಹುಕಾಲ ಬದುಕೆಂದು ಆಶೀರ್ವದಿಸಿದಳು. ।।೪೬।।

ದ್ವೇಷ ಮಾಡಿದ ಸುರುಚಿಗೆ ಧ್ರುವನ ಮೇಲೆ ಪ್ರೀತಿ ಹೇಗೆ ಉಂಟಾಯಿತು ? ಎಂದರೆ ಹೇಳುವರು -

**ಯಸ್ಯ ಪ್ರಸನ್ನೋ ಭಗವಾನ್ ಗುಣೈರ್ಮೈತ್ರ್ಯಾದಿಭಿರ್ಹರಿಃ ।**
**ತಸ್ಮೈ ನಮಂತಿ ಭೂತಾನಿ ನಿಮ್ನಾಮಾಪ ಇವ ಸ್ವಯಮ್ ।।೪೭।।**

ಭಗವಾನ್ ಹರಿಃ=ಐಶ್ವರ್ಯಶಾಲಿಯಾದ ಶ್ರೀಹರಿಯು ಯಸ್ಯ=ಯಾವನಿಗೆ ಪ್ರಸನ್ನಃ= ಪ್ರಸನ್ನಾಗುವನೋ (ಅನುಗ್ರಹಿಸುವನೋ) ತಸ್ಮೈ=ಅವನಿಗೆ ಭೂತಾನಿ=ಎಲ್ಲ ಜನರು ನಿಮ್ನಾಂ =ತಗ್ಗು ಪ್ರದೇಶವನ್ನು ಕುರಿತು ಆಪಃ ಇವ=ನೀರು ಹರಿದು ಹೋಗುವಂತೆ ಸ್ವಯಂ=ತಾವಾಗಿಯೇ ಮೈತ್ರ್ಯಾದಿಭಿಃ ಗುಣೈಃ=ಹರಿಪ್ರೀತಿಪಾತ್ರರಾದ ದೊಡ್ಡವರಲ್ಲಿ ಭಕ್ತಿ, ಸಮರಲ್ಲಿ ಮೈತ್ರಿ, ಚಿಕ್ಕವರಲ್ಲಿ ಕೃಪೆ ಮುಂತಾದವುಗಳಿಂದ ನಮಂತಿ=ನಮಸ್ಕರಿಸುವರು.

''ಮೈತ್ರ್ಯಾದಿಭಿರ್ಗುಣೈಃ ಪ್ರಸನ್ನಃ'' ಎಂಬುದಾಗಿ ಹೀಗೂ ಕೆಲವರು ಅನ್ವಯಿಸುವರು. ಆಗ ಅಧಿಕಾರಿಯಲ್ಲಿರುವ ಭಕ್ತಿ-ವಿರಕ್ತ್ಯಾದಿಗಳಿಂದ ಪ್ರಸನ್ನನಾದಾಗ ಎಂದು ಅರ್ಥ ತಿಳಿಯಬಹುದಾಗಿದೆ. ।।೪೭।।

**ಉತ್ತಮಶ್ಚ ಧ್ರುವಶ್ಚೋಭಾವನ್ಯೋನ್ಯಂ ಪ್ರೇಮವಿಹ್ವಲೌ ।**
**ಅಂಗಸಂಗಾದುತ್ಪುಲಕಾವಸ್ರೌಘಂ ಮುಹುರೂಹತುಃ ॥೪೮॥**

ಉತ್ತಮಃ=ಉತ್ತಮನು ಚ=ಮತ್ತು ಧ್ರುವಃ=ಧ್ರುವನು ಉಭೌ=ಇಬ್ಬರು ಅನ್ಯೋನ್ಯಂ=ಪರಸ್ಪರವಾಗಿ ಪ್ರೇಮವಿಹ್ವಲೌ=ಸ್ನೇಹವಶರಾಗಿ ಅಂಗಸಂಗಾತ್=ಆಲಿಂಗನದಿಂದ ಉತ್ಪುಲಕೌ=ರೋಮಾಂಚಿತರಾಗಿ ಮುಹುಃ=ಬಹಳವಾಗಿ ಅಸ್ರೌಘಂ ಊಹತುಃ=ಆನಂದಭಾಷ್ಪವನ್ನು ಹರಿಸಿದರು. ॥೪೮॥

**ಸುನೀತಿರಸ್ಯ ಜನನೀ ಪ್ರಾಣೇಭ್ಯೋಽಪಿ ಪ್ರಿಯಂ ಸುತಮ್ ।**
**ಉಪಗುಹ್ಯ ಜಹಾವಾಧಿಂ ಯದಂಗಸ್ಪರ್ಶನಿರ್ವೃತಾ ॥೪೯॥**

ಅಸ್ಯ ಜನನೀ ಸುನೀತಿಃ=ಧ್ರುವನ ಹಡೆದ ತಾಯಿಯಾದ ಸುನೀತಿಯು ಪ್ರಾಣೇಭ್ಯಃ ಅಪಿ=ತನ್ನ ಜೀವಕ್ಕಿಂತಲೂ ಪ್ರಿಯಂ=ಪ್ರಿಯನಾದ ಸುತಂ=ಮಗನನ್ನು ಉಪಗುಹ್ಯ=ಆಲಿಂಗಿಸಿ ಯದಂಗಸ್ಪರ್ಶನಿರ್ವೃತಾ=ಧ್ರುವನ ದೇಹಸ್ಪರ್ಶದಿಂದುಂಟಾದ ಸುಖವುಳ್ಳವಳಾಗಿ ಆಧಿಂ=ಮನೋವ್ಯಥೆಯನ್ನು ಜುಹೌ=ಬಿಟ್ಟಳು. (ಕಳೆದುಕೊಂಡಳು.) ॥೪೯॥

**ಪಯಃಸ್ತನಾಭ್ಯಾಂ ಸುಸ್ರಾವ ನೇತ್ರಜೈಃ ಸಲಿಲೈಃ ಶಿವೈಃ ।**
**ತದಾಽಭಿಷಿಚ್ಯಮಾನಾಯಾ ವೀರೇ ವೀರಸುವೋ ಮುಹುಃ ॥೫೦॥**

ವೀರೇ=ಧ್ರುವನಿಗೆ ಶಿವೈಃ=ಮಂಗಲಕರವಾದ ನೇತ್ರಜೈಃ ಸಲಿಲೈಃ=ಕಣ್ಣೀರಿನಿಂದ ಅಭಿಷಿಚ್ಯಮಾನಾಯಾಃ=ಸ್ನಾನ ಮಾಡಿಸುತ್ತಿರುವ ವೀರಸುವಃ=ವೀರನಾದ ಮಗನನ್ನು ಪಡೆದ ಸುನೀತಿಯ ಸ್ತನಾಭ್ಯಾಂ=ಸ್ತನಗಳಿಂದ ಮುಹುಃ=ಮತ್ತೆ ಮತ್ತೆ ಪಯಃ ಸುಸ್ರಾವ=ಹಾಲು ಹರಿದವು. ॥೫೦॥

**ತಾಂ ಶಶಂಸುರ್ಜನಾ ರಾಜ್ಞೀಂ ದಿಷ್ಟ್ಯಾ ತೇ ಪುತ್ರ ಆರ್ತಿಹಾ ।**
**ಪ್ರತಿಲಬ್ಧಶ್ಚಿರಂ ನಷ್ಟೋ ರಕ್ಷಿತಾ ಮಂಡಲಂ ಭುವಃ ॥೫೧ ॥**

ಚಿರಂ=ಬಹುಕಾಲ ನಷ್ಟಃ=ಕಾಣದಾದ, ಆರ್ತಿಹಾ=ನಿನ್ನ ದುಃಖವನ್ನು ಕಳೆಯುವ, ತೇ ಪುತ್ರಃ=ನಿನ್ನ ಮಗನು ದಿಷ್ಟ್ಯಾ=ಸುದೈವದಿಂದ ಲಬ್ಧಃ=ದೊರಕಿದನು. ಭುವಃ ಮಂಡಲಂ=ಭೂಮಂಡಲವನ್ನು (ರಾಜ್ಯವನ್ನು) ರಕ್ಷಿತಾ=ರಕ್ಷಿಸುವನು ಎಂಬುದಾಗಿ ಜನಾಃ=ಅಲ್ಲಿ ನೆರೆದ ಜನರು ತಾಂ ರಾಜ್ಞೀಂ=ರಾಣಿಯಾದ ಆ ಸುನೀತಿಯನ್ನು ಶಶಂಸುಃ=ಹೊಗಳಿದರು (ಹೇಳಿದರು). ॥೫೧॥

**ಅಭ್ಯರ್ಚಿತಸ್ತ್ವಯಾ ನೂನಂ ಭಗವಾನ್ ಪ್ರಣತಾರ್ತಿಹಾ ।**
**ಯದನುಧ್ಯಾಯಿನೋ ಧೀರಾ ಮೃತ್ಯುಂ ಜಿಗ್ಯುಃ ಸುದುರ್ಜಯಮ್ ॥೫೨॥**

ಯದನುಧ್ಯಾಯಿನಃ=ಯಾವ ಶ್ರೀಹರಿಯನ್ನು ಧ್ಯಾನ ಮಾಡುವ ಧೀರಾಃ=ಜ್ಞಾನಿಗಳು ಸುದುರ್ಜಯಂ=ಗೆಲ್ಲಲು ಅತ್ಯಂತ ಸಾಧ್ಯವಾಗದ ಮೃತ್ಯುಂ=ಮರಣವನ್ನು ಜಿಗ್ಯುಃ=ಗೆದ್ದರೋ ಅಂಥ ಪ್ರಣತಾರ್ತಿಹಾ=ಪೂಜಿಸುವವರ ದುಃಖಪರಿಹಾರಕನಾದ ಭಗವಾನ್=ಶ್ರೀಹರಿಯು ನೂನಂ=ನಿಶ್ಚಯವಾಗಿ ತ್ವಯಾ=ನಿನ್ನಿಂದ ಅಭ್ಯರ್ಚಿತಃ=ಪೂಜಿಸಲ್ಪಟ್ಟಿರುವನು.

ಒಂದು ವೇಳೆ ಭಗವಂತನನ್ನು ಪೂಜಿಸದಿದ್ದರೆ ನಿನ್ನ ಮಗ ದೊರೆಯುತ್ತಿರಲಿಲ್ಲ. ದೊರಕಿದ್ದಾನೆ ಎಂದಮೇಲೆ ನೀನು ಪೂಜಿಸಿರಲೇಬೇಕು ಎಂದು ತರ್ಕ ಮಾಡಿರುವರು.

**ಲಾಲ್ಯಮಾನಂ ಜನೈರೇವಂ ಧ್ರುವಂ ಸಭ್ರಾತರಂ ನೃಪಃ ।**
**ಆರೋಪ್ಯ ಕರಿಣೀಂ ಹೃಷ್ಟಃ ಸ್ತೂಯಮಾನೋಽವಿಶತ್ಪುರಮ್ ॥೫೩॥**

ಹೃಷ್ಟಃ=ಸಂತುಷ್ಟನಾದ ನೃಪಃ=ಉತ್ತಾನಪಾದನು ಏವಂ=ಈ ರೀತಿಯಾಗಿ ಜನೈಃ=ತಾಯಿ ಮುಂತಾದವರಿಂದ ಲಾಲ್ಯಮಾನಂ=ಲಾಲನೆ ಮಾಡಲ್ಪಡುವ, ಸಭ್ರಾತರಂ=ಉತ್ತಮನಿಂದ ಸಹಿತನಾದ, ಧ್ರುವಂ=ಧ್ರುವನನ್ನು ಕರಿಣೀಂ=ಹೆಣ್ಣಾನೆಯಮೇಲೆ ಆರೋಪ್ಯ=ಕೂಡಿಸಿಕೊಂಡು ಜನೈಃ ಸ್ತೂಯಮಾನಃ=ಬಂದಿಗಳಿಂದ ಸ್ತೋತ್ರ ಮಾಡಲ್ಪಟ್ಟವನಾಗಿ ಪುರಂ ಆವಿಶತ್=ಪಟ್ಟಣವನ್ನು ಪ್ರವೇಶಿಸಿದನು.

**ಭಾಗವತ ತಾತ್ಪರ್ಯ :-**

ಇಲ್ಲಿ ವಿಶೇಷವಾಗಿ ಕರಿಣೀಯನ್ನು (ಹೆಣ್ಣಾನೆಯನ್ನು) ಸ್ವೀಕರಿಸಿದ್ದರ ಅಭಿಪ್ರಾಯವನ್ನು ಪ್ರಮಾಣದಿಂದಲೇ ತಿಳಿಸುವರು -

ಕಲಭಶ್ಚೈವ ಕನ್ಯಾನಾಂ ಕರಿಣೀ ಬಾಲಮಂಗಲೇ । ಇತಿ ರಾಜನೀತೌ ॥

ಕನ್ಯೆಯರ ಮೆರವಣಿಗೆ ಮಾಡಲು ಕಲಭ (ಆನೆಯಮರಿ ಅಥವಾ ಮೂವತ್ತು ವರ್ಷದ ಆನೆ) ಇರಬೇಕು. ಕುಮಾರರ ಮೆರವಣಿಗೆಗೆ ಹೆಣ್ಣಾನೆಯೇ ಆಗಬೇಕು ಎಂದು ರಾಜನೀತಿಯಲ್ಲಿ ಹೇಳಿದೆ. ॥೫೩॥

**ತತ್ರ ತತ್ರೋಪಸಂಕ್ಲೃಪ್ತೈರ್ಲಸನ್ಮಕರತೋರಣೈಃ ।**
**ಸಂವೃತೈಃ ಕದಲೀಸ್ತಂಭೈಃ ಪೂಗಪೋತೈಶ್ಚ ತದ್ವಿಧೈಃ ॥೫೪॥**

ತತ್ರ ತತ್ರ=ಅಲ್ಲಲ್ಲಿ ಉಪಸಂಕ್ಲೃಪ್ತೈಃ=ಆಗಲೇ ತಂದಿರಿಸಿದ, ಲಸನ್ಮಕರತೋರಣೈಃ ಲಸತ್=ಪ್ರಕಾಶಮಾನವಾದ ಮಕರತೋರಣೈಃ=ಮೊಸಳೆ ಆಕಾರದ ತೋರಣಗಳಿಂದ,

ಸಂವೃತ್ತೈಃ=ಹಣ್ಣು-ಹೂಗಳಿಂದ ಸಹಿತವಾದ, ಕದಲೀಸ್ತಂಭೈಃ=ಬಾಳೆ ಕಂಬಗಳಿಂದ ಚ=ಮತ್ತು ತದ್ವಿಧೈಃ=ಅದೇ ರೀತಿಯ ಅಂದರೆ ಫಲಪುಷ್ಪಸಹಿತವಾದ ಪೂಗಪೋತೈಃ=ಅಡಿಕಿಯ ಚಿಕ್ಕ ಗಿಡಗಳಿಂದಲೂ ಅಲಂಕರಿಸಲ್ಪಟ್ಟ (ಅನ್ವಯ ಮುಂದುವರೆಯುತ್ತದೆ)।।೫೪।।

**ಚೂತಪಲ್ಲವವಾಸಃಸ್ರಙ್ಮುಕ್ತಾದಾಮವಿಲಂಬಿಭಿಃ ।**
**ಉಪಸ್ಕೃತಂ ಪ್ರತಿದ್ವಾರಮಪಾಂ ಕುಂಭೈಃ ಸದೀಪಕೈಃ ।।೫೫।।**

ಚೂತಪಲ್ಲವವಾಸಃಸ್ರಙ್ಮುಕ್ತಾದಾಮವಿಲಂಬಿಭಿಃ ಚೂತಪಲ್ಲವ=ಮಾವಿನ ಚಿಗುರೆಲೆಗಳು ವಾಸ=ವಸ್ತ್ರ ಸ್ರಕ್=ಮಾಲೆ ಮುಕ್ತಾದಾಮ=ಮುತ್ತಿನ ಗೊಂಚಲಗಳಿಂದ ವಿಲಂಬಿಭಿಃ=ವಿಶಿಷ್ಟವಾಗಿ ಜೋತಾಡುತ್ತಿರುವ, ಸದೀಪಕೈಃ=ದೀಪಗಳಿಂದ ಸಹಿತವಾದ, ಅಪಾಂ ಕುಂಭೈಃ=ನೀರು ತುಂಬಿದ ಕಲಶಗಳಿಂದ ಪ್ರತಿದ್ವಾರಂ=ಒಂದೊಂದು ಬಾಗಿಲದಲ್ಲೂ ಉಪಸ್ಕೃತಂ=ಅಲಂಕರಿಸಿದ, (ಅನ್ವಯ ಮುಂದುವರೆಯುತ್ತದೆ) ।।೫೫।।

**ಪ್ರಾಕಾರೈರ್ಗೋಪುರಾಟ್ಟಾಲೈಃ ಶಾತಕುಂಭಪರಿಚ್ಛದೈಃ ।**
**ಸರ್ವತೋಽಲಂಕೃತಂ ಶ್ರೀಮದ್ವಿಮಾನಶಿಖರದ್ಯುಭಿಃ ।।೫೬।।**

ಶಾತಕುಂಭಪರಿಚ್ಛದೈಃ=ಸುವರ್ಣದಿಂದ ಅಲಂಕಾರ ಮಾಡಿದ ಪ್ರಾಕಾರೈಃ= ಕೋಟೆಗೋಡೆಗಳಿಂದ ಗೋಪುರಾಟ್ಟಾಲೈಃ ಗೋಪುರ=ಹೆಬ್ಬಾಗಿಲು ಅಟ್ಟಾಲೈಃ=ಉಪ್ಪರಿಗೆಗಳಿಂದ ಶ್ರೀಮದ್ವಿಮಾನಶಿಖರದ್ಯುಭಿಃ=ಕಾಂತಿಯುತವಾದ ವಿಮಾನಗಳ ಮತ್ತು ಶಿಖರಗಳ ಕಾಂತಿಯಿಂದ ಸರ್ವತಃ=ಎಲ್ಲ ಕಡೆಗೆ ಅಲಂಕೃತಂ=ಕಂಗೊಳಿಸುವ, (ಅನ್ವಯ ಮುಂದುವರೆಯುತ್ತದೆ)

ಇದರಿಂದ ವಿಮಾನದಲ್ಲಿ ದೇವತೆಗಳು ಮೇಲೆ ಬಂದಿದ್ದರೆಂದು ಸೂಚಿತವಾಗುವುದು.

**ಮೃಷ್ಟಚತ್ವರರಥ್ಯಾದಿಮಾರ್ಗಂ ಚಂದನಚರ್ಚಿತಮ್ ।**
**ಲಾಜಾಕ್ಷತೈಃ ಪುಷ್ಪಫಲೈಸ್ತಂದುಲೈರ್ಬಲಿಭಿರ್ಯುತಮ್ ।।೫೭।।**

ಮೃಷ್ಟಚತ್ವರರಥ್ಯಾದಿಮಾರ್ಗಂ ಮೃಷ್ಟ=ಶುದ್ಧಗೊಳಿಸಿದ ಚತ್ವರ=ನಾಲ್ಕು ಹಾದಿಗಳು ಸೇರುವ ಸ್ಥಳ ರಥ್ಯಾ=ರಾಜಮಾರ್ಗ ಆದಿ=ಮುಂತಾದ ಮಾರ್ಗಂ=ಬೀದಿಗಳುಳ್ಳ, ಚಂದನಚರ್ಚಿತಂ=ಸುಗಂಧದ್ರವ್ಯಗಳಿಂದ ಲೇಪಿಸಲ್ಪಟ್ಟ ಲಾಜಾಕ್ಷತೈಃ=ಭತ್ತರಳು ಅಕ್ಷತೆಗಳಿಂದ ಪುಷ್ಪಫಲೈಃ=ಹೂ ಹಣ್ಣುಗಳಿಂದಲೂ ತಂದುಲೈಃ=ಅಕ್ಕಿಗಳಿಂದಲೂ ಬಲಿಭಿಃ=ಪೂಜಾಸಾಮಗ್ರಿ-ಗಳಿಂದಲೂ ಯುತಂ=ಕೂಡಿದ, ಪುರಂ ಅವಿಶತ್=ಪಟ್ಟಣವನ್ನು ಪ್ರವೇಶಿಸಿದನು ಎಂದು ಅನ್ವಯ ಮಾಡಿಕೊಳ್ಳಬೇಕು. ।।೫೭।।

**ಧ್ರುವಾಯ ಪಥಿ ದೃಷ್ಟಾಯ ತತ್ರ ತತ್ರ ಪುರಸ್ತ್ರಿಯಃ ।**
**ಸಿದ್ಧಾರ್ಥಾಕ್ಷತದಧ್ಯಂಬುದೂರ್ವಾಪುಷ್ಪಫಲಾನಿ ಚ ॥೫೮॥**

ಪಥಿ=ಮಾರ್ಗದಲ್ಲಿ ದೃಷ್ಟಾಯ=ಕಾಣಿಸಿದ ಧ್ರುವಾಯ=ಧ್ರುವನಿಗೆ ತತ್ರ ತತ್ರ=ಅಲ್ಲಲ್ಲಿ ಪುರಸ್ತ್ರಿಯಃ=ಪಟ್ಟಣದ ಸುಮಂಗಲಿಯರು ಸಿದ್ಧಾರ್ಥಾಕ್ಷತದಧ್ಯಂಬುದೂರ್ವಾಪುಷ್ಪಫಲಾನಿ ಚ ಸಿದ್ಧಾರ್ಥ=ಬಿಳಿಸಾಸಿವೆ ಅಕ್ಷತ=ಮಂತ್ರಾಕ್ಷತೆಗಳು ದಧಿ=ಮೊಸರು ಅಂಬು=ನೀರು ದೂರ್ವಾ=ಗರಿಕೆ ಪುಷ್ಪ=ಹೂಗಳು ಫಲಾನಿ ಚ=ಹಣ್ಣುಗಳನ್ನೂ ಉಪಜಹ್ರುಃ=ಹಾಕಿದರು.

**ಉಪಜಹ್ರುಃ ಪ್ರಯುಂಜಾನಾ ವಾತ್ಸಲ್ಯಾದಾಶಿಷಃ ಸತೀಃ ।**
**ಶೃಣ್ವಂಸ್ತು ವಲ್ಗುಗೀತಾನಿ ಪ್ರಾವಿಶದ್ಭವನಂ ಪಿತುಃ ॥೫೯॥**

ವಾತ್ಸಲ್ಯಾತ್=ಅಂತಃಕರಣದಿಂದ ಸತೀಃ ಆಶಿಷಃ=ಶುಭಾಶೀರ್ವಾದಗಳನ್ನು ಪ್ರಯುಂಜಾನಾಃ=ಮಾಡುತ್ತ ಉಪಜಹ್ರುಃ=ಮೇಲೆ ಹೇಳಿದ ಮಂಗಳ ದ್ರವ್ಯಗಳನ್ನು ಹಾಕಿದರು. ಧ್ರುವನು, ವಲ್ಗುಗೀತಾನಿ=ಆ ಸ್ತ್ರೀಯರ ಮನೋಹರ ಗಾಯನಗಳನ್ನು ಶೃಣ್ವನ್=ಕೇಳುತ್ತ ಪಿತುಃ ಭವನಂ=ತಂದೆಯ ಮನೆಯನ್ನು ಪ್ರಾವಿಶತ್=ಪ್ರವೇಶಿಸಿದನು. ॥೫೯॥

**ಮಹಾಮಣಿವ್ರಾತಮಯೇ ಸ ತಸ್ಮಿನ್ ಕಶಿಪೂತ್ತಮೇ ।**
**ಲಾಲಿತೋ ನಿತರಾಂ ಪಿತ್ರಾ ನ್ಯವಸದ್ದಿವಿ ದೇವವತ್ ॥೬೦॥**

ತಸ್ಮಿನ್=ಆ ಮನೆಯಲ್ಲಿರುವ ಮಹಾಮಣಿವ್ರಾತಮಯೇ=ಬೆಲೆಬಾಳುವ ಮಣಿಗಳ ಸಮೂಹದಿಂದ ಕೂಡಿದ ಕಶಿಪೂತ್ತಮೇ=ಶ್ರೇಷ್ಠಮಂಚದಲ್ಲಿ ಪಿತ್ರಾ=ತಂದೆಯಿಂದ ನಿತರಾಂ=ಬಹಳವಾಗಿ ಲಾಲಿತಃ=ಪ್ರೀತಿಸಲ್ಪಟ್ಟು ದಿವಿ=ಸ್ವರ್ಗದಲ್ಲಿ ದೇವವತ್=ಇಂದ್ರನಂತೆ ನ್ಯವಸತ್=ವಾಸ ಮಾಡಿದನು. ॥೬೦॥

**ಪಯಃಫೇನನಿಭಾಃ ಶಯ್ಯಾ ದಾಂತಾ ರುಕ್ಮಪರಿಚ್ಛದಾಃ ।**
**ಆಸನಾನಿ ಮಹಾರ್ಹಾಣಿ ಯತ್ರ ರೌಕ್ಮಾ ಉಪಸ್ಕರಾಃ ॥೬೧॥**

ಯತ್ರ=ಯಾವ ಮನೆಯಲ್ಲಿ ಉಪಸ್ಕರಾಃ=ಪಾತ್ರೆಗಳು ರೌಕ್ಮಾಃ=ಚಿನ್ನದವು ಆಗಿದ್ದವೋ, ಪಯಃಫೇನನಿಭಾಃ=ಹಾಲಿನ ಬುರಿಗಿನಂತೆ (ನೊರೆಯಂತೆ) ಶುಭ್ರವಾದ ಶಯ್ಯಾ=ಹಾಸಿಗೆಯು ಇತ್ತೋ, ದಾಂತಾಃ=ಆನೆಯ ದಂತದಿಂದ ನಿರ್ಮಿತವಾದ ರುಕ್ಮಪರಿಚ್ಛದಾಃ=ಚಿನ್ನದಿಂದ ಅಲಂಕೃತವಾದ ಮಂಚ ಮುಂತಾದವು ಚ=ಮತ್ತು ಮಹಾರ್ಹಾಣಿ=ಬಹಳ ಬೆಲೆಬಾಳುವ ಆಸನಾನಿ=ರತ್ನಕಂಬಳಿಗಳು ಇದ್ದವೋ, ॥೬೧॥

**ಯತ್ರ ಸ್ಫಟಿಕಕುಡ್ಯೇಷು ಮಹಾಮಾರಕತೇಷು ಚ ।**
**ಮಣಿಪ್ರದೀಪಾ ಆಭಾಂತಿ ಲಲನಾರತ್ನಸಂಯುತಾಃ ॥೬೨॥**

ಯತ್ರ=ಯಾವ ಮನೆಯಲ್ಲಿ ಸ್ಫಟಿಕಕುಡ್ಯೇಷು=ಸ್ಪಟಿಕದ ಗೋಡೆಗಳಲ್ಲಿ ಚ=ಮತ್ತು ಮಹಾಮಾರಕತೇಷು=ಇಂದ್ರನೀಲ ಮಣಿಗಳಲ್ಲಿ ಲಲನಾರತ್ನಸಂಯುತಾಃ=ಶ್ರೇಷ್ಠಸ್ತ್ರೀಯರಿಂದ ಕೂಡಿದ ಮಣಿಪ್ರದೀಪಾಃ=ಮಣಿಗಳೆಂಬ ದೀಪಗಳು ಆಭಾಂತಿ=ಪ್ರಜ್ವಲಿಸುತ್ತಿರುವವೋ,

(ಸ್ಫಟಿಕದ ಗೋಡೆಯಲ್ಲಿ ಇಂದ್ರನೀಲಮಣಿಯಿಂದ ನಿರ್ಮಿತವಾದ ಸ್ತ್ರೀಯರ ಕೈಯಲ್ಲಿರುವ ಮಣಿಗಳೇ ದೀಪದಂತೆ ಕಂಗೊಳಿಸುತ್ತಿದ್ದವು. ಅಥವಾ ಪರಿಚಾರಕಸ್ತ್ರೀಯರು ದೀಪ ಹಿಡಿದು ಓಡಾಡುವಾಗ ಸ್ಪಟಿಕದಲ್ಲಿ ಇಂದ್ರನೀಲದಲ್ಲಿ ಪ್ರತಿಫಲಿತವಾಗಿ ಪ್ರಕಾಶಿಸುತ್ತಿದ್ದವು ಎಂದೂ ಅರ್ಥ ಹೇಳಬಹುದು.)॥೬೨॥

**ಉದ್ಯಾನಾನಿ ಚ ರಮ್ಯಾಣಿ ವಿಚಿತ್ರೈರಮರದ್ರುಮೈಃ ।**
**ಕೂಜದ್ವಿಹಂಗಮಿಥುನೈರ್ಗಾಯನ್ಮತ್ತಮಧುವ್ರತೈಃ ॥೬೩॥**

ಕೂಜದ್ವಿಹಂಗಮಿಥುನೈಃ ಕೂಜತ್=ಶಬ್ದಮಾಡುವ ವಿಹಂಗ=ಪಕ್ಷಿಗಳ ಮಿಥುನೈಃ=ದ್ವಂದ್ವಗಳುಳ್ಳ, ಗಾಯನ್ಮತ್ತಮಧುವ್ರತೈಃ ಗಾಯತ್=ಗಾನ ಮಾಡುವ ಮತ್ತ=ಸಂತೋಷ-ಭರಿತವಾದ ಮಧುವ್ರತೈಃ=ದುಂಬಿಗಳುಳ್ಳ, ಅಮರದ್ರುಮೈಃ=ದೇವತಾ ವೃಕ್ಷಗಳಿಂದ ಶೋಭಿತವಾದ ರಮ್ಯಾಣಿ=ಮನೋಹರವಾದ ಉದ್ಯಾನಾನಿ=ಕೈದೋಟಗಳು ಯತ್ರ=ಯಾವ ಭವನದಲ್ಲಿ ಇದ್ದವೋ, ॥೬೩॥

**ವಾಪ್ಯೋ ವೈಡೂರ್ಯಸೋಪಾನಾಃ ಪದ್ಮೋತ್ಪಲಕುಮುದ್ವತೀಃ ।**
**ಹಂಸಕಾರಂಡಬಕುಲೈರ್ಜುಷ್ಟಾಶ್ಚಕ್ರಾಹ್ವಸಾರಸೈಃ ॥೬೪॥**

ವೈಡೂರ್ಯಸೋಪಾನಾಃ=ವೈಡೂರ್ಯ ಎಂಬ ಮಣಿಯಿಂದ ನಿರ್ಮಿತವಾದ ಮೆಟ್ಟಲುಗಳುಳ್ಳ, ಪದ್ಮೋತ್ಪಲಕುಮುದ್ವತೀಃ=ಕೆಂಪು ನೀಲಿ ಬಿಳಿಯ ಕಮಲಗಳುಳ್ಳ, ಹಂಸಕಾರಂಡಬಕುಲೈಃ ಹಂಸ=ಹಂಸಪಕ್ಷಿ ಕಾರಂಡ=ಒಂದು ಜಾತಿಯ ಪಕ್ಷಿ (ಹಂಸಪ್ರಭೇದ) ಬಕುಲೈಃ=ಬಕುಲಪಕ್ಷಿಗಳಿಂದಲೂ, ಚಕ್ರಾಹ್ವಸಾರಸೈಃ ಚಕ್ರಾಹ್ವ=ಚಕ್ರವಾಕಪಕ್ಷಿ ಸಾರಸೈಃ=ಸಾರಸಪಕ್ಷಿಯಿಂದ ಜುಷ್ಟಾಃ=ಸೇವಿತವಾದ ವಾಪ್ಯಃ=ಭಾವಿಗಳು (ಇಳಿಯುವ ಭಾವಿಗಳು) ಯತ್ರ=ಯಾವ ಭವನದಲ್ಲಿ ಇದ್ದವೋ ಅಂಥ ಭವನದಲ್ಲಿ ಎಂದು ಅನ್ವಯ. ॥೬೪॥

**ಉತ್ತಾನಪಾದೋ ರಾಜರ್ಷಿಃ ಪ್ರಭಾವಂ ತನಯಸ್ಯ ತಮ್ ।**
**ಶ್ರುತ್ವಾ ದೃಷ್ಟ್ವಾಽದ್ಭುತತಮಂ ಪ್ರಪೇದೇ ವಿಸ್ಮಯಂ ಪರಮ್ ॥೬೫॥**

ರಾಜರ್ಷಿಃ ಉತ್ತಾನಪಾದಃ=ರಾಜಋಷಿಯಾದ ಉತ್ತಾನಪಾದನು ತನಯಸ್ಯ=ಮಗನ ಅದ್ಭುತತಮಂ=ಅತ್ಯಾಶ್ಚರ್ಯಕರವಾದ ತಂ ಪ್ರಭಾವಂ=ಸಾಮರ್ಥ್ಯವನ್ನು ಶ್ರುತ್ವಾ=ಕೇಳಿ ದೃಷ್ಟ್ವಾ=ನೋಡಿ ಪರಂ ವಿಸ್ಮಯಂ ಪ್ರಪೇದೇ=ಬಹಳ ಆಶ್ಚರ್ಯ ಹೊಂದಿದನು. ।।೬೫।।

**ವೀಕ್ಷ್ಯೋಢವಯಸಂ ಪುತ್ರಂ ಪ್ರಕೃತೀನಾಂ ಚ ಸಮ್ಮತಮ್ ।**
**ಅನುರಕ್ತಪ್ರಜಂ ರಾಜಾ ಧ್ರುವಂ ಚಕ್ರೇ ಭುವಃ ಪತಿಮ್ ।।೬೬।।**

ರಾಜಾ=ಉತ್ತಾನಪಾದನು ಊಢವಯಸಂ=ವಿವಾಹಯೋಗ್ಯವಯಸ್ಸಿನ ಅರ್ಥಾತ್ ರಾಜ್ಯಪಾಲನ ಶಕ್ತಿಯುಳ್ಳ ಪುತ್ರಂ=ಮಗನನ್ನು ವೀಕ್ಷ್ಯ=ನೋಡಿ ಪ್ರಕೃತೀನಾಂ ಚ ಸಮ್ಮತಂ=ಪ್ರಜೆಗಳಿಗೂ ಒಪ್ಪಿಗೆಯಾದ ಅನುರಕ್ತಪ್ರಜಂ=ಪ್ರಜೆಗಳ ಪ್ರೀತಿಪಾತ್ರನಾದ ಧ್ರುವಂ=ಧ್ರುವನನ್ನು ಭುವಃ ಪತಿಂ ಚಕ್ರೇ=ದೇಶದ ರಾಜನನ್ನಾಗಿ ಮಾಡಿದನು. ।।೬೬।।

**ಆತ್ಮಾನಂ ಚ ಪ್ರವಯಸಮಾಕಲಯ್ಯ ವಿಶಾಂಪತಿಃ ।**
**ವನಂ ವಿರಕ್ತಃ ಪ್ರಾತಿಷ್ಠದ್ವಿಮೃಶನ್ನಾತ್ಮನೋ ಗತಿಮ್ ।।೬೭।।**

।। ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ ದಶಮೋಽಧ್ಯಾಯಃ ।।

ವಿಶಾಂಪತಿಃ=ಪ್ರಜಾಪಾಲಕನಾದ ಉತ್ತಾನಪಾದರಾಜನು ಆತ್ಮಾನಂ=ತನ್ನನ್ನು ಪ್ರವಯಸಂ=ವೃದ್ಧನಾದದ್ದನ್ನು ಆಕಲಯ್ಯ=ತಿಳಿದು ಆತ್ಮನಃ=ತನ್ನ ಮತ್ತು ಶ್ರೀಹರಿಯ ಗತಿಂ=ಸ್ಥಿತಿಯನ್ನು ವಿಮೃಶನ್=ವಿಚಾರ ಮಾಡುವವನಾಗಿ (ಸಾಧನೆಯ ಮಾರ್ಗವನ್ನು ಹಿಡಿದವನಾಗಿ) ವಿರಕ್ತಃ=ವೈರಾಗ್ಯ ಹೊಂದಿದವನಾಗಿ ವನಂ ಪ್ರಾತಿಷ್ಠತ್=ಅರಣ್ಯಕ್ಕೆ ಹೊರಟನು. ।।೬೭।।

।। ಇಲ್ಲಿಗೆ ಹತ್ತನೆಯ ಅಧ್ಯಾಯವು ಮುಗಿಯಿತು ।।

## ಅಥ ಏಕಾದಶೋಽಧ್ಯಾಯಃ

ಮೋಕ್ಷವಷ್ಟೇ ಭಗವಂತನ ಪ್ರಸಾದದಿಂದ ಆಗುವದಲ್ಲ. ಕಿಂತು ಹೊರಗಿನ ಹಾಗೂ ಒಳಗಿನ ಶತ್ರುಜಯವೂ ಆಗುವದು ಎಂಬುದಾಗಿ ಈ ಅಧ್ಯಾಯದಲ್ಲಿ ಭಗವಂತನ ಪ್ರಸಾದದ ಮಾಹಾತ್ಮ್ಯವನ್ನು ವರ್ಣಿಸುವರು. ಮೊದಲಿಗೆ ಧ್ರುವರಾಜನ ವಿವಾಹ ಮೊದಲಾದ ವೃತ್ತಾಂತ ಹೇಳುವರು -

**ಮೈತ್ರೇಯ ಉವಾಚ -**

**ಪ್ರಜಾಪತೇರ್ದುಹಿತರಂ ಶಿಂಶುಮಾರಸ್ಯ ವೈ ಧ್ರುವಃ ।**
**ಉಪಯೇಮೇ ಭ್ರಮಿಂ ನಾಮ ತತ್ಸುತೌ ಕಲ್ಪವತ್ಸರೌ ॥೧॥**

ಧ್ರುವಃ=ಧ್ರುವನು ಶಿಂಶುಮಾರಸ್ಯ ಪ್ರಜಾಪತೇಃ=ಶಿಂಶುಮಾರನೆಂಬ ಪ್ರಜಾಪತಿಯ ದುಹಿತರಂ=ಮಗಳಾದ ಭ್ರಮಿಂ ನಾಮ=ಭ್ರಮಿ ಎಂಬುವವಳನ್ನು ಉಪಯೇಮೇ= ವಿವಾಹವಾದನು. ಕಲ್ಪವತ್ಸರೌ=ಕಲ್ಪ ಮತ್ತು ವತ್ಸರ ಎಂಬುವರು ತತ್ಸುತೌ=ಭ್ರಮಿ-ಧ್ರುವರ ಮಕ್ಕಳು ಆದರು. (ಅಥವಾ ಭ್ರಮಿಯ ಮಕ್ಕಳು ಆದರು)॥೧॥

**ಇಲಾಯಾಮಪಿ ಭಾರ್ಯಾಯಾಂ ವಾಯೋಃ ಪುತ್ರ್ಯಾಂ ಮಹಾಬಲಃ ।**
**ಪುತ್ರಮುತ್ಕಲನಾಮಾನಂ ಯೋಗೇಶ್ವರಮಜೀಜನತ್ ॥೨॥**

ಮಹಾಬಲಃ=ಮಹಾಬಲಿಷ್ಠನಾದ ಧ್ರುವನು ವಾಯೋಃ ಪುತ್ರ್ಯಾಂ=ವಾಯುವಿನ ಮಗಳಾದ ಇಲಾಯಾಂ ಭಾರ್ಯಯಾಂ ಅಪಿ=ಇಲಾ ಎಂಬ ಹೆಂಡತಿಯಲ್ಲಿಯಾದರೋ ಯೋಗೇಶ್ವರಂ=ಅಣಿಮಾದಿ ಅಷ್ಟಾಂಗ ಯೋಗಗಳಿಗೆ ಸಮರ್ಥನಾದ ಉತ್ಕಲನಾಮಾನಂ ಪುತ್ರಂ=ಉತ್ಕಲನೆಂಬ ಹೆಸರುಳ್ಳ ಮಗನನ್ನು ಅಜೀಜನತ್=ಹುಟ್ಟಿಸಿದನು.

**ವಿಶೇಷ ವಿಚಾರ**

ಯೋಗೇಶ್ವರನೆಂದು ಹೇಳಿದ್ದರಿಂದ ಅವನು ರಾಜ್ಯಾಪೇಕ್ಷೆ ಇಲ್ಲದವನು ಎಂದು ಅರ್ಥವಾಗುತ್ತದೆ. ಆದ್ದರಿಂದ ಅವನನ್ನು ಆಮೇಲೆ ಹೇಳಿರುವರು ಎಂದು ತಿಳಿದುಬರುತ್ತದೆ.

ಇಲಾವಿವಾಹ ಮೊದಲೇ ಆಗಿತ್ತು ಎಂದು ಕೆಲವರ ಅಭಿಪ್ರಾಯ. ನಂತರ ಆದದ್ದು ಎಂದು ಇನ್ನು ಕೆಲವರು. ಇರಲಿ, ಅಂತೂ ಉತ್ತಾನಪಾದನು ವನಕ್ಕೆ ತೆರಳಿದ ನಂತರ ಧ್ರುವನು ವಿವಾಹವಾದನೆಂದು ತಿಳಿಯುವದು.

ಯೋಷಿದ್ರತ್ನಂ ಎಂಬ ಪಾಠದಲ್ಲಿ ಇದು ಉತ್ಕಲನಿಗೆ ವಿಶೇಷಣ. ಸ್ತ್ರೀಯರಿಗೆ ರತ್ನದಂತೆ ಮನೋಹರನಾದ ಎಂದರ್ಥ. ಅಥವಾ ಚಕಾರ ಅಧ್ಯಾಹಾರ ಮಾಡಿಕೊಂಡು ಉತ್ಕಲನೆಂಬ ಮಗನನ್ನು ಮತ್ತು ಒಂದು ಕನ್ಯಾರತ್ನವನ್ನೂ (ಹೆಣ್ಣುಮಗುವನ್ನೂ) ಹುಟ್ಟಿಸಿದನು ಎಂದರ್ಥ ಮಾಡಬಹುದು. ।।೨।।

**ಉತ್ತಮಸ್ತ್ವಕೃತೋದ್ವಾಹೋ ಮೃಗಯಾಯಾಂ ಬಲೀಯಸಾ ।**
**ಹತಃ ಪುಣ್ಯಜನೇನಾದ್ರೌ ತನ್ಮಾತಾ ತದ್ಗತಿಂ ಗತಾ ।।೩।।**

ಉತ್ತಮಃ ತು=ಸುರುಚಿಯ ಮಗನಾದ ಉತ್ತಮನಾದರೂ ಅಕೃತೋದ್ವಾಹಃ=ಮದುವೆ ಮಾಡಿಕೊಳ್ಳದೇ ಮೃಗಯಾಯಾಂ=ಬೇಟೆಗೆ ಹೋದಲ್ಲಿಯೇ ಬಲೀಯಸಾ=ಅತ್ಯಂತ ಬಲಶಾಲಿಯಾದ ಪುಣ್ಯಜನೇನ=ಯಕ್ಷರಾಕ್ಷಸನಿಂದ ಅದ್ರೌ=ಪರ್ವತದಲ್ಲಿ ಹತಃ=ಕೊಲ್ಲಲ್ಪಟ್ಟನು. ತನ್ಮಾತಾ=ಅವನ ತಾಯಿಯಾದ ಸುರುಚಿಯು ತದ್ಗತಿಂ ಗತಾ=ಮಗನ ಸ್ಥಿತಿಯನ್ನೇ ಹೊಂದಿದಳು. ಅವಳೂ ಮೃತಳಾದಳೆಂದರ್ಥ. ।।೩।।

**ಧ್ರುವೋ ಭ್ರಾತೃವಧಂ ಶ್ರುತ್ವಾ ಕೋಪಾಮರ್ಷಶುಚಾಽರ್ಪಿತಃ ।**
**ಜೈತ್ರಂ ಸ್ಯಂದನಮಾಸ್ಥಾಯ ಗತಃ ಪುಣ್ಯಜನಾಲಯಮ್ ।।೪।।**

ಧ್ರುವಃ=ಧ್ರುವನು ಭಾತೃವಧಂ=ತಮ್ಮನ ವಧೆಯನ್ನು ಶ್ರುತ್ವಾ=ಕೇಳಿ ಕೋಪಾಮರ್ಷ-ಶುಚಾಽರ್ಪಿತಃ ಕೋಪ=ಸಿಟ್ಟು ಅಮರ್ಷ=ಅಸಹನೆಗಳಿಂದ ಕೂಡಿದ ಶುಚಾರ್ಪಿತಃ= ದುಃಖದಿಂದ ಕೂಡಿದವನಾಗಿ ಜೈತ್ರಂ=ಜಯಶೀಲವಾದ ಸ್ಯಂದನಂ ಆಸ್ಥಾಯ=ರಥದಲ್ಲಿ ಕುಳಿತು ಪುಣ್ಯಜನಾಲಯಂ=ಯಕ್ಷರ ಆವಾಸಸ್ಥಾನವಾದ ಅಲಕಾಪುರಿಗೆ ಗತಃ=ಹೋದನು. ।।೪।।

**ಗತ್ವೋದೀಚೀಂ ದಿಶಂ ರಾಜಾ ರುದ್ರಾನುಚರಸೇವಿತಾಮ್ ।**
**ದದರ್ಶ ಹಿಮವದ್ದ್ರೋಣ್ಯಾಂ ಪುರೀಂ ಗುಹ್ಯಕಸಂಕುಲಾಮ್ ।।೫।।**

ರಾಜಾ=ಧ್ರುವನು ಉದೀಚೀಂ ದಿಶಂ ಗತ್ವಾ=ಉತ್ತರ ದಿಕ್ಕಿಗೆ ಹೋಗಿ ಹಿಮವದ್-ದ್ರೋಣ್ಯಾಂ=ಹಿಮವತ್ಪರ್ವತದ ತಗ್ಗು ಪ್ರದೇಶದಲ್ಲಿ (ಎರಡು ಪರ್ವತಗಳ ನಡುವಿನ ಭಾಗದಲ್ಲಿ) ರುದ್ರಾನುಚರಸೇವಿತಾಂ=ರಾಕ್ಷಸರಿಂದ ವಾಸಿಸಲ್ಪಟ್ಟ ಗುಹ್ಯಕಸಂಕುಲಾಂ=ಯಕ್ಷರಿಂದ ತುಂಬಿದ ಪುರೀಂ=ಅಲಕಾಪಟ್ಟಣವನ್ನು ದದರ್ಶ=ನೋಡಿದನು. ।।೫।।

**ದಧ್ಮೌ ಶಂಖಂ ಮಹಾಬಾಹುಃ ಖಂ ದಿಶಶ್ಚಾನುನಾದಯನ್ ।**
**ಯೇನೋದ್ವಿಗ್ನದೃಶಃ ಕ್ಷತ್ತರುಪದೇವ್ಯೋಽತ್ರಸನ್ ಭೃಶಮ್ ।।೬।।**

ಹೇ ಕ್ಷತ್ತಃ=ವಿದುರನೇ ! ಮಹಾಬಾಹುಃ=ಉದ್ದವಾದ ಭುಜಗಳುಳ್ಳ(ಬಲಶಾಲಿಯಾದ ಬಾಹುಗಳುಳ್ಳ) ಧ್ರುವನು ಖಂ=ಆಕಾಶವನ್ನು ದಿಶಃ ಚ=ದಿಕ್ಕುಗಳನ್ನೂ ಅನುನಾದಯನ್=ಪ್ರತಿಧ್ವನಿಗೊಳಿಸುತ್ತ ಶಂಖಂ=ಶಂಖವನ್ನು ದಧ್ಮೌ=ಊದಿದನು. ಯೇನ=ಯಾವ ಶಂಖದಧ್ವನಿಯಿಂದ ಉಪದೇವ್ಯಃ=ಯಕ್ಷಸ್ತ್ರೀಯರು ಭೃಶಂ=ಬಹಳವಾಗಿ ಅತ್ರಸನ್=ಭಯಗೊಂಡರೋ, ಅಂತಹ ಶಂಖಧ್ವನಿ ಮಾಡಿದನು. ।।೬।।

**ತತೋ ನಿಷ್ಕ್ರಮ್ಯ ಬಲಿನಾ ಉಪದೇವಮಹಾಭಟಾಃ ।**
**ಅಸಹಂತಸ್ತನ್ನಿನಾದಮಭಿಪೇತುರುದಾಯುಧಾಃ ।।೭।।**

ತನ್ನಿನಾದಂ=ಆ ಶಂಖದ ಧ್ವನಿಯನ್ನು ಅಸಹಂತಃ=ಸಹಿಸದ ಬಲಿನಃ=ಬಲಿಷ್ಠರಾದ ಉಪದೇವಮಹಾಭಟಾಃ=ಯಕ್ಷಸೈನಿಕರು ತತಃ=ಅಲಕಾಪಟ್ಟಣದಿಂದ ನಿಷ್ಕ್ರಮ್ಯ=ಹೊರಬಂದು ಉದಾಯುಧಾಃ=ಆಯುಧಗಳನ್ನು ಹಿಡಿದವರಾಗಿ ಅಭಿಪೇತುಃ=ಧ್ರುವನ ಮೇಲೆರಗಿದರು.

ಬಲಿನಾ ಎಂದು ಪಾಠ ಇದ್ದಾಗ, ಬಲಿನಾ=ಬಲಿಷ್ಠನಾದ ಧ್ರುವನಿಂದ ಮಾಡಲ್ಪಟ್ಟ ತನ್ನಿನಾದಂ=ಆ ಶಂಖಧ್ವನಿಯನ್ನು ಎಂದು ಅನ್ವಯ ಮಾಡಬೇಕು. ।।೭।।

**ಸ ತಾನಾಪತತೋ ವೀರ ಉಗ್ರಧನ್ವಾ ಮಹಾರಥಃ ।**
**ಏಕೈಕಂ ಯುಗಪತ್ಸರ್ವಾನಹನ್ ಬಾಣೈಸ್ತ್ರಿಭಿಸ್ತ್ರಿಭಿಃ ।।೮।।**

ಮಹಾರಥಃ=ಮಹಾರಥಿಕನಾದ ಉಗ್ರಧನ್ವಾ=ಭಯಂಕರವಾದ ಧನುಸ್ಸುಳ್ಳ ವೀರಃ=ಪರಾಕ್ರಮಿಯಾದ ಸಃ=ಧ್ರುವನು ಆಪತತಃ=ತನ್ನ ಮೇಲೆರಗುವ ತಾನ್ ಸರ್ವಾನ್=ಆ ಎಲ್ಲ ಯಕ್ಷರನ್ನು (ಒಂದು ಲಕ್ಷ ಮೂವತ್ತು ಸಾವಿರ ಯಕ್ಷರನ್ನು) ಯುಗಪತ್=ಏಕಕಾಲದಲ್ಲಿ ಏಕೈಕಂ=ಒಬ್ಬೊಬ್ಬರನ್ನು ತ್ರಿಭಿಃ ತ್ರಿಭಿಃ=ಮೂರು ಮೂರು ಬಾಣಗಳಿಂದ ಅಹನತ್=ಹೊಡೆದನು. ।।೮।।

**ತೇ ವೈ ಲಲಾಟಲಗ್ನೈಸ್ತೈರಿಷುಭಿಃ ಸರ್ವ ಏವ ಹಿ ।**
**ಮತ್ವಾ ನಿರಸ್ತಮಾತ್ಮಾನಮಾಶಂಸನ್ ಕರ್ಮ ತಸ್ಯ ತತ್ ॥೯॥**

ಲಲಾಟಲಗ್ನೈಃ=ಹಣೆಯಲ್ಲಿ ನೆಟ್ಟ ತೈಃ ಇಷುಭಿಃ=ಆ ಬಾಣಗಳಿಂದ ಸರ್ವೇ ಏವ=ಎಲ್ಲರೂ ಆತ್ಮಾನಂ=ತಮ್ಮನ್ನು ನಿರಸ್ತಂ ಮತ್ವಾ=ಸೋತೆವೆಂದು ತಿಳಿದು ತೇ=ಯಕ್ಷರು ತಸ್ಯ=ಧ್ರುವನ ತತ್ ಕರ್ಮ=ಏಕಕಾಲದಲ್ಲಿ ಮೂರು ಮೂರು ಬಾಣ ಬಿಟ್ಟಿದ್ದನ್ನು ಆಶಂಸನ್=ಪ್ರಶಂಸಿಸಿದರು. ॥೯॥

**ತೇಽಪಿ ಚಾಮುಮಮೃಷ್ಯಂತಃ ಪಾದಸ್ಪರ್ಶಮಿವೋರಗಾಃ ।**
**ಶರೈರವಿಧ್ಯನ್ ಯುಗಪದ್ದ್ವಿಗುಣಂ ಪ್ರಚಿಕೀರ್ಷವಃ ॥೧೦॥**

ತೇಽಪಿ=ಆ ಯಕ್ಷರೂ ಸಹ ಉರಗಾಃ=ಹಾವುಗಳು ಪಾದಸ್ಪರ್ಶಂ ಇವ=ಕಾಲಿನಿಂದ ತುಳಿದದ್ದನ್ನು ಸಹಿಸದಿರುವಂತೆ ಅಮೃಷ್ಯಂತಃ=ಸಹಿಸಲಾರದೇ ಪ್ರಚಿಕೀರ್ಷವಃ=ಪ್ರತೀಕಾರ ಮಾಡುವ ಇಚ್ಛೆಯುಳ್ಳವರಾಗಿ ಯುಗಪತ್=ಒಮ್ಮೆಲೇ ಅಮುಂ=ಧ್ರುವನನ್ನು ದ್ವಿಗುಣಂ= ಎರಡುಪಟ್ಟಾಗಿ ಅಂದರೆ ಆರಾರು ಶರೈಃ=ಬಾಣಗಳಿಂದ ಅವಿಧ್ಯನ್=ಹೊಡೆದರು. ॥೧೦॥

**ತತಃ ಪರಿಘನಿಸ್ತ್ರಿಂಶೈಃ ಪ್ರಾಸಶೂಲಪರಶ್ವಧೈಃ ।**
**ಶಕ್ತ್ಯೃಷ್ಟಿಭಿರ್ಭುಶುಂಡೀಭಿಶ್ಚಿತ್ರವಾಜೈಃ ಶರೈರಪಿ ॥೧೧॥**

ತತಃ=ಬಾಣ ಹೊಡೆದ ಮೇಲೆ ಪರಿಘನಿಸ್ತ್ರಿಂಶೈಃ ಪರಿಘ=ಕಬ್ಬಿಣದ ಕಟ್ಟುಹಾಕಿದ ದೊಣ್ಣೆ ನಿಸ್ತ್ರಿಂಶೈಃ=ಖಡ್ಗಗಳಿಂದ ಪ್ರಾಸಶೂಲಪರಶ್ವಧೈಃ ಪ್ರಾಸ=ಕುಂತಾಯುಧ ಶೂಲ=ತ್ರಿಶೂಲ ಪರಶ್ವಧೈಃ=ಕೊಡಲಿಗಳಿಂದಲೂ ಶಕ್ತ್ಯೃಷ್ಟಿಭಿಃ ಶಕ್ತಿ=ಬರ್ಚಿ ಋಷ್ಟಿಭಿಃ=ಎರಡೂ ಕಡೆಗೆ ಚೂಪಾದ ಖಡ್ಗಗಳಿಂದ *ಭುಶುಂಡೀಭಿಃ=ಈ ಹೆಸರಿನ ಆಯುಧಗಳಿಂದ ಚಿತ್ರವಾಜೈಃ=ವಿಚಿತ್ರ ರೆಕ್ಕೆಯುಳ್ಳ ಶರೈಃ ಅಪಿ=ಬಾಣಗಳಿಂದಲೂ, (ಅನ್ವಯ ಮುಂದುವರೆಯುವುದು)

*ಉಡ್ಡೀಯೋಡ್ಡೀಯ ಚ ಪ್ರಾಪ್ಯ ನಂದಂತೀ ದಶಕರ್ತಿಕಾ ।
ಕ್ರಮತೇ ಚ ನತಾಂಗೀ ಯಾ ಸಾ ಭುಶುಂಡೀ ನಿಗದ್ಯತೇ ॥

ಎಂದು ಹೇಳಿದಂತೆ ಹಾರಿ ಹಾರಿ ಹೋಗಿ, ಶಬ್ದ ಮಾಡುತ್ತ, ಹತ್ತು ಕಡೆ ಕತ್ತರಿಸಿಸುವ ಮತ್ತು ಬಾಗಿ ಹೋಗುವ ಆಯುಧವಿಶೇಷಕ್ಕೆ ಭುಶುಂಡಿ ಎಂದು ಕರೆಯುತ್ತಾರೆ. ॥೧೧॥

**ಅಭ್ಯವರ್ಷನ್ ಪ್ರಕುಪಿತಾಃ ಸರಥಂ ಸಹ ಸಾರಥಿಮ್ ।**
**ಇಚ್ಛಂತಸ್ತತ್ಪ್ರತೀಕರ್ತುಮಯುತಾನಾಂ ತ್ರಯೋದಶ ॥೧೨॥**

ಅಯುತಾನಾಂ ತ್ರಯೋದಶ=ಒಂದು ಲಕ್ಷ ಮೂವತ್ತು ಸಾವಿರ ಸಂಖ್ಯಾಕರಾದ ಪ್ರಕುಪಿತಾಃ=ಸಿಟ್ಟಾದ ಯಕ್ಷರು ತತ್ಪ್ರತೀಕರ್ತುಂ ಇಚ್ಛಂತಃ=ಅವನಿಗೆ ಪ್ರತೀಕಾರ ಮಾಡುವ ಇಚ್ಛೆಯುಳ್ಳವರಾಗಿ ಸರಥಂ=ರಥಸಹಿತನಾದ, ಸಹಸಾರಥಿಂ=ಸಾರಥಿಸಹಿತನಾದ ಧ್ರುವನನ್ನು ಅಭ್ಯವರ್ಷನ್=ಮೇಲೆ ಹೇಳಿದ ಆಯುಧಗಳ ಮಳೆಗರೆದರು.

''ಒಂದು ಲಕ್ಷ ಮೂವತ್ತು ಸಾವಿರ ಸಂಖ್ಯೆಯುಳ್ಳವರು'' ಎಂದು ಹೇಳಿದ್ದು ಮುಖ್ಯಜನರ ಲೆಕ್ಕ ಹೇಳಿದ್ದು ಎಂದು ತಿಳಿಯಬೇಕು. ।।೧೨।।

ಆಗ ಧ್ರುವನೇನಾದ ? ಎಂದು ಹೇಳುವರು -

**ಔತ್ತಾನಪಾದಿಃ ಸ ತದಾ ಶಸ್ತ್ರವರ್ಷೇಣ ಭೂಯಸಾ ।**
**ನೋಪಾದೃಶ್ಯತ ಸಂಛನ್ನ ಆಸಾರೇಣ ಯಥಾ ಗಿರಿಃ ।।೧೩।।**

ಯಥಾ=ಹೇಗೆ ಅಸಾರೇಣ=ನಿರಂತರ ನಿಬಿಡಮಳೆಯ ಧಾರೆಯಿಂದ ಗಿರಿಃ=ಪರ್ವತವು ಕಾಣುವದಿಲ್ಲವೋ ತಥಾ=ಹಾಗೆಯೇ ಸಃ ಔತ್ತಾನಪಾದಿಃ=ಉತ್ತಾನಪಾದನ ಮಗನಾದ ಆ ಧ್ರುವನು ಭೂಯಸಾ=ಬಹಳವಾದ ಶಸ್ತ್ರವರ್ಷೇಣ=ಬಾಣದ ಮಳೆಯಿಂದ ಸಂಛನ್ನಃ=ಮುಚ್ಚಲ್ಪಟ್ಟು ನ ಉಪಾದೃಶ್ಯತ=ಕಾಣದಾದನು. ।।೧೩।।

**ಹಾಹಾಕಾರಸ್ತದೈವಾಸೀತ್ ಸಿದ್ಧಾನಾಂ ದಿವಿ ಪಶ್ಯತಾಮ್ ।**
**ಹತೋಽಯಂ ಮಾನವಃ ಸೂರ್ಯೋ ಮಗ್ನಃ ಪುಣ್ಯಜನಾರ್ಣವೇ ।।೧೪।।**

ತದಾ=ಆಗ ದಿವಿ=ಆಕಾಶದಲ್ಲಿ ಪಶ್ಯತಾಂ=ನೋಡುತ್ತಿರುವ ಸಿದ್ಧಾನಾಂ=ಸಿದ್ಧರ ಮಧ್ಯದಲ್ಲಿ ಮಾನವಃ=ಮನುವಿನ ಮೊಮ್ಮಗನಾದ ಸೂರ್ಯಃ=ಜ್ಞಾನಿಗಳಿಗೆ ಪ್ರಿಯನಾದ (ಸೂರ್ಯನಂತೆ ಪ್ರಕಾಶಮಾನನಾದ) ಅಯಂ=ಧ್ರುವನು ಪುಣ್ಯಜನಾರ್ಣವೇ=ಯಕ್ಷಜನರೆಂಬ ಸಮುದ್ರದಲ್ಲಿ ಮಗ್ನಃ=ಮುಳಿಗಿ ಹತಃ=ಆಪತ್ತಿಗೀಡಾದನು ಎಂದು ಹಾಹಾಕಾರಃ ಆಸೀತ್=ಹಾಹಾಕಾರ ಉಂಟಾಯಿತು. ।।೧೪।।

**ನದತ್ಸು ಯಾತುಧಾನೇಷು ಜಯಕಾಶಿಷ್ವಥೋ ಮೃಧೇ ।**
**ಉದತಿಷ್ಠದ್ರಥಸ್ತಸ್ಮಾನ್ನೀಹಾರಾದಿವ ಭಾಸ್ಕರಃ ।।೧೫।।**

ಮೃಧೇ=ಯುದ್ಧದಲ್ಲಿ ಯಾತುಧಾನೇಷು=ಯಕ್ಷರು ಜಯಕಾಶಿಷು=ಗೆಲುವಿನ ಸೂಚಕವಾಗಿ ನದತ್ಸು=ಧ್ವನಿ ಮಾಡುತ್ತಿರಲು ನೀಹಾರಾದ್ ಭಾಸ್ಕರಃ ಇವ=ಮಂಜಿನಿಂದ ಸೂರ್ಯನು ಎದ್ದುಬರುವಂತೆ ರಥಃ-ರಥಿಕನಾದ ಧ್ರುವನು ತಸ್ಮಾತ್=ಶಸ್ತ್ರಗಳ ಆ ರಾಶಿಯಿಂದ ಉದತಿಷ್ಠತ್=ಮೇಲೆ ಬಂದನು. (ಹೊರಬಂದನು.)।।೧೫।।

**ಧನುರ್ವಿಸ್ಫೂರ್ಜಯನ್ನುಗ್ರಂ ದ್ವಿಷತಾಂ ಖೇದಮುದ್ವಹನ್ ।**
**ಅಸ್ತ್ರೌಘಂ ವ್ಯಧಮದ್ಬಾಣೈರ್ಘನಾನೀಕಮಿವಾನಿಲಃ ॥೧೬॥**

ಉಗ್ರಂ=ಭಯಂಕರವಾದ ಧನುಃ=ಬಿಲ್ಲನ್ನು ವಿಸ್ಫೂರ್ಜಯನ್=ಟಂಕಾರ ಮಾಡುತ್ತ ದ್ವಿಷತಾಂ=ಶತ್ರುಗಳಿಗೆ ಖೇದಂ ಉದ್ವಹನ್=ಸಂಕಟ ಉಂಟುಮಾಡುತ್ತ, ಅನಿಲಃ=ಗಾಳಿಯು ಘನಾನೀಕಂ ಇವ=ಮೋಡಗಳನ್ನು ಚದುರಿಸುವಂತೆ ಬಾಣೈಃ=ಬಾಣಗಳಿಂದ ಅಸ್ತ್ರೌಘಂ= ಅಸ್ತ್ರಸಮೂಹವನ್ನು ವ್ಯಧಮತ್=ನಾಶಮಾಡಿದನು. ॥೧೬॥

**ತಸ್ಯ ತೇ ಚಾಪನಿರ್ಮುಕ್ತಾ ಭಿತ್ತ್ವಾ ವರ್ಮಾಣಿ ರಕ್ಷಸಾಮ್ ।**
**ಕಾಯಾನಾವಿವಿಶುಸ್ತಿಗ್ಮಾ ಗಿರೀನಶನಯೋ ಯಥಾ ॥೧೭॥**

ತಸ್ಯ=ಧ್ರುವನ ಚಾಪನಿರ್ಮುಕ್ತಾಃ=ಬಿಲ್ಲಿನಿಂದ ಬಿಡಲ್ಪಟ್ಟ ತಿಗ್ಮಾಃ=ತೀಕ್ಷ್ಣಗಳಾದ ತೇ=ಬಾಣಗಳು ರಕ್ಷಸಾಂ=ರಾಕ್ಷಸರ ವರ್ಮಾಣಿ=ಕವಚಗಳನ್ನು ಭಿತ್ವಾ=ಭೇದಿಸಿಕೊಂಡು, ಯಥಾ ಅಶನಯಃ ಗಿರೀನ್=ವಜ್ರಾಯುಧಗಳು (ಸಿಡಿಲುಗಳು) ಪರ್ವತಗಳನ್ನು ಪ್ರವೇಶಿಸುವಂತೆ ಕಾಯಾನ್=ರಾಕ್ಷಸರ ದೇಹಗಳನ್ನು ಆವಿವಿಶುಃ=ಪ್ರವೇಶಿಸಿದವು. ॥೧೭॥

**ಭಲ್ಲೈಃ ಸಂಛಿದ್ಯಮಾನಾನಾಂ ಶಿರೋಭಿಶ್ಚಾರುಕುಂಡಲೈಃ ।**
**ಊರುಭಿರ್ಹೇಮತಾಲಾಭೈರ್ದೋರ್ಭಿರ್ವಲಯವಲ್ಗುಭಿಃ ॥೧೮॥**

**ಹಾರಕೇಯೂರಮುಕುಟೈರುಷ್ಣೀಷೈಶ್ಚ ಮಹಾಧನೈಃ ।**
**ಆಸ್ತೃತಾಸ್ತಾ ರಣಭುವೋ ರೇಜುರ್ವೀರಮನೋಹರಾಃ ॥೧೯॥**

ಭಲ್ಲೈಃ=ಅರ್ಧಚಂದ್ರಾಕಾರವಾದ ಬಾಣಗಳಿಂದ ಸಂಛಿದ್ಯಮಾನಾನಾಂ= ಕತ್ತರಿಸಲ್ಪಡುವ ರಾಕ್ಷಸರ ಚಾರುಕುಂಡಲೈಃ=ಮನೋಹರಗಳಾದ ಕುಂಡಲಗಳುಳ್ಳ ಶಿರೋಭಿಃ=ತಲೆಗಳಿಂದಲೂ ಹೇಮತಾಲಾಭೈಃ=ಭಂಗಾರದ ತಾಲವೃಕ್ಷದಂತಿರುವ ಊರುಭಿಃ=ಕೈಗಳಿಂದಲೂ ಮಹಾಧನೈಃ=ಬಹಳ ಬೆಲೆಬಾಳುವ ಹಾರಕೇಯೂರಮುಕುಟೈಃ ಹಾರ=ಹಾರಗಳಿಂದ ಕೇಯೂರ=ಭುಜಕೀರ್ತಿಗಳಿಂದ (ಬಾಹುಬಂಧ) ಮುಕುಟೈಃ= ಕಿರೀಟಗಳಿಂದಲೂ ಚ=ಮತ್ತು ಉಷ್ಣೀಷೈಃ=ರುಮಾಲುಗಳಿಂದಲೂ ಆಸ್ತೃತಾಃ=ಹಾಸಲ್ಪಟ್ಟ ತಾಃ=ಆ ರಣಭುವಃ=ಯುದ್ಧಭೂಮಿಗಳು ಮನೋಹರಾಃ ರೇಜುಃ=ಸುಂದರವಾಗಿ ಶೋಭಿಸಿದವು. ॥೧೮-೧೯॥

ಎಲ್ಲಿಯೂ ಸರ್ವನಾಶವು ಕೇಳಲ್ಪಟ್ಟಿಲ್ಲ ನೋಡಲ್ಪಟ್ಟಿಲ್ಲ ಎಂಬ ಮಾತಿಗನುಗುಣವಾಗಿ ಹೇಳುವರು -

**ಹತಾವಶಿಷ್ಟಾ ಇತರೇ ರಣಾಜಿರಾ-**
**ದ್ರಕ್ಷೋಗಣಾಃ ಕ್ಷತ್ರಿಯವರ್ಯಸಾಯಕೈಃ ।**
**ಪ್ರಾಯೋ ನಿಕೃತ್ತಾವಯವಾ ವಿದುದ್ರುವು-**
**ರ್ಮೃಗೇಂದ್ರವಿಕ್ರೀಡಿತಯೂಥಪಾ ಇವ ॥೨೦॥**

ಹತಾವಶಿಷ್ಟಾಃ=ಅಳಿದು ಉಳಿದ ಇತರೇ ರಕ್ಷೋಗಣಾಃ=ಬೇರೆ ರಾಕ್ಷಸರ ಸಮೂಹಗಳು ಕ್ಷತ್ರಿಯವರ್ಯಸಾಯಕೈಃ=ಕ್ಷತ್ರಿಯಶ್ರೇಷ್ಠನಾದ ಧ್ರುವನ ಬಾಣಗಳಿಂದ ಪ್ರಾಯಃ=ಬಹಳವಾಗಿ ನಿಕೃತ್ತಾವಯವಾಃ=ಕತ್ತರಿಸಲ್ಪಟ್ಟ ಅವಯವಗಳುಳ್ಳವರಾಗಿ ಮೃಗೇಂದ್ರವಿಕ್ರೀಡಿತಯೂಥಪಾಃ ಇವ=ಸಿಂಹದಿಂದ ಓಡಿಸಲ್ಪಟ್ಟ ಆನೆಗಳಂತೆ (ಸಿಂಹದ ಜೊತೆಗೆ ಕ್ರೀಡೆಯನ್ನು ಪ್ರಾರಂಭಿಸಿದ ಆನೆಗಳಂತೆ) ವಿದುದ್ರುವುಃ=ಓಡಿದರು. ॥೨೦॥

ಈ ಸಂದರ್ಭದಲ್ಲಿ ಧ್ರುವನು ಶತ್ರುಗಳ ಪುರಪ್ರವೇಶ ಮಾಡಿ ಅಲ್ಲಿಯೇ ವಾಸಿಸಿದನೋ ಅಥವಾ ಅಲ್ಲಿಯ ಸಂಪತ್ತನ್ನು ತೆಗೆದುಕೊಂಡು ಹೊರಟನೋ ? ಎಂದರೆ, ಹೇಳುವರು -

**ಅಪಶ್ಯಮಾನಃ ಸ ತದಾऽऽತತಾಯಿನಂ**
**ಮಹಾಮೃಧೇ ಕಂಚನ ಮಾನವೋತ್ತಮಃ ।**
**ಪುರೀಂ ದಿದೃಕ್ಷನ್ನಪಿ ನಾವಿಶದ್ ದ್ವಿಷಾಂ**
**ನ ಮಾಯಿನಾಂ ವೇದ ಚಿಕೀರ್ಷಿತಂ ಜನಃ ॥೨೧॥**

ತದಾ=ಯಕ್ಷರ ಸೇನೆಯು ಪಲಾಯನ ಮಾಡಿದ ನಂತರ ಮಾನವೋತ್ತಮಃ ಸಃ=ಮನುಷ್ಯಶ್ರೇಷ್ಠನಾದ ಧ್ರುವನು ಮಹಾಮೃಧೇ=ದೊಡ್ಡದಾದ ಯುದ್ಧದಲ್ಲಿ ಕಂಚನ ಆತತಾಯಿನಂ=ಒಬ್ಬ ಶಸ್ತ್ರಪಾಣಿಯನ್ನೂ ಅಪಶ್ಯಮಾನಃ=ನೋಡದವನಾಗಿ ಪುರೀಂ= ಅಲಕಾಪಟ್ಟಣವನ್ನು ದಿದೃಕ್ಷನ್ ಅಪಿ=ನೋಡಬೇಕೆಂಬ ಅಪೇಕ್ಷೆಯುಳ್ಳವನಾಗಿದ್ದರೂ ಸಹ ನ ಆವಿಶತ್=ಪ್ರವೇಶಿಸಲಿಲ್ಲ, ಮಾಯಿನಾಂ=ಮಾಯಾವಿಗಳಾದ ದ್ವಿಷಾಂ=ಶತ್ರುಗಳ ಚಿಕೀರ್ಷಿತಂ=ಮಾಡಲಿಚ್ಛಿಸುವ ಕಾರ್ಯವನ್ನು (ಏನು ಮಾಡಬೇಕೆಂದಿರುವರೆಂಬುದನ್ನು) ಜನಃ ನ ವೇದ=ಜನರು ತಿಳಿಯಲಾರರಷ್ಟೇ ! ಆ ಕಾರಣ ಪ್ರವೇಶಿಸಲಿಲ್ಲ ಎಂದು ಭಾವ.

**ಇತಿ ಬ್ರುವಂಶ್ಚಿತ್ರರಥಃ ಸ್ವಸಾರಥಿಂ ಯತ್ತಃ ಪರೇಷಾಂ ಪ್ರತಿಯೋಗಶಂಕಿತಃ ।**
**ಶುಶ್ರಾವ ಶಬ್ದಂ ಜಲಧೇರಿವೇರಿತಂ ನಭಸ್ವತಾ ದಿಕ್ಷು ರಜೋऽನ್ವದೃಶ್ಯತ ॥೨೨॥**

ಚಿತ್ರರಥಃ=ಧ್ರುವನು ಸ್ವಸಾರಥಿಂ=ತನ್ನ ಸಾರಥಿಗೆ ಇತಿ=ಶತ್ರುಗಳ ಮನೋಗತವನ್ನು ಯಾರು ಬಲ್ಲರು ? ಎಂದು ಬ್ರುವನ್=ಹೇಳುತ್ತ ಪರೇಷಾಂ=ಶತ್ರುಗಳ ಪ್ರತಿಯೋಗಶಂಕಿತಃ= ಮತ್ತೆ ಪ್ರಯತ್ನಿಸುವರೆಂಬ ಶಂಕೆಯಿಂದ ಯತ್ತಃ=ಪ್ರಯತ್ನಶೀಲನಾಗಿದ್ದವನಾಗಿ, ಜಲಧೇಃ

**ಧನುರ್ವಿಸ್ಫೂರ್ಜಯನ್ನುಗ್ರಂ ದ್ವಿಷತಾಂ ಖೇದಮುದ್ವಹನ್ ।**
**ಅಸ್ತ್ರೌಘಂ ವ್ಯಧಮದ್ಬಾಣೈರ್ಘನಾನೀಕಮಿವಾನಿಲಃ ॥೧೬॥**

ಉಗ್ರಂ=ಭಯಂಕರವಾದ ಧನುಃ=ಬಿಲ್ಲನ್ನು ವಿಸ್ಫೂರ್ಜಯನ್=ಟಂಕಾರ ಮಾಡುತ್ತ ದ್ವಿಷತಾಂ=ಶತ್ರುಗಳಿಗೆ ಖೇದಂ ಉದ್ವಹನ್=ಸಂಕಟ ಉಂಟುಮಾಡುತ್ತ, ಅನಿಲಃ=ಗಾಳಿಯು ಘನಾನೀಕಂ ಇವ=ಮೋಡಗಳನ್ನು ಚದುರಿಸುವಂತೆ ಬಾಣೈಃ=ಬಾಣಗಳಿಂದ ಅಸ್ತ್ರೌಘಂ= ಅಸ್ತ್ರಸಮೂಹವನ್ನು ವ್ಯಧಮತ್=ನಾಶಮಾಡಿದನು. ॥೧೬॥

**ತಸ್ಯ ತೇ ಚಾಪನಿರ್ಮುಕ್ತಾ ಭಿತ್ವಾ ವರ್ಮಾಣಿ ರಕ್ಷಸಾಮ್ ।**
**ಕಾಯಾನಾವಿವಿಶುಸ್ತಿಗ್ಮಾ ಗಿರೀನಶನಯೋ ಯಥಾ ॥೧೭॥**

ತಸ್ಯ=ಧ್ರುವನ ಚಾಪನಿರ್ಮುಕ್ತಾಃ=ಬಿಲ್ಲಿನಿಂದ ಬಿಡಲ್ಪಟ್ಟ ತಿಗ್ಮಾಃ=ತೀಕ್ಷ್ಣಗಳಾದ ತೇ=ಬಾಣಗಳು ರಕ್ಷಸಾಂ=ರಾಕ್ಷಸರ ವರ್ಮಾಣಿ=ಕವಚಗಳನ್ನು ಭಿತ್ವಾ=ಭೇದಿಸಿಕೊಂಡು, ಯಥಾ ಅಶನಯಃ ಗಿರೀನ್=ವಜ್ರಾಯುಧಗಳು (ಸಿಡಿಲುಗಳು) ಪರ್ವತಗಳನ್ನು ಪ್ರವೇಶಿಸುವಂತೆ ಕಾಯಾನ್=ರಾಕ್ಷಸರ ದೇಹಗಳನ್ನು ಆವಿವಿಶುಃ=ಪ್ರವೇಶಿಸಿದವು. ॥೧೭॥

**ಭಲ್ಲೈಃ ಸಂಛಿದ್ಯಮಾನಾನಾಂ ಶಿರೋಭಿಶ್ಚಾರುಕುಂಡಲೈಃ ।**
**ಊರುಭಿರ್ಹೇಮತಾಲಾಭೈರ್ದೋರ್ಭಿರ್ವಲಯವಲ್ಗುಭಿಃ ॥೧೮॥**

**ಹಾರಕೇಯೂರಮುಕುಟೈರುಷ್ಣೀಷೈಶ್ಚ ಮಹಾಧನೈಃ ।**
**ಆಸ್ತೃತಾಸ್ತಾ ರಣಭುವೋ ರೇಜುರ್ವೀರಮನೋಹರಾಃ ॥೧೯॥**

ಭಲ್ಲೈಃ=ಅರ್ಧಚಂದ್ರಾಕಾರವಾದ ಬಾಣಗಳಿಂದ ಸಂಛಿದ್ಯಮಾನಾನಾಂ= ಕತ್ತರಿಸಲ್ಪಡುವ ರಾಕ್ಷಸರ ಚಾರುಕುಂಡಲೈಃ=ಮನೋಹರಗಳಾದ ಕುಂಡಲಗಳುಳ್ಳ ಶಿರೋಭಿಃ=ತಲೆಗಳಿಂದಲೂ ಹೇಮತಾಲಾಭೈಃ=ಭಂಗಾರದ ತಾಲವೃಕ್ಷದಂತಿರುವ ಊರುಭಿಃ=ಕೈಗಳಿಂದಲೂ ಮಹಾಧನೈಃ=ಬಹಳ ಬೆಲೆಬಾಳುವ ಹಾರಕೇಯೂರಮುಕುಟೈಃ ಹಾರ=ಹಾರಗಳಿಂದ ಕೇಯೂರ=ಭುಜಕೀರ್ತಿಗಳಿಂದ (ಬಾಹುಬಂಧ) ಮುಕುಟೈಃ= ಕಿರೀಟಗಳಿಂದಲೂ ಚ=ಮತ್ತು ಉಷ್ಣೀಷೈಃ=ರುಮಾಲುಗಳಿಂದಲೂ ಆಸ್ತೃತಾಃ=ಹಾಸಲ್ಪಟ್ಟ ತಾಃ=ಆ ರಣಭುವಃ=ಯುದ್ಧಭೂಮಿಗಳು ಮನೋಹರಾಃ ರೇಜುಃ=ಸುಂದರವಾಗಿ ಶೋಭಿಸಿದವು. ॥೧೮-೧೯॥

ಎಲ್ಲಿಯೂ ಸರ್ವನಾಶವು ಕೇಳಲ್ಪಟ್ಟಿಲ್ಲ ನೋಡಲ್ಪಟ್ಟಿಲ್ಲ ಎಂಬ ಮಾತಿಗನುಗುಣವಾಗಿ ಹೇಳುವರು -

**ಹತಾವಶಿಷ್ಟಾ ಇತರೇ ರಣಾಜಿರಾ-**
**ದ್ರಕ್ಷೋಗಣಾಃ ಕ್ಷತ್ರಿಯವರ್ಯಸಾಯಕೈಃ ।**
**ಪ್ರಾಯೋ ನಿಕೃತ್ತಾವಯವಾ ವಿದುದ್ರುವು-**
**ರ್ಮೃಗೇಂದ್ರವಿಕ್ರೀಡಿತಯೂಥಪಾ ಇವ ॥೨೦॥**

ಹತಾವಶಿಷ್ಟಾಃ=ಅಳಿದು ಉಳಿದ ಇತರೇ ರಕ್ಷೋಗಣಾಃ=ಬೇರೆ ರಾಕ್ಷಸರ ಸಮೂಹಗಳು ಕ್ಷತ್ರಿಯವರ್ಯಸಾಯಕೈಃ=ಕ್ಷತ್ರಿಯಶ್ರೇಷ್ಠನಾದ ಧ್ರುವನ ಬಾಣಗಳಿಂದ ಪ್ರಾಯಃ=ಬಹಳವಾಗಿ ನಿಕೃತ್ತಾವಯವಾಃ=ಕತ್ತರಿಸಲ್ಪಟ್ಟ ಅವಯವಗಳುಳ್ಳವರಾಗಿ ಮೃಗೇಂದ್ರವಿಕ್ರೀಡಿತಯೂಥಪಾಃ ಇವ=ಸಿಂಹದಿಂದ ಓಡಿಸಲ್ಪಟ್ಟ ಆನೆಗಳಂತೆ (ಸಿಂಹದ ಜೊತೆಗೆ ಕ್ರೀಡೆಯನ್ನು ಪ್ರಾರಂಭಿಸಿದ ಆನೆಗಳಂತೆ) ವಿದುದ್ರುವುಃ=ಓಡಿದರು. ॥೨೦॥

ಈ ಸಂದರ್ಭದಲ್ಲಿ ಧ್ರುವನು ಶತ್ರುಗಳ ಪುರಪ್ರವೇಶ ಮಾಡಿ ಅಲ್ಲಿಯೇ ವಾಸಿಸಿದನೋ ಅಥವಾ ಅಲ್ಲಿಯ ಸಂಪತ್ತನ್ನು ತೆಗೆದುಕೊಂಡು ಹೊರಟನೋ ? ಎಂದರೆ, ಹೇಳುವರು -

**ಅಪಶ್ಯಮಾನಃ ಸ ತದಾಽಽತತಾಯಿನಂ**
**ಮಹಾಮೃಧೇ ಕಂಚನ ಮಾನವೋತ್ತಮಃ ।**
**ಪುರೀಂ ದಿದೃಕ್ಷನ್ನಪಿ ನಾವಿಶದ್ ದ್ವಿಷಾಂ**
**ನ ಮಾಯಿನಾಂ ವೇದ ಚಿಕೀರ್ಷಿತಂ ಜನಃ ॥೨೧॥**

ತದಾ=ಯಕ್ಷರ ಸೇನೆಯು ಪಲಾಯನ ಮಾಡಿದ ನಂತರ ಮಾನವೋತ್ತಮಃ ಸಃ=ಮನುಷ್ಯಶ್ರೇಷ್ಠನಾದ ಧ್ರುವನು ಮಹಾವೃಧೇ=ದೊಡ್ಡದಾದ ಯುದ್ಧದಲ್ಲಿ ಕಂಚನ ಆತತಾಯಿನಂ=ಒಬ್ಬ ಶಸ್ತ್ರಪಾಣಿಯನ್ನೂ ಅಪಶ್ಯಮಾನಃ=ನೋಡದವನಾಗಿ ಪುರೀಂ= ಅಲಕಾಪಟ್ಟಣವನ್ನು ದಿದೃಕ್ಷನ್ ಅಪಿ=ನೋಡಬೇಕೆಂಬ ಅಪೇಕ್ಷೆಯುಳ್ಳವನಾಗಿದ್ದರೂ ಸಹ ನ ಆವಿಶತ್=ಪ್ರವೇಶಿಸಲಿಲ್ಲ. ಮಾಯಿನಾಂ=ಮಾಯಾವಿಗಳಾದ ದ್ವಿಷಾಂ=ಶತ್ರುಗಳ ಚಿಕೀರ್ಷಿತಂ=ಮಾಡಲಿಚ್ಛಿಸುವ ಕಾರ್ಯವನ್ನು (ಏನು ಮಾಡಬೇಕೆಂದಿರುವರೆಂಬುದನ್ನು) ಜನಃ ನ ವೇದ=ಜನರು ತಿಳಿಯಲಾರರಷ್ಟೇ ! ಆ ಕಾರಣ ಪ್ರವೇಶಿಸಲಿಲ್ಲ ಎಂದು ಭಾವ.

**ಇತಿ ಬ್ರುವಂಶ್ಚಿತ್ರರಥಃ ಸ್ವಸಾರಥಿಂ ಯತ್ತಃ ಪರೇಷಾಂ ಪ್ರತಿಯೋಗಶಂಕಿತಃ ।**
**ಶುಶ್ರಾವ ಶಬ್ದಂ ಜಲಧೇರಿವೇರಿತಂ ನಭಸ್ವತಾ ದಿಕ್ಷು ರಜೋಽನ್ವದೃಶ್ಯತ ॥೨೨॥**

ಚಿತ್ರರಥಃ=ಧ್ರುವನು ಸ್ವಸಾರಥಿಂ=ತನ್ನ ಸಾರಥಿಗೆ ಇತಿ=ಶತ್ರುಗಳ ಮನೋಗತವನ್ನು ಯಾರು ಬಲ್ಲರು ? ಎಂದು ಬ್ರುವನ್=ಹೇಳುತ್ತ ಪರೇಷಾಂ=ಶತ್ರುಗಳ ಪ್ರತಿಯೋಗಶಂಕಿತಃ= ಮತ್ತೆ ಪ್ರಯತ್ನಿಸುವರೆಂಬ ಶಂಕೆಯಿಂದ ಯತ್ತಃ=ಪ್ರಯತ್ನಶೀಲನಾಗಿದ್ದವನಾಗಿ, ಜಲಧೇಃ

ಘೋರಿತಂ ಇವ=ಮೋಡದಿಂದ ಬಂದಂತಿರುವ ಶಬ್ದಂ ಶುಶ್ರಾವ=ಶಬ್ದವನ್ನು ಕೇಳಿದನು. ನಭಸ್ವತಾ ಅನು=ಗಾಳಿಯ ಜೊತೆಗೆ ದಿಕ್ಷು=ಎಲ್ಲ ದಿಕ್ಕುಗಳಲ್ಲಿ ರಜಃ ಅನ್ವದೃಶ್ಯತ್=ಧೂಳಿಯನ್ನು ಕಂಡನು. ।।೨೨।।

**ಕ್ಷಣೇನಾಚ್ಛಾದಿತಂ ವ್ಯೋಮ ಘನಾನೀಕೇನ ಸರ್ವತಃ ।**
**ವಿಸ್ಫುರತ್ತಡಿತಾ ದಿಕ್ಷು ತ್ರಾಸಯಂಸ್ತನಯಿತ್ನುನಾ ।।೨೩।।**

ವ್ಯೋಮ=ಆಕಾಶವು ಕ್ಷಣೇನ=ಒಂದು ಕ್ಷಣದಲ್ಲಿ ಸರ್ವತಃ ದಿಕ್ಷು=ಎಲ್ಲ ದಿಕ್ಕುಗಳಲ್ಲಿ ವಿಸ್ಫುರತ್ತಡಿತಾ=ಪ್ರಕಾಶಮಾನವಾದ ಮಿಂಚುಗಳಿಂದ ಕೂಡಿದ ತ್ರಾಸಯಂಸ್ತನಯಿತ್ನುನಾ= ಭಯಪಡಿಸುವ ಸಿಡಿಲುಗಳಿಂದ ಕೂಡಿದ ಘನಾನೀಕೇನ=ಮೋಡಗಳ ಸಮೂಹದಿಂದ ಆಚ್ಛಾದಿತಂ=ಮುಚ್ಚಲ್ಪಟ್ಟಿತು. ।।೨೩।।

**ವವೃಷೂ ರುಧಿರೌಘಾಸ್ಥಿಪೂಯವಿಣ್ಮೂತ್ರಮೇಧಸಃ ।**
**ನಿಪೇತುರ್ಗಗನಾದಸ್ಯ ಕಬಂಧಾನ್ಯಗ್ರತೋಽನಘ ।।೨೪।।**

ಅನಘ=ಪಾಪಹರಿತನಾದ ವಿದುರನೇ ! ಮೇಘಾಃ=ಮೋಡಗಳು ರುಧಿರೌಘಾಸ್ಥಿ-ಪೂಯವಿಣ್ಮೂತ್ರಮೇಧಸಃ ರುಧಿರೌಘಾ=ರಕ್ತಸಮೂಹ ಅಸ್ಥಿ=ಎಲಬು ಪೂಯ=ಕೀವು ವಿಟ್=ಮಲಮೂತ್ರ ಮೇಧಸಃ=ನೆಣಗಳನ್ನು ವವೃಷುಃ=ಮಳೆಗೆರೆದವು. ಅಸ್ಯ ಅಗ್ರತಃ=ಧ್ರುವನ ಮುಂದೆ ಗಗನಾತ್=ಆಕಾಶದಿಂದ ಕಬಂಧಾನಿ=ತಲೆಯಿಲ್ಲದ ಶರೀರಗಳು (ಮುಂಡಗಳು) ನಿಪೇತುಃ=ಬಿದ್ದವು. ।।೨೪।।

**ತತಃ ಖೇಽದೃಶ್ಯತ ಗಿರೇರ್ನಿಪೇತುಃ ಸರ್ವತೋ ದಿಶಮ್ ।**
**ಗದಾಪರಿಘನಿಸ್ತ್ರಿಂಶಮುಸಲಾ ಸಾಶ್ಮವರ್ಷಿಣಃ ।।೨೫।।**

ತತಃ=ಕಬಂಧಗಳು ಬಿದ್ದನಂತರ ಖೇ=ಆಕಾಶದಲ್ಲಿ ಗಿರಿಃ ಅದೃಶ್ಯತ=ಪರ್ವತವು ಕಾಣಿಸಿತು. ಗಿರೇಃ=ಪರ್ವತದ ಸರ್ವತೋದಿಶಂ=ಎಲ್ಲ ದಿಕ್ಕಿನಲ್ಲಿಯೂ ಸಾಶ್ಮವರ್ಷಿಣಃ= ಕಲ್ಲುಗಳ ಮಳೆಯಿಂದ ಕೂಡಿದ ಗದಾಪರಿಘನಿಸ್ತ್ರಿಂಶಮುಸಲಾಃ ನಿಪೇತುಃ=ಗದಾ, ಪರಿಘ, ಖಡ್ಗ, ಒನಕೆ ಮುಂತಾದ ಆಯುಧಗಳು ಬಿದ್ದವು. ।।೨೫।।

**ಅಹಯೋಽಶನಿನಿಃಶ್ವಾಸಾ ವಮಂತೋಽಗ್ನಿಂ ರುಷಾಽಕ್ಷಿಭಿಃ ।**
**ಅಭ್ಯಧಾವನ್ ಗಜಾ ಮತ್ತಾಃ ಸಿಂಹವ್ಯಾಘ್ರಾಶ್ಚ ಯೂಥಶಃ ।। ೨೬ ।।**

ರುಷಾ=ಸಿಟ್ಟಿನಿಂದ ಅಕ್ಷಿಭಿಃ=ಕಣ್ಣುಗಳಿಂದ ಅಗ್ನಿಂ ವಮಂತಃ=ಕೆಂಡಕಾರುವ ಅಶನಿನಿಃಶ್ವಾಸಾಃ=ಮೇಘವಹ್ನಿಜ್ವಾಲೆಯಂತೆ ಶ್ವಾಸಬಿಡುವ ಅಹಯಃ=ಹಾವುಗಳು,

ಮತ್ತಾಗಜಾಃ=ಮದವೇರಿದ ಆನೆಗಳು, ಸಿಂಹವ್ಯಾಘ್ರಾಶ್ಚ=ಸಿಂಹ, ಹುಲಿಗಳೂ ಸಹ ಯೂಥಶಃ=ಗುಂಪು ಗುಂಪಾಗಿ ಅಭ್ಯಧಾವನ್=ಓಡಿದವು. ।।೨೬।।

**ಸಮುದ್ರ ಊರ್ಮಿಭಿರ್ಭೀಮಃ ಪ್ಲಾವಯನ್ ಸರ್ವತೋ ಭುವಮ್ ।**
**ಆಸಸಾದ ಮಹಾಹ್ರಾದಃ ಕಲ್ಪಾಂತ ಇವ ಭೀಷಣಃ ।।೨೭।।**

ಮಹಾಹ್ರಾದಃ=ಭಾರಿ ಧ್ವನಿಯುಳ್ಳ ಭೀಮಃ=ಭಯಂಕರವಾದ ಸಮುದ್ರಃ=ಸಮುದ್ರವು ಊರ್ಮಿಭಿಃ=ತೆರೆಗಳಿಂದ ಸರ್ವತಃ=ಸುತ್ತಲೂ ಭುವಂ ಪ್ಲಾವಯನ್=ಭೂಮಿಯನ್ನು ಮುಳುಗಿಸುತ್ತಾ ಕಲ್ಪಾಂತೇ ಇವ=ಪ್ರಲಯಕಾಲದಂತೆ ಭೀಷಣಃ ಆಸಸಾದ=ಅತ್ಯಂತ ಭೀಕರವಾಗಿ ಪ್ರಾಪ್ತವಾಯಿತು. ।।೨೭।।

**ಏವಂವಿಧಾನ್ಯನೇಕಾನಿ ತ್ರಾಸನಾನ್ಯಮನಸ್ವಿನಾಮ್ ।**
**ಸಸೃಜುಸ್ತಿಗ್ಮಗತಯ ಆಸುರ್ಯಾ ಮಾಯಯಾಽಸುರಾಃ ।।೨೮।।**

ತಿಗ್ಮಗತಯಃ=ಕ್ರೂರವಾದ ಪ್ರವೃತ್ತಿವುಳ್ಳ ಅಸುರಾಃ=ಯಕ್ಷರು ಆಸುರ್ಯಾ=ಅಸುರರಿಗೆ ಪ್ರಿಯವಾದ ಮಾಯಯಾ=ಮಾಯಾಶಕ್ತಿಯಿಂದ ಅಮನಸ್ವಿನಾಂ=ಲಾಭವಿಲ್ಲದವರಿಗೆ ತ್ರಾಸನಾನಿ=ಭಯಜನಕಗಳಾದ (ಭಯ ಉಂಟುಮಾಡುವ) ಏವಂವಿಧಾನಿ ಅನೇಕಾನಿ ಸಸೃಜುಃ=ಮೇಲೆ ವಿವರಿಸಿದಂತೆ ಬಹುತರವಾದ ಪದಾರ್ಥಗಳನ್ನು ಸೃಷ್ಟಿಸಿದರು. ।।೨೮।।

**ಧ್ರುವೇ ಪ್ರಯುಕ್ತಾಮಸುರೈಸ್ತಾಂ ಮಾಯಾಮತಿದುಸ್ತರಾಮ್ ।**
**ನಿಶಾಮ್ಯ ತಸ್ಯ ಮುನಯಃ ಶಮಾಶಂಸನ್ ಸಮಾಗತಾಃ ।।೨೯।।**

ಅಸುರೈಃ=ಯಕ್ಷರಿಂದ ಧ್ರುವೇ=ಧ್ರುವನ ಮೇಲೆ ಪ್ರಯುಕ್ತಾಂ=ಉಪಯೋಗಿಲ್ಪಟ್ಟ ಅತಿದುಸ್ತರಾಂ=ಅತ್ಯಂತ ದಾಟಲಶಕ್ಯವಾದ ಮಾಯಾಂ=ಮಾಯೆಯನ್ನು ನಿಶಾಮ್ಯ=ನೋಡಿ ಸಮಾಗತಾಃ=ಧಾವಿಸಿ ಬಂದ ಮುನಯಃ=ಋಷಿಗಳು ತಸ್ಯ=ಧ್ರುವನಿಗೆ ಶಂ ಆಶಂಸನ್= ಕಲ್ಯಾಣವನ್ನು ಪ್ರಾರ್ಥಿಸಿದರು. ।।೨೯।।

**ಮುನಯ ಊಚುಃ -**

**ಔತ್ತಾನಪಾದೇ ಭಗವಾಂಸ್ತವ ಶಾರ್ಙ್ಗಧನ್ವಾ**
**ದೇವಃ ಕ್ಷಿಣೋತ್ವವನತಾರ್ತಿಹರೋ ವಿಪಕ್ಷಾನ್ ।**
**ಯನ್ನಾಮಧೇಯಮಭಿಧಾಯ ನಿಶಮ್ಯ ಚಾದ್ಧಾ**
**ಲೋಕೋಽಂಜಸಾ ತರತಿ ದುಸ್ತರಮಂಗ ಮೃತ್ಯುಮ್ ।।೩೦।।**

ಅಂಗ ಔತ್ತಾನಪಾದೇ=ಪ್ರಿಯನಾದ ಧ್ರುವನೇ ! ಲೋಕಃ=ಜನರು ಯನ್ನಾಮಧೇಯಂ =ಯಾವನ ಹೆಸರನ್ನು ಅಭಿಧಾಯ=ಹೇಳಿ ನಿಶಮ್ಯ=ಕೇಳಿ ಅದ್ಧಾ=ಸಾಕ್ಷಾತ್ತಾಗಿ ಅಂಜಸಾ=ಸುಖವಾಗಿ ದುಸ್ತರಂ=ದಾಟಲಾಗದ ಮೃತ್ಯುಂ=ಮರಣವನ್ನು ತರತಿ=ದಾಟುವರೋ ಸಃ=ಅಂತಹ ಅವನತಾರ್ತಿಹರಃ=ಶರಣಾಗತರ ದುಃಖವನ್ನು ಕಳೆಯುವ ಭಗವಾನ್= ಐಶ್ವರ್ಯಶಾಲಿಯಾದ ಶಾರ್ಙ್ಗಧನ್ವಾ=ಈ ಹೆಸರಿನ ಧನುಸ್ಸನ್ನು ಧರಿಸಿದ ದೇವಃ= ಶ್ರೀಮನ್ನಾರಾಯಣನು ತವ=ನಿನ್ನ ವಿಪಕ್ಷಾನ್=ವಿರೋಧಿಗಳನ್ನು ಕ್ಷಿಣೋತು=ನಾಶಮಾಡಲಿ.

''ನಾರಾಯಣನು ನಿನ್ನ ವಿರೋಧಿಗಳನ್ನು ನಾಶಮಾಡಲಿ'' ಎಂದು ಪ್ರಾರ್ಥಿಸುವ ಮೂಲಕ ಧ್ರುವನಿಗೆ ನಾರಾಯಣಾಸ್ತ್ರವನ್ನು ಜ್ಞಾಪಿಸಿದರು ಎಂದು ಭಾವ. ।।೩೦।।

**ಮೈತ್ರೇಯ ಉವಾಚ -**

**ನಿಶಮ್ಯ ವದತಾಮೇವಂ ಋಷೀಣಾಂ ಧನುಷಿ ಧ್ರುವಃ ।**
**ಸಂದಧೇಽಸ್ತ್ರಮುಪಸ್ಪೃಶ್ಯ ಯನ್ನಾರಾಯಣನಿರ್ಮಿತಮ್ ।।೩೧ ।।**

ಧ್ರುವಃ=ಧ್ರುವನು ಏವಂ=ಈ ರೀತಿ ವದತಾಂ=ಹೇಳುವ ಋಷೀಣಾಂ=ಋಷಿಗಳ ಮಾತನ್ನು ನಿಶಮ್ಯ=ಕೇಳಿ ಉಪಸ್ಪೃಶ್ಯ=ಆಚಮನಾದಿಗಳನ್ನು ಮಾಡಿ ಧನುಷಿ=ಬಿಲ್ಲಿನಲ್ಲಿ ಯತ್ ನಾರಾಯಣನಿರ್ಮಿತಂ=ನಾರಾಯಣನಿಂದ ವ್ಯಕ್ತವಾದ ಯಾವ ಅಸ್ತ್ರಂ=ಅಸ್ತ್ರವೋ ಆ ಅಸ್ತ್ರವನ್ನು (ನಾರಾಯಣಾಸ್ತ್ರವನ್ನು) ಸಂದಧೇ=ಹೂಡಿದನು. ।।೩೧।।

ಆ ಅಸ್ತ್ರದ ಮಾಹಾತ್ಮ್ಯವನ್ನು ಹೇಳುವರು -

**ಸಂಧೀಯಮಾನ ಏತಸ್ಮಿನ್ ಮಾಯಾಗುಹ್ಯಕನಿರ್ಮಿತಾಃ ।**
**ಕ್ಷಿಪ್ರಂ ವಿನೇಶುರ್ವಿದುರ ಕ್ಲೇಶಾ ಜ್ಞಾನೋದಯೇ ಯಥಾ ।।೩೨।।**

ಹೇ ವಿದುರ=ಎಲೋ ವಿದುರನೇ ! ಯಥಾ=ಹೇಗೆ ಜ್ಞಾನೋದಯೇ= ಅಪರೋಕ್ಷಜ್ಞಾನವಾದಾಗ ಕ್ಲೇಶಾಃ=ಅವಿದ್ಯಾ, ಅಸ್ಮಿತಾ, ರಾಗ, ದ್ವೇಷ ಅಭಿನಿವೇಶಗಳೆಂಬ ಐದು ಕ್ಲೇಶಗಳು ದೂರವಾಗುವವೋ ತಥಾ=ಅದರಂತೆ ಏತಸ್ಮಿನ್=ಈ ನಾರಾಯಣಾಸ್ತ್ರವು ಸಂಧೀಯಮಾನೇ=ಪ್ರಯೋಗಿಸಲ್ಪಡುತ್ತಿರಲು ಗುಹ್ಯಕನಿರ್ಮಿತಾಃ=ಯಕ್ಷರಿಂದ ಸೃಷ್ಟಿಸಲ್ಪಟ್ಟ ಮಾಯಾಃ=ಮಾಯೆಗಳು ಕ್ಷಿಪ್ರಂ=ಶೀಘ್ರದಲ್ಲಿ ವಿನೇಶುಃ=ನಾಶವಾದವು. ।।೩೨।।

**ತಸ್ಯಾರ್ಷಾಸ್ತ್ರಂ ಧನುಷಿ ಪ್ರಯುಂಜತಃ**
**ಸುವರ್ಣಪುಂಖಾಃ ಕಲಹಂಸವಾಸಸಃ ।**
**ವಿನಿಃಸೃತಾ ಆವಿವಿಶುರ್ದ್ವಿಷದ್ಬಲಂ**
**ವನಂ ಯಥಾ ಭೀಮರವಾಃ ಶಿಖಂಡಿನಃ ।।೩೩।।**

ಆರ್ಷಾಸ್ತ್ರಂ=ಋಷಿಗಳಿಂದ ಸ್ಮಾರಿತವಾದ ನಾರಾಯಣಾಸ್ತ್ರವನ್ನು ಧನುಷಿ=ಧನುಸ್ಸಿನಲ್ಲಿ ಪ್ರಯುಂಜತಃ ಸತಃ=ಜೋಡಿಸುತ್ತಿರಲು (ಸಂಧಾನ ಮಾಡುತ್ತಿರಲು), ಯಥಾ=ಹೇಗೆ ಭೀಮರವಾಃ=ಭಯಂಕರ ಕೇಕೆ ಹಾಕುವ ಶಿಖಂಡಿನಃ=ನವಿಲುಗಳು ವನಂ=ವನವನ್ನು ಪ್ರವೇಶಿಸುವವೋ ಅದರಂತೆ ತಸ್ಯ=ಧನುಸ್ಸಿನಿಂದ ಸುವರ್ಣಪುಂಖಾಃ=ಚಿನ್ನದ ಮೂಲಪ್ರದೇಶವಿರುವ ಕಲಹಂಸವಾಸಸಃ=ದೊಡ್ಡ ಹಂಸಪಕ್ಷಿಯಂತೆ ರೆಕ್ಕೆಯುಳ್ಳ ಬಾಣಗಳು ವಿನಿಸೃತಾಃ=ಹೊರಹೊರಟವುಗಳಾಗಿ ಸುಯ್‌ಗುಡುತ್ತ ದ್ವಿಷದ್ಬಲಂ=ಶತ್ರುಸೇನೆಯನ್ನು ಆವಿವಿಶುಃ=ಪ್ರವೇಶಿಸಿದವು. ।।೩೩।।

**ತೈಸ್ತಿಗ್ಮಧಾರೈಃ ಪ್ರಧನೇ ಶಿಲೀಮುಖೈ-**
**ರಿತಸ್ತತಃ ಪುಣ್ಯಜನಾ ಉಪದ್ರುತಾಃ ।**
**ತಮಭ್ಯಧಾವನ್ ಕುಪಿತಾ ಉದಾಯುಧಾಃ**
**ಸುಪರ್ಣಮುನ್ನದ್ಧಫಣಾ ಇವಾಹಯಃ ।।೩೪।।**

ಪ್ರಧನೇ=ಯುದ್ಧದಲ್ಲಿ ತಿಗ್ಮಧಾರೈಃ=ತೀಕ್ಷ್ಣವಾದ ಅಗ್ರಭಾಗವುಳ್ಳ ತೈಃ=ಆ ಶಿಲೀಮುಖೈಃ=ಬಾಣಗಳಿಂದ ಇತಃ ತತಃ=ಎಲ್ಲ ಕಡೆಗೆ ಪುಣ್ಯಜನಾಃ=ಯಕ್ಷರು ಉಪದ್ರುತಾಃ ಹೊಡಿಸಿಕೊಂಡವರಾಗಿ (ಪೀಡಿತರಾಗಿ) ಕುಪಿತಾಃ=ಕೋಪಗೊಂಡವರಾಗಿ ಉದಾಯುಧಾಃ ಆಯುಧಗಳನ್ನು ಎತ್ತಿಕೊಂಡು ಉನ್ನದ್ಧಫಣಾಃ ಅಹಯಃ ಸುಪರ್ಣಂ ಇವ=ಹೆಡೆಯೆತ್ತಿದ ಹಾವುಗಳು ಗರುಡನನ್ನು ಎದುರಿಸುವಂತೆ ತಂ=ಧ್ರುವನನ್ನು ಕುರಿತು ಅಭ್ಯಧಾವನ್=ಎದುರಾಗಿ ಧಾವಿಸಿದರು.

ಹಾವು ಹೇಗೆ ಗರುಡನಿಗೆ ಏನೂ ಮಾಡಲಾರವೋ ಹಾಗೆ ಇವರ ಪ್ರಯತ್ನವೂ ವಿಫಲವೇ ಎಂದು ಸೂಚಿತವಾಗುವದು. ।।೩೪।।

**ಸ ತಾನ್ ಪೃಷತ್ಕೈರಭಿಧಾವತೋ ಮೃಧೇ**
**ನಿಕೃತ್ತಬಾಹೂರುಶಿರೋಧರೋದರಾನ್ ।**
**ನಿನಾಯ ಲೋಕಂ ಪರಮರ್ಕಮಂಡಲಂ**
**ವ್ರಜಂತಿ ನಿರ್ಭಿದ್ಯ ಯಮೂರ್ಧ್ವರೇತಸಃ ।।೩೫।।**

ಸಃ=ಧ್ರುವನು ಮೃಧೇ=ಯುದ್ಧದಲ್ಲಿ ಅಭಿಧಾವತಃ=ಎದುರಾಗಿ ಬರುವ ತಾನ್=ಯಕ್ಷರನ್ನು ಪೃಷತ್ಕೈಃ=ಬಾಣಗಳಿಂದ ನಿಕೃತ್ತಬಾಹೊರುಶಿರೊಧರೋದರಾನ್= ಕತ್ತರಿಸಲ್ಪಟ್ಟ ಭುಜಗಳು ತೊಡೆಗಳು, ಕುತ್ತಿಗೆ, ಹೊಟ್ಟೆ ಮುಂತಾದವುಗಳುಳ್ಳವರನ್ನಾಗಿ ಮಾಡಿ (ಅಂಗಾಂಗಗಳನ್ನು ಕತ್ತರಿಸಿ), ಊರ್ಧ್ವರೇತಸಃ=ತಪಸ್ವಿಗಳು (ಸನ್ಯಾಸಿಗಳು) ಅರ್ಕಮಂಡಲಂ

ವಿಭಿದ್ಯ=ಸೂರ್ಯಮಂಡಲವನ್ನು ಭೇದಿಸಿಕೊಂಡು ಯಂ=ಯಾವ ಲೋಕವನ್ನು ವ್ರಜಂತಿ=ತಲುಪುವರೋ ತಂ ಪರಂ ಲೋಕಂ ನಿನಾಯ=ಆ ಉತ್ತಮಲೋಕಕ್ಕೆ ಕಳಿಸಿದನು.

**ತಾನ್ ಹನ್ಯಮಾನಾನಭಿವೀಕ್ಷ್ಯ ಗುಹ್ಯಕಾ-**
**ನನಾಗಸಶ್ಚಿತ್ರರಥೇನ ಭೂರಿಶಃ ।**
**ಔತ್ತಾನಪಾದಿಂ ಕೃಪಯಾ ಪಿತಾಮಹೋ**
**ಮನುರ್ಜಗಾದೋಪಗತಃ ಸಹರ್ಷಿಭಿಃ ॥೩೬॥**

ಪಿತಾಮಹಃ ಮನುಃ=ಧ್ರುವನ ಅಜ್ಜನಾದ ಸ್ವಾಯಂಭುವಮನುವು ಚಿತ್ರರಥೇನ=ಧ್ರುವನಿಂದ ಭೂರಿಶಃ=ಪುನಃ ಪುನಃ ಅನಾಗಸಃ=ನಿರಪರಾಧಿಗಳಾದ ಹನ್ಯಮಾನಾನ್=ಕೊಲ್ಲಲ್ಪಡುವ ತಾನ್ ಗುಹ್ಯಕಾನ್=ಆ ಯಕ್ಷರನ್ನು ಅಭಿವೀಕ್ಷ್ಯ=ನೋಡಿ ಕೃಪಯಾ=ದಯೆಯಿಂದ ಸಹರ್ಷಿಭಿಃ=ಋಷಿಗಳಿಂದ ಸಹಿತನಾಗಿ ಉಪಗತಃ=ಸಮೀಪಕ್ಕೆ ಬಂದು ಔತ್ತಾನಪಾದಿಂ=ಧ್ರುವನನ್ನು ಕುರಿತು ಜಗಾದ=ಹೇಳಿದನು. ॥೩೬॥

**ಮನುರುವಾಚ -**

**ಅಲಂ ವತ್ಸಾತಿರೋಷೇಣ ತಮೋದ್ವಾರೇಣ ಪಾಪ್ಮನಾ ।**
**ಯೇನ ಪುಣ್ಯಜನಾನೇತಾನವಧೀಸ್ತ್ವಮನಾಗಸಃ ॥೩೭॥**

ವತ್ಸ=ಮಗುವೇ ! ತ್ವಂ=ನೀನು ಯೇನ=ಯಾವ ರೋಷದಿಂದ ಅನಾಗಸಃ=ನಿರಪರಾಧಿಗಳಾದ ಏತಾನ್ ಪುಣ್ಯಜನಾನ್=ಈ ಯಕ್ಷರನ್ನು ಅವಧೀಃ=ಸಂಹರಿಸಿದ್ದೀಯೋ ತೇನ=ಅಂತಹ ತಮೋದ್ವಾರೇಣ=ಯಥಾರ್ಥಜ್ಞಾನಪ್ರತಿಬಂಧಕವಾದುದರಿಂದ ನರಕಕ್ಕೆ ಮಾರ್ಗವಾದ ಪಾಪ್ಮನಾ=ಪಾಪಸಾಧನವಾದ ರೋಷೇಣ ಅಲಂ=ಕೋಪ ಸಾಕು. ॥೩೭॥

**ನಾಸ್ಮತ್ಕುಲೋಚಿತಂ ತಾತ ಕರ್ಮೈತತ್ ಸದ್ವಿಗರ್ಹಿತಮ್ ।**
**ವಧೋऽಯಮುಪದೇವಾನಾಮಾರಬ್ಧಸ್ತೇऽಕೃತೈನಸಾಮ್ ॥೩೮॥**

ತಾತ=ಧ್ರುವನೇ ! ಯತ್=ಯಾವ ಅಕೃತೈನಸಾಂ=ಪಾಪ ಮಾಡದಿರುವ ಉಪದೇವಾನಾಂ=ಗುಹ್ಯಕರ ಅಯಂ ವಧಃ=ಈ ಸಂಹಾರವು ತೇ=ನಿನ್ನಿಂದ ಆರಬ್ಧಃ=ಪ್ರಾರಂಭಿಸಿಲ್ಪಟ್ಟಿದೆ. ಏತತ್ ಕರ್ಮ=ಈ ಕೆಲಸವು ಸದ್ವಿಗರ್ಹಿತಂ=ಸಜ್ಜನರಿಂದ ನಿಂದಿತವಾಗಿದೆ. ಮತ್ತು ಅಸ್ಮತ್ಕುಲೋಚಿತಂ ನ=ನಮ್ಮ ವಂಶದಲ್ಲಿ ಜನಿಸಿದವರಿಗೆ ಯೋಗ್ಯವಾದದ್ದೂ ಅಲ್ಲ. ॥೩೮॥

**ನನ್ವೇಕಸ್ಯಾಪರಾಧೇನ ತತ್ಸಂಗಾದ್ಬಹವೋ ಹತಾಃ ।**
**ಭ್ರಾತುರ್ವಧಾಭಿತಪ್ತೇನ ತ್ವಯಾऽಂಗ ಭ್ರಾತೃವತ್ಸಲ ॥೩೯॥**

ಹೇ ಅಂಗ=ಮಗುವೇ ! ಭ್ರಾತೃವತ್ಸಲ=ತಮ್ಮನ ಮೇಲೆ ವಾತ್ಸಲ್ಯವುಳ್ಳ ಧ್ರುವನೇ ! ಭ್ರಾತುಃ ವಧಾಭಿತಪ್ತೇನ ತ್ವಯಾ=ತಮ್ಮನ ಹತ್ಯೆಯಿಂದ ದುಃಖಿತನಾದ ನಿನ್ನಿಂದ ಏಕಸ್ಯ ಅಪರಾಧೇನ=ಒಬ್ಬನು ಮಾಡಿದ ತಪ್ಪಿನಿಂದ ತತ್ಸಂಗಾತ್=ಅಪರಾಧಿಯಾದ ಯಕ್ಷನನ್ನು ಬಿಡದಿದ್ದರಿಂದ ಬಹವಃ ಹತಾಃ ನನು=ಬಹಳ ಜನರು ಕೊಲ್ಲಲ್ಪಟ್ಟರಷ್ಟೇ! ।।೯।।

**ನಾಯಂ ಮಾರ್ಗೋ ಹಿ ಸಾಧೂನಾಂ ಹೃಷೀಕೇಶಾನುವರ್ತಿನಾಮ್ ।**
**ಯದಾತ್ಮಾನಮಸಂಗೃಹ್ಯ ಪಶುವದ್ಭೂತವೈಶಸಮ್ ।।೧೦।।**

ಹೃಷೀಕೇಶಾನುವರ್ತಿನಾಂ ಸಾಧೂನಾಂ=ಭಗವಂತನನ್ನು ಅನುಸರಿಸುವ ಸಜ್ಜನರ ಆತ್ಮಾನಂ=ಮನಸ್ಸನ್ನು ಅಸಂಗೃಹ್ಯ=ನಿಗ್ರಹ ಮಾಡದೇ ಪಶುವತ್=ಮೂರ್ಖರಂತೆ ಭೂತವೈಶಸಂ ಯತ್=ಪ್ರಾಣಿಗಳ ಹಿಂಸಿಸುವದೇನಿದೆಯೋ ಅಯಂ=ಇದು ನ ಮಾರ್ಗಃ= ಸರಿಯಾದ ರೀತಿಯಲ್ಲ, ಕಾರಣ ಭಾಗವತನಾದ ನಿನಗಿದು ಉಚಿತವಲ್ಲವೆಂದು ಭಾವ.

**ಸರ್ವಭೂತಾತ್ಮಭಾವೇನ ಭೂತಾವಾಸಂ ಹರಿಂ ಭವಾನ್ ।**
**ಆರಾಧ್ಯಾಽಪ ದುರಾರಾಧ್ಯಂ ವಿಷ್ಣೋಸ್ತತ್ಪರಮಂ ಪದಮ್ ।।೧೧।।**

ಭವಾನ್=ನೀನು ಭೂತಾವಾಸಂ=ಎಲ್ಲ ಜೀವರಲ್ಲಿ ಅಂತರ್ಯಾಮಿಯಾಗಿರುವ ದುರಾರಾಧ್ಯಂ=ಇತರರಿಂದ ಆರಾಧಿಸಲಾಗದ ಹರಿಂ=ಎಲ್ಲರ ಆರ್ತಿಹರನಾದ ಪರಮಾತ್ಮನನ್ನು ಸರ್ವಭೂತಾತ್ಮಭಾವೇನ=ಎಲ್ಲ ಸ್ಥಾವರ ಜಂಗಮಗಳ ಅಂತರ್ನಿಯಾಮಕನೆಂದು ಆರಾಧ್ಯ=ಆರಾಧಿಸಿ ವಿಷ್ಣೋಃ=ಪರಮಾತ್ಮನಿಂದ ತತ್=ಪ್ರಸಿದ್ಧವಾದ ಪರಂ ಪದಂ=ಉತ್ತಮವಾದ ಸ್ಥಾನವನ್ನು (ಶಿಂಶುಮಾರರೂಪಿ ವಿಷ್ಣುವಿನ ಆವಾಸಸ್ಥಾನವನ್ನು ಹೀಗೂ ಅರ್ಥ) ಆಪ=ಹೊಂದಿರುವಿ.

ಜಗತ್ತಿನಲ್ಲಿ ಮೊದಲು ಕ್ರೂರರಿದ್ದು ವಿಚಾರ ಮಾಡಿ ನಂತರ ಕ್ರೂರತ್ವವನ್ನು ಬಿಡುವರು. ನೀನಾದರೂ ವಿಪರೀತವಾಗಿ ಕಾಣುವಿ. ಬಾಲ್ಯದಲ್ಲಿ ಸಾಧುವಾಗಿ ಈಗ ಕ್ರೂರನಾಗಿ ಕಾಣುವಿ. ಇದು ಸರಿಯಲ್ಲ.

ಭಗವದ್ಭಕ್ತರಿಗೆ ಹಿಂಸೆ ಉಚಿತವಾಗದಿರಬಹುದು. ಆದರೆ ನನಗೆ ಉಚಿತವಾಗಬಹುದು ? ಎನ್ನಬೇಡ. ನೀನೂ ಭಕ್ತಶ್ರೇಷ್ಠನೇ. ಶ್ರೀಹರಿಯನ್ನಾರಾಧಿಸಿ ಅವನ ಸ್ಥಾನವನ್ನು ಪಡೆದಿರುವಿ. ಕಾರಣ ನಿನಗೂ ಹಿಂಸೆ ಉಚಿತವಲ್ಲವೆಂದು ಭಾವ. ।।೧೧।।

**ಸ ತ್ವಂ ಹರೇರನುಧ್ಯಾತಾ ತತ್ಪುಂಸಾಮಪಿ ಸಮ್ಮತಃ ।**
**ಕಥಂ ತ್ವವದ್ಯಂ ಕೃತವಾನನುಶಿಕ್ಷನ್ ಸತಾಂ ವ್ರತಮ್ ।।೧೨।।**

ಹರೇಃ ಅನುಧ್ಯಾತಾ=ಸರ್ವದಾ ಶ್ರೀಹರಿಯನ್ನು ಧ್ಯಾನಮಾಡುವ (ನನ್ನ ಭಕ್ತನೆಂದು ಹರಿಯಿಂದ ಸ್ಮರಿಸಲ್ಪಡುವ), ತತ್ಪುಂಸಾಂ ಅಪಿ=ಭಗವದ್ಭಕ್ತರಿಗೂ ಸಮ್ಮತಃ=ಸಾಧುವೆಂದು ಸಮ್ಮತನಾದ (ನಾರದರ ಅನುಗ್ರಹಕ್ಕೆ ಪಾತ್ರನಾದ) ಸತಾಂ ವ್ರತಂ ಅನುಶಿಕ್ಷನ್=ಜನರಿಗೆ ಸಜ್ಜನವ್ರತವನ್ನು ಕಲಿಸುವವನಾಗಿ ಅಥವಾ ನಾರದರಿಂದ ಸಜ್ಜನವ್ರತವನ್ನು ಕಲಿತವನಾಗಿ ಅವದ್ಯಂ ಕಥಂ ಕೃತವಾನ್=ಈ ವಿಧವಾದ ಅಪರಾಧ ಹೇಗೆ ಮಾಡಿದಿ? ।।೪೨।।

ಸಜ್ಜನರ ವ್ರತ ಮತ್ತು ಅದರ ಫಲ ಹೇಳುವರು-

**ತಿತಿಕ್ಷಯಾ ಕರುಣಯಾ ಮೈತ್ರ್ಯಾ ಚಾಖಿಲಜಂತುಷು ।**
**ಸಮತ್ವೇನ ಚ ಸರ್ವಾತ್ಮಾ ಭಗವಾನ್ ಸಂಪ್ರಸೀದತಿ ।।೪೩।।**

ತಿತಿಕ್ಷಯಾ=ಉತ್ತಮರು ಮಾಡುವ ತಿರಸ್ಕಾರಾದಿಗಳನ್ನು ಸಹಿಸುವದರಿಂದಲೂ, ಕರುಣಯಾ=ನಿನಗಿಂತ ಚಿಕ್ಕವರಾದ ಸಜ್ಜನರಲ್ಲಿ ದಯೆಯಿಂದಲೂ ಚ=ಮತ್ತು ಮೈತ್ರ್ಯಾ=ಸಮಾನರಲ್ಲಿ ಸ್ನೇಹದಿಂದಲೂ ಚ=ಮತ್ತು ಅಖಿಲಜಂತುಷು ಸಮತ್ವೇನ=ಎಲ್ಲ ಪ್ರಾಣಿಗಳಲ್ಲಿ ಶ್ರೀಹರಿಯು ಒಂದೇ ರೀತಿಯಾಗಿರುವನು ಎಂದು ತಿಳಿಯುವದರಿಂದಲೂ ಸರ್ವಾತ್ಮಾ=ಸರ್ವಾಂತರ್ಯಾಮಿಯಾದ ಭಗವಾನ್=ಶ್ರೀಹರಿಯು ಸಂಪ್ರಸೀದತಿ=ಚೆನ್ನಾಗಿ ಪ್ರೀತನಾಗುವನು. ।।೪೩।।

**ಸಂಪ್ರಸನ್ನೇ ಭಗವತಿ ಪುರುಷಃ ಪ್ರಾಕೃತೈರ್ಗುಣೈಃ ।**
**ವಿಮುಕ್ತೋ ಜೀವನಿರ್ಮುಕ್ತೋ ಬ್ರಹ್ಮ ನಿರ್ವಾಣಮೃಚ್ಛತಿ ।।೪೪।।**

ಭಗವತಿ ಸಂಪ್ರಸನ್ನೇ ಸತಿ=ಶ್ರೀಹರಿಯು ಪ್ರಸನ್ನನಾಗಲು ಪುರುಷಃ=ಅಧಿಕಾರಿಯು ಪ್ರಾಕೃತೈಃ ಗುಣೈಃ=ಪ್ರಕೃತಿಜನ್ಯಗಳಾದ ಸತ್ವಾದಿಗುಣಗಳಿಂದ ವಿಮುಕ್ತಃ=ಬಿಡುಗಡೆ ಹೊಂದಿದವನಾಗಿ ಜೀವನಿರ್ಮುಕ್ತಃ=(ಜೀವತಿ ಅನೇನ ಇತಿ ಜೀವಃ ಶರೀರಂ) ಬದುಕಲು ಸಾಧನವಾದ ಶರೀರದಿಂದಲೂ ಮುಕ್ತನಾಗಿ ನಿರ್ವಾಣಂ=ನಿತ್ಯದಲ್ಲಿಯೂ ಜಡಶರೀರರಹಿತನಾದ ಬ್ರಹ್ಮ=ಪರಮಾತ್ಮನನ್ನು ಋಚ್ಛತಿ=ಹೊಂದುವನು. ।।೪೪।।

ಇಲ್ಲಿಯವರೆಗೆ ಯಕ್ಷರು ನಿನ್ನ ತಮ್ಮನನ್ನು ಕೊಂದರೆಂಬುವದನ್ನು ಒಪ್ಪಿ ಹೇಳಿದ್ದು. ಈಗ ಈಶ್ವರನು ಮಾಡಿದ ಸೃಷ್ಟಿಯಲ್ಲಿ ಯಕ್ಷರು ನಿನ್ನ ತಮ್ಮನನ್ನು ಸ್ವತಂತ್ರವಾಗಿ ಕೊಂದವರಲ್ಲ, ಕಿಂತು ಅವನನ್ನು ಕೊಂದವನು ಶ್ರೀಹರಿಯೇ ಎಂಬ ಅಭಿಪ್ರಾಯದಿಂದ ಶ್ರೀಹರಿಗೆ ಸ್ವತಂತ್ರವಾಗಿ ಸೃಷ್ಟ್ಯಾದಿಕರ್ತೃತ್ವಮಹಿಮೆಯನ್ನು ತಿಳಿಸುವರು.

ಸೃಷ್ಟಿಯ ರೀತಿ ತಿಳಿದರೆ ಜನನ-ಮರಣಗಳಲ್ಲಿ ವಿರಕ್ತಿ ಬಂದು ಪ್ರಕೃತಿಬಂಧವನ್ನು ಕಳೆದುಕೊಳ್ಳಲು ಇಚ್ಛಿಸುವನು ಎಂಬ ಕಾರಣದಿಂದಲೂ ಸೃಷ್ಟಿಯನ್ನು ಹೇಳುವರು -

**ಭೂತೈಃ ಪಂಚಭಿರಾರಬ್ಧೋ ಯೋಷಿತ್ಪುರುಷ ಏವ ಹಿ ।**
**ತಯೋರ್ವ್ಯವಾಯಾತ್ಸಂಭೂತಿರ್ಯೋಷಿತ್ಪುರುಷಯೋರಿಹ ॥೪೫॥**

ಯೋಷಿತ್=ಆದಿಕಾಲೀನವಾದ ಸ್ತ್ರೀದೇಹವಾಗಲೀ ಪುರುಷಃ ಏವ=ಪುರುಷದೇಹವಾಗಲೀ ಪಂಚಭಿಃ ಭೂತೈಃ ಆರಬ್ಧಃ=ಪೃಥ್ವೀ ಅಪ್ ತೇಜ ವಾಯು ಆಕಾಶಗಳ ಮೇಲನದಿಂದ ಶ್ರೀಹರಿಯಿಂದ ಪರಿಣಾಮವಾದುದು. ಹೊರತು ಸ್ವತಂತ್ರವಲ್ಲ. ಇಹ=ಜೀವರಾಶಿಯಲ್ಲಿ ತಯೋಃ=ಸ್ತ್ರೀಪುರುಷರ ವ್ಯವಾಯಾತ್=ಮೈಥುನದಿಂದ ಇಹ=ಸಂಸಾರದಲ್ಲಿ ಯೋಷಿತ್ಪುರಷಯೋಃ=ಸ್ತ್ರೀಪುರುಷರ ಸಂಭೂತಿಃ=ಕರಚರಣಾದಿದೇಹಸಂಬಂಧರೂಪಜನ್ಮವು ಆಗುವದು. ಇದೂ ಸಹ ಪಾಂಚಭೌತಿಕವೇ ಹೊರತು ಯಾರೂ ಯಾರಿಗೂ ಯಾವದಕ್ಕೂ ಕಾರಣರಲ್ಲವೆಂದು ಭಾವ. ॥೪೫॥

ಆದಿಸೃಷ್ಟಿಮಾತ್ರವಲ್ಲ, ಮುಂದೆಯೂ ಇದೇ ರೀತಿ ಎಂದು ಹೇಳುವರು -

**ಏವಂ ಪ್ರವರ್ತತೇ ಸರ್ಗಃ ಸ್ಥಿತಿಃ ಪ್ರಲಯ ಏವ ಚ ।**
**ಗುಣವ್ಯತಿಕರಾದ್ರಾಜನ್ ಮಾಯಯಾ ಪರಮಾತ್ಮನಃ ॥೪೬॥**

ರಾಜನ್=ಧ್ರುವನೇ ! ಪರಮಾತ್ಮನಃ=ಶ್ರೀಹರಿಯ ಮಾಯಯಾ=ಇಚ್ಛೆಯಿಂದ ಪ್ರೇರಿತವಾದ ಗುಣವ್ಯತಿಕರಾತ್=ಸತ್ವಾದಿಗಳ ವೈಷಮ್ಯವ್ಯವಸ್ಥೆಯಿಂದ ಏವಂ=ಪಂಚಭೂತ-ಗಳಿಂದ ಜನಿಸಿದ ರಾಜರು ಮುಂತಾದವರಿಂದ ಸರ್ಗಃ=ಸೃಷ್ಟಿಯು ಸ್ಥಿತಿ=ರಕ್ಷಣವು ಪ್ರಲಯಃ= ನಾಶವು ಪ್ರವರ್ತತೇ=ನಡೆಯುವದು.

ಅಂದರೆ ಪಂಚಭೂತಗಳಲ್ಲಿ ಅನುಸ್ಯೂತವಾದ ರಜೋಗುಣಪ್ರಧಾನವಾದ ದೇಹದಿಂದ ಸೃಷ್ಟಿಯು, ಅವುಗಳಲ್ಲಿ ಅನುಸ್ಯೂತವಾದ ಸತ್ವಪ್ರಧಾನದೇಹದಿಂದ ಸ್ಥಿತಿಯು, ತದನುಸ್ಯೂತ ತಮಪ್ರಧಾನಕದೇಹದಿಂದ ಯಮಾದಿಗಳಿಂದ ನಾಶವು ಆಗುವದು ಎಂದು ಭಾವ. ॥೪೬॥

**ನಿಮಿತ್ತಮಾತ್ರಂ ತತ್ರಾತ್ಮಾ ನಿರ್ಗುಣಃ ಪುರುಷರ್ಷಭಃ ।**
**ವ್ಯಕ್ತಾವ್ಯಕ್ತಮಿದಂ ವಿಶ್ವಂ ಯತ್ರ ಭ್ರಮತಿ ಲೋಹವತ್ ॥೪೭॥**

ಲೋಹವತ್=ಅಯಸ್ಕಾಂತವೆಂಬ ನಿಮಿತ್ತವಿರುವಾಗ ಸೂಜಿ ಮುಂತಾದ ಲೋಹಗಳು ತಿರುಗುವಂತೆ, ಯತ್ರ(ಯಸ್ಯ ಈಶ್ವರಸ್ಯ ಸನ್ನಿಧಾನೇ ಸತಿ)=ಯಾವ ನಿಮಿತ್ತನಾದ ಶ್ರೀಹರಿಯ ಸನ್ನಿಧಾನ ಇರಲು ವ್ಯಕ್ತಾವ್ಯಕ್ತಂ=ಕಾರ್ಯಕಾರಣಾತ್ಮಕವಾದ ಇದಂ ವಿಶ್ವಂ=ಈ ಪ್ರಪಂಚವು ಭ್ರಮತಿ=ವ್ಯಾಪಾರ ಮಾಡುವದೋ, ಸಃ=ಅಂತಹ ನಿರ್ಗುಣಃ=ಸತ್ವಾದಿಗುಣರಹಿತನಾದ (ಸತ್ವಾದಿಗುಣಗಳ ಶಕ್ತಿಯಿಂದ ಅನುಪಹತವಾದ ಶಕ್ತಿಯುಳ್ಳ) ಪುರುರ್ಷಭಃ=ಕ್ಷರಾಕ್ಷರ

ಪುರುಷರಿಗಿಂತ ಉತ್ತಮನಾದ ಆತ್ಮಾ=ಪರಮಾತ್ಮನು ತತ್ರ=ಸೃಷ್ಟ್ಯಾದಿಗಳಿಗೆ ನಿಮಿತ್ತಮಾತ್ರಂ= ಕೇವಲ ನಿಮಿತ್ತಕಾರಣನು ಹೊರತು ಇತರರು ಹೇಳುವಂತೆ ಉಪಾದಾನ ಕಾರಣನಲ್ಲ. ಸಗುಣವಾದ ಪ್ರಕೃತಿಯೇ ಉಪಾದಾನವೆಂದು ತಿಳಿಯಬೇಕು.

**ಭಾಗವತ ತಾತ್ಪರ್ಯ -**

ಇಲ್ಲಿ ಲೋಹವತ್ ಎಂದು ದೃಷ್ಟಾಂತ ಕೊಟ್ಟಿದ್ದರಿಂದ ಅಯಸ್ಕಾಂತವು ಹೇಗೆ ತಟಸ್ಥವಾಗಿದ್ದೇ ಅಯೋಭ್ರಾಮಕವಾಗಿದೆಯೋ ಅದರಂತೆ ಶ್ರೀಹರಿಯೂ ತಟಸ್ಥನಾಗಿಯೇ (ಹೊರಗಿದ್ದೇ) ಜಗಚ್ಚೇಷ್ಟಕನೆಂದು ಅರ್ಥ ತೋರುವುದು. ಆ ಕಾರಣ ದೃಷ್ಟಾಂತ-ದಾರ್ಷ್ಟಾಂತಿಕಭಾವದ ಅಭಿಪ್ರಾಯವನ್ನು ಪ್ರಮಾಣದಿಂದಲೇ ಹೇಳುವರು ಶ್ರೀಮದಾಚಾರ್ಯರು -

> **ಹರಿರಕ್ಲಿಷ್ಟಕಾರಿತ್ವಾದಯಸ್ಕಾಂತವದುಚ್ಯತೇ ।**
> **ಕಾಮಕರ್ಮಸ್ವಭಾವೇಷು ಕಾಲೇ ಚಾವಸ್ಥಿತೋ ಹರಿಃ ।**
> **ಸರ್ವಕಾರಣಭೂತಃ ಸಂಸ್ತತ್ತನ್ನಾಮ್ನಾಽಭಿಧೀಯತೇ ॥ ಇತಿ ಸತ್ಯಸಂಹಿತಾಯಾಮ್ ।**

ಅಯಸ್ಕಾಂತವು ಸೂಜಿಯನ್ನು ತಿರುಗಿಸಲು ಕಷ್ಟಪಡುವದಿಲ್ಲವಷ್ಟೇ ? ಅದರಂತೆ ಶ್ರೀಹರಿಯು ಕ್ಲೇಶವಿಲ್ಲದೇ ಜಗತ್ತನ್ನು ಪ್ರೇರಿಸುವದರಿಂದ ಅಯಸ್ಕಾಂತದಂತೆ ಎಂದು ಹೇಳಲ್ಪಡುವನು. ಹೊರತು ತಟಸ್ಥವೆಂದಲ್ಲ. ಕಾಮ, ಕರ್ಮ, ಸ್ವಭಾವ, ಕಾಲಗಳಲ್ಲಿ ಇದ್ದು ಎಲ್ಲದಕ್ಕೂ ಕಾರಣನಾಗಿ ಆ ಆ ನಾಮಗಳಿಂದ ಕರೆಸಿಕೊಳ್ಳುವನು ಎಂದು ಸತ್ಯಸಂಹಿತೆಯಲ್ಲಿ ಹೇಳಿದೆ.

ಕೊನೆಯ ಪಾದದಿಂದ ೫೨ನೇ ''ಕೇಚಿತ್ ಕರ್ಮ ವದಂತಿ'' ಎಂಬ ಶ್ಲೋಕದ ತಾತ್ಪರ್ಯ ಹೇಳಿದಂತಾಯಿತು. ॥೪೭॥

ಜಗತ್ತಿನಲ್ಲಿ ತಂದೆ ಮುಂತಾದವರು ಸೃಷ್ಟಿ ಮಾಡುವರು. ರಾಜಾದಿಗಳು ಪಾಲನೆ ಮಾಡುವರು. ಯಮಾದಿಗಳು ಸಂಹಾರ ಮಾಡುವರು ಎಂದು ಪ್ರಸಿದ್ಧಿ ಇದೆ. ಅಂದಮೇಲೆ ಶ್ರೀಹರಿಯೇ ಸೃಷ್ಟ್ಯಾದಿಕರ್ತಾ ಎನ್ನುವುದು ಹೇಗೆ ? ಎಂದರೆ ಹೇಳುವರು

> **ಸ ಖಲ್ವಿದಂ ಭಗವಾನ್ ಯೋಗಶಕ್ತ್ಯಾ**
> **ಗುಣಪ್ರವಾಹೇಷು ವಿಭಕ್ತವೀರ್ಯಃ ।**
> **ಕರೋತ್ಯಕರ್ತೇವ ನಿಹಂತ್ಯಹಂತಾ**
> **ಚೇಷ್ಟಾ ವಿಭೂಮ್ನಃ ಖಲು ದುರ್ವಿಭಾವ್ಯಾ ॥೪೮॥**

ಸಃ ಭಗವಾನ್=ಆ ಭಗವಂತನೇ ಯೋಗಶಕ್ತ್ಯಾ=ಯೋಗಸಾಮರ್ಥ್ಯದಿಂದ ಗುಣಪ್ರವಾಹೇಷು=ಸೃಷ್ಟಿಸ್ಥಿತಿಸಂಹಾರ ಮಾಡುವ ತಂದೆ, ರಾಜ, ಯಮ(ಭಟ) ಇವರುಗಳಲ್ಲಿ ಇದ್ದು ವಿಭಕ್ತವೀರ್ಯಃ=ಕಾರ್ಯಾನುಗುಣವಾಗಿ ವಿಭಕ್ತವಾದ ಸಾಮರ್ಥ್ಯ ಉಳ್ಳವನಾಗಿ ಇದಂ=ಜಗತ್ತನ್ನು ಅಕರ್ತಾ ಇವ=ಪ್ರಯೋಜನಾಪೇಕ್ಷೆಯಿಂದ ಕರ್ತೃವಾಗದೇ (ಕ್ಲೇಶರಹಿತವಾಗಿ ಕರ್ತೃವಾದ್ದರಿಂದ ಅಕರ್ತೃವಿನಂತೆ) ಕರೋತಿ=ಸೃಷ್ಟಿಸುವನು. ಅಹಂತಾ ಇವ ನಿಹಂತಿ=ದ್ವೇಷದಿಂದ ಹಂತೃವಾಗದೇ ಕೊಲ್ಲುವನು, ಪಾಲಿಸುವನೂ ಕೂಡ. ವಿಭೂಮ್ನಃ=ವಿಶೇಷವಾಗಿ ಪರಿಪೂರ್ಣನಾದ ಭಗವಂತನ ಚೇಷ್ಟಾ=ಪ್ರವೃತ್ತಿಯು ದುರ್ವಿಭಾವ್ಯಾ=ಲೌಕಿಕಯುಕ್ತಿಯಿಂದ ತಿಳಿಯಲು ಅಶಕ್ಯವಾದುದು. ಖಲು=ಪ್ರಸಿದ್ಧವು.

ಆಪ್ತಕಾಮನಾದ ಶ್ರೀಹರಿಗೆ ಪ್ರಯೋಜನ-ರಾಗ-ದ್ವೇಷಗಳಿಲ್ಲದಿರುವದರಿಂದ ಸೃಷ್ಟ್ಯಾದಿಕರ್ತೃತ್ವವು ಉಪಪನ್ನವಲ್ಲ ಎಂಬ ಶಂಕೆಗೆ ಉತ್ತರಿಸಿದಂತಾಯಿತು. ಲೋಕಪ್ರಸಿದ್ಧಿ ಅಪ್ರಯೋಜಕ. ಇದೆಲ್ಲ ಶ್ರುತಿಪ್ರಸಿದ್ಧವಾಗಿದೆ. ।।೪೮।।

ಭಗವಂತನಿಗೂ ಅಂತವಿದ್ದರೆ ಸರ್ವಾಂತಕತ್ವವು, ಜನ್ಮವಿದ್ದರೆ ಸರ್ವಜನಕತ್ವವು ಹೇಗೆ ಯುಕ್ತವಾಗುವದು ? ಎಂದರೆ ಹೇಳುವರು -

**ಸೋಽನಂತೋಽಂತಕರಃ ಕಾಲೋಽನಾದಿರಾದಿಕೃದವ್ಯಯಃ ।**
**ಜನಂ ಜನೇನ ಜನಯನ್ ಮಾರಯನ್ ಮೃತ್ಯುನಾಽತ್ಮನಃ ।।೪೯।।**

ಸಃ=ಶ್ರೀಹರಿಯು ಅನಂತಃ=ಚತುರ್ವಿಧನಾಶರಹಿತನು. ಅಂತಕರಃ=ಸರ್ವನಾಶಕನು. ಕಾಲಃ=ಕಾಲನಾಮಕನು. ಅನಾದಿಃ=ಸ್ವಯಂ ಉತ್ಪತ್ತಿರಹಿತನು. ಆತ್ಮನಃ=ತನ್ನ (ಅಧೀನರಾದ) ಜನೇನ=ತಂದೆ ಮೊದಲಾದವರಿಂದ (ಅವರ ಶರೀರದಿಂದ) ಜನಂ=ಮಗ ಮುಂತಾದವರನ್ನು ಜನಯನ್=ಹುಟ್ಟಿಸುವವನಾಗಿ, ಜನೇನ=ಕೊಲ್ಲುವವನಿಂದ ಮಾರಯನ್=ಕೊಲ್ಲಿಸಿ ಪಾಲಯನ್=ರಾಜ ಮುಂತಾದವರಿಂದ ರಕ್ಷಣೆ ಮಾಡಿಸಿ ಆದಿಕೃತ್=ಪ್ರಾಥಮಿಕಕರ್ತೃ-ವಾಗಿದ್ದಾನೆ. (ಮುಖ್ಯಕರ್ತಾ, ಪ್ರಯೋಜಕಕರ್ತೃವಾಗಿದ್ದಾನೆ) ಅವ್ಯಯಃ=ಜ್ಞಾನೇಚ್ಛಾದಿ ಹ್ರಾಸರಹಿತನು. ಅವನೇ ಮುಖ್ಯ ಸೃಷ್ಟಿ-ಸಂಹಾರ-ಪಾಲನಕರ್ತಾ ಎನಿಸುವನು. ಆದ್ದರಿಂದ ತಂದೆ ಮಗನಿಗೆ ಜನ್ಮ ಕೊಡುವದು ಭಗವದಧೀನವಾಗಿ. ಹಾಗಾಗಿ ಲೋಕಪ್ರಸಿದ್ಧಿಯ ವಿರೋಧ ಇಲ್ಲ. ।।೪೯।।

ಈ ರೀತಿ ಮಾಡಿದರೂ ಅವನಿಗೆ ವೈಷಮ್ಯ-ನೈರ್ಘೃಣ್ಯಗಳಿಲ್ಲವೆಂದು ಹೇಳುವರು -

**ನ ವೈ ಸ್ವಪಕ್ಷೋಽಸ್ಯ ವಿಪಕ್ಷ ಏವ ವಾ**
**ಪರಸ್ಯ ಮೃತ್ಯೋರ್ವಿಶತಃ ಸಮಂ ಪ್ರಜಾಃ ।**

**ತಂ ಧಾವಮಾನಮನುಧಾವಂತ್ಯನೀಶಾ**
**ಯಥಾ ರಜಾಂಸ್ಯನಿಲಂ ಭೂತಸಂಘಾಃ** ।।೫೦।।

ಪ್ರಜಾಃ=ಜನರನ್ನು ಸಮಂ ವಿಶತಃ=ಪುಣ್ಯ-ಪಾಪಗಳಿಗನುಸಾರವಾಗಿ ಪ್ರವೇಶಿಸುವ ಅರ್ಥಾತ್ ಪ್ರೇರಿಸುವ ಪರಸ್ಯ=ಪಾಲಕನಾದ ಅಸ್ಯ=ಶ್ರೀಹರಿಗೆ ಸ್ವಪಕ್ಷಃ=ಯೋಗ್ಯತೆ ಮೀರಿ ಪಕ್ಷಪಾತವಿಷಯರು (ಬೇಕಾದವರು) ನ=ಇಲ್ಲ, ಮೃತ್ಯೋಃ=ಮಾರಕನಾದ ಇವನಿಗೆ ವಿಪಕ್ಷಃ=ಯೋಗ್ಯತೆ ಮೀರಿ ದಂಡ್ಯರು (ದ್ವೇಷ್ಯರು) ನ=ಇಲ್ಲ. ಯಥಾ=ಹೇಗೆ ಧಾವತಂ ಅನಿಲಂ=ಓಡುವ ಗಾಳಿಯನ್ನು ರಜಾಂಸಿ=ಧೂಳಿಯ ಕಣಗಳು ಅನುಧಾವಂತಿ= ಅನುಸರಿಸುವವೋ ತಥಾ=ಹಾಗೆ ಧಾವಮಾನಂ ತಂ=ಸ್ವತಂತ್ರವಾಗಿ ಪ್ರವರ್ತಿಸುವ ಭಗವಂತನನ್ನು ಅನಿಶಾಃ=ಕರ್ಮಾಧೀನರಾದ ಭೂತಸಂಘಾಃ=ಜನರು ಅನುಧಾವಂತಿ= ಅನುಸರಿಸಿ ಪ್ರವರ್ತಿಸುವರು.

ಅಂದರೆ ಅನಾದಿಕರ್ಮಬದ್ಧರಾದ ಜೀವರು, ಅವರ ಕರ್ಮಗಳೂ ಭಗವದಧೀನವಾದುದರಿಂದ ಕರ್ಮಾನುಸಾರವಾಗಿ ಪ್ರೇರಿಸುವದರಿಂದ ಸ್ವಾತಂತ್ರ್ಯಹಾನಿ ಏನಿಲ್ಲ ಎಂದು ಭಾವ ತಿಳಿಯಬೇಕು. ।।೫೦।।

ಕರ್ಮವೂ ಅವನ ಅಧೀನವೆಂದರೆ ಮತ್ತೆ ವೈಷಮ್ಯ ಬಂತಲ್ಲ ? ಎಂದರೆ, ಈ ವಿಧವಾದ ವೈಷಮ್ಯ ಅವನ ಸ್ವಭಾವವೇ ಆಗಿದೆ ಎಂಬ ಅಭಿಪ್ರಾಯದಿಂದ ಹೇಳುತ್ತಾರೆ-

**ಆಯುಷೋಽಪಚಯಂ ಜಂತೋಸ್ತಥೈವೋಪಚಯಂ ವಿಭುಃ ।**
**ಉಭಾಭ್ಯಾಂ ರಹಿತಃ ಸ್ವಸ್ಥೋ ದುಃಸ್ಥಸ್ಯ ವಿದಧಾತ್ಯಸೌ** ।।೫೧।।

ಸ್ವಸ್ಥಃ=ಪುಣ್ಯಪಾಪಗಳಿಂದ ಬದ್ಧನಾಗದ ಆದ್ದರಿಂದಲೇ ಉಭಾಭ್ಯಾಂ ರಹಿತಃ= ಆಯುಷ್ಯ ಐಶ್ವರ್ಯ ಮುಂತಾದವುಗಳ ವೃದ್ಧಿಹ್ರಾಸರಹಿತನೂ ಆದ ವಿಭುಃ=ಸಮರ್ಥನಾದ ಅಸೌ=ಶ್ರೀಹರಿಯು ದುಃಸ್ಥಸ್ಯ=ಪುಣ್ಯಪಾಪಗಳಿಂದ ಬದ್ಧನಾದ ಜಂತೋಃ=ಜನರಿಗೆ ಆಯುಷಃ=ಆಯುಷ್ಯದ (ಐಶ್ವರ್ಯ ಮುಂತಾದವುಗಳ) ಅಪಚಯಂ=ಹ್ರಾಸವನ್ನು ತಥಾ=ಹಾಗೂ ಉಪಚಯಂ=ವೃದ್ಧಿಯನ್ನು ವಿದಧಾತಿ=ಮಾಡುವನು. ।।೫೧।।

ವೇದದಲ್ಲಿ ಕಾಲ-ಕರ್ಮಾದಿಗಳು ಜಗತ್ಕಾರಣವೆಂದು ಅಲ್ಲಲ್ಲಿ ಹೇಳಲ್ಪಡುವವು. ಅದರ ವಿರೋಧ ಬರುವದಿಲ್ಲವೇ ? ಎಂದರೆ ಆ ಕಾಲ-ಕರ್ಮಾದಿಶಬ್ದಗಳು ಪರಮಾತ್ಮನನ್ನೇ ಹೇಳುವವು, ಆದ್ದರಿಂದ ಯಾವ ವಿರೋಧವಿಲ್ಲ ಎಂದು ಹೇಳುವರು -

**ಕೇಚಿತ್ಕರ್ಮ ವದಂತ್ಯೇನಂ ಸ್ವಭಾವಮಪರೇ ನೃಪ ।**
**ಏಕೇ ಕಾಲಂ ಪರೇ ದೈವಂ ಪುಂಸಃ ಕಾಮಮುತಾಪರೇ** ।।೫೨।।

ಕೇಚಿತ್=ಕೆಲವು ವೇದದ್ರಷ್ಟ್ರುಗಳು ಕರ್ಮ=ಸರ್ವಕಾರಣವೆಂದು ಹೇಳಲ್ಪಡುವ ಕರ್ಮಶಬ್ದವಾಚ್ಯನೆಂದು ಕರ್ಮಾಂತರ್ಯಾಮಿಯಾದ ಹರಿಯನ್ನೇ ವದಂತಿ=ಹೇಳುವರು. ಅಪರೇ=ಮತ್ತೆ ಕೆಲವರು ಸ್ವಭಾವಂ=ಸ್ವಭಾವಾಂತರ್ಗತ ಸ್ವಭಾವಶಬ್ದವಾಚ್ಯನನ್ನು ಹೇಳುವರು. ಏಕೇ=ಕೆಲವರು ಕಾಲಂ=ಕಾಲನಾಮಕನನ್ನು, ಅಪರೇ=ಇನ್ನು ಕೆಲವರು ದೈವಂ=ಅದೃಷ್ಟ-ನಿಯಾಮಕನನ್ನು ದೈವಶಬ್ದವಾಚ್ಯನಾದವನನ್ನು, ಅಪರೇ=ಮತ್ತೆ ಕೆಲವರು ಕಾಮಂ=ಕಾಮನಿಯಾಮಕನಾದ ಕಾಮಶಬ್ದವಾಚ್ಯನಾದವನ್ನಾಗಿ ಏನಂ=ಹರಿಯನ್ನು ಪುಂಸಃ=ಅಧಿ ಕಾರಿಗಳಿಗೆ ವದಂತಿ=ಹೇಳುವರು.

**ವಿಜಯಧ್ವಜರ ಪ್ರಕಾರ** - ಕೇಚಿತ್ ಮೀಮಾಂಸಕರು, ಅಪರೇ=ಚಾರ್ವಾಕರು, ಏಕೇ=ಪೌರಾಣಿಕರು, ಪರೇ=ಮೌಹೂರ್ತಿಕರು, ಅಪರೇ=ವಾತ್ಸಾಯನಕೋವಿದರು ಎಂದರ್ಥ. ।।೫೨।।

ಭಗವಂತನು ಜಗತ್ಕಾರಣಗಳಾದ ಕರ್ಮಕಾಲಾದಿಗಳಲ್ಲಿ ಆ ಆ ಶಕ್ತಿಯ ಉದ್ಬೋಧಕನಾಗಿ ಆ ಆ ಶಬ್ದವಾಚ್ಯನು ಏಕೆ ಆಗುವನು ? ಎಂದರೆ ಹೇಳುವರು -

**ಅವ್ಯಕ್ತಸ್ಯಾಪ್ರಮೇಯಸ್ಯ ನಾನಾಶಕ್ತ್ಯುದಯಸ್ಯ ಚ ।**
**ನ ವೈ ಚಿಕೀರ್ಷಿತಂ ತಾತ ಕೋ ವೇದಾದ್ಧಾಽಸ್ಯ ಸಂಭವಮ್ ।।೫೩।।**

ಅಸ್ಯ=ನಾನಾರೂಪಧರಿಸಿದ, ಅಪ್ರಮೇಯಸ್ಯ=ರಮೆಯಿಂದಲೂ ಸಾಕಲ್ಯೇನ ತಿಳಿಯಲಾಗದ, ನಾನಾಶಕ್ತ್ಯುದಯಸ್ಯ=ಕರ್ಮಾದಿಗಳಲ್ಲಿರುವ ಶಕ್ತಿಗಳಿಗೆ ಉದ್ಬೋಧಕನಾದ, ಅವ್ಯಕ್ತಸ್ಯ=ಕಾಣದಿರುವ ಸ್ವಭಾವವುಳ್ಳ ಶ್ರೀಹರಿಯ ಸಂಭವಂ=ಘಟಕವನ್ನು ಚಿಕೀರ್ಷತಂ=ಮಾಡಲಿಚ್ಛಿಸಿರುವದನ್ನು ಕಃ=ಬ್ರಹ್ಮನೂ ಅದ್ಧಾ=ಚೆನ್ನಾಗಿ ನ ವೇದ=ತಿಳಿದಿಲ್ಲ ಇನ್ನು ನಮ್ಮ ಪಾಡೇನು ?।।೫೩।।

ಇಲ್ಲಿಯವರೆಗೆ ಉಪಪಾದಿಸಿದ ಶ್ರೀಹರಿಯ ಸ್ವಾತಂತ್ರ್ಯದ ಪ್ರಕೃತೋಪಯೋಗವನ್ನು ಹೇಳುವರು -

**ನೈವೈತೇ ಪುತ್ರಕ ಭ್ರಾತುರ್ಹಂತಾರೋ ಧನದಾನುಗಾಃ ।**
**ವಿಸರ್ಗಾದಾನಯೋಸ್ತಾತ ಪುಂಸೋ ದೈವಂ ಹಿ ಕಾರಣಮ್ ।।೫೪।।**

ಹೇ ಪುತ್ರಕ=ಎಲೋ ಧ್ರುವನೇ ! ತೇ=ನಿನ್ನ ಭ್ರಾತುಃ=ತಮ್ಮನ ಹಂತಾರಃ=ಸಂಹಾರ ಮಾಡುವವರು ಧನದಾನುಗಾಃ=ಕುಬೇರನ ಅನುಚರರಾದ ಯಕ್ಷರು ನ ವೈ=ಅಲ್ಲವೇ ಅಲ್ಲ ತಾತ=ಪ್ರಿಯನೇ ! ಪುಂಸಃ=ಜನರ ವಿಸರ್ಗಾದಾನಯೋಃ=ಸೃಷ್ಟಿಸಂಹಾರಗಳಿಗೆ ಹಿ=ಯಾವ ಕಾರಣ ದೈವಂ=ಭಗವಂತನೇ ಕಾರಣಂ=ಕರ್ತೃವಾಗಿದ್ದಾನೆ. ।।೫೪।।

**ಸ ಏವ ವಿಶ್ವಂ ಸೃಜತಿ ಸ ಏವಾವತಿ ಹಂತಿ ಚ ।**
**ಅಥಾಪಿ ಹ್ಯನಹಂಕಾರಾನ್ನಾಜ್ಯತೇ ಗುಣಕರ್ಮಭಿಃ ॥೫೫॥**

ಸ ಏವ=ಶ್ರೀಹರಿಯೇ ವಿಶ್ವಂ=ಪ್ರಪಂಚವನ್ನು ಸೃಜತಿ=ಸೃಷ್ಟಿಸುವನು, ಅವತಿ=ರಕ್ಷಿಸುವನು, ಹಂತಿ ಚ=ಕೊಲ್ಲುವವನೂ ಸಹ. ಅಥಾಪಿ=ಆದರೂ ಅನಹಂಕಾರಾತ್=ಅಹಂಕಾರ-ವಿಲ್ಲದ್ದರಿಂದ ಗುಣಕರ್ಮಭಿಃ=ಸತ್ವಾದಿಗುಣಗಳಿಂದಾಗಲೀ ಪುಣ್ಯಪಾಪಗಳಿಂದಾಗಲೀ ನ ಅಜ್ಯತೇ=ಸಂಬದ್ಧನಾಗುವದಿಲ್ಲ.

ಸತ್ವಾದಿಗುಣಕಾರ್ಯವಾದ ಸೃಷ್ಟ್ಯಾದಿಗಳನ್ನು ಶ್ರೀಹರಿಯೇ ಮಾಡಿದರೂ ತನ್ನ ಶರೀರಸ್ಥಾನೀಯರಾದ ಪ್ರಕೃತಿ-ಪುರುಷರಲ್ಲಿ, ದೇವತೆಗಳಲ್ಲಿ ಅಭಿಮಾನವಿಲ್ಲದಿರುವದರಿಂದ ಅವನಿಗೆ ಗುಣಕರ್ಮಗಳ ಲೇಪವಿಲ್ಲ. ಜೀವರು ಅಭಿಮಾನವುಳ್ಳವರಾದ್ದರಿಂದ ಬದ್ಧರಾಗುವರು.

ತನ್ನದಲ್ಲದ್ದನ್ನು ತನ್ನದೆಂದು ತಿಳಿಯುವುದು (ಅಸ್ವಕೀಯೇ ಸ್ವಕೀಯತ್ವಬುದ್ಧಿಃ) ಸ್ವಾಮಿತ್ವಾಭಿಮಾನ ಎನಿಸುವುದು. ನಾನೇ ಮಾಡುವೆನೆಂಬುದು ಸ್ವಾತಂತ್ರ್ಯಾಭಿಮಾನ ಎನಿಸುವುದು. ಇದು ಶ್ರೀಹರಿಗೆ ಇಲ್ಲ ಎಂದು ಭಾವ. ॥೫೫॥

ಶ್ರೀಹರಿಯೇ ಸೃಷ್ಟ್ಯಾದಿಕರ್ತಾ ಎಂದರೆ ಪ್ರಕೃತ್ಯಾದಿಗಳಿಗೆ ಕಾರಣತ್ವವನ್ನು ಹೇಳುವ ಶ್ರುತಿಯ ವಿರೋಧ ಬರುವದಲ್ಲ ? ಎಂದರೆ, ಆದಕ್ಕೆ ಉತ್ತರ ಹೇಳುವರು -

**ಏಷ ಭೂತಾನಿ ಭೂತಾತ್ಮಾ ಭೂತೇಷೋ ಭೂತಭಾವನಃ ।**
**ಸ್ವಶಕ್ತ್ಯಾ ಮಾಯಯಾ ಯುಕ್ತಃ ಸೃಜತ್ಯತ್ತಿ ಚ ಪಾತಿ ಚ ॥೫೬ ॥**

ಏಷಃ=ಪರಮಾತ್ಮನು ಸ್ವಶಕ್ತ್ಯಾ=ತನ್ನ ಶಕ್ತಿಯೇ ನಿಯಾಮಕವಾಗಿರುವ ಮಾಯಯಾ ಯುಕ್ತಃ=ಚೇತನಾಚೇತನ ಪ್ರಕೃತಿಯಿಂದ ಕೂಡಿದವನಾಗಿ ಭೂತಾತ್ಮಾ=ಯಾವ ಕಾರಣ ಭೂತಗಳ ಆದಾನಾದಿಕರ್ತೃವೋ ಆದ್ದರಿಂದ ಸೃಜತಿ=ಸೃಷ್ಟಿ ಮಾಡುವನು. ಸೃಷ್ಟಿಯನ್ನು ಮಾಡದಿದ್ದರೆ ಅವುಗಳ ಸ್ವೀಕಾರ ಮಾಡುವದು ಹೇಗೆ ? ಯತೋ ಭೂತಾನಾಂ ಈಶಃ=ರುದ್ರನಾದುದರಿಂದ ಅತ್ತಿ=ಸಂಹಾರ ಮಾಡುವನು. ಯತಃ ಭೂತಭಾವನಃ=ಭೂತಗಳ ವರ್ಧಕನಾದ್ದರಿಂದ ಪಾತಿ=ರಕ್ಷಿಸುವನು. ಇದರಿಂದ 'ಪ್ರಕೃತ್ಯಾದಿಗಳು ಅಸ್ವತಂತ್ರಕಾರಣಗಳು, ಸ ಏವ ಎಂದು ಅವಧಾರಣ ಮಾಡಿದ್ದು ಸ್ವತಂತ್ರಕಾರಣ ಮತ್ತೊಂದಿಲ್ಲ ಎಂಬ ಅಭಿಪ್ರಾಯದಿಂದ' ಎಂದು ತಿಳಿಯುತ್ತದೆ. ಆದ್ದರಿಂದ ವಿರೋಧವಿಲ್ಲ ॥೫೬॥

ಉಪಸಂಹಾರ ಮಾಡುವರು -

**ತಮೇವ ಮೃತ್ಯುಮಮೃತಂ ತಾತ ದೈವಂ**
**ಸರ್ವಾತ್ಮನೋಪೈಹಿ ಜಗತ್ಪರಾಯಣಮ್ ।**
**ಯಸ್ಮೈ ಬಲಿಂ ವಿಶ್ವಸೃಜೋ ಹರಂತಿ**
**ಗಾವೋ ಯಥಾ ವೈ ನಸಿ ದಾಮಯಂತ್ರಿತಾಃ ॥೨೭॥**

ತಾತ=ಮಗುವೇ ! ಮೃತ್ಯುಂ=ಮಾರಕನಾದ, ಅಮೃತಂ=ಮರಣರಹಿತನಾದ, ಜಗತ್ಪರಾಯಣಂ=ಪ್ರಪಂಚಕ್ಕೆ ಮುಖ್ಯಾಶ್ರಯನಾದ, ಯಸ್ಮೈ=ಯಾರಿಗೆ ವಿಶ್ವಸೃಜಃ=ಜಗತ್ತನ್ನು ಸೃಷ್ಟಿಸುವ ಬ್ರಹ್ಮಾದಿಗಳು ನಸಿ=ಮೂಗಿನಲ್ಲಿ ದಾಮಯಂತ್ರಿತಃ=ಹಗ್ಗದಿಂದ ಬಂಧಿತಗಳಾದ ಗಾವಃ ಯಥಾ=ಎತ್ತುಗಳಂತೆ ಬಲಿಂ ಹರಂತಿ=ಪೂಜೆ ಸಲ್ಲಿಸುವರೋ ತಂ ಏವ ದೈವಂ=ಆ ಭಗವಂತನನ್ನೇ ಸರ್ವಾತ್ಮನಾ ಉಪೈಹಿ=ಎಲ್ಲ ರೀತಿಯಿಂದ ಭಜಿಸು. ॥೨೭॥

ಇಂಥವನಿಗೆ ಶ್ರೀಹರಿಯನ್ನು ಆರಾಧಿಸುವದು ಕಷ್ಟವಲ್ಲವೆಂದು ಹೇಳುವರು -

**ಯಃ ಪಂಚವರ್ಷೋ ಜನನೀಂ ತ್ವಂ ವಿಹಾಯ**
**ಮಾತುಃ ಸಪತ್ನ್ಯಾ ವಚಸಾ ಭಿನ್ನಮರ್ಮಾ ।**
**ವನಂ ಗತಸ್ತಪಸಾ ಪ್ರತ್ಯಗಕ್ಷ-**
**ಮಾರಾಧ್ಯ ಲೇಭೇ ಮೂರ್ಧ್ನಿ ಪದಂ ತ್ರಿಲೋಕ್ಯಾಃ ॥೨೮॥**

ಸಪತ್ನ್ಯಾಃ ಮಾತುಃ=ಮಲತಾಯಿಯಾದ ಸುರುಚಿಯ ವಚಸಾ=ನಿಷ್ಠುರಮಾತಿನಿಂದ ಭಿನ್ನಮರ್ಮಾ=ಹೃದಯಭೇದವುಳ್ಳವನಾಗಿ ಜನನೀಂ=ಸುನೀತಿಯನ್ನು ವಿಹಾಯ= ಮನೆಯಲ್ಲಿಯೇ ಬಿಟ್ಟು ಪಂಚವರ್ಷಃ=ಐದು ವರ್ಷದವನಾದ ಯಃ ತ್ವಂ=ಯಾವ ನೀನು ವನಂ ಗತಃ=ಅಡವಿಗೆ ಹೋದವನಾಗಿ ತಪಸಾ=ತಪಸ್ಸಿನಿಂದ ಪ್ರತ್ಯಗಕ್ಷಂ=ಪ್ರತಿಯೊಂದು ವಸ್ತುವನ್ನು ನೋಡುವ ಹರಿಯನ್ನು ಆರಾಧ್ಯ=ಆರಾಧಿಸಿ ತ್ರಿಲೋಕ್ಯಾಃ ಮೂರ್ಧ್ನಿ=ಮೂರು ಲೋಕಗಳ ಮೇಲಿರುವ ಪದಂ=ಸ್ಥಾನವನ್ನು ಲೇಭೇ=ಪಡೆದಿರುವಿ. ॥೨೮॥

**ತಮೇವಮಂಗಾತ್ಮನಿ ಮುಕ್ತವಿಗ್ರಹೈ-**
**ರ್ವ್ಯಪಾಶ್ರಿತಂ ನಿರ್ಗುಣಮೇಕಮಕ್ಷರಮ್ ।**
**ಆತ್ಮಾನಮನ್ವಿಷ್ಯ ವಿಮುಕ್ತಮಾತ್ಮದೃಗ್**
**ಯಸ್ಮಿನ್ನಿದಂ ಭಿನ್ನಮಸತ್ ಪ್ರತೀಯತೇ ॥೨೯॥**

ಭಿನ್ನಂ=ಪಂಚವಿಧಭೇದಗಳಿಂದ ಕೂಡಿದ ಇದಂ=ಈ ಪ್ರಪಂಚವು ಯಸ್ಮಿನ್=ಯಾವನಲ್ಲಿ ಆಶ್ರಿತವಾಗಿದೆಯೋ ಆದ್ದರಿಂದ ಅಸತ್ ಪ್ರತಿಯತೇ=ಅಸ್ವಂತ್ರವಾಗಿ ತಿಳಿಯುವದು. ಮತ್ತು ಮುಕ್ತವಿಗ್ರಹೈಃ=ವಿರೋಧವನ್ನು ಪರಿತ್ಯಾಗ ಮಾಡಿದ ಯೋಗಿಗಳಿಂದ ವ್ಯಪಾಶ್ರಿತಂ= ಸೇವಿತನಾದ ನಿರ್ಗುಣಂ=ಸತ್ವಾದಿಗುಣರಹಿತನಾದ ಏಕಂ=ಸರ್ವೋತ್ತಮನಾದ ಅಕ್ಷರಂ= ನಾಶರಹಿತನಾದ ವಿಮುಕ್ತಂ=ವಿಶಿಷ್ಟಮುಕ್ತಿಪ್ರದನಾದ ತಂ ಏವ ಆತ್ಮಾನಂ=ಆ ಪರಮಾತ್ಮನನ್ನೇ ಆತ್ಮದೃಕ್ ಸನ್=ಅಪರೋಕ್ಷಜ್ಞಾನಿಯಾಗಿ ಅನ್ವಿ(ಷ್ಯ)ಚ್ಛ=ಆರಾಧನೆ ಮಾಡಲು ಇಚ್ಛಿಸು.

♦ ಮುಕ್ತವಿಗ್ರಹೈಃ ಎಂದು ಹೇಳಿದ್ದರಿಂದ ಶ್ರೀಹರಿಗೆ ಭೂತದ್ರೋಹ ಪ್ರೀತಿಜನಕ-ವಲ್ಲವೆಂದು ಸೂಚಿತವಾಯಿತು.

ವಿಜಯಧ್ವಜರ ಪ್ರಕಾರ ನಿರ್ಗುಣಂ ಎಂದರೆ ಆವೃತ್ತಿಶೂನ್ಯವೆಂದರ್ಥ. ಅಂದರೆ ಕುಪಿತನಾದ್ದರಿಂದ ಪ್ರಸಾದಾನಭಿಮುಖನಾದ ಎಂದರ್ಥ. ಭೂತದ್ರೋಹ ಮಾಡಿದ್ದರಿಂದ ಸಿಟ್ಟಾದ ಇವನನ್ನು ತಪಸ್ಸಿನಿಂದಲೂ ಮತ್ತೆ ಸಂತೋಷಗೊಳಿಸುವದು ನಿನಗೆ ಕಷ್ಟವೆಂದು ಭಾವ. ನಿರ್ಗುಣಂ (ಶಬ್ದಾದ್ಯವಿಷಯಂ)=ಮಾತು ಮುಂತಾದವುಗಳಿಂದಲೂ ಸಂತೋಷಗೊಳಿಸಲಾಗದು ಎಂದರ್ಥ. ಏಕೆಂದರೆ ನಿರ್ಗುಣಂ=ಅತೀಂದ್ರಿಯನೆಂದರ್ಥ. ''ಗುಣಸ್ತ್ವಾವೃತ್ತಿಶಬ್ದಾದಿಜ್ಯೇಂದ್ರಿಯಾಮುಖ್ಯತಂತುಷು'' ಎಂದು ಯಾದವ ಕೋಶವಿದೆ. ಆದ್ದರಿಂದ ನಿರ್ಗುಣವೆಂದರೆ ಮೇಲೆ ಹೇಳಿದ ಅರ್ಥಗಳಾಗುವವು. ।।೫೯।।

**ಅವತರಣಿಕೆಗಳು -**

ಈ ವಿಧಭೂತದ್ರೋಹಕಾರಣ ಅಹಂಕಾರಜನಕ ಅವಿದ್ಯಾಗ್ರಂಥಿಚ್ಛೇದವು ನನಗೆ ಹೇಗೆ ಆಗುವದು ? ಎಂದರೆ ಹೇಳುವರು -

ಅಥವಾ ಆತ್ಮಜ್ಞಾನಿಯಾದ ನನಗೆ ಸಂಸಾರಪಾಶ ಏಕೆ ಕತ್ತರಿಸಲಿಲ್ಲ ? ಎಂದರೆ, ಆ ರೀತಿ ಗುಣೋಪಸಂಹಾರ ಮಾಡಿ ಬಿಂಬೋಪಾಸನೆ ಮಾಡದಿದ್ದರಿಂದ ಆಗಿಲ್ಲ. ಹಾಗೆ ಮಾಡಿದರೆ ಆಗುವದು ಎಂಬ ಅಭಿಪ್ರಾಯದಿಂದ ಬಿಂಬೋಪಾಸನೆ ರೀತಿಯನ್ನು ಹೇಳುವರು -

**ತ್ವಂ ಪ್ರತ್ಯಗಾತ್ಮನಿ ಸದಾ ಭಗವತ್ಯನಂತ**
**ಆನಂದಮಾತ್ರ ಉಪಪನ್ನಸಮಸ್ತಶಕ್ತೌ ।**
**ಭಕ್ತಿಂ ವಿಧಾಯ ಪರಮಾಂ ಶನಕೈರವಿದ್ಯಾ-**
**ಗ್ರಂಥಿಂ ವಿಭೇತ್ಸ್ಯಸಿ ಮಮಾಹಮಿತಿ ಪ್ರರೂಢಾಮ್ ।।೬೦।।**

ತ್ವಂ=ನೀನು ಪ್ರತ್ಯಗಾತ್ಮನಿ ಭಗವತಿ=ನಿನ್ನ ಹೃದಯದಲ್ಲಿ ನಿನಗಭಿಮುಖನಾಗಿರುವ ಬಿಂಬರೂಪಿ ಪರಮಾತ್ಮನಲ್ಲಿ ಅನಂತೇ=ತ್ರಿವಿಧಾನಂತ್ಯಉಳ್ಳ (ದೇಶ-ಕಾಲ-ಗುಣಪರಿಚ್ಛೇದ ರಹಿತನಾದ) ಆನಂದಮಾತ್ರೇ=ಕೇವಲಾನಂದರೂಪನಾದ ಉಪಪನ್ನಸಮಸ್ತಶಕ್ತೌ= ಲೋಕದೃಷ್ಟಿಯಿಂದ ವಿರುದ್ಧವಾದರೂ ಇವನಲ್ಲಿ ಅವಿರುದ್ಧಗಳಾದ ಎಲ್ಲ ಶಕ್ತಿಯುಳ್ಳ ಪರಮಾಂ ಭಕ್ತಿಂ=ಈಗಿನಕಿಂತ ಹೆಚ್ಚಾಗಿ ಭಕ್ತಿಯನ್ನು ವಿಧಾಯ=ಮಾಡಿ ಶನಕೈಃ=ನಿಧಾನವಾಗಿ ಮಮ ಅಹಂ ಇತಿ ಪ್ರರೂಢಾಂ=ನಾನು ನನ್ನದು ಎಂಬ ಬುದ್ಧಿಯಿಂದ ಕಿತ್ತೆಸೆಯಲಾಗದ ಅವಿದ್ಯಾಗ್ರಂಥಿಂ=ಅವಿದ್ಯೆಯ ಗಂಟನ್ನು ವಿಭೇತ್ಸ್ಯಸಿ=ಕಳೆದುಕೊಳ್ಳಿವಿ. ।।೬೦।।

**ಸಂಯಚ್ಛ ರೋಷಂ ಭದ್ರಂ ತೇ ಪ್ರತೀಪಂ ಶ್ರೇಯಸಾಂ ಪರಮ್ ।**
**ಶ್ರುತೇನ ಭೂಯಸಾ ರಾಜನ್ನಗದೇನ ಯಥಾಽಮಯಮ್ ।।೬೧।।**

ಭೂಯಸಾ ಶ್ರುತೇನ=ಬಹಳವಾಗಿ ಮಾಡಿದ ಶಾಸ್ತ್ರಶ್ರವಣದಿಂದ ಶ್ರೇಯಸಾಂ= ಶ್ರೇಯಸ್ಸಿಗೆ ಪರಂ ಪ್ರತೀಪಂ=ಅತ್ಯಂತ ವಿರುದ್ಧವಾದ ರೋಷಂ=ಸಿಟ್ಟನ್ನು ಅಗದೇನ= ಔಷಧದಿಂದ ಆಮಯಂ ಯಥಾ=ರೋಗವನ್ನು ಪರಿಹರಿಸುವಂತೆ ಸಂಯಚ್ಛ=ಪರಿಹರಿಸಿಕೊ. ಆದರಿಂದ ತೇ=ನಿನಗೆ ಭದ್ರಂ=ಕಲ್ಯಾಣವಾಗುವದು. ।।೬೧।।

**ಯೇನೋಪಸೃಷ್ಟಾತ್ಪುರುಷಾಲ್ಲೋಕ ಉದ್ವಿಜತೇ ಭೃಶಮ್ ।**
**ನ ಬುಧಸ್ತದ್ವಶಂ ಗಚ್ಛೇದಿಚ್ಛನ್ನಭಯಮಾತ್ಮನಃ ।।೬೨।।**

ಯೇನ ಉಪಸೃಷ್ಟಾತ್ ಪುರುಷಾತ್=ಯಾವ ರೋಷದಿಂದ ಕೂಡಿದ ಮನುಷ್ಯನಿಂದ ಲೋಕಃ=ಜ್ಞಾನಿಯು ಭೃಶಂ=ಬಹಳವಾಗಿ ಉದ್ವಿಜತೇ=ಭಯಪಡುವನು. ಆತ್ಮನಃ=ತನಗೆ ಅಭಯಂ ಇಚ್ಛನ್=ಭಯವಾಗಬಾರದೆಂದು ಇಚ್ಛಿಸುವ ಬುಧಃ=ಜಾಣನು ತದ್ವಶಂ ನ ಗಚ್ಛೇತ್=ಸಿಟ್ಟಿನ ವಶವಾಗಬಾರದು. ।।೬೨।।

**ಹೇಲನಂ ಗಿರಿಶಭ್ರಾತುರ್ಧನದಸ್ಯ ತ್ವಯಾ ಕೃತಮ್ ।**
**ಯಜ್ಜಘ್ನಿವಾನ್ ಪುಣ್ಯಜನಾನ್ ಭ್ರಾತೃಘ್ನಾನಿತ್ಯಮರ್ಷಿತಃ ।।೬೩।।**

ಭ್ರಾತೃಘ್ನಾನ್ ಇತಿ=ತಮ್ಮನನ್ನು ಕೊಂದವರೆಂದು ಅಮರ್ಷಿತಃ=ಅಸಹನೆಯುಳ್ಳವನಾಗಿ ಪುಣ್ಯಜನಾನ್ ಯಜ್ಜಘ್ನಿವಾನ್=ಯಕ್ಷರನ್ನೇನು ಸಂಹರಿಸಿದಿಯೋ ಆದರಿಂದ ಗಿರಿಶಭ್ರಾತುಃ= ರುದ್ರದೇವರ ತಮ್ಮನಂತಿರುವ ಧನದಸ್ಯ=ಕುಬೇರನ ಹೇಲನಂ=ಅವಮಾನವು ತ್ವಯಾ ಕೃತಂ=ನಿನ್ನಿಂದ ಮಾಡಲ್ಪಟ್ಟಿತು. ಕುಬೇರ-ರುದ್ರದೇವರ ಅವಮಾನದಿಂದ ನಿನಗೆ ಭಗವದ್‌ಜ್ಞಾನವೂ ಆಗಲಾರದು ಎಂದು ಭಾವ. ।।೬೩।।

**ತಂ ಪ್ರಸಾದಯ ವತ್ಸಾಶು ಸನ್ನತ್ಯಾ ಪ್ರಶ್ರಯೋಕ್ತಿಭಿಃ ।**
**ನ ಯಾವನ್ಮಹತಾಂ ತೇಜಃ ಕುಲಂ ನಾಭಿಭವಿಷ್ಯತಿ ॥೬೪॥**

ವತ್ಸ=ಮಗುವೇ ! ಮಹತಾಂ=ದೊಡ್ಡವರ ತೇಜಃ=ಸಾಮರ್ಥ್ಯವು ಯಾವತ್=ಎಲ್ಲಿಯವರೆಗೆ ನಃ ಕುಲಂ=ನಮ್ಮ ವಂಶವನ್ನು ನ ಅಭಿಭವಿಷ್ಯತಿ=ನಾಶಮಾಡುವದಿಲ್ಲವೋ ತಾವತ್=ಅಷ್ಟರಲ್ಲಿ (ನಾಶ ಮಾಡುವ ಮೊದಲು ಎಂದರ್ಥ) ತಂ=ಕುಬೇರನನ್ನು ಆಶು=ಬೇಗನೇ ಸನ್ನತ್ಯಾ=ಸಾಷ್ಟಾಂಗನಮಸ್ಕಾರದಿಂದ ಪ್ರಶ್ರಯೋಕ್ತಿಭಿಃ=ವಿನಯದ ಮಾತುಗಳಿಂದ ಪ್ರಸಾದಯ=ಸಂತೋಷಗೊಳಿಸು. ॥೬೪॥

**ಇತ್ಯುಕ್ತಸ್ತಂ ಪ್ರಣಮ್ಯಾಹ ಭಗವಂಸ್ತೇಽನುಶಾಸನಮ್ ।**
**ಆತಿಷ್ಠೇ ಭ್ರಾತೃಮಾತ್ರೋರ್ಮೇ ಶೋಚತಃ ಕ್ಷಮ್ಯತಾಮಿತಿ ॥೬೫ ॥**

ಇತ್ಯುಕ್ತಃ=ಈ ರೀತಿ ಹೇಳಿಸಿಕೊಳ್ಳಲ್ಪಟ್ಟ ಧ್ರುವನು ತಂ=ಸ್ವಾಯಂಭುವಮನುವನ್ನು ಪ್ರಣಮ್ಯ=ನಮಸ್ಕರಿಸಿ, ಭಗವನ್=ಪೂಜ್ಯರೇ ! ತೇ=ನಿಮ್ಮ ಅನುಶಾಸನಂ=ಅಪ್ಪಣೆಯನ್ನು ಆತಿಷ್ಠೇ=ನಡೆಸುವೆನು. ಭ್ರಾತೃಮಾತ್ರೋಃ=ತಮ್ಮ-ತಾಯಿಗಾಗಿ ಶೋಚತಃ=ದುಃಖಿತನಾದ ಮೇ=ನನ್ನ ಅಪರಾಧವನ್ನು ಕ್ಷಮ್ಯತಾಂ=ಕ್ಷಮಿಸೋಣವಾಗಲಿ ಇತಿ=ಎಂದು ಆಹ=ಹೇಳಿದನು.

(ವಿ.ಧ್ವ) ಶೋಚತಃ ಎಂದಿದ್ದರಿಂದ ''ಹಿಂದಿನ ದ್ವೇಷ ಮನಸ್ಸಿನಲ್ಲಿಟ್ಟುಕೊಂಡು ತಮ್ಮ-ತಾಯಿಯ ಮರಣದ ಪ್ರತಿಕ್ರಿಯೆ ಮಾಡಲು ಸಮರ್ಥನಾದರೂ ಧ್ರುವನು ಸುಮ್ಮನೇ ನಿಂತನು'' ಎಂಬ ಜನಾಪವಾದ ಪರಿಹರಿಸಲು ಯಕ್ಷವಧದಲ್ಲಿ ಪ್ರವೃತ್ತನಾದೆನೆಂದು ಸೂಚಿತವಾಗುವದು. ॥೬೫॥

ಮೈತ್ರೇಯ ಉವಾಚ -

**ಏವಂ ಸ್ವಾಯಂಭುವಃ ಪೌತ್ರಮನುಶಾಸ್ಯ ಮನುರ್ಧ್ರುವಮ್ ।**
**ತೇನಾಭಿವಂದಿತಃ ಸಾಕಮೃಷಿಭಿಃ ಸ್ವಪುರಂ ಯಯೌ ॥ ೬೬ ॥**

॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ ಏಕಾದಶೋಽಧ್ಯಾಯಃ ॥

ಏವಂ=ಈ ರೀತಿಯಾಗಿ ಸ್ವಾಯಂಭುವಃ ಮನುಃ=ಸ್ವಾಯಂಭುವಮನುವು ಧ್ರುವಂ=ಮೊಮ್ಮಗನಾದ ಧ್ರುವನನ್ನು ಅನುಶಾಸ್ಯ=ತಿಳಿಹೇಳಿ ತೇನ=ಧ್ರುವನಿಂದ ಅಭಿವಂದಿತಃ=ನಮಸ್ಕೃತನಾಗಿ ಋಷಿಭಿಃ ಸಾಕಂ=ಋಷಿಗಳಿಂದ ಕೂಡಿಕೊಂಡು ಸ್ವಪುರಂ ಯಯೌ=ತನ್ನ ಊರಿಗೆ ಹೋದನು. ॥೬೬॥

॥ ಇಲ್ಲಿಗೆ ಹನ್ನೊಂದನೇ ಅಧ್ಯಾಯವು ಮುಗಿಯಿತು ॥

## ಅಥ ದ್ವಾದಶೋಽಧ್ಯಾಯಃ

ಸಾಧನಸಾಮಗ್ರಿ ಇರುವಾಗ ಭಗವಂತನ ಪ್ರಸಾದದಿಂದ ಸ್ವರೂಪಾನಂದಾನುಭವ-ರೂಪವಾದ ಮೋಕ್ಷವೂ ಸಹ ಅವರವರ ಯೋಗ್ಯತಾನುಸಾರವಾಗಿ ಜನರಿಗೆ ಲಭಿಸುವದು ಎಂದು ಈ ಅಧ್ಯಾಯದಲ್ಲಿ ಹೇಳುವರು.

ಮೊದಲಿಗೆ ಕುಬೇರನು ಧ್ರುವನ ಅಪರಾಧವನ್ನು ಕ್ಷಮಿಸಿ ವರದಾನ ಮಾಡಿದ್ದನ್ನು ಹೇಳುವರು -

**ಮೈತ್ರೇಯ ಉವಾಚ -**

**ಧ್ರುವಂ ನಿವೃತ್ತಂ ಪ್ರತಿಬುದ್ಧ್ಯ ವೈಶಸಾ-**
**ದಪೇತಮನ್ಯುರ್ಭಗವಾನ್ ಧನೇಶ್ವರಃ ।**
**ತತ್ರಾಗತಶ್ಚಾರಣಯಕ್ಷಕಿನ್ನರೈಃ**
**ಸಂಸ್ತೂಯಮಾನೋಽಭ್ಯವದತ್ ಕೃತಾಂಜಲಿಮ್ ॥೧॥**

ಭಗವಾನ್ ಧನೇಶ್ವರಃ=ಪೂಜ್ಯನಾದ ಕುಬೇರನು ಧ್ರುವಂ=ಧ್ರುವನನ್ನು ವೈಶಸಾತ್=ಯುದ್ಧದಿಂದ (ಯಕ್ಷವಧದಿಂದ) ನಿವೃತ್ತಂ=ಹಿಂದಿರುಗಿರುವದನ್ನು ಪ್ರತಿಬುಧ್ಯ=ತಿಳಿದು ಅಪೇತಮನ್ಯುಃ=ಸಿಟ್ಟು ಇಲ್ಲದವನಾಗಿ ತತ್ರ ಆಗತಃ=ಧ್ರುವನಿರುವಲ್ಲಿ ಬಂದು ಚಾರಣಯಕ್ಷಕಿನ್ನರೈಃ=ಚಾರಣರು, ಯಕ್ಷರು, ಕಿನ್ನರರುಗಳಿಂದ ಸಂಸ್ತೂಯಮಾನಃ=ಚೆನ್ನಾಗಿ ಸ್ತೋತ್ರಮಾಡಿಸಿಕೊಳ್ಳಲ್ಪಟ್ಟವನಾಗಿ ಕೃತಾಂಜಲಿಂ=ಕೈಮುಗಿದುನಿಂತಿರುವ ಧ್ರುವನಿಗೆ ಅಭ್ಯವದತ್=ಹೇಳಿದನು. ॥೧॥

**ಧನದ ಉವಾಚ -**

**ಭೋ ಭೋ ಕ್ಷತ್ರಿಯದಾಯಾದ ಪರಿತುಷ್ಟೋಽಸ್ಮಿ ತೇಽನಘ ।**
**ಯಸ್ತ್ವಂ ಪಿತಾಮಹಾದೇಶಾದ್ವೈರಂ ದುಸ್ತ್ಯಜಮತ್ಯಜಃ ॥೨॥**

ಭೋ ಭೋ ಕ್ಷತ್ರಿಯದಾಯಾದ=ಎಲೋ ಕ್ಷತ್ರಿಯಕುವರನೇ ! ಯಃ ತ್ವಂ=ಯಾವ ನೀನು ಪಿತಾಮಹಾದೇಶಾದ್=ಅಜ್ಜನ ಆಜ್ಞೆಯಿಂದ ದುಸ್ತ್ಯಜಂ=ಸುಲಭವಾಗಿ ಬಿಡಲಾಗದ ವೈರಂ=ದ್ವೇಷವನ್ನು ಅತ್ಯಜಃ=ಬಿಟ್ಟಿರುವಿ. ಆದ್ದರಿಂದ ಹೇ ಅನಘ=ಪಾಪರಹಿತನೇ ! ತೇ ಪರಿತುಷ್ಟೋಽಸ್ಮಿ=ನಿನ್ನ ವಿಷಯದಲ್ಲಿ ಸಂತುಷ್ಟನಾಗಿರುವೆನು ಎಂದು ಹೇಳಿದನು.

♦ ಯುದ್ಧವೆಂಬ ಕ್ಷತ್ರಧರ್ಮನಿಷ್ಠನಾದ್ದರಿಂದ ಕ್ಷತ್ರಿಯದಾಯಾದ ಎಂದು ಸಂಬೋಧಿಸಿರುವನು.

♦ ಅನಘ ಎಂಬುದರಿಂದ "ಸಮರ್ಥನಾದರೂ ಹಿಂದಿನ ಮಾತ್ಸರ್ಯದಿಂದ ತಮ್ಮನನ್ನು ಕೊಂದವನನ್ನು ಕೊಲ್ಲಲಿಲ್ಲ"ವೆಂದು ಲೋಕಾಪವಾದ ಕಳೆದುಕೊಳ್ಳಲು ನೀನು ಯಕ್ಷವಧ ಮಾಡಿರುವಿ. ಇಲ್ಲವಾದರೆ ಹರಿಭಕ್ತನಾದ ನಿನಗೆ ಈ ಪ್ರವೃತ್ತಿ ಬರಲಾರದು. ನಿನ್ನ ಸ್ವಧರ್ಮನಿಷ್ಠೆ ಹಾಗೂ ಲೋಕಾಪವಾದ ಭೀರುತೆಯಿಂದ ಪ್ರೀತನಾಗಿರುವೆ ಎಂದು ಸೂಚಿತವಾಗಿದೆ. ।।೨।।

**ನ ಭವಾನವಧೀದ್ಯಕ್ಷಾನ್ನ ಯಕ್ಷಾ ಭ್ರಾತರಂ ತವ ।**
**ಕಾಲ ಏವ ಹಿ ಭೂತಾನಾಂ ಪ್ರಭುರಪ್ಯಯಭಾವಯೋಃ ।।೩।।**

ಭವಾನ್=ನೀನು ಯಕ್ಷಾನ್=ಯಕ್ಷರನ್ನು ನ ಅವಧೀತ್=ಕೊಲ್ಲಲಿಲ್ಲ. ಯಕ್ಷಾಃ=ಯಕ್ಷರು ತವ=ನಿನ್ನ ಭ್ರಾತರಂ=ತಮ್ಮನನ್ನು ನ ಅವಧಿಷುಃ=ಕೊಲ್ಲಲಿಲ್ಲ. ಹಿ=ಏಕೆಂದರೆ ಕಾಲಃ ಏವ= ಕಾಲನಾಮಕನಾದ ಭಗವಂತನೇ ಭೂತಾನಾಂ=ಪ್ರಾಣಿಗಳ ಅಪ್ಯಯಭಾವಯೋಃ=ಮರಣ ಜನನಗಳಿಗೆ ಪ್ರಭುಃ=ಸಮರ್ಥನು. ।।೩।।

ಹಾಗಾದರೆ 'ನಾನು ಮಾಡಿದೆ' 'ನೀನು ಮಾಡಿದಿ' 'ನನ್ನ ಶತ್ರುವನ್ನು ನಾನು ಕೊಂದೆ' 'ನೀನು ಈ ಕೆಲಸ ಮಾಡಲಿಲ್ಲ' ಎಂದು ತಿಳಿದು ವ್ಯವಹರಿಸುವದು ಹೇಗೆ ? ಎಂದರೆ ಹೇಳುವರು -

**ಅಹಂ ತ್ವಮಿತ್ಯಪಾರ್ಥಾ ಧೀರಜ್ಞಾನಾತ್ಪುರುಷಸ್ಯ ಹಿ ।**
**ಸ್ವಾಪ್ನೀವ ಭಾತ್ಯನುಧ್ಯಾನಾದ್ಯಯಾ ಬಂಧವಿಪರ್ಯಯಃ ।।೪।।**

ಅಹಂ ತ್ವಂ ಇತಿ ಧೀಃ='ನಾನೇ ಕರ್ತಾ' 'ನೀನೇ ಕರ್ತಾ' ಎಂಬ ಜ್ಞಾನವು ಪುರುಷಸ್ಯ ಅಜ್ಞಾನಾತ್=ಜೀವರ ದೇಹದಲ್ಲಿರುವ ಸ್ವತಂತ್ರಕರ್ತೃವಾದ ಶ್ರೀಹರಿಯನ್ನು ತಿಳಿಯದಿರುವ-ದರಿಂದ ಬರುವದು, ಅಪಾರ್ಥಾ=ವಿಷಯರಹಿತವಾದುದು, ಭ್ರಾಂತಿರೂಪವಾದದ್ದು ಎಂದರ್ಥ. ಹಿ=ಪ್ರಮಾಣಪ್ರಸಿದ್ಧವಾಗಿದೆ. ಅನುಧ್ಯಾನಾತ್ ಜಾಗ್ರದವಸ್ಥೆಯಲ್ಲಿ ಅನುಭವಿಸಿದ

ಪದಾರ್ಥಗಳ ಸಂಸ್ಕಾರದಿಂದ ಸ್ವಾಪ್ನೀವ=ಕನಸಿನಲ್ಲಿ ಕಾಣುವ ಪದಾರ್ಥಗಳಲ್ಲಿ ತೋರುವ ಜಾಗ್ರತ್ವದಂತೆ ಭಾತಿ=ತೋರುವದು. ಯಯಾ= ಸ್ವತಂತ್ರಕರ್ತೃತ್ವಭ್ರಾಂತಿಯಿಂದ ಬಂಧವಿಪರ್ಯಯಃ=ಬೇಕಾದ ಮಗ-ಮಡದಿಯರಲ್ಲಿ ರಾಗ, ಶತ್ರುಗಳಲ್ಲಿ ದ್ವೇಷವೆಂಬ ಬಂಧನದಿಂದ ಆನಂದಸ್ವರೂಪನಾದ ಜೀವನಿಗೆ ದುಃಖವೆಂಬ ವೈಪರೀತ್ಯ ಬರುವದು. ಕಾರಣ ಈ ವಿಧ ಬುದ್ಧಿಯನ್ನು ಮಾಡಬೇಡ ಎಂದು ಭಾವ.

**ಭಾಗವತ ತಾತ್ಪರ್ಯ -**

ಜೀವನಿಗೂ ಕರ್ತೃತ್ವವಿರುವದರಿಂದ ಕರ್ತೃತ್ವಬುದ್ಧಿಯು ಭ್ರಾಂತಿ ಏಕೆ ? ಎಂದರೆ, ಅದರ ಅಭಿಪ್ರಾಯ ಹೇಳುವರು -

**ಪರಮೇಶ್ವರಂ ವಿನಾ ಅಹಂ ತ್ವಂ ಕರ್ತಾ ಇತಿ ಭ್ರಾಂತಿಃ ।**

ಪರಮಾತ್ಮನ ಪ್ರೇರಣೆ ಇಲ್ಲದೇ ಸ್ವತಂತ್ರವಾಗಿ ನಾನು ಕರ್ತಾ ನೀನು ಕರ್ತಾ ಎಂದು ತಿಳಿಯುವದು ಭ್ರಾಂತಿ ಎಂದು ಭಾವ.

ಹೀಗೇಕೆ ? ಎಂದರೆ, ಜೀವರು ಅಸ್ವತಂತ್ರಕರ್ತೃಗಳು, ಶ್ರೀಹರಿಯು ಸ್ವತಂತ್ರಕರ್ತೃವು ಎಂಬ ವಿಷಯದಲ್ಲಿ ಪ್ರಮಾಣವನ್ನು ಹೇಳುವರು -

**ನಾಹಂ ಕರ್ತಾ ನ ಕರ್ತಾ ತ್ವಂ ಕರ್ತಾ ಯಸ್ತು ಸದಾ ಪ್ರಭುಃ । ಇತಿ ಮೋಕ್ಷಧರ್ಮೇ ॥**

ನಾನಾಗಲೀ ನೀನಾಗಲೀ ಸ್ವತಂತ್ರಕರ್ತೃಗಳಲ್ಲ. ಸ್ವತಂತ್ರಕರ್ತೃವಾದ ವ್ಯಕ್ತಿ ಶ್ರೀಹರಿಯೊಬ್ಬನೇ ಎಂದು ಮೋಕ್ಷಧರ್ಮದಲ್ಲಿದೆ.

'ಬಂಧವಿಪರ್ಯಯಃ' ಎಂದು ಬಂಧಕ್ಕೆ ಮಿಥ್ಯಾತ್ವ ಹೇಳಿದಂತೆ ತೋರುವದು. ಆ ಕಾರಣ ಅದರ ಅಭಿಪ್ರಾಯ ಹೇಳುವರು -

**ವಿಪರ್ಯಯೋ ದುಃಖಾದಿಃ ಸುಖಾದಿರೂಪಸ್ಯ ।**

ಸುಖ-ಜ್ಞಾನಾದಿರೂಪನಾದ ಸಜ್ಜೀವನಿಗೆ ದುಃಖ ಮುಂತಾದ ವೀಪರೀತ ರೂಪವಾಗುವದು ದುಃಖರೂಪನಾದ ದುರ್ಜನರಿಗೆ ಸುಖಾದಿಗಳಾಗುವದು. ಹೊರತು ಸುಳ್ಳಲ್ಲ, ಬದಲಾವಣೆಯಷ್ಟೇ ಎಂದು ಭಾವ. ।।೪।।

**ತದ್ಗಚ್ಛ ಧ್ರುವ ಭದ್ರಂ ತೇ ಭಗವಂತಮಧೋಕ್ಷಜಮ್ ।**
**ಸರ್ವಭೂತಾತ್ಮಭಾವೇನ ಸರ್ವಭೂತಾತ್ಮವಿಗ್ರಹಮ್ ।।೫।।**

ತತ್=ಸ್ವತಂತ್ರಕರ್ತೃತ್ವವು ಜೀವರಿಗೆ ಇಲ್ಲದಿರುವದರಿಂದ ಹೇ ಧ್ರುವ=ಎಲೋ ಧ್ರುವನೇ ! ತೇ=ನಿನಗೆ ಭದ್ರಂ=ಕಲ್ಯಾಣವಾಗಲಿ. ಗಚ್ಛ=ಹೊರಡು. ಸರ್ವಭೂತಾತಾತ್ಮವಿಗ್ರಹಂ= ಪಂಚಭೂತಾತ್ಮಕವಾದ ಜೀವರ ದೇಹದಲ್ಲಿ ಪ್ರವೇಶವುಳ್ಳ ಅಥವಾ ಎಲ್ಲ ಪ್ರಾಣಿಗಳಲ್ಲಿ ತನ್ನ ಜ್ಞಾನಾನಂದಾತ್ಮಕ ದೇಹವುಳ್ಳ ಅಧೋಕ್ಷಜಂ=ಇಂದ್ರಿಯಗೋಚರನಾಗದ ಭಗವಂತಂ= ಷಡ್ಗುಣೈಶ್ವರ್ಯಸಂಪನ್ನನಾದ ಶ್ರೀಹರಿಯನ್ನು ಸರ್ವಭೂತಾತ್ಮಭಾವೇನ=ಸರ್ವಾಂತರ್ಯಾಮಿ ಎಂದು ಭಜಸ್ವ=ಭಜಿಸು ಎಂದು ಮುಂದಿನ ಶ್ಲೋಕದಿಂದ ಅನ್ವಯ. ॥೫॥

**ಭಜಸ್ವ ಭಜನೀಯಾಂಘ್ರಿಮಭವಾಯ ಭವಚ್ಛಿದಮ್ ।**
**ಯುಕ್ತಂ ವಿರಹಿತಂ ಶಕ್ತ್ಯಾ ಗುಣಮಯ್ಯಾಽತ್ಮಮಾಯಯಾ ॥೬॥**

ಭಜನೀಯಾಂಘ್ರಿಂ=ಸೇವಿಸಲು ಯೋಗ್ಯವಾದ ಪಾದಗಳುಳ್ಳ ಭವಚ್ಛಿದಂ=ಸಂಸಾರ ಮೋಚಕನಾದ ಆತ್ಮಮಾಯಯಾ ಶಕ್ತ್ಯಾ ಯುಕ್ತಂ=ಸ್ವರೂಪಸಾಮರ್ಥ್ಯವೆಂಬ ಶಕ್ತಿಯಿಂದ ಕೂಡಿದ ಗುಣಮಯ್ಯಾ ವಿರಹಿತಂ=ಸತ್ವಾದಿಗುಣಾತ್ಮಕವಾದ, ತನ್ನ ಅಧೀನವಾದ ಜಡಪ್ರಕೃತಿಯಿಂದ ರಹಿತನಾದ ಭಗವಂತಂ=ಶ್ರೀಹರಿಯನ್ನು ಅಭವಾಯ=ಸಂಸಾರವನ್ನು ಕಳೆದುಕೊಳ್ಳಲು ಭಜಸ್ವ=ಸೇವಿಸು.

**ಭಾಗವತ ತಾತ್ಪರ್ಯ -**

''ಶಕ್ತ್ಯಾ ಯುಕ್ತಂ ವಿರಹಿತಂ'' ಎನ್ನುವಲ್ಲಿನ ಶಕ್ತಿಶಬ್ದಾರ್ಥವನ್ನು ಹೇಳುತ್ತ ವ್ಯಾಹತಿ ಪರಿಹರಿಸಲು ಆಚಾರ್ಯರು ಅನ್ವಯ ತಿಳಿಸುವರು -

**ಆತ್ಮಸಾಮರ್ಥ್ಯಾಖ್ಯಯಾ ಶಕ್ತ್ಯಾ ಯುಕ್ತಮ್ । ಗುಣಮಯ್ಯಾ ವಿರಹಿತಮ್ ।**

ತನ್ನ ಸ್ವರೂಪಸಾಮರ್ಥ್ಯದಿಂದ ಕೂಡಿದವನು. ಸತ್ವಾದಿಗುಣಾತ್ಮಕವಾದ ತನ್ನ ಅಧೀನವಾದ ಜಡಪ್ರಕೃತಿಯಿಂದ ವಿರಹಿತನು ಎಂದರ್ಥ. ॥೬॥

**ವೃಣೀಹಿ ಕಾಮಂ ನೃಪ ಯನ್ಮನೋಗತಂ**
**ಮತ್ತಸ್ತ್ವಮೌತ್ತಾನಪದೇಽವಿಶಂಕಿತಃ ।**
**ವರಾರ್ಹಣೋಽಸ್ಯಂಬುಜನಾಭಪಾದಯೋ-**
**ರ್ನಿರಂತರಂ ತ್ವಾಂ ವಯಮಂಗ ಶುಶ್ರುಮ ॥೭॥**

ಹೇ ಔತ್ತಾನಪದೇ ನೃಪ=ಉತ್ತಾನಪಾದಕುವರನಾದ ಧ್ರುವರಾಜನೇ ! ವಯಂ=ನಾವು ತ್ವಾಂ=ನಿನ್ನನ್ನು ಅಂಬುಜನಾಭಪಾದಯೋಃ=ಪದ್ಮನಾಭನ ಪಾದಗಳಲ್ಲಿ ನಿರಂತರಂ= ಮನೋವ್ಯವಧಾನರಹಿತನೆಂದು ಶುಶ್ರುಮ=ಕೇಳಲ್ಪಟ್ಟಿರುವೆವು. ಹೇ ಅಂಗ=ಪ್ರಿಯನೇ !

ವರಾರ್ಹಣಃ ಅಸಿ=ವರ ಪಡೆಯಲು ಯೋಗ್ಯನಾಗಿರುವಿ. ತ್ವಂ=ನೀನು ಅವಿಶಂಕಿತಃ= ಸಂಶಯ ಪಡದೇ ಯನ್ಮನೋಗತಂ=ಮನಸ್ಸಿನಲ್ಲೇನಿದೆಯೋ ತಂ ಕಾಮಂ=ಆ ಅಭಿಲಾಷೆಯನ್ನು ಮತ್ತಃ=ನನ್ನಿಂದ ವೃಣೀಹಿ=ಕೇಳಿಕೊ, ಸ್ವೀಕರಿಸು.

**ಭಾಗವತ ತಾತ್ಪರ್ಯ -**

''ಅಂಬುಜನಾಭಪಾದಯೋರ್ನಿರಂತರಂ'' ಎಂಬುದಕ್ಕೆ ಯೋಗ್ಯವಾದ ತಾತ್ಪರ್ಯ ಹೇಳುವರು -

''ನಿರಂತರಂ ಭಗವತ್ಪಾದಮಾನಸಮ್''

ನಿರಂತರಂ ಎಂಬುದಕ್ಕೇನೇ ಮನೋವ್ಯವಧಾನರಹಿತನೆಂದು ಅರ್ಥ ಹೇಳಿದಂತಾಯಿತು.

**ಮೈತ್ರೇಯ ಉವಾಚ -**

**ಸ ರಾಜರಾಜೇನ ವರಾಯ ಚೋದಿತೋ**
**ಧ್ರುವೋ ಮಹಾಭಾಗವತೋ ಮಹಾಮತಿಃ ।**
**ಹರೌ ಸ ವವ್ರೇಽಚಲಿತಾಂ ಸ್ಮೃತಿಂ ಯಯಾ**
**ತರತ್ಯಯತ್ನೇನ ದುರತ್ಯಯಂ ತಮಃ ॥೮॥**

ರಾಜರಾಜೇನ=ಕುಬೇರನಿಂದ ವರಾಯ ಚೋದಿತಃ=ವರಕೇಳಲು ಪ್ರೇರಿತನಾದ ಮಹಾಮತಿಃ=ಬುದ್ಧಿವಂತನಾದ ಸಃ ಧ್ರುವಃ=ಆ ಧ್ರುವನು ಮಹಾಭಾಗವತಃ=ಪರಮ ಭಗವದ್ಭಕ್ತನು. ಆ ಕಾರಣ, ದುರತ್ಯಯಂ=ದಾಟಲಾಗದ ತಮಃ=ಅಜ್ಞಾನವನ್ನು ಯಯಾ= ಯಾವುದರಿಂದ ಅಯತ್ನೇನ=ಪ್ರಯತ್ನವಿಲ್ಲದೇ (ಅನಾಯಾಸವಾಗಿ) ತರತಿ=ದಾಟುವನೋ (ಅಜ್ಞಾನಪರಿಹಾರಕವಾದ ಎಂದರ್ಥ) ತಾಂ=ಅಂತಹ ಹರೌ ಅಚಲಿತಾಂ ಸ್ಮೃತಿಂ=ಶ್ರೀಹರಿಯಲ್ಲಿ ನಿರಂತರ ಸ್ಮರಣೆಯನ್ನು ವವ್ರೇ=ವರವಾಗಿ ಕೇಳಿದನು. ॥೮॥

**ತಸ್ಯ ಪ್ರೀತೇನ ಮನಸಾ ತಾಂ ದತ್ತ್ವೈಲಿಬಿಲಸ್ತತಃ ।**
**ಪಶ್ಯತೋಽಂತರ್ದಧೇ ಸೋಽಪಿ ಸ್ವಪುರಂ ಪ್ರತ್ಯಪದ್ಯತ ॥೯॥**

ಐಲಿಬಿಲಿಃ=ಇಲಿಬಿಲಾಪುತ್ರನಾದ ಕುಬೇರನು ತಸ್ಯ=ಧ್ರುವನಿಗೆ ಪ್ರೀತೇನ ಮನಸಾ=ಸಂತುಷ್ಟವಾದ ಮನಸ್ಸಿನಿಂದ ತಾಂ=ಹರಿಸ್ಮೃತಿಯನ್ನು ವರವನ್ನಾಗಿ ದತ್ವಾ=ಕೊಟ್ಟು ತತಃ=ಅನಂತರ ಪಶ್ಯತಃ=ನೋಡುತ್ತಿರುವಾಗಲೇ ಅಂದರ್ದಧೇ=ಕಾಣದಾದನು ಸೋಽಪಿ=ಧ್ರುವನೂ ಸಹ ಸ್ವಪುರಂ=ತನ್ನ ಪಟ್ಟಣವನ್ನು ಪ್ರತ್ಯಪದ್ಯತ=ತಲುಪಿದನು. ॥೯॥

**ಅಥಾಯಜತ ಯಜ್ಞೇಶಂ ಕ್ರತುಭಿರ್ಭೂರಿದಕ್ಷಿಣೈಃ ।**
**ದ್ರವ್ಯಕ್ರಿಯಾದೇವತಾನಾಂ ಕರ್ಮಾಕರ್ಮಫಲಪ್ರದಮ್ ॥೧೦॥**

ಅಥ=ವಿಷಯಾಸಕ್ತಿಯನ್ನು ಬಿಟ್ಟು ಊರಿಗೆ ಬಂದ ನಂತರ ಭೂರಿದಕ್ಷಿಣೈಃ=ಬಹಳ ದಕ್ಷಿಣೆಗಳುಳ್ಳ ಕ್ರತುಭಿಃ=ಯಜ್ಞಗಳಿಂದ ದ್ರವ್ಯಕ್ರಿಯಾದೇವತಾನಾಂ=ದ್ರವ್ಯ ಪುರೋಡಾಶಾದಿಗಳು, ಕ್ರಿಯಾ ಆವಹನಾದಿಗಳು, ದೇವತಾನಾಂ ಇಂದ್ರಾದಿಗಳು ಇವುಗಳಿಗೆ ಕರ್ಮ=ವಿಷಯನಾದ (ಇವುಗಳಿಂದ ಸಹಿತವಾದ ಯಜ್ಞಕ್ಕೆ ಮುಖ್ಯ ಉದ್ದೇಶ್ಯನಾದ) ಅಕರ್ಮಫಲಪ್ರದಂ= ಮೋಕ್ಷರೂಪಫಲಪ್ರದನಾದ ಯಜ್ಞೇಶಂ=ಯಜ್ಞನಿಯಾಮಕನಾದ ಶ್ರೀಹರಿಯನ್ನು ಅಯಜತ=ಪೂಜಿಸಿದನು.

**ಭಾಗವತ ತಾತ್ಪರ್ಯ -**

'ಕರ್ಮಾಕರ್ಮಫಲಪ್ರದಂ' ಎಂಬುವುದು ಒಂದೇ ಪದವೆಂಬ ಭ್ರಮ ನಿವಾರಿಸಲು ಅನ್ವಯ ತೋರಿಸುತ್ತ ಆಚಾರ್ಯರು ವ್ಯಾಖ್ಯಾನಿಸುವರು -

**ದ್ರವ್ಯಕ್ರಿಯಾದೇವತಾನಾಂ ವಿಷಯಮ್ । ಅಕರ್ಮಫಲಪ್ರದಂ ಮೋಕ್ಷಫಲಪ್ರದಮ್।**

''ದ್ರವ್ಯಕ್ರಿಯಾದೇವತಾನಾಂ ಕರ್ಮ, ಅಕರ್ಮಫಲಪ್ರದಂ'' ಹೀಗೆ ಎರಡು ವಾಕ್ಯಗಳು. ಮೊದಲನೇ ವಾಕ್ಯದಲ್ಲಿ ಕರ್ಮಶಬ್ದಕ್ಕೆ ವಿಷಯವೆಂದರ್ಥ. ಮುಖ್ಯೋದ್ದೇಶ್ಯನೆಂದು ಭಾವ. ಎರಡನೇ ವಾಕ್ಯದಲ್ಲಿ ''ನ ವಿದ್ಯತೇ ಕರ್ಮ ಬಂಧಕತಯಾ ಯಸ್ಮಿನ್ ತತ್ ಅಕರ್ಮ'' ಎಂದು ವಿಗ್ರಹ ಮಾಡಿಕೊಂಡು ''ಯಾವ ಸ್ಥಾನದಲ್ಲಿ ಕರ್ಮವು ಬಂಧಕವಾಗಿರುವುದಿಲ್ಲವೋ ಅಂತಹ ಸ್ಥಾನ ಎಂದರೆ ಮೋಕ್ಷ'' ಎಂಬುದಾಗಿ ಅಕರ್ಮಶಬ್ದಕ್ಕೆ ಅರ್ಥ ತಿಳಿಸಿದಂತಾಯಿತು. ॥೧೦॥

**ಸರ್ವಾತ್ಮನ್ಯಚ್ಯುತೇ ಸರ್ವೇ ತೀವ್ರೌಘಾಂ ಭಕ್ತಿಮುದ್ವಹನ್ ।**
**ದದರ್ಶಾತ್ಮನಿ ಭೂತೇಷು ತಮೇವಾವಸ್ಥಿತಂ ವಿಭುಮ್ ॥ ೧೧ ॥**

ಸರ್ವಾತ್ಮನಿ=ಎಲ್ಲರ ಅಂತರ್ಯಾಮಿಯಾದ ಸರ್ವೇ=ಎಲ್ಲಗುಣಗಳಿಂದ ಪೂರ್ಣನಾದ ಅಚ್ಯುತೇ=ಚ್ಯುತಿರಹಿತನಾದ ಶ್ರೀಹರಿಯಲ್ಲಿ ತೀವ್ರೌಘಾಂ=ನಿರಂತರ ಪ್ರವಾಹರೂಪವಾದ ಭಕ್ತಿಂ=ಭಕ್ತಿಯನ್ನು ಉದ್ವಹನ್=ಮಾಡುವವನಾಗಿ ಆತ್ಮನಿ=ತನ್ನಲ್ಲಿ ಭೂತೇಷು=ಎಲ್ಲ ಪ್ರಾಣಿಗಳಲ್ಲಿಯೂ ಅವಸ್ಥಿತಂ=ನಿಯಾಮಕನಾಗಿ ಇರುವ ವಿಭುಂ=ವ್ಯಾಪ್ತನಾದ ತಂ ಏವ=ಹಿಂದೆ ತಾನು ತಪಸ್ಸಿನಿಂದ ಪ್ರತ್ಯಕ್ಷೀಕರಿಸಿಕೊಂಡವನನ್ನೇ ದದರ್ಶ=ನೋಡಿದನು.

"ಸರ್ವಃ ಶರ್ವಃ ಶಿವಃ ಸ್ಥಾಣುಃ" ಎಂದು ವಿಷ್ಣುಸಹಸ್ರನಾಮ ಇರುವುದರಿಂದ ಸರ್ವಃ ಎನ್ನುವುದು ಭಗವಂತನ ನಾಮವಾಗಿದೆ. ಆದ್ದರಿಂದ ಸರ್ವನಾಮಸಂಜ್ಞೆ ಇಲ್ಲ. ಹೀಗಾಗಿ ಸರ್ವನಾಮಕಾರ್ಯವಾಗಿಲ್ಲ ಅರ್ಥಾತ್ ಸರ್ವಸ್ಮಿನ್ ಎಂದಾಗಿಲ್ಲ. ಸರ್ವೇ ಎಂದೇ ರೂಪವಾಗಿದೆ. "ಸಂಜ್ಞೋಪಸರ್ಜನೀಭೂತಾಸ್ತು ನ ಸರ್ವಾದಯಃ" (ವಾರ್ತಿಕ ೨೨೫)

**ಭಾಗವತ ತಾತ್ಪರ್ಯ -**

ಸರ್ವೇ ಎಂಬ ಶಬ್ದಕ್ಕೆ ಪ್ರಕೃತೋಪಯುಕ್ತವಾದ ಅರ್ಥವನ್ನು ಹೇಳುವರು -

**ವಿಶ್ವಃ ಪೂರ್ಣಸ್ತಥಾ ಸರ್ವಃ ಸಮಸ್ತಶ್ಚಾಭಿಧೀಯತೇ । ಇತ್ಯಭಿಧಾನಮ್ ।**

ವಿಶ್ವ, ಸರ್ವ, ಸಮಸ್ತ ಎಂಬ ಪದಗಳಿಂದ ಪೂರ್ಣವಾದ ವಸ್ತುವು ಹೇಳಲ್ಪಡುವದು ಎಂದು ಅಭಿಧಾನವಿದೆ. ||೧೧||

ಧ್ರುವನು ಪ್ರಜಾರಂಜಿತನಾಗಿದ್ದನೆಂದು ಹೇಳುವರು -

**ತಮೇವ ಶೀಲಸಂಪನ್ನಂ ಬ್ರಹ್ಮಣ್ಯಂ ದೀನವತ್ಸಲಮ್ ।**
**ಗೋಪ್ತಾರಂ ಧರ್ಮಸೇತೂನಾಂ ಮೇನಿರೇ ಪಿತರಂ ಪ್ರಜಾಃ ||೧೨||**

ಪ್ರಜಾಃ=ಪ್ರಜೆಗಳು ಶೀಲಸಂಪನ್ನಂ=ಸದಾಚಾರಸಂಪನ್ನನಾದ ಬ್ರಹ್ಮಣ್ಯಂ=ಬ್ರಾಹ್ಮಣ ಸೇವಾಸಕ್ತನಾದ ದೀನವತ್ಸಲಂ=ದುಃಖಿತರನ್ನು ರಕ್ಷಿಸುವ ಧರ್ಮಸೇತೂನಾಂ ಗೋಪ್ತಾರಂ=ಧರ್ಮಮರ್ಯಾದೆಯನ್ನು ಕಾಪಾಡುವ ತಂ ಏವ=ಧ್ರುವನನ್ನೇ ಪಿತರಂ ಮೇನಿರೇ=ತಂದೆಯೆಂದು ತಿಳಿದರು. ||೧೨||

**ಷಟ್‌ತ್ರಿಂಶದ್ವರ್ಷಸಾಹಸ್ರಂ ಶಶಾಸ ಕ್ಷಿತಿಮಂಡಲಮ್ ।**
**ಭೋಗೈಃ ಪುಣ್ಯಕ್ಷಯಂ ಕುರ್ವನ್ನಭೋಗೈರಶುಭಕ್ಷಯಮ್ ||೧೩||**

ಭೋಗೈಃ=ಸುಖಾನುಭವಗಳಿಂದ ಪುಣ್ಯಕ್ಷಯಂ=ಪ್ರಾರಬ್ಧವಾದ ಅನಿಷ್ಟಪುಣ್ಯದ ನಾಶವನ್ನು ಅಭೋಗೈಃ=ಸುಖಾನುಭವವಿರುದ್ಧವಾದ ದುಃಖಾನುಭವಗಳಿಂದ ಅಶುಭಕ್ಷಯಂ=ಪ್ರಾರಬ್ಧವಾದ ಪಾಪದ ನಾಶವನ್ನು ಕುರ್ವನ್=ಮಾಡುತ್ತ ಷಟ್‌ತ್ರಿಂಶತ್-ವರ್ಷಸಾಹಸ್ರಂ=ಮೂವತ್ತಾರು ಸಾವಿರ ವರ್ಷಗಳವರೆಗೆ ಕ್ಷಿತಿಮಂಡಲಂ=ಭೂಮಂಡಲವನ್ನು ಶಶಾಸ=ಆಳಿದನು. ||೧೩||

**ಏವಂ ಬಹುಸವಂ ಕಾಲಂ ಮಹಾತ್ಮಾऽವಿಕಲೇಂದ್ರಿಯಃ ।**
**ತ್ರಿವರ್ಗೌಪಯಿಕಂ ನೀತ್ವಾ ಪುತ್ರಾಯಾದಾನ್ನೃಪಾಸನಮ್ ||೧೪||**

ಮಹಾತ್ಮಾ=ಅನೇಕ ಸಾಧನಗಳಿಂದ, ಶ್ರೀಹರಿಯ ಪ್ರಸಾದದಿಂದ ನಿಷಿದ್ಧತ್ಯಾಗದಲ್ಲಿ ಸಮರ್ಥವಾದ ಮನಸ್ಸುಳ್ಳವನಾಗಿ ಅವಿಕಲೇಂದ್ರಿಯಃ=ವಶೀಕೃತ ಇಂದ್ರಿಯವುಳ್ಳವನಾಗಿ (ಅಥವಾ ಕುರುಡು ಕಿವುಡು ಮುಂತಾಗಿ ಇಲ್ಲದಿರುವವನಾಗಿ ಏವಂ=ಈ ರೀತಿಯಾಗಿ ಬಹುಸವಂ ಕಾಲಂ=ಬಹಳ ಕಾಲವನ್ನು (ಬಹುತಿಥ್ಯಾತ್ಮಕವಾದ ಕಾಲವನ್ನು) ತ್ರಿವರ್ಗೌಪಯಿಕಂ=ಧರ್ಮಾರ್ಥಕಾಮಗಳಿಗೆ ಉಪಯೋಗವಾಗುವಂತೆ ನೀತ್ವಾ=ಕಳೆದು ನೃಪಾಸನಂ=ಸಿಂಹಾಸನವನ್ನು ಪುತ್ರಾಯ=ಮಗನಿಗೆ (ಉತ್ಕಲನಿಗೆ) ಅದಾತ್=ಕೊಟ್ಟನು.

**ಮನ್ಯಮಾನ ಇದಂ ವಿಶ್ವಂ ಮಾಯಾರಚಿತಮಾತ್ಮನಿ ।**
**ಅವಿದ್ಯಾರಚಿತಸ್ವಪ್ನಗಂಧರ್ವನಗರೋಪಮಮ್ ॥೧೫॥**

ಆತ್ಮನಿ=ಪರಮಾತ್ಮನಲ್ಲಿ (ಅವನನ್ನು ಆಧಾರಿಸಿಕೊಂಡಿರುವ) ಮಾಯಾರಚಿತಂ= ಶ್ರೀಹರಿಯ ಇಚ್ಛೆಯಿಂದ ನಿರ್ಮಿತವಾದ ಇದಂ ವಿಶ್ವಂ=ಈ ಪ್ರಪಂಚವು ಅವಿದ್ಯಾರಚಿತಸ್ವಪ್ನ-ಗಂಧರ್ವನಗರೋಪಮಮ್=ಈಶ್ವರನ ಇಚ್ಛೆಯಿಂದ ಪ್ರದರ್ಶಿತವಾದ ಸ್ವಾಪ್ನಜಾಗ್ರತ್ವ ಮತ್ತು ಗಂಧರ್ವನಗರಗಳೇ ಸದಾ ಸತ್ತಾಭಾವವಿಷಯದಲ್ಲಿ ದೃಷ್ಟಾಂತವಾಗಿ ಉಳ್ಳದ್ದು ಎಂದು ಮನ್ಯಮಾನಃ=ತಿಳಿದವನಾಗಿ (ವಿಶಾಲಾಂ ಯಯೌ=ಬದರಿಗೆ ತೆರಳಿದನು ಎಂದು ಮುಂದಿನ ಶ್ಲೋಕದಿಂದ ಅನ್ವಯ.)

ಯದ್ಯಪಿ ಸ್ವಾಪ್ನಜಾಗ್ರತ್ವ-ಗಂಧರ್ವನಗರಗಳು ಅತ್ಯಂತ ಅಸತ್ತಾದ್ದರಿಂದ ವಿಕಾರಿತ್ವವಾಗಲೀ ನಾಶವಾಗಲೀ ಅವುಗಳಿಗೆ ಇರುವದಿಲ್ಲ, ಆದರೂ ಜಗತ್ತು ವಿಕಾರ ಉಳ್ಳದ್ದಾದ್ದರಿಂದ ಸದಾ ಸತ್ವವಿಲ್ಲ ಎನ್ನುವಲ್ಲಿ ಅವುಗಳ ದೃಷ್ಟಾಂತ ತಿಳಿಯಬೇಕು.

**ಭಾಗವತ ತಾತ್ಪರ್ಯ -**

ಈ ಶ್ಲೋಕದಲ್ಲಿ ಸ್ವಪ್ನ-ಗಂಧರ್ವನಗರದ ದೃಷ್ಟಾಂತ ಕೊಟ್ಟಿರುವದರಿಂದ ಜಗತ್ತಿಗೆ ಮಿಥ್ಯಾತ್ವ (ಅಸತ್ವ) ಹೇಳುವಂತೆ ತೋರುವದು. ಆ ಕಾರಣ ಸಾಮ್ಯವು ಯಾವ ಅಂಶದಲ್ಲಿ ? ಎಂದು ಪ್ರಮಾಣದಿಂದಲೇ ತಿಳಿಸುವರು -

**ಅನ್ಯಥಾತ್ವಾತ್ ಕ್ಷಿಪ್ರನಾಶಾತ್ ಜಗತ್ ಸ್ವಪ್ನಾದಿವತ್ ಸ್ಮೃತಮ್ ।**
**ವರ್ತಮಾನಂ ನಿಯತ್ಯೈವ ಸದೈವ ಪರಮಾತ್ಮನಿ ॥ ಇತಿ ವಾರಾಹೇ ।**

ಜಗತ್ತು ವಿಕಾರ ಹೊಂದುವದರಿಂದಲೂ, ಶೀಘ್ರದಲ್ಲಿ ನಾಶ ಹೊಂದುವದರಿಂದಲೂ, ಸಾರ್ವಕಾಲಿಕವಲ್ಲ ಎಂಬ ಅಭಿಪ್ರಾಯದಿಂದ (ಈಶ್ವರೇಚ್ಛೆಯಿಂದ ಕನಸಿನಲ್ಲಿ ತೋರುವ ಜಾಗ್ರತ್ವದಾರ್ಥಾಭೇದ ಮತ್ತು ಗಂಧರ್ವನಗರಗಳು ಸುಳ್ಳಾಗಿರುವದರಿಂದ ಹೇಗೆ ಸಾರ್ವಕಾಲಿಕವಲ್ಲವೋ ಹಾಗೆಯೇ ಜಗತ್ತು ಸಾರ್ವಕಾಲಿಕವಲ್ಲ ಎಂಬ ಅಭಿಪ್ರಾಯದಿಂದಲೇ)

ಜಗತ್ತಿಗೆ ಸ್ವಪ್ನ-ಗಂಧರ್ವನಗರಗಳ ದೃಷ್ಟಾಂತ ಕೊಟ್ಟಿದ್ದು, ಹೊರತು ವಿಕಾರಿತ್ವ-ಅನಿತ್ಯತ್ವ-ವಿವಕ್ಷೆಯಿಂದಲ್ಲ. ಏಕೆಂದರೆ, ಜಗತ್ತು ಶ್ರೀಹರಿಯನ್ನಾಶ್ರಯಿಸಿಕೊಂಡು ಅನಾದ್ಯನಂತಕಾಲದಲ್ಲಿ ನಿಯಮೇನ ಎಲ್ಲ ಕಲ್ಪಗಳಲ್ಲಿಯೂ ಒಂದೇ ರೀತಿಯಾಗಿ ಇರುವದು ಎಂದು ವರಾಹ-ಪುರಾಣದಲ್ಲಿದೆ.

ಮೂಲದಲ್ಲಿ ವಿಶ್ವವನ್ನು ಮಾಯಾರಚಿತ ಎಂದು, ಸ್ವಪ್ನವನ್ನು ಅವಿದ್ಯಾರಚಿತ ಎಂದು ಹೇಳಿರುವದರಿಂದ ಮಿಥ್ಯಾತ್ವದಲ್ಲೇ ದೃಷ್ಟಾಂತ ಹೇಳಬಹುದಲ್ಲ ? ಎಂದರೆ, ಮಾಯಾ-ಅವಿದ್ಯಾಶಬ್ದಗಳು ಭಗವದಿಚ್ಛಾವಾಚಕಗಳು ಎಂಬ ವಿಷಯದಲ್ಲಿ ಪ್ರಮಾಣ ಹೇಳುವರು-

**ಮಹಾಮಾಯೇತ್ಯವಿದ್ಯೇತಿ ನಿಯತಿರ್ಮೋಹಿನೀತಿ ಚ ।**
**ಪ್ರಕೃತಿರ್ವಾಸನೇತ್ಯೇವಂ ತವೇಚ್ಛಾಽನಂತ ಕಥ್ಯತೇ ॥ ಇತಿ ಸ್ಕಾಂದೇ ॥**

ಎಲೋ ಶ್ರೀಹರಿಯೇ ! ನಿನ್ನ ಇಚ್ಛೆಯು ಮಹಾಮಾಯಾ, ಅವಿದ್ಯಾ, ನಿಯತಿ, ಮೋಹಿನೀ, ಪ್ರಕೃತಿ, ವಾಸನಾ ಮುಂತಾದ ಶಬ್ದಗಳಿಂದ ಹೇಳಲ್ಪಟ್ಟಡುತ್ತದೆ ಎಂದು ಸ್ಕಾಂದಪುರಾಣದಲ್ಲಿದೆ. ಆ ಕಾರಣ ಅವಿದ್ಯಾ-ಮಾಯಾರಚಿತವೆಂದರೆ ಹರಿ ಇಚ್ಛಾನಿರ್ಮಿತ-ವೆಂದೇ ಅರ್ಥ ಮಾಡಬೇಕೆಂದು ಭಾವ. ॥೧೫॥

**ಆತ್ಮಸ್ತ್ರ್ಯಪತ್ಯಸುಹೃದೋ ಬಲಮೃದ್ಧಕೋಶ-**
**ಮಂತಃಪುರಂ ಪರಿವಿಹಾರಭುವಶ್ಚ ರಮ್ಯಾಃ ।**
**ಭೂಮಂಡಲಂ ಜಲಧಿಮೇಖಲಮಾಕಲಯ್ಯ**
**ಕಾಲೋಪಸೃಷ್ಟಮಿತಿ ಸ ಪ್ರಯಯೌ ವಿಶಾಲಾಮ್ ॥೧೬॥**

ಸಃ=ಧ್ರುವನು ಆತ್ಮಸ್ತ್ರ್ಯಪತ್ಯಸುಹೃದಃ ಆತ್ಮಾ=ದೇಹವು ಸ್ತ್ರೀ=ಹೆಂಡತಿ ಅಪತ್ಯ=ಮಕ್ಕಳು ಸುಹೃದಃ=ಮಿತ್ರರು ಇವರೆಲ್ಲರನ್ನು, ಬಲಂ=ಸೈನ್ಯವನ್ನು, ಋದ್ಧಕೋಶಂ=ಸಮೃದ್ಧವಾದ ಬೊಕ್ಕಸವನ್ನು, ಅಂತಃಪುರಂ=ರಾಣಿವಾಸವನ್ನು, ರಮ್ಯಾಃ=ಮನೋಹರವಾದ ಪರಿವಿಹಾರಭುವಃ=ಸುತ್ತಲೂ ಇರುವ ಕ್ರೀಡಾಂಗಣವನ್ನು, ಜಲಧಿಮೇಖಲಂ=ಸಮುದ್ರವೇ ಸೀಮಾ ಆಗಿ ಉಳ್ಳ ಭೂಮಂಡಲಂ=ರಾಜ್ಯವನ್ನು ಕಾಲೋಪಸೃಷ್ಟಂ ಇತಿ ಆಕಲಯ್ಯ=ಕಾಲನಾಮಕಪರಮಾತ್ಮನಿಂದ ಸಂಹೃತವಾದುದು (ಅನಿತ್ಯವಾದುದು) ಎಂದು ವಿಚಾರ ಮಾಡಿ ತಿಳಿದು *ವಿಶಾಲಾಂ=ಬದರಿಯನ್ನು ಕುರಿತು ಅಥವಾ ಅಲ್ಲಿರುವ ನದಿಯನ್ನು ಕುರಿತು ಪ್ರಯಯೌ=ಹೋದನು.

*'ವಿಶಾಲಾ ಬದರೀ ಪ್ರೋಕ್ತಾ ನಗರೀ ನಿಮ್ನಗಾ ತಥಾ ।'

ಎಂದು ಅಭಿಧಾನವಿರುವುದರಿಂದ ವಿಶಾಲಾ ಎಂದರೆ ಬದರೀ ಹಾಗೂ ಅಲ್ಲಿರುವ ನದೀ ಎಂದು ಎರಡೂ ಅರ್ಥಗಳಿವೆ. ||೧೬||

ಬದರಿಗೆ ಹೋದಮೇಲೆ ಪುತ್ರಾದಿಗಳಲ್ಲಿ ಸ್ನೇಹವನ್ನು ಬಿಟ್ಟು ದೃಢವೈರಾಗ್ಯ-ದಿಂದುಂಟಾದ ಭಕ್ತಿಯುತನಾಗಿ ಮಾಡಿದ ಉಪಾಸನೆಯನ್ನು, ಅಷ್ಟಾಂಗ ಯೋಗಾಚರಣೆಯನ್ನು ತಿಳಿಸುವರು -

**ತಸ್ಯಾ ವಿಶುದ್ಧಕರಣಃ ಶಿವವಾರ್ವಿಗಾಹ್ಯ**
**ಬದ್ಧಾಸನೋ ಜಿತಮರುನ್ಮನಸಾಽಹೃತಾಕ್ಷಃ ।**
**ಸ್ಥೂಲೇ ದಧಾರ ಭಗವತ್ಪ್ರತಿರೂಪ ಏತದ್**
**ಧ್ಯಾಯಂಸ್ತದವ್ಯವಹಿತೋ ವ್ಯಸೃಜನ್ ಸಮಾಧೌ ||೧೭||**

ತಸ್ಯಾಃ=ಆ ಭಾಗೀರಥೀನದಿಯ ಶಿವವಾಃ=ಮಂಗಲಕರವಾದ ನೀರನ್ನು ವಿಗಾಹ್ಯ= ಪ್ರವೇಶಿಸಿ (ಇದರಿಂದ ಸ್ನಾನ ಮುಂತಾದ ನಿಯಮಗಳನ್ನು ಹೇಳಿದಂತಾಯಿತು) ವಿಶುದ್ಧಕರಣಃ=ಶುದ್ಧಾಂತಃಕರಣನಾಗಿ (ಇದರಿಂದ ಶಮಾದಿ ನಿಯಮಗಳನ್ನು ಹೇಳಿದಂತಾಯಿತು) ಬದ್ಧಾಸನಃ=ಪದ್ಮಾಸನಾದಿಗಳನ್ನು ಹಾಕಿಕೊಂಡವನಾಗಿ (ಇದರಿಂದ ಆಸನಾದಿಗಳನ್ನು ಸ್ಪಷ್ಟವಾಗಿ ಹೇಳಿದಂತಾಯಿತು) ಜಿತಮರುತ್ ಜಿತ=ಗೆಲ್ಲಲ್ಪಟ್ಟ ಮರುತ್=ಪ್ರಾಣವುಳ್ಳವನಾಗಿ ಮನಸಾ=ಮನಸ್ಸಿನಿಂದ ಆಹೃತಾಕ್ಷಃ=ವಿಷಯಗಳಿಂದ ಇಂದ್ರಿಯಗಳನ್ನು ಹಿಂತೆಗೆದವನಾಗಿ ಸ್ಥೂಲೇ ಭಗವತ್ಪ್ರತಿರೂಪೇ=ಹದಿನಾಲ್ಕುಲೋಕಗಳೆಂಬ ಶ್ರೀಹರಿಯ ಪ್ರತಿಮೆಯಲ್ಲಿ ಏತತ್=ಮನಸ್ಸನ್ನು ದಧಾರ=ಧಾರಣೆ ಮಾಡಿದನು. (ಇದರಿಂದ ಧಾರಣಾವನ್ನು ಹೇಳಿದಂತಾಯಿತು.) ನಂತರ ಏತತ್=ತನ್ನ ಬಿಂಬರೂಪವನ್ನು ಧ್ಯಾಯನ್= ಧ್ಯಾನಮಾಡುತ್ತಾ ತತ್=ಸ್ಥೂಲರೂಪದಲ್ಲಿ ಮನೋಧಾರಣವನ್ನು ವ್ಯಸೃಜತ್=ಬಿಟ್ಟನು. ನಂತರ ಸಮಾಧೌ (ಸತಿ)=ಸಮಾಧಿಗೆ ಹೋದಮೇಲೆ ಅವ್ಯವಹಿತಃ=ಪರಮಾಚ್ಛಾದಿಕಾ ಅಪಸರಣ-ವಾದ್ದರಿಂದ ವ್ಯವಧಾನರಹಿತನಾಗಿ ಶ್ರೀಹರಿಯನ್ನು ಕಾಣುತ್ತಾ ತತ್=ಶರೀರಾಭಿಮಾನಾದಿ-ಗಳನ್ನು ವ್ಯಸೃಜತ್=ತೊರೆದನು. ಅಸಂಪ್ರಜ್ಞಾತಸಮಾಧಿಯನ್ನು ಪಡೆದನು ಎಂದರ್ಥ.

**ಅಷ್ಟಾಂಗ ಯೋಗಗಳು -**

೧. ಯಮ=ಅಹಿಂಸಾ, ಅಸ್ತೇಯ, ಸತ್ಯ, ಬ್ರಹ್ಮಚರ್ಯ, ಅಪರಿಗ್ರಹ.

೨. ನಿಯಮ=ಶೌಚ, ಸಂತೋಷ, ತಪಸ್ಸು ಸ್ವಾಧ್ಯಾಯ, ಈಶ್ವರಪ್ರಣಿಧಾನ, ಐದು ನಿಯಮ (ವಿಗಾಹ್ಯ)

೩. ಆಸನ=ಪದ್ಮಾಸನ, ವೀರಾಸನ, ಮಯೂರಾಸನ ಮುಂತಾದ ಅಂಗವಿನ್ಯಾಸ (ಬದ್ಧಾಸನಃ)

೪. ಪ್ರಾಣಾಯಾಮ=ಪ್ರಾಣವಾಯು ನಿರೋಧ (ಜಿತಮರುತ್)

೫. ಪ್ರತ್ಯಾಹಾರ=ಮನಸ್ಸು ಮತ್ತು ಇಂದ್ರಿಯಗಳನ್ನು ವಿಷಯಗಳಿಂದ ಪಡೆದು ನಿಲ್ಲಿಸುವದು.
೬. ಧ್ಯಾನ=ಪರಮಾತ್ಮನನ್ನು ಯಾವಾಗಲೂ ಮನಸ್ಸಿನಲ್ಲಿ ಚಿಂತಿಸುವದು (ಧ್ಯಾಯನ್)
೭. ಧಾರಣಾ=ಪರಮಾತ್ಮನಲ್ಲಿ ಮನಸ್ಸನ್ನು ದೃಢವಾಗಿ ನಿಲ್ಲಿಸುವದು (ಸ್ಥೂಲೇ ದಧಾರ)
೮. ಸಮಾಧಿ=ಒಂದೇ ವಸ್ತುವಿನ ನಿರಂತರ ಧ್ಯಾನ (ಸಮಾಧೌ)॥೧೭॥

**ಭಕ್ತಿಂ ಹರೌ ಭಗವತಿ ಪ್ರವಹನ್ನಜಸ್ರ-**
**ಮಾನಂದಬಾಷ್ಪಕಲಯಾ ಮುಹುರರ್ದ್ಯಮಾನಃ ।**
**ವಿಕ್ಲಿದ್ಯಮಾನಹೃದಯಃ ಪುಲಕಾಚಿತಾಂಗೋ**
**ನಾತ್ಮಾನಮಸ್ಮರದಸಾವಿತಿ ಮುಕ್ತಲಿಂಗಃ ॥೧೮॥**

ಭಗವತಿ=ಷಡ್ಗುಣೈಶ್ವರ್ಯಸಂಪನ್ನನಾದ ಹರೌ=ಶ್ರೀಹರಿಯಲ್ಲಿ ಅಜಸ್ರಂ=ಬಹಳವಾಗಿ ಭಕ್ತಿಂ=ಪ್ರೇಮಪ್ರವಾಹವನ್ನು ಪ್ರವಹನ್=ಹರಿಸುತ್ತ ಆನಂದಬಾಷ್ಪಕಲಯಾ=ಸಂತೋಷದ ಕಣ್ಣೀರ ಹನಿಗಳಿಂದ ಮುಹುಃ=ಮತ್ತೆ ಮತ್ತೆ ಅರ್ದ್ಯಮಾನಃ=ಮುಗುಳುನಗುತ್ತಾ ವಿಕ್ಲಿದ್ಯಮಾನಹೃದಯಃ=ಮನಸು ಕರಗಿದವನಾಗಿ ಪುಲಕಾಚಿತಾಂಗಃ=ರೋಮಾಂಚನಗಳಿಂದ ವ್ಯಾಪ್ತವಾದ ದೇಹವುಳ್ಳವನಾಗಿ ಮುಕ್ತಲಿಂಗಃ=ಶಿಥಿಲವಾದ ಲಿಂಗಶರೀರವುಳ್ಳವನಾಗಿ (ಶರೀರಾಭಿಮಾನವಿಲ್ಲದುದರಿಂದ ಜೀವನ್ಮುಕ್ತನಾದವನಾಗಿ) ಆತ್ಮಾನಂ=ತನ್ನನ್ನು ಅಸೌ ಇತಿ=ಧ್ರುವನೆಂದು ನ ಅಸ್ಮರತ್=ತಿಳಿಯಲಿಲ್ಲ. ಭಗವಂತನನ್ನೇ ಸ್ಮರಿಸುತ್ತಿದ್ದನು. ॥೧೮॥

ಈ ರೀತಿ ಭಗವದ್ಧ್ಯಾನದಿಂದ ಶ್ರೀಹರಿಯ ಸ್ಥಾನಕ್ಕೆ ಹೋಗುವ ಸಮಯ ಬಂದಿತು. ಹಾಗಾಗಿ ಶ್ರೀಹರಿ ಕಳಿಸಿದ ವಿಮಾನವನ್ನು ನೋಡಿದನೆಂದು ಹೇಳುವರು -

**ಸ ದದರ್ಶ ವಿಮಾನಾಗ್ರ್ಯಂ ನಭಸೋಽವತರದ್ಭುವಃ ।**
**ವಿಭ್ರಾಜಯದ್ದಶ ದಿಶೋ ರಾಕಾಪತಿಮಿವೋದಿತಮ್ ॥೧೯॥**

ಸಃ=ಧ್ರುವನು ನಭಸಃ=ಆಕಾಶದಿಂದ ಭುವಃ=ಭೂಮಿಗೆ ಅವತರತ್=ಇಳಿಯುತ್ತಿರುವ, ಉದಿತಂ=ಉದಯಿಸಿದ ರಾಕಾಪತಿಂ ಇವ=ಪೂರ್ಣಚಂದ್ರ(ಹುಣ್ಣಿಮೆಚಂದ್ರ)ನಂತೆ ದಶ ದಿಶಃ=ಹತ್ತುದಿಕ್ಕುಗಳನ್ನು ವಿಭ್ರಾಜಯತ್=ಪ್ರಕಾಶಗೊಳಿಸುವ ವಿಮಾನಾಗ್ರ್ಯಂ=ಶ್ರೇಷ್ಠ ವಿಮಾನವನ್ನು ದದರ್ಶ=ನೋಡಿದನು. ॥೧೯॥

ಗಿಡದಿಂದ ಬಿದ್ದ ಎಲೆಯಂತೆ, ಆಕಾಶದಿಂದ ಬಿದ್ದ ನಕ್ಷತ್ರದಂತೆ ಇರುವ (ಅನಾಥವಾದ, ಯಾವ ವ್ಯಕ್ತಿಯೂ ಇಲ್ಲದ) ವಿಮಾನವನ್ನು ನೋಡಲಿಲ್ಲ. ಕಿಂತು ಅದರೊಳಗೆ ಇದ್ದ ವ್ಯಕ್ತಿಗಳನ್ನೂ ನೋಡಿದನು ಎಂದು ತಿಳಿಸುವರು. ಅರ್ಥಾತ್ ವಿಮಾನವನ್ನು ತಂದವರನ್ನು ವರ್ಣಿಸುವರು -

**ತತ್ರಾನು ದೇವಪ್ರವರೌ ಚತುರ್ಭುಜೌ**
**ಶ್ಯಾಮೌ ಕಿಶೋರಾವರುಣಾಂಬುಜೇಕ್ಷಣೌ ।**
**ಸ್ಥಿತಾವವಷ್ಟಭ್ಯ ಗದಾಂ ಸುವಾಸಸೌ**
**ಕಿರೀಟಹಾರಾಂಗದಚಾರುಕುಂಡಲೌ ॥೨೦॥**

ಅನು=ವಿಮಾನವನ್ನು ನೋಡಿದ ನಂತರ ತತ್ರ=ವಿಮಾನದಲ್ಲಿ ಚತುರ್ಭುಜೌ=ನಾಲ್ಕು ಕೈಗಳುಳ್ಳ, ಶ್ಯಾಮೌ=ಇಂದ್ರನೀಲವರ್ಣದವರಾದ, ಕಿಶೋರೌ=ಯುವಕರಾದ, ಅರುಣಾಂಬುಜೇಕ್ಷಣೌ=ಕೆಂಪುಕಮಲದಂತಿರುವ ಕಣ್ಣುಗಳುಳ್ಳ, ಸುವಾಸಸೌ=ಒಳ್ಳೆಯ ವಸ್ತ್ರಗಳನ್ನು ಧರಿಸಿದ, ಕಿರೀಟಹಾರಾಂಗದಚಾರುಕುಂಡಲೌ=ಕಿರೀಟ ಹಾರ ಕಡಗ ಹಾಗೂ ಸುಂದರವಾದ ಕುಂಡಲಗಳನ್ನು ಧರಿಸಿದ, ಗದಾಂ ಅವಷ್ಟಭ್ಯ ಸ್ಥಿತೌ=ಗದೆಯನ್ನು ಅವಲಂಬಿಸಿ ನಿಂತಿರುವ ದೇವಪ್ರವರೌ=ದೇವತಾಶ್ರೇಷ್ಠರನ್ನು ದದರ್ಶ=ನೋಡಿದನು. ॥೨೦॥

ಭಗವಂತನ ಜ್ಞಾನವಾದುದರಿಂದ, ಒಮ್ಮೆಲೇ ವಿಮಾನಪುರುಷದರ್ಶನದಿಂದಾಗಿ ಧ್ರುವನಿಗೆ ಭ್ರಮ ಬರಲಿಲ್ಲವೆಂಬ ಅಭಿಪ್ರಾಯದಿಂದ ಅವರ ಸತ್ಕಾರದ ರೀತಿಯನ್ನು ಹೇಳುವರು -

**ವಿಜ್ಞಾಯ ತಾವುತ್ತಮಭಾವಕಿಂಕರಾ-**
**ವಭ್ಯುತ್ಥಿತಃ ಸಾಧ್ವಸಸನ್ನವಿಕ್ರಮಃ ।**
**ನನಾಮ ನಾಮಾನಿ ಗೃಣನ್ ಮಧುದ್ವಿಷಃ**
**ಪಾರ್ಷತ್ಪ್ರಧಾನಾವಿತಿ ಸಂಹತಾಂಜಲಿಃ ॥೨೧॥**

ತೌ=ಅವರನ್ನು ಉತ್ತಮಭಾವಕಿಂಕರೌ=ಶ್ರೇಷ್ಠವಾದ ಲೀಲೆಕ್ರಿಯೆಗಳುಳ್ಳ ಶ್ರೀಹರಿಯ ದೂತರು (ಉತ್ತಮಗಾಯ ಎಂಬ ಪಾಠದಲ್ಲಿ ಉತ್ತಮರಾದ ಬ್ರಹ್ಮಾದಿಗಳಿಂದ ಸ್ತುತಿಸಲ್ಪಡುವ ಎಂದರ್ಥ) ಎಂಬುದಾಗಿ ವಿಜ್ಞಾಯ=ತಿಳಿದು ಅಭ್ಯುತ್ಥಿತಃ=ಎದ್ದವನಾಗಿ ಸಾಧ್ವಸಸನ್ನವಿಕ್ರಮಃ= ಸಂಭ್ರಮದಿಂದ ನಷ್ಟವಾದ ಪೂಜಾಸಾಧನಪ್ರವೃತ್ತಿವುಳ್ಳವನಾಗಿ ಮಧುದ್ವಿಷಃ=ಶ್ರೀಹರಿಯ ನಾಮಾನಿ=ನಾರಾಯಣ ಗೋಪಾಲ ಗೋವಿಂದ ಮುಂತಾದ ನಾಮಗಳನ್ನು ಗೃಣನ್= ಉಚ್ಚರಿಸುತ್ತಾ ಪಾರ್ಷತ್ಪ್ರಧಾನೌ ಇತಿ=ಶ್ರೀಹರಿಯ ದ್ವಾರಪಾಲಕರೆಂದು ಸಂಹತಾಂಜಲಿಃ= ಕೈಜೋಡಿಸಿ ನನಾಮ=ನಮಸ್ಕರಿಸಿದನು. ॥೨೧॥

**ತಂ ಕೃಷ್ಣಪಾದಾಭಿನಿವಿಷ್ಟಚೇತಸಂ ಬದ್ಧಾಂಜಲಿಂ ಪ್ರಶ್ರಯನಮ್ರಕಂಧರಮ್ ।**
**ಸುನಂದನಂದಾವುಪಲಭ್ಯ ಸಸ್ಮಿತಂ ಪ್ರೀತ್ಯೋಚತುಃ ಪುಷ್ಕರನಾಭಸಂಮತೌ ॥**

ಕೃಷ್ಣಪಾದಾಭಿನಿವಿಷ್ಟಚೇತಸಂ=ಶ್ರೀಹರಿಯ ಪಾದಗಳಲ್ಲಿ ಆಸಕ್ತವಾದ ಮನಸ್ಸುಳ್ಳ ಬದ್ಧಾಂಜಲಿಂ=ಕೈಜೋಡಿಸಿದ ಪ್ರಶ್ರಯನಮ್ರಕಂಧರಂ=ವಿನಯದಿಂದ ಕುತ್ತಿಗೆಯನ್ನು ಬಾಗಿಸಿದ ತಂ=ಧ್ರುವನನ್ನು ಉಪಲಭ್ಯ=ನೋಡಿ (ಉಪಸೃತ್ಯ ಎಂಬ ಪಾಠದಲ್ಲಿ ಸಮೀಪಿಸಿ ಎಂದರ್ಥ) ಪುಷ್ಕರನಾಭಸಮ್ಮತೌ=ಶ್ರೀಹರಿಗೆ ಪ್ರಿಯರಾದ ಸುನಂದನಂದೌ=ಸುನಂದ ನಂದರು ಸಸ್ಮಿತಂ=ಮಂದಹಾಸದಿಂದ ಸಹಿತವಾಗಿ ಪ್ರೀತ್ಯಾ=ಪ್ರೀತಿಯಿಂದ ಊಚತುಃ=ಮಾತನಾಡಿದರು.

(ಸಮ್ಮಿತಂ ಎಂಬ ಪಾಠದಲ್ಲಿ ಭಗವದ್ಭಕ್ತನೆಂದು ತಿಳಿಯಲ್ಪಟ್ಟ ಧ್ರುವನನ್ನು ಎಂದು ಅನ್ವಯ ಮಾಡಿಕೊಳ್ಳಬೇಕು.)।।೨೨।।

**ಸುನಂದನಂದಾವೂಚತುಃ -**

**ಭೋ ಭೋ ಭದ್ರ ಸುಭದ್ರಂ ತೇ ವಚೋ ನೋಽವಹಿತಃ ಶೃಣು ।**
**ಯಃ ಪಂಚವರ್ಷಸ್ತಪಸಾ ಭವಾನ್ ದೇವಮತೀತೃಪತ್ ।।೨೩।।**

ಭೋ ಭೋ ಭದ್ರ=ಎಲೋ ಮಂಗಲಕರನೇ ! ತೇ=ನಿನಗೆ ಸುಭದ್ರಂ=ಅತ್ಯಂತ ಮಂಗಲವು ಆಗಲಿ. ನಃ ವಚಃ=ನಮ್ಮ ಮಾತನ್ನು ಅವಹಿತಃ ಶೃಣು=ಸಮಾಧಾನದಿಂದ ಕೇಳು. ಯಃ=ಯಾವ ಭವಾನ್=ನೀನು ಪಂಚವರ್ಷಃ=ಐದುವರ್ಷದವನಾಗಿ ತಪಸಾ=ತಪಸ್ಸಿನಿಂದ ದೇವಂ=ಶ್ರೀಹರಿಯನ್ನು ಅತೀತೃಪತ್=ಅತ್ಯಂತ ತೃಪ್ತಿಪಡಿಸಿರುವಿಯೋ, (ಅನ್ವಯ ಮುಂದುವರೆಯುತ್ತದೆ)।।೨೩।।

**ತಸ್ಯಾಖಿಲಜಗದ್ಧಾತುರ್ವಿದ್ಧಿ ದೇವಸ್ಯ ಶಾರ್ಙ್ಗಿಣಃ ।**
**ಪಾರ್ಷದಾವಿಹ ಸಂಪ್ರಾಪ್ತೌ ನೇತುಂ ತ್ವಾಂ ಭಗವತ್ಪದಮ್ ।।೨೪।।**

ತಸ್ಯ=ಅಂತಹ, ಅಖಿಲಜಗದ್ಧಾತುಃ=ಎಲ್ಲ ಪ್ರಪಂಚವನ್ನು ಧಾರಣ ಮಾಡುವ, ಶಾರ್ಙ್ಗಿಣಃ=ಶಾಂರ್ಗಧನುಸ್ಸನ್ನು ಧರಿಸಿದ, ದೇವಸ್ಯ=ಶ್ರೀಹರಿಯ ಪಾರ್ಷದೌ= ದ್ವಾರಪಾಲಕರಾದ ನಾವು ತ್ವಾಂ=ನಿನ್ನನ್ನು ಭಗವತ್ಪದಂ=ಶ್ರೀಹರಿಯ ಸ್ಥಾನಕ್ಕೆ ನೇತುಂ= ಕರೆದೊಯ್ಯಲು ಇಹ=ಇಲ್ಲಿಗೆ ಸಂಪ್ರಾಪ್ತೌ=ಬಂದಿರುವೆವು. ।।೨೪।।

**ಸುದುರ್ಜಯಂ ವಿಷ್ಣುಪದಂ ಜಿತಂ ತ್ವಯಾ**
**ಯತ್ಸೂರಯೋಽಪ್ರಾಪ್ಯ ವಿಚಕ್ಷತೇ ಪರಮ್ ।**
**ಆತಿಷ್ಠ ತಚ್ಚಂದ್ರದಿವಾಕರಾದಯೋ**
**ಗ್ರಹರ್ಕ್ಷತಾರಾಃ ಪರಿಯಂತಿ ದಕ್ಷಿಣಮ್ ।।೨೫।।**

ಯತ್=ಯಾವ ಸ್ಥಾನವನ್ನು ಸೂರಯಃ=ಉತ್ಕ್ರಾಂತರಾದ ಜ್ಞಾನಿಗಳೂ ಸಹ ಅಪ್ರಾಪ್ಯ=ಹೊಂದದಲೇ ಪರಂ=ಕೇವಲ ವಿಚಕ್ಷತೇ=ದೂರದಿಂದಲೇ ನೋಡುವರೋ, ಯತ್=ಯಾವ ಸ್ಥಾನವನ್ನು ಚಂದ್ರದಿವಾಕರಾದಯಃ=ಚಂದ್ರ ಸೂರ್ಯ ಮೊದಲಾದವರು ಗ್ರಹರ್ಕ್ಷತಾರಾಃ ಗ್ರಹಾಃ=ಗ್ರಹಗಳು, ಋಕ್ಷಾಣಿ=ಅಶ್ವಿನೀ ಮೊದಲಾದ ನಕ್ಷತ್ರಗಳು, ತಾರಾಃ=ಇತರ ನಕ್ಷತ್ರಗಳು ದಕ್ಷಿಣಂ ಪರಿಯಂತಿ=ಪ್ರದಕ್ಷಿಣಾಕಾರವಾಗಿ ಆಶ್ರಯಿಸಿರುವವೋ, ತತ್=ಅಂತಹ ಸುದುರ್ಜಯಂ=ಅತ್ಯಂತ ಕಷ್ಟಸಾಧ್ಯವಾದ ವಿಷ್ಣುಪದಂ=ಶಿಂಶುಮಾರರೂಪಿ ಶ್ರೀಹರಿಯಿಂದ ಅಧಿಷ್ಠಿತವಾದ ಸ್ಥಾನವು ತ್ವಯಾ=ನಿನ್ನಿಂದ ಜಿತಂ=ಗೆಲ್ಲಲ್ಪಟ್ಟಿದೆ.

**ಭಾಗವತ ತಾತ್ಪರ್ಯ :-**

ಈ ಶ್ಲೋಕದಲ್ಲಿ ಉತ್ಕ್ರಾಂತರಾದ ಜ್ಞಾನಿಗಳಿಗೆ ಶಿಂಶುಮಾರ ಮತ್ತು ಧ್ರುವನು ಇರುವ ಸ್ಥಾನದ ಪ್ರಾಪ್ತಿ ಇಲ್ಲವೆಂದು ಹೇಳುವದು ಸರಿಯಾಗುವದಿಲ್ಲ. ಏಕೆಂದರೆ - ''ಪ್ರಯಾತಿ ಚಕ್ರಂ ನೃಪ ಶಿಂಶುಮಾರಂ'' ಎಂದು ಮತ್ತು ''ಸೋಮಂ ವೈಶ್ವಾನರಂ ಚೇಂದ್ರಂ ಧ್ರುವಂ'' ಎಂಬುದಾಗಿ ಶಿಂಶುಮಾರ ಮತ್ತು ಧ್ರುವರನ್ನು ಜ್ಞಾನಿಗಳು ಹೊಂದುವರು ಎಂದು ಹೇಳಿದೆ. ಆ ಕಾರಣ ಇಲ್ಲಿ ವಿವಕ್ಷಿತವಾದ ಅಭಿಪ್ರಾಯವನ್ನು ಪ್ರಮಾಣದಿಂದಲೇ ತಿಳಿಸುವರು -

**ಶಿಂಶುಮಾರೋ ಧ್ರುವಶ್ಚೈವ ಸಂಸ್ಥಿತೌ ಯತ್ಪುರೇ ಸದಾ ।**
**ತತ್ ಪಶ್ಯಂತಿ ನ ಯಾಂತ್ಯನ್ಯೇ ಲೋಕಂ ಯಾಂತಿ ಸುರಾನ್ವಿನಾ ॥ ಇತಿ ಚ ॥**

ಶಿಂಶುಮಾರಲೋಕ ಬೇರೆ, ಅದರಲ್ಲಿರುವ ಶಿಂಶುಮಾರ ಹಾಗೂ ಧ್ರುವರು ಸರ್ವದಾ ವಾಸಿಸುವ ಪುರ ಬೇರೆ. ಅವರು ವಾಸಿಸುವ ಪುರಕ್ಕೆ ದೇವತೆಗಳನ್ನು ಬಿಟ್ಟು ಉಳಿದ ಜ್ಞಾನಿಗಳು ಹೋಗುವದಿಲ್ಲ. ದೇವತೆಗಳು ಮಾತ್ರ ಪಟ್ಟಣಕ್ಕೆ ಹೋಗುವರು. ಶಿಂಶುಮಾರಲೋಕಕ್ಕೆ ಎಲ್ಲ ಜ್ಞಾನಿಗಳು ಹೋಗುವರು.

ಆ ಕಾರಣ ''ಪ್ರಯಾತಿ ಚಕ್ರಂ ನೃಪ ಶಿಂಶುಮಾರಂ'' ''ವೈಶ್ವಾನರಂ ಚೇಂದ್ರಂ ಧ್ರುವಂ'' ಎಂಬ ವಾಕ್ಯಗಳು ಶಿಂಶುಮಾರಲೋಕಕ್ಕೆ ಜ್ಞಾನಿಗಳು ಹೋಗುವರು ಎಂದು ಹೇಳುತ್ತಿವೆ. ಪ್ರಕೃತದಲ್ಲಿ ಶಿಂಶುಮಾರ ಹಾಗೂ ಧ್ರುವರು ವಾಸಿಸುವ ಪುರಕ್ಕೆ ದೇವತೆಗಳ ಹೊರತು ಮಿಕ್ಕ ಜ್ಞಾನಿಗಳು ಹೋಗುವದಿಲ್ಲ ಕಿಂತು ದೂರದಿಂದಲೇ ನೋಡುವರು ಎಂದು ಹೇಳಿದೆ. ಆದ್ದರಿಂದ ಪರಸ್ಪರ ವಿರೋಧವಿಲ್ಲ ಎಂದು ಭಾವ. ॥೨೫॥

**ಅನಾಸ್ಥಿತಂ ತೇ ಪಿತೃಭಿರನ್ಯೈರಪ್ಯಂಗ ಕರ್ಹಿಚಿತ್ ।**
**ಆತಿಷ್ಠ ಜಗತಾಂ ವಂದ್ಯಂ ತದ್ವಿಷ್ಣೋಃ ಪರಮಂ ಪದಮ್ ॥೨೬॥**

ತೇ=ನಿನ್ನ ಪಿತೃಭಿಃ=ತಾತಮುತ್ತಾತರಿಂದಲೂ ಅನ್ಯೈಃ ಅಪಿ=ಬೇರೆ ಯಾರಿಂದಲೂ ಕರ್ಹಿಚಿತ್=ಯಾವಾಗಲೂ ಅನಾಸ್ಥಿತಂ=ವಾಸಿಸದಿರುವ, ಜಗತಾಂ ವಂದ್ಯಂ=ಜಗತ್ತಿಗೆ ಮಾನ್ಯವಾದ, ವಿಷ್ಣೋಃ=ಶಿಂಶುಮಾರನ ಪರಮಂ ಪದಂ=ಉತ್ತಮಸ್ಥಾನವನ್ನು ಆತಿಷ್ಠ=ಅಲಂಕರಿಸು. ॥೨೬॥

**ಏತದ್ ವಿಮಾನಪ್ರವರಮುತ್ತಮಶ್ಲೋಕಮೌಲಿನಾ ।**
**ಉಪಸ್ಥಾಪಿತಮಾಯುಷ್ಮನ್ನಧಿರೋಢುಂ ತ್ವಮರ್ಹಸಿ ॥೨೭॥**

ಹೇ ಆಯುಷ್ಮನ್=ಧ್ರುವನೇ ! ಏತತ್ ವಿಮಾನಪ್ರವರಂ=ಈ ಶ್ರೇಷ್ಠ ವಿಮಾನವು ಉತ್ತಮಶ್ಲೋಕಮೌಲಿನಾ=ಶ್ರೇಷ್ಠಕೀರ್ತಿಯುಳ್ಳ ಬ್ರಹ್ಮಾದಿಗಳಿಗಿಂತಲೂ ಶ್ರೇಷ್ಠನಾದ ಶಿಂಶುಮಾರರೂಪಿ ಶ್ರೀಹರಿಯಿಂದ ಉಪಸ್ಥಾಪಿತಂ=ಕಳುಹಿಸಲ್ಪಟ್ಟಿದೆ. ಏತತ್=ಇಂತಹ ಶ್ರೇಷ್ಠವಿಮಾನವನ್ನು ಅಧಿರೋಢುಂ=ಏರಲು ತ್ವಂ=ನೀನು ಅರ್ಹಸಿ=ಯೋಗ್ಯನಾಗಿರುವಿ ಎಂದು ಹೇಳಿದರು. ॥೨೭॥

**ಮೈತ್ರೇಯ ಉವಾಚ -**

**ನಿಶಮ್ಯ ವೈಕುಂಠನಿಯೋಜ್ಯಮುಖ್ಯಯೋ-**
**ರ್ಮಧುಚ್ಯುತಾಂ ವಾಚಮುರುಕ್ರಮಪ್ರಿಯಃ ।**
**ಕೃತಾಭಿಷೇಕಃ ಕೃತನಿತ್ಯಮಂಗಲೋ**
**ಮುನೀನ್ ಪ್ರಣಮ್ಯಾಶಿಷಮಭ್ಯವಾದಯತ್ ॥೨೮॥**

ಉರುಕ್ರಮಪ್ರಿಯಃ=ಶ್ರೀಹರಿಗೆ ಪ್ರಿಯನಾದ ಧ್ರುವನು ವೈಕುಂಠನಿಯೋಜ್ಯ-ಮುಖ್ಯಯೋಃ=ಶ್ರೀಹರಿಯ (ದ್ವಾರಪಾಲಕರಲ್ಲಿ) ಭೃತ್ಯರಲ್ಲಿ ಪ್ರಮುಖರಾದ ನಂದ-ಸುನಂದರ ಮಧುಚ್ಯುತಾಂ=ಅಮೃತವನ್ನು ಹರಿಸುವ ವಾಚಂ=ಮಾತನ್ನು ನಿಶಮ್ಯ=ಕೇಳಿ ಕೃತಾಭಿಷೇಕಃ=ಸ್ನಾನ ಮಾಡಿದವನಾಗಿ ಕೃತನಿತ್ಯಮಂಗಲಃ=ನಿತ್ಯಕರ್ಮಗಳಾದ ಸಂಧ್ಯಾವಂದನಾದಿಗಳನ್ನು ಮಾಡಿ, ತಿಲಕಾದಿಗಳನ್ನು ಧಾರಣ ಮಾಡಿ ಮುನೀನ್=ಋಷಿಗಳನ್ನು ಪ್ರಣಮ್ಯ=ನಮಸ್ಕರಿಸಿ ಆಶಿಷಂ=ಆಶೀರ್ವಚನಗಳನ್ನು ಅಭ್ಯವಾದಯತ್=ಅವರಿಂದ ಹೇಳಿಸಿದನು. (ಆಶೀರ್ವಾದವನ್ನು ಪಡೆದನು ಎಂದರ್ಥ.) ॥೨೮॥

**ಪರೀತ್ಯಾಭ್ಯರ್ಚ್ಯ ಧಿಷ್ಣ್ಯಾಗ್ರ್ಯಂ ಪಾರ್ಷದಾವಭಿವಂದ್ಯ ಚ ।**
**ಇಯೇಷ ತದಧಿಷ್ಠಾತುಂ ಬಿಭ್ರದ್ರೂಪಂ ಹಿರಣ್ಮಯಮ್ ॥೨೯॥**

ಧಿಷ್ಣ್ಯಾಗ್ರ್ಯಂ=ಶ್ರೇಷ್ಠವಿಮಾನವನ್ನು ಪರೀತ್ಯ=ಪ್ರದಕ್ಷಿಣೆ ಮಾಡಿ ಅಭ್ಯರ್ಚ್ಯ=ಪೂಜಿಸಿ ಪಾರ್ಷದೌ=ನಂದ-ಸುನಂದರನ್ನು ಅಭಿವಂದ್ಯ=ನಮಸ್ಕರಿಸಿ ಹಿರಣ್ಮಯಂ ರೂಪಂ

ಜ್ವಲತ್=ಜ್ಯೋತಿರ್ಮಯವಾದ ರೂಪವನ್ನು ಧರಿಸಿದವನಾಗಿ ತತ್=ಆ ವಿಮಾನವನ್ನು ಅಧಿಷ್ಠಾತುಂ=ಏರಲು ಇಯೇಷ=ಇಚ್ಛಿಸಿದನು. ।।೨೯।।

**ತದಾ ದುಂದುಭಯೋ ನೇದುರ್ಮೃದಂಗಪಣವಾದಯಃ ।**
**ಗಂಧರ್ವಮುಖ್ಯಾಃ ಪ್ರಜಗುಃ ಪೇತುಃ ಕುಸುಮವೃಷ್ಟಯಃ ।। ೩೦ ।।**

ತದಾ=ಯಾವಾಗ ವಿಮಾನವನ್ನೇರಲು ಇಚ್ಛಿಸಿದನೋ ಆಗ ದುಂದುಭಯಃ=ನಗಾರಿಗಳು ಮೃದಂಗಪಣವಾದಯಃ=ಮೃದಂಗ ಪಣವ ಮುಂತಾದ ವಾದ್ಯಗಳು ನೇದುಃ=ಧ್ವನಿ ಮಾಡಿದವು. ಗಂಧರ್ವಮುಖ್ಯಾಃ=ಗಂಧರ್ವರೇ ಮೊದಲಾದವರು ಪ್ರಜಗುಃ=ಗಾನ ಮಾಡಿದರು. ಕುಸುಮವೃಷ್ಟಯಃ ಪೇತುಃ=ಹೂವಿನ ಮಳೆಗಳು ಬಿದ್ದವು. ।।೩೦।।

**ಸ ಚ ಸ್ವರ್ಲೋಕಮಾರೋಕ್ಷ್ಯನ್ ಸುನೀತಿಂ ಜನನೀಂ ಧ್ರುವಃ ।**
**ಅನ್ವಸ್ಮರದಹಂ ಹಿತ್ವಾ ನೈನಾಂ ಯಾಸ್ಯೇ ತ್ರಿವಿಷ್ಟಪಮ್ ।।೩೧।।**

ಸ ಚ ಧ್ರುವಃ=ಆ ಧ್ರುವನಾದರೂ ಸ್ವರ್ಲೋಕಂ=ಸ್ವರ್ಗವನ್ನು ಆರೋಕ್ಷ್ಯನ್=ಹತ್ತುವವನಾಗಿ ಅಹಂ=ನಾನು ಏನಾಂ=ತಾಯಿಯನ್ನು ಹಿತ್ವಾ=ಬಿಟ್ಟು ತ್ರಿವಿಷ್ಟಪಂ=ಸ್ವರ್ಗವನ್ನು ಕುರಿತು ನ ಯಾಸ್ಯೇ=ಹೋಗಲಾರೆ ಎಂಬುದಾಗಿ ಜನನೀಂ ಸುನೀತಿಂ=ತಾಯಿಯಾದ ಸುನೀತಿಯನ್ನು ಅನ್ವಸ್ಮರತ್=ಸ್ಮರಣೆ ಮಾಡಿದನು. ।।೩೧।।

**ಇತಿ ವ್ಯವಸಿತಂ ತಸ್ಯ ವ್ಯವಸೀಯ ಸುರೋತ್ತಮೌ ।**
**ದರ್ಶಯಾಮಾಸತುರ್ದೇವೀಂ ದೇವಯಾನೇನ ಚಾಗ್ರಗಾಮ್ ।।೩೨।।**

ಸುರೋತ್ತಮೌ=ನಂದ-ಸುನಂದರು ತಸ್ಯ=ಧ್ರುವನ ಇತಿ=ಈ ರೀತಿಯಾದ ವ್ಯವಸಿತಂ=ಅಭಿಪ್ರಾಯವನ್ನು ವ್ಯವಸೀಯ=ತಿಳಿದು ದೇವಯಾನೇನ=ದೇವತೆಗಳ ವಿಮಾನದಿಂದ ಅಗ್ರಗಾಂ=ಮುಂದೆ ಹೋಗುತ್ತಿರುವ ದೇವೀಂ=ಸುನೀತಿಯನ್ನು ದರ್ಶಯಾಮಾಸತುಃ=ತೋರಿಸಿದರು.

ಇದರಿಂದ ನಾನೊಬ್ಬನೇ ಸತ್ಯಸಂಕಲ್ಪನಲ್ಲ ನನ್ನ ಭಕ್ತನೂ ಸಹ ಎಂಬ ಅಭಿಪ್ರಾಯದಿಂದ ಶ್ರೀಹರಿಯಿಂದ ಪ್ರೇರಿತನಾದ ಧ್ರುವನು ''ಇಂತಹ ಮಗನನ್ನು ಪಡೆದ, ಅವನಿಗಾಗಿ ವಿಷಯಭೋಗಗಳನ್ನು ತೊರೆದ ಸುನೀತಿಗೆ ಸ್ವರ್ಗಲೋಕವಾಗಲಿಲ್ಲ, ಅವಳನ್ನು ಇವನೂ ಸ್ಮರಿಸಲಿಲ್ಲ'' ಎಂಬ ಲೋಕಾಪವಾದವನ್ನು ತಿಳಿದವನಂತೆ ಯಾವಾಗ ತನ್ನ ತಾಯಿಯನ್ನು ಸ್ಮರಿಸಿದನೋ ಆಗ ಶ್ರೀಹರಿಯ ಸಂಕಲ್ಪವನ್ನರಿತ ಪಾರ್ಷದರು ಮುಂದೆ ಹೋಗುವ ತಾಯಿಯನ್ನು ತೋರಿಸಿದರು. ಇದರಿಂದಾಗಿ ಶ್ರೀಹರಿಯ ಅನುಗ್ರಹದಿಂದ ಧ್ರುವನಿಗೂ ಸತ್ಯಸಂಕಲ್ಪತೆ ಇದೆ ಎಂದು ಜಗತ್ತಿಗೂ ತಿಳಿಸಿದಂತಾಯಿತು. ।।೩೨।।

**ತತ್ರ ತತ್ರ ಪ್ರಶಂಸದ್ಭಿಃ ಪಥಿ ವೈಮಾನಿಕೈಃ ಸುರೈಃ ।**
**ಅವಕೀರ್ಯಮಾಣೋ ದದೃಶೇ ಕುಸುಮೈಃ ಕ್ರಮಶೋ ಗ್ರಹಾನ್ ॥೩೩ ॥**

ಪಥಿ=ಮಾರ್ಗದಲ್ಲಿ ತತ್ರ ತತ್ರ=ಅಲ್ಲಲ್ಲಿ ಪ್ರಶಂಸದ್ಭಿಃ=ಸ್ತೋತ್ರ ಮಾಡುವ ವೈಮಾನಿಕೈಃ ಸುರೈಃ=ವಿಮಾನದಲ್ಲಿರುವ ದೇವತೆಗಳಿಂದ ಕುಸುಮೈಃ ಅವಕೀರ್ಯಮಾಣಃ=ಹೂಗಳಿಂದ ಮುಚ್ಚಲ್ಪಡುವವನಾಗಿ ಕ್ರಮಶಃ=ಕ್ರಮವಾಗಿ ಗ್ರಹಾನ್=ಸೂರ್ಯ,ಚಂದ್ರರನ್ನು ದದೃಶೇ=ನೋಡಿದನು. ॥೩೩॥

**ತ್ರಿಲೋಕೀಂ ದೇವಯಾನೇನ ಸೋಽತಿವ್ರಜ್ಯ ಮುನೀನಪಿ ।**
**ಪುರಸ್ತಾದ್ಯದ್ ಧ್ರುವಗತಿರ್ವಿಷ್ಣೋಃ ಪದಮಥಾಭ್ಯಗಾತ್ ॥೩೪॥**

ಸಃ=ಧ್ರುವನು ಅಥ=ಗ್ರಹಗಳ ದರ್ಶನಾನಂತರ ದೇವಯಾನೇನ=ದೇವತಾ-ಮಾರ್ಗದಿಂದ ಅಥವಾ ನಂದ-ಸುನಂದರೆಂಬ ದೇವತೆಗಳಿಂದ ತರಲ್ಪಟ್ಟ ವಿಮಾನದಿಂದ ತ್ರಿಲೋಕೀಂ=ಮೂರು ಲೋಕಗಳನ್ನು ಮುನೀನ್ ಅಪಿ=ಸಪ್ತ ಋಷಿಗಳನ್ನೂ ಸಹ ಅತಿವ್ರಜ್ಯ=ದಾಟಿ ಪುರಸ್ತಾತ್=ಅದಕ್ಕೂ ಮೇಲೆ ಇರುವ, ಯತ್=ಯಾವ ಧ್ರುವಗತಿಂ= ಕಲ್ಪಪರ್ಯಂತ ನಿಶ್ಚಲಸ್ಥಾನವಾದ ವಿಷ್ಣೋಃ ಪದಂ=ಶಿಂಶುಮಾರನಿರುವ ಸ್ಥಳಕ್ಕೆ ಅಭ್ಯಗಾತ್= ಸುಖವಾಗಿ ತಲುಪಿದನು. ॥೩೪॥

**ಯದ್ಭ್ರಾಜಮಾನಂ ಸ್ವರುಚೈವ ಸರ್ವತೋ**
**ಲೋಕಾಸ್ತ್ರಯೋ ಹ್ಯನು ವಿಭ್ರಾಜಂತ ಏತೇ ।**
**ನ ತೇ ಖಲಾ ಜಂತುಷು ಯೇ ತ್ವನುಗ್ರಹಾದ್**
**ವ್ರಜಂತಿ ಭದ್ರಾಣಿ ಚರಂತಿ ಯೇಽನಿಶಮ್ ॥೩೫॥**

ಸ್ವರುಚಾ ಏವ=ತನ್ನ ಕಾಂತಿಯಿಂದಲೇ ಸರ್ವತಃ=ಎಲ್ಲ ಕಡೆ ಭ್ರಾಜಮಾನಂ= ಪ್ರಕಾಶಿಸುವ ಯತ್ ಅನು=ಯಾವ ಧ್ರುವಲೋಕದ ಕಾಂತಿಯನ್ನು ಅನುಸರಿಸಿ ಏತೇ ತ್ರಯಃ ಲೋಕಾಃ=ಈ ಮೂರು ಲೋಕಗಳು ವಿಭ್ರಾಜಂತ=ಪ್ರಕಾಶಿಸುವವೋ, ಯೇ=ಯಾರು ಜಂತುಷು=ಪ್ರಾಣಿಗಳಲ್ಲಿ ಖಲಾಃ=ನಿರ್ದಯಿಗಳೋ ತೇ=ಅವರು ಯತ್ ನ ವ್ರಜಂತಿ=ಯಾವ ಸ್ಥಾನವನ್ನು ಹೊಂದಲಾರರೋ, ಯೇ=ಯಾರು ಜಂತುಷು=ಪ್ರಾಣಿಗಳಲ್ಲಿ ಅನುಗ್ರಹಾತ್= ದಯೆಯಿಂದ ಅನಿಶಂ=ಯಾವಾಗಲೂ ಭದ್ರಾಣಿ ಚರಂತಿ=ಕಲ್ಯಾಣವನ್ನೇ ಮಾಡುವರೋ ತೇ=ಅವರು ಯದ್ ವ್ರಜಂತಿ=ಯಾವ ಸ್ಥಾನವನ್ನು ಹೊಂದುವರೋ, ಅಂತಹ ಸ್ಥಾನವನ್ನು ಸಃ=ಧ್ರುವನು ಅಭ್ಯಗಾತ್=ಸುಖವಾಗಿ ತಲುಪಿದನು.

ಧ್ರುವಸ್ಥಾನವನ್ನು ಹೊಂದಿದವರೂ ಸಹ ಪ್ರಾಯಃ ಸತ್ಯಲೋಕಕ್ಕೆ ಹೋದವರಂತೆ ಪುನರಾವೃತ್ತಿ ಇಲ್ಲದಿರುವದಿರಂದ ಕಲ್ಪಾಂತದಲ್ಲಿ ಮೋಕ್ಷ ಹೊಂದುವದರಿಂದಲೂ ಮೋಕ್ಷಕ್ಕೆ ಭೂತಸುಹೃತ್ವ ಮುಂತಾದವು ಕಾರಣವಾದ್ದರಿಂದ ಈ ರೀತಿ ಹೇಳಿರುವರು. ।।೩೫।।

ಹಿಂದೆ ಹೇಳಿದ್ದನ್ನೇ ವಿವರಿಸುವರು -

**ಶಾಂತಾಃ ಸಮದೃಶಃ ಶುದ್ಧಾಃ ಸರ್ವಭೂತಾನುರಂಜನಾಃ ।**
**ಯಾಂತ್ಯಂಜಸಾಽಚ್ಯುತಪದಮಚ್ಯುತಪ್ರಿಯಬಾಂಧವಾಃ ।।೩೬।।**

ಯೇ=ಯಾರು ಶಾಂತಾಃ=ಭಗವನ್ನಿಷ್ಠೆಯುಳ್ಳವರೋ, ಸಮದೃಶಃ=ಶತ್ರುಮಿತ್ರಾದಿಗಳಲ್ಲಿ ಅವರಿಗೆ ತಕ್ಕಂತೆ ನಡೆಯುವವರೋ (ಸರ್ವತ್ರ ಭಗವಂತನನ್ನು ಕಾಣುವವರೋ), ಶುದ್ಧಾಃ=ನಿರ್ಮಲರಾದವರೋ, ಸರ್ವಭೂತಾನುರಂಜನಾಃ=ಎಲ್ಲ ಪ್ರಾಣಿಗಳನ್ನೂ ಪ್ರೀತಿಗೊಳಿಸುವರೋ, ಅಚ್ಯುತಪ್ರಿಯಬಾಂಧವಾಃ=ಭಗವದ್ಭಕ್ತರೇ ಬಂಧುಗಳಾಗಿವುಳ್ಳವರೋ ಅಂತಹವರು ಅಚ್ಯುತಪದಂ=ಧ್ರುವಲೋಕವನ್ನು ಅಂಜಸಾ ಯಾಂತಿ=ಚೆನ್ನಾಗಿ ಹೊಂದುವರು. ।।೩೬।।

**ಇತ್ಯುತ್ತಾನಪದಃ ಪುತ್ರೋ ಧ್ರುವಃ ಕೃಷ್ಣಪರಾಯಣಃ ।**
**ಅಭೂತ್ ತ್ರಯಾಣಾಂ ಲೋಕಾನಾಂ ಚೂಡಾಮಣಿರಿವಾಮಲಃ ।।೩೭।।**

ಇತಿ=ಈ ರೀತಿಯಾಗಿ ಉತ್ತಾನಪದಃ=ಉತ್ತಾನಪಾದರಾಜನ ಪುತ್ರಃ=ಮಗನಾದ, ಅಮಲಃ=ದೋಷರಹಿತನಾದ ಧ್ರುವಃ=ಧ್ರುವನು ತ್ರಯಾಣಾಂ ಲೋಕಾನಾಂ=ಮೂರು ಲೋಕಗಳಿಗೆ ಅಮಲಃ ಚೂಡಾಮಣಿರಿವ ಅಭೂತ್=ನಿರ್ಮಲವಾದ ಶಿರೋರತ್ನದಂತೆ ಆದನು. ।।೩೭।।

**ಗಂಭೀರವೇಗಾನಿಮಿಷಾಂ ಜ್ಯೋತಿಷಾಂ ಚಕ್ರಮರ್ಪಿತಮ್ ।**
**ಯಸ್ಮಿನ್ ಭ್ರಮತಿ ಕೌರವ್ಯ ಮೇಢ್ಯಾಮಿವ ಗವಾಂ ಗಣಃ ।।೩೮।।**

ಹೇ ಕೌರವ್ಯ=ವಿದುರನೇ ! ಮೇಢ್ಯಾಂ=ಮೇಟಿಯ ಸುತ್ತಲೂ ಗವಾಂ ಗಣಃ ಇವ=ಎತ್ತುಗಳು ತಿರುಗುವಂತೆ (ಭತ್ತ ತುಳಿಸಲು ಮಧ್ಯದಲ್ಲಿ ಒಂದು ಕಂಬಕ್ಕೆ ದನಗಳನ್ನು ಸಾಲಾಗಿ ಕಟ್ಟುವರು. ಆ ಕಂಬ ಮೇಟಿ. ಅದರ ಸುತ್ತಲೂ ದನಗಳು ತಿರುಗುವವು. ಅದರಂತೆ) ಗಂಭೀರವೇಗಾನಿಮಿಷಾಂ=ಬಹಳ ವೇಗವುಳ್ಳ ಅಸ್ತಂಗತವಾಗದಿರುವ ಜ್ಯೋತಿಷಾಂ ಚಕ್ರಂ=ಆದಿತ್ಯಾದಿಜ್ಯೋತಿರ್ಮಂಡಲವು ಯಸ್ಮಿನ್=ಯಾವ ಧ್ರುವಸ್ಥಾನದಲ್ಲಿ ಅರ್ಪಿತಂ ಸತ್=ಸಂಬದ್ಧವಾಗಿ ಭ್ರಮತಿ=ತಿರುಗುವದೋ, ಅಂತಹ ಸ್ಥಾನವನ್ನು ಸಃ=ಧ್ರುವನು ಅಭ್ಯಗಾತ್=ಸುಖವಾಗಿ ತಲುಪಿದನು ಎಂದು ಅನ್ವಯ.

ಪಾಠಾಂತರದಲ್ಲಿ :- ಗಂಭೀರವೇಗವುಳ್ಳ ಗೋಗಣವು ಅನಿಮಿಷಂ=ಯಾವಾಗಲೂ ತಿರುಗುವಂತೆ ಎಂದರ್ಥ. ॥೩೮॥

**ಮಹಿಮಾನಂ ವಿಲೋಕ್ಯಾಸ್ಯ ನಾರದೋ ಭಗವಾನ್ ಋಷಿಃ ।**
**ಆತೋದ್ಯಂ ವಿತುದನ್ ಶ್ಲೋಕಾನ್ ಸತ್ರೇಽಗಾಯತ್ ಪ್ರಚೇತಸಾಮ್ ॥೩೯॥**

ಭಗವಾನ್=ಪೂಜ್ಯರಾದ ಋಷಿಃ=ಜ್ಞಾನಿಗಳಾದ ನಾರದಃ=ನಾರದರು ಅಸ್ಯ=ಧ್ರುವನ ಮಹಿಮಾನಂ=ಮಹತ್ವವನ್ನು ವಿಲೋಕ್ಯ=ನೋಡಿ ಆತೋದ್ಯಂ=ವೀಣೆಯನ್ನು ವಿತುದನ್=ಬಾರಿಸುತ್ತ ಪ್ರಚೇತಸಾಂ ಸತ್ರೇ=ಪ್ರಚೇತಸರು ಮಾಡುವ ಯಜ್ಞದಲ್ಲಿ ಶ್ಲೋಕಾನ್ ಅಗಾಯತ್=ಮುಂದೆ ಹೇಳುವ ಧ್ರುವಮಾಹಾತ್ಮ್ಯಪ್ರತಿಪಾದಕವಾದ ಶ್ಲೋಕಗಳನ್ನು ಹಾಡಿದರು.

ಪ್ರಚೇತಸರು ಧ್ರುವನ ವಂಶಜರು. ಹೀಗಾಗಿ ತಮ್ಮ ಪೂರ್ವಜರ ಮಹಿಮೆ ಅವರಿಗೆ ಪ್ರೀತಿಜನಕವಾದ್ದರಿಂದ ಪ್ರಚೇತಸರ ಸತ್ರದಲ್ಲಿ ಹಾಡಿದರು ಎಂದು ಭಾವ. ॥೩೯॥

**ನಾರದ ಉವಾಚ -**

**ನೂನಂ ಸುನೀತೇಃ ಪತಿದೇವತಾಯಾ-**
**ಸ್ತಪಃಪ್ರಭಾವಸ್ಯ ಸುತಸ್ಯ ತಾಂ ಗತಿಮ್ ।**
**ದೃಷ್ಟ್ವಾಭ್ಯುಪಾಯಾನಪಿ ವೇದವಾದಿನೋ**
**ನೈವಾಧಿಗಂತುಂ ಪ್ರಭವಂತಿ ಕಿಂ ನೃಪಾಃ ॥೪೦॥**

ಪತಿದೇವತಾಯಾಃ=ಗಂಡನೇ ದೇವತೆ ಎಂದು ತಿಳಿದ ಸುನೀತೇಃ=ಸುನೀತಿಯ ಸುತಸ್ಯ=ಮಗನ ತಪಃಪ್ರಭಾವಸ್ಯ=ತಪಃಸಾಮರ್ಥ್ಯದ ತಾಂ ಗತಿಂ=ಆ ಫಲವನ್ನು ಅಧಿಗಂತುಂ=ಹೊಂದಲು, ಉಪಾಯಾನ್=ಮೋಕ್ಷಸಾಧನಗಳನ್ನು ದೃಷ್ಟ್ವಾಪಿ=ತಿಳಿದರೂ ಸಹ ವೇದವಾದಿನಃ=ಋಷಿಗಳು ನೈವ ಪ್ರಭವಂತಿ=ಸಮರ್ಥರಾಗಲಾರರು. ಕಿಂ ನೃಪಾಃ ?= ರಾಜರು ಹೇಗೆ ಪಡೆಯುವರು ? ಸಾಧ್ಯವಿಲ್ಲವೆಂದು ಭಾವ. ॥೪೦॥

**ಯಃ ಪಂಚವರ್ಷೋ ಗುರುದಾರವಾಕ್ಶರೈ-**
**ರ್ಭಿನ್ನೇನ ಯಾತೋ ಹೃದಯೇನ ದೂಯತಾ ।**
**ವನಂ ಮದಾದೇಶಕರೋಽಜಿತಂ ಪ್ರಭುಂ**
**ಜಿಗಾಯ ತದ್ಭಕ್ತಿಗುಣೈಃ ಪರಾಜಿತಮ್ ॥೪೧॥**

ಯಃ=ಯಾರು ಪಂಚವರ್ಷಃ=ಐದುವರ್ಷದವನಾಗಿದ್ದಾಗ ಗುರುದಾರವಾಕ್ಯೈಃ= ತಂದೆಯ ಹೆಂಡತಿಯಾದ ಸುರುಚಿಯ ಮಾತುಗಳೆಂಬ ಬಾಣಗಳಿಂದ ಭಿನ್ನೇನ=ಸೀಳಿದ, ದೂಯತಾ=ದುಃಖಿತವಾದ, ಹೃದಯೇನ=ಮನಸ್ಸಿನಿಂದ ವನಂ ಯಾತಃ=ಅಡವಿಗೆ ಹೋದವನಾಗಿ ಮಮ=ನನ್ನ ಆದೇಶಕರಃ=ಉಪದೇಶದಂತೆ ಮಾಡಿದವನಾಗಿ, ತದ್ಭಕ್ತಿಗುಣೈಃ= ಅವನ ಭಕ್ತಿ ಎಂಬ ಗುಣದಿಂದ ಪರಾಜಿತಂ=ಸೋತುಹೋದ ಅಜಿತಂ=ಯಾರಿಂದಲೂ ಗೆಲ್ಲಲಾಗದ ಪ್ರಭುಂ=ಸಮರ್ಥನಾದ ಶ್ರೀಹರಿಯನ್ನು ಜಿಗಾಯ=ಗೆದ್ದನೋ,

**ಯಃ ಕ್ಷತ್ರಬಂಧುರ್ಭುವಿ ತಸ್ಯಾಧಿರೂಢ-**
**ಮನ್ವಾರುರುಕ್ಷೇದಪಿ ವರ್ಷಪೂಗೈಃ ।**
**ಯಃ ಪಂಚವರ್ಷೋ ಯದಹೋಭಿರಲ್ಪೈಃ**
**ಪ್ರಸಾದ್ಯ ವೈಕುಂಠಮವಾಪ ತತ್ಪದಮ್ ॥೪೨॥**

ಯಃ=ಯಾರು ಪಂಚವರ್ಷಃ=ಐದುವರ್ಷದವನಾಗಿದ್ದಾಗ ಅಲ್ಪೈಃ ಅಹೋಭಿಃ=ಸ್ವಲ್ಪೇ ದಿನಗಳಲ್ಲಿ ವೈಕುಂಠಂ ಪ್ರಸಾದ್ಯ=ಶ್ರೀಹರಿಯನ್ನು ಪ್ರಸನ್ನೀಕರಿಸಿಕೊಂಡು ಯತ್ ತತ್ಪದಂ ಅವಾಪ=ಯಾವ ಅವನ ಸ್ಥಾನವನ್ನು ಹೊಂದಿದನೋ ತಸ್ಯ ಅಧಿರೂಢಂ=ಅವನ ಆ ಸ್ಥಾನವನ್ನು ಯಃ ಕ್ಷತ್ರಬಂಧುಃ=ಯಾವ ಕ್ಷತ್ರಿಯನು (ಕ್ಷತ್ರಿಯೋತ್ತಮನು) ಭುವಿ=ಭೂಮಿಯಲ್ಲಿ ವರ್ಷಪೂಗೈಃ ಅಪಿ=ಅನೇಕ ವರ್ಷಗಳಿಂದಲೂ ಅನ್ವಾರುರುಕ್ಷೇತ್=ಏರಲು ಇಚ್ಛಿಸಿಸಬಹುದು ? ಇಚ್ಛಿಸಲೇ ಆಗದ ಮೇಲೆ ಏರುವದಂತೂ ದೂರವೆಂದು ಭಾವ. ॥೪೨॥

**ಮೈತ್ರೇಯ ಉವಾಚ -**

**ಏತತ್ತೇಽಭಿಹಿತಂ ಸರ್ವಂ ಯತ್ಪೃಷ್ಟೋಽಹಮಿಹ ತ್ವಯಾ ।**
**ಧ್ರುವಸ್ಯೋದ್ದಾಮಯಶಸಶ್ಚರಿತಂ ಸಮ್ಮತಂ ಸತಾಮ್ ॥೪೩ ॥**

ತ್ವಯಾ=ನಿನ್ನಿಂದ ಯತ್‌ಪೃಷ್ಟಃ=ಏನು ಪ್ರಶ್ನಿಸಲ್ಪಟ್ಟೆನೋ ಏತತ್ ಸರ್ವಂ=ಅದೆಲ್ಲವೂ ಅರ್ಥಾತ್ ಸತಾಂ=ಸಜ್ಜನರಿಗೆ ಸಮ್ಮತಂ=ಒಪ್ಪಿಗೆಯಾದ, ಉದ್ದಾಮಯಶಸಃ= ಉತ್ಕೃಷ್ಟಕೀರ್ತಿಯುಳ್ಳ ಧ್ರುವಸ್ಯ=ಧ್ರುವನ ಚರಿತಂ=ಚರಿತೆಯು ತೇ=ನಿನಗೆ ಅಭಿಹಿತಂ= ಹೇಳಲ್ಪಟ್ಟಿತು. ॥೪೩॥

ಚರಿತ್ರೆ ಎಂತಹದು ? ಎಂದು ಹೇಳುವರು -

**ಧನ್ಯಂ ಯಶಸ್ಯಮಾಯುಷ್ಯಂ ಪುಣ್ಯಂ ಸ್ವಸ್ತ್ಯಯನಂ ಮಹತ್ ।**
**ಸ್ವರ್ಗ್ಯಂ ಧ್ರೌವ್ಯಂ ಸೌಮನಸ್ಯಂ ಪ್ರಶಸ್ಯಮಘಮರ್ಷಣಮ್ ॥೪೪॥**

ಧನ್ಯಂ=ಧನಪ್ರಾಪಕವಾದುದು, ಯಶಸ್ಯಂ=ಕೀರ್ತಿದಾಯಕವು, ಆಯುಷ್ಯಂ= ಆಯುಷ್ಯಪ್ರದವು, ಪುಣ್ಯಂ=ಪುಣ್ಯಜನಕವು, ಸ್ವಸ್ತ್ಯಯನಂ=ಮಂಗಲದಾಯಕವಾದ, ಮಹತ್=ದೊಡ್ಡದಾದ, ಸ್ವರ್ಗ್ಯಂ=ಸ್ವರ್ಗಸಾಧನವು, ಧ್ರೌವ್ಯಂ=ಶಾಶ್ವತವಾದ ಮೋಕ್ಷಸಾಧನವು, ಸೌಮನಸ್ಯಂ=ಮನಃಶಾಂತಿದಾಯಕವು, ಪ್ರಶಸ್ಯಂ=ಪ್ರಶಂಸಾರ್ಹವೂ, ಅಘಮರ್ಷಣಂ= ಪಾಪನಾಶಕವೂ ಆದ, ।।೪೪।।

**ಶ್ರುತ್ವೈತಚ್ಛ್ರದ್ಧಯಾಽಭೀಕ್ಷ್ಣಮಚ್ಯುತಪ್ರಿಯಚೇಷ್ಟಿತಮ್ ।**
**ಭವೇದ್ಭಕ್ತಿರ್ಭಗವತಿ ಯಯಾ ಸ್ಯಾತ್ಕ್ಲೇಶಸಂಕ್ಷಯಃ ।।೪೫।।**

ಏತತ್=ಈ ಅಚ್ಯುತಪ್ರಿಯಚೇಷ್ಟಿತಂ=ಭಗವತ್ಪ್ರಿಯನ ಚರಿತೆಯನ್ನು ಶ್ರದ್ಧಯಾ= ವಿಶ್ವಾಸದಿಂದ ಅಭೀಕ್ಷ್ಣಂ=ಪುನಃ ಪುನಃ ಶ್ರುತ್ವಾ ಸ್ಥಿತಸ್ಯ=ಕೇಳಿರುವವನಿಗೆ ಯಯಾ= ಯಾವುದರಿಂದ ಕ್ಲೇಶಸಂಕ್ಷಯಃ=ದುಃಖನಾಶವಾಗುವದೋ ಅಂತಹ ಭಗವತಿ ಭಕ್ತಿಃ ಭವೇತ್=ಶ್ರೀಹರಿಯಲ್ಲಿ ಭಕ್ತಿಯು ಉಂಟಾಗುವದು. ।।೪೫।।

**ಮಹತ್ತ್ವಮಿಚ್ಛತಾಂ ತೀರ್ಥಂ ಶ್ರೋತುಃ ಶೀಲಾದಯೋ ಗುಣಾಃ ।**
**ಯತ್ರ ತೇಜಸ್ತದಿಚ್ಛೂನಾಂ ಮಾನೋ ಯತ್ರ ಮನಸ್ವಿನಾಮ್ ।।೪೬।।**

ಮಹತ್ವಂ ಇಚ್ಛತಾಂ=ಉತ್ತಮತ್ವವನ್ನು ಇಚ್ಛಿಸುವವರಿಗೆ ತೀರ್ಥಂ=ಉತ್ತಮತ್ವ ಪಡೆಯುವ ಉಪಾಯ(ಸ್ಥಾನ)ವು ದೊರೆಯುವದು. ಶ್ರೋತುಃ=ಕೇಳಿದವನಿಗೆ ಶೀಲಾದಯಃ ಗುಣಾಃ ಭವೇಯುಃ=ಒಳ್ಳೆಯ ಆಚಾರಾದಿಗುಣಗಳು ದೊರೆಯುವವು. ತದಿಚ್ಛೂನಾಂ= ತೇಜಸ್ಸನ್ನು ಅಪೇಕ್ಷಿಸುವವರಿಗೆ ತೇಜಃ=ಕಾಂತಿಯು ಸಾಮರ್ಥ್ಯವು ದೊರೆಯುವದು. ಯತ್ರ(ಯಸ್ಮಿನ್ ಅಭ್ಯಸ್ಯಮಾನೇ)=ಯಾವುದನ್ನು ಅಭ್ಯಾಸ ಮಾಡುವದರಿಂದ ಮನಸ್ವಿನಾಂ=ಮನಃಪ್ರಾಶಸ್ತ್ಯ ಬೇಕಾದವರಿಗೆ ಮಾನಃ(ಮನಃ)=ಪ್ರಾಶಸ್ತ್ಯ ಉಂಟಾಗುವದು.

**ಪ್ರಯತಃ ಕೀರ್ತಯೇತ್ಪ್ರಾತಃ ಸಮವಾಯೇ ದ್ವಿಜನ್ಮನಾಮ್ ।**
**ಸಾಯಂ ಚ ಪುಣ್ಯಶ್ಲೋಕಸ್ಯ ಧ್ರುವಸ್ಯ ಚರಿತಂ ಮಹತ್ ।।೪೭।।**

ಪ್ರಾತಃ ಸಾಯಂ ಚ=ಬೆಳಿಗ್ಗೆ ಮತ್ತು ಸಾಯಂಕಾಲ ಪ್ರಯತಃ=ಪ್ರಯತ್ನಪೂರ್ವಕವಾಗಿ ದ್ವಿಜನ್ಮನಾಂ ಸಮವಾಯೇ=ಬ್ರಾಹ್ಮಣ ಸಮೂಹದಲ್ಲಿ ಪುಣ್ಯಶ್ಲೋಕಸ್ಯ=ಪುಣ್ಯಕೀರ್ತಿಯಾದ ಧ್ರುವಸ್ಯ=ಧ್ರುವನ ಮಹತ್ ಚರಿತಂ ಕೀರ್ತಯೇತ್=ಇಷ್ಟಸಾಧನವಾದ ಧ್ರುವಚರಿತ್ರೆಯನ್ನು ಹೇಳಬೇಕು. ।।೪೭।।

**ಪೌರ್ಣಮಾಸ್ಯಾಂ ಸಿನೀವಾಲ್ಯಾಂ ದ್ವಾದಶ್ಯಾಂ ಶ್ರವಣೇಽಥವಾ ।**
**ದಿನಕ್ಷಯೇ ವ್ಯತೀಪಾತೇ ಸಂಕ್ರಮೇಽರ್ಕದಿನೇಽಪಿ ವಾ ।।೪೮।।**

ಪೌರ್ಣಮಾಸ್ಯಾಂ=ಹುಣ್ಣಿಮೆಯಲ್ಲಿ ಸಿನೀವಾಲ್ಯಾಂ=ಅಮಾವಾಸ್ಯೆಯಲ್ಲಿ ದ್ವಾದಶ್ಯಾಂ= ದ್ವಾದಶಿಯಂದು ಅಥ=ಮತ್ತು ಶ್ರವಣೇ=ಶ್ರವಣಾನಕ್ಷತ್ರವಿರುವಾಗ ದಿನಕ್ಷಯೇ ವಾ= ಕ್ಷಯತಿಥಿ ಇರುವಾಗ ವ್ಯತೀಪಾತೇ=*ವ್ಯತೀಪಾತ ಯೋಗದಲ್ಲಿ ಸಂಕ್ರಮೇ= ಸಂಕ್ರಮಣದಲ್ಲಿ ಅರ್ಕದಿನೇ=ರವಿವಾರ ಸಪ್ತಮೀ ದಿನಗಳಲ್ಲಿ

**ವಿಶೇಷ ವಿಚಾರ : -**

*ಪ್ರಸಿದ್ಧವಾದ ಪಂಚ ಅಂಗಳಲ್ಲಿರುವ ೨೭ಯೋಗಗಳಲ್ಲಿ ಒಂದು. ಅಥವಾ "ಶ್ರವಣಾಶ್ವಿಧನಿಷ್ಠಾರ್ದ್ರಾನಾಗದೈವತಮಸ್ತಕೇ । ಯದ್ಯಮಾರವಿವಾರೇಣ ವ್ಯತೀಪಾತಃ ಸ ಉಚ್ಯತೇ॥" ನಾಗದೈವತ ಎಂದರೆ ಆಶ್ಲೇಷಾ, ಮಸ್ತಕ ಎಂದರೆ ಮೃಗಶಿರ, ಅಂತು ಶ್ರವಣಾ, ಅಶ್ವಿನೀ, ಧನಿಷ್ಠಾ, ಆರ್ದ್ರಾ, ಆಶ್ಲೇಷಾ, ಮೃಗಶಿರ ಇವುಗಳು ರವಿವಾರ ಸಹಿತವಾದರೆ ವ್ಯತೀಪಾತವೆನ್ನುವರು. ॥೪೮॥

**ಶ್ರಾವಯೇಚ್ಛ್ರದ್ದಧಾನಾನಾಂ ತೀರ್ಥಪಾದಪದಾಶ್ರಯಃ ।**
**ನೇಚ್ಛಂಸ್ತತ್ರಾऽತ್ಮನಾऽತ್ಮಾನಂ ಸಂತುಷ್ಟ ಇತಿ ಸಿದ್ಧ್ಯತಿ ॥೪೯॥**

**ಭಾಗವತ ತಾತ್ಪರ್ಯ : -**

**ಮನಸಾ ಪರಮಾತ್ಮಾನಂ ಪ್ರತಿ ಸಂತುಷ್ಟಃ ।**

ತೀರ್ಥಪಾದಪದಾಶ್ರಯಃ=ಗಂಗಾಜನಕಪಾದವುಳ್ಳ ಶ್ರೀಹರಿಯ ಪಾದಗಳನ್ನು ಆಶ್ರಯಿಸಿದ ಭಕ್ತನು ಶ್ರದ್ದಧಾನಾನಾಂ=ಆಸ್ತಿಕ್ಯಬುದ್ಧಿಯುಳ್ಳವರಿಗೆ ನ ಇಚ್ಛನ್=ಬೇರೆ ಫಲಾಪೇಕ್ಷೆಯಿಲ್ಲದೇ ಶ್ರಾವಯೇತ್=ಶ್ರವಣ ಮಾಡಿಸಬೇಕು. ತತ್ರ=ಧ್ರುವಚರಿತೆಯನ್ನು ಕೇಳಿದಾಗ ಆತ್ಮನಾ=ಮನಸ್ಸಿನಿಂದ ಆತ್ಮಾನಂ ಪ್ರತಿ=ಪರಮಾತ್ಮನನ್ನು ಕುರಿತು ಸಂತುಷ್ಟನಾಗುವನು, ಇತಿ=ಆದ ಕಾರಣ ಸಿದ್ಧ್ಯತಿ=ಎಲ್ಲ ಇಷ್ಟಾರ್ಥ ಪಡೆಯುವನು. ॥೪೯॥

**ಜ್ಞಾನಮಜ್ಞಾತತತ್ತ್ವಾಯ ಯೋ ದದ್ಯಾತ್ ಸತ್ಪಥಾಮೃತಮ್ ।**
**ಕೃಪಾಲೋರ್ದೀನನಾಥಸ್ಯ ದೇವಾಸ್ತಸ್ಯಾನುಗೃಹ್ಣತೇ ॥೫೦॥**

ಯಃ=ಯಾರು ಅಜ್ಞಾತತತ್ವಾಯ=ಪರತತ್ವವನ್ನು ತಿಳಿಯದವನಿಗೆ ಸತ್ಪಥಾಮೃತಂ= ಮೋಕ್ಷಮಾರ್ಗದಲ್ಲಿ ಅಮೃತದಂತಿರುವ ಜ್ಞಾನಂ=ಧ್ರುವಚರಿತೆಯ ಶ್ರವಣ ಮೂಲಕ ಭಗವನ್ಮಾಹಾತ್ಮ್ಯಜ್ಞಾನವನ್ನು ದದ್ಯಾತ್=ಕೊಡುವನೋ, ಅಂತಹ ಕೃಪಾಲೋಃ= ದಯಾವಂತನಾದ ದೀನನಾಥಸ್ಯ=ದುಃಖಿತರಾದವರಿಗೆ ಆಶ್ರಯನಾದ ತಸ್ಯ=ಅವನಿಗೆ ದೇವಾಃ ಅನುಗೃಹ್ಣತೇ=ದೇವತೆಗಳು ಅನುಗ್ರಹಿಸುವರು. ॥೫೦॥

**ಇದಂ ಮಯಾ ತೇಽಭಿಹಿತಂ ಕುರೂದ್ವಹ**
**ಧ್ರುವಸ್ಯ ವಿಖ್ಯಾತವಿಶುದ್ಧಕರ್ಮಣಃ ।**
**ಹಿತ್ವಾಽರ್ಭಕಃ ಕ್ರೀಡನಕಾನಿ ಮಾತು-**
**ರ್ಗೃಹಂ ಚ ವಿಷ್ಣುಂ ಶರಣಂ ಯೋ ಜಗಾಮ ॥೫೧॥**

॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ ದ್ವಾದಶೋಽಧ್ಯಾಯಃ ॥

ಹೇ ಕುರೂದ್ವಹ=ವಿದುರನೇ ! ಯಃ=ಯಾವನು ಅರ್ಭಕಃ=ಬಾಲಕನಾಗಿದ್ದಾಗ ಕ್ರೀಡನಕಾನಿ=ಆಡುವ ಸಾಧನಗಳನ್ನು ಚ=ಮತ್ತು ಮಾತುಃ ಗೃಹಂ=ತಾಯಿಯ ಮನೆಯನ್ನು ಹಿತ್ವಾ=ತೊರೆದು ವಿಷ್ಣುಂ ಶರಣಂ ಜಗಾಮ=ಪರಮಾತ್ಮನನ್ನು ಮೊರೆ ಹೊದನೋ ತಸ್ಯ=ಅಂತಹ ವಿಖ್ಯಾತವಿಶುದ್ಧಕರ್ಮಣಃ=ಪ್ರಸಿದ್ಧವಾದ ಅತ್ಯಂತಪರಿಶುದ್ಧವಾದ ಕರ್ಮವುಳ್ಳ ಧ್ರುವಸ್ಯ=ಧ್ರುವನ ಇದಂ=ಈ ಚರಿತೆಯು ಮಯಾ=ನನ್ನಿಂದ ತೇ=ನಿನಗೆ ಅಭಿಹಿತಂ= ಹೇಳಲ್ಪಟ್ಟಿತು.

॥ ಇಲ್ಲಿಗೆ ಹನ್ನೆರಡನೇ ಅಧ್ಯಾಯವು ಮುಗಿಯಿತು ॥



## ಅಥ ತ್ರಯೋದಶೋಽಧ್ಯಾಯಃ

ಈ ಅಧ್ಯಾಯದಲ್ಲಿ ಶ್ರೀಹರಿ-ಹರಿಭಕ್ತರ ಕಥೆಗಳನ್ನು ಕೇಳಿ (ಅಂತಃಕರಣಶುದ್ಧಿ ಪಡೆದವರಿಗೆ) ನಿರ್ಮಲವಾದ ಮನಸ್ಸುಳ್ಳವರಿಗೆ ಬಿಂಬ-ಪ್ರತಿಬಿಂಬಜ್ಞಾನದಿಂದಲೇ ಮೋಕ್ಷವಾಗುವದು ಎಂದು ಹೇಳುವರು.

ಮೊದಲಿಗೆ ವಿದುರನು ಪ್ರಚೇತಸರ ವಿಷಯದಲ್ಲಿ ಮಾಡಿದ ಪ್ರಶ್ನೆ ಅದಕ್ಕೆ ಉತ್ತರವಾಗಿ ಮೈತ್ರೇಯರು ಧ್ರುವನ ವಂಶಾವಲಿವರ್ಣನ ಮಾಡುವರು -

**ಶ್ರೀಶುಕ ಉವಾಚ -**

**ನಿಶಮ್ಯ ಕೌಷಾರವಿಣೋಪವರ್ಣಿತಂ**
**ಧ್ರುವಸ್ಯ ವೈಕುಂಠಪದಾಧಿರೋಹಣಮ್ ।**
**ಪ್ರರೂಢಭಾವೋ ಭಗವತ್ಯಧೋಕ್ಷಜೇ**
**ಪ್ರಷ್ಟುಂ ಪುನಸ್ತಂ ವಿದುರಃ ಪ್ರಚಕ್ರಮೇ ॥೧॥**

ವಿದುರಃ=ವಿದುರನು ಕೌಷಾರವಿಣಾ=ಮೈತ್ರೇಯರಿಂದ ಉಪವರ್ಣಿತಂ=ಹೇಳಲ್ಪಟ್ಟ ಧ್ರುವಸ್ಯ=ಧ್ರುವರಾಜನ ವೈಕುಂಠಪದಾಧಿರೋಹಣಂ=ಶಿಂಶುಮಾರನಾಮಕ ಶ್ರೀಹರಿಯ ಸ್ಥಾನಕ್ಕೆ ಹೋದನೆಂಬುದನ್ನು ನಿಶಮ್ಯ=ಕೇಳಿ ಅಧೋಕ್ಷಜೇ ಭಗವತಿ=ಪ್ರತ್ಯಕ್ಷಾಗೋಚರನಾದ ಶ್ರೀಹರಿಯಲ್ಲಿ ಪ್ರರೂಢಭಾವಃ=ಅಭಿವೃದ್ಧವಾದ ಭಕ್ತಿಯುಳ್ಳವನಾಗಿ ಪುನಃ=ಮತ್ತೆ ತಂ=ಮೈತ್ರೇಯರನ್ನು ಪ್ರಷ್ಟುಂ=ಕೇಳಲು ಪ್ರಚಕ್ರಮೇ=ಪ್ರಾರಂಭಿಸಿದನು. ॥೧॥

**ವಿದುರ ಉವಾಚ -**

**ಕೇ ತೇ ಪ್ರಚೇತಸೋ ನಾಮ ಕಸ್ಯಾಪತ್ಯಾನಿ ಸುವ್ರತ ।**
**ಕಸ್ಯಾನ್ವವಾಯೇ ಪ್ರಖ್ಯಾತಾಃ ಕುತ್ರ ವಾ ಸತ್ರಮಾಸತ ॥೨॥**

ಹಿಂದಿನ ಅಧ್ಯಾಯದಲ್ಲಿ ನಾರದರು ಪ್ರಚೇತಸರ ಸತ್ರದಲ್ಲಿ ಧ್ರುವನ ಮಹಿಮೆಯನ್ನು ಗಾನ ಮಾಡಿದರು ಎಂದು ಕೇಳಿದ ವಿದುರನು -

ಪ್ರಚೇತಸಃ ನಾಮ ತೇ ಕೇ=ಪ್ರಚೇತಸರೆಂಬ ಹೆಸರುಳ್ಳ ಅವರು ಯಾರು ? ಕಸ್ಯ ಅಪತ್ಯಾನಿ=ಯಾರ ಮಕ್ಕಳು ? ಸುವ್ರತ=ಉತ್ತಮವ್ರತನಿಷ್ಠರೇ ! ಕಸ್ಯ ಅನ್ವವಾಯೇ ಪ್ರಖ್ಯಾತಾಃ=ಯಾರ ವಂಶದಲ್ಲಿ ಪ್ರಸಿದ್ಧರು ? ಕುತ್ರ ವಾ ಸತ್ರಮಾಸತ=ಎಲ್ಲಿ ಸತ್ರವು ನಡೆಯಿತು ? ಎಂದು ಕೇಳಿದನು. ।।೨।।

ನಾರದರು ಪ್ರಚೇತಸರ ಸತ್ರದಲ್ಲಿ ಹೇಳಿದ ಕಥೆಯನ್ನು ಕೇಳಲು ಅವರ ಮಹಿಮೆಯನ್ನು ಹೇಳುವರು -

**ಮನ್ಯೇ ಮಹಾಭಾಗವತಂ ನಾರದಂ ದೇವದರ್ಶನಮ್ ।**
**ಯೇನ ಪ್ರೋಕ್ತಃ ಕ್ರಿಯಾಯೋಗಃ ಪರಿಚರ್ಯಾವಿಧಿರ್ಹರೇಃ ।।೩।।**

ಯೇನ=ಯಾವ ನಾರದರಿಂದ ಹರೇಃ=ಶ್ರೀಹರಿಯ ಪರಿಚರ್ಯಾವಿಧಿಃ= ಸೇವಾಪ್ರಕಾರವು ಮತ್ತು ಕ್ರಿಯಾಯೋಗಃ=ಕ್ರಿಯಾರೂಪವಾದ ಮೋಕ್ಷೋಪಾಯವು ಪ್ರೋಕ್ತಃ=ಪಂಚರಾತ್ರಾದಿಗ್ರಂಥದಲ್ಲಿ ಹೇಳಲ್ಪಟ್ಟಿದೆಯೋ ತಂ=ಆ ದೇವದರ್ಶನಂ=ಭಗವಂತನ ಅಪರೋಕ್ಷಜ್ಞಾನ ಪಡೆದ ನಾರದಂ=ನಾರದರನ್ನು ಮಹಾಭಾಗವತಂ ಮನ್ಯೇ= ದೊಡ್ಡಭಗವದ್ಭಕ್ತರೆಂದು ತಿಳಿಯುವೆನು. ಭಕ್ತಿಯಿಲ್ಲದೇ ದರ್ಶನ ಹೇಗಾದೀತು ? ಎಂದು ಭಾವ. ।।೩।।

**ಸ್ವಧರ್ಮಶೀಲೈಃ ಪುರುಷೈರ್ಭಗವಾನ್ ಪುರುಷೋತ್ತಮಃ ।**
**ಇಜ್ಯಮಾನೋ ಭಕ್ತಿಮತಾ ನಾರದೇನೇರಿತಃ ಕಿಲ ।।೪।।**

ಸ್ವಧರ್ಮಶೀಲೈಃ ಪುರುಷೈಃ=ತಮಗೆ ವಿಹಿತವಾದ ಧರ್ಮ ಮಾಡುವ ಪ್ರಚೇತಸರಿಂದ ಭಗವಾನ್=ಐಶ್ವರ್ಯಶಾಲಿಯಾದ ಪುರುಷೋತ್ತಮಃ=ಶ್ರೀಹರಿಯೇ ಇಜ್ಯಮಾನಃ= ಪೂಜಿಸಲ್ಪಡುವವನು ಎಂಬುದಾಗಿ ಭಕ್ತಿಮತಾ=ಭಕ್ತರಾದ ನಾರದೇನ=ನಾರದರಿಂದ ಈರಿತಃ= ಹೇಳಲ್ಪಟ್ಟನಷ್ಟೇ.

ಸಾಕ್ಷಾನ್ನಾರಾಯಣನೇ ಚರು ಪುರೋಡಾಶ ಮುಂತಾದ ದ್ರವ್ಯಗಳಿಗೆ ಸ್ವಾಮಿಯಾಗಿ, ಅವುಗಳ ಅಭಿಮಾನಿಗಳಾದ ಅಗ್ನಿ ಮುಂತಾದ ದೇವತೆಗಳ ಅಂತರ್ಯಾಮಿಯಾಗಿ, ಆ ಆ ಶಬ್ದಪ್ರವೃತ್ತಿನಿಮಿತ್ತಕ್ಕೆ ಮುಖ್ಯನಾಗಿ, ದೇವತೆಯಾಗಿ, ಮಂತ್ರಮೂರ್ತಿಯಾಗಿಯೂ ಪೂಜಿತನಾಗುವನು ಎಂದು ನಾರದರು ಹೇಳಿದರೆಂಬುದಾಗಿ ಗ್ರಂಥಾಂತರದಲ್ಲಿದೆ (ಪಂಚರಾತ್ರ)ಎಂದು ಭಾವ. ।।೪।।

## ಅಥ ತ್ರಯೋದಶೋಽಧ್ಯಾಯಃ

ಈ ಅಧ್ಯಾಯದಲ್ಲಿ ಶ್ರೀಹರಿ-ಹರಿಭಕ್ತರ ಕಥೆಗಳನ್ನು ಕೇಳಿ (ಅಂತಃಕರಣಶುದ್ಧಿ ಪಡೆದವರಿಗೆ) ನಿರ್ಮಲವಾದ ಮನಸ್ಸುಳ್ಳವರಿಗೆ ಬಿಂಬ-ಪ್ರತಿಬಿಂಬಜ್ಞಾನದಿಂದಲೇ ಮೋಕ್ಷವಾಗುವದು ಎಂದು ಹೇಳುವರು.

ಮೊದಲಿಗೆ ವಿದುರನು ಪ್ರಚೇತಸರ ವಿಷಯದಲ್ಲಿ ಮಾಡಿದ ಪ್ರಶ್ನೆ ಅದಕ್ಕೆ ಉತ್ತರವಾಗಿ ಮೈತ್ರೇಯರು ಧ್ರುವನ ವಂಶಾವಲಿವರ್ಣನ ಮಾಡುವರು -

**ಶ್ರೀಶುಕ ಉವಾಚ -**

**ನಿಶಮ್ಯ ಕೌಷಾರವಿಣೋಪವರ್ಣಿತಂ**
**ಧ್ರುವಸ್ಯ ವೈಕುಂಠಪದಾಧಿರೋಹಣಮ್ ।**
**ಪ್ರರೂಢಭಾವೋ ಭಗವತ್ಯಧೋಕ್ಷಜೇ**
**ಪ್ರಷ್ಟುಂ ಪುನಸ್ತಂ ವಿದುರಃ ಪ್ರಚಕ್ರಮೇ ॥೧॥**

ವಿದುರಃ=ವಿದುರನು ಕೌಷಾರವಿಣಾ=ಮೈತ್ರೇಯರಿಂದ ಉಪವರ್ಣಿತಂ=ಹೇಳಲ್ಪಟ್ಟ ಧ್ರುವಸ್ಯ=ಧ್ರುವರಾಜನ ವೈಕುಂಠಪದಾಧಿರೋಹಣಂ=ಶಿಂಶುಮಾರನಾಮಕ ಶ್ರೀಹರಿಯ ಸ್ಥಾನಕ್ಕೆ ಹೋದನೆಂಬುದನ್ನು ನಿಶಮ್ಯ=ಕೇಳಿ ಅಧೋಕ್ಷಜೇ ಭಗವತಿ=ಪ್ರತ್ಯಕ್ಷಾಗೋಚರನಾದ ಶ್ರೀಹರಿಯಲ್ಲಿ ಪ್ರರೂಢಭಾವಃ=ಅಭಿವೃದ್ಧವಾದ ಭಕ್ತಿಯುಳ್ಳವನಾಗಿ ಪುನಃ=ಮತ್ತೆ ತಂ=ಮೈತ್ರೇಯರನ್ನು ಪ್ರಷ್ಟುಂ=ಕೇಳಲು ಪ್ರಚಕ್ರಮೇ=ಪ್ರಾರಂಭಿಸಿದನು. ॥೧॥

**ವಿದುರ ಉವಾಚ -**

**ಕೇ ತೇ ಪ್ರಚೇತಸೋ ನಾಮ ಕಸ್ಯಾಪತ್ಯಾನಿ ಸುವ್ರತ ।**
**ಕಸ್ಯಾನ್ವವಾಯೇ ಪ್ರಖ್ಯಾತಾಃ ಕುತ್ರ ವಾ ಸತ್ರಮಾಸತ ॥೨॥**

ಹಿಂದಿನ ಅಧ್ಯಾಯದಲ್ಲಿ ನಾರದರು ಪ್ರಚೇತಸರ ಸತ್ರದಲ್ಲಿ ಧ್ರುವನ ಮಹಿಮೆಯನ್ನು ಗಾನ ಮಾಡಿದರು ಎಂದು ಕೇಳಿದ ವಿದುರನು -

ಪ್ರಚೇತಸಃ ನಾಮ ತೇ ಕೇ=ಪ್ರಚೇತಸರೆಂಬ ಹೆಸರುಳ್ಳ ಅವರು ಯಾರು ? ಕಸ್ಯ ಅಪತ್ಯಾನಿ=ಯಾರ ಮಕ್ಕಳು ? ಸುವ್ರತ=ಉತ್ತಮವ್ರತನಿಷ್ಠರೇ ! ಕಸ್ಯ ಅನ್ವವಾಯೇ ಪ್ರಖ್ಯಾತಾಃ=ಯಾರ ವಂಶದಲ್ಲಿ ಪ್ರಸಿದ್ಧರು ? ಕುತ್ರ ವಾ ಸತ್ರಮಾಸತ=ಎಲ್ಲಿ ಸತ್ರವು ನಡೆಯಿತು ? ಎಂದು ಕೇಳಿದನು. ।।೨।।

ನಾರದರು ಪ್ರಚೇತಸರ ಸತ್ರದಲ್ಲಿ ಹೇಳಿದ ಕಥೆಯನ್ನು ಕೇಳಲು ಅವರ ಮಹಿಮೆಯನ್ನು ಹೇಳುವರು -

**ಮನ್ಯೇ ಮಹಾಭಾಗವತಂ ನಾರದಂ ದೇವದರ್ಶನಮ್ ।**
**ಯೇನ ಪ್ರೋಕ್ತಃ ಕ್ರಿಯಾಯೋಗಃ ಪರಿಚರ್ಯಾವಿಧಿರ್ಹರೇಃ ।।೩।।**

ಯೇನ=ಯಾವ ನಾರದರಿಂದ ಹರೇಃ=ಶ್ರೀಹರಿಯ ಪರಿಚರ್ಯಾವಿಧಿಃ= ಸೇವಾಪ್ರಕಾರವು ಮತ್ತು ಕ್ರಿಯಾಯೋಗಃ=ಕ್ರಿಯಾರೂಪವಾದ ಮೋಕ್ಷೋಪಾಯವು ಪ್ರೋಕ್ತಃ=ಪಂಚರಾತ್ರಾದಿಗ್ರಂಥದಲ್ಲಿ ಹೇಳಲ್ಪಟ್ಟಿದೆಯೋ ತಂ=ಆ ದೇವದರ್ಶನಂ=ಭಗವಂತನ ಅಪರೋಕ್ಷಜ್ಞಾನ ಪಡೆದ ನಾರದಂ=ನಾರದರನ್ನು ಮಹಾಭಾಗವತಂ ಮನ್ಯೇ= ದೊಡ್ಡಭಗವದ್ಭಕ್ತರೆಂದು ತಿಳಿಯುವೆನು. ಭಕ್ತಿಯಿಲ್ಲದೇ ದರ್ಶನ ಹೇಗಾದೀತು ? ಎಂದು ಭಾವ. ।।೩।।

**ಸ್ವಧರ್ಮಶೀಲೈಃ ಪುರುಷೈರ್ಭಗವಾನ್ ಪುರುಷೋತ್ತಮಃ ।**
**ಇಜ್ಯಮಾನೋ ಭಕ್ತಿಮತಾ ನಾರದೇನೇರಿತಃ ಕಿಲ ।।೪।।**

ಸ್ವಧರ್ಮಶೀಲೈಃ ಪುರುಷೈಃ=ತಮಗೆ ವಿಹಿತವಾದ ಧರ್ಮ ಮಾಡುವ ಪ್ರಚೇತಸರಿಂದ ಭಗವಾನ್=ಐಶ್ವರ್ಯಶಾಲಿಯಾದ ಪುರುಷೋತ್ತಮಃ=ಶ್ರೀಹರಿಯೇ ಇಜ್ಯಮಾನಃ= ಪೂಜಿಸಲ್ಪಡುವವನು ಎಂಬುದಾಗಿ ಭಕ್ತಿಮತಾ=ಭಕ್ತರಾದ ನಾರದೇನ=ನಾರದರಿಂದ ಈರಿತಃ= ಹೇಳಲ್ಪಟ್ಟನಷ್ಟೇ.

ಸಾಕ್ಷಾನ್ನಾರಾಯಣನೇ ಚರು ಪುರೋಡಾಶ ಮುಂತಾದ ದ್ರವ್ಯಗಳಿಗೆ ಸ್ವಾಮಿಯಾಗಿ, ಅವುಗಳ ಅಭಿಮಾನಿಗಳಾದ ಅಗ್ನಿ ಮುಂತಾದ ದೇವತೆಗಳ ಅಂತರ್ಯಾಮಿಯಾಗಿ, ಆ ಆ ಶಬ್ದಪ್ರವೃತ್ತಿನಿಮಿತ್ತಕ್ಕೆ ಮುಖ್ಯನಾಗಿ, ದೇವತೆಯಾಗಿ, ಮಂತ್ರಮೂರ್ತಿಯಾಗಿಯೂ ಪೂಜಿತನಾಗುವನು ಎಂದು ನಾರದರು ಹೇಳಿದರೆಂಬುದಾಗಿ ಗ್ರಂಥಾಂತರದಲ್ಲಿದೆ (ಪಂಚರಾತ್ರ)ಎಂದು ಭಾವ. ।।೪।।

**ಯಾಸ್ತಾ ದೇವರ್ಷಿಣಾ ತತ್ರ ವರ್ಣಿತಾ ಭಗವತ್ಕಥಾಃ ।**
**ಮಹ್ಯಂ ಶುಶ್ರೂಷವೇ ಬ್ರಹ್ಮನ್ ಕಾರ್ತ್ಸ್ನ್ಯೇನಾಚಷ್ಟುಮರ್ಹಸಿ ॥೫॥**

ಬ್ರಹ್ಮನ್=ಮೈತ್ರೇಯರೇ ! ದೇವರ್ಷಿಣಾ=ನಾರದರಿಂದ ತತ್ರ=ಪ್ರಚೇತಸರ ಸತ್ರದಲ್ಲಿ ಯಾಃ ಭಗವತ್ಕಥಾಃ ವರ್ಣಿತಾಃ=ಯಾವ ಕಥೆಗಳು ಹೇಳಲ್ಪಟ್ಟವೋ ತಾಃ=ಅವುಗಳನ್ನು ಶುಶ್ರೂಷವೇ=ಕೇಳಲಿಚ್ಛಿಸುವ ಮಹ್ಯಂ=ನನಗೆ ಆಚಷ್ಟುಂ ಅರ್ಹಸಿ=ಹೇಳಲು ಯೋಗ್ಯರಾಗಿರುವಿರಿ. ॥೫॥

**ಮೈತ್ರೇಯ ಉವಾಚ -**

**ಧ್ರುವಸ್ಯ ಚೋತ್ಕಲಃ ಪುತ್ರಃ ಪಿತರಿ ಪ್ರಸ್ಥಿತೇ ವನಮ್ ।**
**ಸಾರ್ವಭೌಮಶ್ರಿಯಂ ನೈಚ್ಛದಧಿರಾಜಾಸನಂ ಪಿತುಃ ॥೬॥**

ಧ್ರುವಸ್ಯ ಪುತ್ರಃ=ಧ್ರುವನ ಮಗನಾದ ಉತ್ಕಲಃ=ಉತ್ಕಲನು ಪಿತರಿ=ಧ್ರುವನು ವನಂ ಪ್ರಸ್ಥಿತೇ=ಅಡವಿಗೆ ಹೋದಮೇಲೆ ಅಧಿರಾಜಾಸನಂ=ರಾಜಸಿಂಹಾಸನಕ್ಕಿರುವ ಸಾರ್ವಭೌಮಶ್ರಿಯಂ=ಸಾರ್ವಭೌಮಸಂಪತ್ತನ್ನು ನ ಐಚ್ಛತ್=ಇಚ್ಛಿಸಲಿಲ್ಲ. ॥೬॥

**ಸ ಜನ್ಮನೋಪಶಾಂತಾತ್ಮಾ ನಿಃಸಂಗಃ ಸಮದರ್ಶನಃ ।**
**ದದರ್ಶ ಲೋಕೇ ವಿತತಮಾತ್ಮಾನಂ ಲೋಕಮಾತ್ಮನಿ ॥೭॥**

ಸಃ=ಉತ್ಕಲನು ಜನ್ಮನಾ=ಹುಟ್ಟಿನಿಂದಲೇ ಉಪಶಾಂತಾತ್ಮಾ=ಭಗವನ್ನಿಷ್ಠ ಮನಸ್ಸುಳ್ಳವನು, ನಿಃಸಂಗಃ=ವಿಷಯಾಸಕ್ತಿ ಇಲ್ಲದವನು, ಸಮದರ್ಶನಃ=ಎಲ್ಲೆಡೆ ಶ್ರೀಹರಿಯನ್ನು (ಯೋಗ್ಯತಾನುಗುಣವಾಗಿ ತಿಳಿದವನು) ಕಾಣುವವನು, ಲೋಕೇ=ಜಗತ್ತಿನಲ್ಲಿ ವಿತತಂ=ವ್ಯಾಪ್ತನಾದ ಆತ್ಮಾನಂ=ಪರಮಾತ್ಮನನ್ನು ಆತ್ಮನಿ=ಪರಮಾತ್ಮನಲ್ಲಿ ಆಧರಿಸಿರುವ ಲೋಕಂ=ಲೋಕವನ್ನು ದದರ್ಶ=ನೋಡಿದನು. ॥೭॥

**ಆತ್ಮಾನಂ ಬ್ರಹ್ಮ ನಿರ್ವಾಣಂ ಪ್ರತ್ಯಸ್ತಮಿತವಿಗ್ರಹಮ್ ।**
**ಅವಬೋಧರಸೈಕಾತ್ಮ್ಯಮಾನಂದಮನುಸಂತತಮ್ ॥೮॥**

ಬ್ರಹ್ಮ=ಗುಣಪೂರ್ಣನಾದ ನಿರ್ವಾಣಂ=ಪ್ರಾಕೃತದೇಹರಹಿತನಾದ ಪ್ರತ್ಯಸ್ತಮಿತವಿಗ್ರಹಂ =ಜೀವರಿಗೆ ತಮ್ಮ ಪ್ರಯತ್ನದಿಂದ ಕಾಣದಿರುವ ದೇಹವುಳ್ಳ ಅವಬೋಧರಸೈಕಾತ್ಮ್ಯಂ= ಶ್ರೇಷ್ಠಜ್ಞಾನಾತ್ಮಕನಾದ ಹರಿಯಿಂದ ಅಭಿನ್ನವಾದ ದೇಹವುಳ್ಳ ಆನಂದಂ=ಆನಂದರೂಪವಾದ ದೇಹವುಳ್ಳ ಅನುಸಂತತಂ=ಚೆನ್ನಾಗಿ ವ್ಯಾಪ್ತನಾದ ಆತ್ಮಾನಂ=ಪರಮಾತ್ಮನನ್ನು ದದರ್ಶ= ನೋಡಿದನು. ಜ್ಞಾನಾನಂದಾತ್ಮಕದೇಹದಿಂದಲೇ ವ್ಯಾಪ್ತನಾದ ಹರಿಯನ್ನು ಕಂಡನೆಂದರ್ಥ.

**ಅವ್ಯವಚ್ಛಿನ್ನಯೋಗಾಗ್ನಿದಗ್ಧಕರ್ಮಮಲಾಶಯಃ ।**
**ಸ್ವರೂಪಮವರುಂಧಾನೋ ನಾನ್ಯದಸ್ಮಾತ್ತದೈಕ್ಷತ ॥೯॥**

ಅವ್ಯವಚ್ಛಿನ್ನಯೋಗಾಗ್ನಿದಗ್ಧಕರ್ಮಮಲಾಶಯಃ ಅವ್ಯವಚ್ಛಿನ್ನ=ನಿರಂತರವಾದ ಯೋಗಾಗ್ನಿ=ಧ್ಯಾನದಿಂದುಂಟಾದ ಜ್ಞಾನಾಗ್ನಿಯಿಂದ ದಗ್ಧ=ನಾಶವಾದ ಕರ್ಮ=ಅನಿಷ್ಟಕಾಮ್ಯವಾದ ಕರ್ಮಗಳು ಮಲ=ಪಾಪ ಆಶಯ=ಜಡಅಂತಃಕರಣವುಳ್ಳ ಧ್ರುವನು ಸ್ವರೂಪಂ=ಸ್ವತಂತ್ರನಾದ ಪರಮಾತ್ಮನಿಂದ ಅಭಿನ್ನವಾದ ತನ್ನ ಬಿಂಬರೂಪವನ್ನು ಮತ್ತು ತನ್ನ ಆವಿಷ್ಟರೂಪವಾದ ಬ್ರಹ್ಮಾದಿಗಳನ್ನು ಅವರುಂಧಾನಃ=ತನ್ನ ಜ್ಞಾನದೊಳಗಿಟ್ಟು (ಬಿಂಬಸಾಕ್ಷಾತ್ಕಾರ ಮಾಡಿಕೊಂಡು) ಅಸ್ಮಾತ್=ಶ್ರೀಹರಿಯಿಂದ ಅನ್ಯತ್=ಸ್ವತಂತ್ರವಾದ ಅನಿಯತವಾದ ಜಗತ್ತನ್ನು ನ ಐಕ್ಷತ್=ನೋಡಲಿಲ್ಲ. ಅವನಿಂದ ಸೃಷ್ಟ ಅವನಿಂದ ಸ್ಥಾಪಿತ, ಅವನಿಂದ ನಿಯತ, ಅವನಿಂದ ಸಂಹೃತ, ಅವನಿಂದ ಜ್ಞಾಪಿತ, ಅವನಿಂದ ಬದ್ಧ ಅವನಿಂದ ಮೋಚಿತವೆಂದು ತಿಳಿದನು ಎಂದು ಭಾವ.

ಸ್ವಸ್ಯ ರೂಪಂ ಬಿಂಬಂ, ಸ್ವಃ ಸ್ವತಂತ್ರಃ ಪರಮಾತ್ಮಾ ತಸ್ಯ ರೂಪಂ, ಸು ಅರೂಪ=ಸ್ವರೂಪ ಹೀಗೆ ಮೂರು ವಿಗ್ರಹ ಮಾಡಿ ಅರ್ಥ ತಿಳಿಯಬೇಕು. ಅದಕ್ಕೆ ಪ್ರಮಾಣ ಗಾರುಡವಾಕ್ಯ.

**ಭಾಗವತ ತಾತ್ಪರ್ಯ : -**

ಇಲ್ಲಿ ಸ್ವರೂಪಶಬ್ದಕ್ಕೆ ತನ್ನ ರೂಪವೆಂಬ ಅರ್ಥವನ್ನು ನಿರಾಕರಿಸಲು ವಿವಕ್ಷಿತವಾದ ಅರ್ಥವನ್ನು ಹೇಳುವರು -

**ಸ್ವರೂಪಂ ಜೀವಸ್ಯ ಬಿಂಬರೂಪಂ ಪರಮಾತ್ಮಾನಮ್ ।**

**ಭಿನ್ನಸ್ವರೂಪಮಭಿದಂ ಸ್ವರೂಪಂ ತು ದ್ವಿಧಾ ಹರೇಃ ।**
**ಭಿನ್ನಸ್ವರೂಪಂ ಬ್ರಹ್ಮಾದ್ಯಾ ಮತ್ಸ್ಯಾದ್ಯಭಿದಮುಚ್ಯತೇ ॥ ಇತಿ ಗಾರುಡೇ ॥**

ಸ್ವರೂಪಂ ಎಂದರೆ ಜೀವನ ಬಿಂಬರೂಪಿಯಾದ ಪರಮಾತ್ಮನನ್ನು ಎಂದರ್ಥ. ಶ್ರೀಹರಿಯ ಸ್ವರೂಪಶಬ್ದವಾಚ್ಯವಾದುದು ಭಿನ್ನಸ್ವರೂಪ, ಅಭಿನ್ನಸ್ವರೂಪ ಹೀಗೆ ಎರಡು ವಿಧ. ಬ್ರಹ್ಮಾದಿಗಳು ಭಿನ್ನಸ್ವರೂಪರು, ಮತ್ಸ್ಯಾದಿಗಳು ಅಭಿನ್ನಸ್ವರೂಪರು ಎಂದು ಗಾರುಡದಲ್ಲಿದೆ.

ಕೇವಲ ಬಿಂಬರೂಪವೆಂದರೆ ಉತ್ತಮರೆಲ್ಲರೂ ಬಿಂಬರಾಗುವರು. ಹೀಗಾಗಿ ಆಚಾರ್ಯರು ''ಪರಮಾತ್ಮಾನಮ್'' ಎಂದು ಹೇಳಿದ್ದರಿಂದ ಅವರನ್ನು ವ್ಯಾವೃತ್ತಿ ಮಾಡಿದಂತಾಯಿತು. ಪರಮಾತ್ಮಾಭಿನ್ನಬಿಂಬರೂಪವನ್ನು ಎಂದು ಭಾವ. ॥೯॥

ಈ ರೀತಿ ಅಪರೋಕ್ಷಜ್ಞಾನಿಯಾಗಿದ್ದರೂ ಸಹ ಜನರ ಸಹವಾಸವನ್ನು ಬಿಡುವದಕ್ಕಾಗಿ ಅಜ್ಞಾನಿಗೆ ಈ ರೀತಿ ಕಾಣುತ್ತಿದ್ದನು ಎಂದು ಈ ಶ್ಲೋಕದಲ್ಲಿ ಹೇಳಿರುವರು-

**ಜಡಾಂಧಬಧಿರೋನ್ಮತ್ತಮೂಕಾಕೃತಿರತನ್ಮತಿಃ ।**
**ಲಕ್ಷಿತಃ ಪಥಿ ಬಾಲಾನಾಂ ಪ್ರಶಾಂತಾರ್ಚಿರಿವಾನಲಃ ॥೧೦॥**

ಜಡಾಂಧಬಧಿರೋನ್ಮತ್ತಮೂಕಾಕೃತಿಃ ಜಡ=ಅಜ್ಞಾನಿ ಅಂಧ=ಕುರುಡ ಬಧಿರ=ಕಿವುಡ ಉನ್ಮತ್ತ=ಹುಚ್ಚ ಮೂಕ=ಮಾತಾಡಲು ಬಾರದವ ಇವರಂತೆ ಆಕೃತಿಃ=ಆಕಾರವುಳ್ಳವನಾಗಿ ಪ್ರಶಾಂತಾರ್ಚಿಃ=ಶಾಂತವಾದ ಜ್ವಾಲೆಗಳುಳ್ಳ ಅನಲ ಇವ=ಕೆಂಡದಂತೆ (ಬೂದಿ ಮುಚ್ಚಿದ ಕೆಂಡದಂತೆ) ಅತನ್ಮತಿಃ=ಆ ಆ ವಸ್ತುಗಳ ಜ್ಞಾನ ಇಲ್ಲದವನಾಗಿ ಬಾಲಾನಾಂ=ಅಜ್ಞಾನಿಗಳಿಗೆ ಪಥಿ=ಮಾರ್ಗದಲ್ಲಿ ಲಕ್ಷಿತಃ=ತಿಳಿಯಲ್ಪಟ್ಟನು.

ತೇಷಾಂ ಮತಿಃ ತನ್ಮತಿಃ, ನ ತನ್ಮತಿಃ ಅತನ್ಮತಿಃ=ಅವರಂತೆ ಬುದ್ಧಿ ಇದ್ದವನಲ್ಲ. ಭೂದಿಮುಚ್ಚಿದ ಕೆಂಡದಲ್ಲಿ ತಾಪಕಶಕ್ತಿಯು ಹೇಗೆ ಕಾಣದೇ ಇರುವುದೋ ಹಾಗೆ ವಸ್ತುತಃ ತತ್ವಜ್ಞಾನಿಯಾದವನು ಜ್ಞಾನಿಯಂತೆ ತೋರುತ್ತಿರಲಿಲ್ಲ. ಅಥವಾ ಅತನ್ಮತಿಃ ಎಂಬುದಕ್ಕೆ ವಿವೇಕಿಗಳಿಗೆ ಅಕಾರವಾಚ್ಯನಾದ ಭಗವಂತನ ಸಂಸಾರತಾರಕವಾದ ಬುದ್ಧಿಯುಳ್ಳವನು ಹೀಗೂ ಅರ್ಥ. ॥೧೦॥

**ಮತ್ವಾ ತಂ ಜಡಮುನ್ಮತ್ತಂ ಕುಲವೃದ್ಧಾಃ ಸಮಂತ್ರಿಣಃ ।**
**ವತ್ಸರಂ ಭೂಪತಿಂ ಚಕ್ರುರ್ಯವೀಯಾಂಸಂ ಭ್ರಮೇಃ ಸುತಮ್ ॥೧೧॥**

ತಂ=ಉತ್ಕಲನನ್ನು ಜಡಂ ಉನ್ಮತ್ತಂ ಮತ್ವಾ=ದಡ್ಡ ಹುಚ್ಚನೆಂದು ತಿಳಿದು ಸಮಂತ್ರಿಣಃ=ಮಂತ್ರಿಗಳಿಂದ ಸಹಿತರಾದ ಕುಲವೃದ್ಧಾಃ=ವಂಶದ ಹಿರಿಯರು ಭ್ರಮೇಃ ಸುತಂ=ಭ್ರಮಿಯ ಮಗನಾದ, ಯವೀಯಾಂಸಂ=ಚಿಕ್ಕವನಾದ, ವತ್ಸರಂ=ವತ್ಸರ ಎಂಬುವನನ್ನು ಭೂಪತಿಂ ಚಕ್ರುಃ=ರಾಜನನ್ನಾಗಿ ಮಾಡಿದರು.

**ಭಾಗವತ ತಾತ್ಪರ್ಯ :-**

ಹಿರಿಯ ಹೆಂಡತಿ ಇಲೆಯ ಮಗನಾದ ಉತ್ಕಲನು ವಿರಕ್ತನಾದ್ದರಿಂದ ಅವನಿಗೆ ರಾಜ್ಯಭಾರ ಕೊಡದಿದ್ದರೂ ಸಹ, ಚಿಕ್ಕವಳಾದ ಭ್ರಮಿಯ ಮಕ್ಕಳಲ್ಲಿ (ಕಲ್ಪ-ವತ್ಸರ ಇಬ್ಬರಲ್ಲಿ) ಹಿರಿಯನಾದ ಕಲ್ಪನಿಗೆ ರಾಜ್ಯಭಾರ ಕೊಡದೇ ಕಿರಿಯನಾದ ವತ್ಸರನಿಗೆ ರಾಜ್ಯ ಕೊಟ್ಟಿದ್ದೇಕೆ ? ಎಂದರೆ ಅದಕ್ಕೆ ಯುಕ್ತಿಯನ್ನು ಪ್ರಮಾಣದಿಂದಲೇ ತಿಳಿಸುವರು -

ಕಲ್ಪಃ ಕಲ್ಪಾಭಿಮಾನೀ ಸನ್ ಶಿಂಶುಮಾರಾನುಗಃ ಸ್ಥಿತಃ ।
ವತ್ಸರೋ ರಾಜ್ಯಮಕರೋತ್ ಪಿತ್ರಾ ದತ್ತಂ ಮಹಾಬಲಃ ॥ ಇತಿ ಬ್ರಾಹ್ಮೇ ॥
ಚಕ್ರೇ ನಾರಾಯಣಃ ಸಾಕ್ಷಾತ್ ಕಿಂಸ್ತುಘ್ನಃ ಕಲ್ಪಮಾತ್ಮಜಂ । ಇತಿ ಪಾದ್ಮೇ ॥

ಭ್ರಮಿಯ ಜ್ಯೇಷ್ಠಪುತ್ರನಾದ ಕಲ್ಪನು ಕಲ್ಪಕ್ಕೆ ಅಭಿಮಾನಿಯಾಗಿ ಶಿಂಶುಮಾರರೂಪಿ ಶ್ರೀಹರಿಗೆ ಭೃತ್ಯನಾಗಿದ್ದನು. ಮಹಾಬಲಶಾಲಿಯಾದ, ರಾಜ್ಯಪಾಲನೆಗೆ ಆವಶ್ಯಕಗುಣವುಳ್ಳ ವತ್ಸರನು ತಂದೆಯಿಂದ ಕೊಡಲ್ಪಟ್ಟ ರಾಜ್ಯವನ್ನು ಆಳುತ್ತಿದ್ದನು ಎಂದು ಬ್ರಾಹ್ಮಪುರಾಣದಲ್ಲಿ ಹೇಳಿದ್ದಾರೆ. ಶಿಂಶುಮಾರರೂಪೀ ನಾರಾಯಣನು ಧ್ರುವಪುತ್ರನಾದ ಕಲ್ಪನನ್ನು ಪುತ್ರನನ್ನಾಗಿ ಮಾಡಿಕೊಂಡು ತನ್ನಿಂದ ನಿಯಮ್ಯವಾದ ಕಲ್ಪ ಎಂಬ ಕಾಲವಿಶೇಷಕ್ಕೆ ಅಭಿಮಾನಿಯನ್ನಾಗಿ ಮಾಡಿ ಭೃತ್ಯನನ್ನಾಗಿ ಮಾಡಿಕೊಂಡನು ಎಂದು ಪಾದ್ಮಪುರಾಣದಲ್ಲಿದೆ.

**ವ್ಯಾಖ್ಯಾನಗಳ ಕುರಿತಾಗಿ ......**

ಇಲ್ಲಿ ವಂಶಿಧರ ವ್ಯಾಖ್ಯಾನದಲ್ಲಿ ''ಉತ್ಕಲನು ಎಲ್ಲರಕಿಂತ ಹಿರಿಯನು. ಅವನಗಿಂತ ಚಿಕ್ಕವನು ವತ್ಸರನು. ಅವನಿಗಿಂತ ಚಿಕ್ಕವನು ಕಲ್ಪನು ಎಂದು ತಿಳಿಯಬೇಕು. ಇಲ್ಲವಾದರೆ ಕಲ್ಪನನ್ನು ಬಿಟ್ಟು ವತ್ಸರನಿಗೆ ಅಭಿಷೇಕ ಮಾಡುವುದು ಅಸಂಗತವಾಗುವದು'' ಎಂದು ವ್ಯಾಖ್ಯಾನಿಸಿ, ಅವರ ಪ್ರಕಾರ ಹತ್ತನೇ ಅಧ್ಯಾಯದ ಪ್ರಾರಂಭದಲ್ಲಿ (ನಮ್ಮ ಪ್ರಕಾರ ಹನ್ನೊಂದನೇ ಅಧ್ಯಾಯ)

**ಪ್ರಜಾಪತೇರ್ದುಹಿತರಂ ಶಿಂಶುಮಾರಸ್ಯ ವೈ ಧ್ರುವಃ ।**
**ಉಪಯೇಮೇ ಭ್ರಮಿಂ ನಾಮ ತತ್ಸುತೌ ಕಲ್ಪವತ್ಸರೌ ॥೧॥**

ಎಂಬ ಶ್ಲೋಕದ ವಿರೋಧವನ್ನು ಶಂಕಿಸಿ, 'ಅಲ್ಲಿ ಮಕ್ಕಳನ್ನು ಹೇಳಿದೆಯಷ್ಟೆ ಕ್ರಮವಿವಕ್ಷೆ ಇಲ್ಲ, ಇಲ್ಲಿ ಕ್ರಮವಿವಕ್ಷೆ ಇದೆ' ಎನ್ನುವದಾದರೆ ಮುಂದಿನ ಶ್ಲೋಕದಲ್ಲಿ

**ಇಲಾಯಾಮಪಿ ಭಾರ್ಯಾಯಾಂ ವಾಯೋಃ ಪುತ್ರ್ಯಾಂ ಮಹಾಬಲಃ ।**
**ಪುತ್ರಮುತ್ಕಲನಾಮಾನಂ ಯೋಗೇಶ್ವರಮಜೀಜನತ್ ॥೨॥**

ಎಂದು ಹೇಳಿರುವದರಿಂದ ಉತ್ಕಲನು ಎಲ್ಲರಿಗಿಂತ ಚಿಕ್ಕವನಾಗಬೇಕಾಗುವದು ಎಂದು ಬರೆದಿರುವರು.

ಆದರೆ ಇದು ಸರಿಯಲ್ಲ. ಅವರ ಪ್ರಕಾರ ಯೋಗೇಶ್ವರಂ ಎನ್ನುವಲ್ಲಿ ಯೋಷಿದ್ರತ್ನಂ ಎಂದು ಪಾಠವಿರುವದರಿಂದ ಕನ್ಯೆ ಚಿಕ್ಕವಳಾಗುವಳು. ಉತ್ಕಲನಲ್ಲ.

ಅಲ್ಲದೇ ಗೋಸ್ವಾಮಿ ಮುಂತಾದವರು ''ಉತ್ಕಲನು ಹಿರಿಯನಾದರೂ ರಾಜ್ಯಭಾರಕ್ಕೆ ಬೇಕಾದ ಗುಣವಿಲ್ಲದ್ದರಿಂದ ಅವನನ್ನು ಬಿಟ್ಟು ಉತ್ಕಲನಿಗಿಂತ ಚಿಕ್ಕವನಾದ ವತ್ಸರನನ್ನು ರಾಜನನ್ನಾಗಿ ಮಾಡಿದರು'' ಎಂದು ಹೇಳಿ, ಕಲ್ಪನು ವತ್ಸರನಿಗಿಂತ ಹಿರಿಯನಾದರೂ ವರವನ್ನು ಪಡೆದು ಬಂದ ಧ್ರುವನಿಗೆ ಭಗವಂತನ ವಿರಹಾನುತಾಪದಿಂದ ವಿರಕ್ತತಾದಶೆಯಲ್ಲಿ

ಹುಟ್ಟಿದ ಕಲ್ಪನೂ ವಿರಕ್ತನಾದ್ದರಿಂದ ರಾಜ್ಯಕ್ಕೆ ಅರ್ಹನಲ್ಲವೆಂದು ಬರೆದಿರುವರು. ಅದರ ವಿರೋಧವೂ ಬರುವದು.

ಅಲ್ಲದೇ ತಾವೇ ಹೇಳಿದ ಪ್ರಕಾರ ಹೆಂಡತಿಯರನ್ನು ಹೇಳಿರುವರೇ ಹೊರತು ಕ್ರಮ ಹೇಳಿಲ್ಲ. ಮೇಲೆ ಬರೆದಂತೆ ಯಾದವಾರ್ಯರ ಪ್ರಕಾರ ಇಲಾ ಹಿರಿಯ ಹೆಂಡತಿ, ಅವನ ಮಗ ಉತ್ಕಲ ಹಿರಿಯ, ಇನ್ನು ಚಿಕ್ಕವಳಾದ ಭ್ರಮಿಯ ಮಕ್ಕಳಲ್ಲಿ ಕಲ್ಪ ದೊಡ್ಡವ, ವತ್ಸರ ಸಣ್ಣವ ಆದರೂ ಕಲ್ಪನನ್ನು ಶಿಂಶುಮಾರನು ಮಗನನ್ನಾಗಿ ಸ್ವೀಕರಿಸಿ ಕಲ್ಪಾಭಿಮಾನಿಯನ್ನು ಮಾಡಿ ತನ್ನ ಸೇವಕನನ್ನಾಗಿ ಮಾಡಿಕೊಂಡಿದ್ದರಿಂದ ವತ್ಸರನಿಗೆ ರಾಜ್ಯವಾಯಿತು ಎಂದು ಬ್ರಾಹ್ಮ-ಪದ್ಮಪುರಾಣಗಳಿಂದ ತಿಳಿದುಬರುವಾಗ ಕಲ್ಪ ಸಣ್ಣವನೆಂಬ ಕಲ್ಪನೆ ಅಕಲ್ಪನೀಯವೆಂದೆನಿಸುವದು. ॥೧೧॥

**ಸ್ವರ್ವೀಥಿರ್ವತ್ಸರಸ್ಯೇಷ್ಟಾ ಭಾರ್ಯಾಽಸೂತ ಷಡಾತ್ಮಜಾನ್ ।**
**ಪುಷ್ಪಾರ್ಣಂ ತಿಗ್ಮಕೇತುಂ ಚ ಇಷಮೂರ್ಜಂ ವಸುಂ ಜಯಮ್ ॥೧೨॥**

ವತ್ಸರಸ್ಯ=ವತ್ಸರನ ಇಷ್ಟಾ=ಪ್ರಿಯಳಾದ, ಸ್ವರ್ವೀಥಿಃ=ಸ್ವರ್ಗಮಾರ್ಗಕ್ಕೆ ಅಭಿಮಾನಿ-ಯಾದ್ದರಿಂದ ಸ್ವರ್ವೀಥಿ ಎಂದು ನಾಮಉಳ್ಳ ಭಾರ್ಯಾ=ಹೆಂಡತಿಯು ಪುಷ್ಪಾರ್ಣಂ, ತಿಗ್ಮಕೇತುಂ ಇಷಂ, ಊರ್ಜಂ, ವಸುಂ, ಜಯಂ=ಪುಷ್ಪಾರ್ಣ, ತಿಗ್ಮಕೇತು, ಇಷ, ಊರ್ಜ, ವಸು, ಜಯ ಎಂಬ ಷಟ್ ಆತ್ಮಜಾನ್=ಆರು ಜನ ಮಕ್ಕಳನ್ನು ಅಸೂತ=ಹೆತ್ತಳು. ॥೧೨॥

**ಪುಷ್ಪಾರ್ಣಸ್ಯ ಪ್ರಭಾ ಭಾರ್ಯಾ ದೋಷಾ ಚ ದ್ವೇ ಬಭೂವತುಃ ।**
**ಪ್ರಾತರ್ಮಧ್ಯಂದಿನಂ ಸಾಯಮಿತಿ ಹ್ಯಾಸನ್ ಪ್ರಭಾಸುತಾಃ ॥೧೩॥**

ಪುಷ್ಪಾರ್ಣಸ್ಯ=ಪುಷ್ಪಾರ್ಣನಿಗೆ ಪ್ರಭಾ=ಪ್ರಭಾ ಎಂಬ ಭಾರ್ಯಾ=ಹೆಂಡತಿಯು ಚ=ಮತ್ತು ದೊಷಾ=ದೋಷಾ ಎಂಬ ಭಾರ್ಯಾ=ಹೆಂಡತಿಯು ಹೀಗೆ ದ್ವೇ=ಇಬ್ಬರು ಹೆಂಡತಿಯರು ಬಭೂವತುಃ=ಇದ್ದರು. ಪ್ರಾತಃ ಮಧ್ಯಂದಿನಂ ಸಾಯಂ ಇತಿ=ಈ ಹೆಸರಿನ ಮೂರುಜನರು ಪ್ರಭಾಸುತಾಃ=ಪ್ರಭೆಯ ಮಕ್ಕಳು ಆಸನ್=ಇದ್ದರು. ॥೧೩॥

**ಪ್ರದೋಷೋ ನಿಶಿಥೋ ವ್ಯುಷ್ಟ ಇತಿ ದೋಷಾಸುತಾಸ್ತ್ರಯಃ ।**
**ವ್ಯುಷ್ಟಃ ಸುತಂ ಪುಷ್ಕರಿಣ್ಯಾಂ ಸರ್ವತೇಜಸಮಾದಧೇ ॥ ೧೪ ॥**

ಪ್ರದೋಷಃ=ಪ್ರದೋಷನು ನಿಶೀಥಃ=ನಿಶೀಥನು ವ್ಯುಷ್ಟಃ=ವ್ಯುಷ್ಟನು ಇತಿ=ಹೀಗೆ ತ್ರಯಃ=ಮೂರು ಜನರು ದೋಷಾಸುತಾಃ=ದೋಷಾಳ ಮಕ್ಕಳು. ವ್ಯುಷ್ಟಃ=ವ್ಯುಷ್ಟನು ಪುಷ್ಕರಿಣ್ಯಾಂ=ಪುಷ್ಕರಿಣೀ ಎಂಬುವಳಲ್ಲಿ ಸರ್ವತೇಜಸಂ=ಸರ್ವತೇಜಸನೆಂಬ ಸುತಂ= ಮಗನನ್ನು ಆದಧೇ=ಪಡೆದನು.

ಬಹುಶಃ ಇಲ್ಲಿ ಹೇಳಿದ ಪ್ರದೋಷಾದಿ ಮೂರುಜನರು ಆ ಆ ಶಬ್ದಗಳಿಂದ ವಾಚ್ಯವಾದ ವಸ್ತುಗಳಿಗೆ ಅಭಿಮಾನಿಗಳಾಗಿರುವರು.

ಮತ್ತು ಯಾರಿಂದ ಕಥೆ ಮುಂದುವರೆಯುವದೋ ಅವರು ವಂಶಕ್ಕೆ ಕಾರಣರು. ಉಳಿದವರು ಮದುವೆ ಮಾಡಿಕೊಳ್ಳದ ಯೋಗಿಗಳು, ಮಕ್ಕಳಿಲ್ಲದವರು ಎಂದು ತಿಳಿಯಬೇಕು. ಪ್ರಭಾ ಹಗಲಿಗೆ, ದೋಷಾ ರಾತ್ರಿಗೆ ಅಭಿಮಾನಿಗಳು. ಪ್ರಭೆಯ ಮಕ್ಕಳು ಪ್ರಾತಃಕಾಲ-ಮಧ್ಯಾಹ್ನ-ಸಾಯಂಕಾಲಗಳಿಗೆ ಅಭಿಮಾನಿಗಳು. ದೋಷಾಳ ಮಕ್ಕಳು ಮೂರುಸಂಜೆ-ಮಧ್ಯರಾತ್ರಿ-ಬೆಳಗುಜಾವಗಳಿಗೆ ಅಭಿಮಾನಿಗಳು ಮುಂತಾಗಿ ತಿಳಿಯಬೇಕು.

**ಸ ಚಕ್ಷುಃ ಸುತಮಾಕೂತ್ಯಾಂ ಪತ್ನ್ಯಾಂ ಮನುಮವಾಪ ಹ ।**
**ಮನೋರಸೂತ ಮಹಿಷೀ ವಿರಜಾನ್ (ವೈರಾಜಾ) ನಡ್ವಲಾ ಸುತಾನ್ ॥೧೫॥**

ಸಃ=ಸರ್ವತೇಜನು ಪತ್ನ್ಯಾಂ=ತನ್ನ ಹೆಂಡತಿಯಾದ ಆಕೂತ್ಯಾಂ=ಆಕೂತಿಯಲ್ಲಿ ಚಕ್ಷುಃ=ಚಕ್ಷು ಎಂಬ ಮನುಂ=ಮನುವನ್ನು ಸುತಂ=ಮಗನಾಗಿ ಅವಾಪ=ಪಡೆದನು. ಮನೋಃ=ಮನುವಿನ ಮಹಿಷೀ=ಪತ್ನಿಯಾದ ನಡ್ವಲಾ=ನಡ್ವಲೆಯು *ವಿರಜಾನ್=ಶುದ್ಧರಾದ ಸುತಾನ್=ಮಕ್ಕಳನ್ನು ಅಸೂತ=ಪ್ರಸವಿಸಿದಳು.

*ವೈರಾಜಾ ಎಂಬ ಪಾಠದಲ್ಲಿ ವೈರಾಜಾ=ವೈರಾಜಪುತ್ರಿಯಾದ ನಡ್ವಲಾ=ನಡ್ವಲೆಯು ಎಂದು ಅನ್ವಯ ಮಾಡಬೇಕು. ॥೧೫॥

**ಪುರುಕುತ್ಸಂ ತ್ರಿತಂ ದ್ಯುಮ್ನಂ ಸತ್ಯವ್ರತಮೃತವ್ರತಮ್ ।**
**ಅಗ್ನಿಷ್ಟೋಮಮತೀರಾತ್ರಂ ಸುದ್ಯುಮ್ನಂ ಶಿಬಿಮುಲ್ಮುಕಮ್ ॥೧೬॥**

ಪುರುಕುತ್ಸ, ತ್ರಿತ, ದ್ಯುಮ್ನ, ಸತ್ಯವ್ರತ, ಋತವ್ರತ, ಅಗ್ನಿಷ್ಟೋಮ, ಅತಿರಾತ್ರ, ಸುದ್ಯುಮ್ನ, ಶಿಬಿ, ಉಲ್ಮುಕ ಎಂಬ ಹತ್ತು ಜನರು ನಡ್ವಲಾಳಲ್ಲಿ ಜನಿಸಿದ ಚಕ್ಷುವಿನ ಮಕ್ಕಳು.

ಕೆಲವರು ಪುರು, ಕುತ್ಸ, ಋತ, ವ್ರತ ಎಂದು ವಿಭಾಗ ಮಾಡಿ ಹನ್ನೆರಡು ಜನ ಮಕ್ಕಳು ಎಂದು ವ್ಯಾಖ್ಯಾನಿಸಿರುವರು. ॥೧೬॥

**ಉಲ್ಮುಕೋಽಜನಯತ್ಪುತ್ರಾನ್ ಪುಷ್ಕರಿಣ್ಯಾಂ ಷಡುತ್ತಮಾನ್ ।**
**ಅಂಗಂ ಸುನಾಸಮಾಖ್ಯಾತಿಂ ಕ್ರತುಮಾಂಗಿರಸಂ ಗಯಮ್ ॥೧೭॥**

ಉಲ್ಮುಕಃ=ಉಲ್ಮುಕನು ಪುಷ್ಕರಿಣ್ಯಾಂ=ಪುಷ್ಕರಿಣೀ ಎಂಬುವಳಲ್ಲಿ ಉತ್ತಮಾನ್=ಶ್ರೇಷ್ಠರಾದ, ಅಂಗಂ, ಸುನಾಸಂ, ಆಖ್ಯಾತಿಂ ಕ್ರತುಂ, ಆಂಗಿರಸಂ, ಗಯಮ್=ಅಂಗ,

ಸುನಾಸ, ಆಖ್ಯಾತಿ, ಕ್ರತು, ಆಂಗಿರ, ಗಯ ಎಂಬ ಷಟ್=ಆರುಜನ ಪುತ್ರಾನ್=ಮಕ್ಕಳನ್ನು ಅಜನಯತ್=ಹುಟ್ಟಿಸಿದನು. ।।೧೭।।

**ಸುನೀಥಾऽಂಗಸ್ಯ ಯಾ ಪತ್ನೀ ಸುಷುವೇ ವೇನಮುಲ್ಬಣಮ್ ।**
**ಯದ್ದೌಃಶೀಲ್ಯಾತ್ಸ ರಾಜರ್ಷಿರ್ನಿರ್ವಿಣ್ಣೋ ನಿರಗಾತ್ಪುರಾತ್ ।।೧೮।।**

ಅಂಗಸ್ಯ=ಅಂಗರಾಜನ ಪತ್ನೀ=ಹೆಂಡತಿಯಾದ ಯಾ ಸುನೀಥಾ=ಯಾವ ಸುನೀಥಾ ಎಂಬವಳೋ ಸಾ=ಅವಳು ಯದ್ದೌಃಶೀಲ್ಯಾತ್=ಯಾವನ ದುರ್ನಡತೆಯಿಂದ ಸಃ ರಾಜರ್ಷಿಃ=ಆ ಅಂಗರಾಜನು ನಿರ್ವಿಣ್ಣಃ=ವಿರಕ್ತನಾಗಿ ಪುರಾತ್ ನಿರಗಾತ್=ಊರು ಬಿಟ್ಟು ಹೋದನೋ ತಂ=ಅಂತಹ ಉಲ್ಬಣಂ=ಕ್ರೂರನಾದ ವೇನಂ=ವೇನ ಎಂಬುವನನ್ನು ಸುಷುವೇ=ಹೆತ್ತಳು. ।।೧೮।।

**ಯಮಂಗ ಶೇಪುಃ ಕುಪಿತಾ ವಾಗ್ವಜ್ರಾ ಮುನಯಃ ಕಿಲ ।**
**ಗತಾಸೋಸ್ತಸ್ಯ ಭೂಯಸ್ತೇ ಮಮಂಥುರ್ದಕ್ಷಿಣಂ ಕರಮ್ ।। ೧೯ ।।**

ಹೇ ಅಂಗ=ಎಲೋ ವಿದುರನೇ ! ಕುಪಿತಾಃ=ಸಿಟ್ಟಾದ ವಾಗ್ವಜ್ರಾಃ=ವಾಕ್ಯವೇ ವಜ್ರಾಯುಧವಾಗಿವುಳ್ಳ ಮುನಯಃ=ಋಷಿಗಳು ಯಂ=ಯಾವ ವೇನನನ್ನು ಶೇಪುಃ= ಮೃತನಾಗು ಎಂದು ಶಪಿಸಿದರೋ, ಅಂತಹ ಭೂಯಃ=ಮತ್ತೆ ಗತಾಸೋಃ=ಮೃತನಾದ ತಸ್ಯ=ವೇನನ ದಕ್ಷಿಣಂ ಕರಂ=ಬಲಗೈನ್ನು ತೇ=ಮುನಿಗಳು ಮಮಂಥುಃ=ಕಡೆದರು. ।।೧೯।।

ಮಥನಕ್ಕೆ ಕಾರಣ ಹೇಳುವರು -

**ಅರಾಜಕೇ ತದಾ ಲೋಕೇ ದಸ್ಯುಭಿಃ ಪೀಡಿತಾಃ ಪ್ರಜಾಃ ।**
**ಜಾತೋ ನಾರಾಯಣಾಂಶೇನ ಪೃಥುಃ ಪೃಥುಪರಾಕ್ರಮಃ ।। ೨೦ ।।**

ಯದಾ=ಯಾವಾಗ ಲೋಕೇ=ರಾಷ್ಟ್ರವು ಅರಾಜಕೇ=ರಾಜರಹಿತವಾಗುತ್ತಿರಲು (ರಾಜನಿಲ್ಲದಂತಾಗಲು) ಪ್ರಜಾಃ=ಪ್ರಜೆಗಳು ದಸ್ಯುಭಿಃ=ಕಳ್ಳರಿಂದ ಪೀಡಿತಾಃ= ತೊಂದರೆಗೀಡಾದರೋ ತದಾ=ಆಗ ಪೃಥುಪರಾಕ್ರಮಃ=ಬಹಳ ಪರಾಕ್ರಮವುಳ್ಳ ಪೃಥುಃ=ಪೃಥುಚಕ್ರವರ್ತಿಯು ನಾರಾಯಣಾಂಶೇನ=ಶ್ರೀಹರಿಯ ಆವೇಶವುಳ್ಳವನಾಗಿ ಜಾತಃ=ಹುಟ್ಟಿದನು. ।।೨೦।।

**ತಸ್ಯ ಶೀಲನಿಧೇಃ ಸಾಧೋರ್ಬ್ರಹ್ಮಣ್ಯಸ್ಯ ಮಹಾತ್ಮನಃ ।**
**ರಾಜ್ಞಃ ಕಥಮಭೂದ್ ದುಷ್ಟಾ ಪ್ರಜಾ ಯದ್ವಿಮನಾ ಯಯೌ ।।೨೧।।**

ಶೀಲನಿಧೇಃ=ಒಳ್ಳೆಯ ಸ್ವಭಾವದವನಾದ, ಸಾಧೋಃ=ಸದಾಚಾರನಿಷ್ಠನಾದ್ದರಿಂದ ಶುದ್ಧಾಂತಃಕರಣನಾದ, ಬ್ರಹ್ಮಣ್ಯಸ್ಯ=ಬ್ರಾಹ್ಮಣಭಕ್ತನಾದ, ಮಹಾತ್ಮನಃ=ಅತ್ಯಂತ ಉದಾರವಾದ

ಮನಸ್ಸುಳ್ಳ, ತಸ್ಯ ರಾಜ್ಞಃ=ಆ ಅಂಗರಾಜನಿಗೆ ಯದ್ವಿಮನಾಃ=ಯಾವ ಮಗನಿಂದ ವಿರಕ್ತನಾಗಿ ಅಂಗರಾಜನು ಯಯೌ=ಊರು ಬಿಟ್ಟು ತೆರಳಿದನೋ ಅಂತಹ ದುಷ್ಟಾ ಪ್ರಜಾ=ಕೆಟ್ಟ ಮಗನು ಕಥಂ ಅಭೂತ್=ಹೇಗಾದನು ? ।।೨೧।।

**ಕಿಂ ಚಾಂಹೋ ವೇನಮುದ್ದಿಶ್ಯ ಬ್ರಹ್ಮದಂಡಮಯೂಯುಜನ್ ।**
**ದಂಡವ್ರತಧರೇ ರಾಜ್ಞಿ ಮುನಯೋ ಧರ್ಮಕೋವಿದಾಃ ।।೨೨।।**

ಕಿಂಚ=ಮತ್ತು ದಂಡವ್ರತಧರೇ=ದುಷ್ಟರಿಗೆ ಶಿಕ್ಷಿಸುವುದೇ ವ್ರತವಾಗಿ ಉಳ್ಳ ರಾಜ್ಞಿ=ರಾಜನಲ್ಲಿ ಧರ್ಮಕೋವಿದಾಃ=ಧರ್ಮವನ್ನು ತಿಳಿದ ಮುನಯಃ=ಋಷಿಗಳು ಅಂಹಃ ಉದ್ದಿಶ್ಯ=ಅಪರಾಧವನ್ನು ಗುರುತಿಸಿ ಬ್ರಹ್ಮದಂಡಂ ಅಯೂಯುಜನ್=ಬ್ರಹ್ಮದಂಡದ ಪ್ರಯೋಗ ಮಾಡಿದರು. ಶಾಪವಿತ್ತರು. ಅಹೋ=ಕಷ್ಟವು.

ಜ್ಞಾನಿಗಳಾದ ಋಷಿಗಳು ವೇನನ ಯಾವ ಅಪರಾಧವನ್ನು ಕಂಡು ಶಪಿಸಿದರು ? ಇನ್ನು ಅವನು ಪ್ರಜೆಗಳಿಗೆ ಮಾಡುವ ಉಗ್ರಶಾಸನವನ್ನು ಕಂಡು ಶಪಿಸಿರಬಹುದೇ ? ಅದು ಹೇಗೆ ಸಾಧ್ಯ ? ಅದು ಅವನ ಧರ್ಮ ತಾನೇ ? ಅಂದಮೇಲೆ ಧರ್ಮಕೋವಿದರಾದ ಮುನಿಗಳು ಶಪಿಸಿದ್ದು ಅನುಚಿತವೆಂದು ಭಾವ. ।।೨೨।।

ಹಿಂದಿನ ಶ್ಲೋಕಗಳಲ್ಲಿ ಮುನಿಗಳು ಶಾಪವಿತ್ತದ್ದು ಅನುಚಿತವೆಂದು ತಿಳಿಸಿ, ವೇನ ರಾಜನಿಂದ ಪೀಡಿತರಾದ ಪ್ರಜೆಗಳಿಂದ ಪ್ರೇರಿತರಾದ ಮುನಿಗಳು ಶಪಿಸಿರಬಹುದು ಎಂದು ಶಂಕಿಸಿ, ಪ್ರಜೆಗಳಿಗೂ ರಾಜನ ಅವಜ್ಞೆ ಉಚಿತವಲ್ಲವೆಂದು ಈ ಶ್ಲೋಕದಲ್ಲಿ ಹೇಳುವರು -

**ನಾವಧ್ಯೇಯಃ ಪ್ರಜಾಪಾಲಃ ಪ್ರಜಾಭಿರಘವಾನಪಿ ।**
**ಯದಸೌ ಲೋಕಪಾಲಾನಾಂ ಬಿಭರ್ತ್ಯೋಜಃ ಸ್ವತೇಜಸಾ ।।೨೩।।**

**ಏತದಾಖ್ಯಾಹಿ ಮೇ ಬ್ರಹ್ಮನ್ ಸುನೀಥಾತ್ಮಜಚೇಷ್ಟಿತಮ್ ।**
**ಶ್ರದ್ದಧಾನಾಯ ಭಕ್ತಾಯ ತ್ವಂ ಪರಾವರವಿತ್ತಮಃ ।।೨೪।।**

ಪ್ರಜಾಪಾಲಃ ಅಘವಾನಪಿ=ಪ್ರಜಾರಕ್ಷಕನಾದ ರಾಜನು ಕ್ರೌರ್ಯ ಮುಂತಾದ ಅಪರಾಧ(ಪಾಪ)ವುಳ್ಳವನಾಗಿದ್ದರೂ ಪ್ರಜಾಭಿಃ=ಪ್ರಜೆಗಳಿಂದ ನ ಅವಧ್ಯೇಯಃ=ತಿರಸ್ಕರಿಸಲು ಯೋಗ್ಯನಲ್ಲ. ಯತ್=ಯಾವ ಕಾರಣ ಅಸೌ=ರಾಜನು ಲೋಕಪಾಲಾನಾಂ=ಇಂದ್ರಾದಿಗಳ ಓಜಃ=ವೃಷ್ಟ್ಯಾದಿಸಾಮರ್ಥ್ಯವನ್ನು ಸ್ವತೇಜಸಾ=ತನ್ನ ಪ್ರಭಾವದಿಂದ ಬಿಭರ್ತಿ=ಧರಿಸುವನು.

ಅಂದರೆ ಮಳೆ ಬರದಿರುವಾಗ ಮಳೆಯನ್ನು ತರಿಸಿ ಪರಮೋಪಕಾರ ಮಾಡುವದರಿಂದ ರಾಜನನ್ನು ತಿರಸ್ಕರಿಸಿದರೆ ಕೃತಘ್ನನಾಗುವದರಿಂದ ಪಾಪ ಬರುವದೆಂದರ್ಥ.

ಆದ್ದರಿಂದ ಬ್ರಹ್ಮನ್=ಮೈತ್ರೇಯರೇ ! ತ್ವಂ=ನೀವು ಪರಾವರವಿತ್ತಮಃ=ಪರಾಪರತತ್ವ ತಿಳಿದವರಲ್ಲಿ ಶ್ರೇಷ್ಠರು. ಶ್ರದ್ಧಧಾನಾಯ=ಆದರದಿಂದ ಕೇಳುವ ಭಕ್ತಾಯ=ಭಕ್ತನಾದ ಮೇ=ನನಗೆ ಏತತ್=ಯಾವುದರಿಂದ ಮುನಿಗಳು ಕುಪಿತರಾಗಿ ಶಪಿಸಿದರೋ ಅಂತಹ ಸುನೀಥಾತ್ಮಜಚೇಷ್ಟಿತಂ=ಸುನೀಥಾಳ ಮಗನಾದ ವೇನನ ಆಚರಣೆಯನ್ನು ಆಖ್ಯಾಹಿ=ಹೇಳಿರಿ. ।।೨೩।।೨೪।।

**ಮೈತ್ರೇಯ ಉವಾಚ -**

**ಅಂಗೋಽಶ್ವಮೇಧಂ ರಾಜರ್ಷಿರಾಜಹಾರ ಮಹಾಕ್ರತುಮ್ ।**
**ನಾಜಗ್ಮುರ್ದೇವತಾಸ್ತಸ್ಮಿನ್ನಾಹೂತಾ ಬ್ರಹ್ಮವಾದಿಭಿಃ ।।೨೫ ।।**

ರಾಜರ್ಷಿಃ ಅಂಗಃ=ರಾಜರ್ಷಿಯಾದ ಅಂಗನು ಅಶ್ವಮೇಧಂ=ಅಶ್ವಮೇಧ ಎಂಬ ಹೆಸರಿನ ಮಹಾಕ್ರತುಂ=ಶ್ರೇಷ್ಠಯಜ್ಞವನ್ನು ಆಜಹಾರ=ನಡೆಸಿದನು. ಬ್ರಹ್ಮವಾದಿಭಿಃ= ಮಂತ್ರಜ್ಞರಿಂದ ಆಹೂತಾಃ=ಆಹ್ವಾನಿಸಲ್ಪಟ್ಟ ದೇವತಾಃ=ದೇವತೆಗಳು ತಸ್ಮಿನ್=ಆ ಯಜ್ಞದಲ್ಲಿ ನ ಜಗ್ಮುಃ=ಬರಲಿಲ್ಲ. ।।೨೫।।

**ತಮೂಚುರ್ವಿಸ್ಮಿತಾಸ್ತಾತ ಯಜಮಾನಮಥರ್ತ್ವಿಜಃ ।**
**ಹವೀಂಷಿ ಹೂಯಮಾನಾನಿ ನ ತೇ ಗೃಹ್ಣಂತಿ ದೇವತಾಃ ।।೨೬।।**

ತಾತ=ವಿದುರನೇ ! ಅಥ=ಅನಂತರ ವಿಸ್ಮಿತಾಃ=ಆಶ್ಚರ್ಯಚಕಿತರಾದ ಋತ್ವಿಜಃ= ಋತ್ವಿಜರು (ಪುರೋಹಿತರು) ತಂ ಯಜಮಾನಂ=ಯಜಮಾನನಾದ ಅಂಗನನ್ನು ಕುರಿತು ಹೂಯಮಾನಾನಿ=ಹೋಮಮಾಡಲ್ಪಟ್ಟ ತೇ ಹವೀಂಷಿ=ನಿನ್ನ ಹವಿಸ್ಸುಗಳನ್ನು ದೇವತಾಃ=ದೇವತೆಗಳು ನ ಗೃಹ್ಣಂತಿ=ಸ್ವೀಕರಿಸುತ್ತಿಲ್ಲ ಎಂದು ಊಚುಃ=ಹೇಳಿದರು. ।।೨೬।।

ಹವಿಸ್ಸು ಮುಂತಾದವುಗಳಲ್ಲಿ ದೋಷ ಉಂಟೇ ? ಎಂಬ ಶಂಕೆಗೆ ಉತ್ತರಿಸುವರು-

**ರಾಜನ್ ಹವೀಂಷ್ಯದುಷ್ಟಾನಿ ಶ್ರದ್ಧಯಾಽಽಸಾದಿತಾನಿ ತೇ ।**
**ಛಂದಾಂಸ್ಯಯಾತಯಾಮಾನಿ ಯೋಜಿತಾನಿ ಧೃತವ್ರತೈಃ ।।೨೭।।**

ರಾಜನ್=ಅಂಗನೇ ! ತೇ=ನಿನ್ನಿಂದ ಶ್ರದ್ಧಯಾ=ಆಸ್ತಿಕ್ಯಬುದ್ಧಿಯಿಂದ ಆಸಾದಿತಾನಿ= ಸಂಪಾದಿಸಿದ ಹವೀಂಷಿ=ಹವಿಸ್ಸುಗಳು ಅದುಷ್ಟಾನಿ=ದೋಷರಹಿತವಾಗಿವೆ. ಛಂದಾಂಸಿ= ವೇದಗಳು ಆಯಾತಯಾಮಾನಿ=ಸಾಮರ್ಥ್ಯವನ್ನು ಕಳೆದುಕೊಂಡಿಲ್ಲ. ಧೃತವ್ರತೈಃ= ನಿಯಮನಿಷ್ಠರಾದ ನಮ್ಮಿಂದ ಯೋಜಿತಾನಿ=ಪ್ರಯುಕ್ತವಾಗಿವೆ. ।।೨೭।।

ರಾಜನಲ್ಲಿ ಹವಿಸ್ಸಿನಲ್ಲಿ ಮಂತ್ರಗಳಲ್ಲಿ ಋತ್ವಿಜರಲ್ಲಿ ದೋಷವಿಲ್ಲವೆಂದಂತಾಯಿತು. ಹಾಗಾದರೆ ಯಾವ ಅಪರಾಧದಿಂದ ದೇವತೆಗಳು ಹವಿಸ್ಸನ್ನು ಸ್ವೀಕರಿಸುತ್ತಿಲ್ಲ ? ವಿಚಾರಿಸಿ ಎಂದರೆ ಹೇಳುವರು -

**ನ ವಿದಾಮೇಹ ದೇವಾನಾಂ ಹೇಲನಂ ವಯಮಣ್ವಪಿ ।**
**ಯನ್ನ ಗೃಹ್ಣಂತಿ ಭಾಗಾನ್ ಸ್ವಾನ್ ಯೇ ದೇವಾಃ ಕರ್ಮಸಾಕ್ಷಿಣಃ ॥ ೨೮ ॥**

ಯೇ ಕರ್ಮಸಾಕ್ಷಿಣಃ ದೇವಾಃ=ಕರ್ಮಾಂಗರಾದ ಮುಖ್ಯದೇವತೆಗಳು ಯತ್=ಯಾವ ಅಪರಾಧದಿಂದ ಸ್ವಾನ್ ಭಾಗಾನ್=ತಮ್ಮ ಭಾಗವನ್ನು ನ ಗೃಹ್ಣಂತಿ=ಸ್ವೀಕರಿಸುತ್ತಿಲ್ಲವೋ ದೇವಾನಾಂ ತತ್ ಹೇಲನಂ=ದೇವತೆಗಳ ವಿಷಯದಲ್ಲಿ ಆಗಿರುವ ಆ ಅಪರಾಧವನ್ನು ವಯಂ=ನಾವು ಇಹ=ಈ ಯಜ್ಞದಲ್ಲಿ ಅಣ್ವಪಿ=ಸ್ವಲ್ಪವೂ ಕೂಡ ನ ವಿದಾಮ=ತಿಳಿಯಲಾರೆವು.

**ಮೈತ್ರೇಯ ಉವಾಚ -**

**ಅಂಗೋ ದ್ವಿಜವಚಃ ಶ್ರುತ್ವಾ ಯಜಮಾನಃ ಸುದುರ್ಮನಾಃ ।**
**ತತ್ಪ್ರಷ್ಟುಂ ವ್ಯಸೃಜದ್ವಾಚಂ ಸದಸ್ಯಾಂಸ್ತದನುಜ್ಞಯಾ ॥೨೯॥**

ಯಜಮಾನಃ=ಯಜ್ಞದ ಫಲಾಭಿಲಾಷಿಯಾದ ಅಂಗಃ=ಅಂಗರಾಜನು ದ್ವಿಜವಚಃ= ಋತ್ವಿಜರ ಮಾತನ್ನು ಶ್ರುತ್ವಾ=ಕೇಳಿ ಸುದುರ್ಮನಾಃ ಜಾತಃ=ಖಿನ್ನವಾದ ಮನಸ್ಸುಳ್ಳವನಾದನು. ತದನುಜ್ಞಯಾ=ಋತ್ವಿಜರ (ಅಪ್ಪಣೆಯಿಂದ) ಒಪ್ಪಿಗೆಯಿಂದ ಸದಸ್ಯಾನ್=ಸಭಿಕರನ್ನು ಕುರಿತು ತತ್‌ಪ್ರಷ್ಟುಂ=ದೇವತೆಗಳು ಬರದಿರಲು ಕಾರಣವಾದ ತನ್ನ ದೋಷವನ್ನು ಕೇಳಲು ವಾಚಂ ವ್ಯಸೃಜತ್=ಯಜ್ಞದಲ್ಲಿ ಮೌನಧಾರಣ ಮಾಡಿದ್ದರೂ ಮಾತನಾಡಿದನು. ॥೨೯॥

**ನಾಗಚ್ಛಂತ್ಯಾಹುತಾ ದೇವಾ ನ ಗೃಹ್ಣಂತಿ ಗ್ರಹಾನಿಹ ।**
**ಸದಸಸ್ಪತಯೋ ಬ್ರೂತ ಕಿಮವದ್ಯಂ ಮಯಾ ಕೃತಮ್ ॥೩೦॥**

ಹೇ ಸದಸಸ್ಪತಯಃ=ಹೇ ಸಭ್ಯರೇ (ಸಭಿಕರೇ) ? ಆಹುತಾಃ=ಆಹ್ವಾನಿತರಾದ ದೇವಾಃ=ದೇವತೆಗಳು ಇಹ=ನನ್ನ ಯಜ್ಞದಲ್ಲಿ ನ ಆಗಚ್ಛಂತಿ=ಬರುತ್ತಿಲ್ಲ. ಗ್ರಹಾನ್= ಸೋಮಪಾತ್ರಗಳನ್ನು ನ ಗೃಹ್ಣಂತಿ=ಸ್ವೀಕರಿಸುತ್ತಿಲ್ಲ. ಮಯಾ=ನನ್ನಿಂದ ಕಿಂ ಅವದ್ಯಂ ಕೃತಂ=ಅವರು ಬರದಿರಲು ಕಾರಣವಾದ ಯಾವ ಅಪರಾಧ ಮಾಡಲ್ಪಟ್ಟಿದೆ ? ಭ್ರೂತ=ಅದನ್ನು ನೀವು ಹೇಳಿರಿ. ॥೩೦॥

ರಾಜನಿಂದ ಪ್ರಶ್ನಿಸಲ್ಪಟ್ಟ ಸಭಿಕರು ಉತ್ತರಿಸುವರು-

**ಸದಸ್ಯಾ ಊಚುಃ -**

**ನರದೇವೇಹ ಭವತೋ ನಾವದ್ಯಂ ಹಿ ಮನಾಕ್ ಸ್ಥಿತಮ್ ।**
**ಅಸ್ತ್ಯೇಕಂ ಪ್ರಾಕ್ತನಮಘಂ ಯದಿಹೇದೃಕ್ತ್ವಮಪ್ರಜಃ ।।೩೦।।**

ಹೇ ನರದೇವ=ರಾಜನೇ ! ಇಹ=ಈ ಜನ್ಮದಲ್ಲಿ ಭವತಃ=ನಿನ್ನ ಅವದ್ಯಂ=ಅಪರಾಧವು ಮನಾಕ್=ಸ್ವಲ್ಪವೂ ನ ಸ್ಥಿತಂ=ಉಳಿದಿಲ್ಲ (ಕಥಂಚಿತ್ ಆದರೂ ಪ್ರಾಯಶ್ಚಿತ್ತಾದಿಗಳಿಂದ ಅದನ್ನು ಕಳೆದುಕೊಳ್ಳುವ ಸ್ವಭಾವ ರಾಜನದು.) ಆದರೆ ಯತ್=ಯಾವ ಕಾರಣ ಈದೃಕ್ ತ್ವಂ=ಧಾರ್ಮಿಕನಾದ ನೀನು ಅಪ್ರಜಃ=ಪುತ್ರರಹಿತನೋ ತತ್=ಆ ಕಾರಣ ಪ್ರಾಕ್ತನಂ ಏಕಂ ಅಘಂ ಅಸ್ತಿ=ಅದಕ್ಕೆ ಕಾರಣವಾದ ಹಿಂದಿನ ಜನ್ಮದ ಬಾಲಹತ್ಯಾ ಎಂಬ ಒಂದು ದೋಷವಿದೆ ಎಂದು ತಿಳಿಸುತ್ತದೆ. ।।೩೦।।

**ತಥಾ ಸಾಧಯ ಭದ್ರಂ ತೇ ಆತ್ಮಾನಂ ಸಪ್ರಜಂ (ಸುಪ್ರಜಂ) ನೃಪ ।**
**ಇಷ್ಟಸ್ತೇ ಪುತ್ರಕಾಮಸ್ಯ ಪುತ್ರಂ ದಾಸ್ಯತಿ ಯಜ್ಞಭುಕ್ ।।೩೧।।**

ಹೇ ನೃಪ=ರಾಜನೇ ! ತಥಾ=ಹೇಗಿದ್ದರೆ ದೇವತೆಗಳು ಹವಿಸ್ಸನ್ನು ಸ್ವೀಕರಿಸುವರೋ ಹಾಗೆ ಆತ್ಮಾನಂ=ನಿನ್ನನ್ನು (ಸುಪ್ರಜಂ=ಒಳ್ಳೆಯ ಪ್ರಜೆ ಉಳ್ಳವನನ್ನಾಗಿ) ಸಪ್ರಜಂ=ಪುತ್ರಸಹಿತ-ನಾಗುವಂತೆ ಸಾಧಯ=ಮಾಡು. ತತಃ=ಅದರಿಂದ ತೇ ಭದ್ರಂ=ನಿನಗೆ ಕಲ್ಯಾಣವಾಗುವದು. ಅದು ಹೇಗೆ ಎಂದರೆ, ಪುತ್ರಕಾಮಸ್ಯ=ಮಕ್ಕಳನ್ನು ಇಚ್ಛಿಸುವ ತೇ=ನಿನಗೆ ಇಷ್ಟಃ=ಯಜ್ಞದಿಂದ ಪೂಜಿತನಾದ ಯಜ್ಞಭುಕ್=ಯಜ್ಞಭೋಕ್ತೃವಾದ ಶ್ರೀಹರಿಯು ಪುತ್ರಂ ದಾಸ್ಯತಿ=ಮಕ್ಕಳನ್ನು ಕೊಡುವನು. ।।೩೧।।

**ಯಥಾ ಸ್ವಭಾಗಧೇಯಾನಿ ಗ್ರಹೀಷ್ಯಂತಿ ದಿವೌಕಸಃ ।**
**ಯದ್ಯಜ್ಞಪುರುಷಃ ಸಾಕ್ಷಾದಪತ್ಯಾಯ ಹರಿರ್ವೃತಃ ।।೩೨।।**

ತಥಾಸತಿ=ಮಕ್ಕಳಾದಾಗ ದಿವೌಕಸಃ=ದೇವತೆಗಳು ಸ್ವಭಾಗಧೇಯಾನಿ=ತಮ್ಮ ತಮ್ಮ ಭಾಗಗಳನ್ನು ಗ್ರಹಿಷ್ಯಂತಿ=ಸ್ವೀಕರಿಸುವರು. ಯತ್=ಯಾವ ಕಾರಣ ಯಜ್ಞಪುರುಷಃ ಹರಿಃ=ಯಜ್ಞನಿಯಾಮಕನಾದ ಶ್ರೀಹರಿಯು ಅಪತ್ಯಾಯ=ಮಕ್ಕಳಿಗಾಗಿ ಸಾಕ್ಷಾತ್ ವೃತಃ=ದೇವತೆಗಳ ದ್ವಾರವಲ್ಲದೇ ಸ್ವೀಕೃತನಾಗಿದ್ದಾನೆ, ಆಹ್ವಾನಿತನಾಗಿದ್ದಾನೆ ಎಂದು ಅರ್ಥ. ಭಗವಂತನು ಪ್ರಸನ್ನನಾದರೆ ಅವನ ಪರಿವಾರರಾದ ದೇವತೆಗಳು ತಮ್ಮ ತಮ್ಮ ಭಾಗಗಳನ್ನು ಸ್ವೀಕರಿಸದೇ ಇರಲಾರರು ಎಂದು ಭಾವ.

'ಸರ್ವಪಾಪ್ಮಾನಂ ತರತಿ ಬ್ರಹ್ಮಹತ್ಯಾಂ ಯೋ ಅಶ್ವಮೇಧೇನ ಯಜತೇ' ಜನ್ಮಾಂತರದಲ್ಲಿ ಮಾಡಿದ ಪಾಪವೂ ಅಶ್ವಮೇಧದಿಂದ ಪರಿಹಾರವಾಗುವುದು ಎಂದು ಶ್ರುತಿಯಲ್ಲಿ

ಹೇಳಿದೆಯಲ್ಲ ? ಎಂದು ಶಂಕಿಸಿ, ನಿಜವೇ. ಅಶ್ವಮೇಧದಿಂದ ಸರ್ವಪಾಪನಿವೃತ್ತಿ-ಯಾಗುವದು ಸತ್ಯ. ಆದರೆ 'ನಾಪುತ್ರಸ್ಯ ಲೋಕೋಽಸ್ತಿ' ಎಂಬ ಶ್ರುತಿಗೆ ಅನುಸಾರವಾಗಿ ಎಲ್ಲಿಯವರೆಗೆ ನಿನಗೆ ಮಕ್ಕಳಾಗುವದಿಲ್ಲ ಅಲ್ಲಿಯವರೆಗೆ ದೇವತೆಗಳು ಹವಿಸ್ಸನ್ನು ಸ್ವೀಕರಿಸುವದಿಲ್ಲ. ಅವರು ಹವಿಸ್ಸನ್ನು ಸ್ವೀಕರಿಸದ ಹೊರತು ಅಶ್ವಮೇಧಯಾಗ ಆಗುವದಿಲ್ಲ. ಅಶ್ವಮೇಧವಿಲ್ಲದೇ ಪಾಪ ಹೋಗುವದಿಲ್ಲ. ಪಾಪ ಹೋಗದೇ ಮಕ್ಕಳಾಗುವದಿಲ್ಲ. ಹೀಗೆ ಅನ್ಯೋನ್ಯಾಶ್ರಯ ಬರುವದು. ಆ ಕಾರಣ ದೋಷ ಹೋಗಿ ಕಾರ್ಯಸಿದ್ಧಿ ಆಗಲಾರದು. ಕಾರಣ ಪುತ್ರಕಾಮೇಷ್ಟಿಯಾಗ ಮಾಡು. ಆಗ ಶ್ರೀಹರಿ ಮಕ್ಕಳನ್ನು ಕೊಡುವನು. ಆಗ ದೇವತೆಗಳು ಹವಿಸ್ಸು ಸ್ವೀಕರಿಸುವರು ಎಂದು ಹೇಳಿದಂತಾಯಿತು.

**ಭಾಗವತ ತಾತ್ಪರ್ಯ -**

ಇದರಿಂದ ಮಕ್ಕಳಿಲ್ಲದವರು ಕೊಡುವ ಹವಿಸ್ಸನ್ನು ದೇವತೆಗಳು ಸ್ವೀಕರಿಸುವದಿಲ್ಲ ಎಂದಾದರೆ ಅವರಿಗೆ ಸ್ವರ್ಗಾದಿಲೋಕಪ್ರಾಪ್ತಿ ಇಲ್ಲವೆಂದು ತೋರುವದು. ಆ ಕಾರಣ ಇಲ್ಲಿ ವಿವಕ್ಷಿತವಾದ ತಾತ್ಪರ್ಯವನ್ನು ಪ್ರಮಾಣದಿಂದಲೇ ಹೇಳುವರು -

**ಅನಪತ್ಯೋಽಪಿ ಸದ್ಧರ್ಮಾ ಲೋಕಜಿನ್ನಾತ್ರ ಸಂಶಯಃ ।**
**ದೇವೈಸ್ತು ಪೃಥುಜನ್ಮಾರ್ಥೇ ಹವಿರಂಗಸ್ಯ ನೋ ಹೃತಮ್॥**
**ಅನಪತ್ಯತ್ವಕರ್ಮಾಽಸೌ ಬಾಲಹತ್ಯಾ ಕೃತಾ ಪುರಾ ।**
**ಅತೋ ದುಷ್ಟೋಽಭವತ್ಪುತ್ರ ಇಷ್ಟ್ಯೋ ವಿಷ್ಣುರತಃ ಪೃಥುಃ ॥ ಇತಿ ವಾಮನೇ ॥**

ಮಕ್ಕಳಿಲ್ಲದವನಾದರೂ ತನಗೆ ವಿಹಿತವಾದ ಧರ್ಮಾನುಷ್ಠಾನ ಮಾಡುವವನು ಉತ್ತಮಲೋಕವನ್ನು ಹೊಂದುವನು. ಇದರಲ್ಲಿ ಸಂಶಯವಿಲ್ಲ. ಹಾಗಾದರೆ ದೇವತೆಗಳು ಅಂಗರಾಜನ ಹವಿಸ್ಸನ್ನು ಏಕೆ ಸ್ವೀಕರಿಸಲಿಲ್ಲ ? ಎಂದರೆ, ''ಒಂದುವೇಳೆ ನಾವು ಹವಿಸ್ಸನ್ನು ಸ್ವೀಕರಿಸಿದರೆ ಇವನು ಪುತ್ರಕಾಮೇಷ್ಟಿ ಮಾಡಲಾರ. ಪುತ್ರಕಾಮೇಷ್ಟಿ ಮಾಡದಿದ್ದರೆ ಪೃಥುರಾಜ ಹುಟ್ಟಲಾರ. ಪೃಥು ಹುಟ್ಟಬೇಕೆಂದರೆ ಈ ಯಜ್ಞದಲ್ಲಿ ನಾವು ಹವಿಸ್ಸು ಸ್ವೀಕರಿಸಬಾರದು'' ಎಂಬ ಅಭಿಪ್ರಾಯದಿಂದ ತೆಗೆದುಕೊಳ್ಳಲಿಲ್ಲ. ಹೊರತು ಅಂಗನು ಮಕ್ಕಳಿಲ್ಲದವನು ಎಂಬ ಕಾರಣಕ್ಕೆ ಸ್ವೀಕರಿಸಲಿಲ್ಲ ಎಂದಲ್ಲ ಎಂದು ಭಾವ.

ಮಕ್ಕಳಿಲ್ಲದಿದ್ದರೆ ಬೇಡ. ಆದರೆ ಪುತ್ರಕಾಮೇಷ್ಟಿ ಮಾಡಿದರೂ ಮೊದಲು ಕೆಟ್ಟ ಮಗನು ಹುಟ್ಟಿದ್ದೇಕೆ ? ಎಂದರೆ, ಅಂಗರಾಜನು ಪೂರ್ವಜನ್ಮದಲ್ಲಿ ಬಾಲಹತ್ಯೆ (ಮಕ್ಕಳಾಗದಿರಲು ಕಾರಣವಾದ ಪಾಪವನ್ನು) ಮಾಡಿದವನಾದ್ದರಿಂದ ಮಕ್ಕಳಾಗಲಿಲ್ಲ. ಪುತ್ರಕಾಮೇಷ್ಟಿ ಮಾಡಿದರೂ ದುಷ್ಟಮಗನು ಜನಿಸಿದನು. ವಿಷ್ಣುವನ್ನು ಉದ್ದೇಶಿಸಿ ಯಜ್ಞ ಮಾಡಿದ್ದರಿಂದ ಯೋಗ್ಯನಾದ ಪೃಥುರಾಜನು ಮೊಮ್ಮಗನಾಗಿ ಜನಿಸಿದನು.

ಅಂದರೆ ಬಾಲಹತ್ಯಾಪಾಪವು ಮಕ್ಕಳಾಗದಿರುವುದಕ್ಕೆ ಕಾರಣ. ಮತ್ತು ಮಗನು ದುಷ್ಟನಾಗಲೂ ಅದೇ ಕಾರಣ. ಆದ್ದರಿಂದ ಸತ್ಪುತ್ರಪ್ರಾಪ್ತಿಯು ಪುತ್ರಕಾಮೇಷ್ಟಿಯ ಫಲವಾದರೂ ಸಹ, ಪಾಪವಿದ್ದುದರಿಂದ (ಪ್ರತಿಬಂಧಕ ಇದ್ದದ್ದರಿಂದ) ತನಗೇ ಸತ್ಪುತ್ರನು ಸಾಕ್ಷಾತ್ತಾಗಿ ಆಗದೇ, ಮಗನ ಮಗನು ಒಳ್ಳೆಯವನು ಆದನು ಎಂದು ಭಾವ.

ಋಚೀಕರ ಮಾತಿನಂತೆ ಸತ್ಯವತಿಗೆ ಕ್ರೂರಕ್ಷತ್ರಿಯ ಮಗನಾಗಬೇಕಿತ್ತು. ಆದರೂ ಅವಳ ಪ್ರಾರ್ಥನೆಯಿಂದಾಗಿ ಸಾತ್ವಿಕನಾದ ಜಮದಗ್ನಿಯು ಮಗನಾಗಿ ಮೊಮ್ಮಗನಾದ ಪರಶುರಾಮನು ಕ್ರೂರಕ್ಷತ್ರಿಯನಾದ ಹೇಗೋ ಹಾಗೆ ಎಂದು ಸ್ಮರಿಸಬೇಕು. ।।೩೩।।

**೨ ಅವತರಿಣಿಕೆಗಳು –**

ಮುಕ್ತಿಪ್ರದನಾದ ಶ್ರೀಹರಿಯು ಇತರ ಪುರುಷಾರ್ಥಗಳನ್ನು ಕೊಡುವನೇನು ? ಎಂದರೆ, ಅವಶ್ಯವಾಗಿ ಕೊಡುವನು. ಹಾಗಾದರೆ ಮುಕ್ತಿಪ್ರದ ಹೇಗೆ ? ಎಂದರೆ, ಆರಾಧನೆಗೆ ಅನುಗುಣವಾಗಿ ಫಲ ಕೊಡುವನು ಎಂದು ಹೇಳುವರು :-

ಅಥವಾ ಶ್ರೀಹರಿಯ ಪೂಜೆಯಿಂದ ಕೇವಲ ಪುತ್ರಕಾಮನಿಗೆ ಪುತ್ರಪ್ರಾಪ್ತಿಯಷ್ಟೇ ಫಲವಾಗಿ ಸಿಗುವುದಿಲ್ಲ, ಕಿಂತು ಯಾರು ಏನೇನು ಇಚ್ಛಿಸುವರೋ ಅದೆಲ್ಲವೂ ದೊರೆಯುವದು ಎಂದು ಹೇಳುವರು :-

**ತಾಂಸ್ತಾನ್ ಕಾಮಾನ್ ಹರಿರ್ದದ್ಯಾತ್ ಯಾನ್ ಯಾನ್ ಕಾಮಯತೇ ಜನಃ ।**
**ಆರಾಧಿತೋ ಯಥೈವೈಷ ತಥಾ ಪುಂಸಾಂ ಫಲೋದಯಃ ।।೩೪।।**

ಜನಃ=ಅಧಿಕಾರಿಯು ಯಾನ್ ಯಾನ್ ಕಾಮಯತೇ=ಏನೇನು ಇಚ್ಛಿಸುವನೋ ತಾನ್ ತಾನ್ ಕಾಮಾನ್=ಆ ಆ ಅಭೀಷ್ಟಗಳನ್ನು ಹರಿಃ=ಶ್ರೀಹರಿಯು ದದ್ಯಾತ್=ಕೊಡುವನು. ಏಷಃ=ಶ್ರೀಹರಿಯು ಯಥಾ ಆರಾಧಿತಃ=ಯಾವ ಕಾಮನೆಯಿಂದ ಪೂಜಿಸಲ್ಪಡುವನೋ ತಥಾ=ಆ ಕಾಮನೆಗೆ ಅನುಗುಣವಾಗಿ ಫಲೋದಯಃ=ಫಲಪ್ರಾಪ್ತಿಯು ಶ್ರೀಹರಿಯಿಂದ ಆಗುವದು. ।।೩೪।।

**ಇತಿ ವ್ಯವಸಿತಾ ವಿಪ್ರಾಸ್ತಸ್ಯ ರಾಜ್ಞಃ ಪ್ರಜಾಪ್ತಯೇ (ಪ್ರಜಾತಯೇ) ।**
**ಪುರೋಡಾಶಂ ನಿರವಪನ್ ಶಿಪಿವಿಷ್ಟಾಯ ವಿಷ್ಣವೇ ।।೩೫।।**

ಇತಿ=ಈ ರೀತಿಯಾದ ಸದಸಸ್ಪತಿಗಳ ಮಾತನ್ನು ಕೇಳಿ ವಿಪ್ರಾಃ=ಋತ್ವಿಜರು ವ್ಯವಸಿತಾಃ=ಭಗವಂತನ ವಿಷಯಕವಾದ ಯಜ್ಞ ಮಾಡಲು ನಿಶ್ಚಯಿಸಿ ತಸ್ಯ ರಾಜ್ಞಃ=ಅಂಗರಾಜನಿಗೆ ಪ್ರಜಾಪ್ತಯೇ=ಮಕ್ಕಳಾಗುವದಕ್ಕಾಗಿ ಶಿಪಿವಿಷ್ಟಾಯ=*ಪಶುಗಳಲ್ಲಿ

ಯಜ್ಞನಾಮಕರೂಪದಿಂದ ಪ್ರವೇಶಿಸಿರುವ ವಿಷ್ಣವೇ=ವಿಷ್ಣುವನ್ನು ಉದ್ದೇಶಿಸಿ ಪುರೋಡಾಶಂ=ಹವಿಸ್ಸನ್ನು ನಿರವಪನ್=ಕೊಟ್ಟರು. ಯಜ್ಞ ಮಾಡಿದರು ಎಂದರ್ಥ.

★''ಯಜ್ಞೋ ವೈ ವಿಷ್ಣುಃ ಪಶವಃ ಶಿಪಿರ್ಯಜ್ಞ ಏವ ಪಶುಷು ಪ್ರತಿತಿಷ್ಠತಿ'' ಎಂದು ಶ್ರುತಿ ಇರುವುದರಿಂದ ಹೀಗೆ ಅರ್ಥ ತಿಳಿಯುವುದು. ।।೩೫।।

**ತಸ್ಮಾತ್ಪುರುಷ ಉತ್ತಸ್ಥೌ ಹೇಮಮಾಲ್ಯಮಲಾಂಬರಃ ।**
**ಹಿರಣ್ಮಯೇನ ಪಾತ್ರೇಣ ಸಿದ್ಧಮಾದಾಯ ಪಾಯಸಮ್ ।।೩೬।।**

ತಸ್ಮಾತ್=ಪುರೋಡಾಶ ಹೋಮ ಮಾಡಿದ ಯಜ್ಞಕುಂಡದಿಂದ ಹೇಮಮಾಲೀ=ಚಿನ್ನದ ಮಾಲೆಯನ್ನು ಧರಿಸಿದ ಅಮಲಾಂಬರಃ=ಸ್ವಚ್ಛವಾದ ವಸ್ತ್ರಗಳನ್ನು ಧರಿಸಿದ ಪುರುಷಃ=ಶ್ರೀಹರಿಯು ಹಿರಣ್ಮಯೇನ ಪಾತ್ರೇಣ=ಚಿನ್ನದ ಪಾತ್ರೆಯಿಂದ ಸಿದ್ಧಂ=ತಯಾರಾದ ಪಾಯಸಂ=ಪಾಯಸವನ್ನು ಆದಾಯ=ತೆಗೆದುಕೊಂಡು ಉತ್ತಸ್ಥೌ=ಮೇಲೆ ಬಂದನು. ।।೩೬।।

**ಸ ವಿಪ್ರಾನುಮತೋ ರಾಜಾ ಗೃಹೀತ್ವಾಂಜಲಿನೋದನಮ್ ।**
**ಅವಘ್ರಾಯ ಮುದಾ ಯುಕ್ತಃ ಪ್ರಾದಾತ್ಪತ್ನ್ಯಾ ಉದಾರಧೀಃ ।।೩೭।।**

ಉದಾರಧೀಃ=ಔದಾರ್ಯಯುತವಾದ ಮನಸ್ಸುಳ್ಳ ಸಃ ರಾಜಾ=ಆ ಅಂಗರಾಜನು ವಿಪ್ರಾನುಮತಃ=ಬ್ರಾಹ್ಮಣರಿಂದ ಅನುಜ್ಞಾತನಾಗಿ ಅಂಜಲಿನಾ=ಬೊಗಸೆಯಿಂದ ಓದನಂ=ಹಾಲಿನಲ್ಲಿ ಬೇಯಿಸಿದ ಪಾಯಸವನ್ನು ಗೃಹೀತ್ವಾ=ಸ್ವೀಕರಿಸಿ ಮುದಾ ಯುಕ್ತಃ=ಸಂತೋಷದಿಂದ ಕೂಡಿದವನಾಗಿ ಅವಘ್ರಾಯ=ವಾಸನೆ ನೋಡಿ ಪತ್ನ್ಯೈಃ=ಹೆಂಡತಿಗೆ ಪ್ರಾದಾತ್=ಕೊಟ್ಟನು. ।।೩೭।।

**ಸಾ ತತ್ಪುಂಸವನಂ ರಾಜ್ಞೀ ಪ್ರಾಶ್ಯ ವೈ ಪತ್ಯುರಾದಧೇ ।**
**ತತಃ ಕಾಲ ಉಪಾವೃತ್ತೇ ಕುಮಾರಂ ಸುಷುವೇಽಪ್ರಜಾ ।।೩೮।।**

ರಾಜ್ಞೀ ಸಾ=ರಾಣಿಯಾದ ಆ ಸುನೀಥಳು ಅಪ್ರಜಾ ಸತೀ=ಮೊದಲಿಗೆ ಮಕ್ಕಳಿಲ್ಲದವಳು ಆಗಿದ್ದರೂ ಪುಂಸವನಂ=ಗಂಡುಮಗುವಾಗುವದಕ್ಕೆ ಸಾಧನವಾದ (ಪುಮಾನ್ ಸೂಯತೇ ಅನೇನ ಇತಿ ಪುಂಸವನಂ) ತತ್=ಪಾಯಸವನ್ನು ಪ್ರಾಶ್ಯ=ಸಂತೋಷದಿಂದ ತಿಂದು ಋತೌ=ಋತುಕಾಲದಲ್ಲಿ ಪತ್ಯುಃ=ಗಂಡನಿಂದ ಗರ್ಭಂ ಆದಧೇ=ಗರ್ಭಧಾರಣ ಮಾಡಿದಳು. ತತಃ=ನಂತರ ಕಾಲೇ ಉಪಾವೃತೇ=ಪ್ರಸವಕಾಲವು ಬಂದಾಗ ಕುಮಾರಂ ಸುಷುವೇ= ಮಗುವನ್ನು ಹೆತ್ತಳು. ।।೩೮।।

**ಸ ಬಾಲ ಏವ ಪುರುಷೋ ಮಾತಾಮಹಮನುವ್ರತಃ ।**
**ಅಧರ್ಮಾಂಶೋದ್ಭವಂ ಮೃತ್ಯುಂ ತೇನಾಭವದಧಾರ್ಮಿಕಃ ॥ ೩೯ ॥**

ಸಃ ಪುರುಷಃ=ಆ ಹುಡುಗನು ಬಾಲಃ ಏವ=ಚಿಕ್ಕವಯಸ್ಸಿನವನಾಗಿದ್ದಾಗಲೇ ಅಧರ್ಮಾಂಶೋದ್ಭವಂ=ಪಾಪಾಭಿಮಾನಿಯಾದ ಅಸುರನ ಅಂಶದಿಂದ ಜನಿಸಿದ ಮಾತಾಮಹಂ=ತಾಯಿಯಾದ ಸುನೀಥಾಳ ತಂದೆಯಾದ ಮೃತ್ಯುಂ=ಮೃತ್ಯು ಎಂಬ ಹೆಸರಿನ ಅಸುರನನ್ನು ಅನುವ್ರತಃ=ಅನುಸರಿಸಿದನು. ತೇನ=ಆ ಕಾರಣದಿಂದ ಅಧಾರ್ಮಿಕಃ ಅಭವತ್=ಧರ್ಮವಿರುದ್ಧ ಕೆಲಸ ಮಾಡುವವನಾದನು. ॥೩೯॥

**ಸ ಶರಾಸನಮುದ್ಯಮ್ಯ ಮೃಗಯುರ್ವನಗೋಚರಃ ।**
**ಹಂತ್ಯಸಾಧುರ್ಮೃಗಾನ್ ದೀನಾನ್ ವೇನೋಽಸಾವಿತ್ಯರೌಜ್ಜನಃ ॥೪೦॥**

ಸಃ=ಅವನು ಶರಾಸನಂ=ಧನುಸ್ಸನ್ನು ಉದ್ಯಮ್ಯ=ಎತ್ತಿಕೊಂಡು ವನಗೋಚರಃ= ಅಡವಿಯಲ್ಲಿ ಕಾಣಿಸಿಕೊಂಡು (ಅಡವಿಗೆ ಹೋಗಿ) ಮೃಗಯುಃ ಸನ್=ಬೇಟೆಗಾರನಾಗಿ, ಅಸಾಧುಃ=ದುಷ್ಟಸ್ವಭಾವದವನಾಗಿ ದೀನಾನ್=ಸಾಧುವಾದ ಮೃಗಾನ್=ಜಿಂಕೆಗಳನ್ನು ಹಂತಿ ಸ್ಮ=ಕೊಲ್ಲುತ್ತಿದ್ದನು. ಆದ್ದರಿಂದ ಅಸೌ=ಇವನು ವೇನಃ ಇತಿ=ವೇನನು ಎಂದು ಜನಃ=ಜನರು ಆರೌತ್=ಕೂಗಿದರು.

ಭಾಗವತ ತಾತ್ಪರ್ಯ -

ಇಲ್ಲಿ ಮೃತ್ಯುದೇವತೆಯನ್ನು ಅನುಸರಿಸಿದರೆ ಅಧಾರ್ಮಿಕನು ಏಕೆ ಆದ ? ಎಂಬ ಶಂಕೆಗೆ ಉತ್ತರಿಸಲು ಪ್ರಮಾಣದಿಂದಲೇ ಅಭಿಪ್ರಾಯ ಹೇಳುವರು. ಮತ್ತು ಜನರು ಇವನನ್ನು ವೇನನೆಂದು ಕರೆಯಲು ಕಾರಣವನ್ನೂ ಹೇಳುವರು :-

> ಮೃತ್ಯುರ್ದೇವೋ ಯಮಭ್ರಾತಾ ವೇನಮಾತಾಮಹೋಽಸುರಃ ।
> ಪೀಡಾಂ ವೇನೇತಿ ಚ ಪ್ರಾಹುರ್ವೇನೋಽಸೌ ಪೀಡನಾದಭೂತ್ ॥ ಇತಿ ಚ ॥

ಮೂಲದಲ್ಲಿ **ಅಧರ್ಮಾಂಶೋದ್ಭವಂ** ಎಂದೂ **ಮಾತಾಮಹಂ** ಎಂದೂ ವಿಶೇಷಣವಿದ್ದುದರಿಂದ ''ಯಮನ ಸಹೋದರನಾದ ಮೃತ್ಯು ಎಂಬುವ ದೇವತೆಯನ್ನು ಇಲ್ಲಿ ಮೃತ್ಯುಪದದಿಂದ ತೆಗೆದುಕೊಳ್ಳಬಾರದು. ಕಿಂತು ಮೃತ್ಯು ಎಂಬ ಹೆಸರಿನ ಅಸುರನನ್ನೇ ತೆಗೆದುಕೊಳ್ಳಬೇಕು'' ಎಂದು ತಿಳಿಯುತ್ತದೆ. ವೇನನ ಮಾತಾಮಹನು (ತಾಯಿಯ ತಂದೆಯು) ಮೃತ್ಯು ಎಂಬ ಅಸುರನು. ಅವನನ್ನು ತೆಗೆದುಕೊಳ್ಳಬೇಕು. ಅವನನ್ನು ಅನುಸರಿಸಿದ್ದರಿಂದ ಇವನೂ ಅಧಾರ್ಮಿಕನಾದನೆಂದು ಭಾವ.

ಪೀಡೆಯನ್ನು ವೇನವೆಂದು ಕರೆಯುವರು. ಅಂತಹ ಪೀಡೆಯನ್ನು ಉಂಟುಮಾಡಿದ್ದರಿಂದ ಇವನು ವೇನನೆನಿಸಿದನು. (ವೇನಯತೀತಿ ವೇನಃ ।)॥೪೦॥

**ಆಕ್ರೀಡೇ ಕ್ರೀಡತೋ ಬಾಲಾನ್ ವಯಸ್ಯಾನತಿದಾರುಣಃ ।**
**ಪ್ರಸಹ್ಯ ನಿರನುಕ್ರೋಶಃ ಪಶುಮಾರಮಮಾರಯತ್ ॥೪೧॥**

ಅತಿದಾರುಣಃ=ಅತ್ಯಂತಕ್ರೂರನೂ ನಿರನುಕ್ರೋಶಃ=ನಿರ್ದಯನೂ ಆದ ವೇನನು ಆಕ್ರೀಡೇ=ಆಟದ ಸ್ಥಳನಲ್ಲಿ ಕ್ರೀಡತಃ=ಆಟವಾಡುತ್ತಿರುವ ವಯಸ್ಯಾನ್ ಬಾಲಾನ್=ಸಮವಯಸ್ಕರಾದ (ಗೆಳೆಯರಾದ) ಬಾಲಕರನ್ನು ಪ್ರಸಹ್ಯ=ಬಲಾತ್ಕಾರದಿಂದ ಎಳೆದು ಪಶುಮಾರಂ ಅಮಾರಯತ್=ಚಂಡಾಲನು ಪಶುಗಳನ್ನು ಕೊಲ್ಲುವಂತೆ ಕೊಂದನು. ॥೪೧॥

**ತಂ ವಿಲಕ್ಷ್ಯ ಖಲಂ ಪುತ್ರಂ ಶಾಸನೈರ್ವಿವಿಧೈರ್ನೃಪಃ ।**
**ಯದಾ ನ ಶಾಸಿತುಂ ಕಲ್ಪೋ ಭೃಶಮಾಸೀತ್ಸುದುರ್ಮನಾಃ ॥೪೨॥**

ನೃಪಃ=ಅಂಗನು ಖಲಂ=ದುಷ್ಟನಾದ ತಂ ಪುತ್ರಂ=ಆ ಮಗನನ್ನು ವಿಲಕ್ಷ=ನೋಡಿ ವಿವಿಧೈಃ ಶಾಸನೈಃ=ನಾನಾರೀತಿಯ ಸಾಮಾದಿ ಉಪಾಯಗಳಿಂದ ಯದಾ=ಯಾವಾಗ ಶಾಸಿತುಂ=ಶಾಸನ ಮಾಡಲು ನ ಕಲ್ಪಃ=ಸಮರ್ಥನಾಗಲಿಲ್ಲವೋ ತದಾ=ಆಗ ಭೃಶಂ ಸುದುರ್ಮನಾಃ ಆಸೀತ್=ಬಹಳ ದುಃಖಿತನಾದನು. ॥೪೨॥

**ಪ್ರಾಯೇಣಾಭ್ಯರ್ಚಿತೋ ದೇವೋ ಯೇಽಪ್ರಜಾ ಗೃಹಮೇಧಿನಃ ।**
**ಕದಪತ್ಯಕೃತಂ ದುಃಖಂ ಯೇ ನ ವಿಂದಂತಿ ದುರ್ಭರಮ್ ॥೪೩॥**

ಅಪ್ರಜಾಃ=ಮಕ್ಕಳಿಲ್ಲದ ಯೇ ಗೃಹಮೇಧಿನಃ=ಯಾವ ಗೃಹಸ್ಥಾಶ್ರಮಿಗಳು (ಏವಂ=ಈ ರೀತಿಯಾಗಿ) ದುರ್ಭರಂ=ಧರಿಸಲಾಗದ ಕದಪತ್ಯಕೃತಂ=ಕೆಟ್ಟ ಮಕ್ಕಳಿಂದ ಉಂಟಾದ ದುಃಖಂ=ದುಃಖವನ್ನು ಯೇ=ಯಾರು ನ ವಿಂದಂತಿ=ತಿಳಿಯುವದಿಲ್ಲವೋ ತೈಃ=ಅವರಿಂದ ದೇವಃ=ಶ್ರೀಹರಿಯು ಪ್ರಾಯೇಣ ಅಭ್ಯರ್ಚಿತಃ=ಬಹುಶಃ ಪೂಜಿಸಲ್ಪಟ್ಟಿರುವನು ಎಂದು ಭಾವ. ॥೪೩॥

**ಯತಃ ಪಾಪೀಯಸೀ ಕೀರ್ತಿರಧರ್ಮಶ್ಚ ಮಹಾನ್ನೃಣಾಮ್ ।**
**ಯತೋ ವಿರೋಧಃ ಸರ್ವೇಷಾಂ ಯತ ಆಧಿರನಂತಕಃ ॥೪೪॥**

ಯತಃ=ಯಾವನಿಂದ ಪಾಪೀಯಸೀ ಕೀರ್ತಿಃ=ಅಪಕೀರ್ತಿಯು, ಮಹಾನ್ ಅಧರ್ಮಃ=ಬಹಳ ಪಾಪವೂ ನೃಣಾಂ=ಜನರಿಗೆ ಉಂಟಾಗುವದೋ ಚ=ಮತ್ತು ಯತಃ=ಯಾವನಿಂದ ಸರ್ವೇಷಾಂ ವಿರೋಧಃ=ಎಲ್ಲರ ಜೊತೆ ವಿರೋಧ ಉಂಟಾಗುವದೋ

ಚ=ಮತ್ತು ಯತಃ=ಯಾವನಿಂದ ಅನಂತಕಃ ಆಧಿಃ=ಅಪಾರವಾದ ಮನೋವ್ಯಥೆ-ಯುಂಟಾಗುವದೋ, (ಅನ್ವಯ ಮುಂದುವರೆಯುವುದು)।।೪೪।।

**ಕಸ್ತಂ ಪ್ರಜಾಪದೇಶಂ ವೈ ಮೋಹಂ ಬಂಧನಮಾತ್ಮನಃ ।**
**ಪಂಡಿತೋ ಬಹುಮನ್ಯೇತ ಯದರ್ಥಾಃ ಕ್ಲೇಶದಾ ಗೃಹಾಃ ।।೪೫ ।।**

ತಂ=ಅಂತಹ, ಪ್ರಜಾಪದೇಶಂ=ಹೆಸರಿಗೆ ಮಾತ್ರ ಪ್ರಜೆ ಎನಿಸಿಕೊಂಡಿರುವ, ಆತ್ಮನಃ=ತನಗೆ ಮೋಹಂ ಬಂಧನಂ=ತನ್ನ ಮಗನೆಂಬ ಮಿಥ್ಯಾಜ್ಞಾನದಿಂದ ಬಂಧಕ್ಕೆ ಕಾರಣನಾದ, ಯದರ್ಥಾಃ=ಯಾವನಿಂದಾಗಿ ಗೃಹಾಃ=ಮನೆಗಳು ಕ್ಲೇಶದಾಃ=ದುಃಖ-ದಾಯಕವಾಗುವವೋ ಅವನನ್ನು ಕಃ ಪಂಡಿತಃ=ಯಾವ ಬುದ್ಧಿವಂತನು ಬಹುಮನ್ಯೇತ=ಗೌರವಿಸುವನು ? ಯಾವನೂ ಗೌರವಿಸುವದಿಲ್ಲ ಆದರಿಸುವದಿಲ್ಲವೆಂದರ್ಥ. ।।೪೫।।

ಕೆಟ್ಟ ಮಗನಿಂದ ದುಃಖವಷ್ಟೇ ಅಲ್ಲ, ವಿವೇಕಿಗೆ ಪ್ರಯೋಜನವೂ ಇದೆ ಎಂದು ಹೇಳುವನು -

**ಕದಪತ್ಯಂ ವರಂ ಮನ್ಯೇ ಸದಪತ್ಯಾಚ್ಛುಚಾಸ್ಪದಾತ್ ।**
**ನಿರ್ವಿದ್ಯೇತ ಗೃಹಾನ್ಮರ್ತ್ಯೋ ಯತ್ಕ್ಲೇಶನಿವಹಾ ಗೃಹಾಃ ।।೪೬।।**

ಶುಚಾಸ್ಪದಾತ್=ರಕ್ಷಣೆ ಮಾಡುವದಕ್ಕಾಗಿ ದುಡ್ಡುಸಂಪಾದನೆ ಮುಂತಾಗಿ ದುಃಖಕಾರಣನಾದ ಸದಪತ್ಯಾತ್=ಒಳ್ಳೆಯ ಮಗನಿಗಿಂತ ಕದಪತ್ಯಂ ವರಂ ಮನ್ಯೇ=ಕೆಟ್ಟ ಮಗನೇ ಶ್ರೇಷ್ಠನೆಂದು ತಿಳಿಯುವೆ. ಯತ್=ಯಾವ ಕಾರಣ ಮರ್ತ್ಯಃ=ಮನುಷ್ಯನು ಗೃಹಾತ್=ಮನೆಯಿಂದ ನಿರ್ವಿದ್ಯೇತ=ವಿರಕ್ತನಾಗುವನು. ಏಕೆಂದರೆ ಯತಃ=ಯಾವನಿಂದ ಗೃಹಾಃ=ಮನೆಗಳು ಕ್ಲೇಶನಿವಹಾಃ ಭವತಿ=ದುಃಖಸಮೂಹವುಳ್ಳವುಗಳಾಗುವವು.

ಮನೆಯಲ್ಲಿ ಆಸಕ್ತಿ ಉಂಟುಮಾಡಿ ಪಾಲನ-ಪೋಷಣೆಯಲ್ಲಿ ತೊಡಗಿಸುವ ಸತ್ಪುತ್ರನಿಗಿಂತ, ಮನೆಯಲ್ಲಿ ಕಷ್ಟಗಳನ್ನು ಉಂಟುಮಾಡುವಮೂಲಕ ವೈರಾಗ್ಯಕ್ಕೆ ಕಾರಣನಾದ ಕೆಟ್ಟ ಮಗನೇ ಉತ್ತಮನು ಎಂದು ಭಾವ. ।।೪೬।।

**ಏವಂ ಸ ನಿರ್ವಿಣ್ಣಮನಾ ನೃಪೋ ಗೃಹಾ-**
**ನ್ನಿಶೀಥ ಉತ್ಥಾಯ ಮಹೋದಯೋದಯಾತ್ ।**
**ಅಲಬ್ಧನಿದ್ರೋಽನುಪಲಕ್ಷಿತೋ ನೃಭಿ-**
**ರ್ಹಿತ್ವಾ ಗತೋ ವೇನಸುವಂ ಪ್ರಸುಪ್ತಾಮ್ ।।೪೭।।**

ಏವಂ=ಈ ರೀತಿಯಾಗಿ ನಿರ್ವಿಣ್ಣಮನಾಃ=ವಿರಕ್ತವಾದ ಮನಸ್ಸುಳ್ಳ ಸಃ ನೃಪಃ=ಆ ಅಂಗರಾಜನು ಅಲಬ್ಧನಿದ್ರಃ=ನಿದ್ರೆ ಬಾರದವನಾಗಿ ನಿಶೀಥೇ=ಅರ್ಧರಾತ್ರಿಯಲ್ಲಿ ಉತ್ಥಾಯ=ಎದ್ದು ಪ್ರಸುಪ್ತಾಂ=ಮಲಗಿರುವ ವೇನಸುವಂ=ವೇನನ ತಾಯಿಯಾದ ಸುನೀಥಳನ್ನು ಹಿತ್ವಾ=ತೊರೆದು ನೃಭಿಃ=ಜನರಿಂದ ಅನುಪಲಕ್ಷಿತಃ=ಕಾಣಿಸಿಕೊಳ್ಳದೇ ಮಹೋದಯೋದಯಾತ್=ದೊಡ್ಡ ವಿಭೂತಿಯ ಸಮೃದ್ಧಿಯುಳ್ಳ ಗೃಹಾತ್=ಮನೆಯಿಂದ ಗತಃ=ವನಕ್ಕೆ ತೆರಳಿದನು. ।।೪೭।।

**ವಿಜ್ಞಾಯ ನಿರ್ವಿದ್ಯ ಗತಂ ಪತಿಂ ಪ್ರಜಾಃ**
**ಪುರೋಹಿತಾಮಾತ್ಯಸುಹೃದ್ಗಣಾದಯಃ ।**
**ವಿಚಿಕ್ಯುರುರ್ವ್ಯಾಮತಿಶೋಕಕಾತರಾ**
**ಯಥಾ ನಿಗೂಢಂ ಪುರುಷಂ ಕುಯೋಗಿನಃ ।।೪೮।।**

ಪುರೋಹಿತಾಮಾತ್ಯಸುಹೃದ್ಗಣಾದಯಃ=ಪುರೋಹಿತರು ಮಂತ್ರಿಗಳು ಬಾಂಧವರೇ ಮುಂತಾದ ಪ್ರಜಾಃ=ಪ್ರಜೆಗಳು ಪತಿಂ=ರಾಜನನ್ನು ನಿರ್ವಿದ್ಯ ಗತಂ=ವಿರಕ್ತನಾಗಿ ಹೋದವನನ್ನಾಗಿ ವಿಜ್ಞಾಯ=ತಿಳಿದು ಅತಿಶೋಕಕಾತರಾಃ=ಬಹಳ ದುಃಖಪೀಡಿತರಾಗಿ ಕುಯೋಗಿನಃ=ಸರಿಯಾದ ಯೋಗಾಭ್ಯಾಸವಿಲ್ಲದವರು ನಿಗೂಢಂ=ಹೃದಯದಲ್ಲಿಯೇ ಇದ್ದರೂ ಕಾಣದಿರುವ ಪುರುಷಂ=ಶ್ರೀಹರಿಯನ್ನು ಯಥಾ=ಹೇಗೆ ಹುಡುಕುವರೋ ತಥಾ=ಹಾಗೆ ಉರ್ವ್ಯಾಂ=ಭೂಮಿಯಲ್ಲಿ ವಿಚಿಕ್ಯುಃ=ಹುಡುಕಿದರು. ।।೪೮।।

**ಅಲಕ್ಷಯಂತಃ ಪದವೀಂ ಪ್ರಜಾಪತೇ-**
**ರ್ಹತೋದ್ಯಮಾಃ ಪ್ರತ್ಯುಪಸೃತ್ಯ ತೇ ಪುರೀಮ್ ।**
**ಋಷೀನ್ ಸಮೇತಾನಭಿವಂದ್ಯ ಸಾಶ್ರವೋ**
**ನ್ಯವೇದಯನ್ ಪೌರವ ಭರ್ತೃವಿಪ್ಲವಮ್ ।।೪೯।।**

।। ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ ತ್ರಯೋದಶೋಽಧ್ಯಾಯಃ ।।

ಹೇ ಪೌರವ=ವಿದುರನೇ ! ಪ್ರಜಾಪತೇಃ=ರಾಜನ ಪದವೀಂ=ಮಾರ್ಗವನ್ನು ಅಲಕ್ಷಯಂತಃ=ತಿಳಿಯದೇ ಹತೋದ್ಯಮಾಃ=ವಿಫಲಪ್ರಯತ್ನರಾದ ತೇ=ಆ ಪುರೋಹಿತಾದಿಗಳು ಪುರೀಂ=ಪಟ್ಟಣಕ್ಕೆ ಪ್ರತ್ಯುಪಸೃತ್ಯ=ತಿರುಗಿಬಂದು ಸಮೇತಾನ್=ಅಲ್ಲಿ ಮಿಲಿತರಾದ ಋಷೀನ್=ಮುನಿಗಳನ್ನು ಅಭಿವಂದ್ಯ=ನಮಸ್ಕರಿಸಿ ಸಾಶ್ರವಃ=ಕಣ್ಣೀರಿಡುವವರಾಗಿ ಭರ್ತೃವಿಪ್ಲವಂ=ರಾಜನು ಕಾಣದಿರುವದನ್ನು (ನಾಶವನ್ನು) ನ್ಯವೇದಯನ್=ಅರುಹಿದರು.

।। ಇಲ್ಲಿಗೆ ಹದಿಮೂರನೇ ಅಧ್ಯಾಯವು ಮುಗಿಯಿತು ।।

## ಅಥ ಚತುರ್ದಶೋಽಧ್ಯಾಯಃ

ಗುರುಗಳ ಮಾತನ್ನು ಶ್ರದ್ಧೆಯಿಂದ ನಡೆಸುವವನಿಗೆ ಇಹ-ಪರಗಳಲ್ಲಿ ಶ್ರೇಯಸ್ಸಾಗುವದು. ನಡೆಸದಿದ್ದವಗೆ ಅನರ್ಥವಾಗುವದು ಎಂಬುದನ್ನು ಈ ಅಧ್ಯಾಯದಲ್ಲಿ ತಿಳಿಸುವರು. ಮೊದಲಿಗೆ ಭೃಗು ಮುಂತಾದ ಋಷಿಗಳು ವೇನನಿಗೆ ರಾಜ್ಯಾಭಿಷೇಕ ಮಾಡಿದ್ದನ್ನು ಹೇಳುವರು -

**ಮೈತ್ರೇಯ ಉವಾಚ -**

**ಭೃಗ್ವಾದಯಸ್ತೇ ಮುನಯೋ ಲೋಕಾನಾಂ ಕ್ಷೇಮದರ್ಶಿನಃ ।**
***ಗೋಪ್ತರ್ಯಸತಿ ವೈ ನೃಣಾಂ ಪಶ್ಯಂತಃ ಪಶುಸಾಮ್ಯತಾಮ್*** ॥೧॥

ಲೋಕಾನಾಂ=ಜನರ ಕ್ಷೇಮದರ್ಶಿನಃ=ಹಿತವನ್ನು ಚಿಂತಿಸುವ ತೇ ಭೃಗ್ವಾದಯಃ ಮುನಯಃ=ಪ್ರಸಿದ್ಧರಾದ ಆ ಭೃಗು ಮುಂತಾದ ಋಷಿಗಳು ಗೋಪ್ತರಿ ಅಸತಿ=ರಕ್ಷಕನು ಇಲ್ಲದಿರುವಾಗ ನೃಣಾಂ=ಜನರಿಗೆ ಪಶುಸಾಮ್ಯತಾಂ=ಪಶುಗಳ ಸಾಮ್ಯತೆಯನ್ನು (ಅಂದರೆ ಸಾಂಕರ್ಯ, ಪರಸ್ತ್ರೀಭೋಗ, ಪರವಿತ್ತಭೋಗವನ್ನು) ಪಶ್ಯಂತಃ=ನೋಡುವವರಾಗಿ, (ಅನ್ವಯ ಮುಂದುವರೆಯುವುದು)

**ದುಷ್ಟನಾದ ವೇನನಿಗೆ ಪಟ್ಟಾಭಿಷೇಕ ಏಕೆ ?**

ರಾಜಕುಮಾರನಾದ ವೇನನಿರುವಾಗ ಬೇರೆಯವರನ್ನು ರಾಜ್ಯದಲ್ಲಿ ಕೂಡಿಸುವುದು ಸರಿಯಲ್ಲ, ಬೇರೆಯವರನ್ನು ಕೂಡಿಸಿದರೂ ಬಲಿಷ್ಠನಾದ ಅವನ ವಿರೋಧವಿರುವಾಗ ಪ್ರಜೆಗಳಿಗೆ ಹಿತವಾಗುವದಿಲ್ಲ, ರಾಜ್ಯ ಅವನಿಗೆ ಪ್ರಾಪ್ತವಾಗದಿರುವಾಗ ರಾಜ್ಯಪ್ರಯುಕ್ತ ಉತ್ಕಟದೋಷವಿಲ್ಲದೇ ಅವನನ್ನು ಕೊಲ್ಲಲಾಗದು. ಈ ವೀರನು ಸಾಯದೇ ಅವನ ದೇಹಮಥನ ಮಾಡಲಾಗದು. ಕಾರಣ ರಾಜ್ಯದಲ್ಲಿ ಅಭಿಷಿಕ್ತನಾಗಿ ಉಪದ್ರವ ಕೊಟ್ಟರೆ ಆಗ ಅವನನ್ನು ಕೊಂದು, ಅಧರ್ಮಾಂಶವನ್ನು ದೂರ ಮಾಡಿ, ರಾಜಾಂಶದಿಂದ ಸತ್ಪುರುಷನನ್ನು

ಹುಟ್ಟಿಸಿ, ಅವನಿಗೆ ರಾಜ್ಯಾಭಿಷೇಕ ಮಾಡಿದರೆ ಎಲ್ಲ ಕಲ್ಯಾಣವಾಗುವದು ಎಂಬ ಅಭಿಪ್ರಾಯದಿಂದ ವೇನನಿಗೆ ಅಭಿಷೇಕ ಮಾಡಿದರು ಎಂದು ಭಾವ. ||೧||

**ವೀರ ಮಾತರಮಾಹೂಯ ಸುನೀಥಾಂ ಬ್ರಹ್ಮವಾದಿನಃ |**
**ಪ್ರಕೃತ್ಯಸಮ್ಮತಂ ವೇನಮಭ್ಯಷಿಂಚನ್ ಪತಿಂ ಭುವಃ ||೨||**

ಹೇ ವೀರ=ವಿದುರನೇ ! ಬ್ರಹ್ಮವಾದಿನಃ=ಋಷಿಗಳು ಮಾತರಂ=ತಾಯಿಯಾದ ಸುನೀಥಾಂ=ಸುನೀಥಾಳನ್ನು ಆಹೂಯ=ಕರೆದು ಪ್ರಕೃತ್ಯಸಮ್ಮತಂ=ಮಂತ್ರಿ ಮುಂತಾದ ಪ್ರಜೆಗಳಿಗೆ ಸಮ್ಮತನಲ್ಲದ ವೇನಂ=ವೇನನನ್ನು ಭುವಃ ಪತಿಂ=ರಾಜನನ್ನಾಗಿ ಅಭ್ಯಷಿಂಚನ್=ಪಟ್ಟಾಭಿಷೇಕ ಮಾಡಿದರು.

ಪ್ರಕೃತ್ಯಾऽಸಮ್ಮತಂ ಎಂಬ ಪಾಠವಿದ್ದಾಗ ಸ್ವಭಾವದಿಂದ ರಾಜ್ಯಭಾರಕ್ಕೆ ಅಯೋಗ್ಯನಾದ ಎಂದರ್ಥ ತಿಳಿಯುವುದು. ||೨||

**ಶ್ರುತ್ವಾ ನೃಪಾಸನಗತಂ ವೇನಮತ್ಯುಗ್ರಶಾಸನಮ್ |**
**ನಿಲಿಲ್ಯುರ್ದಸ್ಯವಃ ಸದ್ಯಃ ಸರ್ಪತ್ರಸ್ತಾ ಇವಾಖವಃ ||೩||**

ಅತ್ಯುಗ್ರಶಾಸನಂ=ಬಹಳ ಕ್ರೂರವಾದ ದಂಡನ ಮಾಡುವ ವೇನಂ=ವೇನನನ್ನು ನೃಪಾಸನಗತಂ=ರಾಜಸಿಂಹಾಸನದಲ್ಲಿ ಬಂದಿರುವದನ್ನು ಶ್ರುತ್ವಾ=ಕೇಳಿ ಸರ್ಪತ್ರಸ್ತಾಃ=ಹಾವಿಗೆ ಹೆದರಿದ ಆಖವಃ ಇವ=ಇಲಿಗಳಂತೆ ಸದ್ಯಃ=ತಕ್ಷಣದಲ್ಲಿ ದಸ್ಯವಃ=ಕಳ್ಳರು ನಿಲಿಲ್ಯುಃ=ಅಡಿಗಿ ಹೋದರು.

**ವಂಶಿಧರವ್ಯಾಖ್ಯಾವಿಶೇಷ**

ಇಲ್ಲಿ "ನಿಲಿಲ್ಯುರ್ದಸ್ಯವಃ ಸರ್ವೇ" ಎಂದೂ ಪಾಠವಿದೆ. ಆಗ ಸರ್ವೇ ದಸ್ಯವಃ ನಿಲಿಲ್ಯುಃ (ಎಲ್ಲ ಚೋರರೂ ಅಡಗಿಹೋದರು) ಎಂದು ಹೇಳಿದ್ದರಿಂದ, ಕೇವಲ ಲೌಕಿಕಕಳ್ಳರಷ್ಟೇ ಅಡಗಿಹೋದರೆಂದಲ್ಲ ಕಿಂತು -

> **ನಾರಾಯಣೋ ನಾಮ ನರೋ ನರಾಣಾಂ ಪ್ರಸಿದ್ಧಚೋರಃ ಪ್ರಥಿತಃ ಪೃಥಿವ್ಯಾಮ್ |**
> **ಅನೇಕಜನ್ಮಾರ್ಜಿತಪಾಪಸಂಚಯಂ ಹರತ್ಯಶೇಷಂ ಸ್ಮೃತಮಾತ್ರ ಏವ ||**

ಎಂದು ಹೇಳಿದಂತೆ ನಾರಾಯಣನೂ ಸಹ ಪ್ರಸಿದ್ಧಚೋರನೆಂದು ಶಾಸ್ತ್ರಪ್ರಸಿದ್ಧನಾದ್ದರಿಂದ ಭಗವಂತನೆಂಬ ಚೋರನೂ ಸಹ ಯಾರ ಮನಸ್ಸಿನಲ್ಲಿಯೂ ಕಾಣದಾದನು ಎಂಬ ಅಭಿಪ್ರಾಯವನ್ನೂ ತಿಳಿಯಬಹುದಾಗಿದೆ. (ವಂಶಿಧರಕೃತಭಾವಾರ್ಥದೀಪಿಕಾ)||೩||

ವೇನನು ರಾಜನಾದ್ದರಿಂದ ಕಳ್ಳರ ಭಯವಿಲ್ಲದಾಯಿತು ಎಂಬುವುದು ಗುಣವಾದರೆ, ಅವನಿಂದ ಧರ್ಮಹಾನಿ ಉಂಟಾಯಿತು ಎಂದು ಹೇಳುವರು -

**ಸ ಆರೂಢನೃಪಸ್ಥಾನ ಉನ್ನದ್ಧೋಽಷ್ಟವಿಭೂತಿಭಿಃ ।**
**ಅವಮೇನೇ ಮಹಾಭಾಗಾನ್ ಸ್ತಬ್ಧಃ ಸಂಭಾವಿತಃ ಶಠಃ ॥೪॥**

ಆರೂಢನೃಪಸ್ಥಾನಃ=ರಾಜಸಿಂಹಾಸನವನ್ನೇರಿದ, ಸ್ವಾಭಾವಿಕವಾಗಿಯೇ ಸ್ತಬ್ಧಃ=ಅವಿನೀತನಾದ, ಶಠಃ=ಕ್ರೂರನಾದ, ಸಂಭಾವಿತಃ=ಎಲ್ಲರಿಂದ ದುಷ್ಟನೆಂದು ನಿಶ್ಚಯಿಸಲ್ಪಟ್ಟ ಅಷ್ಟವಿಭೂತಿಭಿಃ=ಮಂತ್ರಿ ಅಮಾತ್ಯ ದೂತ ರಾಜ್ಯಕೋಶ ದುರ್ಗ ಜನಪದ ಪುರೋಹಿತ ಎಂಬ ಎಂಟು ಐಶ್ವರ್ಯಗಳಿಂದ ಉನ್ನದ್ಧಃ=ಮರ್ಯಾದಾಬಂಧನವನ್ನು ತ್ಯಜಿಸಿದ ಸಃ=ವೇನನು ಮಹಾಭಾಗಾನ್=ವರ್ಣಾಶ್ರಮಧರ್ಮನಿರತರಾದ ಮುನಿಗಳನ್ನು ಅವಮೇನೇ=ತಿರಸ್ಕರಿಸಿದನು. ॥೪॥

**ಏವಂ ಮದಾಂಧ ಉತ್ಸಿಕ್ತೋ ನಿರಂಕುಶ ಇವ ದ್ವಿಪಃ ।**
**ಪರ್ಯಟನ್ ರಥಮಾಸ್ಥಾಯ ಕಂಪಯನ್ನಿವ ರೋದಸೀ ॥೫॥**

ಏವಂ=ಈ ರೀತಿಯಾಗಿ ಮದಾಂಧಃ=ರಾಜ್ಯ ಐಶ್ವರ್ಯಗಳಿಂದುಂಟಾದ ಗರ್ವದಿಂದ ಕುರುಡನಾದ ವೇನನು ನಿರಂಕುಶಃ ದ್ವಿಪಃ ಇವ=ಅಂಕುಶವಿಲ್ಲದ ಆನೆಯಂತೆ ಉತ್ಸಿಕ್ತಃ=ಲೋಕ-ವೇದಗಳ ರೀತಿ-ನೀತಿಗಳನ್ನು ಮೀರಿದವನಾಗಿ ರೋದಸೀ=ಭೂಲೋಕ-ಸ್ವರ್ಗಲೋಕಗಳನ್ನು ಕಂಪಯನ್ ಇವ=ನಡುಗಿಸುವವನಂತೆ ರಥಂ ಆಸ್ಥಾಯ=ರಥದಲ್ಲಿ ಕುಳಿತು ಪರ್ಯಟನ್=ಸಂಚರಿಸುವವನಾಗಿ, (ಅನ್ವಯ ಮುಂದುವರೆಯುವುದು)॥೫॥

**ನ ಯಷ್ಟವ್ಯಂ ನ ದಾತವ್ಯಂ ನ ಹೋತವ್ಯಂ ದ್ವಿಜಾಃ ಕ್ವಚಿತ್ ।**
**ಏವಂ ನ್ಯವಾರಯದ್ಧರ್ಮಂ ಭೇರೀಘೋಷೇಣ ಸರ್ವತಃ ॥೬॥**

ಹೇ ದ್ವಿಜಾಃ=ಎಲೋ ಬ್ರಾಹ್ಮಣರೇ ! ಕ್ವಚಿತ್=ಯಾವ ದೇಶದಲ್ಲಿಯೂ, ಯಾವ ಕಾಲದಲ್ಲಿಯೂ ನ ಯಷ್ಟವ್ಯಂ=ಯಜ್ಞ ಮಾಡಬಾರದು. ನ ದಾತವ್ಯಂ=ದಾನ ಕೊಡಬಾರದು. ನ ಹೋತವ್ಯಂ=ಹೋಮ ಮಾಡಬಾರದು. ಏವಂ=ಈ ರೀತಿಯಾಗಿ ಭೇರೀಘೋಷೇಣ=ಡಂಗುರ ಸಾರುವ ಮೂಲಕ ಸರ್ವತಃ=ಎಲ್ಲೆಡೆ ಧರ್ಮಂ=ಪುಣ್ಯಕಾರ್ಯವನ್ನು ನ್ಯವಾರಯತ್=ನಿಷೇಧಿಸಿದನು. ॥೬॥

**ವೇನಸ್ಯಾವೇಕ್ಷ್ಯ ಮುನಯೋ ದುರ್ವೃತ್ತಸ್ಯ ವಿಚೇಷ್ಟಿತಮ್ ।**
**ವಿಮೃಶ್ಯ ಲೋಕವ್ಯಸನಂ ಕೃಪಯೋಚುಃ ಸ್ಮ ಸತ್ರಿಣಃ ॥೭॥**

ದುರ್ವೃತ್ತಸ್ಯ=ದುರಾಚಾರಿಯಾದ ವೇನಸ್ಯ=ವೇನನ ವಿಚೇಷ್ಟಿತಂ=ಸದಾಚಾರಗಳ ನಿಷೇಧವೆಂಬ ಕೃತಿಯನ್ನು ಅವೇಕ್ಷ್ಯ=ನೋಡಿ ಸತ್ರಿಣಃ=ಯಜ್ಞ ಮಾಡುವ ಋಷಯಃ=

ಮುನಿಗಳು ಲೋಕವ್ಯಸನಂ=ತಮ್ಮ ಧರ್ಮಹಾನಿಯಿಂದುಂಟಾದ ಜನರ ದುಃಖವನ್ನು ವಿಮೃಶ್ಯ=ವಿಚಾರ ಮಾಡಿ ಕೃಪಯಾ=ದಯೆಯಿಂದ ಊಚುಃ=ಮಾತನಾಡಿದರು. (ಪರಸ್ಪರ ವಿಚಾರ ಮಾಡಿದರೆಂದರ್ಥ.)॥೭॥

**ಅಹೋ ಉಭಯತಃ ಪ್ರಾಪ್ತಂ ಲೋಕಸ್ಯ ವ್ಯಸನಂ ಮಹತ್ ।**
**ದಾರುಣ್ಯುಭಯತೋ ದೀಪ್ತ ಇವ ತಸ್ಕರಪಾಲಯೋಃ ॥೮॥**

ದಾರುಣಿ=ಕಟ್ಟಿಗೆಯು ಉಭಯತಃ=ಎರಡೂ ಕಡೆಯಿಂದ ದೀಪ್ತೇ ಇವ= ಸುಡುತ್ತಿರುವಾಗ ಮಧ್ಯದಲ್ಲಿರುವ ಇರುವೆ ಮುಂತಾದ ಪ್ರಾಣಿಗಳಿಗೆ ಸಂಕಟ ಬಂದಂತೆ, ಲೋಕಸ್ಯ=ಜನರಿಗೆ ತಸ್ಕರಪಾಲಯೋಃ=ಕಳ್ಳರಿಂದ ಮತ್ತು ರಾಜನಿಂದ ಹೀಗೆ ಉಭಯತಃ= ಎರಡೂ ಕಡೆಯಿಂದಲೂ ಮಹತ್ ವ್ಯಸನಂ=ದೊಡ್ಡ ಕಷ್ಟವು ಪ್ರಾಪ್ತಂ=ಬಂದಿದೆ. ಅಹೋ=ಕಷ್ಟವು. ॥೮॥

**ಅರಾಜಕಭಯಾದೇಷ ಕೃತೋ ರಾಜಾಽತದರ್ಹಣಃ ।**
**ತತೋಽಪ್ಯಾಸೀದ್ಭಯಂ ತ್ವದ್ಯ ಕಥಂ ಸ್ಯಾತ್ ಸ್ವಸ್ತಿ ದೇಹಿನಾಮ್ ॥೯॥**

ಅರಾಜಕಭಯಾತ್=ರಾಜನಿಲ್ಲದಿದ್ದರೆ ರಾಷ್ಟ್ರಕ್ಕೆ ಕಳ್ಳಕಾಟವಾಗುವದೆಂಬ ಭಯದಿಂದ ಅತದರ್ಹಣಃ=ರಾಜ್ಯಕ್ಕೆ ಅನರ್ಹನಾದ ಏಷಃ=ಇವನು ರಾಜಾ ಕೃತಃ=ರಾಜನಾಗಿ ಮಾಡಲ್ಪಟ್ಟನು. ತು=ಆದರೆ ಅದ್ಯ=ಈಗ ತತಃ ಅಪಿ=ಈ ರಾಜನಿಂದಲೇ ಕಳ್ಳರಿಗಿಂತ ಹೆಚ್ಚು ಭಯಂ ಆಸೀತ್=ಭಯ ಉಂಟಾಗಿದೆ. ದೇಹಿನಾಂ=ಜನರಿಗೆ ಸ್ವಸ್ತಿ ಕಥಂ ಸ್ಯಾತ್=ಕಲ್ಯಾಣ ಹೇಗಾದೀತು ? ॥೯॥

**ಅಹೇರಿವ ಪಯಃಪೋಷಃ ಪೋಷಕಸ್ಯಾಪ್ಯನರ್ಥಕೃತ್ ॥೧೦॥**

ಅಹೇಃ=ಹಾವಿಗೆ ಪಯಃಪೋಷಃ ಇವ=ಹಾಲನ್ನಿತ್ತು ರಕ್ಷಿಸುವದು ಪೋಷಕಸ್ಯಾಪಿ=ರಕ್ಷಣೆ ಮಾಡುವವನಿಗೂ ಅನರ್ಥಕೃತ್=ದುಃಖಕಾರಣವಾಗುವಂತೆ ಇವನೂ ನಮ್ಮ ದುಃಖಕಾರಣನಾಗಿದ್ದಾನೆ. ॥೧೦॥

**ವೇನಃ ಪ್ರಕೃತ್ಯೈವ ಖಲಃ ಸುನೀಥಾಗರ್ಭಸಂಭವಃ ।**
**ನಿರೂಪಿತಃ ಪ್ರಜಾಪಾಲಃ ಸ ಜಿಘಾಂಸತಿ ವೈ ಪ್ರಜಾಃ ॥೧೧॥**

ವೇನಃ=ವೇನನು ಪ್ರಕೃತ್ಯಾ ಏವ=ಸ್ವಭಾವದಿಂದಲೇ ಖಲಃ=ದುಷ್ಟನಾಗಿರುವನು. ಸುನೀಥಾಗರ್ಭಸಂಭವಃ ಇತಿ=ಸುನೀಥಾಳ ಉದರದಲ್ಲಿ ಜನಿಸಿದವನೆಂಬ ಕಾರಣದಿಂದ ಪ್ರಜಾಪಾಲಃ ನಿರೂಪಿತಃ=ರಾಜನಾಗಿ ನಮ್ಮಿಂದ ಮಾಡಲ್ಪಟ್ಟನು. ಸಃ=ಅವನು ಪ್ರಜಾಃ=ಪ್ರಜೆಗಳನ್ನು ಜಿಘಾಂಸತಿ=ಕೊಲ್ಲಲಿಚ್ಛಿಸುವನು. ॥೧೧॥

**ತಥಾಽಪಿ ಸಾಂತ್ವಯಾಮೋಽಮುಂ ಮಾಽಸ್ಮಾಂಸ್ತತ್ಪಾತಕಂ ಸ್ಪೃಶೇತ್ ।**
**ತದ್ವಿದ್ವದ್ಭಿರಸದ್ವೃತ್ತೋ ವೇನೋಽಸ್ಮಾಭಿಃ ಕೃತೋ ನೃಪಃ ॥೧೨॥**

ಅಸದ್ವೃತ್ತಃ ವೇನಃ=ದುರಾಚಾರಿಯಾದ ವೇನನು ತದ್ವಿದ್ವದ್ಭಿಃ=ಅವನನ್ನು ದುಷ್ಟನೆಂದು ತಿಳಿದಿರುವ ಅಸ್ಮಾಭಿಃ=ನಮ್ಮಿಂದ ನೃಪಃ ಕೃತಃ=ರಾಜನಾಗಿ ಮಾಡಲ್ಪಟ್ಟಿರುವನು. ಕಾರಣ ತತ್ಪಾತಕಂ=ಅವನು ಮಾಡುವ ಪಾಪವು ಅಸ್ಮಾನ್=ನಮ್ಮನ್ನು ಮಾ ಸ್ಪೃಶೇತ್=ತಾಕದಿರಲಿ ಎಂಬ ಅಭಿಪ್ರಾಯದಿಂದ ತಥಾಪಿ=ಅವನು ದುಷ್ಟನಾದರೂ ಅಮುಂ=ಇವನನ್ನು ಸಾಂತ್ವಯಾಮಃ=ಒಳ್ಳೆಯ ಮಾತುಗಳಿಂದ ತಿಳಿಹೇಳೋಣ. ॥೧೨॥

**ಸಾಂತ್ವಿತೋ ಯದಿ ನೋ ವಾಚಂ ನ ಗ್ರಹೀಷ್ಯತ್ಯಧರ್ಮಕೃತ್ ।**
**ಲೋಕಧಿಕ್ಕಾರಸಂದಗ್ಧಂ ದಹಿಷ್ಯಾಮಃ ಸ್ವತೇಜಸಾ ॥೧೩॥**

ಯದಿ=ಒಂದುವೇಳೆ ಸಾಂತ್ವಿತಃ=ತಿಳಿಹೇಳಲ್ಪಟ್ಟರೂ ಅಧರ್ಮಕೃತ್=ಪಾಪಕರ್ಮಗಳನ್ನು ಮಾಡುವ ಇವನು ನಃ ವಾಚಂ=ನಮ್ಮ ಮಾತನ್ನು ನ ಗ್ರಹಿಷ್ಯತಿ=ತಿಳಿದು ಆಚರಿಸದಿದ್ದಲ್ಲಿ ಲೋಕಧಿಕ್ಕಾರಸಂದಗ್ಧಂ=ಪ್ರಜೆಗಳ ಧಿಕ್ಕಾರದಿಂದಲೇ ಮೃತಪ್ರಾಯನಾದ ವೇನನನ್ನು ಸ್ವತೇಜಸಾ=ನಮ್ಮ ತಪಃಪ್ರಭಾವದಿಂದ ದಹಿಷ್ಯಾಮಃ=ಸುಟ್ಟುಹಾಕೋಣ.

'ಲೋಕಧಿಕ್ಕಾರಸಂದಗ್ಧಂ' ಎಂದು ಹೇಳಿದ್ದರಿಂದ ಇಂಥವನನ್ನು ಕೊಲ್ಲುವದರಿಂದ ನಮಗೆ ದೋಷ ಬರುವದಿಲ್ಲವೆಂದು ಸೂಚಿಸುವರು. ॥೧೩॥

**ಏವಮಧ್ಯವಸಾಯ್ಯೆನಂ ಮುನಯೋ ಗೂಢಮನ್ಯವಃ ।**
**ಉಪವ್ರಜ್ಯಾಬ್ರುವನ್ ವೇನಂ ಸಾಂತ್ವಯಿತ್ವಾಽಥ ಸಾಮಭಿಃ ॥೧೪॥**

ಗೂಢಮನ್ಯವಃ=ಕೋಪವನ್ನು ಹೊರಗೆ ತೋರ್ಪಡಿಸದೇ ಒಳಗೇ ಇಟ್ಟುಕೊಂಡ ಮುನಯಃ=ಋಷಿಗಳು ಏವಂ=ಮೇಲೆ ಹೇಳಿದಂತೆ ಅಧ್ಯವಸಾಯ=ನಿಶ್ಚಯಿಸಿ ವೇನಂ ಉಪವ್ರಜ್ಯ=ವೇನನನ್ನು ಸಮೀಪಿಸಿ ಸಾಮಭಿಃ=ಪ್ರಿಯನುಡಿಗಳಿಂದ ಸಾಂತ್ವಯಿತ್ವಾ= ಸಮಾಧಾನಪಡಿಸಿ ಅಥ=ನಂತರ ಅಬ್ರುವನ್=ಉಪದೇಶ ಮಾಡಿದರು. ॥೧೪॥

**ನೃಪವರ್ಯ ನಿಬೋಧೈತದ್ ಯತ್ತೇ ವಿಜ್ಞಾಪಯಾಮ ಭೋಃ ।**
**ಆಯುಃಶ್ರೀಬಲಕೀರ್ತೀನಾಂ ತವ ತಾತ ವಿವರ್ಧನಮ್ ॥೧೫॥**

ಭೋಃ ನೃಪವರ್ಯ=ಎಲೋ ರಾಜನೇ ! ಯತ್=ಯಾವುದನ್ನು ತೇ=ನಿನಗೆ ವಿಜ್ಞಾಪಯಾಮ=ನಿವೇದಿಸುವೆವೋ ಏತತ್=ಇದು ತವ=ನಿನಗೆ ಆಯುಃಶ್ರೀಬಲಕೀರ್ತೀನಾಂ ಆಯುಃ=ಆಯುಷ್ಯ ಶ್ರೀ=ಸಂಪತ್ತು ಬಲ=ಬಲ ಕೀರ್ತಿನಾಂ=ಕೀರ್ತಿ ಇವುಗಳ

ವಿವರ್ಧನಂ=ವಿಶೇಷವಾಗಿ ಅಭಿವೃದ್ಧಿಗೊಳಿಸುವವೆಂದು ನಿಬೋಧ=ಸಮಾಧಾನದಿಂದ ಕೇಳು. (ತಿಳಿ)॥೧೫॥

**ಧರ್ಮ ಆಚರಿತಃ ಪುಂಸಾಂ ವಾಙ್ಮನಃಕಾಯಬುದ್ಧಿಭಿಃ ।**
**ಲೋಕಾನ್ ವಿಶೋಕಾನ್ ವಿತರತ್ಯಥಾನಂತ್ಯಮಸಂಗಿನಾಮ್ ॥೧೬॥**

ವಾಙ್ಮನಃಕಾಯಬುದ್ಧಿಭಿಃ=ಮಾತು, ಮನಸ್ಸು, ದೇಹ, ಬುದ್ಧಿಗಳಿಂದ ಆಚರಿತಃ= ಮಾಡಲ್ಪಟ್ಟ ಧರ್ಮಃ=ಧರ್ಮವು ಪುಂಸಾಂ=ಅಧಿಕಾರಿಗಳಿಗೆ ವಿಶೋಕಾನ್= ದುಃಖರಹಿತವಾದ ಲೋಕಾನ್=ಸ್ವರ್ಗದಿಂದ ಆರಂಭ ಮಾಡಿ ವೈಕುಂಠಪರ್ಯಂತ ಲೋಕಗಳನ್ನು ವಿತರತಿ=ಕೊಡುವದು. ಅಸಂಗಿನಾಂ=ಆ ಆ ಲೋಕಾಕಾಂಕ್ಷೆ ಇಲ್ಲದವರಿಗೆ ಆನಂತ್ಯಂ ವಿತರತಿ=ಸಾಯುಜ್ಯವನ್ನೇ ನೀಡುವುದು.

ಸ್ತೋತ್ರ-ಮಂತ್ರಗಳ ಪಠನ, ಜಪ ಮಾಡುವದು ವಾಚನಿಕ ಧರ್ಮ. ಪರೋಪಕಾರಚಿಂತನ, ಭಗವಂತನ ಧ್ಯಾನ ಮಾನ್ಸಿಕ ಧರ್ಮ. ತೀರ್ಥಯಾತ್ರೆ, ಭಗವಂತನ ಸೇವೆ ದೈಹಿಕ ಧರ್ಮ. ಬುದ್ಧೀಂದ್ರಿಯಗಳಿಂದ ಮಾಡುವ ಧರ್ಮಗಳು ಎಂದರೆ :- ಭಗವಂತನ ದರ್ಶನ, ಶಾಲಿಗ್ರಾಮಸ್ಪರ್ಶ, ಕಥಾಶ್ರವಣ, ಪ್ರಸಾದಾಸ್ವಾದನ, ನಿರ್ಮಾಲ್ಯಾಘ್ರಾಣನ ಮಾಡುವದು ಎಂದು ತಿಳಿಯಬೇಕು. ॥೧೬॥

**ಸ ತೇ ಮಾ ವಿನಶೇದ್ವೀರ ಪ್ರಜಾನಾಂ ಕ್ಷೇಮಲಕ್ಷಣಃ ।**
**ಯಸ್ಮಿನ್ ವಿನಷ್ಟೇ ನೃಪತಿರೈಶ್ವರ್ಯಾದವರೋಹತಿ ॥೧೭॥**

ವೀರ=ಸಮರ್ಥನೇ ! ಯಸ್ಮಿನ್=ಯಾವ ಪ್ರಜಾಪಾಲನವೆಂಬ ಧರ್ಮವು ವಿನಷ್ಟೇ=ನಾಶವಾಗುತ್ತಿರಲು ನೃಪತಿಃ=ರಾಜನು ಐಶ್ವರ್ಯಾತ್ ಅವರೋಹತಿ= ರಾಜ್ಯಭ್ರಷ್ಟನಾಗುವನೋ ಸಃ=ಅಂತಹ ಪ್ರಜಾನಾಂ ಕ್ಷೇಮಲಕ್ಷಣಃ=ಪ್ರಜಾರಕ್ಷಣವೆಂಬ ಧರ್ಮವು ಮಾ ವಿನಶೇತ್=ನಾಶವಾಗುವದು ಬೇಡ. ॥೧೭॥

**ರಾಜನ್ನಸಾಧ್ವಮಾತ್ಯೇಭ್ಯಶ್ಚೋರಾದಿಭ್ಯಃ ಪ್ರಜಾ ನೃಪಃ ।**
**ರಕ್ಷನ್ ಯಥಾ ಬಲಿಂ ಗೃಹ್ಣನ್ನಿಹ ಪ್ರೇತ್ಯ ಚ ಮೋದತೇ ॥೧೮॥**

ರಾಜನ್=ರಾಜನೇ ! ಅಸಾಧ್ವಮಾತ್ಯೇಭ್ಯಃ=ದುಷ್ಟಮಂತ್ರಿಗಳಿಂದ ಚ=ಮತ್ತು ಚೋರಾದಿಭ್ಯಃ=ಕಳ್ಳರು ವ್ಯಭಿಚಾರಿಗಳು ಮುಂತಾದವರಿಂದ ಪ್ರಜಾಃ=ಪ್ರಜೆಗಳನ್ನು ರಕ್ಷನ್ ನೃಪಃ=ರಕ್ಷಿಸುವ ರಾಜನು ಯಥಾ=ಶಾಸ್ತ್ರದಲ್ಲಿ ಹೇಳಿದಂತೆ ಯೋಗ್ಯವಾದ ಅಂದರೆ ಆರನೇ ಒಂದು ಭಾಗ ಬಲಿಂ=ಕರವನ್ನು ಗೃಹ್ಣನ್=ಸ್ವೀಕರಿಸಿದವನಾಗಿ ಇಹ=ಈ ಲೋಕದಲ್ಲಿ ಪ್ರೇತ್ಯ

ಚ=ಸತ್ತ ನಂತರವೂ ಮೋದತೇ=ಸಂತೋಷಪಡೆಯುವನು.

'ರಾಜನ್' ಎಂದು ಸಂಬೋಧಿಸಿದ್ದರಿಂದ "ನೀನೂ ರಾಜನೇ ಆದ್ದರಿಂದ ಹೀಗೆ ಮಾಡು" ಎಂಬ ಭಾವವು ಸೂಚಿತವಾಗುತ್ತಿದೆ. ।।೧೮।।

**ಯಸ್ಯ ರಾಷ್ಟ್ರೇ ಪುರೇ ಚೈವ ಭಗವಾನ್ ಯಜ್ಞಪೂರುಷಃ ।**
**ಇಜ್ಯತೇ ಸ್ವೇನ ಧರ್ಮೇಣ ಜನೈರ್ವರ್ಣಾಶ್ರಮಾತ್ಮಕೈಃ ।।೧೯ ।।**

**ತಸ್ಯ ರಾಜ್ಞೋ ಮಹಾರಾಜ ಭಗವಾನ್ ಭೂತಭಾವನಃ ।**
**ಪರಿತುಷ್ಯತಿ ವಿಶ್ವಾತ್ಮಾ ತಿಷ್ಠತೋ ನಿಜಶಾಸನೇ ।।೨೦।।**

ಹೇ ಮಹಾರಾಜ=ರಾಜನೇ ! ಯಸ್ಯ=ಯಾವನ ರಾಷ್ಟ್ರೇ=ದೇಶದಲ್ಲಿ ಚ=ಮತ್ತು ಪುರೇ=ಪಟ್ಟಣದಲ್ಲಿ ಭಗವಾನ್=ಷಡ್ಗುಣೈಶ್ವರ್ಯಶಾಲಿಯಾದ ಯಜ್ಞಪೂರುಷಃ= ಯಜ್ಞನಿಯಾಮಕನಾದ, ಯಜ್ಞಫಲಭೋಕ್ತೃವಾದ ಶ್ರೀಹರಿಯು ವರ್ಣಾಶ್ರಮಾತ್ಮಕೈಃ= ಬ್ರಾಹ್ಮಣಾದಿವರ್ಣ, ಬ್ರಹ್ಮಚರ್ಯಾದ್ಯಾಶ್ರಮಗಳಿಂದ ಕೂಡಿದ ಜನೈಃ=ಅಧಿಕಾರಿಗಳಿಂದ ಸ್ವೇನ ಧರ್ಮೇಣ=ತಮಗೆ ವಿಹಿತವಾದ ಧರ್ಮದಿಂದ ಇಜ್ಯತೇ=ಪೂಜಿಸಲ್ಪಡುವನೋ ಅಂತಹ

ನಿಜಶಾಸನೇ ತಿಷ್ಠತಃ=ತನಗೆ ವಿಹಿತವಾದ ಪ್ರಜಾಪಾಲನದಲ್ಲಿರುವ ತಸ್ಯ ರಾಜ್ಞಃ=ಆ ರಾಜನಿಗೆ ಭೂತಭಾವನಃ=ಸಕಲಪ್ರಾಣಿಪಾಲಕನಾದ ವಿಶ್ವಾತ್ಮಾ=ಜಗದಂತರ್ಯಾಮಿಯಾದ ಭಗವಾನ್=ಶ್ರೀಹರಿಯು ಪರಿತುಷ್ಯತಿ=ಸಂತುಷ್ಟನಾಗುವನು. ।।೧೯।।೨೦।।

**ತಸ್ಮಿಂಸ್ತುಷ್ಟೇ ಕಿಮಪ್ರಾಪ್ಯಂ ಜಗತಾಮೀಶ್ವರೇಶ್ವರೇ ।**
**ಲೋಕಾಃ ಸಪಾಲಾ ಹ್ಯೇತಸ್ಮೈ ಹರಂತಿ ಬಲಿಮಾದೃತಾಃ ।।೨೧।।**

ಜಗತಾಂ ಈಶ್ವರೇಶ್ವರೇ=ಪ್ರಪಂಚಕ್ಕೆ ಒಡೆಯರಾದ ಬ್ರಹ್ಮಾದಿಗಳಿಗೂ ಒಡೆಯನಾದ ತಸ್ಮಿನ್=ಶ್ರೀಹರಿಯು ತುಷ್ಟೇ=ಸಂತುಷ್ಟನಾಗುತ್ತಿರಲು ಕಿಂ ಅಪ್ರಾಪ್ಯಂ=ದೊರಕದಿರುವದು ಯಾವದು ? ಎಲ್ಲ ಪುರುಷಾರ್ಥಗಳೂ ದೊರಕುವವು. ಸಪಾಲಾಃ=ಲೋಕಪಾಲಕರಿಂದ ಸಹಿತರಾದ ಲೋಕಾಃ=ಲೋಕದಲ್ಲಿರುವ ಜನರು ಏತಸ್ಮೈ=ಭಗವತ್ಪ್ರಿಯನಾದ ಇಂತಹವನಿಗೆ ಆದೃತಾಃ=ಆದರಸಹಿತರಾಗಿ ಬಲಿಂ ಆಹರಂತಿ=ಕರವನ್ನು ನೀಡುವರು.

ಯಥಾತರೋಃ ಮೂಲನಿಷೇವಣೇನ ಎಂಬಂತೆ ಎಲ್ಲರಿಗೂ ಮೂಲನಾದ ಶ್ರೀಹರಿಯನ್ನು ತೃಪ್ತಿಪಡಿಸಿದರೆ ಶಾಖಾಸ್ಥಾನೀಯರಾದ ದೇವತೆಗಳೂ ಫಲ ನೀಡುವರು ಎಂದು ಭಾವ. ।।೨೧।।

**ತಂ ಸರ್ವಲೋಕಾಮರಯಜ್ಞಸಂಗ್ರಹಂ**
**ತ್ರಯೀಮಯಂ ದ್ರವ್ಯಮಯಂ ತಪೋಮಯಮ್ ।**
**ಯಜ್ಞೈರ್ವಿಚಿತ್ರೈರ್ಯಜತೋ ಭವಾಯ ತೇ**
**ರಾಜನ್ ಸ್ವದೇಶಾನನುರೋದ್ಧುಮರ್ಹಸಿ ॥೨೨॥**

ರಾಜನ್=ವೇನನೇ ! ಸರ್ವಲೋಕಾಮರಯಜ್ಞಸಂಗ್ರಹಂ=ಎಲ್ಲ ಲೋಕಗಳನ್ನು ಮತ್ತು ಲೋಕಪಾಲಕರಾದ ದೇವತೆಗಳನ್ನು, ತತ್ಪ್ರತಿಪಾದಕಯಜ್ಞಗಳನ್ನು ಚೆನ್ನಾಗಿ ತಿಳಿಯುವ ಅಥವಾ ಸ್ವೀಕರಿಸುವ ತ್ರಯೀಮಯಂ=ವೇದಪ್ರತಿಪಾದ್ಯನಾದ (ವೇದಗಳಿಗೆ ಇತರ ಶಬ್ದಗಳಿಗಿಂತ ಪ್ರಾಧಾನ್ಯವು ಯಾವನಿಂದ ಬರುವದೋ ಅವನು ತ್ರಯೀಮಯನು. ವೇದಃ ಮಯಃ ಇತರಶಬ್ದರಾಶಿತೋ ಯಸ್ಮಾತ್ ಪ್ರಧಾನಂ ಭವತಿ ತತ್ಪ್ರತಿಪಾದಿತೋ ಭವತಿ ಸಃ ತ್ರಯೀಮಯಃ ।) ದ್ರವ್ಯಮಯಂ=ಪುರೋಡಾಶಾದಿ ದ್ರವ್ಯಗಳಿಗೆ ಉದ್ದೇಶ್ಯನಾದ ತಪೋಮಯಂ=ತಪಸ್ಸಿಗೆ ಉದ್ದೇಶ್ಯನಾದ ತಂ=ಪರಮಾತ್ಮನನ್ನು ತೇ ಭವಾಯ=ನಿನ್ನ ಕಲ್ಯಾಣಕ್ಕಾಗಿ (ಅಭವಾಯ=ಮೋಕ್ಷಕ್ಕಾಗಿ) ವಿಚಿತ್ರೈಃ=ನಾನಾವಿಧವಾದ ಯಜ್ಞೈಃ= ಯಜ್ಞಗಳಿಂದ ಯಜತಃ=ಆರಾಧಿಸುವ ಸ್ವದೇಶಾನ್=ನಿನ್ನ ದೇಶದಲ್ಲಿರುವ ಬ್ರಾಹ್ಮಣರನ್ನು (''ಸ್ವಸ್ಯ ದೇಶಃ ಉಪದೇಶಃ ಯೇಭ್ಯಃ ತೇ'' ನಿನಗೆ ಉಪದೇಶಕರಾದ, ಅಥವಾ ''ಸ್ವಸ್ಯ ದೇಶಃ ವಿಸರ್ಜನಂ ದಾನಂ ಯೇಷಾಂ ತೇ'' ನಿನ್ನಿಂದ ದಾನ ಪಡೆಯುವ ವಿಪ್ರರನ್ನು ಎಂದೂ ಅರ್ಥ) ಅನುರೋದ್ಧುಂ ಅರ್ಹಸಿ=ಅನುಸರಿಸಲು ಯೋಗ್ಯನಾಗಿರುವಿ.

**ಭಾಗವತ ತಾತ್ಪರ್ಯ -**

ಮೂಲದಲ್ಲಿರುವ ''ಸರ್ವಲೋಕಾಮರಯಜ್ಞಸಂಗ್ರಹಂ'' ''ತ್ರಯೀಮಯಂ'' ಮುಂತಾದ ಪದಗಳ ಪ್ರಕೃತೋಪಯುಕ್ತ ಅರ್ಥ ತಿಳಿಸುವರು ಆಚಾರ್ಯರು :-

**ಸರ್ವಲೋಕಾದೀನ್ ಸಂಗೃಹ್ಣಾತೀತಿ ತತ್ಸಂಗ್ರಹಃ ।**

**ಸರ್ವಸ್ಯ ಗ್ರಹಣಾದ್ವಿಷ್ಣುಃ ಸರ್ವಸಂಗ್ರಹ ಉಚ್ಯತೇ ।**
**ವೇದಸ್ಯ ತದ್ವಕ್ತೃಕತ್ವಾತ್ ಪ್ರಾಧಾನ್ಯಂ ತು ತ್ರಯೀಮಯಃ ।**
**ಸರ್ವಂ ತದ್ವಿಷಯತ್ವೇನ ಮುಖ್ಯಂ ಸರ್ವಮಯಸ್ತತಃ ॥ ಇತಿ ಸ್ಕಾಂದೇ ॥**

ಎಲ್ಲ ಲೋಕ ಮುಂತಾದವುಗಳನ್ನು ಚೆನ್ನಾಗಿ ತಿಳಿಯುವದರಿಂದ ''ಸರ್ವಲೋಕಾಮರ-ಯಜ್ಞಸಂಗ್ರಹ'' ಎನಿಸುವನು.

ಎಲ್ಲ ಲೋಕಾದಿಗಳನ್ನು ತಿಳಿಯುವದರಿಂದ ವಿಷ್ಣುವು 'ಸರ್ವಸಂಗ್ರಹ' ಎಂದು ಕರೆಸಿಕೊಳ್ಳುವನು. ವೇದವು ಮುಖ್ಯವಾಗಿ ಪರಮಾತ್ಮನನ್ನು ಪ್ರತಿಪಾದಿಸುವುದರಿಂದ

(ಶ್ರೀಹರಿಯು ಸರ್ವವೇದಕ್ಕೆ ಮುಖ್ಯತಃ ಉಪದೇಶಕನಾದ್ದರಿಂದ, ವೇದಕ್ಕೆ ಪ್ರಾಧಾನ್ಯ ತಂದುಕೊಡುವ ಮೂಲಕ) ಶ್ರೀಹರಿಯು ತ್ರಯೀಮಯ ಎನಿಸುವನು. ಮಯಶಬ್ದಕ್ಕೆ ಪ್ರಾಧಾನ್ಯ ಎಂದು ಅರ್ಥವಿರುವುದರಿಂದ, ದ್ರವ್ಯ ತಪಸ್ಸು ಮೊದಲಾದ ಎಲ್ಲವೂ ಭಗವದುದ್ದೇಶ್ಯಕವಾದರೆ ಪ್ರಧಾನವಾಗುವವು. ಆದಕಾರಣ ಸರ್ವಮಯ ಅಂದರೆ ದ್ರವ್ಯಮಯ ತಪೋಮಯ ಮುಂತಾಗಿ ಕರೆಯಲ್ಪಡುವನು ಎಂದು ಭಾವ. ।।೨೨।।

**ಯಜ್ಞೇನ ಯುಷ್ಮದ್ವಿಷಯೇ ದ್ವಿಜಾತಿಭಿ-**
**ರ್ವಿತಾಯಮಾನೇನ ಸುರಾಃ ಕಲಾ ಹರೇಃ ।**
**ಸ್ವಿಷ್ಟಾಃ ಸುತುಷ್ಟಾಃ ಪ್ರದಿಶಂತಿ ವಾಂಛಿತಂ**
**ತದ್ಧೇಲನಂ ನಾರ್ಹಸಿ ವೀರ ಚೇಷ್ಟಿತುಮ್ ।।೨೩।।**

ಹೇ ವೀರ=ಎಲೋ ವೀರನಾದ ವೇನನೇ ! ಯುಷ್ಮದ್ವಿಷಯೇ=ನಿನ್ನ ದೇಶದಲ್ಲಿ ದ್ವಿಜಾತಿಭಿಃ=ಬ್ರಾಹ್ಮಣರಿಂದ ವಿತಾಯಮಾನೇನ=ನಿರಂತರವಾಗಿ ಮಾಡಲ್ಪಡುವ ಯಜ್ಞೇನ=ಯಜ್ಞದಿಂದ ಹರೇಃ ಕಲಾಃ ಸುರಾಃ=ಭಗವಂತನ ವಿಶೇಷಸನ್ನಿಧಾನಕ್ಕೆ ಪಾತ್ರರಾದ್ದರಿಂದ ಕಲಾ ಎನಿಸುವ ದೇವತೆಗಳು ಸ್ವಿಷ್ಟಾಃ=ಪೂಜಿತರಾಗಿ ಸುತುಷ್ಟಾಃ= ಸಂತುಷ್ಟರಾಗಿ ವಾಂಛಿತಂ=ಅಭೀಷ್ಟವನ್ನು ಪ್ರದಿಶಂತಿ=ಕೊಡುವರು. ತದ್ಧೇಲನಂ=ಅಂತಹ ದೇವತೆಗಳ ಅವಜ್ಞೆಯನ್ನು (ತಿರಸ್ಕಾರವನ್ನು) ಚೇಷ್ಟಿತುಂ=ಮಾಡಲು ನ ಅರ್ಹಸಿ=ನೀನು ಯೋಗ್ಯನಾಗಿಲ್ಲ.

**ಭಾಗವತ ತಾತ್ಪರ್ಯ -**

ಇಲ್ಲಿ 'ದೇವತೆಗಳು ಭಗವಂತನಿಗೆ ಕಲಾ ಎನಿಸಿದ್ದಾರೆ' ಎಂದರೆ ಮತ್ಸ್ಯಾದಿಗಳಂತೆ ಸ್ವರೂಪಾಂಶರಾಗಿದ್ದಾರೆ ಎಂದು ತೋರುತ್ತದೆ. ಆ ಕಾರಣ ವಿವಕ್ಷಿತವಾದ ತಾತ್ಪರ್ಯವನ್ನು ಪ್ರಮಾಣದಿಂದಲೇ ಹೇಳುವರು -

**'ವಿಷ್ಣೋಃ ಸನ್ನಿಹಿತತ್ವಾತ್ತು ಸರ್ವೇ ದೇವಾಃ ಹರೇಃ ಕಲಾಃ' ಇತಿ ಚ ।**

ವಿಷ್ಣುವಿನ ವಿಶೇಷಸನ್ನಿಧಾನವಿರುವದರಿಂದಲೇ ಎಲ್ಲ ದೇವತೆಗಳು ಕಲಾ ಎಂದು ಕರೆಸಿಕೊಳ್ಳುವರು. ಅಂದರೆ ಹರಿಯಿಂದ ವಿಶೇಷ ಆವಿಷ್ಟರು ಎಂದರ್ಥ. ।।೨೩।।

**ವೇನ ಉವಾಚ-**

**ಬಾಲಿಶಾ ಬತ ಯೂಯಂ ವೈ ಅಧರ್ಮೇ ಧರ್ಮಮಾನಿನಃ ।**
**ಯೇ ವೃತ್ತಿದಂ ಪತಿಂ ಹಿತ್ವಾ ಜಾರಂ ಪತಿಮುಪಾಸತೇ ।।೨೪।।**

ವೃತ್ತಿದಂ=ಅನ್ನ ಮುಂತಾದ ಜೀವನಕ್ಕೆ ಬೇಕಾದದ್ದನ್ನು ಕೊಡುವ ಪತಿಂ=ಪಾಲಕನಾದ ನನ್ನನ್ನು ಹಿತ್ವಾ=ತೊರೆದು ಯೇ ಜಾರಂ ಪತಿಂ ಉಪಾಸತೇ=ಹೇಗೆ ಸ್ತ್ರೀಯು ತನ್ನ ಗಂಡನನ್ನು ಬಿಟ್ಟು ಜಾರನನ್ನು ಸೇವಿಸುವಳೋ ಹಾಗೆ ಯಾವ ನೀವು ಬೇರೆ ಈಶನನ್ನು ಸೇವಿಸುವಿರಿ. ಇದು ಅಧರ್ಮ. ಆದಕಾರಣ ಅಧರ್ಮೇ ಧರ್ಮಮಾನಿನಃ=ಅಧರ್ಮವನ್ನೇ ಧರ್ಮವೆಂದು ತಿಳಿದ ಯೂಯಂ=ನೀವು ಬಾಲಿಶಾಃ ವೈ ಬತ !=ಅಜ್ಞಾನಿಗಳಷ್ಟೇ ? ಖೇದವು !॥೨೪॥

**ಅವಜಾನಂತಿ ಯೇ ಮೂಢಾ ನೃಪರೂಪಿಣಮೀಶ್ವರಮ್ ।**
**ನಾನುವಿಂದಂತಿ ತೇ ಭದ್ರಮಿಹ ಲೋಕೇಽಪರತ್ರ ಚ ॥೨೫॥**

ಯೇ ಮೂಢಾಃ=ಯಾವ ಮೂರ್ಖರು ನೃಪರೂಪಿಣಂ ಈಶ್ವರಂ=ರಾಜನ ರೂಪದಲ್ಲಿರುವ ಈಶ್ವರನನ್ನು ಅವಜಾನಂತಿ=ತಿರಸ್ಕರಿಸುವರೋ, ತೇ=ಅವರು ಇಹ ಲೋಕೇ ಅಪರತ್ರ ಚ=ಈ ಲೋಕ ಪರಲೋಕಗಳಲ್ಲಿ ಭದ್ರಂ ನ ಅನುವಿಂದಂತಿ=ಕಲ್ಯಾಣವನ್ನು ಪಡೆಯಲಾರರು. ॥೨೫॥

**ಕೋ ಯಜ್ಞಪುರುಷೋ ನಾಮ ಯತ್ರ ವೋ ಭಕ್ತಿರೀದೃಶೀ ।**
**ಭರ್ತೃಸ್ನೇಹವಿದೂರಾಣಾಂ ಯಥಾ ಜಾರೇ ಕುಯೋಷಿತಾಮ್ ॥೨೬॥**

ಭರ್ತೃಸ್ನೇಹವಿದೂರಾಣಾಂ=ಗಂಡನಲ್ಲಿ ಪ್ರೀತಿ ಇಲ್ಲದಿರುವ ಕುಯೋಷಿತಾಂ=ಕೆಟ್ಟ ಹೆಣ್ಣುಮಕ್ಕಳಿಗೆ ಜಾರೇ ಯಥಾ=ಜಾರನಲ್ಲಿ ಪ್ರೀತಿ ಇದ್ದಂತೆ ವಃ=ನಿಮಗೆ ಯತ್ರ=ಯಾವನಲ್ಲಿ ಈದೃಶೀ=ಈ ವಿಧವಾದ ಭಕ್ತಿಃ=ಸ್ನೇಹವಿದೆಯೋ ಸಃ ಯಜ್ಞಪುರುಷಃ ಕಃ=ಆ ಯಜ್ಞನೆಂಬ ಪುರುಷನು ಯಾರು ? ॥೨೬॥

**ವಿಷ್ಣುರ್ವಿರಿಂಚೋ ಗಿರಿಶ ಇಂದ್ರೋ ವಾಯುರ್ಯಮೋ ರವಿಃ ।**
**ಪರ್ಜನ್ಯೋ ಧನದಃ ಸೋಮಃ ಕ್ಷಿತಿರಗ್ನಿರಪಾಂ ಪತಿಃ ॥೨೭॥**

**ಏತೇ ಚಾನ್ಯೇ ಚ ವಿಬುಧಾಃ ಪ್ರಭವೋ ವರಶಾಪಯೋಃ ।**
**ದೇಹೇ ತಿಷ್ಠಂತಿ ನೃಪತೇಃ ಸರ್ವದೇವಮಯೋ ನೃಪಃ ॥೨೮ ॥**

ವಿಷ್ಣುಃ=ಶ್ರೀಹರಿಯು ವಿರಿಂಚಃ=ಚತುರ್ಮುಖಬ್ರಹ್ಮನು ಗಿರಿಶಃ=ರುದ್ರನು ಇಂದ್ರಃ=ಇಂದ್ರನು ವಾಯುಃ=ವಾಯುವು ಯಮಃ=ಯಮನು ರವಿಃ=ಸೂರ್ಯನು ಪರ್ಜನ್ಯಃ=ಮೇಘಾಭಿಮಾನಿದೇವತೆಯು ಧನದಃ=ಕುಬೇರನು ಸೋಮಃ=ಚಂದ್ರನು ಕ್ಷಿತಿಃ=ಪೃಥ್ವಿಯು (ಧರಾದೇವಿಯು) ಅಗ್ನಿಃ=ಅಗ್ನಿಯು ಅಪಾಂಪತಿಃ=ವರುಣನು

ಏತೇ=ಇವರೆಲ್ಲರೂ ಚ=ಮತ್ತು ವರಶಾಪಯೋಃ ಪ್ರಭವಃ=ವರ-ಶಾಪಗಳನ್ನು ಕೊಡಲು ಸಮರ್ಥರಾದ ಅನ್ಯೇ=ಇಲ್ಲಿ ಹೆಸರು ಹೇಳದಿರುವ ಉಳಿದ ಎಲ್ಲ ವಿಬುಧಾಃ=ದೇವತೆಗಳು ನೃಪತೇಃ=ರಾಜನ ದೇಹೇ=ಶರೀರದಲ್ಲಿ ತಿಷ್ಠಂತಿ=ಇರುತ್ತಾರೆ. ಆ ಕಾರಣ ನೃಪಃ=ರಾಜನು ಸರ್ವದೇವಮಯಃ=ಎಲ್ಲ ದೇವತೆಗಳ ಸನ್ನಿಧಾನಪಾತ್ರನು. ।।೨೭,೨೮।।

**ತಸ್ಮಾನ್ಮಾಂ ಕರ್ಮಭಿರ್ವಿಪ್ರಾ ಯಜಧ್ವಂ ಗತಮತ್ಸರಾಃ ।**
**ಬಲಿಂ ಚ ಮಹ್ಯಂ ಹರತ ಮತ್ತೋಽನ್ಯಃ ಕೋಽಗ್ರಭುಕ್ ಪುಮಾನ್ ।।೨೯।।**

ತಸ್ಮಾತ್=ಆದ್ದರಿಂದ ಹೇ ವಿಪ್ರಾಃ=ಬ್ರಾಹ್ಮಣರೇ ! ಗತಮತ್ಸರಾಃ=ಮಾತ್ಸರ್ಯವನ್ನು ತೊರೆದು (ಮಾತ್ಸರ್ಯ ಇಲ್ಲದವರಾಗಿ) ಮಹ್ಯಂ=ನನಗೆ ಬಲಿಂ ಹರತ=ಕರವನ್ನು ನೀಡಿರಿ. ಮಾಂ ಏವ=ನನ್ನನ್ನೇ ಕರ್ಮಭಿಃ ಯಜಧ್ವಂ=ಯಜ್ಞಯಾಗಾದಿಕರ್ಮಗಳಿಂದ ಪೂಜಿಸಿರಿ, ಅಂದರೆ ನನಗೆ ಪ್ರಿಯವಾದ ಕಾರ್ಯಗಳನ್ನೇ ಮಾಡಿರಿ ಎಂದರ್ಥ. ಮತ್ತಃ ಅನ್ಯಃ=ನನ್ನ ಹೊರತು ಅಗ್ರಭುಕ್ ಪುಮಾನ್=ಯಜ್ಞಭಾಗವನ್ನು ಪ್ರಥಮದಲ್ಲಿ ಭುಂಜಿಸುವ ಯಜ್ಞನಾಮಕನು ಕಃ=ಯಾರು ಇರುವರು ?।।೨೯।।

**ಮೈತ್ರೇಯ ಉವಾಚ -**

**ಇತ್ಥಂ ವಿಪರ್ಯಯಮತಿಃ ಪಾಪೀಯಾನುತ್ಪಥಂ ಗತಃ ।**
**ಅನುನೀಯಮಾನಸ್ತದ್ಯಾಂಚಾಂ ನ ಚಕ್ರೇ ಭ್ರಷ್ಟಮಂಗಲಃ ।।೩೦ ।।**

ಇತ್ಥಂ=ಈ ರೀತಿಯಾಗಿ (''ನೃಪವರ್ಯ ನಿಬೋಧೈತತ್'' ಮುಂತಾಗಿ) ಅನುನೀಯಮಾನಃ=ವಿನಯದಿಂದ ಕೇಳಿಸಿಕೊಳ್ಳಲ್ಪಟ್ಟ ಭ್ರಷ್ಟಮಂಗಲಃ=ಪುಣ್ಯವನ್ನು ಕಳೆದುಕೊಂಡ ಆದ್ದರಿಂದಲೇ ಉತ್ಪಥಂ ಗತಃ=ಸನ್ಮಾರ್ಗವನ್ನು ಬಿಟ್ಟ ಪಾಪೀಯಾನ್=ಅತ್ಯಂತ ಪಾಪಿಷ್ಠನಾದ ಆದ್ದರಿಂದಲೇ ವಿಪರ್ಯಯಮತಿಃ=ಭ್ರಾಂತವಾದ ಬುದ್ಧಿಯುಳ್ಳ ವೇನನು ತದ್ಯಾಂಚಾಂ=ದ್ವಿಜರ ಆ ಪ್ರಾರ್ಥನೆಯನ್ನು ನ ಚಕ್ರೇ=ಅಂಗೀಕರಿಸಲಿಲ್ಲ. ।।೩೦।।

**ಇತಿ ತೇಽಸತ್ಕೃತಾಸ್ತೇನ ದ್ವಿಜಾಃ ಪಂಡಿತಮಾನಿನಾ ।**
**ಭಗ್ನಾಯಾಂ ಹವ್ಯಯಾಂಚಾಯಾಂ ತಸ್ಮೈ ವಿದುರ ಚುಕ್ರುಧುಃ ।।೩೧ ।।**

ವಿದುರ=ವಿದುರನೇ ! ಇತಿ=ಈ ರೀತಿಯಾಗಿ ಪಂಡಿತಮಾನಿನಾ=ಬುದ್ಧಿವಂತನೆಂದು ತನ್ನಷ್ಟಕ್ಕೆ ತಾನೇ ತಿಳಿದ ತೇನ=ಆ ವೇನನಿಂದ ಅಸತ್ಕೃತಾಃ=ಅವಮಾನಿತರಾದ ದ್ವಿಜಾಃ=ಬ್ರಾಹ್ಮಣರು ಹವ್ಯಯಾಂಚಾಯಾಂ=ದೇವತೆಗಳಿಗೆ ಸಮರ್ಪಿಸುವ (ಭವ್ಯ ಎಂಬ ಪಾಠದಲ್ಲಿ ಮಂಗಲಕರವಾದ) ದ್ರವ್ಯದ ಪ್ರಾರ್ಥನೆಯು ಭಗ್ನಾಯಾಂ=ನಡೆಯದಿರಲು ತಸ್ಮೈ=ಅವನ ಮೇಲೆ ಚುಕ್ರುಧುಃ=ಕೋಪಗೊಂಡರು. ।।೩೧।।

**ಹನ್ಯತಾಂ ಹನ್ಯತಾಮೇಷ ಪಾಪಃ ಪ್ರಕೃತಿದಾರುಣಃ ।**
**ಜೀವನ್ ಜಗದಸಾವಾಶು ಕುರುತೇ ಭಸ್ಮಸಾದ್ ಧ್ರುವಮ್ ॥೩೨॥**

ಪ್ರಕೃತಿದಾರುಣಃ=ಸ್ವಾಭಾವಿಕವಾಗಿಯೇ ಕ್ರೂರನಾದ ಪಾಪಃ=ಪಾಪಿಯಾದ ಏಷಃ= ಇವನು ಹನ್ಯತಾಂ ಹನ್ಯತಾಂ=ಕೊಲ್ಲಲ್ಪಡಲಿ ಕೊಲ್ಲಲ್ಪಡಲಿ. ಅಸೌ=ಇವನು ಜೀವನ್= ಬದುಕಿದ್ದರೆ ಧ್ರುವಂ=ನಿಶ್ಚಯವಾಗಿ ಜಗತ್=ಪ್ರಪಂಚವನ್ನು ಆಶು=ಈಗಲೇ ಭಸ್ಮಸಾತ್ ಕುರುತೇ=ಬೂದಿಯಾಗಿ ಮಾಡುವನು. ॥೩೨॥

**ನಾಯಮರ್ಹತ್ಯಸದ್ವೃತ್ತೋ ನರದೇವವರಾಸನಮ್ ।**
**ಯೋ ವೈ ಯಜ್ಞಪತಿಂ ವಿಷ್ಣುಂ ವಿನಿಂದತ್ಯನಪತ್ರಪಃ ॥೩೩॥**

ಅನಪತ್ರಪಃ=ನಿರ್ಲಜ್ಜನಾದ ಯಃ=ಯಾವನು ಯಜ್ಞಪತಿಂ ವಿಷ್ಣುಂ ವಿನಿಂದತಿ= ಯಜ್ಞಪತಿಯಾದ ವಿಷ್ಣುವನ್ನು ನಿಂದಿಸುತ್ತಿರುವನೋ ಸಃ=ಅಂತಹ ಅಸದ್ವೃತ್ತಃ= ದುರಾಚಾರಿಯಾದ ಅಯಂ=ಇವನು ನರದೇವವರಾಸನಂ=ರಾಜರ ಶ್ರೇಷ್ಠ ಸಿಂಹಾಸನವನ್ನು ನ ಅರ್ಹತಿ=ಪಡೆಯಲು ಅರ್ಹನಲ್ಲ. (ಯೋಗ್ಯವಲ್ಲ)॥೩೩॥

ನಿಂದ್ಯರನ್ನು ನಿಂದಿಸುವದು ಯುಕ್ತವೇ ಎಂದರೆ ವಿಷ್ಣುವು ಯಾರಿಂದಲೂ ನಿಂದ್ಯನಲ್ಲ ಎಂದು ಹೇಳುವರು -

**ಕೋ ವೈನಂ ಪರಿಚಕ್ಷೀತ ವೇನಮೇಕಮೃತೇಽಶುಭಮ್ ।**
**ಪ್ರಾಪ್ತ ಈದೃಶಮೈಶ್ವರ್ಯಂ ಯದನುಗ್ರಹಭಾಜನಃ ॥೩೪॥**

ಯದನುಗ್ರಹಭಾಜನಃ ಸನ್=ಯಾವನ ಅನುಗ್ರಹಕ್ಕೆ ವಿಷಯನಾಗಿ ಈದೃಶಂ ಐಶ್ವರ್ಯಂ ಪ್ರಾಪ್ತಃ=ಈ ವಿಧವಾದ ಸಂಪತ್ತನ್ನು ವೇನನು ಪಡೆದಿರುವನೋ ಅಂತಹ ಏನಂ=ವಿಷ್ಣುವನ್ನು ವೇನಂ ಏಕಂ ಋತೇ=ಕೃತಘ್ನನಾದ ಈ ಒಬ್ಬ ವೇನನನ್ನು ಬಿಟ್ಟು ಕಃ ಪರಿಚಕ್ಷೀತ=ಯಾವನು ನಿಂದಿಸುವನು ? ಯಾರೂ ನಿಂದಿಸಲಾರರು. ಆದ್ದರಿಂದ ಕೃತಘ್ನನಾದ್ದರಿಂದಲೂ ಇವನು ಅವಶ್ಯ ಹಂತವ್ಯನು. ॥೩೪॥

**ಇತ್ಥಂ ವ್ಯವಸಿತಾ ಹಂತುಮೃಷಯೋ ರೂಢಮನ್ಯವಃ ।**
**ನಿಜಘ್ನುರ್ಹುಂಕೃತೈರ್ವೇನಂ ಹತಮಚ್ಯುತನಿಂದಯಾ ॥೩೫॥**

ಇತ್ಥಂ=ಈ ರೀತಿಯಾಗಿ ಹಂತುಂ=ಕೊಲ್ಲಲು ವ್ಯವಸಿತಾಃ=ನಿಶ್ಚಯಿಸಿದ ರೂಢಮನ್ಯವಃ= ಸಿಟ್ಟನ್ನು (ಹೊರಹಾಕಿದ) ಹೊರಗೆಡವಿದ ಋಷಯಃ=ಋಷಿಗಳು ಅಚ್ಯುತನಿಂದಯಾ ಹತಂ=ಶ್ರೀಹರಿಯನ್ನು ನಿಂದಿಸಿದ್ದರಿಂದಲೇ ಸತ್ತಂತಿರುವ ವೇನಂ=ವೇನನನ್ನು ಹುಂಕೃತೈಃ=ಹುಂಕಾರದಿಂದ ನಿಜಘ್ನುಃ=ಸಂಹರಿಸಿದರು. ॥೩೫॥

**ಋಷಿಭಿಃ ಸ್ವಾಶ್ರಮದಪದಂ ಗತೇ ಪುತ್ರಕಲೇವರಮ್ ।**
**ಸುನೀಥಾ ಪಾಲಯಾಮಾಸ ವಿದ್ಯಾಯೋಗೇನ ಶೋಚತೀ ॥೩೬॥**

ಋಷಿಭಿಃ ಸ್ವಾಶ್ರಮಪದಂ ಗತೇ ಸತಿ=ಋಷಿಗಳು ತಮ್ಮ ಆಶ್ರಮಕ್ಕೆ ಹೋಗುತ್ತಿರಲು ಶೋಚತೀ=ದುಃಖಿಸುವ ಸುನೀಥಾ=ತಾಯಿಯಾದ ಸುನೀಥಾಳು ಪುತ್ರಕಲೇವರಂ=ಮಗನ ದೇಹವನ್ನು ವಿದ್ಯಾಯೋಗೇನ ಪಾಲಯಾಮಾಸ=ಮಂತ್ರ ಮತ್ತು ಎಣ್ಣೆಯಲ್ಲಿಡುವದೇ ಮುಂತಾದ ಉಪಾಯದಿಂದ ರಕ್ಷಿಸಿದಳು. ॥೩೬॥

**ಏಕದಾ ಮುನಯಸ್ತೇ ತು ಸರಯೂಸಲಿಲಾಪ್ಲುತಾಃ ।**
**ಹುತ್ವಾಽಗ್ನಿಂ ಸತ್ಕಥಾಶ್ಚಕ್ರುರುಪವಿಷ್ಟಾಃ ಸರಿತ್ತಟೇ ॥೩೭॥**

ತೇ ಮುನಯಃ=ಆ ಋಷಿಗಳು ಏಕದಾ=ಒಂದು ಸಲ ಸರಯೂಸಲಿಲಾಪ್ಲುತಾಃ= ಸರಯೂ ನೀರಿನಲ್ಲಿ ಮಿಂದು ಅಗ್ನಿಂ ಹುತ್ವಾ=ಅಗ್ನಿಹೋತ್ರಾದಿಗಳನ್ನು ಮಾಡಿ ಸರಿತ್ತಟೇ= ನದಿಯ ದಂಡೆಯಲ್ಲಿ ಉಪವಿಷ್ಟಾಃ=ಕುಳಿತವರಾಗಿ ಸತ್ಕಥಾಃ ಚಕ್ರುಃ=ಭಗವತ್ಕಥಾಶ್ರವಣ ಮಾಡುತ್ತಿದ್ದರು. ॥೩೭॥

**ವೀಕ್ಷ್ಯೋತ್ಥಿತಾನ್ ಮಹೋತ್ಪಾತಾನಾಹುರ್ಲೋಕಭಯಂಕರಾನ್ ।**
**ಅಪ್ಯಭದ್ರಮನಾಥಾಯಾ ದಸ್ಯುಭ್ಯೋ ನ ಭವೇದ್ ಭುವಃ ॥೩೮॥**

ಲೋಕಭಯಂಕರಾನ್=ಜನರಿಗೆ ಭಯವನ್ನುಂಟುಮಾಡುವ ಉತ್ಥಿತಾನ್=ಎದ್ದು ಕಾಣಿಸಿಕೊಂಡ ಮಹೋತ್ಪಾತಾನ್=ಅಪಶಕುನಗಳನ್ನು ವೀಕ್ಷ್ಯ=ನೋಡಿ ಅನಾಥಾಯಾಃ ಭುವಃ=ರಾಜನಿಲ್ಲದಿರುವ ಭೂಮಿಗೆ ದಸ್ಯುಭ್ಯಃ=ಕಳ್ಳರಿಂದ ಅಭದ್ರಂ ನ ಭವೇದಪಿ=ಕಳ್ಳರಿಂದ ಅಮಂಗಲವಾಗುವುದಿಲ್ಲವೇನು ? ನಿಶ್ಚಿತವಾಗಿ ಅಮಂಗಲ ಆಗುವದು ಎಂದು ಆಹುಃ=ಹೇಳಿದರು. ॥೩೮॥

**ಏವಂ ಬ್ರುವತ್ಸು ಋಷಿಷು ಧಾವತಾಂ ಸರ್ವತೋ ದಿಶಮ್ ।**
**ಪಾಂಸುಃ ಸಮುತ್ಥಿತೋ ಭೂಮೇಶ್ಚೋರಾಣಾಂ ವಸು ಲುಂಪತಾಮ್ ॥೩೯॥**

ಋಷಿಷು=ಋಷಿಗಳು ಏವಂ=ಈ ರೀತಿಯಾಗಿ ಬ್ರುವತ್ಸು ಸತ್ಸು=ಹೇಳುತ್ತಿರಲು ಧಾವತಾಂ=ಓಡುತ್ತಿರುವ ವಸು ಲುಂಪತಾಂ=ಧನವನ್ನು ಅಪಹರಿಸುವ ಚೋರಾಣಾಂ ಸಕಾಶಾತ್=ಕಳ್ಳರಿಂದ ಸರ್ವತಃ ದಿಶಂ=ಎಲ್ಲ ದಿಕ್ಕುಗಳಲ್ಲಿ ಭೂಮೇಃ ಪಾಂಸುಃ ಸಮುತ್ಥಿತಃ=ಭೂಮಿಯಿಂದ ಧೂಳು ಎದ್ದಿತು. ॥೩೯॥

**ತದುಪದ್ರವಮಾಜ್ಞಾಯ ಲೋಕಸ್ಯ ವಸು ಲುಂಪತಾಮ್ ।**
**ಭರ್ತರ್ಯುಪರತೇ ತಸ್ಮಿನ್ನನ್ಯೋನ್ಯಂ ಚ ಜಿಘಾಂಸತಾಮ್ ॥೪೦॥**

ತಸ್ಮಿನ್ ಭರ್ತರಿ ಉಪರತೇ=ಆ ವೇನನು ಮೃತನಾಗುತ್ತಿರಲು ತತ್(ತದಾ)=ಆಗ ಲೋಕಸ್ಯ=ಜನರಿಗೆ ಅನ್ಯೋನ್ಯಂ ಜಿಘಾಂಸತಾಂ=ಪರಸ್ಪರ ಕೊಲ್ಲಲಿಚ್ಛಿಸುವ, ವಸು ಲುಂಪತಾಂ=ದ್ರವ್ಯವನ್ನು ಅಪಹರಿಸುವ ಕಳ್ಳರ ಉಪದ್ರವಂ=ಪೀಡೆಯನ್ನು ಆಜ್ಞಾಯ=ತಿಳಿದು, (ಅನ್ವಯ ಮುಂದುವರೆಯುವುದು)।।೪೦।।

**ಚೋರಪ್ರಾಯಂ ಜನಪದಂ ಹೀನಸತ್ತ್ವಮರಾಜಕಮ್ ।**
**ಲೋಕಾ ನಾವಾರಯಞ್ಛಕ್ತಾ ಅಪಿ ತದ್ದೋಷದರ್ಶಿನಃ ।।೪೧ ।।**

ಚೋರಪ್ರಾಯಂ=ಕಳ್ಳರಿಂದ ತುಂಬಿದ, ಹೀನಸತ್ವಂ=ಪರಾಕ್ರಮರಹಿತವಾದ, ಅರಾಜಕಂ=ರಾಜನಿಲ್ಲದ ಜನಪದಂ=ದೇಶವನ್ನು ಆಜ್ಞಾಯ=ತಿಳಿದು ಲೋಕಾಃ ಶಕ್ತಾಃ ಅಪಿ=ಕ್ಷತ್ರಿಯರು ಸಮರ್ಥರಾಗಿದ್ದರೂ ತದ್ದೋಷದರ್ಶಿನಃ ಅಪಿ=ಅದಕ್ಕೆ ಪರಿಹಾರ ಮಾಡದಿದ್ದರೆ ಪಾಪ ಬರುವದೆಂದು ತಿಳಿದರೂ ನ ಅವಾರಯನ್=ಕಳ್ಳರನ್ನು ನಿವಾರಿಸಲಿಲ್ಲ.

**ಅಭಿಪ್ರಾಯವಿಶೇಷಗಳು :-**

ತದ್ದೋಷದರ್ಶಿನಃ - ಅಧರ್ಮ ಮಾಡುವವರನ್ನು ನಿರಾಕರಿಸದಿದ್ದರೆ ಅವರು ಮಾಡುವ ಅಧರ್ಮದ ಪಾಪವು ಉಪಾದಸೀನ ಮಾಡಿದವರಿಗೂ ತಟ್ಟುವದು ಎಂಬುದಾಗಿ ಕ್ಷತ್ರಿಯರು ತಿಳಿದಿದ್ದರೂ ನಾಶ ಮಾಡಲಿಲ್ಲ ಎಂದು ಯಾದುಪತ್ಯದ ಭಾವ.

ಋಷಿಗಳು ವೇನನನ್ನು ಕೊಂದಂತೆ ಕಳ್ಳರನ್ನೂ ಕೊಲ್ಲಲು ಶಕ್ತರಾದವರೇ. ಆದರೂ ಕಳ್ಳರನ್ನು ಕೊಲ್ಲದಿರಲು ಕಾರಣವನ್ನು ಹೇಳಿದರು "ತದ್ದೋಷದರ್ಶಿನಃ" ಎಂದು. ಅಂದರೆ ತಮ್ಮ ತಪಸ್ಸಿನ ಹಾನಿಯಾಗುವದು ಎಂಬ ಕಾರಣಕ್ಕೆ ಕಳ್ಳರನ್ನು ಸಂಹರಿಸಲಿಲ್ಲ. ಆತತಾಯಿಗಳ ವಧ ಕ್ಷತ್ರಿಯರಿಗೆ ವಿಹಿತವಾದರೂ ಬ್ರಾಹ್ಮಣರಿಗೆ ಅಲ್ಲ. ಕಾರಣ ಚೋರಹತ್ಯಾದೋಷ ಬರುವದು ಎಂಬುದಕ್ಕಾಗಿ ಸಂಹರಿಸಲಿಲ್ಲ ಎಂದು ಭಾವ.

ಬ್ರಾಹ್ಮಣರಿಗೆ ಅಹಿಂಸಾ ಮುಖ್ಯಧರ್ಮವಾದ ಕಾರಣ ಕೊಲ್ಲಲಿಲ್ಲ. ಹೀಗೆ ಶುಕದೇವ, ಜೀವಗೋಸ್ವಾಮಿ, ವೀರರಾಘವ ಅವರ ಅಭಿಪ್ರಾಯ. ।।೪೧।।

**ಬ್ರಾಹ್ಮಣಃ ಸಮದೃಕ್ ಶಾಂತೋ ದೀನಾನಾಂ ಸಮುಪೇಕ್ಷಕಃ ।**
**ಸ್ರವತೇ ಬ್ರಹ್ಮ ತಸ್ಯಾಪಿ ಭಿನ್ನಭಾಂಡಾತ್ಪಯೋ ಯಥಾ ।।೪೨।।**

ಯಥಾ=ಹೇಗೆ ಭಿನ್ನಭಾಂಡಾತ್=ಒಡಕು(ಭಿನ್ನವಾದ)ಪಾತ್ರೆಯಿಂದ ಪಯಃ=ನೀರು ಸ್ರವತೇ=ಹರಿದು ಹೋಗುವದೋ ತಥಾ=ಹಾಗೆ ಶಾಂತಃ ಅಪಿ=ರಾಗಾದಿದೋಷರಹಿತ-ನಾಗಿದ್ದರೂ ಸಮದೃಗಪಿ=ಬ್ರಹ್ಮಜ್ಞಾನಿಯಾಗಿದ್ದರೂ ಬ್ರಾಹ್ಮಣಃ=ಬ್ರಾಹ್ಮಣನಾಗಿದ್ದರೂ ಯಃ ದೀನಾನಾಂ=ದುಃಖಿತರಲ್ಲಿ ಸಮುಪೇಕ್ಷಕಃ=ಉದಾಸೀನನಾದರೆ ತಸ್ಯ=ಅವನ ಬ್ರಹ್ಮ

ಸ್ರವತೇ=ಬ್ರಾಹ್ಮಣ್ಯವು ನಾಶವಾಗುವದು. ಆ ಕಾರಣ ನಾವು ಉಪೇಕ್ಷಿಸಬಾರದು. ।।೪೨।।

ಚೋರರನ್ನು ಕೊಂದರೆ ಸ್ವಧರ್ಮ(ಅಹಿಂಸಾ)ಹಾನಿ, ತಪೋಹಾನಿ ಆಗುವುದು. ಹಾಗೆಂದು ದೀನರನ್ನು ಉಪೇಕ್ಷಿಸಿದರೆ ಬ್ರಾಹ್ಮಣ್ಯಹಾನಿ ಬರುವದು ಎಂದು ತಿಳಿದು ಕೊಲ್ಲಲೂ ಇಲ್ಲ ಉದಾಸೀನರೂ ಆಗಲಿಲ್ಲ. ಕಿಂತು ಬೇರೆ ರಾಜನ ವ್ಯವಸ್ಥೆ ಮಾಡಿದರೆಂದು ಮುಂದೆ ಹೇಳುವರು. ಆದರೆ ಬೇರೆ ಯಾರನ್ನೋ ರಾಜನನ್ನಾಗಿ ಮಾಡುವಂತಿಲ್ಲವೆಂದೂ ಹೇಳುವರು -

**ನಾಂಗಸ್ಯ ವಂಶೋ ರಾಜರ್ಷೇರೇಷ ಸಂಸ್ಥಾತುಮರ್ಹತಿ ।**
**ಅಮೋಘವೀರ್ಯಾ ಹಿ ನೃಪಾ ವಂಶೇಽಸ್ಮಿನ್ ಕೇಶವಾಶ್ರಯಾಃ ।।೪೩।।**

ಏಷಃ ರಾಜರ್ಷೇಃ=ಈ ರಾಜರ್ಷಿಯಾದ ಅಂಗಸ್ಯ=ಅಂಗನ ವಂಶಃ=ಕುಲವು ಸಂಸ್ಥಾತುಂ=ನಾಶವಾಗಲು ನ ಅರ್ಹತಿ=ಯೋಗ್ಯವಲ್ಲ. ಅಸ್ಮಿನ್ ವಂಶೇ=ಈ ವಂಶದಲ್ಲಿ ಕೇಶವಾಶ್ರಯಾಃ=ಹರಿಭಕ್ತರಾದ ಅಮೋಘವೀರ್ಯಾಃ=ಅದ್ಭುತಪರಾಕ್ರಮಿಗಳಾದ ನೃಪಾಃ=ರಾಜರುಗಳು ಆಗಿದ್ದಾರೆ. (ಪ್ರಿಯವ್ರತ, ಉತ್ತಾನಪಾದ, ಧ್ರುವ ಮುಂತಾದವರು.) ಆ ಕಾರಣ ಇದನ್ನೇ ಬೆಳೆಸಬೇಕು. ।।೪೩।।

**ವಿನಿಶ್ಚಿತ್ಯೈವಮೃಷಯೋ ವಿಪನ್ನಸ್ಯ ಮಹೀಪತೇಃ ।**
**ಮಮಂಥುರೂರುಂ ತರಸಾ ತತ್ರಾಸೀದ್ಬಾಹುಕೋ ನರಃ ।।೪೪।।**

ಋಷಯಃ=ಮುನಿಗಳು ಏವಂ=ಈ ರೀತಿಯಾಗಿ ವಿನಿಶ್ಚಿತ್ಯ=ನಿಶ್ಚಯಿಸಿ ವಿಪನ್ನಸ್ಯ= ಮೃತನಾದ ಮಹೀಪತೇಃ=ರಾಜನಾದ ವೇನನ ಊರುಂ=ತೊಡೆಯನ್ನು ತರಸಾ=ವೇಗವಾಗಿ ಮಮಂಥುಃ=ಕಡೆದರು. ತತ್ರ=ಅಲ್ಲಿ ಬಾಹುಕಃ ನರಃ=ಗಿಡ್ಡನಾದ ಮನುಷ್ಯನು ಆಸೀತ್=ಜನಿಸಿದನು. ।।೪೪।।

**ಕಾಕಕೃಷ್ಣೋಽತಿಹ್ರಸ್ವಾಂಗೋ ಹ್ರಸ್ವಬಾಹುರ್ಮಹಾಹನುಃ ।**
**ಹ್ರಸ್ವಪಾನ್ನಿಮ್ನನಾಸಾಗ್ರೋ ರಕ್ತಾಕ್ಷಸ್ತಾಮ್ರಮೂರ್ಧಜಃ ।।೪೫ ।।**

ಕಾಕಕೃಷ್ಣಃ=ಕಾಗೆಯಂತೆ ಕಪ್ಪು ಬಣ್ಣದವನು, ಅತಿಹ್ರಸ್ವಾಂಗಃ=ಬಹಳಚಿಕ್ಕ (ಗಿಡ್ಡ) ಶರೀರವುಳ್ಳವನು, ಹ್ರಸ್ವಬಾಹುಃ=ಗಿಡ್ಡಕೈಗಳುಳ್ಳವನು, ಮಹಾಹನುಃ=ಉದ್ದವಾದ ಗದ್ದವುಳ್ಳ ಹ್ರಸ್ವಪಾತ್=ಗಿಡ್ಡಪಾದವುಳ್ಳ ನಿಮ್ನನಾಸಾಗ್ರಃ=ಬಾಗಿದ ಮೂಗಿನ ತುದಿಯುಳ್ಳ ರಕ್ತಾಕ್ಷಃ=ಕೆಂಪು ಕಣ್ಣುಗಳುಳ್ಳ ತಾಮ್ರಮೂರ್ಧಜಃ=ತಾಮ್ರದಂತೆ ಕೆಂಪಾದ ಕೂದಲುಗಳುಳ್ಳವನು. ।।೪೫।।

**ತಂ ತು ತೇಽವನತಂ ದೃಷ್ಟ್ವಾ ಕಿಂ ಕರೋಮೀತಿ ವಾದಿನಮ್ ।**
**ನಿಷೀದೇತ್ಯಬ್ರುವಂಸ್ತಾತ ಸ ನಿಷಾದಸ್ತತೋಽಭವತ್ ।। ೪೬ ।।**

ತಾತ=ವಿದುರರೇ ! ತೇ=ಮುನಿಗಳು ಅವನತಂ=ಬಾಗಿ ನಿಂತಿರುವ, ಕಿಂ ಕರೋಮಿ ಇತಿ ವಾದಿನಂ=ಏನು ಮಾಡಲಿ ಎಂದು ಕೇಳುವ ತಂ=ಆ ಮನುಷ್ಯನನ್ನು ದೃಷ್ಟ್ವಾ=ನೋಡಿ ನಿಷೀದ ಇತಿ ಅಬ್ರುವನ್=ಕೂಡು ಎಂದು ಹೇಳಿದರು. ತತಃ=ನಿಷೀದ ಎಂದು ಹೇಳಿದ್ದರಿಂದ ಸಃ=ಅವನು ನಿಷಾದಃ ಅಭವತ್=ನಿಷಾದನೆಂದು ಪ್ರಸಿದ್ಧನಾದನು. ।।೪೬।।

**ತಸ್ಯ ವಂಶ್ಯಾಸ್ತು ನೈಷಾದಾ ಗಿರಿಕಾನನಗೋಚರಾಃ ।**
**ಯೋಽಪಾಹರಜ್ಜಾಯಮಾನೋ ವೇನಕಲ್ಮಷಮುಲ್ಬಣಮ್ ।।೪೭ ।।**

ಯಃ=ಯಾವನು ಜಾಯಮಾನಃ=ಹುಟ್ಟುತ್ತಲೇ ಉಲ್ಬಣಂ=ಭಯಂಕರವಾದ ವೇನಕಲ್ಮಷಂ=ವೇನನಲ್ಲಿರುವ ಪಾಪವನ್ನು ಅಪಾಹರತ್=ಕದ್ದು ತಂದನೋ ತಸ್ಯ=ಅವನ ವಂಶ್ಯಾಃ=ವಂಶದಲ್ಲಿ ಜನಿಸಿದವರು ನೈಷಾದಾಃ=ಬೇಡರು ಗಿರಿಕಾನನಗೋಚರಾಃ= ಗುಡ್ಡಅಡವಿಗಳಲ್ಲಿ ವಾಸಿಸುವವರಾದರು.

ಬೇಟೆ ಕಳ್ಳತನ ಲೂಟಿ ಮುಂತಾದ ಕೆಲಸ ಮಾಡುವದರಿಂದ ಊರಲ್ಲಿ ಇರಲು ಅವಕಾಶ ನೀಡಲಿಲ್ಲವೆಂದು ಭಾವ.

ವೇನನ ಶರೀರದಲ್ಲಿರುವ ಪಾಪಕ್ಕೆ ಅಭಿಮಾನಿಯಾದ ತಾಮಸಜೀವನು ತನ್ನ ಶರೀರವಾಗಿ ಅವನ ಪಾಪವನ್ನು ತೆಗೆದುಕೊಂಡು ನಿಷಾದರೂಪದಿಂದ ಹೊರಗೆ ಉತ್ಪನ್ನನಾದನೆಂದು ಭಾವ. ।।೪೭।।

**ಮೈತ್ರೇಯ ಉವಾಚ -**

**ಅಥ ತಸ್ಯ ಪುನರ್ವಿಪ್ರೈರ್ವಿಪನ್ನಸ್ಯ ಮಹೀಪತೇಃ ।**
**ಬಾಹುಭ್ಯಾಂ ಮಥ್ಯಮಾನಾಭ್ಯಾಂ ಮಿಥುನಂ ಸಮಪದ್ಯತ ।।೪೮।।**

ಅಥ=ಪಾಪವು ಹೋದ ಅನಂತರ ಪುನಃ=ಮತ್ತೆ ವಿಪನ್ನಸ್ಯ=ಮೃತನಾದ ಮಹೀಪತೇಃ= ವೇನರಾಜನ, ವಿಪ್ರೈಃ=ಬ್ರಾಹ್ಮಣರಿಂದ ಮಥ್ಯಮಾನಾಭ್ಯಾಂ=ಕಡೆಯುತ್ತಿರುವ ಬಾಹುಭ್ಯಾಂ= ಭುಜಗಳಿಂದ ಮಿಥುನಂ=ಜೋಡಿಯು (ಗಂಡು-ಹೆಣ್ಣು) ಸಮಪದ್ಯತ=ಜನಿಸಿತು. ।।೪೮।।

**ತದ್ ದೃಷ್ಟ್ವಾ ಮಿಥುನಂ ಜಾತಮೃಷಯೋ ಬ್ರಹ್ಮವಾದಿನಃ ।**
**ಊಚುಃ ಪರಮಸಂತುಷ್ಟಾ ವಿದಿತ್ವಾ ಭಗವತ್ಕಲಾಮ್ ।।೪೯ ।।**

ಬ್ರಹ್ಮವಾದಿನಃ=ಬ್ರಹ್ಮಜ್ಞಾನಿಗಳಾದ ಋಷಯಃ=ಮುನಿಗಳು ಜಾತಂ=ಹುಟ್ಟಿರುವ ತದ್‌ಮಿಥುನಂ=ಆ ದ್ವಂದ್ವವನ್ನು ದೃಷ್ಟ್ವಾ=ನೋಡಿ ಭಗವತ್ಕಲಾಂ ವಿದಿತ್ವಾ=ಅದರಲ್ಲಿ ಗಂಡಾದ ಪೃಥುವು ಶ್ರೀಹರಿಯ ವಿಶೇಷಸನ್ನಿಧಾನಪಾತ್ರನು, ಭಿನ್ನಾಂಶನೆಂದು ವಿದಿತ್ವಾ=ತಿಳಿದು ಪರಮಸಂತುಷ್ಟಾಃ=ಬಹಳ ಆನಂದಪಟ್ಟವರಾಗಿ ಊಚುಃ=ಹೇಳಿದರು.

**ಭಾಗವತ ತಾತ್ಪರ್ಯ -**

ವೇನನನ್ನು ಋಷಿಗಳು ಹುಂಕಾರದಿಂದ ಸಂಹರಿಸಿದರು ಎಂದು ಹೇಳಿದರಷ್ಟೇ. ಆದರೆ ಈ ರೀತಿ ಕೊಲ್ಲಲ್ಪಟ್ಟ ವೇನನು ಯಾವ ಲೋಕಕ್ಕೆ ಹೋದನು ? ಋಷಿಗಳು ವೇನನ ಮತವನ್ನು ಖಂಡಿಸುವವರಾದ್ದರಿಂದ, ಆ ವೇನನ ಮತವನ್ನು ಮುಂದೆ ಅನುಷ್ಠಾನ ಮಾಡುವವರಾರು ?

ಅದನ್ನು ನಿರಾಕರಣೆ ಮಾಡುವ ಪೃಥುವು ಶೀಘ್ರದಲ್ಲಿ ಜನಿಸಿದ್ದರಿಂದ ವೇನನ ಮತವು ನಶಿಸಿಹೋಯಿತು ಎಂದೂ ಹೇಳಲಾಗುವದಿಲ್ಲ. ಏಕೆಂದರೆ - ವೇನನ ಮತವು (ನಾನೇ ದೇವರು ಎಂಬ ಮತವು) ಲೋಕದಲ್ಲಿ ಅಲ್ಲಲ್ಲಿ ಕಂಡುಬರುತ್ತದೆ.

ಮತ್ತು "ಮದನ್ಯೋ ಈಶ್ವರೋ ನಾಸ್ತಿ" ನನ್ನ ಹೊರತು ದೇವರು ಬೇರೆ ಇಲ್ಲ ಎಂಬ ವೇನನ ಮಾತನ್ನು ಋಷಿಗಳು ಹೇಗೆ ನಿಂದಿಸಲು ಸಾಧ್ಯ ? ಏಕೆಂದರೆ ಆ ವಿಧವಾದ ತಿಳುವಳಿಕೆಯು ಮೋಕ್ಷಸಾಧನವೆಂದು "ಬ್ರಹ್ಮೈವ ಸನ್ ಬ್ರಹ್ಮ ಆಪ್ನೋತಿ" ಇತ್ಯಾದಿ ಶ್ರುತಿಗಳಲ್ಲಿ ಶ್ರುತವಾಗುತ್ತಿದೆ. ಮತ್ತು ಅವನ ಮಾತನ್ನು ಆಗಿನ ಕಾಲದವರು ಎಲ್ಲರೂ ಸ್ವೀಕರಿಸಿದ್ದರಷ್ಟೇ ?

ಪೃಥುವು ಆ ವೇನನ ಮತವನ್ನು ನಿರಾಕರಿಸಿದನು ಎಂದೂ ಹೇಳಲಾಗದು. ಕಾರಣ ಮತ್ತೆ ಕಲಿಯುಗದಲ್ಲಿ ಸಂಕರ ಮುಂತಾದವರು ಅದನ್ನು ಮುಂದುವರೆಸಿರುವರು. ಅದು ನಿಂದ್ಯವಾಗಿದ್ದರೆ ಮುಂದೆವರೆಯಲಾರದಷ್ಟೇ ? ಎಂಬುದಾಗಿ ಆಕ್ಷೇಪ ಬಂದರೆ, ಆ ಯುಗದಲ್ಲಿ ಆಗಲೀ ಈ ಯುಗದಲ್ಲೇ ಆಗಲಿ ಯಾರು ಆ ವೇನನ ಮತವನ್ನು ಅನುಸರಿಸಿದರೋ ಅವರು ತಮೋಯೋಗ್ಯರಾದ ಅಸುರರೇ ಹೊರತು ಸಜ್ಜನರಲ್ಲ. ಆ ಕಾರಣ ವೇನನ ಮತವನ್ನು ನಿಂದಿಸಿದ್ದು ಸರಿಯೇ ಆಗಿದೆ ಎಂಬ ಅಭಿಪ್ರಾಯದಿಂದ "ವೇನನ ಮತವನ್ನು ಅನುಸರಿಸಿದವರು ಅಸುರರು" ಎಂಬ ವಿಷಯದಲ್ಲಿ ಪ್ರಮಾಣವನ್ನು ಹೇಳುವರು ಆಚಾರ್ಯರು -

> ಅಹಂ ಬ್ರಹ್ಮೇತಿ ವೇನಸ್ತು ಧ್ಯಾಯನ್ನಾಪಾಧರಂ ತಮಃ ।
> ತದ್ರಾದ್ಧಾಂತೋ ಮಹೀಂ ವ್ಯಾಪ್ತೋ ಭೇರ್ಯಾ ಖ್ಯಾಪಯತೋಽನಿಶಮ್ ॥
> ಅಸುರಾ ರಾಕ್ಷಸಾಶ್ಚೈವ ಪಿಶಾಚಾಸ್ತತ್ಪಥಿ ಸ್ಥಿತಾಃ ।
> ಭೂಮೌ ತತ್ಪೃಥುನಾ ಸರ್ವಂ ನಿರಸ್ತಂ ಮಹಿತಾತ್ಮನಾ ॥
> ಪುನಃ ಕಲಿಯುಗೇ ಪ್ರಾಪ್ತೇ ಅಷ್ಟಾವಿಂಶತಿಮೇ ಮನೋಃ ।
> ವೈವಸ್ವತಸ್ಯ ಸಮಯೇ ಜಾತಾ ಕ್ರೋಧವಶಾ ಭುವಿ ।
> ಖ್ಯಾಪಯಂತಿ ದುರಾತ್ಮಾನೋ ಮಣಿಮಾಂಸ್ತತ್ಪುರಃಸರಃ ॥ ಇತಿ ಭವಿಷ್ಯತ್ಪುರಾಣೇ ॥

ವೇನರಾಜನು ನಾನೇ ಬ್ರಹ್ಮನೆಂದು ಧ್ಯಾನಿಸಿ ಅಂಧಂತಮಸ್ಸನ್ನು ಹೊಂದಿದನು. ಪತ್ರಿನಿತ್ಯವೂ ಡಂಗುರ ಬಾರಿಸುವುದರಿಂದ ವೇನನ ಸಿದ್ಧಾಂತವಾದ ಜೀವಬ್ರಹ್ಮೈಕ್ಯವಾದವು ಇಡೀ ಭೂಮಿಯನ್ನು ವ್ಯಾಪಿಸಿತು. ಅಸುರರು, ರಾಕ್ಷಸರು, ಪಿಶಾಚಿಗಳು, ಮರ್ತ್ಯಾಧಮರು ಎಲ್ಲರೂ ವೇನನ ವಾದವನ್ನು ಸ್ವೀಕರಿಸುವರು.

ಪೂಜ್ಯನಾದ ಪೃಥುರಾಜನಿಂದ ಭೂಮಿಯಲ್ಲಿ ವೇನನ ಮತವು ನಿರಾಕೃತವಾಯಿತು. ಆದರೆ ಮತ್ತೆ ಎಪ್ಪತ್ತೊಂದು ಮಹಾಯುಗಾತ್ಮಕವಾದ ವೈವಸ್ವತಮನ್ವಂತರದ ೨೮ನೇ ಮಹಾಯುಗದ ಕಲಿಯುಗ ಬಂದಾಗ ಕ್ರೋಧವಶರಾದ ಅಸುರರು ಮೊದಲು ಭೀಮಸೇನನಿಂದ ಗಂಧಮಾದನ ಪರ್ವತದಲ್ಲಿ ಕೊಲ್ಲಲ್ಪಟ್ಟವರೇ ದುರ್ಬುದ್ಧಿಯಿಂದ ಮತ್ತೆ ಭೂಮಿಯಲ್ಲಿ ಜನಿಸಿ ವೇನನ ಅದ್ವೈತಮತವನ್ನು ಪ್ರಸಿದ್ಧಿಪಡಿಸುವರು. ಅವರಲ್ಲಿ ಮುಖ್ಯನಾದ ಮಣಿಮಂತನೇ ಈಗ ಸಂಕರನಾಗಿರುವನು ಎಂದು ಭವಿಷ್ಯತ್ಪುರಾಣದಲ್ಲಿದೆ.

ಮೇಲೆ ಉದಾಹರಿಸಿದ ಪ್ರಮಾಣಾನುಸಾರ ವೇನನಿಗೆ ಅಂಧಂತಮಸ್ಸಾಯಿತು ಎಂದು ತಿಳಿಯುವದು. ಹೀಗೆ ಹೇಳಿದರೆ ''ವೇನಃ ಪೃಥುತಾಮಗಾತ್'' ಎಂದು ಬೇರೆ ಗ್ರಂಥದಲ್ಲಿ ಹೇಳಿದ್ದರ ವಿರೋಧ ಬರುವದು ? ''ಪುತ್ರೇಣ ಜೀಯತೇ ಲೋಕೇ'' ಇತ್ಯಾದಿಯಾಗಿ ಪೃಥುರಾಜನ ಗುಣದಿಂದ ವೇನನಿಗೆ ಸ್ವರ್ಗಪ್ರಾಪ್ತಿಯೂ ಅಯುಕ್ತವಾಗುತ್ತದೆ. ವೇನನೇ ನಿಷಾದನಾಗಿ ಜನಿಸಿದನೆಂದು ಬೇರೆ ಗ್ರಂಥದಲ್ಲಿ ಹೇಳಿದ್ದೂ ಸರಿಯಾಗಲಾರದು ಎಂಬ ಶಂಕೆಗೆ ಈ ವಾಕ್ಯಗಳ ಅಭಿಪ್ರಾಯವನ್ನು ಪ್ರಮಾಣದಿಂದಲೇ ತಿಳಿಸುವರು ಆಚಾರ್ಯರು :-

**ತ್ರ್ಯಂಶೋ ವೇನಃ ಸಮುದ್ದಿಷ್ಟಃ ಸತ್ವಾಂಶಃ ಪೃಥುತಾಮಗಾತ್ ।**
**ರಜೋಂಶಶ್ಚ ದಿವಂ ಯಾತೋ ನಿಷಾದಸ್ತಾಮಸೋಽಭವತ್॥**
**ಸ್ವಯಂ ವೇನಶ್ಚತುರ್ಥಸ್ತು ಮಹಾತಮಸಿ ಪಾತಿತಃ ॥ ಇತಿ ಕೌರ್ಮೇ ॥**
**ಪಾಪರೂಪೀ ಪೃಥಗ್ಜಾತೋ ನಿಷಾದೋ ವೇನದೇಹತಃ ।**
**ಯಸ್ಮಾತ್ತಸ್ಮಾತ್ಪೃಥೋಃ ಪುತ್ರಾದ್ರಜೋ ವೇನೋ ದಿವಂ ಯಯೌ ॥ ಇತಿಗಾರುಡೇ ॥**

ವೇನರಾಜನಲ್ಲಿ (ತಾಮಸತಾಮಸ ಅಂಶಿಯಲ್ಲಿ) ಮೂರು ಅಂಶಗಳು ಆವಿಷ್ಟವಾಗಿವೆ. (ಮೂರುಜನರು ಆವಿಷ್ಟರಾಗಿದ್ದಾರೆ.) ವೇನನು ನಾಲ್ಕನೆಯವನು. ವೇನನ ದೇಹದಲ್ಲಿರುವ ಅಂಶಗಳಲ್ಲಿ ಸತ್ವಾಂಶವುಳ್ಳ ಸಾತ್ವಿಕಜೀವನು ಪೃಥುರಾಜನಾಗಿ ಜನಿಸಿದನು. ರಾಜಸಜೀವನು ಪೃಥುಗುಣದಿಂದ ಸ್ವರ್ಗಕ್ಕೆ ಹೋದನು. ವೇನಶರೀರದಿಂದ ಹುಟ್ಟಿದ ತಾಮಸಜೀವನು ನಿಷಾದ(ಬೇಡ)ನಾದನು. ನಾಲ್ಕನೆಯವನಾದ ತಾನೇ ತಾಮಸತಾಮಸಜೀವನಾದ ವೇನರಾಜನು (ಅಂಶಿಯು) ಬ್ರಾಹ್ಮಣರಿಂದ ಮಹಾತಮಸ್ಸಿನಲ್ಲಿ ಬೀಳಿಸಲ್ಪಟ್ಟನು ಎಂದು ಕೌರ್ಮಪುರಾಣದಲ್ಲಿದೆ.

ರಾಜಸಜೀವನಿಂದ ಭಿನ್ನಭಿನ್ನನಾದ ಪಾಪರೂಪಿಯಾದ ತಾಮಸಜೀವನು ವೇನದೇಹದಿಂದ ನಿಷಾದನಾಗಿ ಹುಟ್ಟಿದನು. ಆದ ಕಾರಣ (ಪಾಪ ಹೊರಗೆ ಹೋದುದರಿಂದ) ರಾಜಸಜೀವನು ಪೃಥುವೆಂಬ ಮಗನ ಪ್ರಭಾವದಿಂದ ಸ್ವರ್ಗಕ್ಕೆ ಹೋದನೆಂದು ಗಾರುಡಪುರಾಣದಲ್ಲಿದೆ. ।।೪೯।।

**ಋಷಯ ಊಚುಃ -**

**ಏಷ ವಿಷ್ಣೋರ್ಭಗವತಃ ಕಲಾ ಭುವನಪಾವನೀ ।**
**ಇಯಂ ಚ ಲಕ್ಷ್ಮ್ಯಾಃ ಸಂಭೂತಿಃ ಪುರುಷಸ್ಯಾನಪಾಯಿನೀ ।।೫೦।।**

।। ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ ಚತುರ್ದಶೋऽಧ್ಯಾಯಃ ।।

ಏಷಃ=ಇವನು ಭಗವತಃ ವಿಷ್ಣೋಃ=ಪೂಜ್ಯನಾದ ಶ್ರೀಹರಿಯ ಭುವನಪಾವನೀ= ಜಗತ್ತಿಗೆ ಕಲ್ಯಾಣವನ್ನುಂಟುಮಾಡುವ ಕಲಾ=ವಿಶೇಷಸನ್ನಿಧಾನಪಾತ್ರನು (ಭಿನ್ನಾಂಶನೆಂದರ್ಥ). ಇಯಂ ಚ=ಈ ಸ್ತ್ರೀಯಾದರೂ ಲಕ್ಷ್ಮ್ಯಾಃ ಸಂಭೂತಿಃ=ಲಕ್ಷ್ಮೀದೇವಿಯ ಸನ್ನಿಧಾನಪಾತ್ರಳು. ಆ ಕಾರಣ ಪುರುಷಸ್ಯ ಅನಪಾಯಿನೀ=ಶ್ರೀಹರಿಯ ವಿಯೋಗವಿಲ್ಲದವಳು ಎಂದು ಹೇಳಿದರು ಎಂಬುದಾಗಿ ಅನ್ವಯ.

**ಭಾಗವತ ತಾತ್ಪರ್ಯ -**

ವೇನನ ದೇಹದಿಂದ ಜನಿಸಿದ ಅವಳಿಯನ್ನು ಕಂಡು ಋಷಿಗಳು ಸಂತುಷ್ಟರಾಗಿ ಇದರಲ್ಲಿ ಗಂಡು ಭಗವಂತನ ಕಲೆಯೆಂದು, ಕನ್ಯೆಯು ಲಕ್ಷ್ಮಿಯ ಕಲೆಯೆಂದು ತಿಳಿದರೆಂದು ಮೂಲದಲ್ಲಿ ಹೇಳಿದೆ. ಅಲ್ಲಿ ''ಏಷ ವಿಷ್ಣೋರ್ಭಗವತಃ ಕಲಾ'' ಎಂಬುದಾಗಿ ಹೇಳಿದಾಗ ಪೃಥುವು ಮತ್ಸ್ಯಾದಿಗಳಂತೆ ಭಗವಂತನ ಸ್ವರೂಪಾಂಶವೆಂದು ಭ್ರಾಂತಿ ಬರುವುದು. ಮತ್ತು ''ಇಯಂ ಚ ಲಕ್ಷ್ಮ್ಯಾಃ ಸಂಭೂತಿಃ'' ಎಂದು ಅರ್ಚಿಯು ಲಕ್ಷ್ಮಿಯ ಸಾಕ್ಷಾತ್ ಅವತಾರ ಎಂದೂ ತೋರುವದು. ಆ ಕಾರಣ ಆಚಾರ್ಯರು ಪ್ರಮಾಣದಿಂದಲೇ ಅದರ ತಾತ್ಪರ್ಯ ಹೇಳಿ ಭ್ರಾಂತಿನಿವಾರಣೆ ಮಾಡುವರು -

ಪೃಥುಹೈಹಯಾದಯೋ ಜೀವಾಸ್ತೇಷ್ವಾವಿಷ್ಟೋ ಹರಿಃ ಸ್ವಯಮ್ ।
ವಿಶೇಷಾವೇಶತಸ್ತೇಷು ಸಾಕ್ಷಾದ್ಧರ್ಯಂಶತಾವಚಃ ।
ಕಿಂಸ್ತುಘ್ನವ್ಯಾಸಋಷಭಕಪಿಲಾ ಮತ್ಸ್ಯಪೂರ್ವಕಾಃ ।।

ಆಕೂತಿಜೈತರೇಯೌ ಚ ಧರ್ಮಜತ್ರಯಮೇವ ಚ ।
ಧನ್ವಂತರಿರ್ಹಯಗ್ರೀವೋ ದತ್ತಾತ್ರೇಯಶ್ಚ ತಾಪಸಃ ।।

ಸ್ವಯಂ ನಾರಾಯಣಸ್ತ್ವೇತೇ ನಾಣುಮಾತ್ರವಿಭೇದಿನಃ ।
ಬಲತಃ ಸ್ವರೂಪತಶ್ಚೈವ ಗುಣೈರಪಿ ಕಥಂಚನ ॥ ಇತಿ ತತ್ವನಿರ್ಣಯೇ ॥

ತತ್ರ ಸನ್ನಿಹಿತಾ ಶ್ರೀಶ್ಚ ಯತ್ರ ಸನ್ನಿಹಿತೋ ಹರಿಃ ।
ನಾಸ್ಯ ಸನ್ನಿಧಿಮಾತ್ರೇಣ ರಮಾ ಪತ್ನೀತ್ವಮಾವ್ರಜೇತ್ ॥

ಸಾಕ್ಷಾದೇವ ತು ಸಾಕ್ಷಾಚ್ಚ ಹರೇಃ ಸನ್ನಿಧಿತಃ ಕ್ವಚಿತ್ ।
ಗೋಪ್ಯಾದಿರೂರೂಪಾ ಭವತಿ ವಿಪರೀತಂ ನ ತು ಕ್ವಚಿತ್ ॥ ಇತಿ ಚ ॥

ಪೃಥು, ಹೈಹಯ (ಕಾರ್ತವೀರ್ಯಾರ್ಜುನ) ಮೊದಲಾದವರು ಜೀವರು. ಅವರಲ್ಲಿ ಶ್ರೀಹರಿಯು 'ರಾಜರಾಜೇಶ್ವರ' ರೂಪದಿಂದ ಆವಿಷ್ಟನಾಗಿದ್ದಾನೆ. ಇತರ ರಾಜರಿಗಿಂತ ಪೃಥು ಮುಂತಾದವರಲ್ಲಿ ವಿಶೇಷಸಾಮರ್ಥ್ಯ ಪ್ರಕಟಮಾಡಿ ಸನ್ನಿಧಾನ ಹೆಚ್ಚಿರುವದರಿಂದ ಅವರು ಹರಿಯ ಮುಖ್ಯಅಂಶ ಎಂಬ ಮಾತುಗಳು ಉಪಪನ್ನವಾಗುವವು.

ಶಿಂಶುಮಾರ, ವ್ಯಾಸ, ಋಷಭ, ಕಪಿಲ, ಮತ್ಸ್ಯಾದಿ ಹತ್ತು ಅವತಾರಗಳು, (ಆಕೂತಿಜ) ಯಜ್ಞನಾಮಕ ಭಗವಂತ, (ಐತರೇಯ) ಮಹಿದಾಸ, ಧರ್ಮಪುತ್ರರಾದ ನಾರಾಯಣ-ಹರಿ-ಕೃಷ್ಣ ಮೂವರು, ಧನ್ವಂತರಿ, ಹಯಗ್ರೀವ, ದತ್ತಾತ್ರೇಯ, ಪ್ರಿಯವ್ರತನ ಮಗನಾಗಿ ಅವತರಿಸಿದ ತಾಪಸಮನುವು ಇವರು ಸಾಕ್ಷಾನ್ನಾರಾಯಣಾವತಾರರು. ಇವರು ಬಲ, ಸ್ವರೂಪ, ಗುಣಗಳಿಂದ ಸ್ವಲ್ಪವೂ ಭೇದವುಳ್ಳವರಲ್ಲ ಎಂದು ತತ್ವನಿರ್ಣಯದಲ್ಲಿದೆ.

ಯತ್ರ=ಯಾವ ಪೃಥು ಮೊದಲಾದ ರಾಜರಲ್ಲಿ ಶ್ರೀಹರಿಯು ವಿಶೇಷಸನ್ನಿಹಿತ-ನಾಗಿರುತ್ತಾನೋ ತತ್ರ=ಅವರ ಪತ್ನಿಯರಲ್ಲಿ ಲಕ್ಷ್ಮೀದೇವಿಯೂ ಸನ್ನಿಹಿತಳಾಗಿರುತ್ತಾಳೆ. ಶ್ರೀಹರಿಯ ಸನ್ನಿಧಾನ ಇರುವ ಮಾತ್ರದಿಂದ ಪೃಥು ಮುಂತಾದವರಿಗೆ ಲಕ್ಷ್ಮೀದೇವಿಯು ಸಾಕ್ಷಾತ್ ಅವತಾರ ಮಾಡಿ ಪತ್ನಿಯಾಗಲಾರಳು. ಯಾವಾಗ ರಾಮ-ಕೃಷ್ಣ ಮುಂತಾಗಿ ಶ್ರೀಹರಿಯು ಸಾಕ್ಷಾತ್ ಅವತರಿಸುವನೋ ಆಗ ಮಾತ್ರ ರಮಾದೇವಿಯು ಸಾಕ್ಷಾತ್ ಸೀತಾ-ರುಕ್ಮಿಣಿ ಮುಂತಾಗಿ ಅವತರಿಸಿ ಪತ್ನಿಯಾಗುವಳು. ಗೋಪಿಕಾಸ್ತ್ರೀಯರಲ್ಲಿ ಜಾಂಬವತಿ ಮುಂತಾದವರಲ್ಲಿ ಲಕ್ಷ್ಮೀವಿಶೇಷಸನ್ನಿಧಾನವಿದ್ದುದರಿಂದ ಅವರು ಸಾಕ್ಷಾತ್ ಹರಿಯ ಪತ್ನಿತ್ವ ಹೊಂದಿರುವರು. ಹೇಗೆ ಸಾಕ್ಷಾತ್ ಅವತಾರ ಮಾಡಿದ ಶ್ರೀಹರಿಗೆ ಬೇರೆಯವರಲ್ಲಿ ಆವಿಷ್ಟಳಾದ ಲಕ್ಷ್ಮೀದೇವಿಯು ಪತ್ನಿಯಾಗುವಳೋ ಹಾಗೆ ಬೇರೆಯವರಲ್ಲಿ ಆವಿಷ್ಟನಾದ ಶ್ರೀಹರಿಗೆ ಸಾಕ್ಷಾತ್ ಲಕ್ಷ್ಮೀದೇವಿಯು ಪತ್ನಿ ಆಗಲಾರಳು. ಆವಿಷ್ಟಳಾಗಿಯೇ ಪತ್ನಿ ಆಗುವಳು ಎಂದೂ ಹೇಳಿದೆ. ॥೫೦॥

॥ ಇಲ್ಲಿಗೆ ಹದಿನಾಲ್ಕನೇ ಅಧ್ಯಾಯವು ಮುಗಿಯಿತು ॥

## ಅಥ ಪಂಚದಶೋಽಧ್ಯಾಯಃ

**ವಿಪ್ರಾ ಊಚುಃ -**

**ಅತ್ರ ತು ಪ್ರಥಮೋ ರಾಜ್ಞಾಂ ಪುಮಾನ್ ಪ್ರಥಯಿತಾ ಯಶಃ ।**
**ಪೃಥುರ್ನಾಮ ಮಹಾರಾಜಾ ಭವಿಷ್ಯತಿ ಪೃಥುಶ್ರವಾಃ ॥೧॥**

ಅತ್ರ=ಈ ಮಿಥುನದಲ್ಲಿ ಯಃ ಪುಮಾನ್=ಯಾವನು ಸಃ=ಅವನು ಅತ್ರ=ಈ ಭರತವರ್ಷದಲ್ಲಿ ರಾಜ್ಞಾಂ ಪ್ರಥಮಃ=ರಾಜರಲ್ಲಿ ಮೊದಲಿಗನು, ಯಶಃ ಪ್ರಥಯಿತಾ=ಕೀರ್ತಿಯನ್ನು ಹರಡುವವನು. ಆದ್ದರಿಂದಲೇ ಪೃಥುಃ ನಾಮ=ಪೃಥು ಎಂಬ ಹೆಸರಿನ ಮಹಾರಾಜಾ=ಶ್ರೇಷ್ಠರಾಜನು ಪೃಥುಶ್ರವಾಃ=ಬಹಳ ಕೀರ್ತಿವಂತನು ಭವಿಷ್ಯತಿ=ಆಗುವನು. ॥೧॥

**ಇಯಂ ಚ ದೇವೀ ಸುದತೀ ಗುಣಭೂಷಣಭೂಷಣಾ ।**
**ಅರ್ಚಿರ್ನಾಮ ವರಾರೋಹಾ ಪೃಥುಮೇವಾವರುಂಧತೀ ॥೨॥**

ಚ=ಮತ್ತು ಇಯಂ=ಈ ಸುದತೀ=ಒಳ್ಳೆಯ ಹಲ್ಲುಗಳುಳ್ಳ ಗುಣಭೂಷಣಭೂಷಣಾ= ಗುಣಗಳಿಗೂ ಅಲಂಕಾರಗಳಿಗೂ ಅಲಂಕಾರವಾಗುವ ರೂಪವುಳ್ಳ ಅರ್ಚಿಃ ನಾಮ=ಅರ್ಚಿ ಎಂಬ ಹೆಸರುಳ್ಳ ವರಾರೋಹಾ=ಅಪೇಕ್ಷಣೀಯ ನಿತಂಬಗಳುಳ್ಳ ಸ್ತ್ರೀಯು ಪೃಥುಂ ಏವ ಅವರುಂಧತೀ=ಪೃಥುರಾಜನನ್ನೇ ಗಂಡನೆಂದು ಸ್ವೀಕರಿಸುವಳು. ॥೨॥

**ಏಷ ಸಾಕ್ಷಾದ್ಧರೇರಂಶೋ ಜಾತೋ ಲೋಕರಿರಕ್ಷಯಾ ।**
**ಇಯಂ ಚ ತತ್ಪರಾ ಹಿ ಶ್ರೀರನುಜಜ್ಞೇಽನಪಾಯಿನೀ ॥೩॥**

*ಏಷಃ(ಏತಸ್ಮಿನ್)=ಈ ಪೃಥುವಿನಲ್ಲಿ ಲೋಕರಿರಕ್ಷಯಾ=ಜಗತ್ತನ್ನು ರಕ್ಷಿಸುವ ಇಚ್ಛೆಯಿಂದ ಸಾಕ್ಷಾತ್ ಹರೇಃ ಅಂಶಃ=ಶ್ರೀಹರಿಯ ಸ್ವರೂಪಾಂಶನಾದ ರಾಜರಾಜೇಶ್ವರನು ಜಾತಃ=ಪ್ರಾದುರ್ಭವಿಸಿದನು. ಇಯಂ (ಅಸ್ಯಾಂ) ಚ=ಈ ಅರ್ಚಿ ಎಂಬುವಳಲ್ಲಿ

ಅನಪಾಯಿನೀ=ಶ್ರೀಹರಿಯಿಂದ ನಿತ್ಯಾವಿಯೋಗಿನಿಯಾದ, ತತ್ಪರಾ=ಶ್ರೀಹರಿಯ ಏಕಾಂತಭಕ್ತಳಾದ ಅಥವಾ ಅವನಿಗೆ ಮಾತ್ರ ಅರ್ಹಳಾದ ಶ್ರೀಃ=ಲಕ್ಷ್ಮೀದೇವಿಯು ಅನುಜಜ್ಞೇ=ಅವನನ್ನು ಅನುಸರಿಸಿ ಅವತರಿಸಿದಳು.

*ಸಪ್ತಸು ಪ್ರಥಮಾ ಎಂಬ ಸೂತ್ರವಿರುವಕಾರಣ ಪ್ರಕೃತ ಇಲ್ಲಿರುವ ಏಷಃ ಎಂಬ ಪ್ರಥಮಾವಿಭಕ್ತಿಗೆ ಏತಸ್ಮಿನ್ ಎಂದು ಸಪ್ತಮೀಅರ್ಥ ತಿಳಿಯಬೇಕು.

ಇದರಿಂದ ''ಒಂದೇ ದೇಹದಿಂದ ಜನಿಸಿದ ಪೃಥು-ಅರ್ಚಿಯರು ಅಣ್ಣ-ತಂಗಿ ಇದ್ದಂತೆ. ಆ ಕಾರಣ ದಂಪತಿಗಳು ಹೇಗಾದರು ?'' ಎಂಬ ಶಂಕೆಯು ಪರಿಹೃತವಾಯಿತು. ಲಕ್ಷ್ಮೀನಾರಾಯಣರು ನಿತ್ಯದಂಪತಿಗಳು ತಾನೇ ? ಆದ್ದರಿಂದ ವಿರೋಧವಿಲ್ಲವೆಂದು ಭಾವ.

**ಭಾಗವತ ತಾತ್ಪರ್ಯ -**

ಮೇಲಿನ ಶ್ಲೋಕದಲ್ಲಿ ''ಪೃಥುವು ಶ್ರೀಹರಿಯ ಸಾಕ್ಷಾತ್ ಅಂಶ'' ಎಂದು ಹೇಳಿರುವುದು ವಿಶೇಷಾವೇಶನಿಮಿತ್ತವಾಗಿ ಎಂದು ಹಿಂದಿನ ತಾತ್ಪರ್ಯದಲ್ಲಿಯೇ ಹೇಳಿದೆ. ಹಾಗಾದರೆ ಈ ಶ್ಲೋಕದ ಯೋಜನೆ ಹೇಗೆ ? ಎಂದರೆ, ಅದನ್ನು ತಿಳಿಸುವರು-

**ತತ್ರ ಸನ್ನಿಹಿತಃ ಸಾಕ್ಷಾದ್ಭಗವಾನ್ ।**

ಪೃಥುವಿನಲ್ಲಿ ಶ್ರೀಹರಿಯ ವಿಶೇಷಾವೇಶ ಇದೆ ಎಂಬ ವಿಷಯದಲ್ಲಿ ದಾರ್ಢ್ಯಕ್ಕಾಗಿ ಪ್ರಮಾಣವನ್ನೂ ಸಹ ಹೇಳುತ್ತಾರೆ :-

**ಬ್ರಹ್ಮಣ್ಯನಂತೇ ಗರುಡೇ ರುದ್ರೇ ಕಾಮೇ ಶಚೀಪತೌ ।**
**ಅನಿರುದ್ಧೇ ಮನೌ ಚೈವ ಪೃಥೌ ಚ ಕೃತವೀರ್ಯಜೇ ॥**

**ನಾರದೇ ಚೈವಮಾದ್ಯೇಷು ವಿಶೇಷಾತ್ ಸನ್ನಿಧಿರ್ಹರೇಃ ।**
**ಸುದರ್ಶನಾದಿಷ್ವಸ್ತ್ರೇಷು ತಥಾ ಸನ್ನಿಹಿತೋ ಹರಿಃ ॥**

**ನರಲಕ್ಷ್ಮಣೌ ಬಲಶ್ಚೈವ ಶೇಷಸ್ಯಾಂಶಾಃ ಪ್ರಕೀರ್ತಿತಾಃ ।**
**ತಥಾ ಭರತಶತ್ರುಘ್ನೌ ಚಕ್ರಶಂಖಾವುದಾಹೃತೌ ।**
**ಪ್ರದ್ಯುಮ್ನಶ್ಚ ಕುಮಾರಶ್ಚ ಸ್ಕಂದಃ ಕಾಮಾಂಶಜಾಃ ಸ್ಮೃತಾಃ ॥ ಇತಿ ಸ್ಕಾಂದೇ ॥**

**ವೈನ್ಯೇ ಪೃಥೌ ಸನ್ನಿಹಿತೋ ರಾಜರೂಪೀ ಜನಾರ್ದನಃ । ಇತಿ ಬ್ರಾಹ್ಮೇ ॥**

ಚತುರ್ಮುಖ, ಶೇಷ, ಗರುಡ, ರುದ್ರ, ಮನ್ಮಥ, ದೇವೇಂದ್ರ, ಅನಿರುದ್ಧ, ಸ್ವಾಯಂಭುವ ಮನು, ಪೃಥು, ಕಾರ್ತವೀರ್ಯಾರ್ಜುನ, ನಾರದ ಮೊದಲಾದವರಲ್ಲಿ ವಿಶೇಷವಾಗಿ ಶ್ರೀಹರಿಯ ಸನ್ನಿಧಾನವಿದೆ. ಸುದರ್ಶನ ಮೊದಲಾದ ಅಸ್ತ್ರಗಳಲ್ಲಿಯೂ

ಶ್ರೀಹರಿಯು ವಿಶೇಷವಾಗಿ ಸನ್ನಿಹಿತನಾಗಿರುತ್ತಾನೆ. ನರ, ಲಕ್ಷ್ಮಣ, ಬಲರಾಮರು ಶೇಷನ ಅಂಶರೆಂದು ಹೇಳಲ್ಪಡುವರು. ಹಾಗೆಯೇ ಭರತನು ಚಕ್ರಾಭಿಮಾನಿದೇವತೆಯ ಸನ್ನಿಧಾನವುಳ್ಳವನು. ಶತ್ರುಘ್ನನು ಶಂಖಾಭಿಮಾನಿದೇವತೆಯ ಸನ್ನಿಧಾನವುಳ್ಳವನು ಎಂದು ಹೇಳಲ್ಪಟ್ಟಿರುವರು. ಪ್ರದ್ಯುಮ್ನ, ಸನತ್ಕುಮಾರ, ಸ್ಕಂದ ಇವರು ಕಾಮನ ಅಂಶದಿಂದ ಹುಟ್ಟಿದವರು ಎಂದು ಸ್ಕಾಂದಪುರಾಣದಲ್ಲಿದೆ.

ವೇನನ ಪುತ್ರನಾದ ಪೃಥು ರಾಜನಲ್ಲಿ ರಾಜರಾಜೇಶ್ವರ ಎಂದು ಹೆಸರುಳ್ಳ ಪರಮಾತ್ಮನು ಸನ್ನಿಹಿತನಾಗಿರುತ್ತಾನೆ ಎಂದು ಬ್ರಾಹ್ಮಪುರಾಣದಲ್ಲಿದೆ. ।।೩।।

**ಮೈತ್ರೇಯ ಉವಾಚ -**

**ಪ್ರಶಂಸಂತಿ ಸ್ಮ ತಂ ವಿಪ್ರಾ ಗಂಧರ್ವಪ್ರಮುಖಾ ಜಗುಃ ।**
**ಮುಮುಚುಃ ಸುಮನೋಧಾರಾಃ ಸಿದ್ಧಾ ನೃತ್ಯಂತಿ ಸಸ್ತ್ರಿಯಃ ।।೪ ।।**

ವಿಪ್ರಾಃ=ಬ್ರಾಹ್ಮಣರು ತಂ=ಪೃಥುಚಕ್ರವರ್ತಿಯನ್ನು ಪ್ರಶಂಸಂತಿ ಸ್ಮ=ಹೊಗಳುತ್ತಿದ್ದರು. ಗಂಧರ್ವಪ್ರಮುಖಾಃ=ಗಂಧರ್ವಶ್ರೇಷ್ಠರು ಜಗುಃ=ಗಾನ ಮಾಡಿದರು. ಸಿದ್ಧಾಃ=ಸಿದ್ಧರು ಸಮನೋಧಾರಾಃ ಮುಮುಚುಃ=ಪುಷ್ಪವೃಷ್ಟಿಯನ್ನು ಮಾಡಿದರು. ತತ್‌ಸ್ತ್ರಿಯಃ=ಅಪ್ಸರಾಸ್ತ್ರೀಯರು ನೃತ್ಯಂತಿ ಸ್ಮ=ನರ್ತನ ಮಾಡಿದರು. ।।೪।।

**ಶಂಖತೂರ್ಯಮೃದಂಗಾದ್ಯಾ ನೇದುರ್ದುಂದುಭಯೋ ದಿವಿ ।**
**ತತ್ರ ಸರ್ವ ಉಪಾಜಗ್ಮುರ್ದೇವರ್ಷಿಪಿತೃಣಾಂ ಗಣಾಃ ।।೫।।**

ದಿವಿ=ಸ್ವರ್ಗದಲ್ಲಿ ಶಂಖತೂರ್ಯಮೃದಂಗಾದ್ಯಾಃ=ಶಂಖ,ತೂರ್ಯ,ಮೃದಂಗ ಮೊದಲಾದವು ಮತ್ತು ದುಂದುಭಯಃ=ನಗಾರಿಗಳು ನೇದುಃ=ಬಾರಿಸಿದವು (ಧ್ವನಿಮಾಡಿದವು). ತತ್ರ=ಪೃಥುರಾಜನ ಜನ್ಮಸ್ಥಳದಲ್ಲಿ ದೇವರ್ಷಿಪಿತೃಣಾಂ ಗಣಾಃ= ದೇವತೆಗಳು ಋಷಿಗಳು ಪಿತೃಗಳ ಸಮೂಹಗಳು ಉಪಾಜಗ್ಮುಃ=ಬಂದವು. ।।೫।।

**ಬ್ರಹ್ಮಾ ಜಗದ್ಗುರುರ್ದೇವಃ ಸಹಾಗತ್ಯ ಸುರೇಶ್ವರೈಃ ।**
**ವೈನ್ಯಸ್ಯ ದಕ್ಷಿಣೇ ಹಸ್ತೇ ದೃಷ್ಟ್ವಾ ಚಿಹ್ನಂ ಗದಾಭೃತಃ ।।೬।।**

ಜಗದ್ಗುರುಃ=ಜಗತ್ತಿಗೆ ಉಪದೇಶಕರಾದ ದೇವಃ ಬ್ರಹ್ಮಾ=ಬ್ರಹ್ಮದೇವರು ಸುರೇಶ್ವರೈಃ ಸಹ ಆಗತ್ಯ=ದೇವತೆಗಳೊಡನೆ ಬಂದು ವೈನ್ಯಸ್ಯ=ವೇನನ ಮಗನಾದ ಪೃಥುವಿನ ದಕ್ಷಿಣೇ ಹಸ್ತೇ=ಬಲಗೈಯಲ್ಲಿ ಗದಾಭೃತಃ=ಶ್ರೀಹರಿಯ ಚಿಹ್ನಂ=ಚಕ್ರರೇಖೆಯನ್ನು ದೃಷ್ಟ್ವಾ=ನೋಡಿ, (ಅನ್ವಯ ಮುಂದುವರೆಯುವುದು)।।೬।।

**ಪಾದಯೋರರವಿಂದಂ ಚ ತಸ್ಮಿನ್ ಮೇನೇ ಹರೇಃ ಕಲಾಮ್ ।**
**ಯಸ್ಯಾಪ್ರತಿಹತಂ ಚಕ್ರಮಂಶಸ್ಯ ಪರಮೇಷ್ಠಿನಃ ॥೭॥**

ಚ=ಮತ್ತು ಪಾದಯೋಃ=ಪಾದಗಳಲ್ಲಿ ಅರವಿಂದಂ=ಪದ್ಮವನ್ನೂ ದೃಷ್ಟ್ವಾ=ನೋಡಿ, ತಸ್ಮಿನ್=ಪೃಥುವಿನಲ್ಲಿ ಹರೇಃ ಕಲಾಂ=ಶ್ರೀಹರಿಯ ವಿಶೇಷಸನ್ನಿಧಾನವನ್ನು ಮೇನೇ=ತಿಳಿದರು. ಯಸ್ಯ=ಯಾವನ ಬಲಗೈಯಲ್ಲಿ ಅಪ್ರತಿಹತಂ ಚಕ್ರಂ=ಬೇರೆ ಬೇರೆ ರೇಖೆಗಳಿಂದ ಕೂಡದಿರುವ ಚಕ್ರಂ=ಚಕ್ರವಿದೆಯೋ ಸಃ=ಅವನು ಪರಮೇಷ್ಠಿನಃ=ಶ್ರೀಹರಿಯ ಅಂಶಃ= ಅಂಶನೆಂದು ಪ್ರಸಿದ್ಧವಿರುವುದರಿಂದ, ಪೃಥುವಿನಲ್ಲಿ ಶ್ರೀಹರಿಯ ಅಂಶವನ್ನು ತಿಳಿದರು. ಅಥವಾ ಯಸ್ಯ=ಯಾವ ರಾಜನ ಚಕ್ರಂ=ಆಜ್ಞೆಯು ಅಪ್ರತಿಹತಂ=ಬೇರೆ ಯಾರಿಂದಲೂ ಪ್ರತಿಹತವಾಗುವುದಿಲ್ಲವೋ (ತಡೆಯಲ್ಪಡುವುದಿಲ್ಲವೋ) ಸಃ=ಅವನಲ್ಲಿ ಪರಮೇಷ್ಠಿನಃ= ಶ್ರೀಹರಿಯ ಅಂಶಃ=ಅಂಶವಿದೆ ಎಂದು ಪ್ರಮಾಣಪ್ರಸಿದ್ಧವಾಗಿದೆ. ಪ್ರಕೃತದಲ್ಲಿ ಪೃಥುವಿನ ಆಜ್ಞೆಯು ಯಾರಿಂದಲೂ ಪ್ರತಿಹತವಾಗಿಲ್ಲವಾದ್ದರಿಂದ (ತಡೆಯಲ್ಪಟ್ಟಿಲ್ಲವಾದ್ದರಿಂದ) ಅವನಲ್ಲಿ ಶ್ರೀಹರಿಯ ಅಂಶವನ್ನು ತಿಳಿದರು. ॥೭॥

**ತಸ್ಯಾಭಿಷೇಕ ಆರಬ್ಧೋ ಬ್ರಾಹ್ಮಣೈರ್ಬ್ರಹ್ಮವಾದಿಭಿಃ ।**
**ಆಭಿಷೇಚನಿಕಾನ್ಯಸ್ಮೈ ಆಜಹ್ರುಃ ಸರ್ವತೋ ಜನಾಃ ॥೮॥**

ಬ್ರಹ್ಮವಾದಿಭಿಃ=ವೇದಾರ್ಥಗಳನ್ನರಿತು ವೇದ ಹೇಳುವ ಬ್ರಾಹ್ಮಣೈಃ=ಬ್ರಾಹ್ಮಣರಿಂದ ತಸ್ಯ=ಪೃಥುರಾಜನ ಅಭಿಷೇಕಃ=ಪಟ್ಟಾಭಿಷೇಕವು ಆರಬ್ಧಃ=ಆರಂಭಿಸಲ್ಪಟ್ಟಿತು. ಆಗ ಅಸ್ಮೈ=ಪೃಥುರಾಜನಿಗೆ ಸರ್ವತಃ=ಎಲ್ಲದಿಕ್ಕುಗಳಿಂದ ಜನಾಃ=ಜನರು ಆಭಿಷೇಚನಿಕಾನಿ= ಅಭಿಷೇಕಸಾಮಗ್ರಿಗಳನ್ನು ಆಜಹ್ರುಃ=ತಂದಿತ್ತರು. ॥೮॥

**ಸರಿತ್ಸಮುದ್ರಾ ಗಿರಯೋ ನಾಗಾ ಗಾವಃ ಖಗಾ ಮೃಗಾಃ ।**
**ದ್ಯೌಃ ಕ್ಷಿತಿಃ ಸರ್ವಭೂತಾನಿ ಸಮಾಜಹ್ರುರುಪಾಯನಮ್ ॥೯॥**

ಸರಿತ್ಸಮುದ್ರಾಃ ಸರಿತ್=ನದಿಗಳು ಸಮುದ್ರಾಃ=ಸಮುದ್ರಗಳು, ಗಿರಯಃ=ಪರ್ವತಗಳು, ನಾಗಾಃ=ಸರ್ಪಗಳು, ಗಾವಃ=ಆಕಳುಗಳು, ಖಗಾಃ=ಪಕ್ಷಿಗಳು, ಮೃಗಾಃ=ಜಿಂಕೆ ಮೊದಲಾದವುಗಳು, ದ್ಯೌಃ=ಸ್ವರ್ಗವು, ಕ್ಷಿತಿಃ=ಭೂಮಿಯು, ಸರ್ವಭೂತಾನಿ=ಎಲ್ಲ ಪ್ರಾಣಿಗಳು ಉಪಾಯನಂ ಸಮಾಜಹ್ರುಃ=ಕಾಣಿಕೆಯನ್ನು ತಂದು ಸಮರ್ಪಿಸಿದವು. (ಎಲ್ಲ ಅಭಿಮಾನಿದೇವತೆಗಳು ಸಮರ್ಪಿಸಿದರು ಎಂದು ಅಭಿಪ್ರಾಯ.)॥೯॥

**ಸೋಽಭಿಷಿಕ್ತೋ ಮಹಾರಾಜಃ ಸುವಾಸಾಃ ಸಾಧ್ವಲಂಕೃತಃ ।**
**ಪತ್ನ್ಯಾಽರ್ಚಿಷಾಽಲಂಕೃತಯಾ ವಿರೇಜೇಽಗ್ನಿರಿವಾಪರಃ ॥೧೦॥**

ಅಭಿಷಿಕ್ತಃ=ಬ್ರಾಹ್ಮಣರಿಂದ ಪಟ್ಟಾಭಿಷೇಕ ಮಾಡಿಸಿಕೊಂಡ, ಸುವಾಸಾಃ=ಒಳ್ಳೆಯ ವಸ್ತ್ರಗಳನ್ನು ಧರಿಸಿದ, ಸಾಧು ಅಲಂಕೃತಃ=ಕಿರೀಟ-ಕುಂಡಲಗಳಿಂದ ಛತ್ರ-ಚಾಮರಗಳಿಂದ ಚೆನ್ನಾಗಿ ಅಲಂಕೃತನಾದ ಸಃ ಮಹಾರಾಜಃ=ಆ ಪೃಥುಮಹಾರಾಜನು ಅಲಂಕೃತಯಾ= ಅಲಂಕಾರ ಮಾಡಿಕೊಂಡ ಅರ್ಚಿಷಾ ಪತ್ನ್ಯಾ=ಅರ್ಚಿ ಎಂಬ ಹೆಂಡತಿಯಿಂದ ಕೂಡಿಕೊಂಡು ಅಪರಃ ಅಗ್ನಿಃ ಇವ=ಬೇರೊಬ್ಬ ಅಗ್ನಿಯಂತೆ ವಿರೇಜೇ=ಶೋಭಿಸಿದನು. ।।೧೦।।

ಕೇವಲ ನದಿ ಮುಂತಾದವುಗಳು (ನದ್ಯಭಿಮಾನಿಗಳು) ಮಾತ್ರವಲ್ಲ, ಲೋಕಪಾಲಕರೂ ಕಾಣಿಕೆ ಇತ್ತರೆಂದು ಹೇಳುವರು -

**ತಸ್ಮೈ ಜಹಾರ ಧನದೋ ಹೈಮಂ ವೀರ ವರಾಸನಮ್ ।**
**ವರುಣಃ ಸಲಿಲಸ್ರಾವಮಾತಪತ್ರಂ ಶಶಿಪ್ರಭಮ್ ।।೧೧।।**

ಹೇ ವೀರ=ವಿದುರನೇ ! ತಸ್ಮೈ=ಆ ಪೃಥುವಿಗೆ ಧನದಃ=ಕುಬೇರನು ಹೈಮಂ ವರಾಸನಂ=ಚಿನ್ನದ ಸಿಂಹಾಸನವನ್ನು, ವರುಣಃ=ವರುಣನು ಶಶಿಪ್ರಭಂ=ಚಂದ್ರನಂತಿರುವ ಸಲಿಲಸ್ರಾವಂ=ಅಮೃತದ ಹನಿಗಳನ್ನು ಸ್ರವಿಸುವ (ಸುರಿಸುವ) ಆತಪತ್ರಂ=ಶ್ವೇತಛತ್ರವನ್ನು ಜಹಾರ=ತಂದಿತ್ತನು. ।।೧೧।।

**ವಾಯುಶ್ಚ ವಾಲವ್ಯಜನೇ ಧರ್ಮಃ ಕೀರ್ತಿಮಯೀಂ ಸ್ರಜಮ್ ।**
**ಇಂದ್ರಃ ಕಿರೀಟಮುತ್ಕೃಷ್ಟಂ ದಂಡಂ ಸಂಯಮನಂ ಯಮಃ ।।೧೨।।**

ವಾಯುಃ=ವಾಯುದೇವರು ವಾಲವ್ಯಜನೇ=ಚಾಮರಗಳನ್ನು, ಧರ್ಮಃ=ಧರ್ಮನು ಕೀರ್ತಿಮಯೀಂ=ಕೀರ್ತಿಸಂಪಾದಕವಾದ ಸ್ರಜಂ=ಮಾಲೆಯನ್ನು, ಇಂದ್ರಃ=ಇಂದ್ರನು ಉತ್ಕೃಷ್ಟಂ ಕಿರೀಟಂ=ಶ್ರೇಷ್ಠವಾದ ಕಿರೀಟವನ್ನು, ಯಮಃ=ಯಮನು ಸಂಯಮನಂ ದಂಡಂ=ಶತ್ರುಗಳನ್ನು ವಶಪಡಿಸಿಕೊಳ್ಳುವ ದಂಡವನ್ನು ಜಹಾರ=ಕೊಟ್ಟನು. ।।೧೨।।

**ಬ್ರಹ್ಮಾ ಬ್ರಹ್ಮಮಯಂ ವರ್ಮ ಭಾರತೀ ಹಾರಮುತ್ತಮಮ್ ।**
**ಹರಿಸ್ಸುದರ್ಶನಂ ಚಕ್ರಂ ತತ್ಪತ್ನ್ಯವ್ಯಾಹತಾಂ ಶ್ರಿಯಮ್ ।।೧೩।।**

ಬ್ರಹ್ಮಾ=ಚತುರ್ಮುಖನು ಬ್ರಹ್ಮಮಯಂ=ವೇದಮಯವಾದ (ವೇದಪ್ರವಚನ ಮಾಡುವ ಸಾಮರ್ಥ್ಯ ಕೊಡುವ) ವರ್ಮ=ಕವಚವನ್ನು, ಭಾರತೀ=ಸರಸ್ವತಿಯು ಉತ್ತಮಂ ಹಾರಂ=ಶ್ರೇಷ್ಠವಾದ ಹಾರವನ್ನು, ಹರಿಃ=ಶ್ರೀಹರಿಯು ಸುದರ್ಶನಂ ಚಕ್ರಂ=ಸುದರ್ಶನ ಚಕ್ರವನ್ನು, ತತ್ಪತ್ನೀ=ಶ್ರೀಹರಿಯ ಪತ್ನಿಯಾದ ಲಕ್ಷ್ಮೀದೇವಿಯು ಅವ್ಯಾಹತಾಂ= ನಾಶರಹಿತವಾದ ಶ್ರಿಯಂ=ಸಂಪತ್ತನ್ನು ಜಹಾರ=ಇತ್ತಳು. ।।೧೩।।

**ದಶಚಂದ್ರಮಸಿಂ ರುದ್ರಃ ಶತಚಂದ್ರಂ ತಥಾಽಂಬಿಕಾ ।**
**ಸೋಮೋಽಮೃತಮಯಾನಶ್ವಾಂಸ್ತ್ವಷ್ಟಾ ರೂಪಾಶ್ರಯಂ ರಥಮ್ ॥೧೪॥**

ರುದ್ರಃ=ಶಿವನು ದಶಚಂದ್ರಂ ಅಸಿಂ=ದಶಚಂದ್ರ ಎಂಬ ಹೆಸರಿನ ಖಡ್ಗವನ್ನು ಅಥವಾ ಹತ್ತುಚಂದ್ರಾಕಾರದ ಚಿಹ್ನವುಳ್ಳ ವರೆಯುಳ್ಳ ಖಡ್ಗವನ್ನು, ತಥಾ=ಹಾಗೆಯೇ ಅಂಬಿಕಾ=ಪಾರ್ವತಿಯು ಶತಚಂದ್ರಂ=ನೂರುಚಂದ್ರರ ಚಿತ್ರವುಳ್ಳ ಚರ್ಮ(ಡಾಲು)ವನ್ನು ಸೋಮಃ=ಚಂದ್ರನು ಅಮೃತಮಯಾನ್ ಅಶ್ವಾನ್=ಮರಣ-ಶ್ರಮ ಮುಂತಾದ ದೋಷರಹಿತವಾದ ಕುದುರೆಗಳನ್ನು, ತ್ವಷ್ಟಾ=ವಿಶ್ವಕರ್ಮನು ರೂಪಾಶ್ರಯಂ ರಥಂ=ಸುಂದರವಾದ ರಥವನ್ನು ಜಹಾರ=ಇತ್ತರು. ॥೧೪॥

**ಅಗ್ನಿರಾಜಗವಂ ಚಾಪಂ ಸೂರ್ಯೋ ರಶ್ಮಿಮಯಾನಿಷೂನ್ ।**
**ಭೂಃ ಪಾದುಕೇ ಯೋಗಮಯೇ ದ್ಯೌಃ ಪುಷ್ಪಬಲಿಮನ್ವಹಮ್ ॥೧೫॥**

ಅಗ್ನಿಃ=ಅಗ್ನಿದೇವನು ಆಜಗವಂ=ಕುರಿ ಮತ್ತು ಆಕಳ ಕೋಡಿನಿಂದ ನಿರ್ಮಿತವಾದ್ದರಿಂದ ಆಜಗವ ಎಂಬ ಹೆಸರಿನ ಚಾಪಂ=ಬಿಲ್ಲನ್ನು, ಸೂರ್ಯಃ=ಸೂರ್ಯನು ರಶ್ಮಿಮಯಾನ್= ಕಿರಣಗಳಂತೆ ಎಲ್ಲಡೆ ಪ್ರವೇಶಿಸುವ, ಕಿರಣದೇವತೆಗಳಿಂದ ಅಭಿಮನ್ಯಮಾನವಾದ ಇಷೂನ್=ಬಾಣಗಳನ್ನು, ಭೂಃ=ಧರಾದೇವಿಯು ಯೋಗಮಯೇ ಪಾದುಕೇ=ಇಷ್ಟಪಟ್ಟಲ್ಲಿಗೆ ಕರೆದೊಯ್ಯುವ ಸಾಮರ್ಥ್ಯವುಳ್ಳ ಪಾದುಕೆಗಳನ್ನು, ದ್ಯೌಃ=ಸ್ವರ್ಗದೇವತೆಯು ಅನ್ವಹಂ ಪುಷ್ಪಬಲಿಂ=ಪ್ರತಿನಿತ್ಯ ಹೂಗಳ ಪೂಜೆಯನ್ನು ಜಹಾರ=ಇತ್ತರು. ॥೧೫॥

**ನಾಟ್ಯಂ ಸುಗೀತಂ ವಾದಿತ್ರಮಂತರ್ಧಾನಂ ಚ ಖೇಚರಾಃ ।**
**ಋಷಯಶ್ಚಾಶಿಷಃ ಸತ್ಯಾಃ ಸಮುದ್ರಃ ಶಂಖಮಾತ್ಮಜಂ ॥೧೬॥**

ಖೇಚರಾಃ=ಆಕಾಶದಲ್ಲಿ ಸಂಚರಿಸುವ ದೇವತೆಗಳು (ಗಂಧರ್ವರು) ನಾಟ್ಯಂ=ಕುಣಿಯುವದು ಸುಗೀತಂ=ಚೆನ್ನಾಗಿ ಹಾಡುವದು ವಾದಿತ್ರಂ=ವಾದ್ಯಬಾರಿಸುವದು ಅಂತರ್ಧಾನಂ=ಕಾಣದಂತಿರುವದು ಮುಂತಾದ ತಮ್ಮ ಕಲೆಗಳನ್ನು ವರವನ್ನಾಗಿ ಇತ್ತರು.

ಋಷಯಃ=ಮುನಿಗಳು ಸತ್ಯಾಃ ಆಶಿಷಃ=ಯಥಾರ್ಥವಾದ ಆಶೀರ್ವಾದಗಳನ್ನಿತ್ತರು. ಸಮುದ್ರಃ=ಸಮುದ್ರವು ಆತ್ಮಜಂ ಶಂಖಂ=ತನ್ನಲ್ಲಿ ಜನಿಸಿದ ಶಂಖವನ್ನಿತ್ತಿತು. ॥೧೬॥

**ಸಿಂಧವಃ ಪರ್ವತಾ ನದ್ಯೋ ರಥವೀಥೀರ್ಮಹಾತ್ಮನಃ ।**
**ಸೂತೋಽಥ ಮಾಗಧೋ ಬಂದೀ ಸಂಸ್ತೋತುಮುಪತಸ್ಥಿರೇ ॥೧೭॥**

ಸಿಂಧವಃ=ಗಂಡುನದಿಗಳು ಪರ್ವತಾಃ=ಪರ್ವತಗಳು ನದ್ಯಃ=ನದಿಗಳು ಮಹಾತ್ಮನಃ= ಪೃಥುರಾಜನಿಗೆ ರಥವೀಥೀಃ=ರಥಮಾರ್ಗವನ್ನಿತ್ತವು. ಅಥ=ನಂತರ ಸೂತಃ ಮಾಗಧಃ ಬಂದೀ=ಸೂತ ಮಾಗಧ ಬಂದಿಗಳು ಸಂಸ್ತೋತುಂ=ಸ್ತೋತ್ರ ಮಾಡಲು ಉಪತಸ್ಥಿರೇ= ಸಮೀಪದಲ್ಲಿ ನಿಂತರು. ||೧೭||

**ಸ್ತಾವಕಾಂಸ್ತಾನಭಿಪ್ರೇತ್ಯ ಪೃಥುರ್ವೈನ್ಯಃ ಪ್ರತಾಪವಾನ್ ।**
**ಮೇಘನಿರ್ಹ್ರಾದಯಾ ವಾಚಾ ಪ್ರಹಸನ್ನಿದಮಬ್ರವೀತ್ ||೧೮ ||**

ಪ್ರತಾಪವಾನ್=ಶೂರನಾದ ವೈನ್ಯಃ=ವೇನನ ಮಗನಾದ ಪೃಥುಃ=ಪೃಥುರಾಜನು ತಾನ್=ಸೂತಮಾಗಧಬಂದಿಗಳನ್ನು ಸ್ತಾವಕಾನ್=ಸ್ತುತಿ ಮಾಡಲು ಉದ್ಯುಕ್ತರಾದುದನ್ನು ಅಭಿಪ್ರೇತ್ಯ=ತಿಳಿದು ಮೇಘನಿರ್ಹ್ರಾದಯಾ=ಮೋಡಗಳ ಧ್ವನಿಯಂತೆ ಗಂಭೀರವಾದ ವಾಚಾ=ಮಾತುಗಳಿಂದ ಪ್ರಹಸನ್=ನಗುತ್ತ ಇದಂ ಅಬ್ರವೀತ್=ಮುಂದೆ ಹೇಳುವಂತೆ ಮಾತನಾಡಿದನು. ||೧೮||

**ಪೃಥುರುವಾಚ -**

**ಹೇ ಸೂತ ಹೇ ಮಾಗಧ ಸೌಮ್ಯ ಬಂದಿನ್**
**ಲೋಕೇಽಧುನಾಽಸ್ಪಷ್ಟಗುಣಸ್ಯ ಮೇ ಸ್ಯಾತ್ ।**
**ಕಿಮಾಶ್ರಯೋ ಮೇ ಸ್ತವ ಏಷ ಯೋಜ್ಯತಾಂ**
**ಮಾ ಮಯ್ಯಭೂವನ್ ವಿತಥಾ ಗಿರೋ ವಃ ||೧೯||**

ಹೇ ಸೂತ=ಎಲೋ ಸೂತನೇ ! ಹೇ ಮಾಗಧ=ಮಾಗಧನೆ ! ಬಂದಿನ್=ಬಂದಿಯೇ ! ಲೋಕೇ=ಜಗತ್ತಿನಲ್ಲಿ ಅಧುನಾ=ಈಗ ಅಸ್ಪಷ್ಟಗುಣಸ್ಯ=ವ್ಯಕ್ತವಾಗದಿರುವ ಪರಾಕ್ರಮಾದಿಗುಣವುಳ್ಳ ಮೇ=ನನ್ನ ಸ್ತವಃ=ಸ್ತೋತ್ರವು ಕಿಮಾಶ್ರಯಃ ಸ್ಯಾತ್=ಯಾವ ಗುಣವನ್ನು ಅವಲಂಬಿಸುವದು ? ಯಾವದನ್ನೂ ಅವಲಂಬಿಸಿ ಇಲ್ಲ, ನಿರ್ವಿಷಯವಾಗುವದು. ಆದ್ದರಿಂದ ಅಧುನಾ=ಈಗ ಮಯಿ=ನನ್ನ ವಿಷಯದಲ್ಲಿ ಪ್ರಯುಕ್ತವಾದ ವಃ=ನಿಮ್ಮ ಗಿರಃ=ಮಾತುಗಳು ವಿತಥಾಃ ಮಾ ಅಭೂವನ್=ಸುಳ್ಳಾಗಬಾರದು. ಬೇಕಾದರೆ ಕಾಲಾಂತರದಲ್ಲಿ ಸ್ಪಷ್ಟಗುಣಸ್ಯ=ವ್ಯಕ್ತವಾದ ಗುಣವುಳ್ಳ ಮೇ=ನನ್ನ ಸ್ತವಃ ಯೋಜ್ಯತಾಂ=ಸ್ತುತಿಯು ಮಾಡಲ್ಪಡಲಿ, ಅಂದರೆ ಸಾರ್ಥಕವಾಗುವದು ಎಂದು ಭಾವ. ||೧೯||

**ತಸ್ಮಾತ್ ಪರೋಕ್ಷೇಽಸ್ಮದುಪಾಶ್ರಿತಾನ್ಯಲಂ ಕರಿಷ್ಯಥ ಸ್ತೋತ್ರಮಪೀಚ್ಯವಾಚಃ ।**
**ಸತ್ಯುತ್ತಮಶ್ಲೋಕಗುಣಾನುವಾದೇ ಜುಗುಪ್ಸಿತಂ ನ ಸ್ತವಯಂತಿ ಸಭ್ಯಾಃ ||೨೦||**

ತಸ್ಮಾತ್=ಆದ್ದರಿಂದ (ಗುಣಗಳು ಹೊರಬೀಳದಿದ್ದದ್ದರಿಂದ) ಪರೋಕ್ಷೇ= ಕಾಲಾಂತರದಲ್ಲಿ ಅಸ್ಮದುಪಾಶ್ರಿತಾನಿ=ಪ್ರಕಟವಾದ ನಮ್ಮ ಕಾರ್ಯಗಳನ್ನು ಆಶ್ರಯಿಸಿ ಅಪೀಡ್ಯವಾಚಃ=ಬಾಧಿತವಾಗದ ಮಾತುಗಳುಳ್ಳವರಾಗಿ ಸ್ತೋತ್ರಂ ಅಲಂಕರಿಷ್ಯಥ= ಸ್ತೋತ್ರವನ್ನು ಚೆನ್ನಾಗಿ ಮಾಡಿರಿ.

ಇದು ಅಂಗೀಕರಿಸಿ ಹೇಳುವ ಮಾತು. ವಾಸ್ತವಿಕವಾಗಿ ತನ್ನ ಸ್ತೋತ್ರವನ್ನು ಎಂದೂ ತಿಳಿದವರು ಕೇಳಬಾರದು ಎಂದು ಹೇಳುವನು -

ಉತ್ತಮಶ್ಲೋಕಗುಣಾನುವಾದೇ ಸತಿ=ಬ್ರಹ್ಮಾದಿಗಳಿಂದ ಕೀರ್ತ್ಯನಾದ ಶ್ರೀಹರಿಯ ಗುಣಗಳನ್ನು ಹೇಳುತ್ತ ಅವನ ಸ್ತೋತ್ರವು ಶ್ರಾವ್ಯವಾಗಿರುವಾಗ ಜುಗುಪ್ಸಿತಂ=ನಿಂದಿತವಾದ ತನ್ನನ್ನು ಸಭ್ಯಾಃ=ಮಹಾತ್ಮರು ನ ಸ್ತವಯಂತಿ=ಸ್ತೋತ್ರ ಮಾಡಿಸುವದಿಲ್ಲ. ಬೇರೆಯವರು ಮಾಡುವ ತಮ್ಮ ಸ್ತೋತ್ರವನ್ನು ಕೇಳಲಾರರು ಎಂದು ಭಾವ. ||೨೦||

**ಮಹದ್ಗುಣಾನಾತ್ಮನಿ ಕರ್ತುಮಿಚ್ಛನ್ ಕಃ ಸ್ತಾವಕೈಃ ಸ್ತಾವಯತೇಽಸತೋಽಪಿ ।**
**ಸ ವೈ ಭವಿಷ್ಯನ್ನಿತಿ ವಿಪ್ರಲಬ್ಧೋ ಜನಾಪಹಾಸಂ ಕುಮತಿರ್ನ ವೇದ ||೨೧||**

ಮಹದ್ಗುಣಾನ್=ಇಂದ್ರಾದಿಗಳ ಗುಣಗಳನ್ನು ಆತ್ಮನಿ=ತನ್ನಲ್ಲಿ ಕರ್ತುಂ ಇಚ್ಛನ್=ಮುಂದೆ ಸಂಪಾದಿಸಲು ಇಚ್ಛಿಸುವ ಕಃ=ಯಾವ ವಿವೇಕಿಯು ಸ್ತಾವಕೈಃ=ಸ್ತೋತ್ರ ಮಾಡುವ ನಿಮ್ಮಿಂದ ಅಸತಃ ಅಪಿ=ಇಲ್ಲಿದಿರುವ ಗುಣಗಳನ್ನು ಸ್ತಾವಯತೇ=ಸ್ತೋತ್ರ ಮಾಡಿಸಿಕೊಳ್ಳುವನು ? ಯಾವನೂ ಮಾಡಿಸಿಕೊಳ್ಳಲಾರ.

ಆ ರೀತಿ ಸ್ತೋತ್ರ ಮಾಡಿಸಿಕೊಳ್ಳುವ ರಾಜರು ಇದ್ದಾರಲ್ಲ ? ಎಂದರೆ, ಅವರು ಮೂರ್ಖರೆಂದು ಹೇಳುವನು -

ಸಃ=ಆ ರಾಜನು ವಿಪ್ರಲಬ್ಧಃ ಭವಿಷ್ಯನ್ ಇತಿ=ಮುಂದೆ ಬರುವವೆಂದು ತಿಳಿದು ತನ್ನಲ್ಲಿ ಇಲ್ಲದಿರುವ ಗುಣಗಳಿಂದ ಸ್ತುತಿಸಲ್ಪಟ್ಟು ವಂಚಿತನಾಗಿ ಜನಾಪಹಾಸಂ=ವಿವೇಕಿಗಳು ಮಾಡುವ ನಿಂದೆಯನ್ನು ನ ವೇದ ತಿಳಿಯಲಾರನು. ಆದ್ದರಿಂದಲೇ ಕುಮತಿಃ=ಮೂರ್ಖನು ಎಂದರ್ಥ. ಈಗ ಇಲ್ಲದಿದ್ದರೂ ಮುಂದೆ ಬರುವವೆಂದು ಸ್ತೋತ್ರ ಮಾಡಿಸಿಕೊಂಡರೆ "ಪಾಪ, ಓದಿದರೆ ಪಂಡಿತನಾಗುತ್ತಿದ್ದ. ಒಳ್ಳೆಯ ಕೆಲಸ ಮಾಡಿದ್ದರೆ ಕೀರ್ತಿವಂತನಾಗುತ್ತಿದ್ದ" ಮುಂತಾಗಿ ಜನರು ಆಡಿಕೊಳ್ಳುವರು. ಇದು ತಿಳಿಯಲಾರದೆ ? ಎಂದು ಭಾವ. ||೨೧||

ವಿವೇಕಿಗಳಾದ ರಾಜರು ಹೀಗೆ ಮಾಡಲಾರರು ಎಂದು ಹೇಳುವರು -

**ಪ್ರಭವೋ ಹ್ಯಾತ್ಮನಃ ಸ್ತೋತ್ರಂ ಜುಗುಪ್ಸಂತ್ಯಪಿ ವಿಶ್ರುತಾಃ ।**
**ಹ್ರೀಮಂತಃ ಪರಮೋದಾರಾ ಪೌರುಷಂ ವಾ ವಿಗರ್ಹಿತಮ್ ॥೨೨॥**

ಹ್ರೀಮಂತಃ=ಲಜ್ಜಾಯುತರು, ಪ್ರಭವಃ=ವಿವೇಕಿಗಳು ವಿಶ್ರುತಾಃ ಅಪಿ=ಪ್ರಸಿದ್ಧ-ಗುಣವುಳ್ಳವರಾದರೂ ಸಹ ಆತ್ಮನಃ ಸ್ತೋತ್ರಂ=ತಮ್ಮ ಸ್ತೋತ್ರವನ್ನು ವಿಗರ್ಹಿತಂ ಪೌರುಷಂ ವಾ=ನಿಂದಿತವಾದ ಬ್ರಾಹ್ಮಣವಧ ಮುಂತಾದ ಪರಾಕ್ರಮವನ್ನು (ಅಂದರೆ ಅದನ್ನು ಮಾಡಿದನೆಂಬ ತನ್ನ ಸ್ತೋತ್ರವನ್ನು) ನಿಂದಿಸುವಂತೆ ಪರಮೋದಾರಾಃ=ಅಂತ್ಯಂತ ಉದಾರಿಗಳು ಆದವರು ಜುಗುಪ್ಸಂತಿ=ನಿಂದಿಸುವರು. ॥೨೨॥

**ವಯಂ ತ್ವವಿದಿತಾ ಲೋಕೇ ಸೂತಾದ್ಯಾ ಅಪಿ ವರೀಮಭಿಃ ।**
**ಕರ್ಮಭಿಃ ಕಥಮಾತ್ಮಾನಂ ಗಾಪಯಿಷ್ಯಾಮ ಬಾಲವತ್ ॥೨೩॥**

॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ ಪಂಚದಶೋಽಧ್ಯಾಯಃ ॥

ಹೇ ಸೂತಾದ್ಯಾಃ=ಎಲೋ ಸೂತ-ಮಾಗದ-ಬಂದಿಗಳೇ ! ಲೋಕೇ=ಜಗತ್ತಿನಲ್ಲಿ ವರೀಮಭಿಃ ಕರ್ಮಭಿಃ=ಶ್ರೇಷ್ಠವಾದ ಕಾರ್ಯಗಳಿಂದ ವಯಂ ತು=ನಾವಾದರೂ ಅವಿದಿತಾಃ ಅಪಿ=ಪ್ರಸಿದ್ಧರಾದವರಲ್ಲ. ಆ ಕಾರಣ ಬಾಲವತ್=ಚಿಕ್ಕಮಕ್ಕಳಂತೆ ಆತ್ಮಾನಂ=ನಮ್ಮನ್ನು ಕಥಂ ಗಾಪಯಿಷ್ಯಾಮಃ=ಹೇಗೆ ಸ್ತುತಿ ಮಾಡಿಸಿಕೊಳ್ಳುವೆವು ?

ಅತ್ಯಂತ ಉದಾರಿಗಳಾದ, ಮಹಾಸಮರ್ಥರಾದ, ಜಗತ್ಪ್ರಸಿದ್ಧರಾದ ಸಜ್ಜನರೇ ತಮ್ಮ ಗುಣಗಾನವನ್ನು ಕೇಳಲಾರರು. ಹೀಗಿರುವಾಗ ಶ್ರೇಷ್ಠವಾದ ಯಾವ ಕಾರ್ಯಗಳನ್ನೂ ಮಾಡದೇ, ಪ್ರಸಿದ್ಧಿಯೂ ಇಲ್ಲದ ನಾನು ಹೇಗೆ ನನ್ನ ಸ್ತುತಿ ಕೇಳುವೆನು ? ಆ ಕಾರಣ ನನ್ನ ಸ್ತುತಿ ಮಾಡಬೇಡಿ. ಕಿಂತು ಶ್ರೀಹರಿಯ ಸ್ತುತಿ ಮಾಡಿರಿ ಎಂದು ಭಾವ. ॥೨೩॥

॥ ಇಲ್ಲಿಗೆ ಹದಿನೈದನೇ ಅಧ್ಯಾಯವು ಮುಗಿಯಿತು ॥

# ಅಥ ಷೋಡಶೋಽಧ್ಯಾಯಃ

ಪೃಥುರಾಜನ ಸ್ತೋತ್ರಮಾಡುವ ನೆಪದಿಂದ ಶ್ರೀಹರಿಯಲ್ಲಿ ಭಕ್ತಿಯುಂಟಾಗಲು ಪೃಥುವಿನ ಮಾಹಾತ್ಮ್ಯವನ್ನು ಈ ಅಧ್ಯಾಯದಲ್ಲಿ ನಿರೂಪಿಸುವರು.

ಸೂತಾದಿಗಳಿಗೆ ಪೃಥುವು 'ನನ್ನನ್ನು ಸ್ತೋತ್ರ ಮಾಡಬೇಡಿ' ಎಂದಿರುವನು. ಹಾಗಾದರೆ ಬೇರೆ ಯಾರು ಸ್ತೋತ್ರ ಮಾಡುವವರು ? ಯಾರು ಅವನನ್ನು ಸ್ತೋತ್ರ ಮಾಡುವುದರಿಂದ ಶ್ರೀಹರಿಯಲ್ಲಿ ಭಕ್ತಿಯು ಉಂಟಾಗುವದು ? ಎಂದು ಪ್ರಶ್ನೆ ಬಂದರೆ, ಮುನಿಗಳಿಂದ ಪ್ರೇರಿತರಾದ ಸೂತಾದಿಗಳೇ ಸ್ತೋತ್ರ ಮಾಡಿದರೆಂದು ತಿಳಿಸಲು ಹೊರಟು ಆ ಸ್ತುತಿಪ್ರಕಾರವನ್ನು ತಿಳಿಸುವರು -

**ಮೈತ್ರೇಯ ಉವಾಚ**

**ಇತಿ ಬ್ರುವಾಣಂ ನೃಪತಿಂ ಗಾಯಕಾ ಮುನಿಚೋದಿತಾಃ ।**
**ತುಷ್ಟುವುಸ್ತುಷ್ಟಮನಸಸ್ತದ್ವಾಗಮೃತಸೇವಯಾ ॥೧॥**

ಇತಿ=ಈ ರೀತಿಯಾಗಿ ಬ್ರುವಾಣಂ=ಹೇಳುತ್ತಿರುವ ನೃಪತಿಂ=ಪೃಥುರಾಜನನ್ನು ಮುನಿಚೋದಿತಾಃ=ಋಷಿಗಳಿಂದ ಪ್ರೇರಿತರಾದ, ತದ್ವಾಗಮೃತಸೇವಯಾ=ಪೃಥುರಾಜನ ತೃಪ್ತಿಕರಮಾತುಗಳೆಂಬ ಅಮೃತಪಾನದಿಂದ (ಮಾತುಗಳನ್ನು ಕೇಳುವದರಿಂದ) ತುಷ್ಟಮನಸಃ=ಸಂತಸಗೊಂಡ ಮನಸ್ಸುಳ್ಳ ಗಾಯಕಾಃ=ಸೂತ-ಮಾಗದ-ಬಂದಿಗಳು ತುಷ್ಟುವುಃ=ಸ್ತೋತ್ರ ಮಾಡಿದರು. ॥೧॥

**ಸೂತ ಉವಾಚ**

**ನಾಲಂ ವಯಂ ತೇ ಮಹಿಮಾನುವರ್ಣನೇ**
**ಯೋ ದೇವದೇವೋಽವತತಾರ ಮಾಯಯಾ ।**

**ವೇನಾಂಗಜಾತಸ್ಯ ಚ ಪೌರುಷಾಣಿ ತೇ**
**ವಾಚಸ್ಪತೀನಾಮಪಿ ಬಭ್ರಮುರ್ಧಿಯಃ** ॥೨॥

ಅರ್ಥ-೧ ಪೃಥುವಿನಲ್ಲಿ ಸನ್ನಿಹಿತನಾದ ಭಗವಂತನ ಪರವಾಗಿ ಅರ್ಥ

ಯಃ=ಯಾವ ದೇವದೇವಃ=ದೇವತೆಗಳಿಗೂ ದೇವನಾದ ಶ್ರೀಮನ್ನಾರಾಯಣನು ಮಾಯಯಾ=ಭಕ್ತರ ಮೇಲೆ ದಯೆ ಮಾಡುವ ಇಚ್ಛೆಯಿಂದ ಅವತತಾರ=ಅವತಾರ ಮಾಡಿರುವನೋ, ತಸ್ಯ=ಅಂತಹ ವೇನಾಂಗಜಾತಸ್ಯ=ವೇನನ ಅವಯವದಿಂದ ಜನಿಸಿದ ತೇ=ನಿನ್ನಲ್ಲಿ ವಿಶೇಷವಾಗಿ ಸನ್ನಿಹಿತನಾದ ಶ್ರೀಹರಿಯ ಮಹಿಮಾನುವರ್ಣನೇ= ಮಾಹಾತ್ಮ್ಯವನ್ನು ಬಣ್ಣಿಸಲು ವಯಂ=ನಾವು ನ ಅಲಂ=ಸಮರ್ಥರಲ್ಲ. ತೇ ಪೌರುಷಾಣಿ=ನಿನ್ನಲ್ಲಿ ಸನ್ನಿಹಿತನಾಗಿರುವ ಶ್ರೀಹರಿಯ ಪರಾಕ್ರಮಗಳನ್ನು (ವರ್ಣಯಿತುಂ=)ವರ್ಣಿಸಲು ವಾಚಸ್ಪತೀನಾಂ=ಬ್ರಹ್ಮಾದಿಗಳ ಧಿಯಃ ಅಪಿ=ಬುದ್ಧಿಗಳೂ ಸಹ ಬಭ್ರಮುಃ=ಅಸಮರ್ಥ ಆಗಿರುವವು. ಅವರೇ ಹೀಗಾದರೆ ಇನ್ನು ನಮ್ಮ ಪಾಡೇನು ? ಎಂದು ಭಾವ.

ಅರ್ಥ-೨ ಪೃಥುವಿನಲ್ಲಿ ಸನ್ನಿಹಿತನಾದ ಭಗವಂತನ ಪರವಾಗಿ ಅರ್ಥ

ಯಃ=ಯಾವ ದೇವದೇವಃ=ಶ್ರೀಹರಿಯ ಕ್ರೀಡಾಸ್ಥಾನನಾದ ಪೃಥುವು ಮಾಯಯಾ= ಭಗವಂತನ ಇಚ್ಛಾನುಸಾರಿಗಳಾದ ಮುನಿಗಳ ಇಚ್ಛೆಯಿಂದ ಅವತತಾರ=ಪ್ರಕಾಶಗೊಂಡನೋ (ಜನಿಸಿದನೋ), ಅಂತಹ ವೇನಾಂಗಜಾತಸ್ಯ=ವೇನನ ಅವಯವದಿಂದ ಜನಿಸಿದ ತೇ=ನಿನ್ನ ಪೌರುಷಾಣಿ (ಕಥಯಿತುಂ)=ಪರಾಕ್ರಮಗಳನ್ನು ವರ್ಣಿಸಲು ವಾಚಸ್ಪತೀನಾಂ=ಕವಿಗಳ ಧಿಯಃ ಅಪಿ=ಮನಸ್ಸುಗಳೂ ಬಭ್ರಮುಃ=ವ್ಯಗ್ರವಾಯಿತು (ಭ್ರಮಗೊಂಡವು) ಎಂದಮೇಲೆ ಇನ್ನು ವಾಕ್ಯಗಳು ಅಸಮರ್ಥವಾಗುವವು ಎಂದು ಏನು ಹೇಳುವುದು ? ಎಂದು ಭಾವ.

**ಅಥಾಪ್ಯುದಾರಶ್ರವಸಃ ಪೃಥೋರ್ಹರೇಃ**
**ಕಲಾವತಾರಸ್ಯ ಕಥಾಮೃತಾದೃತಾಃ ।**
**ಯಥೋಪದೇಶಂ ಮುನಿಭಿಃ ಪ್ರಚೋದಿತಾಃ**
**ಶ್ಲಾಘ್ಯಾನಿ ಕರ್ಮಾಣಿ ವಯಂ ವಿತನ್ಮಹೇ** ॥೩॥

ಅಥಾಪಿ=ಸಂಪೂರ್ಣವಾಗಿ ವರ್ಣಿಸಲಾಗದಿದ್ದರೂ ಸಹ ಹರೇಃ=ಶ್ರೀಹರಿಯ ಕಲಾವತಾರಸ್ಯ=ಅಂಶಾವತಾರನಾದ (ಭಿನ್ನಾಂಶನಾದ) ಆದ್ದರಿಂದಲೇ ಉದಾರಶ್ರವಸಃ= ಉತ್ಕೃಷ್ಟವಾದ (ಧರ್ಮಾರ್ಥಕಾಮಮೋಕ್ಷಸಾಧನವಾದ) ಕೀರ್ತಿವುಳ್ಳ ಪೃಥೋಃ= ಪೃಥುರಾಜನ ಕಥಾಮೃತಾದೃತಾಃ=ಕಥೆಯೆಂಬ ಅಮೃತದ ಆದರವುಳ್ಳ ವಯಂ=ನಾವು ಮುನಿಭಿಃ=ಋಷಿಗಳಿಂದ ಪ್ರಚೋದಿತಾಃ=ಪ್ರೇರಿತರಾಗಿ ಯಥೋಪದೇಶಂ=ಅವನ

ಮಾಹಾತ್ಮ್ಯವನ್ನು ಬಲ್ಲ ಋಷಿಗಳ ಉಪದೇಶಾನುಸಾರವಾಗಿ ಶ್ಲಾಘ್ಯಾನಿ=ಸ್ತುತಿಸಲು ಯೋಗ್ಯವಾದ ಕರ್ಮಾಣಿ=ಕಾರ್ಯಗಳನ್ನು ವಿತನ್ಮಹೇ=ವಿಸ್ತಾರವಾಗಿ ವರ್ಣಿಸುವೆವು. ।।೩।।

**ಏಷ ಧರ್ಮಭೃತಾಂ ಶ್ರೇಷ್ಠೋ ಲೋಕಂ ಧರ್ಮೇಽನುವರ್ತಯನ್ ।**
**ಗೋಪ್ತಾ ಚ ಧರ್ಮಸೇತೂನಾಂ ಶಾಸ್ತಾ ತತ್ಪರಿಪಂಥಿನಾಮ್ ।।೪।।**

ಏಷಃ=ಈ ಪೃಥುವು ಲೋಕಂ=ಜನರನ್ನು ಧರ್ಮೇ=ಅವರವರ ಧರ್ಮದಲ್ಲಿ ಅನುವರ್ತಯನ್=ಇರಿಸುವವನಾಗಿ ಚ=ಮತ್ತು ಧರ್ಮಸೇತೂನಾಂ=ಧರ್ಮಮರ್ಯಾದೆಯ ಗೋಪ್ತಾ=ರಕ್ಷಕನು, ತತ್ಪರಿಪಂಥಿನಾಂ=ಧರ್ಮಮರ್ಯಾದೆಯ ವಿರೋಧಿಗಳಿಗೆ ಶಾಸ್ತಾ=ದಂಡ ಮಾಡತಕ್ಕವನು. ಆದ್ದರಿಂದ ಧರ್ಮಭೃತಾಂ ಶ್ರೇಷ್ಠಃ=ಧಾರ್ಮಿಕರಲ್ಲಿ ಶ್ರೇಷ್ಠನು. ಸಜ್ಜನರು ತಾವು ಧಾರ್ಮಿಕರಾಗಿರುತ್ತಾರೆ, ಆದರೆ ಇವನು ತಾನು ಧಾರ್ಮಿಕನಾಗುವದಲ್ಲದೇ ಎಲ್ಲ ವರ್ಣಾಶ್ರಮಧರ್ಮಗಳ ರಕ್ಷಣೆ ಮಾಡುವುದರಿಂದ ಮತ್ತು ವಿರೋಧಿಗಳ ಶಿಕ್ಷಣೆ ಮಾಡುವದರಿಂದ ಸಜ್ಜನರಲ್ಲಿ ಶ್ರೇಷ್ಠನೆಂದು ಭಾವ. ।।೪।।

**ಏಷ ವೈ ಲೋಕಪಾಲಾನಾಂ ಬಿಭರ್ತ್ಯೇಕಸ್ತನೌ ತನೂಃ ।**
**ಕಾಲೇ ಕಾಲೇ ಯಥಾಭಾಗಂ ಲೋಕಯೋರುಭಯೋರ್ಹಿತಮ್ ।।೫।।**

ಏಷಃ=ಪೃಥುರಾಜನಲ್ಲಿ ಸನ್ನಿಹಿತನಾದ ಶ್ರೀಹರಿಯು ಏಕ ಏವ=ಒಬ್ಬನೇ ತನೌ=ತನ್ನ ದೇಹದಲ್ಲಿ ಕಾಲೇ ಕಾಲೇ=ಆ ಆ ಕಾಲದಲ್ಲಿ ಲೋಕಪಾಲಾನಾಂ=ಸೂರ್ಯ ಇಂದ್ರ ಮೊದಲಾದವರ ತನೂಃ=ಶಕ್ತಿಯನ್ನು ಬಿಭರ್ತಿ=ಸ್ವೀಕರಿಸುವನು. ಯಥಾಭಾಗಂ=ಅವರವರ ಭಾಗವನ್ನು ಅತಿಕ್ರಮಿಸದೇ ಅಂದರೆ ಯಜ್ಞದಿಂದ ಸ್ವರ್ಗಲೋಕಕ್ಕೆ, ಮಳೆಯಿಂದ ಭೂಲೋಕಕ್ಕೆ ಹೀಗೆ ಉಭಯೋಃ=ಎರಡೂ ಲೋಕಕ್ಕೆ ಹಿತಂ ಬಿಭರ್ತಿ=ಹಿತವನ್ನು ಕಾಪಾಡುವನು. ।।೫।।

ಸೂರ್ಯ ಮುಂತಾದವರ ಶಕ್ತಿಧಾರಣವನ್ನು ಎಂಟು ಶ್ಲೋಕಗಳಿಂದ ಹೇಳುವರು -

**ವಸು ಕಾಲ ಉಪಾದತ್ತೇ ಕಾಲೇ ಚಾಯಂ ವಿಮುಂಚತಿ ।**
**ಸಮಃ ಸರ್ವೇಷು ಭೂತೇಷು ಪ್ರತಪನ್ ಸೂರ್ಯವದ್ವಿಭುಃ ।।೬।।**

ವಿಭುಃ=ಸಮರ್ಥನಾದ ಅಯಂ=ಪೃಥುರಾಜನು ಸೂರ್ಯವತ್=ಸೂರ್ಯನಂತೆ ಸರ್ವೇಷು ಭೂತೇಷು=ಎಲ್ಲ ಪ್ರಾಣಿಗಳಲ್ಲಿ ರಾಗದ್ವೇಷವಿಲ್ಲದೇ ಸಮನಾಗಿ (ತಪ್ಪು ಮಾಡಿದವರಿಗೆ ಶಿಕ್ಷೆ, ತಪ್ಪು ಮಾಡದವರಿಗೆ ರಕ್ಷೆ ಹೀಗೆ ಸಮನಾಗಿ) ಪ್ರತಪನ್=ತನ್ನ ಪ್ರತಾಪವನ್ನು ಪ್ರಕಟಗೊಳಿಸುತ್ತ ಕಾಲೇ=ಕರವನ್ನು ಸ್ವೀಕರಿಸುವಾಗ ವಸು=ಧನವನ್ನು

ಉಪಾದತ್ತೇ=ಸ್ವೀಕರಿಸುವನು. ಕಾಲೇ ವಿಮುಂಚತಿ ಸತಿ=ದುರ್ಭಿಕ್ಷೆ ಬಂದಾಗ ತಾನೇ ಪ್ರಜೆಗಳಿಗೆ ಹಣವನ್ನು ಕೊಡುವನು. ಸೂರ್ಯನು ಬೇಸಿಗೆಯಲ್ಲಿ ನೀರು ಹೀರುವನು, ಮಳೆಗಾಲದಲ್ಲಿ ನೀರನ್ನು ಕೊಡುವನು ಹೇಗೋ ಹಾಗೆ ಎಂದರ್ಥ.

ಇದರಿಂದ ಸೂರ್ಯಶಕ್ತಿ ಹೇಳಿದಂತಾಯಿತು. ||೬||

**ತಿತಿಕ್ಷತ್ಯಕ್ರಮಂ ವೈನ್ಯ ಉಪರ್ಯಾಕ್ರಮತಾಮಪಿ ।**
**ಭೂತಾನಾಂ ಕರುಣಃ ಶಶ್ವದಾರ್ತಾನಾಂ ಕ್ಷಿತಿವೃತ್ತಿಮಾನ್ ||೭||**

ಶಶ್ವತ್=ಯಾವಾಗಲೂ ಆರ್ತಾನಾಂ ಭೂತಾನಾಂ=ದುಃಖಿತರಾದ ಜನರಲ್ಲಿ ಕರುಣಃ=ದಯಾಳುವಾದ, ಕ್ಷಿತಿವೃತ್ತಿಮಾನ್=ಭೂಮಿಯಂತೆ ಸಹನಗುಣವುಳ್ಳ ವೈನ್ಯಃ=ಪೃಥುರಾಜನು ಉಪರಿ ಆಕ್ರಮತಾಂ=ತನ್ನ ಮೇಲೆ ಏರಿ ಬರುವವರ ಅಕ್ರಮಂ ಅಪಿ=ಅತಿಕ್ರಮವನ್ನೂ ಸಹ ತಿತಿಕ್ಷತಿ=ಸಹಿಸುವನು. ||೭||

**ದೇವೇऽವರ್ಷತ್ಯಸೌ ದೇವೋ ನರದೇವವಪುರ್ಹರಿಃ ।**
**ಕೃಚ್ಛ್ರಪ್ರಾಣಾಃ ಪ್ರಜಾ ಹ್ಯೇಷ ರಕ್ಷಿಷ್ಯತ್ಯಂಜಸೇಂದ್ರವತ್ ||೮||**

ದೇವೇ=ಇಂದ್ರನು ಅವರ್ಷತಿ ಸತಿ=ಮಳೆಗರೆಯದಿರುವಾಗ ಅಸೌ=ಈ ನರದೇವವಪುಃ=ಪೃಥುರಾಜನಲ್ಲಿ ಆವಿಷ್ಟನಾದ ಹರಿಃ=ಭಗವಂತನು ಕೃಚ್ಛ್ರಪ್ರಾಣಾಃ ಪ್ರಜಾಃ=ಹಸಿವೆಯಿಂದ ಕಷ್ಟಕ್ಕೀಡಾದ ಪ್ರಾಣವುಳ್ಳ ಪ್ರಜೆಗಳನ್ನು ಇಂದ್ರವತ್=ಇಂದ್ರನಂತೆ ಅಂಜಸಾ=ಚೆನ್ನಾಗಿ ರಕ್ಷಿಷ್ಯತಿ=ವೃತ್ತಿಯನ್ನು ನೀಡಿ ರಕ್ಷಿಸುವನು. ||೮||

**ಆಪ್ಯಾಯಯತ್ಯಸೌ ಲೋಕಂ ವದನಾಮೃತಮೂರ್ತಿನಾ ।**
**ಸಾನುರಾಗಾವಲೋಕೇನ ವಿಶದಸ್ಮಿತಚಾರುಣಾ ||೯||**

ವಿಶದಸ್ಮಿತಚಾರುಣಾ=ವಿಸ್ತಾರವಾದ ಮಂದಹಾಸದಿಂದ ಸುಂದರವಾದ, ಸಾನುರಾಗಾವಲೋಕೇನ=ಪ್ರೇಮಪೂರ್ಣವಾದ ನೋಟವುಳ್ಳ ವದನಾಮೃತಮೂರ್ತಿನಾ=ಮುಖವೆಂಬ ಚಂದ್ರನಿಂದ ಅಸೌ=ಶ್ರೀಹರಿಯು ಲೋಕಂ=ಜನರನ್ನು ಆಪ್ಯಾಯಯತಿ=ತೃಪ್ತಿಪಡಿಸುವನು. ||೯||

**ಅವ್ಯಕ್ತವರ್ತ್ಮೈಷ ವಿಶುದ್ಧಕಾರ್ಯೋ ಗಂಭೀರಚೇತಾ ಉಪಗುಪ್ತವಿತ್ತಃ ।**
**ಅನಂತಮಾಹಾತ್ಮ್ಯಗುಣೈಕಧಾಮಾ ಪೃಥುಃ ಪ್ರಚೇತಾ ಇವ ಸಂವೃತಾತ್ಮಾ||೧೦||**

ಏಷಃ ಪೃಥುಃ=ಈ ಪೃಥುರಾಜನು ಪ್ರಚೇತಾ ಇವ=ವರುಣನಂತೆ ಅವ್ಯಕ್ತವರ್ತ್ಮಾ=ಪ್ರವೇಶ-ನಿರ್ಗಮನಗಳ ಮಾರ್ಗಗಳನ್ನು ತಿಳಿಯದಂತಿರುವವನು ಅಥವಾ ಯೋಗಿಗಳ

ಮಾರ್ಗವುಳ್ಳವನು, ನಿಗೂಢಕಾರ್ಯಃ=ಕಾರ್ಯವು ಮುಗಿಯುವವರೆಗೂ ಮತ್ತೊಬ್ಬರಿಗೆ ತಿಳಿಯದಿರುವ ಕಾರ್ಯವುಳ್ಳವನು, (ನಿಶುದ್ಧಕಾರ್ಯಃ ಎಂಬ ಪಾಠದಲ್ಲಿ ಅತ್ಯಂತ ಶುದ್ಧವಾದ ಕಾರ್ಯವುಳ್ಳವನು ಎಂದರ್ಥ) ಗಂಭೀರಚೇತಾಃ=(ಗಂಭೀರವೇದಾಃ ಎಂದು ಪಾಠಾಂತರ) ಏಕೆ ಈ ರೀತಿ ಮಾಡುತ್ತಿರುವನು ಎಂಬ ಅಭಿಪ್ರಾಯ ತಿಳಿಯದಿರುವವನು, ಉಪಗುಪ್ತವಿತ್ತಃ=ಚೆನ್ನಾಗಿ ರಕ್ಷಿಸಲ್ಪಟ್ಟ ಹಣವುಳ್ಳವನು, ಅನಂತಮಾಹಾತ್ಮ್ಯಗುಣೈಕಧಾಮಾ= ಅನಂತ ಮಾಹಾತ್ಮ್ಯವುಳ್ಳ ಗುಣಗಳಿಗೆ ಮುಖ್ಯಆಶ್ರಯನು ಅಥವಾ ಅನಂತ ಮಾಹಾತ್ಮ್ಯವುಳ್ಳವನು ಮತ್ತು ಸೌಶೀಲ್ಯಾದಿಗುಣಗಳಿಗೆ ಮುಖ್ಯಾಶ್ರಯನು. ಸಂವೃತಾತ್ಮಾ= ಚೆನ್ನಾಗಿ ಆಚ್ಛಾದಿತವಾದ ಸ್ವರೂಪಉಳ್ಳವನು. ॥೧೦॥

**ದುರಾಸದೋ ದುರ್ವಿಷಹ ಆಸನ್ನೋಽಪಿ ವಿದೂರವತ್ ।**
**ನೈವಾಭಿಭವಿತುಂ ಶಕ್ಯೋ ವೇನಾರಣ್ಯುತ್ಥಿತೋಽನಲಃ ॥೧೧॥**

ವೇನಾರಣ್ಯುತ್ಥಿತಃ=ವೇನನೆಂಬ ಅರಣಿಯಿಂದ ಹುಟ್ಟಿದ ಅನಲಃ=ಅಗ್ನಿಯಂತಿರುವ ಪೃಥುವು ದುರಾಸದಃ=ಶತ್ರುಗಳಿಂದ ಮನಸ್ಸಿನಿಂದಲೂ ಹೊಂದಲಾಗದವನು, ದುರ್ವಿಷಹಃ=ಶತ್ರುಗಳಿಂದ ಸಹಿಸಲಾಗದವನು, ಆಸನ್ನೋಽಪಿ=ಸಮೀಪದಲ್ಲೇ ಇದ್ದರೂ ವಿದೂರವತ್=ದೂರದಲ್ಲಿರುವ ವ್ಯಕ್ತಿಯಂತೆ ಅಭಿಭವಿತುಂ=ಸಾಮರ್ಥ್ಯದಿಂದ ಸೋಲಿಸಲು ನೈವ ಶಕ್ಯಃ=ಸಾಧ್ಯವಾಗದವನು. ॥೧೧॥

**ಅಂತರ್ಬಹಿಶ್ಚ ಭೂತಾನಾಂ ಪಶ್ಯನ್ ಕರ್ಮಾಣಿ ಚಾರಣೈಃ ।**
**ಉದಾಸೀನ ಇವಾಧ್ಯಕ್ಷೋ ವಾಯುರಾತ್ಮೇವ ದೇಹಿನಾಮ್ ॥೧೨॥**

ಭೂತಾನಾಂ=ಜನರ ಅಂತಃ ಬಹಿಃ ಚ=ಒಳಗಿನ ಮತ್ತು ಹೊರಗಿನ ಕರ್ಮಾಣಿ=(ತನ್ನನ್ನು ನಿಂದೆ ಸ್ತುತಿ ಮುಂತಾದ) ಕಾರ್ಯಗಳನ್ನು *ಚಾರಣೈಃ=ಗೂಢಚಾರರಿಂದ ಪಶ್ಯನ್= ತಿಳಿದವನಾದರೂ ಉದಾಸೀನ ಇವ=ತಿಳಿಯದಂತಿರುವನು. ಅಧ್ಯಕ್ಷಃ=ಅಧಿಪತಿಯು. ದೇಹಿನಾಂ=ಜನರ ಆತ್ಮಾ=ಅಂತರ್ಯಾಮಿಯಾದ ಅಧ್ಯಕ್ಷಃ (ವಾಯುಃ) ಇವ= ಮುಖ್ಯಪ್ರಾಣನಂತೆ.

*ವಾಯುಪಕ್ಷದಲ್ಲಿ ಚಾರಣೈಃ ಎಂದರೆ ಶ್ವಾಸೋಚ್ಛ್ವಾಸ ಮಾಡಿಸುವ ಮುಖಾಂತರ ಎಂದರ್ಥ. ॥೧೨॥

**ನಾದಂಡ್ಯಂ ದಂಡಯತ್ಯೇಷ ಸುತಮಾತ್ಮದ್ವಿಷಾಮಪಿ ।**
**ದಂಡಯತ್ಯಾತ್ಮಜಮಪಿ ದಂಡ್ಯಂ ಧರ್ಮಪಥೇ ಸ್ಥಿತಃ ॥೧೩॥**

ಧರ್ಮಪಥೇ ಸ್ಥಿತಃ ಏಷಃ=ಯಮಧರ್ಮನ ಮಾರ್ಗದಲ್ಲಿರುವ ಪೃಥುವು ಆತ್ಮದ್ವಿಷಾಂ ಸುತಂ ಅಪಿ=ತನ್ನ ವಿರೋಧಿಯ ಮಗನಾಗಿದ್ದರೂ ಅದಂಡ್ಯಂ=ಶಿಕ್ಷೆಗೆ ಅರ್ಹನಾಗದವನನ್ನು ನ ದಂಡಯತಿ=ಶಿಕ್ಷಿಸಲಾರನು. ದಂಡ್ಯಂ=ಶಿಕ್ಷಾರ್ಹನಾಗಿದ್ದರೆ ಆತ್ಮಜಂ ಅಪಿ=ತನ್ನ ಮಗನೇ ಆಗಿದ್ದರೂ ದಂಡಯತಿ=ಶಿಕ್ಷಿಸುವನು. ।।೧೩।।

**ಅಸ್ಯಾಪ್ರತಿಹತಂ ಚಕ್ರಂ ಪೃಥೋರಾಮಾನಸಾಚಲಾತ್ ।**
**ವರ್ತತೇ ಭಗವಾನರ್ಕೋ ಯಾವತ್ತಪತಿ ಗೋಗಣೈಃ ।।೧೪।।**

ಭಗವಾನ್ ಅರ್ಕಃ=ಪೂಜ್ಯನಾದ ಸೂರ್ಯನು ಗೋಗಣೈಃ=ಕಿರಣಗಳಿಂದ ಯಾವತ್ ತಪತಿ=ಎಲ್ಲಿಯವರೆಗೆ ಬಿಸಿಲು ಬೆಳಕು ಚೆಲ್ಲುವನೋ ತಾವತ್=ಅಲ್ಲಿಯವರೆಗೆ ಆಮಾನಸಾಚಲಾತ್=ಮಾನಸಪರ್ವತದಿಂದ ಆರಂಭಿಸಿ ಅಸ್ಯ=ಪೃಥುವಿನ ಅಪ್ರತಿಹತಂ= ತಡೆಯಿಲ್ಲದ ಚಕ್ರಂ=ಆಜ್ಞೆಯು, ಸೇನೆಯು, ರಥವು ವರ್ತತೇ=ಇರುವದು. ।।೧೪।।

**ರಂಜಯಿಷ್ಯತಿ ಯಲ್ಲೋಕಮಯಮಾತ್ಮವಿಚೇಷ್ಟಿತೈಃ ।**
**ಅಥಾಮುಮಾಹೂ ರಾಜಾನಂ ಮನೋರಂಜನಕೈಃ ಪ್ರಜಾಃ ।।೧೫ ।।**

ಅಯಂ=ಪೃಥುವು ಮನೋರಂಜಕೈಃ=ಮನಸ್ಸಿಗೆ ಸಂತೋಷವನ್ನು ನೀಡುವ, ಆತ್ಮಚೇಷ್ಟಿತೈಃ=ತನ್ನ ವ್ಯಾಪಾರಗಳಿಂದ ಯತ್=ಯಾವ ಕಾರಣ ಲೋಕಂ=ಜನರನ್ನು ರಂಜಯಿಷ್ಯತಿ=ಸಂತಸಗೊಳಿಸುವನೋ ಅಥ=ಆದ್ದರಿಂದ ಪ್ರಜಾಃ=ಪ್ರಜೆಗಳು ಅಮುಂ= ಇವನನ್ನು ರಾಜಾನಂ ಆಹುಃ=ರಾಜನೆಂದು ಕರೆದರು. ।।೧೫।।

**ದೃಢವ್ರತಃ ಸತ್ಯಸಂಧೋ ಬ್ರಹ್ಮಣ್ಯೋ ವೃದ್ಧಸೇವಕಃ ।**
**ಶರಣ್ಯಃ ಸರ್ವಭೂತಾನಾಂ ಮಾನದೋ ದೀನವತ್ಸಲಃ ।।೧೬।।**

ಈ ಪೃಥುವು, ದೃಢವ್ರತಃ=ಅಖಂಡಿತವಾದ ವ್ರತವುಳ್ಳವನು, ಸತ್ಯಸಂಧಃ=ಸತ್ಯವಾದ ಪ್ರತಿಜ್ಞೆಯುಳ್ಳವನು, ಬ್ರಹ್ಮಣ್ಯಃ=ಬ್ರಾಹ್ಮಣರಲ್ಲಿ ಭಕ್ತಿಯುಳ್ಳವನು, ವೃದ್ಧಸೇವಕಃ=ಹಿರಿಯರ ಸೇವೆ ಮಾಡುವವನು, ಸರ್ವಭೂತಾನಾಂ ಶರಣ್ಯಃ=ಎಲ್ಲರಿಗೂ ಆಶ್ರಯನು, ಮಾನದಃ=ಅವರಿಗೆ ಸನ್ಮಾನ ಮಾಡುವವನು, ದೀನವತ್ಸಲಃ=ದುಃಖಿತರಲ್ಲಿ ಅನುಗ್ರಹ ಮಾಡುವವನೂ ಆಗಿದ್ದಾನೆ.

**ಮಾತೃಭಕ್ತಿಃ ಪರಸ್ತ್ರೀಷು ಪತ್ನ್ಯಾಃ ಸ್ಮರ ಇವಾಪರಃ ।**
**ಪ್ರಜಾಸು ಪಿತೃವತ್ ಸ್ನಿಗ್ಧಃ ಕಿಂಕರೋ ಬ್ರಹ್ಮವಾದಿನಾಮ್ ।।೧೭।।**

ಪರಸ್ತ್ರೀಷು=ಬೇರೆ ಹೆಣ್ಣುಮಕ್ಕಳಲ್ಲಿ ಮಾತೃಭಕ್ತಿಃ=ತಾಯಿಯೆಂಬ ಭಾವನೆಯುಳ್ಳವನು. ಪತ್ನ್ಯಾಂ=ತನ್ನ ಹೆಂಡತಿಯಲ್ಲಿ ಆತ್ಮನಃ ಅರ್ಧ ಇವ ಪ್ರೀತಿಮಾನ್=ತನ್ನ ದೇಹಾರ್ಧದಲ್ಲಿಯಂತೆ

ಪ್ರೀತಿಯುಳ್ಳವನು. ಪ್ರಜಾಸು=ಪ್ರಜೆಗಳಲ್ಲಿ ಪಿತೃವತ್ ಸ್ನಿಗ್ಧಃ=ತಂದೆಯಂತೆ ಮಮತೆಯುಳ್ಳವನು. ಬ್ರಹ್ಮವಾದಿನಾಂ ಕಿಂಕರಃ=ಬ್ರಹ್ಮಜ್ಞಾನಿಗಳಿಗೆ ದಾಸನೂ ಆಗಿರುವನು. ।।೧೭।।

**ದೇಹಿನಾಮಾತ್ಮವತ್ಪ್ರೇಷ್ಠಃ ಸುಹೃದಾನಂದವರ್ಧನಃ ।**
**ಮುಕ್ತಸಂಗಪ್ರಸಂಗೋಽಯಂ ದಂಡಪಾಣಿರಸಾಧುಷು ।।೧೮।।**

ಅಯಂ=ಈ ಪೃಥುವು ದೇಹಿನಾಂ=ಜನರಿಗೆ ಆತ್ಮವತ್ ಪ್ರೇಷ್ಠಃ=ತಮ್ಮ ಜೀವದಂತೆ ಅತಿಶಯಪ್ರೀತಿಪಾತ್ರನು. ಸುಹೃದಾನಂದವರ್ಧನಃ=ಸ್ನೇಹಿತರಿಗೆ ಆನಂದವನ್ನು (ಬೆಳೆಸುವವನು) ನೀಡುವವನು. ಮುಕ್ತಸಂಗಪ್ರಸಂಗಃ=ವಿಷಯಾಸಕ್ತಿಯನ್ನು ತೊರೆದ ಪರಮಹಂಸರಲ್ಲಿ ವಿಶೇಷ ಸಹವಾಸವುಳ್ಳವನು. ಅಸಾಧುಷು=ದುಷ್ಟಜನರಲ್ಲಿ ದಂಡಪಾಣಿಃ=ಯಮನಂತಿರುವವನು. ।।೧೮।।

**ಏಷ ದೋಗ್ಧಾ ಮಹೀಂ ವೀರೋ ಗಾಂ ಸತೀಮೋಜಸೌಷಧೀಃ ।**
**ಸಮಾಂ ಕರಿಷ್ಯತೇ ಚೇಮಾಂ ಧನುಃ ಕೋಟ್ಯಾ ಸಮಂತತಃ ।।೧೯।।**

ಏಷಃ ವೀರಃ=ಈ ಪೃಥುರಾಜನು ಓಜಸಾ=ತನ್ನ ಸಾಮರ್ಥ್ಯದಿಂದ ಗಾಂ ಸತೀಂ ಮಹೀಂ=ಗೋರೂಪದಿಂದ ಇರುವ ಭೂಮಿಯನ್ನು ಓಷಧೀಃ ದೋಗ್ಧಾ=ಧಾನ್ಯಗಳನ್ನು ಕರೆಯುವವನು. ಇಮಾಂ=ಈ ಭೂಮಿಯನ್ನು ಸಮಂತತಃ=ಎಲ್ಲಡೆ ಧನುಃಕೋಟ್ಯಾ=ತನ್ನ ಧನುಸ್ಸಿನ ತುದಿಯಿಂದ ಸಮಾಂ ಕರಿಷ್ಯತೇ=ಸಮನಾಗಿ ಮಾಡುವವನು. ।।೧೯।।

ಮನುಷ್ಯದೇಹವನ್ನು ಧಾರಣ ಮಾಡಿದ ಪೃಥುವಿನಲ್ಲಿ ಮೇಲೆ ಹೇಳಿದ ಈ ಎಲ್ಲ ಗುಣಗಳು ಹೇಗೆ ಹೇಳಲ್ಪಟ್ಟವು ? ಎಂದರೆ, ನಾವು ಸ್ತುತಿಸಿದ್ದು ಶ್ರೀಹರಿಯನ್ನೇ ಎಂದು ಸ್ಪಷ್ಟವಾಗಿ ಹೇಳುವರು -

**ಅಯಂ ತು ಸಾಕ್ಷಾದ್ಭಗವಾಂಸ್ತ್ರ್ಯಧೀಶಃ ಕೂಟಸ್ಥ ಆತ್ಮಾ ಕಲಯಾಽವತೀರ್ಣಃ ।**
**ಯಸ್ಮಿನ್ನವಿದ್ಯಾರಚಿತಂ ನಿರರ್ಥಕಂ ಪಶ್ಯಂತಿ ನಾನಾತ್ವಮಿವ ಪ್ರತೀತಮ್ ।।೨೦।।**

ಅಯಂ ತು=ಪೃಥುವಿನಲ್ಲಿ ವಿಶೇಷವಾಗಿ ಸನ್ನಿಹಿತನಾಗಿರುವ ಶ್ರೀಹರಿಯು ಸಾಕ್ಷಾತ್=ಮುಖ್ಯವಾಗಿ (ಅನೌಪಚಾರಿಕವಾಗಿ) ಭಗವಾನ್=ಷಡ್ಗುಣಸಂಪನ್ನನು. ತ್ರ್ಯಧೀಶಃ= ಮೂರು ಲೋಕಗಳಿಗೆ ಮುಖ್ಯನಿಯಾಮಕನು. ಕೂಟಸ್ಥಃ=ನಿರ್ವಿಕಾರನು. ಆತ್ಮಾ= ಆದಾನಾದಿಕರ್ತೃವು. ಕಲಯಾ ಅವತೀರ್ಣಃ=ರಾಜರಾಜೇಶ್ವರರೂಪದಿಂದ ಅವತರಿಸಿದವನು. ಆದ್ದರಿಂದ ಮೇಲೆ ಹೇಳಿದ ಗುಣಗಳು ಉಪಪನ್ನವೆಂದು ಭಾವ.

ಅವಿದ್ಯಾರಚಿತಂ=ಜಗತ್ತಿನಲ್ಲಿ ಈಶ್ವರನ ಇಚ್ಛೆಯಿಂದ ಕಲ್ಪಿತವಾದ ನಿರರ್ಥಕಂ= ವಿಷಯರಹಿತವಾದ ಗಂಧರ್ವನಗರಾದಿವಿಷಯಕ ಜ್ಞಾನವೇನಿದೆಯೋ ತತ್=ಅದನ್ನು ಸಂತಃ=ಸಜ್ಜನರು (ಜ್ಞಾನಿಗಳು) ಯಸ್ಮಿನ್ ಪ್ರತೀತಂ ನಾನಾತ್ವಮಿವ ಪಶ್ಯಂತಿ=ಭಗವಂತನ ರೂಪಗಳಲ್ಲಿ ಮತ್ತು ಧರ್ಮಗಳಲ್ಲಿ ಕಂಡು ಬರುವ ಭೇದಜ್ಞಾನದಂತೆ ತಿಳಿಯುವರು. ಅಂದರೆ ಭಗವಂತನ ರೂಪಗಳಲ್ಲಿ ಮತ್ತು ಧರ್ಮಗಳಲ್ಲಿ ಭೇದಜ್ಞಾನ ಹೇಗೆ ಭ್ರಮವೋ ಅದರಂತೆ ಗಂಧರ್ವನಗರ ಶುಕ್ತಿರಜತಾದಿಗಳ ಜ್ಞಾನಗಳೂ ಭ್ರಮವೆಂದು ದೃಷ್ಟಾಂತ ಮಾಡಿದ್ದರಿಂದ ಭೇದಜ್ಞಾನಭ್ರಮವೆಂದು ಸಿದ್ಧವಾಗುವದು.

**ಭಾಗವತ ತಾತ್ಪರ್ಯ :-**

ಈ ಶ್ಲೋಕದಲ್ಲಿ ಜಗತ್ತಿಗೆ ಮಿಥ್ಯಾತ್ವ ಹೇಳುತ್ತಿದ್ದಾರೆ ಎಂದು ತೋರುವದು. ಅದನ್ನು ಪರಿಹರಿಸಲು ಅಪೇಕ್ಷಿತವಾದ ಅಧ್ಯಾಹಾರ ಮಾಡಿ ತಾತ್ಪರ್ಯ ಹೇಳುವರು -

**ಯಲ್ಲೋಕೇ ನಿರರ್ಥಕಂ ತದ್ಭಗವದ್ರೂಪೇಷು ಪ್ರತೀತನಾನಾತ್ವದೃಷ್ಟಾಂತೇನ ಪಶ್ಯಂತಿ ಸಂತಃ ।**

**'ಮತ್ಸ್ಯರೂಪಾದಿನಾನಾತ್ವದೃಷ್ಟಿವದ್ಯನ್ನಿರರ್ಥಕಮ್ ।' ಇತಿ ಪಾದ್ಮೇ ॥**
**'ಏವಂ ಧರ್ಮಾನ್ ಪೃಥಕ್ ಪಶ್ಯನ್' ಇತಿ ಚ ॥**

ಯಾವುದು ಲೋಕದಲ್ಲಿ ಅಸತ್ಯವಾದ ವಿಷಯವುಳ್ಳ ಗಂಧರ್ವನಗರ ಮುಂತಾದವುಗಳ ಜ್ಞಾನವಿದೆಯೋ ಅದನ್ನು ಭಗವಂತನ ರೂಪಗಳಲ್ಲಿ ತೋರುವ ನಾನಾತ್ವಪ್ರತೀತಿಯಂತೆ ಸಜ್ಜನರು ತಿಳಿಯುವರು. ಮತ್ಸ್ಯಾದಿರೂಪಗಳಲ್ಲಿ ಪರಸ್ಪರ ಭೇದಜ್ಞಾನ ಹೇಗೆ ಭ್ರಮವೋ ಹಾಗೆ ಶುಕ್ತಿರಜತಜ್ಞಾನ-ಗಂಧರ್ವನಗರಜ್ಞಾನವೂ ಭ್ರಮವೇ ಎಂದು ತಿಳಿಯುತ್ತಾರೆ.

ಯಸ್ಮಿನ್ ಎಂಬುದಕ್ಕೆ ಭಗವದ್ರೂಪೇಷು ಎಂದು ಅರ್ಥ. ಮತ್ತು ಲೋಕೇ ಯತ್ ತತ್ ಸಂತಃ ಎಂದು ನಾಲ್ಕು ಪದಗಳನ್ನು ಅಧ್ಯಾಹಾರ ಮಾಡಿ, ಅರ್ಥವನ್ನು ಹೇಳಿ ಪದ್ಮಪುರಾಣದ ಸಮ್ಮತಿ ಇತ್ತಿರುವರು.

ಯಸ್ಮಿನ್ ಎಂಬುದಕ್ಕೆ ಯದ್ಧರ್ಮೇಷು ಎಂಬ ಅರ್ಥ ಇಟ್ಟುಕೊಂಡು, ಭಗವಂತನ ಧರ್ಮಗಳಲ್ಲಿ ನಾನಾತ್ವಪ್ರತೀತಿಯು ಭ್ರಮವಾಗಿದೆ ಎಂಬ ವಿಷಯದಲ್ಲಿ ಪ್ರಮಾಣ ಹೇಳುವರು :- 'ಏವಂ ಧರ್ಮಾನ್' ಎಂದು. ಎತ್ತರವಾದ ಪರ್ವತದ ಮೇಲೆ ಬಿದ್ದ ನೀರು ಹೇಗೆ ಬೇಗನೇ ಕೆಳಗೆ ಹರಿಯುವದೋ ಹಾಗೆಯೇ ಶ್ರೀಹರಿಯ ಧರ್ಮಗಳನ್ನು ಪರಮಾತ್ಮನಿಂದ ಭಿನ್ನ ಹಾಗೂ ಪರಸ್ಪರವಾಗಿಯೂ ಭಿನ್ನವೆಂದು ತಿಳಿದವನು ಅಂಧಂತಮಸ್ಸಿಗೆ ಹೋಗುವನು ಎಂದು ಪ್ರಮಾಣವಿದೆ. ಇಲ್ಲಿ ಭಗವಂತನ ಧರ್ಮಗಳಲ್ಲಿ ಭೇದಜ್ಞಾನದಿಂದ ಅನರ್ಥ ಹೇಳಿರುವದರಿಂದ ಅವಿದ್ಯಮಾನವಿಷಯಕವೆಂದು ಅರ್ಥಾತ್ ಸಿದ್ಧವಾಗುವದು.

**ಅಯಂ ಭುವೋ ಮಂಡಲಮೋದಯಾದ್ರೇ-**
**ಗೋರ್ಪ್ತೈಕವೀರೋ ನರದೇವನಾಥಃ ।**
**ಆಸ್ಥಾಯ ಜೈತ್ರಂ ರಥಮಾತ್ತಚಾಪಃ**
**ಪರ್ಯಸ್ಯತೇ ದಕ್ಷಿಣತೋ ಯಥಾಽರ್ಕಃ ॥೨೧॥**

ಅಯಂ=ಪೃಥುವು ಆ ಉದಯಾದ್ರೇಃ=ಉದಯಪರ್ವತದವರೆಗೆ ಭುವಃ ಮಂಡಲಂ= ಭೂಮಂಡಲವನ್ನು ಗೋಪ್ತಾ=ರಕ್ಷಿಸುವವನು. ಅದಕ್ಕಾಗಿ ಏಕವೀರಃ=ಮುಖ್ಯವಾದ ಪರಾಕ್ರಮವುಳ್ಳ ನರದೇವನಾಥಃ=ರಾಜಾಧಿರಾಜನಾದ ಇವನು ಜೈತ್ರಂ ರಥಂ ಆಸ್ಥಾಯ= ಜಯಪ್ರದವಾದ ರಥದಲ್ಲಿ ಕುಳಿತು ಅತ್ತಚಾಪಃ=ಧನಸ್ಸು ಸ್ವೀಕರಿಸಿ ಯಥಾಽರ್ಕಃ= ಸೂರ್ಯನಂತೆ ದಕ್ಷಿಣತಃ ಪರ್ಯಸ್ಯತೇ=ಭೂಪ್ರದಕ್ಷಿಣ ಮಾಡುವನು. ॥೨೧॥

**ತಸ್ಮೈ ನೃಪಾಲಾಃ ಕಿಲ ತತ್ರ ತತ್ರ**
**ಬಲಿಂ ಹರಿಷ್ಯಂತಿ ಸಲೋಕಪಾಲಾಃ ।**
**ಮಂಸ್ಯಂತಿ ಏಷಾಂ ಸ್ತ್ರಿಯ ಆದಿರಾಜಂ**
**ಚಕ್ರಾಯುಧಂ ತದ್ಯಶ ಉಚ್ಚರಂತ್ಯಃ ॥ ೨೨॥**

ತಸ್ಮೈ=ಈ ರೀತಿ ಸಂಚರಿಸುವ ಪೃಥುರಾಜನಿಗೆ ತತ್ರ ತತ್ರ=ತಮ್ಮ ತಮ್ಮ ಸ್ಥಾನಗಳಲ್ಲಿ ಸಲೋಕಪಾಲಾಃ=ಲೋಕಪಾಲಕರಿಂದ ಸಹಿತರಾದ ನೃಪಾಲಾಃ=ರಾಜರು ಬಲಿಂ ಹರಿಷ್ಯಂತಿ ಕಿಲ=ಕಪ್ಪು ಕಾಣಿಕೆಗಳನ್ನು ನಿಶ್ಚಯವಾಗಿ ಅರ್ಪಿಸುವರು ತಾನೇ ! ಏಷಾಂ ಸ್ತ್ರಿಯಃ= ಲೋಕಪಾಲಕರ ಹಾಗೂ ರಾಜರ ಪತ್ನಿಯರೂ ಸಹ ತದ್ಯಶಃ ಉಚ್ಚರಂತ್ಯಃ=ಅವನ ಕೀರ್ತಿಯನ್ನು ಹೊಗಳುತ್ತ ಚಕ್ರಾಯುಧಂ ಆದಿರಾಜಂ ಮಂಸ್ಯಂತಿ=ಭಗವಂತನ ವಿಶೇಷ ಸನ್ನಿಧಾನವುಳ್ಳ ಮುಖ್ಯರಾಜನೆಂದು ತಿಳಿಯುವರು ಎಂದು ಭಾವ. ॥೨೨॥

ಪೃಥುವಿನ ಪ್ರಜಾಪಾಲನ ರೀತಿಯನ್ನು ಹೇಳುವರು -

**ಅಯಂ ಮಹೀಂ ಗಾಂ ದುದುಹೇಽಧಿರಾಜಃ**
**ಪ್ರಜಾಪತಿರ್ವೃತ್ತಿಕರಃ ಪ್ರಜಾನಾಮ್ ।**
**ಯೋ ಲೀಲಯಾಽದ್ರೀನ್ ಸ್ವಶರಾಸಕೋಟ್ಯಾ**
**ಭಿಂದನ್ ಸಮಾಂ ಗಾಮಕರೋದ್ಯಥೇಂದ್ರಃ ॥೨೩॥**

ಅಯಂ=ಈ ಪೃಥುರಾಜನು ಅಧಿರಾಜಃ=ಚಕ್ರವರ್ತಿಯು, ಪ್ರಜಾಪತಿಃ= ಪ್ರಜಾಪಾಲಕನು, ಪ್ರಜಾನಾಂ ವೃತ್ತಿಕರಃ=ಪ್ರಜೆಗಳಿಗೆ ಜೀವನೋಪಾಯ ಮಾಡುವವನು.

ಆದ್ದರಿಂದ ಗಾಂ ಮಹೀಂ=ಗೋರೂಪಳಾದ ಭೂಮಿಯನ್ನು ದುದುಹೇ=ಪ್ರಜಾಪಾಲನೆಗೆ ಬೇಕಾದ ಎಲ್ಲ ಪದಾರ್ಥಗಳನ್ನೂ ಕರೆದನು. ಯಃ=ಯಾವ ಪೃಥುವು ಯಥಾ ಇಂದ್ರಃ=ಇಂದ್ರನಂತೆ ಸ್ವಶರಾಸಕೋಟ್ಯಾ=ತನ್ನ ಧನುಸ್ಸಿನ ತುದಿಯಿಂದ ಅಧೀನ್= ಪರ್ವತಗಳನ್ನು ಲೀಲಯಾ ಅನಾಯಾಸವಾಗಿ ಭಿಂದನ್=ಕತ್ತರಿಸಿ ಗಾಂ=ಭೂಮಿಯನ್ನು ಸಮಾಂ ಅಕರೋತ್=ಸಮನಾಗಿ ಮಾಡಿದನು. ಆಹಾರ-ವಸತಿಸೌಕರ್ಯಗಳನ್ನು ಮಾಡಿ ಪ್ರಜೆಗಳನ್ನು ಪಾಲಿಸಿದನೆಂದು ಭಾವ. ॥೨೩॥

**ವಿಸ್ಫೂರ್ಜಯನ್ನಾಜಗವಂ ಧನುಃ ಸ್ವಯಂ**
**ಯದಾಽಚರತ್ ಕ್ಷ್ಮಾಮವಿಷಹ್ಯ ಆಜೌ ।**
**ತದಾ ನಿಲಿಲ್ಯುರ್ದಿಶಿ ದಿಶ್ಯಸಂತೋ**
**ಲಾಂಗೂಲಮುದ್ಯಮ್ಯ ಯಥಾ ಮೃಗೇಂದ್ರಃ ॥೨೪॥**

ಲಾಂಗೂಲಂ ಉದ್ಯಮ್ಯ=ಬಾಲವನ್ನು ಎತ್ತಿಕೊಂಡು ಮೃಗೇಂದ್ರಃ=ಸಿಂಹವು ಯಥಾ ಹೇಗೆ ಸಂಚರಿಸುವದೋ ತಥಾ=ಹಾಗೆ ಸ್ವಾಂ=ತನ್ನ ಆಜಗವಂ ಧನುಃ=ಆಜಗವ ಎಂಬ ಧನುಸ್ಸನ್ನು ವಿಸ್ಫೂರ್ಜಯನ್=ಟಂಕಾರಮಾಡುತ್ತ ಯದಾ=ಯಾವಾಗ ಆಜೌ=ಯುದ್ಧದಲ್ಲಿ ಅವಿಷಹ್ಯಃ=ಶತ್ರುಗಳಿಂದ ಸಹಿಸಲಾಗದವನಾಗಿ ಕ್ಷ್ಮಾಂ=ಭೂಮಿಯನ್ನು ಅಚರತ್= ಸಂಚರಿಸಿದನೋ ತದಾ=ಆಗ ಅಸಂತಃ=ದುಷ್ಟರು ದಿಶಿ ದಿಶಿ=ದಿಕ್ಕು ದಿಕ್ಕುಗಳಲ್ಲಿ ನಿಲಿಲ್ಯುಃ= ಅಡಗಿದರು.

◆ ಕುರಿ ಮತ್ತು ಗೋವಿನ ಕೋಡಿನಿಂದ ನಿರ್ಮಿಸಿದ್ದರಿಂದ ಅವನ ಧನುಸ್ಸುಗೆ ಆಜಗವ ಎಂದು ಹೆಸರು.

◆ ಸಿಂಹವು ಸಂಚರಿಸುವಾಗ ಚಿಕ್ಕ ಚಿಕ್ಕ ಪ್ರಾಣಿಗಳು ಅಡಗುವಂತೆ ಪೃಥುವು ಸಂಚರಿಸುವಾಗ ದುಷ್ಟರು ಎಲ್ಲ ದಿಕ್ಕುಗಳಲ್ಲಿ ಅಡಗಿದರು ಎಂದು ಭಾವ. ॥೨೪॥

**ಏಷೋಽಶ್ವಮೇಧಾನ್ ಶತಮಾಜಹಾರ**
**ಸರಸ್ವತೀ ಪ್ರಾದುರಭೂದ್ಧಿ ಯತ್ರ ।**
**ಅಹಾರ್ಷೀದ್ಯಸ್ಯ ಹಯಂ ಪುರಂದರಃ**
**ಶತಕ್ರತುಶ್ಚರಮೇ ವರ್ತಮಾನೇ ॥೨೫॥**

ಯತ್ರ=ಎಲ್ಲಿ ಸರಸ್ವತೀ=ಸರಸ್ವತೀ ನದಿಯು ಪ್ರಾದುರಭೂತ್=ಜನಿಸಿತೋ ತತ್ರ=ಅಲ್ಲಿ ಏಷಃ=ಪೃಥುರಾಜನು ಶತಂ=ನೂರು ಅಶ್ವಮೇಧಾನ್=ಅಶ್ವಮೇಧಯಾಗಗಳನ್ನು

ಆಜಹಾರ=ಮಾಡಿದನು. ಚರಮೇ ವರ್ತಮಾನೇ=ಕೊನೆಯ ಯಾಗ ನಡೆದಾಗ ಶತಕ್ರತುಃ=ನೂರುಯಾಗ ಮಾಡಿ ಇಂದ್ರಪದವಿ ಪಡೆದ ಪುರಂದರಃ=ಇಂದ್ರನು ಯಸ್ಯ ಯಾವ ಪೃಥುವಿನ ಹಯಂ=ಕುದುರೆಯನ್ನು ಅಹಾರ್ಷಿತ್=ಅಪಹರಿಸಿದನು.

ನೂರು ಅಶ್ವಮೇಧ ಯಾಗಗಳನ್ನು ಮಾಡಿದವರಿಗೆ ಇಂದ್ರಪದವಿ ಬರುವದು.ಈ ಪೃಥುವು ನೂರುಯಾಗ ಪೂರ್ತಿ ಮಾಡಿದರೆ ತನ್ನ ಪದವಿಗೆ ಧಕ್ಕೆ ಬಂದೀತು ! ಎಂದು ತಿಳಿದು ಇಂದ್ರನು ಕುದುರೆಗಳನ್ನು ಅಪರಹಿಸಿದನು ಎಂದು ಅಭಿಪ್ರಾಯ. ।।೨೫।।

**ಏಷ ಸ್ವಸದ್ಮೋಪವನೇ ಸಮೇತ್ಯ**
**ಸನತ್ಕುಮಾರಂ ಭಗವಂತಮೇಕಮ್ ।**
**ಆರಾಧ್ಯ ಭಕ್ತ್ಯಾಽಲಭತಾಮಲಂ ತತ್**
**ಜ್ಞಾನಂ ಯತೋ ಬ್ರಹ್ಮ ಪರಂ ವದಂತಿ ।।೨೫।।**

ಏಷಃ=ಇವನು ಸ್ವಸದ್ಮೋಪವನೇ=ತನ್ನ ಮನೆಯ ಸಮೀಪದಲ್ಲಿರುವ ಉದ್ಯಾವನದಲ್ಲಿ ಭಗವಂತಂ=ಭಗವದವತಾರನಾದ ಏಕಂ=ಅಸದೃಶನಾದ ಸನತ್ಕುಮಾರಂ=ಸನತ್ಕುಮಾರ ಮುನಿಯನ್ನು ಸಮೇತ್ಯ=ಸಮೀಪಿಸಿ, ಭಕ್ತ್ಯಾ=ಭಕ್ತಿಯಿಂದ ತಂ=ಅವನನ್ನು ಆರಾಧ್ಯ=ಪೂಜಿಸಿ, ಯತಃ=ಯಾವದರಿಂದ ಪರಂ ಬ್ರಹ್ಮ ವಿದಂತಿ=ಪರಮಾತ್ಮನನ್ನು ಪ್ರತ್ಯಕ್ಷೀಕರಿಸುವನೋ (ವದಂತಿ ಎಂಬ ಪಾಠದಲ್ಲಿ, ವದಂತಿ=ಯಾವದರಿಂದ ಪರಬ್ರಹ್ಮಪ್ರತ್ಯಕ್ಷ ಆಗುವದೆಂದು ಜ್ಞಾನಿಗಳು ಹೇಳುವರೋ) ತತ್=ಅಂಥ ಅಮಲಂ=ಶುದ್ಧವಾದ ಜ್ಞಾನಂ=ಜ್ಞಾನವನ್ನು ಅಲಭತ=ಪಡೆದನು. ।।೨೬।।

**ತತ್ರ ತತ್ರ ಗಿರಸ್ತಾಸ್ತಾ ಇತಿ ವಿಶ್ರುತವಿಕ್ರಮಃ ।**
**ಶ್ರೋಷ್ಯತ್ಯಾತ್ಮಾಶ್ರಿತಾ ಗಾಥಾಃ ಪೃಥುಃ ಪೃಥುಪರಾಕ್ರಮಃ ।।೨೭।।**

ಪೃಥುಪರಾಕ್ರಮಃ=ವಿಸ್ತೃತವಾದ ಪರಾಕ್ರಮವುಳ್ಳ ಪೃಥುಃ=ಪೃಥುರಾಜನು ವಿಶ್ರುತವಿಕ್ರಮಃ=ಎಲ್ಲೆಡೆ ಹರಡಿದ ಪರಾಕ್ರಮವುಳ್ಳವನು ಇತಿ=ಆದ್ದರಿಂದ ತತ್ರ ತತ್ರ=ಅಲ್ಲಲ್ಲಿ ತಾಃ ತಾಃ ಗಿರಃ=ಆ ಆ ಮಾತುಗಳನ್ನು ಆತ್ಮಾಶ್ರಿತಾಃ ಗಾಥಾಃ=ತನ್ನ ಮಹಿಮೆಯ ಕಥೆಗಳನ್ನೇ ಶ್ರೋಷ್ಯತಿ=ಕೇಳುವ ತನಗೆ ಕೇಳುವ ಇಚ್ಛೆಯಿಲ್ಲದಿದ್ದರೂ ಪ್ರಸಿದ್ಧಪರಾಕ್ರಮಿಯಾದ್ದರಿಂದ ಅಲ್ಲಲ್ಲಿ ಇವನ ಕೀರ್ತಿಗಳನ್ನೂ ಗಾನ ಮಾಡುವಾಗ ಕೇಳುವದು ಅನಿವಾರ್ಯವಾಯಿತು ಎಂದು ಭಾವ. ।।೨೭।।

**ದಿಶೋ ವಿಜಿತ್ಯಾಪ್ರತಿರುದ್ಧಚಕ್ರಃ**
**ಸ್ವತೇಜಸೋತ್ಪಾಟಿತಲೋಕಶಲ್ಯಃ ।**
**ಏವಂ ಸುರೇಂದ್ರೈರನುಗೀಯಮಾನೋ**
**ಮಹಾನುಭಾವೋ ಭವಿತಾ ಪತಿರ್ಭುವಃ ॥೨೮॥**

॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ ಷೋಡಶೋಽಧ್ಯಾಯಃ ॥

ಏವಂ=ಈ ರೀತಿಯಾಗಿ ಸುರೇಂದ್ರೈಃ=ದೇವತೆಗಳಿಂದ ಅನುಗೀಯಮಾನಃ= ಸ್ತುತಿಸಲ್ಪಡುವ, ಸ್ವತೇಜಸೋತ್ಪಾಟಿತಲೋಕಶಲ್ಯಃ ಸ್ವತೇಜಸಾ=ತನ್ನ ಸಾಮರ್ಥ್ಯದಿಂದ ಉತ್ಪಾಟಿತ=ದೂರೀಕರಿಸಿದ ಲೋಕಶಲ್ಯಃ=ಜನರ ಕಂಟಕವುಳ್ಳ (ಅಂದರೆ ಬಾಣದ ತುದಿಗೆ ಇರುವ ಕಬ್ಬಿಣದ ಮುಳ್ಳಿನಂತಿರುವ, ವ್ಯಥೆ ಕೊಡುವ ದುರ್ಜನರನ್ನು ದೂರ ಮಾಡಿದ), ಮಹಾನುಭಾವಃ=ಮಹಾಸಾಮರ್ಥ್ಯವುಳ್ಳ ಭುವಃ ಪತಿಃ=ರಾಜನು ಭವಿತಾ=ಆಗುವವನು. ದಿಶಃ ವಿಜಿತ್ಯ=ಎಲ್ಲ ದಿಕ್ಕುಗಳನ್ನು ಗೆದ್ದು ಅಪ್ರತಿರುದ್ಧಚಕ್ರಃ ಭವಿತಾ=ಪ್ರತಿರೋಧವಿಲ್ಲದ ಆಜ್ಞೆಯುಳ್ಳವನಾಗುವನು. ॥೨೮॥

॥ ಇಲ್ಲಿಗೆ ಹದಿನಾರನೇ ಅಧ್ಯಾಯವು ಮುಗಿಯಿತು ॥



# ಅಥ ಸಪ್ತದಶೋಽಧ್ಯಾಯಃ

ಈ ಅಧ್ಯಾಯದಲ್ಲಿ ಸೂತಾದಿಗಳು ಶ್ರೀಹರಿಯ ಮಹಿಮೆಯಿಂದ ಉಪನಿಬದ್ಧವಾಗಿ (ಯುಕ್ತವಾದ) ಪೃಥುವಿನ ಮಹಿಮೆಯನ್ನು ಹೇಳುವುದರಿಂದ ಶ್ರೀಹರಿಯ ಮಹಿಮೆಯೇ ಹೇಳಲ್ಪಡುವದು. ಮೊದಲಿಗೆ ಸೂತ ಮೊದಲಾದವರಿಗೆ ತೃಪ್ತಿಪಡಿಸಿದ ರೀತಿಯನ್ನು ಹೇಳುವರು -

**ಮೈತ್ರೇಯ ಉವಾಚ**

**ಏವಂ ಸ ಭಗವಾನ್ ವೈನ್ಯಃ ಖ್ಯಾಪಿತೋ ಗುಣಕರ್ಮಭಿಃ ।**
**ಛಂದಯಾಮಾಸ ತಾನ್ ಕಾಮ್ಯೈಃ ಪ್ರತಿಪೂಜ್ಯಾಭಿನಂದ್ಯ ಚ ॥೧॥**

ಭಗವಾನ್=ಪೂಜ್ಯನಾದ ವೈನ್ಯಃ=ಪೃಥುರಾಜನು ಏವಂ=ಈ ಹಿಂದಿನ ಅಧ್ಯಾಯದಲ್ಲಿ ಹೇಳಿದ ರೀತಿಯಾಗಿ ಗುಣಕರ್ಮಭಿಃ=ಗುಣಗಳು ಮತ್ತು ಒಳ್ಳೆಯ ಕಾರ್ಯಗಳಿಂದ ಖ್ಯಾಪಿತಃ=ಸ್ತುತಿಸಲ್ಪಟ್ಟು ತಾನ್=ಸೂತಾದಿಗಳನ್ನು ಕಾಮ್ಯೈಃ=ಅಪೇಕ್ಷಿತವಸ್ತುಗಳಿಂದ (ಅರ್ಥಾತ್ ಅವುಗಳನ್ನು ಕೊಟ್ಟು) ಪ್ರತಿಪೂಜ್ಯ=ಗೌರವಿಸಿ ಅಭಿನಂದ್ಯ=ಅಭಿನಂದಿಸಿ ಛಂದಯಾಮಾಸ=ಸಂತೋಷಗೊಳಿಸಿದನು. ॥೧॥

**ಬ್ರಾಹ್ಮಣಪ್ರಮುಖಾನ್ ವರ್ಣಾನ್ ಭೃತ್ಯಾಮಾತ್ಯಪುರೋಧಸಃ ।**
**ಪೌರಾನ್ ಜಾನಪದಾನ್ ಶ್ರೇಣೀಃ ಪ್ರಕೃತೀಃ ಸಮಪೂಜಯತ್ ॥೨॥**

ಬ್ರಾಹ್ಮಣಪ್ರಮುಖಾನ್=ಬ್ರಾಹ್ಮಣರೇ ಪ್ರಧಾನವಾಗಿವುಳ್ಳ (ಬ್ರಾಹ್ಮಣರೇ ಮೊದಲಾದ) ವರ್ಣಾನ್=ವರ್ಣಗಳನ್ನು, ಭೃತ್ಯಾಮಾತ್ಯಪುರೋಧಸಃ=ಸೇವಕರು ಮಂತ್ರಿಗಳು ಪುರೋಹಿತರುಗಳನ್ನು, ಪೌರಾನ್=ಪಟ್ಟಣಿಗರನ್ನು, ಜಾನಪದಾನ್=ರಾಷ್ಟ್ರದ ಜನರನ್ನು, ಶ್ರೇಣೀಃ =ಸಮಾನವಯಸ್ಕರಾದ ಅಂಗರಕ್ಷಕರನ್ನು, ಪ್ರಕೃತೀಃ=ಪ್ರಜೆಗಳನ್ನೂ ಸಮಪೂಜಯತ್= ಗೌರವಿಸಿದನು.

**ಭಾಗವತ ತಾತ್ಪರ್ಯ -**

ಇಲ್ಲಿ 'ಶ್ರೇಣೀ'ಶಬ್ದಕ್ಕೆ ''ತೈಲಕತಾಂಬೂಲಕಾದೀನ್'' ಎಂಬ ವ್ಯಾಖ್ಯಾನವು ಅಪ್ರಾಮಾಣಕವೆಂಬ ಅಭಿಪ್ರಾಯದಿಂದ ಶ್ರೀಮದಾಚಾರ್ಯರು ಪ್ರಮಾಣದಿಂದಲೇ ಅದರ ಅರ್ಥ ತಿಳಿಸುವರು -

**'ರಾಜ್ಞಾ ಸಮಾನವಯಸಃ ಶ್ರೇಣಯಸ್ತ್ವಂಗರಕ್ಷಕಾಃ' ಇತ್ಯಭಿದಾನಮ್ ।**

ರಾಜನಿಗೆ ಸಮಾನವಯಸ್ಕರಾದ ಅಂಗರಕ್ಷಕರಿಗೆ 'ಶ್ರೇಣೀ' ಎನ್ನುವರು ಎಂದು ಅಭಿಧಾನವಿದೆ. ॥೨॥

**ವಿದುರ ಉವಾಚ**

**ಕಸ್ಮಾದ್ದಧಾರ ಗೋರೂಪಂ ಧರಿತ್ರೀ ಬಹುರೂಪಿಣೀ ।**
**ಯಾಂ ದುದೋಹ ಪೃಥುಸ್ತತ್ರ ಕೋ ವತ್ಸೋ ದೋಹನಂ ಚ ಕಿಮ್ ॥ ೩॥**

ಬಹುರೂಪಿಣೀ=ಅನೇಕರೂಪವುಳ್ಳ ಧರಿತ್ರೀ=ಭೂದೇವಿಯು ಗೋರೂಪಂ= ಆಕಳರೂಪವನ್ನು ಕಸ್ಮಾತ್ ದಧಾರ=ಏಕೆ ಧರಿಸಿದಳು ? ಪೃಥುಃ ಯಾಂ ದುದೋಹ= ಪೃಥುರಾಜನು ಯಾವಳನ್ನು ಕರೆದನೋ ತತ್ರ=ಆ ಭೂಮಿಯನ್ನು ಕರೆಯುವಾಗ ಕಃ ವತ್ಸಃ=ಕರು ಯಾವದು ? ದೋಹನಂ ಚ ಕಿಂ=ಕರೆಯುವ ಪಾತ್ರೆ ಯಾವದು ?॥೩॥

**ಪ್ರಕೃತ್ಯಾ ವಿಷಮಾ ದೇವೀ ಕೃತಾ ತೇನ ಸಮಾ ಕಥಮ್ ।**
**ತಸ್ಯ ಮೇಧ್ಯಂ ಹಯಂ ದೇವಃ ಕಸ್ಯ ಹೇತೋರಪಾಹರತ್ ॥೪ ॥**

ಪ್ರಕೃತ್ಯಾ=ಸ್ವಾಭಾವಿಕವಾಗಿ ವಿಷಮಾ=ಎತ್ತರ ತೆಗ್ಗು ಆದ ದೇವೀ=ಭೂದೇವಿಯು ತೇನ=ಪೃಥುವಿನಿಂದ ಕಥಂ=ಹೇಗೆ ಸಮಾ ಕೃತಾ=ಸಮವಾಗಿ ಮಾಡಲ್ಪಟ್ಟಳು ? ತಸ್ಯ=ಪೃಥುವಿನ ಮೇಧ್ಯಂ=ಯಜ್ಞಾರ್ಹವಾದ ಹಯಂ=ಕುದುರೆಯನ್ನು ದೇವಃ=ಇಂದ್ರನು ಕಸ್ಯ ಹೇತೋಃ ಅಪಾಹರತ್=ಯಾವ ಕಾರಣ ಅಪಹರಿಸಿದನು ?॥೪॥

**ಸನತ್ಕುಮಾರಾದ್ಭಗವತೋ ಬ್ರಹ್ಮನ್ ಬ್ರಹ್ಮವಿದುತ್ತಮಾತ್ ।**
**ಲಬ್ಧ್ವಾ ಜ್ಞಾನಂ ಸವಿಜ್ಞಾನಂ ರಾಜರ್ಷಿಃ ಕಾಂ ಗತಿಂ ಗತಃ ॥೫॥**

ಹೇ ಬ್ರಹ್ಮನ್=ಮೈತ್ರೇಯರೇ ! ಬ್ರಹ್ಮವಿದುತ್ತಮಾತ್=ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರಾದ ಭಗವತಃ=ಪೂಜ್ಯರಾದ ಸನತ್ಕುಮಾರಾತ್=ಸನತ್ಕುಮಾರರಿಂದ ಸವಿಜ್ಞಾನಂ=ವಿಶೇಷಜ್ಞಾನ-ಸಹಿತವಾದ ಜ್ಞಾನಂ=ಜ್ಞಾನವನ್ನು ಲಬ್ಧ್ವಾ=ಪಡೆದು, ರಾಜರ್ಷಿಃ=ಪೃಥುವು ಕಾಂ ಗತಿಂ ಗತಃ=ಯಾವ ಗತಿಯನ್ನು ಹೊಂದಿದನು ? ॥೫॥

**ಯಚ್ಚಾನ್ಯದಪಿ ಕೃಷ್ಣಸ್ಯ ಬ್ರಹ್ಮನ್ ಭಗವತಃ ಪ್ರಭೋಃ ।**
**ಶ್ರವಃ ಸುಶ್ರವಸಃ ಪುಣ್ಯಂ ಪೂರ್ವದೇಹಕಥಾಶ್ರಯಮ್ ॥೬॥**

ಬ್ರಹ್ಮನ್=ಮೈತ್ರೇಯರೇ ! ಭಗವತಃ=ಷಡ್ಗುಣೈಶ್ವರ್ಯ ಸಂಪನ್ನನಾದ ಪ್ರಭೋಃ= ಸರ್ವಸಮರ್ಥನಾದ ಸುಶ್ರವಸಃ=ಒಳ್ಳೆಯ ಕೀರ್ತಿಶಾಲಿಯಾದ ಕೃಷ್ಣಸ್ಯ=ಶ್ರೀಕೃಷ್ಣನ ಪೂರ್ವದೇಹಕಥಾಶ್ರಯಂ=ಹಿಂದಿನ ರಾಜರುಗಳ ಕಥೆಗಳಿಂದ ಸಂಬದ್ಧವಾದ, ಪುಣ್ಯಂ=ಪುಣ್ಯಜನಕವಾದ, ಯಚ್ಚ ಅನ್ಯದಪಿ=ಯಾವ ಬೇರೆ ಶ್ರವಃ=ಯಶಸ್ಸು ಇದೆಯೋ ಅದನ್ನು ಹೇಳಿರಿ ಎಂದು ಅನ್ವಯ.

**ಭಾಗವತ ತಾತ್ಪರ್ಯ -**

'ಪೂರ್ವದೇಹಕಥಾಶ್ರಯಂ' ಎಂಬುದಕ್ಕೆ ಪೃಥುರಾಜನ ಹಿಂದಿನಜನ್ಮದ ಕಥೆಗೆ ಸಂಬದ್ಧವಾದ ಎಂದು ಅಪಾರ್ಥವಾಗದಿರಲೆಂದು ವಿವಕ್ಷಿತ ಅರ್ಥವನ್ನು ತಿಳಿಸುವರು -

**''ಪೂರ್ವತನಾನಾಂ ಕಥಾಸಂಬಂಧೇನ ಹರೇರ್ಯಶಃ''**

ಪೂರ್ವೋ ದೇಹೋ ಯೇಷಾಂ ತೇ ಪೂರ್ವದೇಹಾಃ ಎಂದು ವಿಗ್ರಹ ಮಾಡಿ, ಕಳೆದುಹೋದ ರಾಜರುಗಳ ಕಥೆಗೆ ಸಂಬದ್ಧವಾಗಿ ಎಂಬ ಅರ್ಥವು ಸೂಚಿತವಾಗುವದು.

**ಭಕ್ತಾಯ ಮೇಽನುರಕ್ತಾಯ ತವ ಚಾಧೋಕ್ಷಜಸ್ಯ ಚ ।**
**ವಕ್ತುಮರ್ಹಸಿ ಯೋಽದುಹ್ಯದ್ವೈನ್ಯರೂಪೇಣ ಗಾಮಿಮಾಮ್ ॥ ೭॥**

ಯಃ=ಯಾವ ಪರಮಾತ್ಮನು ವೈನ್ಯರೂಪೇಣ=ಪೃಥುವಿನ ರೂಪದಿಂದ ಇಮಾಂ ಗಾಂ= ಈ ಗೋರೂಪ ಪೃಥಿವಿಯನ್ನು ಅದುಹ್ಯತ್=ದೋಹನ ಮಾಡಿದನೋ ಅಂಥ ಅಧೋಕ್ಷಜಸ್ಯ= ಪರಮಾತ್ಮನ ಚ=ಮತ್ತು ತವ=ನಿನ್ನ ಭಕ್ತಾಯ=ಭಕ್ತನಾದ ಅನುರಕ್ತಾಯ=ಆಸಕ್ತನಾದ ಮೇ=ನನಗೆ ವಕ್ತುಂ ಅರ್ಹಸಿ=ಹೇಳಲು ಯೋಗ್ಯನಾಗಿರುವಿ. ಹೇಳಿರಿ ಎಂದು ಭಾವ. ॥೭॥

**ಶ್ರೀಶುಕ ಉವಾಚ**

**ಚೋದಿತೋ ವಿದುರೇಣೈವಂ ವಾಸುದೇವಕಥಾಂ ಪ್ರತಿ ।**
**ಪ್ರಶಸ್ಯ ತಂ ಪ್ರೀತಮನಾ ಮೈತ್ರೇಯಃ ಪ್ರತ್ಯಭಾಷತ ॥೮॥**

ವಿದುರೇಣ=ವಿದುರನಿಂದ ಏವಂ=ಈ ರೀತಿಯಾಗಿ ವಾಸುದೇವಕಥಾಂ ಪ್ರತಿ= ಶ್ರೀಹರಿಯ ಕಥೆಯನ್ನು ಹೇಳಲು ಚೋದಿತಃ=ಪ್ರೇರಿತರಾದ ಮೈತ್ರೇಯಃ= ಮೈತ್ರೇಯರು ತಂ=ವಿದುರನನ್ನು ಪ್ರಶಸ್ಯ=ಪ್ರಶಂಸೆ ಮಾಡಿ ಪ್ರೀತಮಾನಾಃ=ಸಂತುಷ್ಟರಾಗಿ ಪ್ರತ್ಯಭಾಷಾತ= ಉತ್ತರಿಸಿದರು. ॥೮॥

**ಮೈತ್ರೇಯ ಉವಾಚ**

**ಯದಾಭಿಷಿಕ್ತಃ ಪೃಥುರಂಗ ವಿಪ್ರೈರಾಮಂತ್ರಿತೋ ಜನತಾಯಾಶ್ಚ ಪಾಲಃ ।**
**ಪ್ರಜಾ ನಿರನ್ನೇ ಕ್ಷಿತಿಪೃಷ್ಠ ಏತ್ಯ ಕ್ಷುತ್ಕ್ಷಾಮದೇಹಾಃ ಪತಿಮಭ್ಯವೋಚನ್ ॥೯॥**

ಹೇ ಅಂಗ=ಎಲೋ ವಿದುರನೇ ! ಪೃಥುಃ=ಪೃಥುವು ಯದಾ=ಯಾವಾಗ ವಿಪ್ರೈಃ= ಬ್ರಾಹ್ಮಣರಿಂದ ಅಭಿಷಿಕ್ತಃ=ಪಟ್ಟಾಭಿಷಿಕ್ತನಾದನೋ ಚ=ಮತ್ತು ಜನತಾಯಾಃ ಪಾಲಃ= ಜನಸಮೂಹಕ್ಕೆ ರಕ್ಷಕನೆಂದು ಆಮಂತ್ರಿತಃ=ನಿಯೋಜಿಸಲ್ಪಟ್ಟನೋ ತದಾ=ಆಗ ಕ್ಷಿತಿಪೃಷ್ಠೇ=ಭೂಮಂಡಲವು ನಿರನ್ನೇ=ಭೋಜನ ಮಾಡುವ ಪದಾರ್ಥಗಳಿಂದ ರಹಿತವಾಗುತ್ತಿರಲು ಕ್ಷುತ್ಕ್ಷಾಮದೇಹಾಃ ಕ್ಷುತ್=ಹಸಿವೆಯಿಂದ ಕ್ಷಾಮ=ಕ್ಷೀಣವಾದ ದೇಹಾಃ=ಶರೀರವುಳ್ಳ ಪ್ರಜಾಃ=ಜನರು ಪತಿಂ=ಪೃಥುವನ್ನು ಅಭಿ ಏತ್ಯ=ಸಮೀಪಿಸಿ ಅವೋಚನ್=ಮಾತನಾಡಿದರು. ॥೯॥

**ಪ್ರಜಾ ಊಚುಃ**

**ವಯಂ ರಾಜನ್ ಜಾಠರೇಣಾಭಿತಪ್ತಾ**
**ಯಥಾಗ್ನಿನಾ ಕೋಟರಸ್ಥೇನ ವೃಕ್ಷಃ ।**
**ತ್ವಾಮದ್ಯ ಯಾತಾಃ ಶರಣಂ ಶರಣ್ಯಂ**
**ಯಃ ಶಾಧಿ ನೋ ವೃತ್ತಿಕರಃ ಪತಿರ್ನಃ ॥೧೦॥**

ಹೇ ರಾಜನ್=ಎಲೋ ರಾಜನೇ ! ವಯಂ=ನಾವು ಕೋಟರಸ್ಥೇನ=ಮರದ ಪೊಟರೆಯಲ್ಲಿರುವ ಅಗ್ನಿನಾ=ಬೆಂಕಿಯಿಂದ ಯಥಾ ವೃಕ್ಷಃ=ಹೇಗೆ ಗಿಡವು ಸುಡುವದೋ ಹಾಗೆ ಜಾಠರೇಣ ಅಗ್ನಿನಾ=ಹೊಟ್ಟೆಯಲ್ಲಿರುವ ಅಗ್ನಿಯಿಂದ ಅಭಿತಪ್ತಾಃ=ಅತ್ಯಂತ ದುಃಖಿತರಾಗಿ ಶರಣ್ಯಂ=ಮೊರೆಹೊಂದಲು ಯೋಗ್ಯನಾದ ತ್ವಾಂ=ನಿನ್ನನ್ನು ಅದ್ಯ=ಈಗ ಶರಣಂ ಯಾತಾಃ=ಮೊರೆ ಹೊಂದಿರುವೆವು. ಯಃ=ಯಾವ ನೀನು ನಃ=ನಮಗೆ ವೃತ್ತಿಕರಃ=ಜೀವನ ನೀಡುವ ಪತಿಃ=ಸ್ವಾಮಿಯು, ಕಾರಣ ನಃ ಶಾಧಿ=ಜೀವನೋಪಾಯವನ್ನು ತಿಳಿಸು. ॥೧೦॥

**ತನ್ನೋ ಭವಾನರ್ಹತಿ ರಾತವೇಽನ್ನಂ**
**ಕ್ಷುಧಾಽರ್ದಿತಾನಾಂ ನರದೇವದೇವ ।**
**ಯಾವನ್ನ ನಂಕ್ಷ್ಯಾಮಹ ಉಜ್ಝಿತಾನ್ನಾ**
**ವಾರ್ತಾಪತಿಸ್ತ್ವಂ ಕಿಲ ಲೋಕಪಾಲಃ ॥೧೧॥**

ಹೇ ನರದೇವದೇವ=ರಾಜರುಗಳಿಗೂ ರಾಜನೇ ! ತ್ವಂ=ನೀನು ವಾರ್ತಾಪತಿಃ=ಜನಗಳಿಗೆ ಅನ್ನವನ್ನು ಕೊಟ್ಟು ರಕ್ಷಿಸುವವನು, ಲೋಕಪಾಲಃ ಕಿಲ=ರಾಜನಷ್ಟೇ ! ತತ್=ಆದ್ದರಿಂದ

ಕ್ಷುಧಾಽರ್ದಿತಾನಾಂ=ಹಸಿವೆಯಿಂದ ಬಳಲಿದವರಿಗೆ ರಾತವೇ=ರಕ್ಷಿಸಲು ಅನ್ನಂ=ಆಹಾರವನ್ನು ಕೊಡಲು ಭವಾನ್=ನೀನು ಅರ್ಹತಿ=ಯೋಗ್ಯನಾಗಿರುವಿ. ಉಜ್ಝಿತಾನ್ನಾಃ=ಅನ್ನವಿಲ್ಲದೇ ಯಾವತ್=ಎಲ್ಲಿಯವರೆಗೆ ನ ನಂಕ್ಷ್ಯಾಮಹೇ=ನಾಶವಾಗಲಾರೆವೋ ತಾವತ್=ಅಷ್ಟರಲ್ಲಿ ಅನ್ನ ಕೊಡು ಎಂದು ಭಾವ. ।।೧೧।।

ಮುಂದೇನು ನಡಿಯಿತು ? ಎಂದು ಹೇಳುವರು -

**ಮೈತ್ರೇಯ ಉವಾಚ**

**ಪೃಥುಃ ಪ್ರಜಾನಾಂ ಕರುಣಂ ನಿಶಮ್ಯ ಪರಿದೇವಿತಮ್ ।**
**ದೀರ್ಘಂ ದಧ್ಯೌ ಕುರುಶ್ರೇಷ್ಠ ನಿಮಿತ್ತಂ ಸೋಽನ್ವಪದ್ಯತ ।।೧೨।।**

ಕುರುಶ್ರೇಷ್ಠ=ವಿದುರನೇ ! ಪೃಥುಃ=ಪೃಥುರಾಜನು ಪ್ರಜಾನಾಂ=ಪ್ರಜೆಗಳ ಕರುಣಂ=ದಯಾಜನಕವಾದ ಪರಿದೇವಿತಂ=ವಿಜ್ಞಾಪಿಸಲ್ಪಟ್ಟದ್ದನ್ನು ನಿಶಮ್ಯ=ಕೇಳಿ, ದೀರ್ಘಂ ದಧ್ಯೌ=ಬಹಳ ವಿಚಾರ ಮಾಡಿದನು. ನಂತರ ಸಃ=ಪೃಥುವು ನಿಮಿತ್ತಂ=ಅನ್ನವಿಲ್ಲದಿರುವದಕ್ಕೆ ಕಾರಣವನ್ನು ಅನ್ವಪದ್ಯತ=ತಿಳಿದನು. ।।೧೨।।

**ಪೃಥಿವ್ಯೌಷಧಿಬೀಜಾನಿ ನಿಗೀರ್ಣಾನ್ಯಸತಿ ಶಾಸ್ತರಿ ।**
**ತದಹಂ ದೇಹಿನಾಂ ವೃತ್ತಿಮಾತ್ಮಯೋಗೇನ ಸಾಧಯೇ ।।೧೩।।**

ಶಾಸ್ತರಿ ಅಸತಿ=ಆಳುವ ಅರಸನು ಇಲ್ಲದಿರುವಾಗ ಪೃಥಿವ್ಯಾ=ಭೂಮಿಯಿಂದ ಓಷಧಿ ಬೀಜಾನಿ=ಬೆಳೆಯ ಬೀಜಗಳು ನಿಗೀರ್ಣಾನಿ=ನುಂಗಲ್ಪಟ್ಟವೆ. ತತ್=ಆದ್ದರಿಂದ ಅಹಂ=ನಾನು ಆತ್ಮಯೋಗೇನ=ಉಪಾಯದಿಂದ ದೇಹಿನಾಂ=ಜನರ ವೃತ್ತಿಂ=ಜೀವನೋಪಾಯವನ್ನು ಸಾಧಯೇ=ಸಂಪಾದಿಸುವೆನು. ।।೧೩।।

**ಇತಿ ವ್ಯವಸಿತೋ ಬುದ್ಧ್ಯಾ ಪ್ರಗೃಹೀತಶರಾಸನಃ ।**
**ಸಂದಧೇ ವಿಶಿಖಂ ಭೂಮೌ ಕ್ರುದ್ಧಸ್ತ್ರಿಪುರಹಾ ಯಥಾ ।।೧೪।।**

ಇತಿ=ಭೂಮಿಯಲ್ಲಿ ಬೀಜಗಳು ಅಡಗಿದ್ದರಿಂದ ಅನ್ನವಿಲ್ಲದಾಗಿದೆ ಎಂದು ಬುದ್ಧ್ಯಾ ವ್ಯವಸಿತಃ=ಮನಸ್ಸಿನಿಂದ ನಿಶ್ಚಯಿಸಿದವನಾಗಿ ಪ್ರಗೃಹೀತಶರಾಸನಃ=ಧನುಸ್ಸನ್ನು ಸ್ವೀಕರಿಸಿದವನಾಗಿ ಕ್ರುದ್ಧಃ=ಸಿಟ್ಟಾದ ತ್ರಿಪುರಹಾ ಯಥಾ=ರುದ್ರದೇವರಂತೆ ಭೂಮೌ=ಭೂಮಿಯನ್ನುದ್ದೇಶಿಸಿ ವಿಶಿಖಂ=ಬಾಣವನ್ನು ಸಂದಧೇ=ಹೂಡಿದನು. ।।೧೪।।

**ಪ್ರವೇಪಮಾನಾ ಧರಣೀ ನಿಶಮ್ಯೋದಾಯುಧಂ ಚ ತಮ್ ।**
**ಗೌಃ ಸತ್ಯಪಾದ್ರವದ್ ಭೀತಾ ಮೃಗೀವ ಮೃಗಯೋರ್ದ್ರುತಮ್ ।।೧೫।।**

ತಂ=ಪೃಥುರಾಜನನ್ನು ಉದಾಯುಧಂ ನಿಶಮ್ಯ=ಆಯುಧಧಾರಣ ಮಾಡಿದವನನ್ನಾಗಿ ಕೇಳಿ ಪ್ರವೇಪಮಾನಾ=ಬಹಳ ನಡುಗುವ ಭೂಮಿಯು ಮೃಗಯೋಃ ಭೀತಾ=ಬೇಡನಿಗೆ ಹೆದರಿದ ಮೃಗೀ ಇವ=ಜಿಂಕೆಯಂತೆ ದ್ರುತಂ=ವೇಗವಾಗಿ ಗೌಃ ಸತೀ=ಆಕಳಾಗಿ ಅಪಾದ್ರವತ್=ಓಡಿದಳು. ।।೧೫।।

**ತಾಮೇವಾನ್ವವ್ರಜದ್ವೈನ್ಯಃ ಕುಪಿತೋಽತ್ಯರುಣೇಕ್ಷಣಃ ।**
**ಶರಂ ಧನುಷಿ ಸಂಧಾಯ ಯತ್ರ ಯತ್ರ ಪಲಾಯತಿ ।।೧೬।।**

ಕುಪಿತಃ=ಸಿಟ್ಟಾದ ಅತ್ಯರುಣೇಕ್ಷಣಃ=ಬಹಳ ಕೆಂಪಾದ ಕಣ್ಣುಳ್ಳ ವೈನ್ಯಃ=ಪೃಥುವು ಶರಂ=ಬಾಣವನ್ನು ಧನುಷಿ ಸಂಧಾಯ=ಬಿಲ್ಲಿನಲ್ಲಿ ಜೋಡಿಸಿ ಯತ್ರ ಯತ್ರ=ಎಲ್ಲೆಲ್ಲಿ ಪಲಾಯತಿ=ಓಡುವದೋ ತತ್ರ ತತ್ರ=ಅಲ್ಲಲ್ಲಿ ತಾಂ ಏವ=ಗೋರೂಪಳಾದ ಆ ಭೂಮಿಯನ್ನೇ ಅನ್ವವ್ರಜತ್=ಬೆನ್ನುಹತ್ತಿ ಹೋದನು. (ಹಿಂಬಾಲಿಸಿದನು.)।।೧೬।।

**ಸಾ ದಿಶೋ ವಿದಿಶೋ ದೇವೀ ರೋದಸೀ ಚಾಂತರಂ ತಯೋಃ ।**
**ಧಾವತೀ ತತ್ರ ತತ್ರೈನಂ ದದರ್ಶಾನೂದ್ಯತಾಯುಧಮ್ ।।೧೭।।**

ಸಾ ದೇವೀ=ಆ ಭೂದೇವಿಯು ದಿಶಃ=ದಿಕ್ಕುಗಳಿಗೆ ವಿದಿಶಃ=ಉಪದಿಕ್ಕುಗಳಿಗೂ ರೋದಸೀ=ಭೂಲೋಕ ಸ್ವರ್ಗಲೋಕಗಳಲ್ಲಿ ತಯೋಃ=ದ್ಯು-ಪೃಥಿವೀಗಳ ಅಂತರಂ= ಮಧ್ಯದಲ್ಲಿಯ ಅಂತರಿಕ್ಷದಲ್ಲಿಯೂ ಧಾವತೀ=ಓಡುವವಳಾಗಿ ತತ್ರ ತತ್ರ=ತಾನು ಹೋದಲೆಲ್ಲ ಅನು ಉದ್ಯತಾಯುಧಂ=ಹಿಂದೆ ಬಿಲ್ಲು-ಬಾಣ ಹಿಡಿದು ಬರುವ ಏನಂ=ಪೃಥುರಾಜನನ್ನು ದದರ್ಶ=ನೋಡಿದಳು. ।।೧೭।।

**ಲೋಕೇ ನಾವಿಂದತ ತ್ರಾಣಂ ವೈನ್ಯಾನ್ಮೃತ್ಯೋರಿವ ಪ್ರಜಾಃ ।**
**ತ್ರಸ್ತಾ ತದಾ ನಿವವೃತೇ ಹೃದಯೇನ ವಿದೂಯತಾ ।।೧೮।।**

ಪ್ರಜಾಃ=ಜನರು ಮೃತ್ಯೋರಿವ=ಮೃತ್ಯುವಿನಿಂದ ರಕ್ಷಿಸುವವರನ್ನು ಕಾಣದಿರುವಂತೆ ಲೋಕೇ=ಜಗತ್ತಿನಲ್ಲಿ ವೈನ್ಯಾತ್=ಪೃಥುವಿನಿಂದ ಭಿನ್ನರಾದ ತ್ರಾಣಂ=ರಕ್ಷಕರನ್ನು ನ ಅವಿಂದತ್=ಪಡೆಯಲಿಲ್ಲ. ತದಾ=ಆಗ ತ್ರಸ್ತಾ=ಭೀತಳಾದವಳಾಗಿ ವಿದೂಯತಾ ಹೃದಯೇನ=ದುಃಖಿತವಾದ ಮನಸ್ಸಿನಿಂದ ನಿವವೃತೇ=ಹಿಂದಿರುಗಿ ಬಂದಳು. ।।೧೮।।

**ಉವಾಚಾಥ ಮಹಾಭಾಗಂ ಧರ್ಮಜ್ಞಾಪನ್ನವತ್ಸಲ ।**
**ತ್ರಾಹಿ ಮಾಮಪಿ ಭೂತಾನಾಂ ಪಾಲನೇಽವಸ್ಥಿತೋ ಭವಾನ್ ।।೧೯।।**

ಅಥ=ಬಂದನಂತರ ಧರ್ಮಜ್ಞಾ=ಧರ್ಮವನ್ನರಿತ ಭೂದೇವಿಯು ಮಹಾಭಾಗಂ= ಭಾಗ್ಯಶಾಲಿಯಾದ ಪೃಥುವನ್ನು ಕುರಿತು ಹೇ ಆಪನ್ನವತ್ಸಲ=ಶರಣಾಗತರಲ್ಲಿ ವಾತ್ಸಲ್ಯವುಳ್ಳವನೇ! ಭವಾನ್=ನೀನು ಭೂತಾನಾಂ=ಪ್ರಾಣಿಗಳ ಪಾಲನೇ=ರಕ್ಷಣೆಯಲ್ಲಿ ಅವಸ್ಥಿತಃ=ತೊಡಗಿರುವಿ, ಕಾರಣ ಮಾಂ ಅಪಿ=ನನ್ನನ್ನೂ ಸಹ ತ್ರಾಹಿ=ರಕ್ಷಿಸು ಎಂದು ಉವಾಚ=ಹೇಳಿದಳು. ।।೧೯।।

**ಸ ತ್ವಂ ಜಿಘಾಂಸಸೇ ಕಸ್ಮಾದ್ದೀನಾಮಕೃತಕಿಲ್ಬಿಷಾಮ್ ।**
**ಅಹನಿಷ್ಯತ್ಕಥಂ ಯೋಷಾಂ ಧರ್ಮಜ್ಞ ಇತಿ ಯೋ ಮತಃ ।।೨೦।।**

ಯಃ=ಯಾವನು ಧರ್ಮಜ್ಞಃ ಇತಿ ಮತಃ=ಧರ್ಮವನ್ನು ತಿಳಿದವನೆಂದು ಎಲ್ಲರಿಂದ ತಿಳಿಯಲ್ಪಟ್ಟಿರುವಿಯೋ ಸಃ ತ್ವಂ=ಅಂಥ ನೀನು ದೀನಾಂ=ದುಃಖಿತಳಾದ ಅಕೃತಕಿಲ್ಬಿಷಾಂ= ಪಾಪವನ್ನು ಮಾಡದಿರುವ ಯೋಷಾಂ=ಸ್ತ್ರೀಯಾದ ನನ್ನನ್ನು ಕಸ್ಮಾದ್=ಏಕೆ ಜಿಘಾಂಸಸೇ= ಕೊಲ್ಲಲಿಚ್ಛಿಸುವಿ ? ಕಥಂ ಅಹನಿಷ್ಯತ್=ಹೇಗೆ ಕೊಲ್ಲುವಿ?।।೨೦।।

**ಪ್ರಹರಂತಿ ನ ವೈ ಸ್ತ್ರೀಷು ಕೃತಾಗಃಸ್ವಪಿ ಜಂತವಃ ।**
**ಕಿಮುತ ತ್ವದ್ವಿಧಾ ರಾಜನ್ ಕರುಣಾ ದೀನವತ್ಸಲಾಃ ।।೨೧।।**

ಜಂತವಃ=ಜನರು ಸ್ತ್ರೀಷು=ಸ್ತ್ರೀಯರು ಕೃತಾಗಃಸು ಅಪಿ=ಅಪರಾಧ ಮಾಡಿದವರಾದರೂ ನ ಪ್ರಹರಂತಿ=ಹೊಡೆಯಲಾರರು. ಹೇ ರಾಜನ್=ರಾಜನೇ ! ದೀನವತ್ಸಲಾಃ=ದುಃಖಿತರಲ್ಲಿ ಪ್ರೀತಿಯುಳ್ಳ ಕರುಣಾಃ=ದಯಾಳುಗಳಾದ ತ್ವದ್ವಿಧಾಃ= ನಿನ್ನಂಥವರು ಕಿಮುತ=ಸ್ತ್ರೀಯರನ್ನು ಶಿಕ್ಷಿಸುವದಿಲ್ಲವೆಂದು ಬೇರೆ ಹೇಳಬೇಕೆ ?।।೨೧।।

ಕೇವಲ ಪಾಪ ಬರುವದು ಮಾತ್ರವಲ್ಲ, ದೃಷ್ಟಹಾನಿಯೂ ಆಗುವದು ಎಂದು ಹೇಳುವಳು -

**ಮಾಂ ನಿಹತ್ಯಾಜರಾಂ ನಾವಂ ಯತ್ರ ವಿಶ್ವಂ ಪ್ರತಿಷ್ಠಿತಮ್ ।**
**ಆತ್ಮಾನಂ ಚ ಪ್ರಜಾಶ್ಚೇಮಾಃ ಕಥಮಂಭಸಿ ಧಾಸ್ಯಸಿ ।।೨೨।।**

ಯತ್ರ=ಯಾವ ನನ್ನಲ್ಲಿ ವಿಶ್ವಂ=ಪ್ರಪಂಚವು ಪ್ರತಿಷ್ಠಿತಂ=ಆಶ್ರಿತವಾಗಿದೆಯೋ ಅಜರಾಂ=ಹೊಸದಾಗಿರುವ (ದೃಢವಾದ) ನಾವಂ=ನೌಕೆಯಂತಿರುವ ಮಾಂ=ನನ್ನನ್ನು ನಿಹತ್ಯ=ಸಂಹರಿಸಿ ಆತ್ಮಾನಂ=ನಿನ್ನನ್ನು ಚ=ಮತ್ತು ಇಮಾಃ ಪ್ರಜಾಃ=ಈ ಎಲ್ಲ ಪ್ರಜೆಗಳನ್ನು ಅಂಭಸಿ=ನೀರಿನಲ್ಲಿ ಕಥಂ ಧಾಸ್ಯಸಿ=ಹೇಗೆ ಧರಿಸುವಿ ? ।।೨೨।।

**ಪೃಥುರುವಾಚ -**

**ವಸುಧೇ ತ್ವಾಂ ವಧಿಷ್ಯಾಮಿ ಮಚ್ಛಾಸನಪರಾಙ್ಮುಖೀಮ್ ।**
**ಭಾಗಂ ಬರ್ಹಿಷಿ ಯಾ ವೃಂಕ್ತೇ ನ ತನೋಷಿ ಚ ನೋ ವಸು ।। ೨೩।।**

ತಂ=ಪೃಥುರಾಜನನ್ನು ಉದಾಯುಧಂ ನಿಶಮ್ಯ=ಆಯುಧಧಾರಣ ಮಾಡಿದವನನ್ನಾಗಿ ಕೇಳಿ ಪ್ರವೇಪಮಾನಾ=ಬಹಳ ನಡುಗುವ ಭೂಮಿಯು ಮೃಗಯೋಃ ಭೀತಾ=ಬೇಡನಿಗೆ ಹೆದರಿದ ಮೃಗೀ ಇವ=ಜಿಂಕೆಯಂತೆ ದ್ರುತಂ=ವೇಗವಾಗಿ ಗೌಃ ಸತೀ=ಆಕಳಾಗಿ ಅಪಾದ್ರವತ್=ಓಡಿದಳು. ।।೧೫।।

**ತಾಮೇವಾನ್ವವ್ರಜದ್ವೈನ್ಯಃ ಕುಪಿತೋಽತ್ಯರುಣೇಕ್ಷಣಃ ।**
**ಶರಂ ಧನುಷಿ ಸಂಧಾಯ ಯತ್ರ ಯತ್ರ ಪಲಾಯತಿ ।।೧೬।।**

ಕುಪಿತಃ=ಸಿಟ್ಟಾದ ಅತ್ಯರುಣೇಕ್ಷಣಃ=ಬಹಳ ಕೆಂಪಾದ ಕಣ್ಣುಳ್ಳ ವೈನ್ಯಃ=ಪೃಥುವು ಶರಂ=ಬಾಣವನ್ನು ಧನುಷಿ ಸಂಧಾಯ=ಬಿಲ್ಲಿನಲ್ಲಿ ಜೋಡಿಸಿ ಯತ್ರ ಯತ್ರ=ಎಲ್ಲೆಲ್ಲಿ ಪಲಾಯತಿ=ಓಡುವದೋ ತತ್ರ ತತ್ರ=ಅಲ್ಲಲ್ಲಿ ತಾಂ ಏವ=ಗೋರೂಪಳಾದ ಆ ಭೂಮಿಯನ್ನೇ ಅನ್ವವ್ರಜತ್=ಬೆನ್ನುಹತ್ತಿ ಹೋದನು. (ಹಿಂಬಾಲಿಸಿದನು.)।।೧೬।।

**ಸಾ ದಿಶೋ ವಿದಿಶೋ ದೇವೀ ರೋದಸೀ ಚಾಂತರಂ ತಯೋಃ ।**
**ಧಾವತೀ ತತ್ರ ತತ್ರೈನಂ ದದರ್ಶಾನೂದ್ಯತಾಯುಧಮ್ ।।೧೭।।**

ಸಾ ದೇವೀ=ಆ ಭೂದೇವಿಯು ದಿಶಃ=ದಿಕ್ಕುಗಳಿಗೆ ವಿದಿಶಃ=ಉಪದಿಕ್ಕುಗಳಿಗೂ ರೋದಸೀ=ಭೂಲೋಕ ಸ್ವರ್ಗಲೋಕಗಳಲ್ಲಿ ತಯೋಃ=ದ್ಯು-ಪೃಥಿವೀಗಳ ಅಂತರಂ= ಮಧ್ಯದಲ್ಲಿಯ ಅಂತರಿಕ್ಷದಲ್ಲಿಯೂ ಧಾವತೀ=ಓಡುವವಳಾಗಿ ತತ್ರ ತತ್ರ=ತಾನು ಹೋದಲೆಲ್ಲ ಅನು ಉದ್ಯತಾಯುಧಂ=ಹಿಂದೆ ಬಿಲ್ಲು-ಬಾಣ ಹಿಡಿದು ಬರುವ ಏನಂ=ಪೃಥುರಾಜನನ್ನು ದದರ್ಶ=ನೋಡಿದಳು. ।।೧೭।।

**ಲೋಕೇ ನಾವಿಂದತ ತ್ರಾಣಂ ವೈನ್ಯಾನ್ಮೃತ್ಯೋರಿವ ಪ್ರಜಾಃ ।**
**ತ್ರಸ್ತಾ ತದಾ ನಿವವೃತೇ ಹೃದಯೇನ ವಿದೂಯತಾ ।।೧೮।।**

ಪ್ರಜಾಃ=ಜನರು ಮೃತ್ಯೋರಿವ=ಮೃತ್ಯುವಿನಿಂದ ರಕ್ಷಿಸುವವರನ್ನು ಕಾಣದಿರುವಂತೆ ಲೋಕೇ=ಜಗತ್ತಿನಲ್ಲಿ ವೈನ್ಯಾತ್=ಪೃಥುವಿನಿಂದ ಭಿನ್ನರಾದ ತ್ರಾಣಂ=ರಕ್ಷಕರನ್ನು ನ ಅವಿಂದತ್=ಪಡೆಯಲಿಲ್ಲ. ತದಾ=ಆಗ ತ್ರಸ್ತಾ=ಭೀತಳಾದವಳಾಗಿ ವಿದೂಯತಾ ಹೃದಯೇನ=ದುಃಖಿತವಾದ ಮನಸ್ಸಿನಿಂದ ನಿವವೃತೇ=ಹಿಂದಿರುಗಿ ಬಂದಳು. ।।೧೮।।

**ಉವಾಚಾಥ ಮಹಾಭಾಗಂ ಧರ್ಮಜ್ಞಾಪನ್ನವತ್ಸಲ ।**
**ತ್ರಾಹಿ ಮಾಮಪಿ ಭೂತಾನಾಂ ಪಾಲನೇಽವಸ್ಥಿತೋ ಭವಾನ್ ।।೧೯।।**

ಅಥ=ಬಂದನಂತರ ಧರ್ಮಜ್ಞಾ=ಧರ್ಮವನ್ನರಿತ ಭೂದೇವಿಯು ಮಹಾಭಾಗಂ= ಭಾಗ್ಯಶಾಲಿಯಾದ ಪೃಥುವನ್ನು ಕುರಿತು ಹೇ ಆಪನ್ನವತ್ಸಲ=ಶರಣಾಗತರಲ್ಲಿ ವಾತ್ಸಲ್ಯವುಳ್ಳವನೇ! ಭವಾನ್=ನೀನು ಭೂತಾನಾಂ=ಪ್ರಾಣಿಗಳ ಪಾಲನೇ=ರಕ್ಷಣೆಯಲ್ಲಿ ಅವಸ್ಥಿತಃ=ತೊಡಗಿರುವಿ, ಕಾರಣ ಮಾಂ ಅಪಿ=ನನ್ನನ್ನೂ ಸಹ ತ್ರಾಹಿ=ರಕ್ಷಿಸು ಎಂದು ಉವಾಚ=ಹೇಳಿದಳು. ॥೧೯॥

**ಸ ತ್ವಂ ಜಿಘಾಂಸಸೇ ಕಸ್ಮಾದ್ದೀನಾಮಕೃತಕಿಲ್ಬಿಷಾಮ್ ।**
**ಅಹನಿಷ್ಯತ್ಕಥಂ ಯೋಷಾಂ ಧರ್ಮಜ್ಞ ಇತಿ ಯೋ ಮತಃ ॥೨೦॥**

ಯಃ=ಯಾವನು ಧರ್ಮಜ್ಞಃ ಇತಿ ಮತಃ=ಧರ್ಮವನ್ನು ತಿಳಿದವನೆಂದು ಎಲ್ಲರಿಂದ ತಿಳಿಯಲ್ಪಟ್ಟಿರುವಿಯೋ ಸಃ ತ್ವಂ=ಅಂಥ ನೀನು ದೀನಾಂ=ದುಃಖಿತಳಾದ ಅಕೃತಕಿಲ್ಬಿಷಾಂ= ಪಾಪವನ್ನು ಮಾಡದಿರುವ ಯೋಷಾಂ=ಸ್ತ್ರೀಯಾದ ನನ್ನನ್ನು ಕಸ್ಮಾದ್=ಏಕೆ ಜಿಘಾಂಸಸೇ= ಕೊಲ್ಲಲಿಚ್ಛಿಸುವಿ ? ಕಥಂ ಅಹನಿಷ್ಯತ್=ಹೇಗೆ ಕೊಲ್ಲುವಿ?॥೨೦॥

**ಪ್ರಹರಂತಿ ನ ವೈ ಸ್ತ್ರೀಷು ಕೃತಾಗಃಸ್ವಪಿ ಜಂತವಃ ।**
**ಕಿಮುತ ತ್ವದ್ವಿಧಾ ರಾಜನ್ ಕರುಣಾ ದೀನವತ್ಸಲಾಃ ॥೨೧॥**

ಜಂತವಃ=ಜನರು ಸ್ತ್ರೀಷು=ಸ್ತ್ರೀಯರು ಕೃತಾಗಃಸು ಅಪಿ=ಅಪರಾಧ ಮಾಡಿದವರಾದರೂ ನ ಪ್ರಹರಂತಿ=ಹೊಡೆಯಲಾರರು. ಹೇ ರಾಜನ್=ರಾಜನೇ ! ದೀನವತ್ಸಲಾಃ=ದುಃಖಿತರಲ್ಲಿ ಪ್ರೀತಿಯುಳ್ಳ ಕರುಣಾಃ=ದಯಾಳುಗಳಾದ ತ್ವದ್ವಿಧಾಃ= ನಿನ್ನಂಥವರು ಕಿಮುತ=ಸ್ತ್ರೀಯರನ್ನು ಶಿಕ್ಷಿಸುವದಿಲ್ಲವೆಂದು ಬೇರೆ ಹೇಳಬೇಕೆ ?॥೨೧॥

ಕೇವಲ ಪಾಪ ಬರುವದು ಮಾತ್ರವಲ್ಲ, ದೃಷ್ಟಹಾನಿಯೂ ಆಗುವದು ಎಂದು ಹೇಳುವಳು -

**ಮಾಂ ನಿಹತ್ಯಾಜರಾಂ ನಾವಂ ಯತ್ರ ವಿಶ್ವಂ ಪ್ರತಿಷ್ಠಿತಮ್ ।**
**ಆತ್ಮಾನಂ ಚ ಪ್ರಜಾಶ್ಚೇಮಾಃ ಕಥಮಂಭಸಿ ಧಾಸ್ಯಸಿ ॥೨೨॥**

ಯತ್ರ=ಯಾವ ನನ್ನಲ್ಲಿ ವಿಶ್ವಂ=ಪ್ರಪಂಚವು ಪ್ರತಿಷ್ಠಿತಂ=ಆಶ್ರಿತವಾಗಿದೆಯೋ ಅಜರಾಂ=ಹೊಸದಾಗಿರುವ (ದೃಢವಾದ) ನಾವಂ=ನೌಕೆಯಂತಿರುವ ಮಾಂ=ನನ್ನನ್ನು ನಿಹತ್ಯ=ಸಂಹರಿಸಿ ಆತ್ಮಾನಂ=ನಿನ್ನನ್ನು ಚ=ಮತ್ತು ಇಮಾಃ ಪ್ರಜಾಃ=ಈ ಎಲ್ಲ ಪ್ರಜೆಗಳನ್ನು ಅಂಭಸಿ=ನೀರಿನಲ್ಲಿ ಕಥಂ ಧಾಸ್ಯಸಿ=ಹೇಗೆ ಧರಿಸುವಿ ? ॥೨೨॥

**ಪೃಥುರುವಾಚ -**

**ವಸುಧೇ ತ್ವಾಂ ವಧಿಷ್ಯಾಮಿ ಮಚ್ಛಾಸನಪರಾಙ್ಮುಖೀಮ್ ।**
**ಭಾಗಂ ಬರ್ಹಿಷಿ ಯಾ ವೃಂಕ್ತೇ ನ ತನೋಷಿ ಚ ನೋ ವಸು ॥ ೨೩॥**

ಯಾ=ಯಾವ ನೀನು ಬರ್ಹಿಷಿ=ಯಜ್ಞದಲ್ಲಿ ಭಾಗಂ=ಹವಿಸ್ಸನ್ನು ವೃಂಕ್ತೇ= ಸ್ವೀಕರಿಸುವಿಯೋ ಸಾ ತ್ವಂ=ಆ ನೀನು ನಃ=ನಮಗೆ ವಸು=ಧಾನ್ಯರೂಪ ಸಂಪತನ್ನನ್ನು ನ ತನೋಷಿ=ಕೊಡಲಾರಿ, ಕಾರಣ ಮಚ್ಛಾಸನಪರಾಙ್ಮುಖೀಂ=ನನ್ನ ಆಜ್ಞೆಯನ್ನು ಉಲ್ಲಂಘಿಸುವ ತ್ವಾಂ=ನಿನ್ನನ್ನು ವಧಿಷ್ಯಾಮಿ=ಸಂಹರಿಸುವೆನು. ।।೨೩।।

**ಯವಸಂ ಜಗ್ಧ್ಯನುದಿನಂ ನೈವ ದೋಗ್ಧ್ಯೌಧಸಂ ಪಯಃ ।**
**ತಸ್ಯಾಮೇವಂ ಹಿ ದುಷ್ಟಾಯಾಂ ದಂಡೋ ನಾತ್ರ ನ ಶಸ್ಯತೇ ।।೨೪।।**

ಯಾ=ಯಾವ ಆಕಳು ಅನುದಿನಂ=ಪ್ರತಿದಿನವೂ ಯವಸಂ=ಹುಲ್ಲುಹಿಂಡಿ ಮುಂತಾದವನ್ನು ಜಗ್ಧಿ=ತಿನ್ನುವದೋ, ಔಧಸಂ ಪಯಃ=ಕೆಚ್ಚಲದಲ್ಲಿರುವ ಹಾಲನ್ನು ನೈವ ದೋಗ್ಧಿ=ಕರೆಯುವದಿಲ್ಲವೋ (ಹಾಲು ಕರೆಯುವವರನ್ನು ಪೀಡಿಸುವದೋ) ತಸ್ಯಾಂ=ಅಂತಹ ಏವಂ ದುಷ್ಟಾಯಾಂ=ಈ ರೀತಿ ದುಷ್ಟವಾದ ಆಕಳಲ್ಲಿ (ಆಕಳಿಗೆ) ದಂಡಃ=ಶಾಸನವು (ಹೊಡೆಯುವದು, ಕಾಲುಕಟ್ಟುವದು) ಅತ್ರ=ಲೋಕದಲ್ಲಿ ಶಸ್ಯತೇ ಇತಿ ನ=ಯೋಗ್ಯವಲ್ಲವೆಂದಲ್ಲ, ಯೋಗ್ಯವೇ.

ಅಂದಮೇಲೆ ನೀನು ಹವಿಸ್ಸೆಂಬ ಹುಲ್ಲು ತಿನ್ನುವಿ. ನಿನ್ನಲ್ಲಿರುವ ಧಾನ್ಯವೆಂಬ ಹಾಲು ಕರೆಯಲಾರಿ. ಆದ್ದರಿಂದ ಗೋರೂಪಳಾದ ನಿನ್ನ ವಧವೂ ಉಚಿತವೇ ಎಂದು ಭಾವ.

ನನ್ನಲ್ಲಿ ಇಲ್ಲದಿರುವುದರಿಂದ ನಾನು ಕೊಡುತ್ತಿಲ್ಲ ಎನ್ನಬೇಡ ಎಂದು ಹೇಳುವನು -

**ತ್ವಂ ಖಲ್ವೌಷಧಿಬೀಜಾನಿ ಪ್ರಾಕ್ಸೃಷ್ಟಾನಿ ಸ್ವಯಂಭುವಾ ।**
**ನ ಮುಂಚಸ್ಯಾತ್ಮರುದ್ಧಾನಿ ಮಾಮವಜ್ಞಾಯ ಮಂದಧೀಃ ।।೨೫ ।।**

ಸ್ವಯಂಭುವಾ=ಬ್ರಹ್ಮದೇವರಿಂದ ಪ್ರಾಕ್‌ಸೃಷ್ಟಾನಿ=ಮೊದಲು ನಿರ್ಮಿಸಿದ ಔಷಧಿ ಬೀಜಾನಿ=ವನಸ್ಪತಿಬೀಜಗಳನ್ನು ಆತ್ಮರುದ್ಧಾನಿ=ನಿನ್ನ ದೇಹದಲ್ಲಿ ಅಡಗಿರುವವನ್ನು ಮಂದಧೀಃ=ಅಜ್ಞಾನಿಯಾದ ನೀನು ಮಾಂ=ನನ್ನನ್ನು ಅವಜ್ಞಾಯ=ತಿರಸ್ಕರಿಸಿ (ಇವನು ರಾಜನಾದಾಗ ಸಸ್ಯಗಳನ್ನು ಕೊಡುವದಿಲ್ಲವೆಂಬ ದುರಾಗ್ರಹವೇ ತಿರಸ್ಕಾರ) ನ ಮುಂಚಸಿ=ಹೊರಬಿಡಲಾರಿ.

ನನ್ನನ್ನು ಕೊಂದರೆ ಏನೂ ಅನ್ನ ಸಿಗುವದಿಲ್ಲ. ಯಾವದರಿಂದ ಪ್ರಜೆಗಳ ದುಃಖಶಮನ ಮಾಡುವಿ ? ಎಂದರೆ, ಹೇಳುವನು -

**ಅಮೀಷಾಂ ಕ್ಷುತ್ಪರೀತಾನಾಮಾರ್ತಾನಾಂ ಪರಿದೇವಿತಮ್ ।**
**ಶಮಯಿಷ್ಯಾಮಿ ಮದ್ಬಾಣೈರ್ಭಿನ್ನಾಯಾಸ್ತವ ಮೇದಸಾ ।।೨೬।।**

ಕ್ಷುತ್ಪರೀತಾನಾಂ=ಹಸಿವೆಯಿಂದ ಆವರಿಸಿದ ಆರ್ತಾನಾಂ=ದುಃಖಿತರ ಪರಿದೇವಿತಂ= ವಿಜ್ಞಾಪನೆಯಿಂದ ತಿಳಿದ ದುಃಖವನ್ನು ಮದ್ಬಾಣೈಃ=ನನ್ನ ಬಾಣಗಳಿಂದ ಭಿನ್ನಾಯಾಃ= ಭೇದಿಸಲ್ಪಟ್ಟ ದೇಹದ ಮೇದಸಾ=ಮಾಂಸವಿಶೇಷದಿಂದ ಶಮಯಿಷ್ಯಾಮಿ=ಪರಿಹರಿಸುವೆನು.

ಸ್ತ್ರೀವಧ ಹೇಗೆ ಮಾಡುವಿ ? ಎಂಬುದಕ್ಕೆ ಉತ್ತರಿಸುವನು -

**ಪುಮಾನ್ ಯೋಷಿದುತ ಕ್ಲೀಬ ಆತ್ಮಸಂಭಾವನೋಽಧಮಃ ।**
**ಭೂತೇಷು ನಿರನುಕ್ರೋಶೋ ನೃಪಾಣಾಂ ತದ್ವಧೋ ವರಃ ॥೨೭॥**

ಪುಮಾನ್=ಪುರುಷನಾಗಲಿ, ಯೋಷಿತ್=ಸ್ತ್ರೀ ಆಗಲಿ, ಉತ=ಅಥವಾ ಕ್ಲೀಬಃ=ನಪುಂಸಕನೇ ಆಗಲಿ, ಆತ್ಮಸಂಭಾವನಃ=ತಾನೇ ತನ್ನನ್ನು ಗೌರವಿಸಿಕೊಳ್ಳುವವನು, ಭೂತೇಷು=ಇತರ ಪ್ರಾಣಿಗಳಲ್ಲಿ ನಿರನುಕ್ರೋಶಃ=ದಯೆ ಇಲ್ಲದವನಾದರೆ ತದ್ವಧಃ=ಅಂಥವನ ಸಂಹಾರವು ನೃಪಾಣಾಂ=ರಾಜರಿಗೆ ವರಃ=ಶ್ರೇಷ್ಠವಾದುದು. ಪಾಪಜನಕವಲ್ಲ. ॥೨೭॥

**ತ್ವಾಂ ಸ್ತಬ್ಧಾಂ ದುರ್ಮದಾಂ ನೀತ್ವಾ ಮಾಯಾಗಾಂ ತಿಲಶಃ ಶರೈಃ ।**
**ಆತ್ಮಯೋಗಬಲೇನೇಮಾ ಧಾರಯಿಷ್ಯಾಮ್ಯಹಂ ಪ್ರಜಾಃ ॥೨೮॥**

ಸ್ತಬ್ಧಾಂ=ಗರ್ವಿಷ್ಠಳಾದ ದುರ್ಮದಾಂ=ದುಷ್ಟಮದವುಳ್ಳ ಮಾಯಾಗಾಂ=ಗೋವಿನ ವೇಷ ಧರಿಸಿದ (ಇದರಿಂದ, ನಿಜವಾದ ಗೋಹತ್ಯೆ ಪಾಪವಾದರೂ ಪ್ರಕೃತ ಗೋವೇಷ ಧರಿಸಿದ ನಿನ್ನ ಹತ್ಯೆ ಪಾಪವಲ್ಲವೆಂದು ಸೂಚಿಸುವನು) ತ್ವಾಂ=ನಿನ್ನನ್ನು ತಿಲಶಃ=ಎಳ್ಳಿನ ಪ್ರಮಾಣದಲ್ಲಿ ಶರೈಃ=ಬಾಣಗಳಿಂದ ನೀತ್ವಾ=ತುಣಕು ಮಾಡಿ ಅಹಂ=ನಾನು ಆತ್ಮಯೋಗಬಲೇನ=ನನ್ನ ಸಾಮರ್ಥ್ಯದಿಂದ ಇಮಾಃ ಪ್ರಜಾಃ=ಈ ಪ್ರಜೆಗಳನ್ನು ಧಾರಯಿಷ್ಯಾಮಿ=ಪೋಷಿಸುವೆನು. ॥೨೮॥

**ಏವಂ ಮನ್ಯುಮಯೀಂ ಮೂರ್ತಿಂ ಕೃತಾಂತಮಿವ ಬಿಭ್ರತಮ್ ।**
**ಪ್ರಣತಾ ಪ್ರಾಂಜಲಿಃ ಪ್ರಾಹ ಮಹೀ ಸಂಜಾತವೇಪಥುಃ ॥೨೯॥**

ಏವಂ=ಈ ರೀತಿಯಾಗಿ ಕೃತಾಂತಮಿವ=ಯಮನಂತೆ ಮನ್ಯುಮಯೀಂ=ಸಿಟ್ಟಿನಿಂದ ತುಂಬಿದ ಮೂರ್ತಿಂ=ದೇಹವನ್ನು ಬಿಭ್ರತಂ=ಧರಿಸಿದ ಪೃಥುವನ್ನು ಕಂಡು ಸಂಜಾತವೇಪಥುಃ=ಕಂಪನವುಳ್ಳವಳಾಗಿ ಪ್ರಾಂಜಲಿಃ=ಕೈಗಳನ್ನು ಜೋಡಿಸಿದವಳಾಗಿ ಪ್ರಣತಾ=ನಮಸ್ಕರಿಸಿದ ಮಹೀ=ಭೂಮಿಯು ಪ್ರಾಹ=ಹೇಳಿದಳು.

ಪೃಥುವಿನಲ್ಲಿ ಆವಿಷ್ಟನಾದ ಹರಿಯೇ ಎಲ್ಲವನ್ನು ಮಾಡುವನೆಂದು ತಿಳಿದು ಅವನನ್ನು ಸ್ತುತಿಸುವಳು -

**ಧರಣ್ಯುವಾಚ -**

**ನಮಃ ಪರಸ್ಮೈ ಪುರುಷಾಯ ಮಾಯಯಾ**
**ವಿನ್ಯಸ್ತನಾನಾತನವೇಽಗುಣಾತ್ಮನೇ ।**
**ನಮಃ ಸ್ವರೂಪಾನುಭವೇನ ನಿರ್ಧುತ-**
**ದ್ರವ್ಯಕ್ರಿಯಾಕಾರಕವಿಭ್ರಮೋರ್ಮಯೇ ॥೩೦॥**

ಮಾಯಯಾ=ಇಚ್ಛೆಯಿಂದ ವಿನ್ಯಸ್ತನಾನಾತನವೇ=ಜಡಪ್ರಕೃತಿಯಿಂದ ಬ್ರಹ್ಮಾದಿಗಳ ದೇಹವನ್ನು ನಿರ್ಮಿಸಿದ, ಅಗುಣಾತ್ಮನೇ=ಸತ್ವಾದಿಗುಣರಹಿತನಾದ, ಅಥವಾ ಗುಣಾತ್ಮನೇ=ಜ್ಞಾನಾನಂದಾದಿಗುಣಾತ್ಮಕವಾದ ದೇಹ ಉಳ್ಳ, ಸ್ವರೂಪಾನುಭವೇನ=''ತದಾತ್ಮಾನಮೇವ ಅವೇದಹಂ ಬ್ರಹ್ಮಾಸ್ಮಿ'' ಎಂದು ಹೇಳಿದ ಪ್ರಕಾರ, ತನ್ನನ್ನು ತಿಳಿದುಕೊಂಡಿದ್ದರಿಂದ (ತನ್ನ ಅಪರೋಕ್ಷಜ್ಞಾನ ಮಾಡಿಕೊಂಡಿದ್ದರಿಂದ) ನಿರ್ಧುತದ್ರವ್ಯಕ್ರಿಯಾಕಾರಕವಿಭ್ರಮೋರ್ಮಯೇ ನಿರ್ಧುತ=ದೂರೀಕರಿಸಲ್ಪಟ್ಟ ದ್ರವ್ಯ=ದೇಹಗೇಹಾದಿಗಳು ಕ್ರಿಯಾ=ವ್ಯಾಪಾರಗಳು ಕಾರಕ=ಇಂದ್ರಿಯಗಳು ಇವುಗಳಲ್ಲಿ ವಿಭ್ರಮ=ಅಹಂಕಾರಮಮಕಾರಗಳಿಂದ ಉಂಟಾಗುವ ಊರ್ಮಯೇ=ರಾಗದ್ವೇಷಗಳುಳ್ಳ (ದ್ರವ್ಯಾದಿಗಳಲ್ಲಿ ಅಹಂಕಾರ-ಮಮಕಾರವಿಲ್ಲದ್ದರಿಂದ ರಾಗದ್ವೇಷರಹಿತನಾದ ಎಂದರ್ಥ) ಪರಸ್ಮೈ=ಸರ್ವೋತ್ತಮನಾದ ಪುರುಷಾಯ=ಪೂರ್ಣಷಡ್ಗುಣನಾದ ಶ್ರೀಹರಿಗೆ ನಮಃ=ನಮಸ್ಕಾರವು.

**ಭಾಗವತ ತಾತ್ಪರ್ಯ -**

ಇಲ್ಲಿ ಮಾಯಾತನವೇ ಎಂಬುದಕ್ಕೆ ಪ್ರಕೃತ ಅರ್ಥ ಹೇಳುವರು -

**ಬ್ರಹ್ಮಾದಿಜೀವದೇಹಾಸ್ತು ಮಾಯಾದೇಹಾಃ ಪ್ರಕೀರ್ತಿತಾಃ ।**

ಜಡಪ್ರಕೃತಿಯಿಂದ ನಿರ್ಮಿತವಾದ ಬ್ರಹ್ಮಾದಿಜೀವರ ದೇಹಗಳು ಮಾಯಾದೇಹ-ವೆನಿಸುವವು. ಹೊರತು ಕಲ್ಪಿತದೇಹಗಳಲ್ಲ ಎಂದು ಭಾವ. ॥೩೦॥

ಯಾವನು ತಂದೆ, ಸರ್ವಸ್ವಾಮಿಯೋ ಅವನೇ ಕೊಲ್ಲಲು ಹೊರಟರೆ ಎಲ್ಲಿ ಹೋಗುವದು ಎಂಬ ಅಭಿಪ್ರಾಯ ತಿಳಿಸುವಳು -

**ಯೇನಾಹಮಾತ್ಮಾಯತನುರ್ವಿನಿರ್ಮಿತಾ**
**ಧಾತ್ರಾ ಯತೋಽಯಂ ಗುಣಸರ್ಗಸಂಗ್ರಹಃ ।**
**ಸ ಏವ ಮಾಂ ಹಂತುಮುದಾಯುಧಃ ಸ್ವರಾ-**
**ಡುಪಸ್ಥಿತೋಽನ್ಯಂ ಶರಣಂ ಕಮಾಶ್ರಯೇ ॥೩೧॥**

ಯೇನ ಧಾತ್ರಾ=ಯಾವ ಜಗತ್ಸೃಷ್ಟಿಕರ್ತೃವಾದ ಶ್ರೀಹರಿಯಿಂದ ಅಹಂ=ನಾನು ಆತ್ಮೀಯತನುಃ ವಿನಿರ್ಮಿತಾ=ತನ್ನ ಶರೀರವಾಗಿ ನಿರ್ಮಿಸಲ್ಪಟ್ಟೆನೋ ('ಯಸ್ಯ ಪೃಥಿವೀ ಶರೀರಂ' ಎಂದು ಶೃತಿ ಇದೆ) ಯತಃ=ಯಾವನಿಂದ ಗುಣಸರ್ಗಸಂಗ್ರಹಃ=ಸತ್ವಾದಿ-ಗುಣಗಳಿಂದ ನಿರ್ಮಿತವಾದ ದೇಹವುಳ್ಳ ಪ್ರಾಣಸಮೂಹದ ಧಾರಣವಾಗುವದೋ ಸ ಏವ=ಅವನೇ ಸ್ವರಾಟ್=ಸ್ವತಂತ್ರನಾದವನು ಮಾಂ=ನನ್ನನ್ನು ಉದಾಯುಧಃ=ಆಯುಧವನ್ನು ಧರಿಸಿ ಹಂತುಂ=ಕೊಲ್ಲಲು ಉಪಸ್ಥಿತಃ=ಉದ್ಯುಕ್ತನಾಗಿರುವನು ಎಂದರೆ, ಅನ್ಯಂ ಕಂ ಶರಣಂ ಆಶ್ರಯೇ=ಬೇರೆ ಯಾರನ್ನು ಮೊರೆ ಹೋಗಲು ಸಾಧ್ಯ ?॥೩೧॥

ಈಗ ಜಗತ್ಪಾಲನೆಗೆ ಪ್ರವೃತ್ತನಾದ್ದರಿಂದ ನನ್ನನ್ನು ಕೊಲ್ಲುವದು ಉಚಿತವಲ್ಲ ಎಂದು ಹೇಳುವಳು -

**ಯ ಏತದಾದಾವಸೃಜಚ್ಚರಾಚರಂ**
**ಸ್ವಮಾಯಯಾಽತ್ಮಾಶ್ರಯಯಾಽವಿತರ್ಕ್ಯಯಾ ।**
**ತಯೈವ ಸೋಽಯಂ ಕಿಲ ಗೋಪ್ತುಮುದ್ಯತಃ**
**ಕಥಂ ನು ಮಾಂ ಧರ್ಮಪರೋ ಜಿಘಾಂಸತಿ ॥೩೨॥**

ಯಃ=ಯಾವನು ಏತದಾದೌ=ಈ ಪ್ರಪಂಚ ಹುಟ್ಟುವ ಮೊದಲು ಸ್ವಮಾಯಯಾ=ತನ್ನ ಇಚ್ಛೆಯಿಂದ, ಆತ್ಮಾಶ್ರಯಯಾ=ತಾನೇ ಆಶ್ರಯವಾಗಿವುಳ್ಳ ಅಥವಾ ಬಂಧಕವಾಗಿ ಜೀವವಿಷಯಕವಾದ ವಿತರ್ಕ್ಯಯಾ=ವಿವಿಧ ತರ್ಕವಿಷಯವಾದ ಅಥವಾ ಅವಿತರ್ಕ್ಯಯಾ= ಅದ್ವೈತಿಗಳ ತರ್ಕಕ್ಕೆ ಗೋಚರವಾಗದ ಪ್ರಕೃತಿಯಿಂದಲೂ ಚರಾಚರಂ=ಚೇತನಾಚೇತನ ಪ್ರಪಂಚವನ್ನು ಅಸೃಜತ್=ಸೃಷ್ಟಿಸಿದನೋ ಸೋಽಯಂ=ಆ ಪರಮಾತ್ಮನೇ ತಯೈವ=ಆ ತನ್ನ ಇಚ್ಛೆಯಿಂದಲೇ ಗೋಪ್ತುಂ=ರಕ್ಷಿಸಲು ಉದ್ಯತಃ=ಪ್ರವೃತ್ತನಾಗಿರುವನು, ಧರ್ಮಪರಃ=ಧರ್ಮ ನಡೆಸುವವನು, ನು=ಈಗ ಮಾಂ=ನನ್ನನ್ನು ಕಥಂ ಜಿಘಾಂಸತಿ=ಹೇಗೆ ಕೊಲ್ಲಲಿಚ್ಛಿಸಿಯಾನು ? ಕಿಲ=ಪ್ರಮಾಣ ಪ್ರಸಿದ್ಧಿಯು. ॥೩೨॥

ಇವನೂ ಸಹ ಬ್ರಹ್ಮಾದಿಗಳಂತೆ ತನಗಿಂತ ಉತ್ತಮರ ಅನುಗ್ರಹದಿಂದ ಈಶ್ವರನಾದರೆ ಏನು ಮಹತ್ವ ? ಎಂದರೆ ಹೇಳುವರು -

**ನೂನಂ ತವೇಶಸ್ಯ ಸಮೀಹಿತಂ ಜನೈಃ**
**ಸ್ವಮಾಯಯಾ ದುರ್ಜಯಯಾಽಕೃತಾತ್ಮಭಿಃ ।**
**ನ ಲಕ್ಷ್ಯತೇ ಯಸ್ತ್ವಕರೋದಕಾರಯ-**
**ದ್ಯೋಽನೇಕ ಏಕಃ ಪರತಃ ಸ ಈಶ್ವರಃ ॥೩೨॥**

**ಭಾಗವತ ತಾತ್ಪರ್ಯ -**

**ಸ ಪರತಃ ಈಶ್ವರ ಇತ್ಯಾಕ್ಷೇಪಃ ।**

ಸ್ವಮಾಯಯಾ=ಬಂಧಕಶಕ್ತಿಯಿಂದ ಅಕೃತಾತ್ಮಭಿಃ=ಮನೋಜಯವಿಲ್ಲದ ಅಥವಾ ಅಲ್ಪ (ಅಶಿಕ್ಷಿತ) ಬುದ್ಧಿಯುಳ್ಳ ಜನೈಃ=ಜನರಿಂದ ದುರ್ಜರಯಾ=ಗೆಲ್ಲಲಾಗದ ಮಾಯಯಾ= ಇಚ್ಛೆಯಿಂದ ಈಶಸ್ಯ=ಐಶ್ವರ್ಯಾದಿಗುಣಗಳಿಗೆ ಆಕರನಾದ ತವ=ನಿನ್ನ ಸಮೀಹಿತಂ= ಸಮೀಚೀನವ್ಯಾಪಾರವು ನ ಲಕ್ಷ್ಯತೇ=ತಿಳಿಯಲಾಗದು ಎಂದು ನೂನಂ=ತರ್ಕಿಸುವೆನು. ಯಃ=ಯಾವ ಸ್ವತಂತ್ರನಾದ ನೀನು ಅಕರೋತ್=ಕಾರ್ಯ ಮಾಡಿದೆಯೋ ಅಕಾರಯತ್= ಬ್ರಹ್ಮಾದಿಗಳಿಂದ ಮಾಡಿಸಿರುವಿಯೋ ಯಃ=ಯಾವನು ಅನೇಕಃ=ಅನೇಕರೂಪ ಉಳ್ಳವನು (ಇಂದ್ರೋ ಮಾಯಾಭಿಃ ಪುರೂರೂಪ ಈಯತೇ ಎಂದು ಶ್ರುತಿ ಇದೆ) ಏಕಃ=ತತ್ತ್ವತಃ ಒಬ್ಬನೇ (ಏಕಮೇವಾದ್ವಿತೀಯಂ ಬ್ರಹ್ಮ ಎಂದು ಶ್ರುತಿ) ಸಃ=ಇಂಥವನು ಪರತಃ ಈಶ್ವರಃ ? ಇನ್ನೊಬ್ಬರ ಅನುಗ್ರಹದಿಂದ ಈಶ್ವರನೇ ? ಎಂದು ಆಕ್ಷೇಪ. ಅಲ್ಲವೆಂದು ಭಾವ. ಅವನಿಗಿಂತ ಉತ್ತಮರೇ ಇಲ್ಲ. ಅವನು ಸ್ವತಃ ಸರ್ವೇಶ್ವರ ಎಂದು ಭಾವ.

ವಿಜಯಧ್ವಜೀಯ ಪ್ರಕಾರ : ಈ ವಿಧನಾದವನು ಪರತಃ=ಬೇರೆಯವರಿಗೇನೇ ಈಶ್ವರಃ=ಸ್ವಾಮಿಯು. ದುಃಖಿತರಾದ ನಮಗಲ್ಲವೆಂದು ಭೂಮಿಯ ಆಕ್ಷೇಪ. ।।೩೩।।

ಇವನೇ ಸರ್ವೇಶ್ವರನೆಂದು ನಮಸ್ಕರಿಸಿದವರಿಗೆ ಭಯವಿಲ್ಲವೆಂದು ತಿಳಿದು ನಮಸ್ಕರಿಸುವಳು -

**ಸರ್ಗಾದಿ ಯೋಽಸ್ಯಾನುರುಣದ್ಧಿ ಶಕ್ತಿಭಿರ್ದ್ರವ್ಯಕ್ರಿಯಾಕಾರಕಚೇತನಾತ್ಮಭಿಃ ।**
**ತಸ್ಮೈ ಸಮುನ್ನದ್ಧವಿರುದ್ಧಶಕ್ತಯೇ ನಮಃ ಪರಸ್ಮೈ ಪುರುಷಾಯ ವೇಧಸೇ।।೩೪।।**

ಯಃ=ಯಾವನು ದ್ರವ್ಯಕ್ರಿಯಾಕಾರಕಚೇತನಾತ್ಮಭಿಃ ದ್ರವ್ಯ=ಪಂಚಭೂತಗಳು ಕ್ರಿಯಾ=ಕರ್ಮೇಂದ್ರಿಯಗಳು ಕಾರಕ=ಜ್ಞಾನೇಂದ್ರಿಯಗಳು ಚೇತನ=ಇವುಗಳಿಗೆ ಅಭಿಮಾನಿಗಳಾದ ಜೀವರು ತದಾತ್ಮಭಿಃ=ಅವುಗಳೆಂಬ, ಶಕ್ತಿಭಿಃ=ಶಕ್ಯಗಳಾದ್ದರಿಂದ ಶಕ್ತಿನಾಮಕರಾದ ಸಹಕಾರಿಗಳಿಂದ ಅಸ್ಯ=ಜಗತ್ತಿನ ಸರ್ಗಾದಿ=ಸೃಷ್ಟ್ಯಾದ್ಯಷ್ಟಕಗಳನ್ನು ಅನುರುಣದ್ಧಿ=ಯೋಗ್ಯತಾನುಸಾರವಾಗಿ ಮಾಡುವನೋ ತಸ್ಮೈ=ಅಂತಹ ವೇಧಸೇ=ವಿರುದ್ಧ ಅನೇಕ ಕಾರ್ಯಕರ್ತೃವಾದ ಸಮುನ್ನದ್ಧವಿರುದ್ಧಶಕ್ತಯೇ=ಅತ್ಯಂತ ಉತ್ಕೃಷ್ಟವಾದ ಲೋಕದೃಷ್ಟಿಯಿಂದ ವಿರುದ್ಧವಾದ ಶಕ್ತಿವುಳ್ಳ ಪರಸ್ಮೈ ಪುರುಷಾಯ ನಮಃ=ಪರಮಪುರುಷನಿಗೆ ನಮಸ್ಕಾರವು.

**ಭಾಗವತ ತಾತ್ಪರ್ಯ -**

ಈ ಶ್ಲೋಕದಲ್ಲಿ ಒಬ್ಬನಿಗೆ ವಿರುದ್ಧ ವಿಚಿತ್ರ ಅನೇಕ ಕಾರ್ಯಕರ್ತೃತ್ವ ಹೇಗೆ ? ಎಂಬುದಕ್ಕೆ ಉತ್ತರ - ''ಸಮುನ್ನದ್ಧವಿರುದ್ಧಶಕ್ತಯೇ'' ಎಂದು ಹೇಳಿದೆ. ಆದರೆ ಇಲ್ಲಿ ಹೀಗೆ ಶಂಕೆ ಬರುವದು :- ಬಿದಿರಿನ ಅಂಕುರವನ್ನು ಹುಟ್ಟಿಸುವ ಶಕ್ತಿ ಬಿದರಿನ ಬೀಜಗಳಿಗೆ ಇದೆ. ಆದರೆ ಅದೇ ಬಿದರಿನ ಬೀಜಗಳನ್ನು ಹುರಿದಾಗ (ದಾವದಗ್ಧವಾದಾಗ) ಬಾಳೆಗಿಡ ಹುಟ್ಟಿಸುವ ಶಕ್ತಿ ಬರುವಂತೆ, ಭಗವಂತನ ಶಕ್ತಿಯು ಸಹಕಾರಿಸಾಮರ್ಥ್ಯದಿಂದ ಹುಟ್ಟಿದೆ ಎಂದು ಶಂಕೆ, ಮತ್ತು ಕಾರ್ಯಗಳಲ್ಲಿ ಕ್ರಮವಿರುವದರಿಂದ ಆ ಆ ಕಾರ್ಯಕಾಲಕ್ಕೆ ಆ ಆ ಶಕ್ತಿ ಬೇರೆ ಹೊರತು ಏಕಕಾಲದಲ್ಲಿ ಎಲ್ಲ ಶಕ್ತಿಗಳು ಹೇಗೆ ? ಎಂಬ ಶಂಕೆಗಳು ಬರುವವು. ಅವುಗಳನ್ನು ಪರಿಹರಿಸಲು ಪ್ರಮಾಣಸಂವಾದ ಹೇಳುವರು ಆಚಾರ್ಯರು-

**ವಿರುದ್ಧಶಕ್ತಯೋ ಯಸ್ಯ ನಿತ್ಯಾ ಯುಗಪದೇವ ಚ ।**
**ತಸ್ಮೈ ನಮೋ ಭಗವತೇ ವಿಷ್ಣವೇ ಸರ್ವಜಿಷ್ಣವೇ ॥ ಇತಿ ಚ ॥**

ಯಸ್ಯ=ಯಾವನ ವಿರುದ್ಧಶಕ್ತಯಃ=ವಿರುದ್ಧಶಕ್ತಿಗಳು ಯುಗಪದೇವ=ಏಕಕಾಲದಲ್ಲಿಯೇ ಇರುವವೋ, ನಿತ್ಯಾಃ ಚ=ನಿತ್ಯವೂ (ಅಜನ್ಯಗಳೂ) ಆಗಿವೆಯೋ ತಸ್ಮೈ=ಅಂತಹ ಸರ್ವಜಿಷ್ಣವೇ=ಎಲ್ಲರನ್ನು ಗೆಲ್ಲುವ ಸ್ವಭಾವವುಳ್ಳ ಭಗವತೇ=ಅಘಟಿತಘಟಕ ಐಶ್ವರ್ಯಸಂಪನ್ನನಾದ ವಿಷ್ಣವೇ=ವಿಷ್ಣುವಿಗೆ ನಮಃ=ನಮಸ್ಕಾರವು ಎಂದರ್ಥ. ಅಘಟಿತಘಟಕ ಐಶ್ವರ್ಯಬಲದಿಂದ ಲೋಕರೀತ್ಯಾ ವಿರುದ್ಧವಾದರೂ ಶಕ್ತಿಗಳು ಅನಾದಿನಿತ್ಯವಾಗಿಯೂ ಏಕಕಾಲದಲ್ಲಿಯೂ ಇವೆ ಎಂದು ಭಾವ ತಿಳಿಯಬೇಕು. ॥೩೪॥

ಹಿಂದೆ ಎಲ್ಲ ಪ್ರಾಣಿಗಳ ಧಾರಣೆಗಾಗಿ ನನ್ನು ರಸಾತಲದಿಂದ ಮೇಲೆ ತಂದು ನನ್ನ ಮೇಲೆಯೇ ಪ್ರಜಾರಕ್ಷಣೆಗೆ ಹೊರಟ ನಿನಗೆ ನನ್ನ ವಧವು ಉಚಿತವಲ್ಲವೆಂದು ಕರುಣೆ ಬರುವಂತೆ ಎರಡು ಶ್ಲೋಕದಿಂದ ಹೇಳುವಳು-

**ಸ ವೈ ಭವಾನಾತ್ಮವಿನಿರ್ಮಿತಂ ಜಗತ್**
**ಭೂತೇಂದ್ರಿಯಾಂತಃಕರಣಾತ್ಮಕಂ ವಿಭೋ ।**
**ಸಂಸ್ಥಾಪಯಿಷ್ಯನ್ನಜ ಮಾಂ ರಸಾತಲಾತ್**
**ಅಭ್ಯುಜ್ಜಹಾರಾಂಭಸ ಆದಿಸೂಕರಃ ॥೩೫॥**

ಹೇ ಅಜ=ಜನ್ಮರಹಿತನೇ ಸ ವೈ=ಯಾವನು ಸೃಷ್ಟಿ ಮಾಡಿದನೋ ಅವನೇ ಭವಾನ್=ನೀನು. ಆತ್ಮವಿನಿರ್ಮಿತಂ=ನಿನ್ನಿಂದ ಸೃಷ್ಟವಾದ ಭೂತೇಂದ್ರಿಯಾಂತಃಕರಣಾತ್ಮಕಂ ಜಗತ್=ಪಂಚಭೂತಗಳ ಇಂದ್ರಿಯಗಳ ಮನಸ್ಸು ಏತದ್ರೂಪವಾದ ಜಗತ್ತನ್ನು

ಸಂಸ್ಥಾಪಯಿಷ್ಯನ್=ಚೆನ್ನಾಗಿ ಸ್ಥಾಪನೆ ಮಾಡುವದಕ್ಕಾಗಿ ವಿಭೋ=ಸ್ವಾಮಿಯೇ ಆದಿಸೂಕರಃ=ವರಾಹರೂಪ ತಾಳಿ ಮಾಂ=ನನ್ನನ್ನು ರಸಾತಲಾತ್=ರಸಾತಲದಿಂದ ಅಂಭಸಃ=ನೀರಿನಿಂದ ಅಭ್ಯುಜ್ಜಹಾರ=ಮೇಲೆತ್ತಿದೆ. ।।೩೫।।

**ಅಪಾಮುಪಸ್ಥೇ ಮಯಿ ನಾವ್ಯವಸ್ಥಿತಾಃ**
**ಪ್ರಜಾ ಭವಾನದ್ಯ ರಿರಕ್ಷಿಷುಃ ಕಿಲ ।**
**ಸ ವೀರಮೂರ್ತಿಃ ಸಮಭೂದ್ಧರಾಧರೋ**
**ಯೋ ಮಾಂ ಪಯಸ್ಯುಗ್ರಶರೋ ಜಿಘಾಂಸತಿ ।।೩೬।।**

ಸ ಏವ ಧರಾಧರಃ=ಆ ನನ್ನನ್ನು ಮೇಲೆ ತಂದ ಭೂಮಿಭರ್ತೃವಾದ ವರಾಹನು ಅಪಾಂ= ನೀರಿನ ಉಪಸ್ಥೇ=ಮೇಲೆ ಇರುವ ಮಯಿ ನಾವಿ=ನಾನೆಂಬ ನೌಕೆಯಲ್ಲಿ ಅವಸ್ಥಿತಾಃ= ಆಶ್ರಯಿಸಿರುವ ಪ್ರಜಾಃ=ಪ್ರಜೆಗಳನ್ನು ಅದ್ಯ=ಈಗ ಭವಾನ್ ರಿರಕ್ಷಿಷುಃ ಕಿಲ=ರಕ್ಷಿಸಲಿಚ್ಛಿಸುವಿ- ಯಷ್ಟೇ ! ಸಃ=ಅವನೇ ವೀರಮೂರ್ತಿಃ ಸಮಭೂತ್=ವೀರನಾದ ಪೃಥುರಾಜನಲ್ಲಿ ಪ್ರವಿಷ್ಟನಾದ ರಾಜರಾಜೇಶ್ವರನು ಆಗಿರುವಿ. ಯಃ=ಯಾವನು ಪಯಸಿ=ಧಾನ್ಯ ಮುಂತಾದ ಹಾಲಿಗಾಗಿ ಉಗ್ರಶರಃ=ಬಾಣ ಧರಿಸಿ ಮಾಂ=ನನ್ನನ್ನು ಜಿಘಾಂಸತಿ=ಕೊಲ್ಲಲಿಚ್ಛಿಸುವಿ. ।।೩೬।।

ಈಗ ಪೃಥುವನ್ನೇ ಉದ್ದೇಶಿಸಿ ಸಮರ್ಥರ ವ್ಯಾಪಾರ ತಿಳಿಯಲಾಗದು ಎಂದು ಸಾಮಾನ್ಯವಾಗಿ ಹೇಳುತ್ತ ಪ್ರಾರ್ಥನೆ ಮಾಡುತ್ತ ನಮಸ್ಕರಿಸುವಳು -

**ನೂನಂ ಜನೈರೀಹಿತಮೀಶ್ವರಾಣಾ-**
**ಮಸ್ಮದ್ವಿಧೈಸ್ತದ್ಗುಣಸರ್ಗಮಾಯಯಾ ।**
**ನ ಜ್ಞಾಯತೇ ಮೋಹಿತಚಿತ್ತವೃತ್ತಿಭಿ-**
**ಸ್ತೇಭ್ಯೋ ನಮೋ ವೀರಯಶಸ್ಕರೇಭ್ಯಃ ।।೩೭।।**

।। ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ ಸಪ್ತದಶೋऽಧ್ಯಾಯಃ ।।

ತದ್ಗುಣಸರ್ಗಮಾಯಯಾ=ನಿಮ್ಮಲ್ಲಿರುವ ಐಶ್ವರ್ಯಾದಿಗುಣಗಳಿಗೆ ಜನಕವಾದ ಈಶ್ವರನ ಇಚ್ಛೆಯಿಂದ ಮೋಹಿತಚಿತ್ತವೃತ್ತಿಭಿಃ=ಮೋಹಿತವಾದ ಮನಸ್ಸುಳ್ಳ ಅಸ್ಮದ್ವಿಧೈಃ ಜನೈಃ=ನನ್ನಂಥವರಿಂದ ಈಶ್ವರಾಣಾಂ=ರಾಜರಾದ ನಿಮ್ಮಂಥ ಸಮರ್ಥರ ಈಹಿತಂ= ವ್ಯಾಪಾರವು ನ ಜ್ಞಾಯತೇ=ತಿಳಿಯಲಾರದು ನೂನಂ=ನಿಶ್ಚಯ. ವೀರಯಶಸ್ಕರೇಭ್ಯಃ ತೇಭ್ಯಃ ನಮಃ=ವೀರರ ಕೀರ್ತಿಗೆ ಕಾರಣರಾದ ಅವರಿಗೆ ನಮಸ್ಕಾರವು. ।।೩೭।।

।। ಇಲ್ಲಿಗೆ ಹದಿನೇಳನೇ ಅಧ್ಯಾಯವು ಮುಗಿಯಿತು ।।

# ಅಥ ಅಷ್ಟಾದಶೋऽಧ್ಯಾಯಃ

ಶ್ರೀಹರಿಯ ಅಪರೋಕ್ಷಜ್ಞಾನದಿಂದ ಸ್ವರೂಪಭೂತಗುಣಗಳು ವ್ಯಕ್ತವಾಗುವವು ಎಂಬುದನ್ನು ತಿಳಿಸಲು ಭೂಮಿಯು ಅನೇಕಸಂಪತ್ತನ್ನು ದೋಹನ ಮಾಡಿದಳೆಂದು ಈ ಅಧ್ಯಾಯದಲ್ಲಿ ಹೇಳುವರು. ಮೊದಲಿಗೆ ಪೃಥುವಿನ ಕೋಪಶಮನ ಮಾಡಲು ಅವನನ್ನು ಕುರಿತು ಭೂಮಿಯು ಹೇಳಿದ ಮಾತುಗಳನ್ನು ವಿವರಿಸುವರು -

**ಮೈತ್ರೇಯ ಉವಾಚ -**

**ಇತ್ಥಂ ಪೃಥುಮಭಿಷ್ಟೂಯ ರುಷಾ ಪ್ರಸ್ಫುರಿತಾಧರಮ್ ।**
**ಪುನರಾಹಾವನಿರ್ಭೀತಾ ಸಂಸ್ತಭ್ಯಾತ್ಮಾನಮಾತ್ಮನಾ ॥೧॥**

ಅವನಿಃ=ಭೂಮಿಯು ರುಷಾ=ಸಿಟ್ಟಿನಿಂದ ಪ್ರಸ್ಫುರಿತಾಧರಂ=ನಡಗುವ ತುಟಿಯುಳ್ಳ ಪೃಥುಂ=ಪೃಥುರಾಜನನ್ನು ಇತ್ಥಂ=ಈ ರೀತಿಯಾಗಿ ಅಭಿಷ್ಟೂಯ=ಸ್ತೋತ್ರಮಾಡಿ ಭೀತಾ= ಗಾಬರಿಯಾದರೂ ಆತ್ಮನಾ=ತನ್ನಿಂದಲೇ ಆತ್ಮಾನಂ=ಮನಸ್ಸನ್ನು ಸಂಸ್ತಭ್ಯ=ಸ್ಥಿರಪಡಿಸಿಕೊಂಡು ಪುನಃ=ಮತ್ತೆ ಆಹ=ಹೇಳಿದಳು. ॥೧॥

**ಸನ್ನಿಯಚ್ಛ ವಿಭೋ ಮನ್ಯುಂ ನಿಬೋಧ ಶ್ರಾವಿತಂ ಚ ಮೇ ।**
**ಸರ್ವತಃ ಸಾರಮಾದತ್ತೇ ಯಥಾ ಮಧುಕರೋ ಬುಧಃ ॥೨॥**

ವಿಭೋ=ಸ್ವಾಮಿಯೇ ! ಮನ್ಯುಂ=ಕೋಪವನ್ನು ಸನ್ನಿಯಚ್ಛ=ತಡೆದುಕೋ. ಮೇ ಶ್ರಾವಿತಂ=ನನ್ನ ಮಾತನ್ನು ನಿಬೋಧ=ಕೇಳು. ಬುಧಃ=ಬುದ್ಧಿವಂತನು ಯಥಾ ಮಧುಕರಃ=ಭ್ರಮರದಂತೆ ಸರ್ವತಃ=ಎಲ್ಲದರಿಂದ ಸಾರಂ=ಶ್ರೇಷ್ಠವಾದುದನ್ನು ಆದತ್ತೇ=ಸ್ವೀಕರಿಸುವನು. ॥೨॥

'ನನ್ನಲ್ಲಿ ಅಡಗಿರುವ ಓಷಧಿಗಳನ್ನು ಉಪಾಯದಿಂದ ಸ್ವೀಕರಿಸು' ಎಂದು ಹೇಳುವುದಕ್ಕಾಗಿ 'ಉಪಾಯದಿಂದಲೇ ಎಲ್ಲವೂ ಸಿದ್ಧಿಸುವದು. ಇಲ್ಲವಾದರೆ (ಬೇರೆ ಮಾರ್ಗದಿಂದ) ಸಿದ್ಧಿಸುವುದಿಲ್ಲ' ಎಂದು ಹೇಳುವಳು ಮೂರು ಶ್ಲೋಕಗಳಿಂದ -

**ಅಸ್ಮಿಂಲ್ಲೋಕೇಽಥವಾಽಮುಷ್ಮಿನ್ ಮುನಿಭಿಸ್ತತ್ತ್ವದರ್ಶಿಭಿಃ ।**
**ದೃಷ್ಟಾ ಯೋಗಾಃ ಪ್ರಯುಕ್ತಾಶ್ಚ ಪುಂಸಾಂ ಶ್ರೇಯಃಪ್ರಸಿದ್ಧಯೇ ॥೩॥**

ಅಸ್ಮಿನ್ ಲೋಕೇ=ಇಹಲೋಕದಲ್ಲಿ ಆಗಲೀ, ಅಮುಷ್ಮಿನ್=ಪರಲೋಕದಲ್ಲಿಯಾಗಲೀ ಪುಂಸಾಂ=ಜನರ ಶ್ರೇಯಃಪ್ರಸಿದ್ಧಯೇ=ಪುರುಷಾರ್ಥಪ್ರಾಪ್ತಿಗಾಗಿ ಯೋಗಾಃ=ಉಪಾಯಗಳು ತತ್ವದರ್ಶಿಭಿಃ ಮುನಿಭಿಃ=ತತ್ವಗಳನ್ನು ತಿಳಿದ ಜ್ಞಾನಿಗಳಿಂದ ದೃಷ್ಟಾಃ=ಕಂಡುಕೊಳ್ಳಲ್ಪಟ್ಟಿವೆ. ಪ್ರಯುಕ್ತಾಃ ಚ=ಅನುಷ್ಠಾನ ಮಾಡಲ್ಪಟ್ಟಿವೆ ಕೂಡ.

ಈ ಲೋಕದಲ್ಲಿ ಧಾನ್ಯ ಪಡೆಯಲು ಕೃಷಿ (ಒಕ್ಕಲುತನ) ಮುಂತಾದವು ಉಪಾಯ, ಸ್ವರ್ಗಾದಿಗಳನ್ನು ಹೊಂದಲು ಅಗ್ನಿಹೋತ್ರ ಮುಂತಾದವು ಉಪಾಯವೆಂದು ತಿಳಿದು ಅನುಷ್ಠಾನ ಮಾಡುತ್ತ ಬಂದಿರುವರು ಎಂದು ಭಾವ. ॥೩॥

**ತಾನಾತಿಷ್ಠತಿ ಯಃ ಸಮ್ಯಗುಪಾಯಾನ್ ಪೂರ್ವದರ್ಶಿತಾನ್ ।**
**ಅಪರಃ ಶ್ರದ್ಧಯೋಪೇತ ಉಪಾಯಾನ್ವಿಂದತೇಽಂಜಸಾ ॥೪॥**

ಯಃ=ಯಾವನು ಪೂರ್ವದರ್ಶಿತಾನ್=ಪ್ರಾಚೀನರು ತಿಳಿಸಿದ ಉಪಾಯಾನ್=(ಕೃಷ್ಯಾದಿ) ಸಾಧನಗಳನ್ನು ಶ್ರದ್ಧಯಾ ಉಪೇತಃ=ಆಸ್ತಿಕ್ಯಬುದ್ಧಿಯಿಂದ ಕೂಡಿದ ಅಪರಃ=ನವೀನನು (ಕಿರಿಯನು) ಸಮ್ಯಕ್=ಚೆನ್ನಾಗಿ ಆತಿಷ್ಠತಿ=ಅನುಷ್ಠಾನ ಮಾಡುವನೋ ಸಃ=ಅವನು ಅಂಜಸಾ=ಚೆನ್ನಾಗಿ ಉಪಾಯಾನ್=ಧಾನ್ಯ-ಪುಣ್ಯ ಮುಂತಾದ ಸುಖಸಾಧನಗಳನ್ನು ವಿಂದತೇ=ಹೊಂದುವನು. ॥೪॥

**ತಾನನಾದೃತ್ಯ ಯೋ ವಿದ್ವಾನರ್ಥಾನಾರಭತೇ ಸ್ವಯಮ್ ।**
**ತಸ್ಯ ವ್ಯಭಿಚರಂತ್ಯರ್ಥಾಃ ಪ್ರಾಯಶಶ್ಚ ಪುನಃಪುನಃ ॥೫॥**

ಯಃ ಅವಿದ್ವಾನ್=ಯಾವ ದಡ್ಡನು ತಾನ್=ಪೂರ್ವಜರನ್ನು ಅನಾದೃತ್ಯ=ತಿರಸ್ಕರಿಸಿ ಸ್ವಯಂ ಅರ್ಥಾನ್ ಆರಭತೇ=ತಾನೇ ಪುರುಷಾರ್ಥ ಪಡೆಯಲು ಹೊರಡುವನೋ ತಸ್ಯ=ಅವನಿಗೆ ಪುನಃ ಪುನಃ ಪ್ರಾರಬ್ಧಾಶ್ಚ=ಮತ್ತೆ ಮತ್ತೆ ಪ್ರಯತ್ನಿಸಿದರೂ ಅರ್ಥಾಃ ವ್ಯಭಿಚರಂತಿ=(ಪುರುಷಾರ್ಥವು ವ್ಯಭಿಚರಿತವಾಗುತ್ತದೆ) ಪ್ರಯೋಜನವಾಗಲಾರವು. ॥೫॥

ಈಗ ತಾನು ಔಷಧಿಗಳನ್ನು ನುಂಗಲು ಕಾರಣ ಏನು ಎಂದು ಹೇಳುತ್ತ ಅವುಗಳನ್ನು ಪಡೆಯಲು ಉಪಾಯವನ್ನು ಹೇಳುವಳು ಮುಂದಿನ ಆರು ಶ್ಲೋಕಗಳಿಂದ -

**ಪುರಾ ಸೃಷ್ಟಾಶ್ಚೌಷಧಯೋ ಬ್ರಾಹ್ಮಣಾಯ ವಿಶಾಂಪತೇ ।**
**ಭುಜ್ಯಮಾನಾ ಮಯಾ ದೃಷ್ಟಾ ಅಸದ್ಭಿರಧೃತವ್ರತೈಃ ॥೬॥**

ವಿಶಾಂಪತೇ=ರಾಜನೇ ! ಬ್ರಾಹ್ಮಣಾಯ=ಬ್ರಾಹ್ಮಣರಿಗಾಗಿ (ಯಜ್ಞಾದಿಗಳನ್ನು ಮಾಡಲು) ಔಷಧಯಃ=ಧಾನ್ಯಾದಿಗಳು ಪುರಾ ಸೃಷ್ಟಾಃ=ಹಿಂದೆ ಬ್ರಹ್ಮದೇವರಿಂದ ಹುಟ್ಟಿಸಲ್ಪಟ್ಟವು. ಅಧೃತವ್ರತೈಃ=ಯಜ್ಞಾದಿಗಳನ್ನು ಮಾಡದಿರುವ ಅಸದ್ಭಿಃ=ದುಷ್ಟರಿಂದ ಭುಜ್ಯಮಾನಾಃ=ತಿನ್ನಲ್ಪಡುವವುಗಳಾಗಿ ಮಯಾ=ನನ್ನಿಂದ ದೃಷ್ಟಾಃ=ನೋಡಲ್ಪಟ್ಟವು. ॥೬॥

**ಅಪಾಲಿತಾ ನಾದೃತಾಸ್ತಾ ಭವದ್ಭಿರ್ಲೋಕಪಾಲಕೈಃ ।**
**ಚೌರೀಭೂತೇಽಥ ಲೋಕೇಽಹಂ ಯಜ್ಞಾರ್ಥೇಽಗ್ರಸಮೌಷಧೀಃ ॥೭॥**

ಲೋಕಪಾಲಕೈಃ=ಲೋಕವನ್ನು ರಕ್ಷಿಸಬೇಕಾದ ಭವದ್ಭಿಃ=ನಿಮ್ಮಂಥ ರಾಜರಿಂದ ಅಪಾಲಿತಾಃ=ಕಳ್ಳರನ್ನು ನಿವಾರಿಸದಿದ್ದದ್ದರಿಂದ ರಕ್ಷಿಸಲ್ಪಡಲಿಲ್ಲ. ಅನಾದೃತಾಃ=ಯಜ್ಞಾದಿಗಳನ್ನು ಮಾಡದೇ ಇದ್ದದ್ದರಿಂದ ಆದರಿಸಲ್ಪಡಲಿಲ್ಲ. ಅಥ=ಆದ್ದರಿಂದ ಲೋಕೇ=ಜನರೆಲ್ಲ ಚೌರೀಭೂತೇ=ಕಳ್ಳರಾಗಲು, ಯಜ್ಞಾರ್ಥೇ=ಮುಂದೆ ಒಳ್ಳೆಯ ರಾಜರು ಬಂದಾಗ ಮತ್ತೆ ಯಜ್ಞಾದಿಗಳು ನಡೆಯುವದಕ್ಕೋಸ್ಕರ ಔಷಧೀಃ ಅಗ್ರಸಂ=ಧಾನ್ಯಗಳನ್ನು ನುಂಗಿದೆನು. ॥೭॥

ಹಾಗಾದರೆ ಅವುಗಳನ್ನು ಈಗ ಕೊಡು ಎಂದರೆ ಹೇಳುವಳು -

**ನೂನಂ ತಾ ವೀರುಧಃ ಕ್ಷೀಣಾ ಮಯಿ ಕಾಲೇನ ಭೂಯಸಾ ।**
**ತತ್ರ ದೃಷ್ಟೇನ ಯೋಗೇನ ಭವಾನಾದಾತುಮರ್ಹತಿ ॥೮॥**

ತಾಃ ವೀರುಧಃ=ನಾನು ನುಂಗಿದ ಆ ಬಳ್ಳಿಗಳು ಭೂಯಸಾ ಕಾಲೇನ=ಬಹಳ ಕಾಲ ಗತಿಸಿದ್ದರಿಂದ ಮಯಿ=ನನ್ನಲ್ಲಿ ಕ್ಷೀಣಾಃ=ಜೀರ್ಣವಾಗಿವೆ (ಹಾಲಾಗಿ ಪರಿಣಮಿಸಿವೆ). ತತ್ರ=ಅದನ್ನು ಪಡೆಯಲು ದೃಷ್ಟೇನ ಯೋಗೇನ=ಶಾಸ್ತ್ರದಲ್ಲಿ ಹೇಳಿದ ಉಪಾಯದಿಂದ ಭವಾನ್=ನೀನು ಆದಾತುಂ ಅರ್ಹತಿ=ಸ್ವೀಕರಿಸಲು ಯೋಗ್ಯನಾಗಿರುವಿ. ॥೮॥

ಶಾಸ್ತ್ರದಲ್ಲಿ ಹೇಳಿದ ಉಪಾಯವನ್ನು ತಿಳಿಸುವಳು -

**ವತ್ಸಂ ಕಲ್ಪಯ ಮೇ ವೀರ ಯೇನಾಹಂ ವತ್ಸಲಾ ತವ ।**
**ಧೋಕ್ಷ್ಯೇ ಕ್ಷೀರಮಯಾನ್ ಕಾಮಾನನುರೂಪಂ ಚ ದೋಹನಮ್ ॥೯॥**

ಹೇ ವೀರ=ಸಮರ್ಥನಾದ ಪೃಥುವೇ ! ಮೇ=ನನಗೆ ವತ್ಸಂ=ಕರುವನ್ನು ಕಲ್ಪಯ= ಸಂಪಾದಿಸು. ಚ=ಮತ್ತು ಅನುರೂಪಂ=ಯೋಗ್ಯವಾದ ದೋಹನಂ ಚ (ದೋಗ್ಧಾರಂ)= ಪಾತ್ರವನ್ನೂ ಮತ್ತು ಹಾಲು ಕರೆಯುವವನನ್ನೂ ಸಂಪಾದಿಸು. ಯೇನ=ಯಾವ ಇವುಗಳನ್ನು ಸಂಪಾದಿಸಿದ್ದರಿಂದ ವತ್ಸಲಾ=ಕರುವಿನ ಮೇಲೆ ಪ್ರೀತಿಯುಳ್ಳ ನಾನು ತವ=ನಿನಗೆ ಕ್ಷೀರಮಯಾನ್ ಕಾಮಾನ್=ಹಾಲಿನ ರೂಪದಲ್ಲಿ ಎಲ್ಲ ಅಭೀಷ್ಟಗಳನ್ನು ಧೋಕ್ಷ್ಯೇ=ಕರೆಯುವೆನು. ॥೯॥

**ದೋಗ್ಧಾರಂ ಚ ಮಹಾಬಾಹೋ ಭೂತಾನಾಂ ಭೂತಭಾವನ ।**
**ಅನ್ನಮೀಪ್ಸಿತಮೂರ್ಜಸ್ವದ್ಭಗವಾನ್ ವಾಂಛತೇ ಯದಿ ॥೧೦॥**

ಮಹಾಬಾಹೋ=ಬಲಶಾಲಿಯೇ ! ಭೂತಭಾವನ=ಪ್ರಾಣಿಗಳನ್ನು ರಕ್ಷಿಸುವವನೇ ! ಯದಿ=ಒಂದು ವೇಳೆ ಭವಾನ್=ನೀನು ಭೂತಾನಾಂ=ಪ್ರಾಣಿಗಳಿಗೆ ಈಪ್ಸಿತಂ=ಇಷ್ಟವಾದ ಊರ್ಜಸ್ವತ್=ಬಲಪ್ರದವಾದ (ಪ್ರಾಣಧಾರಣಶಕ್ತಿಪ್ರದವಾದ) ಅನ್ನಂ=ಆಹಾರವನ್ನು ವಾಂಛತೇ=ಇಚ್ಛಿಸುವಿಯಾದರೆ, ಹಿಂದೆ ಹೇಳಿದಂತೆ ಕರು, ಪಾತ್ರ, ಕರೆಯುವ ವ್ಯಕ್ತಿಗಳನ್ನು ಸಂಪಾದಿಸು. ॥೧೦॥

ಬೆಳೆ ಬೆಳೆಯಬೇಕಾಗದರೆ ನೀರು ಮುಖ್ಯಸಾಧನವಾಗಿದೆ. ನಾನು ಹೀಗೆಯೇ ವಿಷಮವಾಗಿದ್ದರೆ ದೇವತೆಗಳು ಮಳೆಗರೆದರೂ ನೀರು ಸಮವಾಗಿ ಹರಡುವದಿಲ್ಲ, ಹರಿದು ಹೋಗಿಬಿಡುವ ಕಾರಣ ನೀರು ನಿಲ್ಲುವಂತೆ ಸಮ ಮಾಡು ಎಂದು ಹೇಳುವಳು-

**ಸಮಾಂ ಚ ಕುರು ಮಾಂ ರಾಜನ್ ದೇವವೃಷ್ಟಂ ಯಥಾ ಪಯಃ ।**
**ಅಪರ್ತಾವಪಿ ಭದ್ರಂ ತೇ ಉಪಾವರ್ತೇತ ಮಾಂ ವಿಭೋ ॥೧೧॥**

ವಿಭೋ ರಾಜನ್=ಸಮರ್ಥನಾದ ರಾಜನೇ ! ದೇವವೃಷ್ಟಂ ಪಯಃ=ಇಂದ್ರನಿಂದ ಸುರಿಸಲ್ಪಟ್ಟ ನೀರು ಅಪರ್ತಾವಪಿ=ವರ್ಷಾಋತು ಹೋದಮೇಲೆಯೂ ಯಥಾ ಮಾಂ ಉಪಾವರ್ತೇತ=ನನ್ನಲ್ಲಿ ಉಳಿಯುವಂತೆ ಮಾಂ ಸಮಾಂ ಕುರು=ನನ್ನನ್ನು ಸಮವಾಗಿ ಮಾಡು. ತೇ ಭದ್ರಂ=ನಿನಗೆ ಕಲ್ಯಾಣವಾಗಲಿ. ॥೧೧॥

**ಇತಿ ಪ್ರಿಯಹಿತಂ ವಾಕ್ಯಂ ಭುವ ಆದಾಯ ಭೂಪತಿಃ ।**
**ತಥಾ ಚಕಾರ ಸರ್ವತ್ರ ಸಾರಮಾದದತೇ ಬುಧಾಃ ॥೧೨॥**

ಭೂಪತಿಃ=ರಾಜನು ಇತಿ=ಈ ರೀತಿಯಾದ ಭುವಃ=ಭೂದೇವಿಯಿಂದ ಪ್ರಿಯಹಿತಂ=ಪ್ರಿಯ(ಪಥ್ಯ)ವಾದ ಹಿತ(ಹೃದಯಂಗಮ)ವಾದ ಅಥವಾ ಕಿವಿಗೆ ಇಂಪಾದ ವಾಕ್ಯಂ=ಮಾತನ್ನು ಆದಾಯ=ಸ್ವೀಕರಿಸಿ ತಥಾ=ಅವಳು ಹೇಳಿದಂತೆ ಚಕಾರ=ಮಾಡಿದನು.

ಬುಧಾಃ=ಜ್ಞಾನಿಗಳು ಸರ್ವತ್ರ=ಎಲ್ಲೆಡೆ ಸಾರಂ=ಶ್ರೇಷ್ಠವಾದದ್ದನ್ನು (ಯೋಗ್ಯವಾದದ್ದನ್ನು) ಆದದತೇ=ಸ್ವೀಕರಿಸುವರು.

ಮೊದಲು ಭೂಮಿಯ ಮೇಲೆ ಕ್ರುದ್ಧನಾದವನು ಅವಳ ಮಾತನ್ನು ಹೇಗೆ ಗ್ರಹಿಸಿದನು ? ಎಂದರೆ, ಸಾರಗ್ರಹಣ ಮಾಡುವದು ಬುಧರ ಸ್ವಭಾವ. ಆದ್ದರಿಂದ ಅವಳ ಮಾತನ್ನು ಗ್ರಹಿಸಿದನು ಎಂದು ಭಾವ. ಇಲ್ಲವಾದರೆ ''ನೀನು ನುಂಗಿರುವಿ, ನೀನೇ ಹೊರತೆಗೆದುಕೊಡು. ಇಲ್ಲವಾದರೆ ಕೊಲ್ಲುವೆನು'' ಎಂದು ಸಿಟ್ಟು ಮಾಡುತ್ತಿದ್ದನು. ಹಾಗೆ ಮಾಡಲಿಲ್ಲವೆಂದು ಅಭಿಪ್ರಾಯ. ।।೧೨।।

**ವತ್ಸಂ ಕೃತ್ವಾ ಮನುಂ ಪಾಣಾವದುಹತ್ಸಕಲೌಷಧೀಃ ।**
**ತತೋಽಪರೇ ಯಥಾಕಾಮಂ ದುದುಹುಃ ಪೃಥುಭಾವಿತಾಮ್ ।।೧೩।।**

ಮನುಂ=ಸ್ವಾಯಂಭುವ ಮನುವನ್ನು ವತ್ಸಂ ಕೃತ್ವಾ=ಕರುವನ್ನು ಮಾಡಿ ಪಾಣೌ=ತನ್ನ ಕೈಗಳೆಂಬ ಪಾತ್ರೆಯಲ್ಲಿ ಸಕಲೌಷಧೀಃ=ಎಲ್ಲ ಧಾನ್ಯಗಳನ್ನು ಕ್ಷೀರರೂಪದಲ್ಲಿ ಅದುಹತ್=ಪೃಥುರಾಜನು ತಾನೇ ಕರೆದುಕೊಂಡನು. ಪೃಥುಭಾವಿತಾಂ=ಪೃಥುವಿನಿಂದ ಗೌರವಿಸಲ್ಪಟ್ಟ ಗೋರೂಪಳಾದ ಭೂಮಿಯನ್ನು ಅಪರೇ=ಬೇರೆಯವರು ತತಃ=ನಂತರ ಯಥಾಕಾಮಂ=ತಮ್ಮ ಇಷ್ಟದಂತೆ ದುದುಹುಃ=ಕರೆದರು.

ಇಲ್ಲಿ ಯಾರು ಹಾಲು ಕರೆಯುವರೋ ಅವರಲ್ಲಿ ಶ್ರೇಷ್ಠರಾದವರೇ ಕರು ಆಗುವರು. ಅವರಲ್ಲಿ ಭೂಮಿಗೆ ವಾತ್ಸಲ್ಯವಿರುವದು. ಗೋರೂಪಳಾದ ಪೃಥ್ವಿಯು ತನಗೆ ಪ್ರಿಯವಾದ ಕರುವಿನ ಸಂಬಂಧವಾದಾಗ ಏನು ಹಾಲು ಹೊರಡುವದೋ ಅದೇ ಅವರವರಿಗೆ ಬೇಕಾದ ವಸ್ತುವಾಗಿ ಪರಿಣಮಿಸುವದು ಎಂದು ತಿಳಿಯಬೇಕು. ಆದ್ದರಿಂದಲೇ ''ಕ್ಷೀರಮಯಾನ್ ಕಾಮಾನ್'' (ಕ್ಷೀರವಿಕಾರವೆಂದರ್ಥ) ಎಂದಿದ್ದಾರೆ. ।।೧೩।।

**ಋಷಯೋ ದುದುಹುರ್ದೇವೀಮಿಂದ್ರಿಯೇಷ್ವಥ ಸತ್ತಮಾಃ ।**
**ವತ್ಸಂ ಬೃಹಸ್ಪತಿಂ ಕೃತ್ವಾ ಪಯಶ್ಛಂದೋಮಯಂ ಶುಚಿ ।।೧೪ ।।**

ಸತ್ತಮಾಃ=ಶ್ರೇಷ್ಠರಾದ ಋಷಯಃ=ಮುನಿಗಳು ಬೃಹಸ್ಪತಿಂ=ಬೃಹಸ್ಪತ್ಯಾಚಾರ್ಯರನ್ನು ವತ್ಸಂ ಕೃತ್ವಾ=ಕರುವಾಗಿ ಮಾಡಿಕೊಂಡು ಇಂದ್ರಿಯೇಷು=ಇಂದ್ರಿಯಗಳೆಂಬ ಪಾತ್ರೆಯಲ್ಲಿ ಶುಚಿ=ಶುದ್ಧವಾದ ಛಂದೋಮಯಂ=ವೇದರೂಪವಾದ ಪಯಃ=ಹಾಲನ್ನು ದೇವೀಂ ದುದುಹುಃ=ಭೂಮಿಯನ್ನು ಕರೆದರು.

ವಾಕ್-ಮನ-ಶ್ರೋತ್ರೇಂದ್ರಿಯಗಳು ವೇದಧಾರಕಗಳಾದ್ದರಿಂದ, ಇತರ ಇಂದ್ರಿಯಗಳು ಶುದ್ಧಿಸಂಪಾದಕಗಳಾದ್ದರಿಂದ ಅವುಗಳನ್ನು ಪಾತ್ರೆಯನ್ನಾಗಿ ಮಾಡಿರುವರು. ವೇದದ ಕ್ರಮವು ಜನ್ಯವಾದ್ದರಿಂದ ''ಹೊಸದಾಗಿ ಸಂಪಾದಿಸುವದೇನು'' ಎಂಬ ಕುಚೋದ್ಯಕ್ಕೆ ಅವಕಾಶವಿಲ್ಲ. (ಕಿವಿಯಿಂದ ಕೇಳಿ ಬಾಯಿಯಿಂದ ಉಚ್ಚರಿಸಿ ಮನಸ್ಸಿನಲ್ಲಿ ವೇದಗಳನ್ನು ಧರಿಸಬೇಕಷ್ಟೇ)।।೧೪।।

**ಕೃತ್ವಾ ವತ್ಸಂ ಸುರಗಣಾ ಇಂದ್ರಂ ಸೋಮಮದೂದುಹನ್ ।**
**ಹಿರಣ್ಮಯೇನ ಪಾತ್ರೇಣ ವೀರ್ಯಮೋಜೋ ಬಲಂ ಪಯಃ ।।೧೫।।**

ಸುರಗಣಾಃ=ದೇವತೆಗಳ ಸಮೂಹವು ಇಂದ್ರಂ ವತ್ಸಂ ಕೃತ್ವಾ=ಇಂದ್ರನನ್ನು ಕರುವನ್ನಾಗಿ ಮಾಡಿ ಹಿರಣ್ಮಯೇನ ಪಾತ್ರೇಣ=ಚಿನ್ನದ ಪಾತ್ರೆಯಲ್ಲಿ ಸೋಮಂ=ಸೋಮರಸವನ್ನು ವೀರ್ಯಂ=ಪರಾಕ್ರಮವನ್ನು ಓಜಃ=ಅವಷ್ಟಂಬಶಕ್ತಿಯನ್ನು ಬಲಂ=ಶಾರೀರಿಕಸಾಮರ್ಥ್ಯವನ್ನು (ಆಹಾರವಿಲ್ಲದೇ ಇದ್ದರೂ ವ್ಯಾಪಾರ ಮಾಡುವ ಶಕ್ತಿಯನ್ನು) ಇವುಗಳ ರೂಪವಾದ ಪಯಃ=ಹಾಲನ್ನು ದುದುಹುಃ=ಕರೆದರು.

**ಭಾಗವತ ತಾತ್ಪರ್ಯ -**

ಇಲ್ಲಿ ಪೃಥಿವೀದೋಹನ ಮಾಡಿದ ಮೇಲೆ ದೇವತೆಗಳಿಗೆ ವೀರ್ಯಾದಿಗುಣಗಳ ಪ್ರಾಪ್ತಿಯು ತಿಳಿಯುತ್ತದೆ. ಆದರೆ ಈ ವೀರ್ಯಾದಿಗುಣಪ್ರಾಪ್ತಿಯು ಸ್ವರೂಪಭೂತಗುಣ-ವಿಷಯಕವಾದದ್ದಲ್ಲ. ಕಿಂತು ಬಾಹ್ಯದೇಹನಿಮಿತ್ತಕಗುಣವಿಷಯಕವಾದದ್ದು ಎಂಬುದನ್ನು ಪ್ರಮಾಣದಿಂದಲೇ ಹೇಳುವರು -

**ಗುಣಾಃ ಸ್ವರೂಪಭೂತಾಶ್ಚ ಬಾಹ್ಯಾಶ್ಚೇತಿ ದ್ವಿಧಾ ಮತಾಃ ।**
**ಸ್ವರೂಪಭೂತಾ ವ್ಯಜ್ಯಂತೇ ಹರೇರ್ಬಾಹ್ಯಾನ್ ದುಹುಃ ಪರೇ ।। ಇತಿ ಬ್ರಾಹ್ಮೇ ।।**

ವೀರ್ಯಾದಿಗುಣಗಳು ಸ್ವರೂಪಭೂತವಾದವು ಮತ್ತು ಬಾಹ್ಯವಾದುವು ಹೀಗೆ ಎರಡು ವಿಧವಾಗಿವೆ. ಮುಕ್ತಿಯಲ್ಲಿ ಶ್ರೀಹರಿಯ ಪ್ರಸಾದದಿಂದ ಸ್ವರೂಪಗುಣಗಳು ವ್ಯಕ್ತವಾಗುವವು. ಬಾಹ್ಯಗುಣರೂಪವಾದ ಹಾಲನ್ನು ದೇವತೆಗಳು ಕರೆದರೆಂದು ಭಾವ. ।।೧೫।।

**ದೈತೇಯಾ ದಾನವಾ ವತ್ಸಂ ಪ್ರಹ್ಲಾದಮಸುರರ್ಷಭಮ್ ।**
**ವಿಧಾಯ ದುದುಹುಃ ಕ್ಷೀರಮಯಃಪಾತ್ರೇ ಸುರಾಸವಮ್ ।।೧೬।।**

ದೈತೇಯಾಃ ದಾನವಾಃ=ದೈತ್ಯ-ದಾನವರು ಅಸುರರ್ಷಭಂ=ದೈತ್ಯರಲ್ಲಿ ಶ್ರೇಷ್ಠನಾದ ಪ್ರಹ್ಲಾದಂ ವತ್ಸಂ ವಿಧಾಯ=ಪ್ರಹ್ಲಾದನನ್ನು ಕರು ಮಾಡಿಕೊಂಡು ಅಯಃಪಾತ್ರೇ=ಕಬ್ಬಿಣದ

ಪಾತ್ರೆಯಲ್ಲಿ ಸುರಾಸವಂ ಪಯಃ=ಮದ್ಯವೆಂಬ ಮಧುರೂಪವಾದ ಹಾಲನ್ನು ದುದುಹುಃ=ಕರೆದರು.

**ಭಾಗವತ ತಾತ್ಪರ್ಯ -**

ಏಳನೇ ವೈವಸ್ವತ ಮನ್ವಂತರದಲ್ಲಿ ಜನಿಸಿದ ಪ್ರಹ್ಲಾದನು ಒಂದನೆಯ ಸ್ವಾಯಂಭುವ ಮನ್ವಂತರದಲ್ಲಿ ಇರಲು ಹೇಗೆ ಸಾಧ್ಯ ? ಎಂಬ ಶಂಕೆಯನ್ನು ಪ್ರಮಾಣದಿಂದಲೇ ಪರಿಹರಿಸುವರು -

ಪ್ರತಿಮನ್ವಂತರಂ ಪ್ರಾಯಃ ಪ್ರಹ್ಲಾದಾದ್ಯಾ ಬಭೂವಿರೇ । ಇತಿ ಚ ॥

ಎಲ್ಲ ಮನ್ವಂತರಗಳಲ್ಲಿ (ಬಹುಶಃ) ಪ್ರಹ್ಲಾದ ಮುಂತಾದವರು ಜನಿಸುವರು. ಕಾರಣ ಸ್ವಾಯಂಭುವ ಮನ್ವಂತರದಲ್ಲಿಯೂ ಪ್ರಹ್ಲಾದನು ಜನಿಸಿದ್ದರಿಂದ ಶಂಕೆಗೆ ಅವಕಾಶವಿಲ್ಲ

**ಗಂಧರ್ವಾಪ್ಸರಸೋಽಧುಕ್ಷನ್ ಪಾತ್ರೇ ಪದ್ಮಮಯೇ ಪಯಃ ।**
**ವತ್ಸಂ ವಿಶ್ವಾವಸುಂ ಕೃತ್ವಾ ಗಾಂಧರ್ವಂ ಮಧು ಶೌಭಗಮ್ ॥೧೭॥**

ಗಂಧರ್ವಾಪ್ಸರಸಃ=ಗಂಧರ್ವರು ಅಪ್ಸರೆಯರು ವಿಶ್ವಾವಸುಂ ವತ್ಸಂ ಕೃತ್ವಾ= ವಿಶ್ವಾವಸುವನ್ನು ಕರು ಮಾಡಿಕೊಂಡು ಪದ್ಮಮಯೇ ಪಾತ್ರೇ=ಕಮಲವೆಂಬ ಪಾತ್ರೆಯಲ್ಲಿ ಗಾಂಧರ್ವಂ=ಗಾಯನವನ್ನು, ಮಧು=ಶ್ರವಣಸುಖಕರವಾದ ಸೌಭಗಂ=ಸೌಭಾಗ್ಯವನ್ನು ಅಧುಕ್ಷನ್=ಕರೆದರು. ॥೧೭॥

**ವತ್ಸೇನ ಪಿತರೋಽರ್ಯಮ್ಣಾ ಕವ್ಯಂ ಕ್ಷೀರಮಧುಕ್ಷತ ।**
**ಆಮಪಾತ್ರೇ ಮಹಾಭಾಗ ಶ್ರದ್ಧಯಾ ಶ್ರಾದ್ಧದೇವತಾಃ ॥೧೮॥**

ಶ್ರಾದ್ಧದೇವತಾಃ=ಶ್ರಾದ್ಧಕರ್ಮಕ್ಕೆ ದೇವತೆಗಳಾದ ಪಿತರಃ=ಪಿತೃಗಳು ಶ್ರದ್ಧಯಾ= ಶ್ರದ್ಧೆಯಿಂದ ಮಹಾಭಾಗ=ವಿದುರನೇ ! ಅರ್ಯಮ್ಣಾ ವತ್ಸೇನ=ಅರ್ಯಮಾ ಎಂಬ ಕರುವಿಂದ ಕವ್ಯಂ=ಪಿತೃಗಳಿಗೆ ಬೇಕಾದ ಅನ್ನವೆಂಬ ಕ್ಷೀರಂ=ಹಾಲನ್ನು ಆಮಪಾತ್ರೇ= ಹಸಿಗಡಿಗೆಯಲ್ಲಿ ಅಧುಕ್ಷತ=ಕರೆದರು. ॥೧೮॥

**ಪ್ರಕಲ್ಪ್ಯ ವತ್ಸಂ ಕಪಿಲಂ ಸಿದ್ಧಾಃ ಸಂಕಲ್ಪನಾಮಯೀಮ್ ।**
**ಸಿದ್ಧಿಂ ನಭಸಿ ವಿದ್ಯಾಂ ಚ ಯೇ ಚ ವಿದ್ಯಾಧರಾದಯಃ ॥೧೯॥**

ಸಿದ್ಧಾಃ=ಸಿದ್ಧರು ಕಪಿಲಂ=ಕಪಿಲನನ್ನು ವತ್ಸಂ ಪ್ರಕಲ್ಪ್ಯ=ಕರುವಾಗಿ ಮಾಡಿಕೊಂಡು ಸಂಕಲ್ಪನಾಮಯೀಂ ಸಿದ್ಧಿಂ=ಇಚ್ಛೆ ಮಾಡುವ ಮಾತ್ರದಿಂದ ಅಭೀಷ್ಟಗಳು ನೆರವೇರುವಂತಹ

ಅಣಿಮಾದಿ ಸಿದ್ಧಿಯನ್ನು ಮತ್ತು ಯೇ ಚ ವಿದ್ಯಾಧರಾದಯಃ ತೇ=ಯಾವ ವಿದ್ಯಾಧರಾದಿ-ಗಳಿರುವರೋ ಅವರೂ ಸಹ, ನನಗೆ ವತ್ಸವನ್ನು ಕಲ್ಪಿಸಿ, ನಭಸಿ ವಿದ್ಯಾಂ=ಆಕಾಶದಲ್ಲಿ ಸಂಚಾರ ಮಾಡುವ ವಿದ್ಯೆಯನ್ನು ಅಧುಕ್ಷತ=ಹಾಲಿನ ರೂಪದಲ್ಲಿ ಕರೆದರು. ।।೧೯।।

**ಅನ್ಯೇ ಚ ಮಾಯಿನೋ ಮಾಯಾಮಂತರ್ಧಾನಗತಾತ್ಮನಾ ।**
**ಮಯಂ ಪ್ರಕಲ್ಪ್ಯ ವತ್ಸತ್ವೇ ದುದುಹುರ್ಧಾರಣಾಮಯೀಮ್ ।।೨೦।।**

ಅನ್ಯೇ ಮಾಯಿನಃ=ಇನ್ನಿತರ ಮಾಯಾವಿಗಳು ಮಯಂ ವತ್ಸತ್ವೇ ಪ್ರಕಲ್ಪ್ಯ=ಮಯನನ್ನು ಕರುವಾಗಿ ಮಾಡಿಕೊಂಡು ಅಂತರ್ಧಾನಗತಾತ್ಮನಾ=ತಮಗೆ ಅದೃಶ್ಯತ್ವವಿರಬೇಕೆಂಬ ಮನಸ್ಸಿನಿಂದ ಧಾರಣಾಮಯೀಂ=ಚಿಂತಾಮಾತ್ರಸಾಧ್ಯವಾದ ಮಾಯಾಂ=ಮಾಯಾ-ಸೃಷ್ಟಿಯನ್ನು ದುದುಹುಃ=ದೋಹನ ಮಾಡಿದರು. ಸಿದ್ಧರು ವಿದ್ಯಾಧರರು ಮಾಯಿಗಳು ಎಲ್ಲರಿಗೂ ಆಮಪಾತ್ರವೇ ಎಂದು ತಿಳಿಯಬೇಕು. ।।೨೦।।

**ಯಕ್ಷರಕ್ಷಾಂಸಿ ಭೂತಾನಿ ಪಿಶಾಚಾಃ ಪಿಶಿತಾಶನಾಃ ।**
**ಭೂತೇಶವತ್ಸಾ ದುದುಹುಃ ಕಪಾಲೇ ಕ್ಷತಜಾಸವಮ್ ।।೨೧।।**

ಪಿಶಿತಾಶನಾಃ=ಮಾಂಸವೇ ಆಹಾರವಾಗಿ ಉಳ್ಳ ಭೂತೇಶವತ್ಸಾಃ=ರುದ್ರದೇವರೇ (ಭೈರವ) ಕರುವಾಗಿ ಉಳ್ಳ ಯಕ್ಷರಕ್ಷಾಂಸಿ=ಯಕ್ಷರು ರಾಕ್ಷಸರು ಭೂತಾನಿ=ಭೂತಗಳು ಪಿಶಾಚಾಃ=ಪಿಶಾಚಿಗಳು ಕಪಾಲೇ=ತಲೆಬುರುಡೆಯಲ್ಲಿ ಕ್ಷತಜಾಸವಂ=ಗಾಯದಿಂದುಟಾಗುವ ರಕ್ತವೆಂಬ ಮಧುವನ್ನು ದುದುಹುಃ=ಕರೆದರು. ।।೨೧।।

**ತಥಾಽಹಯೋ ದಂದಶೂಕಾಃ ಸರ್ಪಾ ನಾಗಾಶ್ಚ ತಕ್ಷಕಮ್ ।**
**ವತ್ಸಂ ವಿಧಾಯ ದುದುಹುರ್ಬಿಲಪಾತ್ರೇ ವಿಷಂ ಪಯಃ ।।೨೨।।**

ತಥಾ=ಹಾಗೂ ಅಹಯಃ=ಹೆಡೆಯಿಲ್ಲದ ಹಾವುಗಳು ಸರ್ಪಾಃ=ಹೆಡೆಯಿರುವ ಹಾವುಗಳು ನಾಗಾಃ=ಕದ್ರುವಿನ ಸಂತತಿಯಲ್ಲಿ ಜನಿಸಿದ ಹಾವುಗಳು ದಂದಶೂಕಾಃ= ಅವಾಂತರ ಜಾತಿಯ ಹಾವು ಅಥವಾ ಕಚ್ಚುವ ಪ್ರಾಣಿಗಳು ತಕ್ಷಕಂ=ತಕ್ಷಕನೆಂಬ ಹಾವಿನ ರಾಜನನ್ನು ವತ್ಸಂ ವಿಧಾಯ=ಕರುವಾಗಿ ಮಾಡಿಕೊಂಡು ಬಿಲಪಾತ್ರೇ=ತಮ್ಮ ಮುಖವೆಂಬ ಪಾತ್ರೆಯಲ್ಲಿ ವಿಷಂ ಪಯಃ=ವಿಷರೂಪಹಾಲನ್ನು ದುದುಹುಃ=ಕರೆದರು. ।।೨೨।।

**ಪಶವೋ ಯವಸಂ ಕ್ಷೀರಂ ವತ್ಸಂ ಕೃತ್ವಾ ಚ ಗೋವೃಷಮ್ ।**
**ಅರಣ್ಯಪಾತ್ರೇ ಚಾಧುಕ್ಷನ್ ಮೃಗೇಂದ್ರೇಣ ಚ ದಂಷ್ಟ್ರಿಣಃ ।।೨೩।।**

ಪಶವಃ=ಪಶುಗಳು ಗೋವೃಷಂ=ನಂದಿಕೇಶ್ವರನನ್ನು ವತ್ಸಂ ಕೃತ್ವಾ=ಕರುವನ್ನಾಗಿಸಿ ಅರಣ್ಯಪಾತ್ರೇ=ಅಡವಿ ಎಂಬ ಪಾತ್ರೆಯಲ್ಲಿ ಯವಸಂ=ಹುಲ್ಲೆಂಬ ಕ್ಷೀರಂ=ಹಾಲನ್ನು ಅಧುಕ್ಷನ್=ಕರೆದವು. ಮೃಗೇಂದ್ರೇಣ=ಸಿಂಹವೆಂಬ ಕರುವಿನಿಂದ ದಂಷ್ಟ್ರಿಣಃ=ಕೋರೆಹಲ್ಲುಳ್ಳ (ಮುಂದಿನ ಶ್ಲೋಕದಲ್ಲಿ ಅನ್ವಯ)।।೨೩।।

**ಕ್ರವ್ಯಾದಾಃ ಪ್ರಾಣಿನಃ ಕ್ರವ್ಯಂ ದುದುಹುಃ ಸ್ವಕಲೇವರೇ ।**
**ಸುಪರ್ಣವತ್ಸಾ ವಿಹಗಾಶ್ಚರಂ ಚಾಚರಮೇವ ಚ ।।೨೪।।**

ಕ್ರವ್ಯಾದಾಃ=ಮಾಂಸ ತಿನ್ನುವ ಪ್ರಾಣಿನಃ=ಪ್ರಾಣಿಗಳು ಸ್ವಕಲೇವರೇ=ತಮ್ಮ ದೇಹವೆಂಬ ಪಾತ್ರೆಯಲ್ಲಿ ಕ್ರವ್ಯಂ=ಮಾಂಸವನ್ನೂ, ಸುಪರ್ಣವತ್ಸಾಃ=ಗರುಡನೇ ಕರುವಾಗಿವುಳ್ಳ ವಿಹಗಾಃ=ಪಕ್ಷಿಗಳು ಚರಂ=ಹುಳು ಮುಂತಾದವನ್ನು ಚ=ಮತ್ತು ಅಚರಂ=ಹಣ್ಣು ಗಡ್ಡೆ ಮುಂತಾದವನ್ನು ದುದುಹುಃ=ಕರೆದರು. ।।೨೪।।

**ವಟವತ್ಸಾ ವನಸ್ಪತಯಃ ಪೃಥಗ್ರಸಮಯಂ ಪಯಃ ।**
**ಗಿರಯೋ ಹಿಮವದ್ವತ್ಸಾ ನಾನಾಧಾತೂನ್ ಸ್ವಸಾನುಷು ।।೨೫।।**

ವಟವತ್ಸಾಃ=ಆಲದ ಮರವೇ ಕರುವಾಗಿವುಳ್ಳ ವನಸ್ಪತಯಃ=ಗಿಡಗಳು ಪೃಥಗ್ರಸಮಯಂ ಪಯಃ=ವಗರು, ಕಹಿ, ಸಿಹಿ ಮುಂತಾದ ರಸವೆಂಬ ಹಾಲನ್ನು, ಹಿಮವದ್ವತ್ಸಾಃ= ಹಿಮವತ್ಪರ್ವತವೇ ಕರುವಾಗಿವುಳ್ಳ ಗಿರಯಃ=ಪರ್ವತಗಳು ಸ್ವಸಾನುಷು=ತಮ್ಮ ಸಮಪ್ರದೇಶದಲ್ಲಿ ನಾನಾಧಾತೂನ್=ಚಿನ್ನ ಮುಂತಾದ ಧಾತುಗಳನ್ನು ಕರೆದವು. ।।೨೫।।

**ಸರ್ವೇ ಸ್ವಮುಖ್ಯವತ್ಸೇನ ಸ್ವೇ ಸ್ವೇ ಪಾತ್ರಂ ಪೃಥಕ್ ಪೃಥಕ್ ।**
**ಸರ್ವಕಾಮದುಘಾಂ ಪೃಥ್ವೀಂ ದುದುಹುಃ ಪೃಥುಭಾವಿತಾಮ್ ।। ೨೬।।**

ಸರ್ವೇ=ಎಲ್ಲರೂ ಸ್ವಮುಖ್ಯವತ್ಸೇನ=ತಮ್ಮ ಜಾತಿಯ ಮುಖ್ಯರೆಂಬ ಕರುವಿನಿಂದ ಸ್ವೇ ಸ್ವೇ ಪಾತ್ರಂ=ತಮ್ಮ ಪಾತ್ರೆಗಳನ್ನು ಉದ್ದೇಶಿಸಿ ಪೃಥಕ್ ಪೃಥಕ್=ಪ್ರತ್ಯೇಕವಾಗಿ ಪೃಥುಭಾವಿತಾಂ =ಪೃಥುರಾಜನಿಂದ ಗೌರವಿಸಲ್ಪಟ್ಟ ಸರ್ವಕಾಮದುಘಾಂ=ಎಲ್ಲ ಅಭೀಷ್ಟಗಳನ್ನು ಕೊಡುವ ಪೃಥ್ವೀಂ=ಭೂಮಿಯನ್ನು ದುದುಹುಃ=ಕರೆದರು. ।।೨೬।।

**ಏವಂ ಪೃಥ್ವಾದಯಃ ಪೃಥ್ವೀಮದುಹನ್ ಸ್ವನ್ನಮಾತ್ಮನಃ ।**
**ದೋಹವತ್ಸಾದಿಭೇದೇನ ಕ್ಷೀರಭೇದಂ ಕುರೂದ್ವಹ ।।೨೭।।**

ಹೇ ಕುರೂದ್ವಹ=ವಿದುರನೇ ! ಏವಂ=ಈ ರೀತಿಯಾಗಿ ಪೃಥ್ವಾದಯಃ=ಪೃಥು ಋಷಿ ಮುಂತಾದವರು ದೋಹವತ್ಸಾದಿಭೇದೇನ=ಪಾತ್ರ, ಕರು, ಕರೆಯುವ ವ್ಯಕ್ತಿ ಭೇದದಿಂದ

ಆತ್ಮನಃ=ತಮಗೆ ಕ್ಷೀರಭೇದಂ=ಹಾಲಿನ ಪರಿಣಾಮರೂಪವಾದ ಸ್ವನ್ನಂ=ತಮಗಿಷ್ಟವಾದ ಅನ್ನವನ್ನು ಅದುಹನ್=ಕರೆದುಕೊಂಡರು. ।।೨೭।।

**ತತೋ ಮಹೀಪತಿಃ ಪ್ರೀತಃ ಸರ್ವಕಾಮದುಘಾಂ ಪೃಥುಃ ।**
**ದುಹಿತೃತ್ವೇ ಚಕಾರೇಮಾಂ ಪ್ರೇಮ್ಣಾ ದುಹಿತೃವತ್ಸಲಃ ।।೨೮।।**

ತತಃ=ನಂತರ ಪ್ರೀತಃ=ಸಂತುಷ್ಟನಾದ ಮಹೀಪತಿಃ=ರಾಜನಾದ ದುಹಿತೃವತ್ಸಲಃ= ಹೆಣ್ಣುಮಕ್ಕಳಲ್ಲಿ ಪ್ರೀತಿಯುಳ್ಳ ಪೃಥುಃ=ಪೃಥುವು ಸರ್ವಕಾಮದುಘಾಂ=ಎಲ್ಲ ಅಭೀಷ್ಟವನ್ನು ಕೊಡುವ ಇಮಾಂ=ಪೃಥ್ವಿಯನ್ನು ಪ್ರೇಮ್ಣಾ=ಪ್ರೀತಿಯಿಂದ ದುಹಿತೃತ್ವೇ ಚಕಾರ=ಮಗಳನ್ನಾಗಿ ಸ್ವೀಕರಿಸಿದನು. ।।೨೮।।

**ಚೂರ್ಣಯನ್ ಸ್ವಧನುಃಕೋಟ್ಯಾ ಗಿರಿಕೂಟಾನಿ ರಾಜರಾಟ್ ।**
**ಭೂಮಂಡಲಮಿದಂ ವೈನ್ಯಃ ಪ್ರಾಯಶ್ಚಕ್ರೇ ಸಮಂ ವಿಭುಃ ।।೨೯।।**

ವಿಭುಃ=ಸಮರ್ಥನಾದ ರಾಜರಾಟ್=ರಾಜಶ್ರೇಷ್ಠನಾದ ವೈನ್ಯಃ=ವೇನಪುತ್ರನಾದ ಪೃಥುವು ಸ್ವಧನುಃಕೋಟ್ಯಾ=ತನ್ನ ಧನುಸ್ಸಿನ ತುದಿಯಿಂದ ಗಿರಿಕೂಟಾನಿ=ಪರ್ವತಶೃಂಗಗಳನ್ನು ಚೂರ್ಣಯನ್=ಪುಡಿಮಾಡುತ್ತ ಇದಂ ಭೂಮಂಡಲಂ=ಈ ಭೂಪ್ರದೇಶವನ್ನು ಪ್ರಾಯಃ=ಬಹಳವಾಗಿ ಸಮಂ ಚಕ್ರೇ=ಸಮವಾಗಿ ಮಾಡಿದನು. ।।೨೯।।

**ಅಥಾಸ್ಮಿನ್ ಭಗವಾನ್ ವೈನ್ಯಃ ಪ್ರಜಾನಾಂ ವೃತ್ತಿದಃ ಪಿತಾ ।**
**ನಿವಾಸಾನ್ ಕಲ್ಪಯಾಂಚಕ್ರೇ ತತ್ರ ತತ್ರ ಯಥಾರ್ಹತಃ ।।೩೦ ।।**

ಅಥ=ಅನಂತರ ಪ್ರಜಾನಾಂ=ಪ್ರಜೆಗಳಿಗೆ ವೃತ್ತಿದಃ=ಜೀವನ ಉಪಾಯವನ್ನು ನೀಡುವ ಪಿತಾ=ತಂದೆಯಾದ ಭಗವಾನ್ ವೈನ್ಯಃ=ಪೂಜ್ಯನಾದ ಪೃಥುವು ತತ್ರ ತತ್ರ=ಅಲ್ಲಲ್ಲಿ ಯಥಾರ್ಹತಃ=ಯೋಗ್ಯತಾನುಸಾರವಾಗಿ ನಿವಾಸಾನ್=ವಾಸಸ್ಥಾನಗಳನ್ನು ಕಲ್ಪಯಾಂಚಕ್ರೇ= ನಿರ್ಮಿಸಿದನು. ।।೩೦।।

**ಗ್ರಾಮಾನ್ ಪುರಃ ಪತ್ತನಾನಿ ದುರ್ಗಾಣಿ ವಿವಿಧಾನಿ ಚ ।**
**ಘೋಷಾನ್ ವ್ರಜಾಂಶ್ಚ ಶಿಬಿರಾನ್ನಗರಾನ್ ಖೇಟಖರ್ವಟಾನ್ ।।೩೧।।**

ಗ್ರಾಮಾನ್=ಉಪ್ಪರಿಗೆ ಮನೆಗಳಿಲ್ಲದ ಬಹಳ ಜನರಿರುವ ಹಳ್ಳಿಗಳನ್ನು, ಪುರಃ= ರಾಜಧಾನಿಗಳನ್ನು, ಪತ್ತನಾನಿ=ಸಮುದ್ರಸೇರುವ ನದಿಯ ಸಮೀಪದಲ್ಲಿರುವ, ಯವನರು ಇರುವ ಸ್ಥಳ (ದಿಲ್ಲಿಯಂತಹವು) ಅಥವಾ ದೊಡ್ಡ ರಾಜರುಗಳಿರುವ ಸ್ಥಳಗಳನ್ನು, ವಿವಿಧಾನಿ ದುರ್ಗಾಣಿ=ದಾಟಲಾಗದ ಪರ್ವತ ನೀರು ಇರುವ ಸ್ಥಳ (ಕಂದುಕ)ಗಳನ್ನು, ಘೋಷಾನ್=

ಕೊಟ್ಟಿಗೆ(ಆಕಳು ಕಟ್ಟುವ ಸ್ಥಳ)ಗಳನ್ನು ವ್ರಜಾನ್=ಗೊಪಾಲಕರಿರುವ ಸ್ಥಳಗಳನ್ನು ಶಿಬಿರಾನ್=ಸೈನಿಕರ ವಾಸಸ್ಥಾಗಳನ್ನು ನಗರಾನ್=ವೈಶ್ಯರಿರುವ ಸ್ಥಳಗಳನ್ನು ಖೇಟಖರ್ವಟಾನ್ (ಖೇಟ) ಬೇಟೆಗಾರರಿರುವ ಸ್ಥಳಗಳನ್ನು ಖರ್ವಟಾನ್=ಮೂರು ಕಟ್ಟೆಗಳನ್ನು ಕಲ್ಪಯಾಂಚಕ್ರೇ=ವ್ಯವಸ್ಥೆ ಮಾಡಿದನು.

**ಭಾಗವತ ತಾತ್ಪರ್ಯ -**

ಘೋಷ-ವ್ರಜ ಶಬ್ದಗಳ ಅರ್ಥಭೇದವನ್ನು ಪ್ರಮಾಣದಿಂದಲೇ ತಿಳಿಸುವರು -

**'ಗೊಷ್ಠಂ ಘೋಷ ಇತಿ ಪ್ರೋಕ್ತೋ ವ್ರಜಸ್ತತ್ಪಾಲಸಂಸ್ಥಿತಿಃ' ಇತ್ಯಭಿಧಾನಮ್ ।**

ದನ ಕಟ್ಟುವ ಸ್ಥಳಕ್ಕೆ ಘೋಷವೆಂದು, ದನ ಕಾಯುವವರು ಇರುವ ಸ್ಥಳಕ್ಕೆ ವ್ರಜವೆಂದು ಕರೆಯುವರು ಎಂದು ಅಭಿಧಾನವಿದೆ. ॥೩೧॥

**ಪ್ರಾಕ್ಪೃಥೋರಿಹ ನೈವೈಷಾ ಪುರಗ್ರಾಮಾದಿಕಲ್ಪನಾ ।**
**ಯಥಾಸುಖಂ ವಸಂತಿ ಸ್ಮ ತತ್ರ ತತ್ರಾಕುತೋಭಯಾಃ ॥೩೨॥**

॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ ಅಷ್ಟಾದಶೋಽಧ್ಯಾಯಃ ॥

ಪೃಥೋಃ ಪ್ರಾಕ್=ಪೃಥುವಿಗಿಂತ ಮುಂಚೆ ಇಹ=ಈ ಭೂಮಿಯಲ್ಲಿ ಏಷಾ=ಈ ಪುರಗ್ರಾಮಾದಿಕಲ್ಪನಾ=ಇಂಥವರು ಇಂಥಲ್ಲಿ ಇರಬೇಕೆಂಬ ವ್ಯವಸ್ಥೆ ನ ಇರಲಿಲ್ಲ, ತತ್ರ ತತ್ರ=ಅಲ್ಲಲ್ಲಿ ಯಥಾಸುಖಂ ತಮಗೆ ಸುಖವಾಗುವಂತೆ ಅಕುತೋಭಯಾಃ=ಯಾರ ಅಂಜಿಕೆ ಇಲ್ಲದವರಾಗಿ ವಸಂತಿ ಸ್ಮ=ಪ್ರಜೆಗಳು ವಾಸಿಸುತ್ತಿದ್ದರು. ॥೩೨॥

॥ ಇಲ್ಲಿಗೆ ಹದಿನೆಂಟನೇ ಅಧ್ಯಾಯ ಮುಗಿಯಿತು ॥

## ಅಥ ಏಕೋನವಿಂಶೋಽಧ್ಯಾಯಃ

ಶ್ರೀಹರಿಯಲ್ಲಿ ಕರ್ಮಗಳನ್ನು ಸಮರ್ಪಿಸಿ ಅಂತಃಕರಣಶುದ್ಧಿಯನ್ನು ಪಡೆದವನಿಗೆ ಶ್ರೀಹರಿಯ ಅಪರೋಕ್ಷಜ್ಞಾನವಾಗುವುದು ಎಂದು ತಿಳಿಸಲು, ಮೊದಲಿಗೆ ಪೃಥುರಾಜನು ಮಾಡಿದ ಯಜ್ಞವನ್ನು ಹೇಳುವ ನೆಪದಿಂದ ಶ್ರೀಹರಿಯ ಮಾಹಾತ್ಮ್ಯವನ್ನು ಈ ಅಧ್ಯಾಯದಲ್ಲಿ ನಿರೂಪಿಸುವರು.

ಮೊದಲಿಗೆ ಪೃಥುವಿನ ಯಜ್ಞದೀಕ್ಷಾಪ್ರಕಾರವನ್ನು ತಿಳಿಸುವರು -

**ಮೈತ್ರೇಯ ಉವಾಚ -**

**ಅಥಾದೀಕ್ಷತ ರಾಜರ್ಷಿರ್ಹಯಮೇಧಶತೇನ ಸಃ ।**
**ಬ್ರಹ್ಮಾವರ್ತೇ ಮನೋಃ ಕ್ಷೇತ್ರೇ ಯತ್ರ ಪ್ರಾಚೀ ಸರಸ್ವತೀ ॥೧॥**

ಸಃ ರಾಜರ್ಷಿಃ=ಆ ಪೃಥುರಾಜನು ಪ್ರಾಚೀ ಸರಸ್ವತೀ=ಪೂರ್ವಕ್ಕೆ ಹರಿಯುವ ಸರಸ್ವತೀನದಿಯು ಯತ್ರ=ಎಲ್ಲಿ ಇದೆಯೋ ತತ್ರ=ಅಂತಹ ಮನೋಃ ಕ್ಷೇತ್ರೇ=ಮನುವಿನ ಕ್ಷೇತ್ರವಾದ *ಬ್ರಹ್ಮಾವರ್ತೇ=ಸರಸ್ವತಿ ಮತ್ತು ದೃಷದ್ವತಿ ಎಂಬ ನದಿಗಳ ಮಧ್ಯದಲ್ಲಿ ಇರುವ ಪ್ರದೇಶದಲ್ಲಿ ಹಯಮೇಧಶತೇನ=ನೂರು ಅಶ್ವಮೇಧ ಮಾಡುವದಕ್ಕೆ ಅದೀಕ್ಷತ=ಸಂಕಲ್ಪಿಸಿದನು.

ಬ್ರಹ್ಮಾವರ್ತ ಎಂದರೆ :-

*ಸರಸ್ವತೀದೃಷದ್ವತ್ಯೋರಂತರಂ ದೇವನಿರ್ಮಿತಮ್ ।
ಬ್ರಹ್ಮಾವರ್ತಂ ಮಾನವಂತಂ ವಿದುರ್ದೇಶಂ ವಿಚಕ್ಷಣಾಃ ॥

ಎಂಬ ಪ್ರಮಾಣಾನುಸಾರವಾಗಿ ಸರಸ್ವತಿ ಮತ್ತು ದೃಷದ್ವತಿ ಎಂಬ ನದಿಗಳ ಮಧ್ಯದಲ್ಲಿ ದೇವನಿರ್ಮಿತವಾದ ಪ್ರದೇಶಕ್ಕೆ ಬ್ರಹ್ಮಾವರ್ತ ಎಂದು ಹೆಸರು. ॥೧॥

**ತದಭಿಪ್ರೇತ್ಯ ಭಗವಾನ್ ಕರ್ಮಾತಿಶಯಮಾತ್ಮನಃ ।**
**ಶತಕ್ರತುರ್ನ ಮಮೃಷೇ ಪೃಥೋರ್ಯಜ್ಞಮಹೋತ್ಸವಮ್ ॥೨॥**

ಭಗವಾನ್=ಪೂಜ್ಯನಾದ ಶತಕ್ರತುಃ=ಇಂದ್ರನು ಆತ್ಮನಃ ಕರ್ಮಾತಿಶಯಂ ಅಭಿಪ್ರೇತ್ಯ=ತಾನು ಮಾಡಿದ ನೂರು ಯಜ್ಞಗಳಿಗಿಂತ ಶ್ರೇಷ್ಠವಾದುದು ಎಂದು ತಿಳಿದು ಪೃಥೋಃ ತತ್ ಯಜ್ಞಮಹೋತ್ಸವಂ=ಪೃಥುವಿನ ಆ ಯಜ್ಞಮಹೋತ್ಸವವನ್ನು ನ ಮಮೃಷೇ =ಸಹಿಸಲಿಲ್ಲ. ॥೨॥

ಅತಿಶಯವನ್ನೇ ತಿಳಿಸುವರು -

**ಯತ್ರ ಯಜ್ಞಪತಿಃ ಸಾಕ್ಷಾತ್ ಭಗವಾನ್ ಹರಿರೀಶ್ವರಃ ।**
**ಅನ್ವಾಹೂಯತ ಸರ್ವಾತ್ಮಾ ಸರ್ವಲೋಕಗುರುಃ ಪ್ರಭುಃ ॥೩॥**

ಯತ್ರ=ಯಾವ ಪೃಥುವಿನ ಯಜ್ಞದಲ್ಲಿ ಪ್ರಭುಃ=ಸರ್ವಸಮರ್ಥನಾದ ಸರ್ವ-ಲೋಕಗುರುಃ=ಎಲ್ಲ ಲೋಕಗಳಿಗೆ ಗುರುವಾದ ಸರ್ವಾತ್ಮಾ=ಎಲ್ಲಡೆಗೆ ವ್ಯಾಪ್ತನಾದ ಯಜ್ಞಪತಿಃ=ಯಜ್ಞನಿಯಾಮಕನಾದ ಭಗವಾನ್=ಷಡ್ಗುಣಸಂಪನ್ನನಾದ ಈಶ್ವರಃ=ಸರ್ವೇಶ್ವರನಾದ ಸಾಕ್ಷಾತ್ ಹರಿಃ=ಪರಮುಖ್ಯನಾದ ಶ್ರೀಹರಿಯೇ ಅನ್ವಾಹೂಯತ=ಕರೆಯಲ್ಪಟ್ಟು ಪ್ರತ್ಯಕ್ಷ ಕಾಣಿಸಿಕೊಂಡನು. ॥೩॥

**ಅನ್ವಿತೋ ಬ್ರಹ್ಮಶರ್ವಾಭ್ಯಾಂ ಲೋಕಪಾಲೈಃ ಸಹಾನುಗೈಃ ।**
**ಉಪಗೀಯಮಾನೋ ಗಂಧರ್ವೈರ್ಮುನಿಭಿಶ್ಚಾಪ್ಸರೋಗಣೈಃ ॥೪॥**

ಅಪ್ಸರೋಗಣೈಃ=ಅಪ್ಸರಾಸ್ತ್ರೀಯರ ಸಮೂಹದಿಂದ ಚ=ಮತ್ತು ಗಂಧರ್ವೈಃ=ಗಂಧರ್ವರಿಂದ ಮುನಿಭಿಃ=ಮುನಿಗಳಿಂದ ಉಪಗೀಯಮಾನಃ=ಸ್ತೋತ್ರ ಮಾಡಿಸಿಕೊಳ್ಳಲ್ಪಡುವವನಾಗಿ ಸಹಾನುಗೈಃ=ಭೃತ್ಯರಿಂದ ಸಹಿತರಾದ ಲೋಕಪಾಲೈಃ=ಲೋಕಪಾಲಕರಿಂದಲೂ ಬ್ರಹ್ಮಶರ್ವಾಭ್ಯಾಂ=ಬ್ರಹ್ಮರುದ್ರರಿಂದಲೂ ಅನ್ವಿತಃ=ಕೂಡಿಕೊಂಡು, ಕಾಣಿಸಿಕೊಂಡನು. ॥೪॥

**ಸಿದ್ಧಾ ವಿದ್ಯಾಧರಾ ದೈತ್ಯಾ ದಾನವಾ ಗುಹ್ಯಕಾದಯಃ ।**
**ಸುನಂದನಂದಪ್ರಮುಖಾಃ ಪಾರ್ಷದಪ್ರವರಾ ಹರೇಃ ॥೫॥**
**ಕಪಿಲೋ ನಾರದೋ ದತ್ತೋ ಯೋಗೇಶಾಃ ಸನಕಾದಯಃ ।**
**ತಮನ್ವೀಯುರ್ಭಾಗವತಾ ಯೇ ಚ ತತ್ಸೇವನೋತ್ಸುಕಾಃ ॥೬॥**

ಸಿದ್ಧಾಃ=ಸಿದ್ಧರು, ವಿದ್ಯಾಧರಾಃ=ವಿದ್ಯಾಧರರು, ದೈತ್ಯಾಃ=ದೈತ್ಯರು, ದಾನವಾಃ= ದನುಪುತ್ರರು, ಗುಹ್ಯಕಾದಯಃ=ಗುಹ್ಯಕ ಮೊದಲಾದವರು, ಸುನಂದನಂದಪ್ರಮುಖಾಃ= ಸುನಂದ-ನಂದರೇ ಮೊದಲಾದ ಶ್ರೀಹರಿಯ ಸೇವಕಶ್ರೇಷ್ಠರು,

ಕಪಿಲಃ=ಕಪಿಲರು, ನಾರದಃ=ನಾರೆದರು, ದತ್ತಃ=ದತ್ತರು, ಯೋಗೇಶಾಃ=ಯೋಗಿಗಳಾದ ಸನಕಾದಿಗಳು ಚ=ಮತ್ತು ಯೇ ತತ್ಸೇವನೋತ್ಸುಕಾಃ ಭಾಗವತಾಃ=ಯಾರಿಗೆ ಶ್ರೀಹರಿಯ ಸೇವೆಯನ್ನು ಮಾಡುವದರಲ್ಲಿ ಉತ್ಸಾಹವಿತ್ತೋ ಆ ಎಲ್ಲ ಭಗವದ್ಭಕ್ತರು ತಂ=ಶ್ರೀಹರಿಯನ್ನು ಅನ್ವೀಯುಃ=ಅನುಸರಿಸಿಬಂದರು.

ಭಾಗವತಾಃ ಎಂದು ವಿಶೇಷಣವಿದ್ದುದರಿಂದ ಭಗವದ್ಭಕ್ತರಾದ ದೈತ್ಯ-ದಾನವರೇ ಇಲ್ಲಿ ವಿವಕ್ಷಿತರೆಂದು ಸೂಚಿತವಾಗುವದು. ।।೫,೬।।

**ಯತ್ರ ಧರ್ಮದುಘಾ ಭೂಮಿಃ ಸರ್ವಕಾಮದುಘಾ ಮಹೀ ।**
**ದೋಗ್ಧಿ ಸ್ಮಾಭೀಪ್ಸಿತಾನರ್ಥಾನ್ ಯಜಮಾನಸ್ಯ ಭಾರತ ।।೭।।**

ಭಾರತ=ವಿದುರನೇ ! ಯತ್ರ=ಎಲ್ಲಿ ಭೂಮಿಃ=ಭೂಮಿಯು ಧರ್ಮದುಘಾ=ಯಜ್ಞಕ್ಕೆ ಬೇಕಾದ ಪದಾರ್ಥಗಳನ್ನು ದೋಹನ ಮಾಡುವವಳು ಅಷ್ಟೇ ಅಲ್ಲ, ಕಿಂತು ಮಹೀ= ಭೂಮಿಯು ಸರ್ವಕಾಮದುಘಾ=ಎಲ್ಲರ ಎಲ್ಲ ಕಾಮನೆಗಳನ್ನೂ ದೋಹನ ಮಾಡುವವಳು. ಯಜಮಾನಸ್ಯ=ಪೃಥುವಿಗೆ ಅಭೀಪ್ಸಿತಾನ್=ಇಷ್ಟವಾದ ಅರ್ಥಾನ್ ದೋಗ್ಧಾ=ಪದಾರ್ಥಗಳನ್ನೂ ಹಾಲಿನ ರೂಪದಲ್ಲಿ ಕರೆದಳು. ।।೭।।

**ಊಹುಃ ಸರ್ವರಸಾನ್ನದ್ಯಃ ಕ್ಷೀರದಧ್ಯನ್ನಗೋರಸಾನ್ ।**
**ತರವೋ ಭೂರಿವರ್ಷ್ಮಾಣಃ ಪ್ರಾಸೂಯಂತ ಮಧುಚ್ಯುತಃ ।।೮।।**

**ಸಿಂಧವೋ ರತ್ನನಿಕರಾನ್ ಗಿರಯೋಽನ್ನಂ ಚತುರ್ವಿಧಮ್ ।**
**ಉಪಾಯನಾನ್ಯುಪಾಜಹ್ರುಃ ಸರ್ವೇ ಲೋಕಾಃ ಸಪಾಲಕಾಃ ।।೯।।**

ನದ್ಯಃ=ನದ್ಯಭಿಮಾನಿಗಳು ಸರ್ವರಸಾನ್=ದ್ರಾಕ್ಷಿ ಮೊದಲಾದ ಎಲ್ಲ ಹಣ್ಣಿನರಸ ಅಥವಾ ಮಧುರಾದಿ ಷಡ್ರಸಗಳನ್ನು ಮತ್ತು ಕ್ಷೀರದಧ್ಯನ್ನಗೋರಸಾನ್=(ಕ್ಷೀರದಧ್ಯನ್ನ)ಹಾಲು ಮೊಸರು ಪಾಯಸಾದಿರೂಪ ಅನ್ನವನ್ನು (ಗೋರಸ)=ತುಪ್ಪ ಮಜ್ಜಿಗೆಗಳನ್ನು ಊಹುಃ=ಹೊತ್ತು ತಂದರು. ಭೂರಿವರ್ಷ್ಮಾಣಃ=ವಿಸ್ತೃತವಾದ ಶರೀರವುಳ್ಳ ಮಧುಚ್ಯುತಃ=ಅಮೃತವನ್ನು ಸುರಿಸುವ ತರವಃ=ಗಿಡಗಳು ಪ್ರಾಸೂಯಂತ=ಪ್ರಸವಿಸಿದವು (ನೀಡಿದವು ಎಂದು ಭಾವ).

ಸಿಂಧವಃ=ಸಪ್ತಸಮುದ್ರಗಳು (ಅಭಿಮಾನಿಗಳು) ರತ್ನನಿಕರಾನ್=ಮುತ್ತುರತ್ನಗಳ ರಾಶಿಯನ್ನು ಗಿರಯಃ=ಪರ್ವತಾಭಿಮಾನಿಗಳು ಚತುರ್ವಿಧಂ ಅನ್ನಂ=ಭಕ್ಷ್ಯ,ಭೋಜ್ಯ,ಲೇಹ್ಯ, ಪೇಯರೂಪವಾದ ನಾಲ್ಕುವಿಧವಾದ ಅನ್ನವನ್ನು, ಸಪಾಲಕಾಃ=ಪಾಲಕರಿಂದ ಸಹಿತವಾದ ಸರ್ವೇ ಲೋಕಾಃ=ಎಲ್ಲ ಲೋಕದಲ್ಲಿರುವ ಜನರು ಉಪಾಯನಾನಿ=ಕಾಣಿಕೆಗಳನ್ನು ಉಪಾಜಹ್ರುಃ=ತಂದಿತ್ತರು.

ವ್ಯಯ ಮಾಡಲು ದ್ರವ್ಯವನ್ನು ಕೋಶದಿಂದ ತರಬೇಕಿಲ್ಲ. ಕಿಂತು ಎಲ್ಲರಿಂದಲೂ ತರಲ್ಪಟ್ಟಿದ್ದ ದ್ರವ್ಯವೇ (ಪ್ರೀತಿಯಿಂದ ಇತ್ತ ಉಡುಗೊರೆಯೇ) ಯಜ್ಞಕ್ಕೆ ಸಾಕು ಎಂಬ ಅಭಿಪ್ರಾಯದಿಂದ ಕೊಟ್ಟ ಉಡುಗೊರೆಗಳನ್ನು ತಿಳಿಸುವರು ಎಂದು ಭಾವ. ||೮,೯||

**ಇತಿ ಚಾಧೋಕ್ಷಜೇಶಸ್ಯ ಪೃಥೋರ್ಯಜ್ಞಮಹೋದಯಮ್ ।**
**ಅಸೂಯನ್ ಭಗವಾನಿಂದ್ರಃ ಪ್ರತಿಘಾತಮಚೀಕರತ್ ||೧೦||**

ಇತಿ=ಈ ರೀತಿಯಾದ ಅಧೋಕ್ಷಜೇಶಸ್ಯ=ಶ್ರೀಹರಿಯೇ ಒಡೆಯನಾಗಿ ಉಳ್ಳ ಪೃಥೋಃ= ಪೃಥುವಿನ ಯಜ್ಞಮಹೋದಯಂ=ಯಜ್ಞದ ಮಹಾಉತ್ಸವವನ್ನು ಅಸೂಯನ್=ಸಹನೆ ಮಾಡದವನಾಗಿ ಭಗವಾನ್ ಇಂದ್ರಃ=ಐಶ್ವರ್ಯಶಾಲಿಯಾದ ಇಂದ್ರನು ಪ್ರತಿಘಾತಂ= ವಿಘ್ನವನ್ನು ಅಚೀಕರತ್=ಮಾಡಿದನು. ||೧೦||

**ಚರಮೇಣಾಶ್ವಮೇಧೇನ ಯಜಮಾನೇ ಯಜುಷ್ಪತಿಮ್ ।**
**ವೈನ್ಯೇ ಯಜ್ಞಪಶುಂ ಸ್ಪರ್ಧನ್ನಪೋವಾಹ ತಿರೋಹಿತಃ ||೧೧||**

ವೈನ್ಯೇ=ಪೃಥುರಾಜನು ಚರಮೇಣ ಅಶ್ವಮೇಧೇನ=ಕೊನೆಯ ಅಶ್ವಮೇಧಯಾಗದಿಂದ ಯಜುಷ್ಪತಿಂ=ಎಲ್ಲ ವೇದಪಾರಸನಾದ ವಿಷ್ಣುವನ್ನು ಯಜಮಾನೇ ಸತಿ=ಪೂಜಿಸುತ್ತಿರಲು, ಸ್ಪರ್ಧನ್=ಸ್ಪರ್ಧೆ ಮಾಡುವವನಾಗಿ ತಿರೋಹಿತಃ=ಮರೆಯಾಗಿ ಯಜ್ಞಪಶುಂ=ಯಜ್ಞದ ಕುದುರೆಯನ್ನು ಅಪೋವಾಹ=ಅಪಹರಿಸಿದನು. ||೧೧||

**ತಮತ್ರಿರ್ಭಗವಾನೈಕ್ಷತ್ತ್ವರಮಾಣಂ ವಿಹಾಯಸಾ ।**
**ಆಮುಕ್ತಮಿವ ಪಾಷಂಡಂ ಯೋಽಧರ್ಮೇ ಧರ್ಮವಿಭ್ರಮಃ ||೧೨||**

ವಿಹಾಯಸಾ=ಆಕಾಶಮಾರ್ಗದಿಂದ ತ್ವರಮಾಣಂ=ಓಡುತ್ತಿರುವ, ಮತ್ತು ಯಃ= ಯಾವದು (ಯಾವ ಪಾಖಂಡವು) ಅಧರ್ಮೇ ಧರ್ಮವಿಭ್ರಮಃ=ಅಜ್ಞಾನಿಗಳಿಗೆ ಅಧರ್ಮದಲ್ಲಿ ಧರ್ಮಬುದ್ಧಿಯನ್ನು (ಇದು ಧರ್ಮ ಎಂದು ಭ್ರಾಂತಿಯನ್ನು) ಹುಟ್ಟಿಸುವುದೋ ಅಂತಹ ಪಾಖಂಡಂ=ಪಾಖಂಡರೂಪವನ್ನು ಆಮುಕ್ತಮಿವ= ಧರಿಸಿದಂತಿರುವ ತಂ=ಇಂದ್ರನನ್ನು ಭಗವಾನ್ ಅತ್ರಿಃ=ಪೂಜ್ಯರಾದ ಅತ್ರಿ ಋಷಿಗಳು ಐಕ್ಷತ್=ನೋಡಿದರು. ||೧೨||

**ಅತ್ರಿಣಾ ಚೋದಿತೋ ಹಂತುಂ ಪೃಥುಪುತ್ರೋ ಮಹಾರಥಃ ।**
**ಅನ್ವಧಾವತ ಸಂಕ್ರುದ್ಧಸ್ತಿಷ್ಠ ತಿಷ್ಠೇತಿ ಚಾಬ್ರವೀತ್ ||೧೩||**

ಅತ್ರಿಣಾ=ಅತ್ರಿಋಷಿಗಳಿಂದ ಚೋದಿತಃ=ಪ್ರೇರಿಸಲ್ಪಟ್ಟ ಮಹಾರಥಃ=ಮಹಾರಥಿಕನಾದ ಪೃಥುಪುತ್ರಃ=ಪೃಥುರಾಜನ ಮಗನು ಸಂಕ್ರುದ್ಧಃ=ಬಹಳ ಕ್ರುದ್ಧನಾಗಿ ಹಂತುಂ=ಕೊಲ್ಲಲು ಅನ್ವಧಾವತ್=ಇಂದ್ರನನ್ನು ಬೆನ್ನಟ್ಟಿ ಓಡಿದನು. ಚ=ಮತ್ತು ತಿಷ್ಠ ತಿಷ್ಠ ಇತಿ ಅಬ್ರವೀತ್=ನಿಲ್ಲು ನಿಲ್ಲು ಎಂದು ಹೇಳಿದನು. ।।೧೩।।

**ತಂ ತಾದೃಶಾಕೃತಿಂ ವೀಕ್ಷ್ಯ ಮೇನೇಽಧರ್ಮಂ ಶರೀರಿಣಮ್ ।**
**ಜಟಿಲಂ ಭಸ್ಮನಾ ಛನ್ನಂ ತಸ್ಮೈ ಬಾಣಂ ನ ಮುಂಚತಿ ।।೧೪ ।।**

ತಾದೃಶಾಕೃತಿಂ=ಪಾಷಂಡ ವೇಷದಲ್ಲಿರುವ, ಜಟಿಲಂ=ಜಟಾಧಾರಿಯಾದ, ಭಸ್ಮನಾ ಛನ್ನಂ=ಭಸ್ಮವನ್ನು ಧರಿಸಿದ, ತಂ=ಇಂದ್ರನನ್ನು ವೀಕ್ಷ್ಯ=ನೋಡಿ ಅಧರ್ಮಶರೀರಿಣಂ ಮೇನೇ=ಪಾಪಿಷ್ಟ ದೇಹವುಳ್ಳವನೆಂದು ತಿಳಿದನು. ತಸ್ಮೈ=ಅವನಿಗೆ ಬಾಣಂ ನ ಮುಂಚತಿ(ಮುಮೋಚ)=ಬಾಣವನ್ನು ಬಿಡಲಿಲ್ಲ. ಅಂದರೆ ಪಾಷಂಡಿಗಳ ಜೊತೆಗೆ ಯುದ್ಧ ಧರ್ಮವಲ್ಲವೆಂದು ತಿಳಿದು ಬಾಣವನ್ನು ಬಿಡಲಿಲ್ಲವೆಂದು ಭಾವ. ।।೧೪।।

ಪಾಷಂಡಿಗಳನ್ನು ಹೊಡೆಯುವುದು ಧರ್ಮವಲ್ಲ ನಿಜ. ಆದರೆ ಕಳ್ಳತನ ಮಾಡುವ ವ್ಯಕ್ತಿಯನ್ನು ಕೊಲ್ಲಿಸುವುದು ಪಾಪವಲ್ಲ (ದೋಷವಲ್ಲ) ಎಂಬ ಮುಖ್ಯಧರ್ಮವನ್ನು ತಿಳಿದ ಅತ್ರಿಯು ಪೃಥುಪುತ್ರನನ್ನು ಮತ್ತೆ ಪ್ರೇರಿಸುವನು -

**ಪಾಪಾನ್ನಿವೃತ್ತಂ ವೈ ಭೂಯೋ ಹಂತವೇಽತ್ರಿರಚೋದಯತ್ ।**
**ಜಹಿ ಯಜ್ಞಹನಂ ತಾತ ಮಹೇಂದ್ರಂ ವಿಬುಧಾಧಿಪಮ್ ।।೧೫।।**

ಅತ್ರಿಃ=ಅತ್ರಿಮುನಿಯು ಪಾಪಾತ್=ಪಾಪಭಯದಿಂದ ನಿವೃತ್ತಂ=ಹೊಡೆಯದೇ ತಿರುಗಿ ಬಂದ ಪೃಥುಪುತ್ರನನ್ನು ಕುರಿತು ''ತಾತ=ಮಗುವೇ ! ವಿಬುಧಾಧಿಪಂ=ದೇವತೆಗಳಿಗೆ ರಾಜನಾದ ಯಜ್ಞಹನಂ=ಯಜ್ಞವನ್ನು ನಾಶಮಾಡಿದ ಮಹೇಂದ್ರಂ=ಇಂದ್ರನನ್ನು ಜಹಿ=ಸಂಹರಿಸು'' ಎಂಬುದಾಗಿ ಭೂಯಃ=ಮತ್ತೆ ಹಂತವೇ=ಕೊಲ್ಲಲು ಅಚೋದಯತ್=ಪ್ರೇರಿಸಿದನು. ಇವನು ಪಾಷಂಡಿಯಲ್ಲ, ಕಿಂತು ಕುದುರೆ ಕದ್ದವನು. ಆದ್ದರಿಂದ ಇವನನ್ನು ಕೊಂದರೆ ತಪ್ಪಲ್ಲ ಎಂದು ಭಾವ. ।।೧೫।।

**ಏವಂ ವೈನ್ಯಸುತಃ ಪ್ರೋಕ್ತಸ್ತ್ವರಮಾಣಂ ವಿಹಾಯಸಾ ।**
**ಅನ್ವಧಾವದತಿಕ್ರುದ್ಧೋ ರಾವಣಂ ಗೃಧ್ರರಾಡಿವ ।।೧೬।।**

ಏವಂ=ಈ ರೀತಿಯಾಗಿ ಪ್ರೋಕ್ತಃ=ಹೇಳಿಸಿಕೊಳ್ಳಲ್ಪಟ್ಟ ವೈನ್ಯಸುತಃ=ಪೃಥುಕುವರನು ಅತಿಕ್ರುದ್ಧಃ=ಬಹಳ ಕ್ರುದ್ಧನಾದವನಾಗಿ, ಗೃಧ್ರರಾಟ್=ಜಟಾಯುಪಕ್ಷಿಯು ರಾವಣಂ

ಇವ=ರಾವಣನನ್ನು ಬೆನ್ನುಹತ್ತಿದಂತೆ ವಿಹಾಯಸಾ ತ್ವರಮಾಣಂ=ಆಕಾಶಮಾರ್ಗದಿಂದ ವೇಗವಾಗಿ ಹೋಗುತ್ತಿರುವ ಇಂದ್ರನನ್ನು ಅನ್ವಧಾವತ್=ಬೆನ್ನುಹತ್ತಿದನು. (ಹಿಂಬಾಲಿಸಿದನು.)॥೧೬॥

**ಸೋಽಶ್ವಂ ರೂಪಂ ಚ ತದ್ಧಿತ್ವಾ ತಸ್ಥಾವಂತರ್ಹಿತಃ ಸ್ವರಾಟ್ ।**
**ಧೀರಃ ಸ್ವಪಶುಮಾದಾಯ ಪಿತುರ್ಯಜ್ಞಮುಪೇಯಿವಾನ್ ॥೧೭॥**

ಸಃ ಸ್ವರಾಟ್=ಇಂದ್ರನು ಅಶ್ವಂ=ಕುದುರೆಯನ್ನು ತತ್ ರೂಪಂ ಚ=ಆ ಪಾಷಂಡರೂಪವನ್ನೂ ಹಿತ್ವಾ=ತ್ಯಜಿಸಿ ಅಂತರ್ಹಿತಃ ತಸ್ಥೌ=ಅಡಗಿನಿಂತುಕೊಂಡನು. ಧೀರಃ= ಧೈರ್ಯಶಾಲಿಯಾದ ಪೃಥುಪುತ್ರನು ಸ್ವಪಶುಂ=ತನ್ನ ಕುದುರೆಯನ್ನು ಆದಾಯ=ಸ್ವೀಕರಿಸಿ ಪಿತುಃ=ತಂದೆಯ ಯಜ್ಞಂ ಉಪೇಯಿವಾನ್=ಯಜ್ಞಸ್ಥಾನಕ್ಕೆ ಬಂದನು.

**ಭಾಗವತ ತಾತ್ಪರ್ಯ -**

ಇಲ್ಲಿ ಪೃಥುಪುತ್ರನಾದ ವಿಜಿತಾಶ್ವನಿಗಿಂತಲೂ ಇಂದ್ರನಿಗೆ ಅಶಕ್ತತೆ ತೋರುವದು. ಆ ಕಾರಣ ಇಲ್ಲಿ ವಿವಕ್ಷಿತವಾದ ತಾತ್ಪರ್ಯವನ್ನು ಪ್ರಮಾಣದಿಂದಲೇ ತಿಳಿಸುತ್ತಾರೆ -

**ದೇವಾಃ ಶಕ್ತಾಸ್ತು ಮೋಹಾಯ ದರ್ಶಯೇಯುರಶಕ್ತವತ್ ।**
**ಋಷೀಣಾಂ ಚೈವ ರಾಜ್ಞಾಂ ಚ ನ ಹಿ ತೇ ದೇವತಾಸಮಾಃ ।**
**ಆಜ್ಞಯಾ ವಾ ಹರೇಃ ಕ್ವಾಪಿ ಕಾರ್ಯತೋ ವಾ ಕ್ವಚಿತ್ ಕ್ವಚಿತ್ ॥ ಇತಿ ಗಾರುಡೇ ॥**

**ಪ್ರಣಿಪಾತಾದಿಕಂ ದೇವೈರ್ಋಷ್ಯಾದಿಷು ಜನಾರ್ದನೇ ।**
**ಕ್ರಿಯತೇಽತೋ ನ ತೇಷಾಂ ಹಿ ತೇಜೋಭಂಗಃ ಕಥಂಚನ ॥**
**ಅತ್ಯುತ್ತಮಾನಾಮವರೇ ತೇಜೋಭಂಗೋ ನ ವಿದ್ಯತೇ ।**
**ಯಥಾ ನರಾಣಾಂ ತಿರ್ಯಕ್ಷು ಪ್ರಾಯಃ ಸಾಮ್ಯೇ ಹಿ ಸ ಸ್ಮೃತಃ ॥ ಇತಿ ಸ್ಕಾಂದೇ ॥**

ದೇವತೆಗಳು ಸಮರ್ಥರಾದರೂ ಅಜ್ಞರಿಗೆ ಮೋಹಗೊಳಿಸಲು ಅಸಮರ್ಥರಂತೆ ತೋರಿಸುವರು. ಋಷಿಗಳಿಗಾಗಲೀ ರಾಜರಿಗಾಗಲೀ ಆ ದೇವತೆಗಳು ಸಮರಲ್ಲ (ಕಿಂತು ಅವರಿಗಿಂತಲೂ ಉತ್ತಮರು ಎಂದು ಭಾವ.) ಕೆಲವುಸಲ ಶ್ರೀಹರಿಯ ಆಜ್ಞೆಯಿಂದಲೂ, ಕಾರ್ಯಸಾಧನೆಗಾಗಿಯೂ ಅಶಕ್ತರಂತೆ ತೋರಿಸುವರು ಎಂದು ಗರುಡಪುರಾಣದಲ್ಲಿದೆ.

ದೇವತೆಗಳು ತಮಗಿಂತ ಅವರರಾದ ಋಷಿ ಮುಂತಾದವರಿಗೆ ನಮಸ್ಕಾರಾದಿಗಳನ್ನು ಮಾಡುವಾಗ ಅವರಲ್ಲಿರುವ ಶ್ರೀಹರಿಗೇನೇ ಮಾಡುವದರಿಂದ ಅವರ ಮಾನಹಾನಿ ಯಾವ ರೀತಿಯಿಂದಲೂ ಆಗಲಾರದು. ಮನುಷ್ಯರು ತಮಗಿಂತ ಕಡಿಮೆ ಜಾತಿಯದಾದ ಆಕಳು ಮುಂತಾದವುಗಳಿಗೆ ನಮಸ್ಕಾರಾದಿಗಳನ್ನು ಮಾಡಿದಾಗ ಹೇಗೆ ತೇಜೋಭಂಗವಾಗಲಾರದೋ

ಹಾಗೆ ಅತ್ಯುತ್ತಮರಾದವರು ಅತಿಚಿಕ್ಕವರಿಗೆ ನಮಸ್ಕಾರಾದಿಗಳನ್ನು ಮಾಡಿದಾಗ ತೇಜೋಭಂಗವಾಗಲಾರದು. ಪ್ರಾಯಃ ಸಮರಾದವರಲ್ಲಿ ಹಾಗೆ ತೇಜೋಭಂಗವಾಗುವದು ಎಂದು ಸ್ಕಾಂದಪುರಾಣದಲ್ಲಿದೆ.

ಅಂದರೆ ಅತಿ ದೊಡ್ಡವರು ಚಿಕ್ಕವರಿಗೆ ನಮಸ್ಕಾರ ಮಾಡುವದು ಅಂತರ್ಗತ ಪರಮಾತ್ಮನಿಗೆ ಎಂಬುವುದು ನಿಶ್ಚಿತವೇ ಆಗಿರುತ್ತದೆ. ಸಮಾನತೆ ಇದ್ದು ಪರಸ್ಪರ ದ್ವೇಷವಿದ್ದಾಗ ಒಬ್ಬರಿಗೊಬ್ಬರು ನಮಸ್ಕಾರ ಮಾಡಿದಾಗ ತೇಜೋಭಂಗಪ್ರಸಕ್ತಿ ಇರುತ್ತದೆ. ಅಲ್ಲಿಯೂ ದ್ವೇಷವಿಲ್ಲದಿದ್ದಾಗ ತೇಜೋಭಂಗಪ್ರಸಕ್ತಿ ಇರುವುದಿಲ್ಲವೆಂದು ಭಾವ.

ಸ್ಕಾಂದಪುರಾಣದಲ್ಲಿ ಪ್ರಣಿಪಾತಶಬ್ದ ಇಟ್ಟಿದ್ದರಿಂದ ೨೦ನೇ ಅಧ್ಯಾಯದ ೧೯ನೇ ಶ್ಲೋಕದಲ್ಲಿ ''ಸ್ಪೃಶಂತಂ ಪಾದಯೋಃ ಪ್ರೇಮ್ಣಾ'' ಎಂಬುದಾಗಿ ಮುಂದೆ ಹೇಳುವ ಇಂದ್ರನು ಮಾಡಿದ ನಮಸ್ಕಾರವು ತೋಜೋಭಂಗಕಾರಿಯಲ್ಲ ಎನ್ನುವುದನ್ನು ತಿಳಿಸಲು ಎಂದು ತಿಳಿಯಬೇಕು. ।।೧೭।।

**ತತ್ತಸ್ಯ ಚಾದ್ಭುತಂ ಕರ್ಮ ವಿಲಕ್ಷ್ಯ ಪರಮರ್ಷಯಃ ।**
**ನಾಮಧೇಯಂ ದದುಸ್ತಸ್ಮೈ ವಿಜಿತಾಶ್ವ ಇತಿ ಪ್ರಭೋ ।।೧೮।।**

ತಸ್ಯ=ಪೃಥುಪುತ್ರನ ತತ್ ಅದ್ಭುತಂ ಕರ್ಮ=ಇಂದ್ರನನ್ನು ಗೆದ್ದು ಕುದುರೆಯನ್ನು ತಂದ, ಆಶ್ಚರ್ಯಕರವಾದ ಆ ಕೆಲಸವನ್ನು ವಿಲಕ್ಷ್ಯ=ನೋಡಿ ಪರಮರ್ಷಯಃ=ಶ್ರೇಷ್ಠರಾದ ಮುನಿಗಳು ತಸ್ಮೈ=ಅವನಿಗೆ ವಿಜಿತಾಶ್ವಃ ಇತಿ=ವಿಜಿತಾಶ್ವನು ಎಂಬ ನಾಮಧೇಯಂ=ಹೆಸರನ್ನು ದದುಃ=ಕೊಟ್ಟರು. ।।೧೮।।

**ಉಪಸೃಜ್ಯ ತಮಸ್ತೀವ್ರಂ ಜಹಾರಾಶ್ವಂ ಪುನರ್ಹರಿಃ ।**
**ಚಷಾಲಯೂಪಯೋಶ್ಛನ್ನೋ ಹಿರಣ್ಯರಶನಂ ವಿಭುಃ ।।೧೯।।**

ವಿಭುಃ=ಸಮರ್ಥನಾದ ಹರಿಃ=ಇಂದ್ರನು ಪುನಃ=ಮತ್ತೆ ತೀವ್ರಂ ತಮಃ=ಭಾರಿಕತ್ತಲೆಯನ್ನು ಉಪಸೃಜ್ಯ=ಸೃಷ್ಟಿಸಿ ಚಷಾಲಯೂಪಯೋಃ=ಕಟ್ಟಿಗೆಯಿಂದ ನಿರ್ಮಿಸಿದ ಯೂಪಕ್ಕೆ ಹಾಕುವ ಬಳೆ ಮತ್ತು ಯೂಪ(ಪಶು ಕಟ್ಟುವ ಕಂಭ)ಗಳ ಮಧ್ಯದಲ್ಲಿ ಛನ್ನಃ=ಅಡಗಿದ್ದು ಹಿರಣ್ಯರಶನಂ=ಚಿನ್ನದ ಹಗ್ಗವುಳ್ಳ ಅಶ್ವಂ=ಕುದುರೆಯನ್ನು ಜಹಾರ=ಅಪಹರಿಸಿದನು. ।।೧೯।।

**ಅತ್ರಿಃ ಸಂದರ್ಶಯಾಮಾಸ ತ್ವರಮಾಣಂ ವಿಹಾಯಸಾ ।**
**ಕಪಾಲಖಟ್ವಾಂಗಧರಂ ವೀರೋ ನೈನಮಬೋಧತ ।।೨೦।।**

ವಿಹಾಯಸಾ ತ್ವರಮಾಣಂ=ಆಕಾಶದಿಂದ ವೇಗವಾಗಿ ಹೋಗುತ್ತಿರುವ, ಕಪಾಲಖಟ್ವಾಂಗಧರಂ=(ಕಪಾಲ) ತಲೆಚಿಪ್ಪು (ಖಟ್ವಾಂಗ) ತ್ರಿಶೂಲಗಳನ್ನು (ಧರಂ) ಹಿಡಿದಿರುವ ಏನಂ=ಇಂದ್ರನನ್ನು ವೀರಃ=ವಿಜಿತಾಶ್ವನು ನ ಅಬೋಧತ=ತಿಳಿಯಲಿಲ್ಲ, ಅತ್ರಿಃ=ಅತ್ರಿ ಋಷಿಯು ಸಂದರ್ಶಯಾಮಾಸ=ತೋರಿಸಿದನು. ||೨೦||

**ಅತ್ರಿಣಾ ಚೋದಿತಸ್ತಸ್ಮೈ ಸಂದಧೇ ವಿಶಿಖಂ ರುಷಾ ।**
**ಸೋಽಶ್ವಂ ರೂಪಂ ಚ ತದ್ಧಿತ್ವಾ ತಸ್ಥಾವಂತರ್ಹಿತಃ ಸ್ವರಾಟ್ ||೨೧||**

ಅತ್ರಿಣಾ=ಅತ್ರಿಋಷಿಗಳಿಂದ ಚೋದಿತಃ=ಪ್ರೇರಿತನಾದ ಸಃ=ವಿಜಿತಾಶ್ವನು ರುಷಾ=ಸಿಟ್ಟಿನಿಂದ ತಸ್ಮೈ=ಇಂದ್ರನಿಗೆ *ವಿಶಿಖಂ ಸಂದಧೇ=ತಲೆಯನ್ನು ದೇಹದಿಂದ ಬೇರ್ಪಡಿಸುವ ಅಗ್ರಭಾಗವುಳ್ಳ ಬಾಣವನ್ನು ಹೂಡಿದನು. ಸ್ವರಾಟ್=ಇಂದ್ರನು ತತ್‌ರೂಪಂ=ಆ ರೂಪವನ್ನೂ ಚ=ಮತ್ತು ಅಶ್ವಂ=ಕುದುರೆಯನ್ನೂ ಹಿತ್ವಾ=ಬಿಟ್ಟು ಅಂತರ್ಹಿತಃ ತಸ್ಥೌ=ಕಾಣದಂತೆ ನಿಂತನು.

*ವಿ ನಿಷೇಧೇ ಪೃಥಗ್ಭಾವೇ'' ಎಂದು ಯಾದವಕೋಶ ಇದೆ. ಶಿಖಾ ಎಂದರೆ ಅಗ್ರಭಾಗ. ಹಾಗಾಗಿ- ''ವಿ ಕಾಯಾಚ್ಛಿರಸಃ ಪೃಥಗ್ಭಾವಂ ಕುರ್ವತೀ ಶಿಖಾ ಯಸ್ಯ ಸ ವಿಶಿಖಃ'' ಎಂದು ಸಮಾಸ. ||೨೧||

**ವೀರಶ್ಚಾಶ್ವಮುಪಾದಾಯ ಪಿತೃಯಜ್ಞಮಥಾವ್ರಜತ್ ।**
**ತದವದ್ಯಂ ಹರೇ ರೂಪಂ ಜಗೃಹುರ್ಜ್ಞಾನದುರ್ಬಲಾಃ ||೨೨||**

ವೀರಃ ಚ=ವಿಜಿತಾಶ್ವನಾದರೂ ಅಶ್ವಂ=ಕುದುರೆಯನ್ನು ಉಪಾದಾಯ=ತೆಗೆದಕೊಂಡು ಪಿತೃಯಜ್ಞಂ ಆವ್ರಜತ್=ತಂದೆಯು ಮಾಡುವ ಯಜ್ಞಕ್ಕೆ ತಿರುಗಿಬಂದನು. ಜ್ಞಾನದುರ್ಬಲಾಃ =ಅಜ್ಞಾನಿಗಳು ಅವದ್ಯಂ=ನಿಂದಿತವಾದ ಹರೇಃ=ಇಂದ್ರನ ತತ್ ರೂಪಂ=ಆ ರೂಪವನ್ನು ಜಗೃಹುಃ= ಸ್ವೀಕರಿಸಿದರು. ||೨೨||

**ಯಾನಿ ರೂಪಾಣಿ ಜಗೃಹೇ ಇಂದ್ರೋ ಹಯಜಿಹೀರ್ಷಯಾ ।**
**ತಾನಿ ಪಾಪಸ್ಯ ಷಂಡಾನಿ ಲಿಂಗಂ ಷಂಡಮಿಹೋಚ್ಯತೇ ||೨೩||**

ಇಂದ್ರಃ=ಇಂದ್ರನು ಹಯಜಿಹೀರ್ಷಯಾ=ಕುದುರೆಯನ್ನು ಅಪಹರಿಸುವ ಇಚ್ಛೆಯಿಂದ ಯಾನಿ ರೂಪಾಣಿ ಜಗೃಹೇ=ಯಾವ ರೂಪಗಳನ್ನು ಸ್ವೀಕರಿಸಿದನೋ ತಾನಿ=ಅವುಗಳು ಪಾಪಸ್ಯ =ಪಾಪಕ್ಕೆ ಷಂಡಾನಿ=ಚಿಹ್ನಗಳಾದವು. ಇಹ=ಈ ಪ್ರಕರಣದಲ್ಲಿ ಲಿಂಗಂ=ಜ್ಞಾಪಕವು ಷಂಡಂ ಉಚ್ಯತೇ=ಷಂಡವೆಂದು ಕರೆಸಿಕೊಳ್ಳುವದು.

ವಿಜಯಧ್ವಜೀಯಪ್ರಕಾರ - 'ಖಂಡಾನಿ' ಮತ್ತು 'ಖಂಡಂ' ಎಂದು ಪಾಠ ಬೇಧವಿದೆ. ಖಂಡಶಬ್ದವು ಸಮುದಾಯವಾಚಕವಾಗಿದ್ದು ಇಲ್ಲಿ ಚಿಹ್ನವಾಚಕವೆಂದು ಭಾವ.

'ನಾಮೈಕದೇಶೇ ನಾಮಗ್ರಹಣಂ' ಎಂಬ ವಚನವಿರುವುದರಿಂದ ಪಾ ಶಬ್ದಕ್ಕೆ ಪಾಪವೆದಂರ್ಥ. ಆದಕ್ಕೆ ಷಂಡ ಅಥವಾ ಖಂಡ ಎಂದರೆ ಜ್ಞಾಪಕವಾದ ರೂಪವು ಪಾಷಂಡ (ಪಾಖಂಡ) ಎಂದು ನಿರ್ವಚನ ಮಾಡಿದಂತಾಯಿತು. ।।೨೩।।

**ಏವಮಿಂದ್ರೇ ಹರತ್ಯಶ್ವಂ ವೈನ್ಯಯಜ್ಞಜಿಘಾಂಸಯಾ ।**
**ತದ್ಗೃಹೀತವಿಸೃಷ್ಟೇಷು ಪಾಷಂಡೇಷು ಮತಿರ್ನೃಣಾಮ್ ।।೨೪।।**

ಇಂದ್ರೇ=ಇಂದ್ರನು ವೈನ್ಯಯಜ್ಞಜಿಘಾಂಸಯಾ=ಪೃಥುವಿನ ಯಜ್ಞವನ್ನು ನಾಶಮಾಡುವ ಇಚ್ಛೆಯಿಂದ ಏವಂ=ಈ ರೀತಿಯಾಗಿ ವೇಷಧಾರಣ ಮಾಡಿ ಅಶ್ವಂ=ಕುದುರೆಯನ್ನು ಹರತಿ ಸತಿ=ಅಪಹರಿಸುತ್ತಿರಲು, ತದ್ಗೃಹೀತವಿಸೃಷ್ಟೇಷು=ಅವನು ತೆಗೆದುಕೊಂಡು ಬಿಟ್ಟುಹೋದ ಪಾಷಂಡೇಷು=ಪಾಪಚಿಹ್ನವಾದ ವೇಷಗಳಲ್ಲಿ ನೃಣಾಂ=ಜನರಿಗೆ ಮತಿಃ ಅಭೂತ್= ಅಭಿರುಚಿಯು ಉಂಟಾಯಿತು. ।।೨೪।।

**ಧರ್ಮ ಇತ್ಯುಪಧರ್ಮೇಷು ನಗ್ನರಕ್ತಪಟಾದಿಷು ।**
**ಪ್ರಾಯೇಣ ಸಜ್ಜತೇ ಭ್ರಾಂತ್ಯಾ ಪೇಶಲೇಷು ಚ ವಾಗ್ಮಿಷು ।।೨೫।।**

ಉಪಧರ್ಮೇಷು=ವಸ್ತುತಃ ಅಧರ್ಮವಾದ (ಧರ್ಮದಂತೆ ತೋರುವ) ನಗ್ನರಕ್ತಪಟಾದಿಷು=ಬೆತ್ತಲೆ ಇರುವದು, ಜನರಲ್ಲಿ ಕೆಂಪುಬಟ್ಟೆ ಉಡುವುದು, ಆದಿಪದದಿಂದ ಕಪಾಲ ಹಿಡಿಯುವದೇ ಮುಂತಾದವುಗಳಲ್ಲಿ ಧರ್ಮ ಇತಿ=ಇದೇ ನಿಜವಾಗಿ ಧರ್ಮವೆಂದು ಮತಿಃ ಸಜ್ಜತೇ=ಬುದ್ಧಿಯು ಆಸಕ್ತವಾಗುವದು.

ಚ=ಮತ್ತು ಭ್ರಾಂತ್ಯಾ ಪೇಶಲೇಷು=ಮೇಲ್ನೋಟಕ್ಕೆ ರಮ್ಯವಾಗಿ ಕಾಣುವಂತಹದ್ದರಲ್ಲಿ, ವಾಗ್ಮಿಷು=ಹೇತುಗಳನ್ನು ಹೇಳುವುದರಲ್ಲಿ ಚತುರರಾದವರಲ್ಲಿ ಪ್ರಾಯಃ ಮತಿಃ ಸಜ್ಜತೇ=ಬಹಳವಾಗಿ ಬುದ್ಧಿಯು ಆಸಕ್ತವಾಗುವದು. ಈಗ ಕಂಡುಬರುವ ಕರಿಬಟ್ಟೆ, ಬಣ್ಣಬಣ್ಣದ ಲುಂಗಿ ಎಲ್ಲವೂ ಪಾಖಂಡವೇ ಎಂದು ಭಾವ.

**ಭಾಗವತ ತಾತ್ಪರ್ಯ -**

ಇಲ್ಲಿ ಉಪಧರ್ಮ ಶಬ್ದಕ್ಕೆ ಈಗ ಬೇಕಾದ ಅರ್ಥವನ್ನು ಪ್ರಮಾಣದಿಂದಲೇ ತಿಳಿಸುವರು-

ಧರ್ಮೋಪಮಸ್ತ್ವಧರ್ಮೋಽಯಮುಪಧರ್ಮಃ ಸ ಉಚ್ಯತೇ । ಇತಿ ಹರಿವಂಶೇಷು।

ಧರ್ಮದಂತೆ ಕಾಣುವ ಅಧರ್ಮವು ಉಪಧರ್ಮವೆನಿಸುವದು ಎಂದು ಹರಿವಂಶದಲ್ಲಿದೆ. ।।೨೫।।

**ತದಭಿಜ್ಞಾಯ ಭಗವಾನ್ ಪೃಥುಃ ಪೃಥುಪರಾಕ್ರಮಃ ।**
**ಇಂದ್ರಾಯ ಕುಪಿತೋ ಬಾಣಮಾದತ್ತೋದ್ಯತಕಾರ್ಮುಕಃ ।।೨೬।।**

ಪೃಥುಪರಾಕ್ರಮಃ=ಬಹಳ ಪರಾಕ್ರಮವುಳ್ಳ ಭಗವಾನ್ ಪೃಥುಃ=ಪೂಜ್ಯನಾದ ಪೃಥುವು ತತ್=ಇಂದ್ರನು ಮಾಡಿದ ಕುದುರೆ ಕಳ್ಳತನವನ್ನು ಅಭಿಜ್ಞಾಯ=ತಿಳಿದು ಕುಪಿತಃ= ಕೋಪಗೊಂಡವನಾಗಿ ಇಂದ್ರಾಯ=ಇಂದ್ರನಿಗಾಗಿ ಉದ್ಯತಕಾರ್ಮುಕಃ=ಧನುಸ್ಸನ್ನು ಎತ್ತಿದವನಾಗಿ ಬಾಣಂ=ಬಾಣವನ್ನು ಆದತ್ತ=ಸ್ವೀಕರಿಸಿದನು. ।।೨೬।।

**ತಮೃತ್ವಿಜಃ ಶಕ್ರವಧಾಭಿಸಂಧಿತಂ**
**ವಿಚಕ್ಷ್ಯ ದುಃಪ್ರೇಕ್ಷ್ಯಮಸಹ್ಯರಂಹಸಾ ।**
**ನಿವಾರಯಾಮಾಸುರಹೋ ಮಹಾಮತೇ**
**ನ ಯುಜ್ಯತೇಽತ್ರಾನ್ಯವಧೋಽಪ್ರಚೋದಿತಃ ।।೨೭।।**

ಶಕ್ರವಧಾಭಿಸಂಧಿತಂ=ಇಂದ್ರನನ್ನು ಸಂಹರಿಸುವ ಅಭಿಪ್ರಾಯವುಳ್ಳ ಅಸಹ್ಯರಂಹಸಾ= ತಡೆಯಲಾಗದ ವೇಗದಿಂದ ದುಃಪ್ರೇಕ್ಷ್ಯಂ=ನೋಡಲಾಗದ ತಂ=ಪೃಥುವನ್ನು ವಿಚಕ್ಷ್ಯ= ನೋಡಿ, ಋತ್ವಿಜಃ=ಋತ್ವಿಜರು ಹೇ ಮಹಾಮತೇ=ಎಲೋ ಭಾರೀ ಬುದ್ಧಿಶಾಲಿಯಾದವನೇ ! ಅಪ್ರಚೋದಿತಃ=ಸಂಹರಿಸಬೇಕೆಂದು ಹೇಳದಿರುವ ಅನ್ಯವಧಃ=ಬೇರೆಯವರ ಸಂಹಾರವು ಅತ್ರ=ಯಜ್ಞಕಾಲದಲ್ಲಿ ನ ಯುಜ್ಯತೇ=ಯುಕ್ತವಾಗಲಾರದು ಎಂದು ನಿವಾರಯಾಮಾಸುಃ= ತಡೆದರು. ।।೨೭।।

ಹಾಗಾದರೆ ಅವನನ್ನು ನಿಗ್ರಹಿಸುವದು ಹೇಗೆ ? ಎಂದರೆ ಹೇಳುವರು -

**ವಯಂ ಮರುತ್ವಂತಮಿಹಾರ್ಥನಾಶನಂ**
**ಹ್ವಯಾಮಹೇ ತ್ವಚ್ಛ್ರವಸಾ ಹತತ್ವಿಷಮ್ ।**
**ಅಯಾತಯಾಮೋಪಹವೈಸ್ತಮಗ್ನಯೇ**
**ಪ್ರಸಹ್ಯ ರಾಜನ್ ಜುಹವಾಮ ತೇಽಹಿತಮ್ ।।೨೮।।**

ಹೇ ರಾಜನ್=ಎಲೋ ರಾಜನೇ ! ವಯಂ=ನಾವು ಅರ್ಥನಾಶನಂ=ಯಜ್ಞವೆಂಬ ನಿನ್ನ ಪ್ರಯೋಜನವನ್ನು ಹಾಳುಮಾಡುವ, ತ್ವಚ್ಛ್ರವಸಾ=ನಿನ್ನ ಕೀರ್ತಿಯಿಂದ ಹತತ್ವಿಷಂ= ಕಾಂತಿರಹಿತನಾದ, ತೇ=ನಿನಗೆ ಅಹಿತಂ=ದುಃಖಕೊಡುವ, ಮರುತ್ವಂತಂ=ಇಂದ್ರನನ್ನು ಅಯಾತಯಾಮೋಪಹವೈಃ=ಸತ್ವವನ್ನು ಕಳೆದುಕೊಳ್ಳದ ಆಹ್ವಾನಮಂತ್ರಗಳಿಂದ

ಹ್ವಯಾಮಹೇ=ಕರೆಯುವವು. ನಂತರ ಪ್ರಸಹ್ಯ= ಬಲಾತ್ಕಾರದಿಂದ ಅಗ್ನಯೇ ಜುಹವಾಮ=ಅಗ್ನಿಯಲ್ಲಿ ಹೋಮ ಮಾಡೋಣ. ।।೨೮।।

**ಇತ್ಯಾಮಂತ್ರ್ಯ ಕ್ರತುಪತಿಂ ವಿದುರಾಸ್ಯರ್ತ್ವಿಜೋ ರುಷಾ ।**
**ಸ್ರುಗ್ಘಸ್ತಂ ಜುಹ್ವತೋಽಭ್ಯೇತ್ಯ ಸ್ವಯಂಭೂಃ ಪ್ರತ್ಯಷೇಧತ ।।೨೯।।**

ರುಷಾ=ಸಿಟ್ಟಿನಿಂದ ಕ್ರತುಪತಿಂ=ಯಜ್ಞಯಜಮಾನನಾದ ಪೃಥುವನ್ನು ಇತಿ ಆಮಂತ್ರ್ಯ ಹೋಮ ಮಾಡುವುದಾಗಿ ಹೇಳಿ ಕರೆದು ಸ್ರುಙ್ಹಸ್ತಂ=ಮಂತ್ರಬಲದಿಂದ ಸ್ರುಕ್ಕಿನಲ್ಲಿರಿಸಿದ ಇಂದ್ರನನ್ನು ಜುಹ್ವತಃ=ಹೋಮ ಮಾಡುವ ಅಸ್ಯ ಋತ್ವಿಜಃ ಅಭ್ಯೇತ್ಯ=ಪೃಥುವಿನ ಋತ್ವಿಜರನ್ನು ಸಮೀಪಿಸಿ ಸ್ವಯಂಭೂಃ=ಬ್ರಹ್ಮದೇವರು ಪ್ರತ್ಯಷೇಧತ=ನಿಷೇಧಿಸಿದರು. (ತಡೆದರು ಎಂದು ಭಾವ.)।।೨೯।।

**ನ ವಧ್ಯೋ ಭವತಾಮಿಂದ್ರೋ ಯದ್ಯಜ್ಞೋ ಭಗವತ್ತನುಃ ।**
**ತಂ ಜಿಘಾಂಸತ ಯಜ್ಞೇನ ಯಸ್ಯೇಷ್ಟಾಸ್ತನವಃ ಸುರಾಃ ।।೩೦।।**

ಯತ್=ಯಾವ ಕಾರಣ ಯಜ್ಞಃ=ಯಜ್ಞವು ಭಗವತ್ತನುಃ=ಶ್ರೀಹರಿಯ ಹಾಗೂ ಇಂದ್ರನ ಶರೀರವಿದ್ದಂತೆಯೋ, ಯಜ್ಞೇನ ಇಷ್ಟಾಃ ಸುರಾಃ=ಯಜ್ಞದಿಂದ ಪೂಜಿತರಾದ ದೇವತೆಗಳು ಯಸ್ಯ ತನವಃ=ಯಾವ ಇಂದ್ರನ ಪ್ರತೀಕರಾಗಿರುವರೋ, ಸಃ ಇಂದ್ರಃ=ಆ ಇಂದ್ರನು ಭವತಾಂ ವಧ್ಯಃ ನ=ನಿಮ್ಮಿಂದ ಕೊಲ್ಲಲ್ಪಡಲು ಯೋಗ್ಯನಲ್ಲ. ಕಾರಣ ತಂ ನ ಜಿಘಾಂಸತ= ಅವನನ್ನು ಕೊಲ್ಲಲು ಇಚ್ಛಿಸಬೇಡಿರಿ.

ಅವನ ಹಿಂಸೆ ಮಾಡಿದರೆ ಯಜ್ಞವೇ ನಡೆಯಲಾರದು ಎಂದು ಭಾವ. ।।೩೦।।

ಇನ್ನುಮುಂದೆ ಇಂದ್ರನೊಡನೆ ಸಖ್ಯವನ್ನೇ ಸಂಪಾದಿಸಬೇಕು. ಇಲ್ಲವಾದರೆ ಮತ್ತೆ ಪಾಷಂಡರನ್ನು ಸೃಷ್ಟಿಸುವನು ಎಂದು ಹೇಳುವರು -

**ತದಿದಂ ಪಶ್ಯತ ಮಹದ್ಧರ್ಮವ್ಯತಿಕರಂ ದ್ವಿಜಾಃ ।**
**ಇಂದ್ರೇಣಾನುಷ್ಠಿತಂ ರಾಜ್ಞಃ ಕರ್ಮೈತದ್ಧಿ ಜಿಘಾಂಸಯಾ ।।೩೧।।**

ಹೇ ದ್ವಿಜಾಃ=ಎಲೈ ಋತ್ವಿಜರೇ ! ರಾಜ್ಞಃ=ಪೃಥುರಾಜನ ಮಹದ್ಧರ್ಮವ್ಯತಿಕರಂ= ದೊಡ್ಡವರ ಧರ್ಮಕ್ಕೆ ವ್ಯತ್ಯಾಸವನ್ನುಂಟುಮಾಡುವ ಏತತ್ ಕರ್ಮಜಿಘಾಂಸಯಾ=ಈ ನೂರನೇ ಯಜ್ಞರೂಪಕಾರ್ಯವನ್ನು ನಿಲ್ಲಿಸುವ ಇಚ್ಛೆಯಿಂದ (ತನ್ನ ಶತಕ್ರತುತ್ವಲಕ್ಷಣಕ್ಕೆ ಹಾನಿ ಬರುವದರಿಂದ ಎಂದರ್ಥ) ಇಂದ್ರೇಣ ಅನುಷ್ಠಿತಂ=ಇಂದ್ರನಿಂದ ಮಾಡಲ್ಪಟ್ಟ ಇದಂ=ಅದನ್ನು ಅನುಸರಿಸಿ ಜಗತ್ತಿನಲ್ಲಿ ನಡೆದುಬಂದ ಪಾಷಂಡವನ್ನು ಪಶ್ಯತ=ನೋಡಿರಿ.

ಸಖ್ಯಸಂಪಾದನೆ ಮಾಡುವದು ಹೇಗೆ ? ಎಂದರೆ ಕೊನೆಯ ಯಜ್ಞ ಮಾಡುವದನ್ನು ಬಿಡುವದರಿಂದಲೇ ಸಾಧ್ಯ ಎಂಬ ಅಭಿಪ್ರಾಯದಿಂದ ಪೃಥುವಿಗೆ ಹೇಳುವರು -

**ಪೃಥುಕೀರ್ತಿಃ ಪೃಥೋ ಭೂಯಾಸ್ತ್ವಂ ಹ್ಯೇಕೋನಶತಕ್ರತುಃ ।**
**ಅಲಂ ತೇ ಕ್ರತುಭಿಃ ★ಶಿಷ್ಟೈರ್ಯದ್ಭವಾನ್ ಮೋಕ್ಷಧರ್ಮವಿತ್ ॥೩೨॥**

ಹೇ ಪೃಥೋ=ಎಲೋ ಪೃಥುವೇ ! ತ್ವಂ=ನೀನು ಏಕೋನಶತಕ್ರತುಃ ಇತಿ ಪೃಥುಕೀರ್ತಿಃ ಭೂಯಾಃ=ನೂರಕ್ಕೆ ಒಂದೇಕಡಿಮೆ ಯಜ್ಞ ಮಾಡಿದವ (ತೊಂಭತ್ತೊಂಭತ್ತು ಯಜ್ಞಗಳನ್ನು ಮಾಡಿದವ) ಎಂದು ಪ್ರಸಿದ್ಧವಾದ ಕೀರ್ತಿಯುಳ್ಳವನಾಗುವಿ. ಯತ್=ಯಾವ ಕಾರಣ ಭವಾನ್=ನೀನು ಮೋಕ್ಷಧರ್ಮವಿತ್=ನಮ್ಮ ಯೋಗ್ಯತೆಗಿಂತ ಹೆಚ್ಚು ಸಾಧನೆ ಮಾಡಬಾರದೆಂಬ ಧರ್ಮವನ್ನು ತಿಳಿದಿರುವಿಯೋ ಆ ಕಾರಣ ಶಿಷ್ಟೈಃ ಕ್ರತುಭಿಃ ಅಲಂ=ಒಂದೋ ಎರಡೋ ಉಳಿದರೆ ಉಳಿಯಲಿ, ನಿನಗೆ ಇಷ್ಟೇ ಸಾಕು.

**ಪಾಠಾಂತರ - ಅರ್ಥಾಂತರ**

★ತೇ=ನಿನ್ನಿಂದ ಸ್ವಿಷ್ಟೈಃ=ಚೆನ್ನಾಗಿ ಮಾಡಿದ ಕ್ರತುಭಿಃ=೯೯ ಯಜ್ಞಗಳಿಂದಲೇ ತೇ=ನಿನ್ನ ಸ್ವರೂಪವು ಅಲಂ=ಪೂರ್ಣವಾಗುವದು.

ಹೆಚ್ಚಿನ ಪ್ರಯತ್ನ ದೋಷಕ್ಕೆ ಕಾರಣವಾಗುವದು ಎಂಬುದನ್ನು ತಿಳಿದಿರುವಿಯಷ್ಟೇ ?

ಸ್ತೋತ್ತಮದ್ರೋಹ ಮಾಡುವುದು ನಿನಗೆ ಉಚಿತವಲ್ಲವೆಂದು ಹೇಳುವರು -

**ನೈವಾತ್ಮನೇ ಮಹೇಂದ್ರಾಯ ರೋಷಮಾಹರ್ತುಮರ್ಹಸಿ ।**
**ಉಭಾವಪಿ ಹಿ ಭದ್ರಂ ತೇ ಉತ್ತಮಶ್ಲೋಕವಿಗ್ರಹೌ ॥೩೩॥**

ಆತ್ಮನೇ=ನಿನಗೆ ಸ್ವಾಮಿಯಾದ ಅಥವಾ ನಿನ್ನಲ್ಲಿ ಸನ್ನಿಹಿತನಾದ, (ಶ್ರೀಹರಿಯ ವಿಶೇಷಸನ್ನಿಧಾನ ಅವನಲ್ಲಿರುವುದರಿಂದ ನೀನೇ ಆದ ಎಂದು ವಿಜಯಧ್ವಜೀಯಪ್ರಕಾರ) ಮಹೇಂದ್ರಾಯ=ಇಂದ್ರನಿಗೆ ರೋಷಂ ಆಹರ್ತುಂ ನ ಅರ್ಹಸಿ=ದ್ವೇಷ ಉಂಟುಮಾಡಲು ಯೋಗ್ಯನಲ್ಲ. ಉಭೌ ಅಪಿ=ಇಬ್ಬರೂ ಸಹ ಉತ್ತಮಶ್ಲೋಕವಿಗ್ರಹೌ=ಶ್ರೀಹರಿಯ ವಿಶೇಷಸನ್ನಿಧಾನಪಾತ್ರವಾದ ದೇಹವುಳ್ಳವರು, ಆ ಕಾರಣ ಇಬ್ಬರಲ್ಲಿ ಪರಸ್ಪರ ದ್ವೇಷ ಸಲ್ಲದು. ಆದ್ದರಿಂದ ದ್ವೇಷಪರಿತ್ಯಾಗ ಮಾಡುವದರಿಂದ ತೇ=ನಿನಗೆ ಭದ್ರಂ ಭವಿಷ್ಯತಿ= ಕಲ್ಯಾಣವಾಗುವದು. ॥೩೩॥

ಇಷ್ಟು ಹೇಳಿದರೂ "ಪ್ರಾರಂಭಿಸಿದ ಯಜ್ಞ ಸಮಾಪ್ತಿಯಾಗಲಿಲ್ಲ" ಎಂದು ಚಿಂತಿಸುವ ರಾಜನಿಗೆ "ರೋಷಶಮನವೇ ಉಚಿತ. ಚಿಂತೆಯಿಂದ ನಿನಗೆ ಹಾನಿಯಾಗುವದು" ಎಂದು ಹೇಳುವರು -

**ಮಾಸ್ಮಿನ್ ಮಹಾರಾಜ ಕೃಥಾಃ ಸ್ಮ ಚಿಂತಾಂ**
**ನಿಶಾಮಯಾಸ್ಮದ್ವಚ ಆದೃತಾತ್ಮಾ ।**
**ಯದ್ಧ್ಯಾಯತೋ ದೈವಹತಂ ತು ಕರ್ತುಂ**
**ಮನೋಽತಿಕಷ್ಟಂ ವಿಶತೇ ತಮೋಽಂಧಮ್ ।।೩೪।।**

ಮಹಾರಾಜ=ಪೃಥುವೇ ! ಅಸ್ಮಿನ್=ಕೊನೆಯ ಯಜ್ಞವಿಷಯದಲ್ಲಿ ಚಿಂತಾಂ=ಮುಗಿಯಲಿಲ್ಲವೆಂಬ ಚಿಂತೆಯನ್ನು ಮಾ ಕೃಥಾಃ=ಮಾಡಬೇಡ. ಆದೃತಾತ್ಮಾ=ಮನಃಪೂರ್ವಕವಾಗಿ ಅಸ್ಮದ್ವಚಃ=ನಮ್ಮ ಮಾತನ್ನು ನಿಶಾಮಯ=ಕೇಳು. ಯತ್=ಯಾವ ಕಾರಣ ದೈವಹತಂ ಕರ್ಮ=ಅದೃಷ್ಟವಿಲ್ಲದ ಕಾರ್ಯವನ್ನು ಕರ್ತುಂ=ಮಾಡಲು ಧ್ಯಾಯತಃ=ಉಪಾಯವನ್ನು ಚಿಂತಿಸುವವನಿಗೆ ಅತಿಕಷ್ಟಂ ಅಂಧಂತಮಃ=ಬಹಳ ಕಷ್ಟದಾಯಕವಾದ, ಕುರುಡು ಮಾಡುವ ಮೋಹವನ್ನು ಮನಃ ವಿಶತೇ=ಮನಸ್ಸು ಹೊಂದುತ್ತದೆ. ।।೩೪।।

**ಕ್ರತುರ್ವಿರಮತಾಮೇಷ ದೇವೇಷು ದುರವಗ್ರಹಃ ।**
**ಧರ್ಮವ್ಯತಿಕರೋ ಯತ್ರ ಪಾಖಂಡೈರಿಂದ್ರನಿರ್ಮಿತೈಃ ।।೩೫।।**

ಯತ್ರ=ಯಾವ ಯಜ್ಞದಲ್ಲಿ ಇಂದ್ರನಿರ್ಮಿತೈಃ ಪಾಷಂಡೈಃ=ಇಂದ್ರನಿಂದ ನಿರ್ಮಿತವಾದ ಪಾಖಂಡದಿಂದ ಧರ್ಮವ್ಯತಿಕರಃ=ಧರ್ಮವ್ಯತ್ಯಾಸವೂ ಆಗುವುದೋ, ಮತ್ತು ಯತ್ರ ದೇವೇಷು ದುರವಗ್ರಹಃ=ಯಾವ ಯಜ್ಞದಿಂದ ದೇವತೆಗಳಿಗೆ ನಿನ್ನ ಮೇಲೆ ಅವಕೃಪೆಯಾಗುವದೋ ಏಷಃ ಕ್ರತುಃ ವಿರಮತಾಂ=ಅಂತಹ ಈ ಕೊನೆಯ ಯಜ್ಞ ನಿಲ್ಲಲಿ.

ಅಧರ್ಮದಲ್ಲಿ ಧರ್ಮಬುದ್ಧಿಯು ಹುಟ್ಟಿ ಧರ್ಮನಾಶವಾಗುವುದು. ದೇವತೆಗಳ ಅವಕೃಪೆಯಾದರೆ ಮಳೆ-ಬೆಳೆಯಿಲ್ಲದೇ ಎಲ್ಲರೂ ದೇಹ ಬಿಡುವ ಪ್ರಸಂಗವೂ ಬರುವುದು ಎಂದೂ ಭಾವ. ।।೩೫।।

ಧರ್ಮವ್ಯತಿಕರವನ್ನೇ ತಿಳಿಸುವರು -

**ಏಭಿರಿಂದ್ರೋಪಸಂಸೃಷ್ಟೈಃ ಪಾಖಂಡೈರ್ಹಾರಿಭಿರ್ಜನಮ್ ।**
**ಹ್ರಿಯಮಾಣಂ ವಿಚಕ್ಷ್ವೈತದ್ಯಸ್ತೇ ಯಜ್ಞಧ್ರುಗಶ್ವಮುಟ್ ।।೩೬ ।।**

ಯಃ=ಯಾವನು ತೇ=ನಿನ್ನ ಯಜ್ಞಧ್ರುಕ್=ಯಜ್ಞಕ್ಕೆ ದ್ರೋಹವೆಸಗಿರುವನೋ, ಅಶ್ವಮುಟ್=ಕುದುರೆಯನ್ನು ಅಪಹರಿಸಿರುವನೋ ಅಂತಹ ಇಂದ್ರೋಪಸಂಸಷ್ಟೈಃ=ಇಂದ್ರನಿಂದ ನಿರ್ಮಿತವಾದ ಏಭಿಃ ಹಾರಿಭಿಃ=ಮನಸ್ಸನ್ನು ಸೆಳೆಯುವ ಪಾಖಂಡೈಃ=

ಅಧರ್ಮಗಳಿಂದ ಹ್ರಿಯಮಾಣಂ=ಸೆಳೆಯಲ್ಪಡುವ (ಜನಂ=ಜನರನ್ನು) ಏತತ್=ಈ ಕಾರ್ಯವನ್ನು ವಿಚಕ್ಷ್ವ=ನೋಡು. ।।೩೬।।

ಧರ್ಮನಾಶವಾದರೆ ಆಗಲಿ. ನನಗೇನು ಕಷ್ಟ ? ಎಂದರೆ ಹೇಳುವರು -

**ಭವಾನ್ ಪರಿತ್ರಾತುಮಿಹಾವತೀರ್ಣೋ**
**ಧರ್ಮಂ ಚ ನಾನಾಸಮಯಾನುರೂಪಮ್ ।**
**ವೇನಾಪಚಾರಾದವಲುಪ್ತಮದ್ಯ**
**ತದ್ದೇಹತೋ ವಿಷ್ಣುಕಲಾऽಸಿ ವೈನ್ಯ ।।೩೭।।**

ಹೇ ವೈನ್ಯ=ಪೃಥುವೇ ! ವೇನಾಪಚಾರಾತ್=ವೇನ ಮಾಡಿದ ಅನ್ಯಾಯದಿಂದ ಅವಲುಪ್ತಂ=ನಶಿಸಿದ ಧರ್ಮಂ=ಧರ್ಮವನ್ನು ನಾನಾಸಮಯಾನುರೂಪಂ=ಅನೇಕ ಶಾಸ್ತ್ರಗಳಿಗನುಸಾರವಾಗಿ ಪರಿತ್ರಾತುಂ=ರಕ್ಷಿಸಲು ಭವಾನ್=ನೀನು ತದ್ದೇಹತಃ=ವೇನನ ದೇಹದಿಂದ ಅವತೀರ್ಣಃ=ಅವತರಿಸಿದ ವಿಷ್ಣುಕಲಾ ಅಸಿ=ವಿಷ್ಣುವಿನಿಂದ ಆವಿಷ್ಟವಾದ ವಿಭಿನ್ನಾಂಶನಾಗಿದ್ದಿ

ಧರ್ಮರಕ್ಷಣೆಗಾಗಿ ಅವತರಿಸಿದವನಿಗೆ, ರಕ್ಷಕನಾದ ವಿಷ್ಣುವಿನ ಆವೇಶವುಳ್ಳವನಿಗೆ ಧರ್ಮರಕ್ಷಣೆಯೇ ಯೋಗ್ಯವೆಂದು ಭಾವ. ।।೩೭।।

ನಾನು ಜಗತ್ಸ್ರಷ್ಟೃವೂ ಪ್ರಜಾಪತಿಯೂ ಆದ್ದರಿಂದ ನನ್ನ ಇಷ್ಟವನ್ನು ನೇರವೇರಿಸುವದು ನಿನ್ನ ಕರ್ತವ್ಯ. ಇಲ್ಲವಾದರೆ ನನ್ನ ತಿರಸ್ಕಾರ ಮಾಡಿದಂತಾಗುವದು ಎಂದು ಹೇಳುವರು -

**ಸ ತ್ವಂ ವಿಮೃಶ್ಯಾಭಿಭವಂ ಪ್ರಜಾಪತೇಃ**
**ಸಂಕಲ್ಪಿತಂ ವಿಶ್ವಸೃಜೋऽತಿಪೀಪೃಹಿ ।**
**ಐಂದ್ರೀಂ ಚ ಮಾಯಾಮುಪಧರ್ಮಮಾತರಂ**
**ಪ್ರಚಂಡಪಾಖಂಡಪಥಂ ಪ್ರಭೋ ಜಹಿ ।।೩೮।।**

ಪ್ರಭೋ=ಸಮರ್ಥನೇ ! ಸಃ ತ್ವಂ=ಧರ್ಮರಕ್ಷಣೆಗಾಗಿ ಅವತರಿಸಿದ ನೀನು ಪ್ರಜಾಪತೇಃ=ನನ್ನ (ಬ್ರಹ್ಮದೇವರ) ಅಭಿಭವಂ=ತಿರಸ್ಕಾರವನ್ನು (ನನ್ನ ಮಾತು ಕೇಳದಿರುವದನ್ನು) ವಿಮೃಶ್ಯ=ಇಂದ್ರನೇ ಶತಕ್ರತುವು ಬೇರೆಯವರಲ್ಲ ಎಂದು ವಿಚಾರ ಮಾಡಿ, ವಿಶ್ವಸೃಜಃ=ಶ್ರೀಹರಿಯ ಅಥವಾ ನನ್ನ ಸಂಕಲ್ಪಿತಂ=ಅಭೀಷ್ಟವನ್ನು ಅತಿಪೀಪೃಹಿ= ಸಂಪೂರ್ಣವಾಗಿ ಪೂರ್ಣಮಾಡು. ಪ್ರಚಂಡಪಾಖಂಡಪಥಂ=ಅತಿಯಾದ ಪಾಖಂಡಕ್ಕೆ ದಾರಿಯಾದ ಉಪಧರ್ಮಮಾತರಂ=ಧರ್ಮದಂತೆ ಕಾಣುವ (ಅಧರ್ಮಜನಕವಾದ)

ಐಂದ್ರೀಂ ಮಾಯಾಂ=ಇಂದ್ರನಿರ್ಮಿತವಾದ ಮಾಯೆಯನ್ನು ಜಹಿ=ನಾಶಮಾಡು. ಅಂದರೆ ಅದಕ್ಕೆ ನಾಶಕವಾದ ಸದ್ಧರ್ಮವನ್ನು ಪ್ರವರ್ತಿಸು ಎಂದು ಭಾವ.

**ವಿಜಯಧ್ವಜೀಯಪ್ರಕಾರ -** ಪ್ರಜಾಪತೇಃ=ಇಂದ್ರನ ಅಭಿಭವಂ ವಿಮೃಶ್ಯ=ನೀನು ಮಾಡಲಿಚ್ಛಿಸಿದ ನೂರು ಯಜ್ಞವೂ ಪರಾಭವವೆಂದು ಆಲೋಚಿಸಿ, ನಾನು ಮಾಡಬಾರದು ಎಂದು ವಿಚಾರಮಾಡಿ ವಿಶ್ವಸೃಜಃ=ಇಂದ್ರನ ಸಂಕಲ್ಪಿತಂ=ಪೃಥುವು ನೂರು ಯಜ್ಞ ಮಾಡಬಾರದು ಎಂಬ ಇಚ್ಛೆಯನ್ನು ಅತಿಪೀಪೃಹಿ=ಪೂರ್ಣಮಾಡು.

ಇಂದ್ರನ ವಿರೋಧ ಮಾಡದಿದ್ದರೆ ಅಭಿಭವಂ=(ಅಭಿತಃ ಭವಂ) ಎಲ್ಲ ರೀತಿಯ ಮಂಗಲವಾಗುವದು ಎಂದು ವಿಮೃಶ್ಯ=ವಿಚಾರಮಾಡಿ ವಿಶ್ವಸೃಜಃ=ನನ್ನ ಸಂಕಲ್ಪಿತಂ= ಇಷ್ಟವಾದ ಏಕೋನಶತಕ್ರತುತ್ವವನ್ನು ಪೂರ್ಣಮಾಡು ಎಂದರ್ಥ. ।।೩೮।।

**ಮೈತ್ರೇಯ ಉವಾಚ -**

**ಇತ್ಥಂ ಸ ಲೋಕಗುರುಣಾ ಸಮಾದಿಷ್ಟೋ ವಿಶಾಂಪತಿಃ ।**
**ತಥಾ ಚ ಕೃತವಾನ್ ಸಖ್ಯಂ ಮಘೋನಾಽಪಿ ಚ ಸಂದಧೇ ।।೩೯।।**

ಇತ್ಥಂ=ಈ ರೀತಿಯಾಗಿ ಲೋಕಗುರುಣಾ=ಜಗದ್ಗುರುಗಳಾದ ಬ್ರಹ್ಮದೇವರಿಂದ ಸಮಾದಿಷ್ಟಃ=ಆಜ್ಞಪ್ತನಾದ ವಿಶಾಂಪತಿಃ=ಪೃಥುರಾಜನು ತಥಾ ಚ ಕೃತವಾನ್=ಹಾಗೆಯೇ ಮಾಡಿದನು. (ಕೊನೆಯ ಯಜ್ಞವನ್ನು ಬಿಟ್ಟನು.) ಮಘೋನಾಽಪಿ ಸಖ್ಯಂ ಸಂದಧೇ=ತನಗೆ ಅನಿಷ್ಟ ಮಾಡಿದ ಇಂದ್ರನೊಡನೆ ಸ್ನೇಹವನ್ನೂ ಮಾಡಿದನು. ।।೩೯।।

**ಕೃತಾವಭೃಥ್ಯಸ್ನಾನಾಯ ಪೃಥವೇ ಭೂರಿಕರ್ಮಣೇ ।**
**ವರಾನ್ ದದುಸ್ತೇ ವರದಾ ಯೇ ತದ್ಬರ್ಹಿಷಿ ತರ್ಪಿತಾಃ ।।೪೦।।**

ಕೃತಾವಭೃಥ್ಯಸ್ನಾನಾಯ ಕೃತ=ಮಾಡಲ್ಪಟ್ಟ ಅವಭೃಥ್ಯಸ್ನಾನಾಯ=ಯಜ್ಞದ ಕೊನೆಗೆ ಮಾಡಬೇಕಾದ ಸ್ನಾನವುಳ್ಳ (ಅವಭೃಥಸ್ನಾನ ಮಾಡಿದ) ಭೂರಿಕರ್ಮಣೇ=೯೯ ಯಜ್ಞಗಳನ್ನು ಮಾಡಿದ ಪೃಥವೇ=ಪೃಥುವಿಗೆ ಯೇ=ಯಾವ ದೇವತೆಗಳು ತದ್ಬರ್ಹಿಷಿ=ಅವನ ಯಜ್ಞದಲ್ಲಿ ತರ್ಪಿತಾಃ=ಸಂತೋಷಗೊಂಡಿದ್ದರೋ ತೇ=ಆ ವರದಾಃ=ವರಪ್ರದರಾದ ದೇವತೆಗಳು ವರಾನ್ ದದುಃ=ವರಗಳನ್ನು ಇತ್ತರು. ।।೪೦।।

**ವಿಪ್ರಾಃ ಸತ್ಯಾಶಿಷಸ್ತುಷ್ಟಾಃ ಶ್ರದ್ಧಯಾ ಲಬ್ಧದಕ್ಷಿಣಾಃ ।**
**ಆಶಿಷೋ ಯುಯುಜುಃ ಕ್ಷತ್ತರಾದಿರಾಜಾಯ ಸತ್ಕೃತಾಃ ।।೪೧।।**

।। ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ ಏಕೋನವಿಂಶೋಽಧ್ಯಾಯಃ ।।

ಕ್ಷತ್ತಃ=ವಿದುರನೇ ! ಶ್ರದ್ಧಯಾ=ಆಸ್ತಿಕ್ಯಬುದ್ಧಿಯಿಂದ ಲಬ್ಧದಕ್ಷಿಣಾಃ=ದಕ್ಷಿಣೆಯನ್ನು ಪಡೆದ, ತುಷ್ಟಾಃ=ಸಂತುಷ್ಟರಾದ, ಸತ್ಯಾಶಿಷಃ=ಅಭೀಷ್ಟ ಕೊಡಲು ಸಮರ್ಥವಾದ ಶುಭವಾಕ್ಯಗಳುಳ್ಳ, ಸತ್ಕೃತಾಃ=ಸತ್ಕಾರವನ್ನು ಪಡೆದ ವಿಪ್ರಾಃ=ಬ್ರಾಹ್ಮಣರು ಆದಿರಾಜಾಯ=ಮೊದಲಿನ ರಾಜನಾದ ಪೃಥುವಿಗೆ ಆಶಿಷಃ ಯುಯುಜುಃ=ಆಶೀರ್ವಾದ ಮಾಡಿದರು.

ದದುಃ ಎಂದು ಹೇಳಿದ್ದರೆ ಆಶೀರ್ವಾದ ಕೊಟ್ಟರೂ ಕಾಲಾಂತರದಲ್ಲಿ (ಯಾವಾಗಲೋ) ಫಲ ಆಯಿತು ಎಂದು ಸಂಶಯ ಬರಬಹುದು. ಅದಕ್ಕಾಗಿ ಆಶೀರ್ವಾದ ಮಾಡುವಾಗಲೇ ಫಲವಾಯಿತೆಂದು ತಿಳಿಸಲು ಯುಯುಜುಃ ಎಂದಿರುವರು.

॥ ಇಲ್ಲಿಗೆ ಹತ್ತೊಂಭತ್ತನೇ ಅಧ್ಯಾಯವು ಮುಗಿಯಿತು ॥



## ಅಥ ವಿಂಶೋಽಧ್ಯಾಯಃ

ಈ ಅಧ್ಯಾಯದಲ್ಲಿ ''ಉತ್ತಮಗುರುವು ಸ್ವಯೋಗ್ಯೋಪಾಸನಾವಿಷಯನಾದ ಹರಿಯ ಉಪದೇಶ ಮಾಡಬೇಕು'' ಎಂದು ತಿಳಿಸಲು ಪೃಥುವಿಗೆ ಶ್ರೀಹರಿಯು ತನ್ನನ್ನು ಉಪದೇಶ ಮಾಡಿದನು ಎಂದು ತಿಳಿಸುವರು -

**ಮೈತ್ರೇಯ ಉವಾಚ -**

**ಭಗವಾಂಶ್ಚಾಪಿ ವೈಕುಂಠಃ ಸಾಕಂ ಮಘವತಾ ವಿಭುಃ ।**
**ಯಜ್ಞೈರ್ಯಜ್ಞಪತಿಃ ಸ್ವಿಷ್ಟೋ ಯಜ್ಞಭುಕ್ತಮಭಾಷತ ॥೧॥**

ಯಜ್ಞಪತಿಃ=ಯಜ್ಞನಿಯಾಮಕನಾದ, ಯಜ್ಞಭುಕ್=ಯಜ್ಞಭೋಕ್ತೃವಾದ, ಯಜ್ಞೈಃ=ಯಜ್ಞದಿಂದ ಸ್ವಿಷ್ಟಃ=ಮುಖ್ಯವಾಗಿ ಪೂಜಿಸಲ್ಪಟ್ಟ ವಿಭುಃ=ಸರ್ವಸಮರ್ಥನಾದ, ವ್ಯಾಪ್ತನಾದ, ಮಘವತಾ ಸಾಕಂ (ವರ್ತಮಾನಃ)=ಇಂದ್ರನ ಜೊತೆಗೆ ಇರುವ, ಭಗವಾನ್=ಐಶ್ವರ್ಯಶಾಲಿಯಾದ, ವೈಕುಂಠಃ ಅಪಿ=ಜಗತ್ತಿನ ಉತ್ಪತ್ತಿಗಾಗಿ ಬೇರೆ ಬೇರೆಯಾಗಿರುವ ಭೂತಗಳನ್ನು ಒಟ್ಟುಗೂಡಿಸಿದ್ದರಿಂದ ವೈಕುಂಠನೆನಿಸಿದ ಶ್ರೀಹರಿಯು ತಂ=ಪೃಥುವನ್ನು ಕುರಿತು ಅಭಾಷತ=ಮಾತನಾಡಿದನು.

ಶಾಂತಿಪರ್ವದಲ್ಲಿ -

**''ಮಯಾ ಸಂಶ್ಲೇಷಿತಾ ಭೂಮಿರದ್ಭಿರ್ವ್ಯೋಮ ಚ ವಾಯುನಾ ।**
**ವಾಯುಶ್ಚ ತೇಜಸಾ ಸಾರ್ಧಂ ವೈಕುಂಠತ್ವಂ ತತೋ ಮಮ॥''**

ಎಂದು ಹೇಳಿದೆ. ನನ್ನಿಂದ ಪಂಚಮಹಾಭೂತಗಳು ಮೇಲನ ಮಾಡಲ್ಪಟ್ಟಿದ್ದರಿಂದ ನನಗೆ ವೈಕುಂಠ ಎಂದು ಹೆಸರು ಎಂದು ಭಾವ.

**ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ ।** ಎಂದೂ ಹೇಳಿದೆ.

**ಶ್ರೀಭಗವಾನುವಾಚ -**

**ಏಷ ತೇ ಹ್ಯಕಾರ್ಷೀದ್ಭಂಗಂ ಹಯಮೇಧಶತಸ್ಯ ಹ ।**
**ಕ್ಷಮಾಪಯತ ಆತ್ಮಾನಮಮುಷ್ಯ ಕ್ಷಂತುಮರ್ಹಸಿ ॥೨॥**

ಏಷಃ=ಇಂದ್ರನು ತೇ=ನಿನ್ನ ಹಯಮೇಧಶತಸ್ಯ=ನೂರು ಅಶ್ವಮೇಧಯಾಗಗಳಿಗೆ ಅರ್ಥಾತ್ ನೂರನೇ ಅಶ್ವಮೇಧಕ್ಕೆ ಭಂಗಂ=ವಿಘ್ನವನ್ನು ಅಕಾರ್ಷೀತ್=ಮಾಡಿದನು. ಆತ್ಮಾನಂ=ನಿನ್ನನ್ನು ಕ್ಷಮಾಪಯತಃ=ಕ್ಷಮೆಯನ್ನು ಕೇಳುವ ಅಮುಷ್ಯ=ಇಂದ್ರನನ್ನು ಕ್ಷಂತುಂ ಅರ್ಹಸಿ=ಕ್ಷಮಿಸಲು ಯೋಗ್ಯನಾಗಿರುವಿ. ಅಥವಾ ಆತ್ಮಾನಂ=ನಿನ್ನಲ್ಲಿರುವ ನನ್ನನ್ನು ಕ್ಷಮಾಪಯತಃ=ಕ್ಷಮೆ ಮಾಡುವ, ಹೀಗೂ ಅರ್ಥ, ಅಂದರೆ ನಿನ್ನಲ್ಲಿ ಸನ್ನಿಹಿತನಾದ್ದರಿಂದ ನಿನಗೆ ಮಾಡಿದ ವಿರೊಧಾಚರಣೆ ನನಗೆ ಮಾಡಿದಂತೆಯೇ. ಆದ್ದರಿಂದ ನನ್ನ ಕ್ಷಮಾಪಣಪ್ರಾರ್ಥನೆಯು ಎಂದು ಭಾವ. ॥೨॥

ಕ್ಷಮಿಸದಿರುವದು ಸಜ್ಜನರ ಗುಣವಲ್ಲ ಎಂಬ ಅಭಿಪ್ರಾಯದಿಂದ ಹೇಳುವರು -

**ಸುಧಿಯಃ ಸಾಧವೋ ಲೋಕೇ ನರದೇವ ನರೋತ್ತಮ ।**
**ನಾಭಿದ್ರುಹ್ಯಂತಿ ಭೂತೇಭ್ಯೋ ಯರ್ಹ್ಯನಾತ್ಮಾ ಕಲೇವರಮ್ ॥೩॥**

ನರೋತ್ತಮ=ಮನುಷ್ಯೋತ್ತಮನೆ ! ನರದೇವ=ರಾಜನೇ ! ಲೋಕೇ=ಜಗತ್ತಿನಲ್ಲಿ ಸುಧಿಯಃ=ಜ್ಞಾನಿಗಳಾದ ಸಾಧವಃ=ಸಜ್ಜನರು ಯರ್ಹಿ=ಯಾವ ಕಾರಣ ಕಲೇವರಂ=ದೇಹವು ಅನಾತ್ಮಾ=ಜಡವಾಗಿರುವದೋ ತರ್ಹಿ=ಆದ್ದರಿಂದ ಅದರ ಮೇಲಿನ ಅಭಿಮಾನದಿಂದ ಭೂತೇಭ್ಯಃ=ಪ್ರಾಣಿಗಳನ್ನು ನ ಅಭಿದ್ರುಹ್ಯಂತಿ=ದ್ರೋಹಮಾಡಲಾರರು. ॥೩॥

ಮುಂದೆ ಹೇಳುವ ಕಾರಣದಿಂದಲೂ ಶಾಸ್ತ್ರಾಭ್ಯಾಸ ಮಾಡಿದವರಿಗೆ ಕ್ಷಮಾ ಮಾಡದಿರುವದು ಉಚಿತವಲ್ಲ ಎಂದು ಹೇಳುವರು -

**ಪುರುಷಾ ಯದಿ ಮುಹ್ಯಂತಿ ತ್ವಾದೃಶಾ ದೇವಮಾಯಯಾ ।**
**ಶ್ರಮ ಏವ ಪರಂ ಜಾತೋ ದೀರ್ಘಯಾ ವೃದ್ಧಸೇವಯಾ ॥೪॥**

ಯದಿ=ಒಂದುವೇಳೆ ತ್ವಾದೃಶಾಃ=ನಿನ್ನಂತಹ ಪುರುಷಾಃ=ಜನರು ದೇವಮಾಯಯಾ= ಶ್ರೀಹರಿಯ ಇಚ್ಛೆಯಿಂದ ಮುಹ್ಯಂತಿ=ಮೋಹಗೊಳ್ಳುತ್ತಾರೆ ಅರ್ಥಾತ್ ದೇಹಾಭಿಮಾನದಿಂದ ಭೂತದ್ರೋಹ ಮಾಡುತ್ತಾರೆ, ಹೀಗೆ ಮಾಡಿದಾಗ ದೀರ್ಘಯಾ ವೃದ್ಧಸೇವಯಾ= ಬಹುಕಾಲದಿಂದ ಮಾಡಿದ ಜ್ಞಾನಿಗಳ ಸೇವೆಯಿಂದಾದ ಶಾಸ್ತ್ರಾಭ್ಯಾಸದಿಂದ ಶ್ರಮ ಏವ ಪರಂ ಜಾತಃ=ಕೇವಲ ಶ್ರಮವಾದಂತಯೇ ಸರಿ. ॥೪॥

## ಅಥ ವಿಂಶೋऽಧ್ಯಾಯಃ

ಈ ಅಧ್ಯಾಯದಲ್ಲಿ ''ಉತ್ತಮಗುರುವು ಸ್ವಯೋಗ್ಯೋಪಾಸನಾವಿಷಯನಾದ ಹರಿಯ ಉಪದೇಶ ಮಾಡಬೇಕು'' ಎಂದು ತಿಳಿಸಲು ಪೃಥುವಿಗೆ ಶ್ರೀಹರಿಯು ತನ್ನನ್ನು ಉಪದೇಶ ಮಾಡಿದನು ಎಂದು ತಿಳಿಸುವರು -

**ಮೈತ್ರೇಯ ಉವಾಚ -**

**ಭಗವಾಂಶ್ಚಾಪಿ ವೈಕುಂಠಃ ಸಾಕಂ ಮಘವತಾ ವಿಭುಃ ।**
**ಯಜ್ಞೈರ್ಯಜ್ಞಪತಿಃ ಸ್ವಿಷ್ಟೋ ಯಜ್ಞಭುಕ್ತಮಭಾಷತ ॥೧॥**

ಯಜ್ಞಪತಿಃ=ಯಜ್ಞನಿಯಾಮಕನಾದ, ಯಜ್ಞಭುಕ್=ಯಜ್ಞಭೋಕ್ತೃವಾದ, ಯಜ್ಞೈಃ=ಯಜ್ಞದಿಂದ ಸ್ವಿಷ್ಟಃ=ಮುಖ್ಯವಾಗಿ ಪೂಜಿಸಲ್ಪಟ್ಟ ವಿಭುಃ=ಸರ್ವಸಮರ್ಥನಾದ, ವ್ಯಾಪ್ತನಾದ, ಮಘವತಾ ಸಾಕಂ (ವರ್ತಮಾನಃ)=ಇಂದ್ರನ ಜೊತೆಗೆ ಇರುವ, ಭಗವಾನ್=ಐಶ್ವರ್ಯಶಾಲಿಯಾದ, ವೈಕುಂಠಃ ಅಪಿ=ಜಗತ್ತಿನ ಉತ್ಪತ್ತಿಗಾಗಿ ಬೇರೆ ಬೇರೆಯಾಗಿರುವ ಭೂತಗಳನ್ನು ಒಟ್ಟುಗೂಡಿಸಿದ್ದರಿಂದ ವೈಕುಂಠನೆನಿಸಿದ ಶ್ರೀಹರಿಯು ತಂ=ಪೃಥುವನ್ನು ಕುರಿತು ಅಭಾಷತ=ಮಾತನಾಡಿದನು.

ಶಾಂತಿಪರ್ವದಲ್ಲಿ -

**''ಮಯಾ ಸಂಶ್ಲೇಷಿತಾ ಭೂಮಿರದ್ಭಿರ್ವ್ಯೋಮ ಚ ವಾಯುನಾ ।**
**ವಾಯುಶ್ಚ ತೇಜಸಾ ಸಾರ್ಧಂ ವೈಕುಂಠತ್ವಂ ತತೋ ಮಮ॥''**

ಎಂದು ಹೇಳಿದೆ. ನನ್ನಿಂದ ಪಂಚಮಹಾಭೂತಗಳು ಮೇಲನ ಮಾಡಲ್ಪಟ್ಟಿದ್ದರಿಂದ ನನಗೆ ವೈಕುಂಠ ಎಂದು ಹೆಸರು ಎಂದು ಭಾವ.

**ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ ।** ಎಂದೂ ಹೇಳಿದೆ.

**ಶ್ರೀಭಗವಾನುವಾಚ -**

**ಏಷ ತೇ ಹ್ಯಕಾರ್ಷೀದ್ಭಂಗಂ ಹಯಮೇಧಶತಸ್ಯ ಹ ।**
**ಕ್ಷಮಾಪಯತ ಆತ್ಮಾನಮಮುಷ್ಯ ಕ್ಷಂತುಮರ್ಹಸಿ ॥೨॥**

ಏಷಃ=ಇಂದ್ರನು ತೇ=ನಿನ್ನ ಹಯಮೇಧಶತಸ್ಯ=ನೂರು ಅಶ್ವಮೇಧಯಾಗಗಳಿಗೆ ಅರ್ಥಾತ್ ನೂರನೇ ಅಶ್ವಮೇಧಕ್ಕೆ ಭಂಗಂ=ವಿಘ್ನವನ್ನು ಅಕಾರ್ಷೀತ್=ಮಾಡಿದನು. ಆತ್ಮಾನಂ=ನಿನ್ನನ್ನು ಕ್ಷಮಾಪಯತಃ=ಕ್ಷಮೆಯನ್ನು ಕೇಳುವ ಅಮುಷ್ಯ=ಇಂದ್ರನನ್ನು ಕ್ಷಂತುಂ ಅರ್ಹಸಿ=ಕ್ಷಮಿಸಲು ಯೋಗ್ಯನಾಗಿರುವಿ. ಅಥವಾ ಆತ್ಮಾನಂ=ನಿನ್ನಲ್ಲಿರುವ ನನ್ನನ್ನು ಕ್ಷಮಾಪಯತಃ=ಕ್ಷಮೆ ಮಾಡುವ, ಹೀಗೂ ಅರ್ಥ, ಅಂದರೆ ನಿನ್ನಲ್ಲಿ ಸನ್ನಿಹಿತನಾದ್ದರಿಂದ ನಿನಗೆ ಮಾಡಿದ ವಿರೊಧಾಚರಣೆ ನನಗೆ ಮಾಡಿದಂತೆಯೇ. ಆದ್ದರಿಂದ ನನ್ನ ಕ್ಷಮಾಪಣಪ್ರಾರ್ಥನೆಯು ಎಂದು ಭಾವ. ॥೨॥

ಕ್ಷಮಿಸದಿರುವದು ಸಜ್ಜನರ ಗುಣವಲ್ಲ ಎಂಬ ಅಭಿಪ್ರಾಯದಿಂದ ಹೇಳುವರು -

**ಸುಧಿಯಃ ಸಾಧವೋ ಲೋಕೇ ನರದೇವ ನರೋತ್ತಮ ।**
**ನಾಭಿದ್ರುಹ್ಯಂತಿ ಭೂತೇಭ್ಯೋ ಯರ್ಹ್ಯನಾತ್ಮಾ ಕಲೇವರಮ್ ॥೩॥**

ನರೋತ್ತಮ=ಮನುಷ್ಯೋತ್ತಮನೆ ! ನರದೇವ=ರಾಜನೇ ! ಲೋಕೇ=ಜಗತ್ತಿನಲ್ಲಿ ಸುಧಿಯಃ=ಜ್ಞಾನಿಗಳಾದ ಸಾಧವಃ=ಸಜ್ಜನರು ಯರ್ಹಿ=ಯಾವ ಕಾರಣ ಕಲೇವರಂ=ದೇಹವು ಅನಾತ್ಮಾ=ಜಡವಾಗಿರುವದೋ ತರ್ಹಿ=ಆದ್ದರಿಂದ ಅದರ ಮೇಲಿನ ಅಭಿಮಾನದಿಂದ ಭೂತೇಭ್ಯಃ=ಪ್ರಾಣಿಗಳನ್ನು ನ ಅಭಿದ್ರುಹ್ಯಂತಿ=ದ್ರೋಹಮಾಡಲಾರರು. ॥೩॥

ಮುಂದೆ ಹೇಳುವ ಕಾರಣದಿಂದಲೂ ಶಾಸ್ತ್ರಾಭ್ಯಾಸ ಮಾಡಿದವರಿಗೆ ಕ್ಷಮಾ ಮಾಡದಿರುವದು ಉಚಿತವಲ್ಲ ಎಂದು ಹೇಳುವರು -

**ಪುರುಷಾ ಯದಿ ಮುಹ್ಯಂತಿ ತ್ವಾದೃಶಾ ದೇವಮಾಯಯಾ ।**
**ಶ್ರಮ ಏವ ಪರಂ ಜಾತೋ ದೀರ್ಘಯಾ ವೃದ್ಧಸೇವಯಾ ॥೪॥**

ಯದಿ=ಒಂದುವೇಳೆ ತ್ವಾದೃಶಾಃ=ನಿನ್ನಂತಹ ಪುರುಷಾಃ=ಜನರು ದೇವಮಾಯಯಾ= ಶ್ರೀಹರಿಯ ಇಚ್ಛೆಯಿಂದ ಮುಹ್ಯಂತಿ=ಮೋಹಗೊಳ್ಳುತ್ತಾರೆ ಅರ್ಥಾತ್ ದೇಹಾಭಿಮಾನದಿಂದ ಭೂತದ್ರೋಹ ಮಾಡುತ್ತಾರೆ, ಹೀಗೆ ಮಾಡಿದಾಗ ದೀರ್ಘಯಾ ವೃದ್ಧಸೇವಯಾ= ಬಹುಕಾಲದಿಂದ ಮಾಡಿದ ಜ್ಞಾನಿಗಳ ಸೇವೆಯಿಂದಾದ ಶಾಸ್ತ್ರಾಭ್ಯಾಸದಿಂದ ಶ್ರಮ ಏವ ಪರಂ ಜಾತಃ=ಕೇವಲ ಶ್ರಮವಾದಂತಯೇ ಸರಿ. ॥೪॥

**ಅತ ಏವ ಇಮಂ ವಿದ್ವಾನವಿದ್ಯಾಕಾಮಕರ್ಮಭಿಃ ।**
**ಆರಬ್ಧಮಿತಿ ನೈವಾಸ್ಮಿನ್ ಪ್ರತಿಬುದ್ಧೋ ನ ಸಜ್ಜತೇ ॥೫॥**

ಅತ ಏವ=ಆದ್ದರಿಂದಲೇ ವಿದ್ವಾನ್=ಜ್ಞಾನಿಯಾದವನು ಇಮಂ=ಈ ದೇಹವನ್ನು ಅವಿದ್ಯಾಕಾಮಕರ್ಮಭಿಃ ಆರಬ್ಧಂ=ಅಜ್ಞಾನ ಕಾಮ ಕರ್ಮಗಳಿಂದ ನಿರ್ಮಿತವಾದುದು ಇತಿ=ಎಂದು ಪ್ರತಿಬುದ್ಧಃ=ತಿಳಿದವನಾಗಿ ಅಸ್ಮಿನ್ ನ ಸಜ್ಜತೇ=ಅಸ್ವಾಭಾವಿಕವಾದ ಈ ದೇಹದಲ್ಲಿ ಆಸಕ್ತನಾಗುವದಿಲ್ಲ. ಅಂದರೆ ಭೂತದ್ರೋಹಕರವಾದ ಅಭಿಮಾನ ಮಾಡುವದಿಲ್ಲ. ॥೫॥

ಶರೀರಾಭಿಮಾನವಿಲ್ಲದಿದ್ದರೂ ಮನೆ-ಮಡದಿ-ಮಕ್ಕಳ ಅಭಿಮಾನದಿಂದ ಭೂತದ್ರೋಹ ಮಾಡಬಹುದಲ್ಲ ? ಎಂದರೆ, ಮನೆ ಮುಂತಾದವಲ್ಲಿ ಅಭಿಮಾನ ಶರೀರಾಭಿಮಾನನಿಮಿತ್ತಕವಾದುದು. ಶರೀರಾಭಿಮಾನವಿಲ್ಲವಾದರೆ ಮಿಕ್ಕ ಯಾವ ಅಭಿಮಾನವೂ ಹುಟ್ಟಲಾರದು ಎಂದು ಹೇಳುವರು -

**ಅಸಂಸಕ್ತಃ ಶರೀರೇಽಸ್ಮಿನ್ನಮುನೋತ್ಪಾದಿತೇ ಗೃಹೇ ।**
**ಅಪತ್ಯೇ ದ್ರವಿಣೇ ದಾರೇ ಕಃ ಕುರ್ಯಾನ್ಮಮತಾಂ ಬುಧಃ ॥೬॥**

ಅಸ್ಮಿನ್ ಶರೀರೇ=ಈ ಶರೀರದಲ್ಲಿ ಅಸಂಸಕ್ತಃ=ಆಸಕ್ತಿ ಇಲ್ಲದವನು ಅಮುನಾ= ಶರೀರಾಭಿಮಾನದಿಂದ ಉತ್ಪಾದಿತೇ=ಹುಟ್ಟಿದ ಗೃಹೇ=ಮನೆಯಲ್ಲಿ ಅಪತ್ಯೇ=ಮಕ್ಕಳಲ್ಲಿ ದ್ರವಿಣೇ=ಹಣದಲ್ಲಿ ದಾರೇ=ಮಡದಿಯಲ್ಲಿ ಕಃ ಬುಧಃ=ಯಾವ ಬುದ್ಧಿವಂತನು ಮಮತಾಂ ಕುರ್ಯಾತ್=ಅಭಿಮಾನ ಮಾಡುವನು ? ಯಾವನೂ ಮಾಡಲಾರನು. ॥೬॥

ಶರೀರಾದಿಗಳಲ್ಲಿ ಅಭಿಮಾನತ್ಯಾಗವು ಭಗವಂತನ ಸ್ವರೂಪಜ್ಞಾನದಿಂದಲೇ ಆಗುವದು ಎಂಬ ಅಭಿಪ್ರಾಯದಿಂದ ಭಗವಂತನ ಸ್ವರೂಪವನ್ನು ಉಪದೇಶಿಸುವರು -

**ಏಕಃ ಶುದ್ಧಃ ಸ್ವಯಂಜ್ಯೋತಿರ್ನಿರ್ಗುಣೋಽಸೌ ಗುಣಾಶ್ರಯಃ ।**
**ಸರ್ವಗೋಽನಾವೃತಃ ಸಾಕ್ಷೀ ನಿರಾತ್ಮಾಽತ್ಮಾಽತ್ಮನಃ ಪರಃ ॥೭॥**

**ದೇಹಾದ್ಯಪಾರ್ಥಾಸ್ತದ್ಧರ್ಮಾ ನ ಸ್ಯುಸ್ತದ್ದ್ರಷ್ಟುರಾತ್ಮನಃ ।**
**ಕೈವಲ್ಯಂ ತಸ್ಯ ವೈ ಧರ್ಮಃ ಸುಷುಪ್ತಂ ತನ್ನಿದರ್ಶನಮ್ ॥೮॥**

ಏಕಃ=ಸ್ವಗತಭೇದಶೂನ್ಯನು, ಶುದ್ಧಃ=ಜನ್ಮಾದಿದೋಷದೂರನು, ಸ್ವಯಂಜ್ಯೋತಿಃ= ಸ್ವಪ್ರಕಾಶನು, (ಪರಪ್ರಕಾಶ್ಯನಲ್ಲ) ನಿರ್ಗುಣಃ=ಸತ್ವಾದಿಗುಣರಹಿತನು, ಗುಣಾಶ್ರಯಃ= ಜ್ಞಾನ-ಆನಂದಾದಿಗುಣಗಳಿಗೆ ಆಶ್ರಯನು, ಸರ್ವಗಃ=ಎಲ್ಲ ಪದಾರ್ಥಗಳಲ್ಲಿ

ಅಂತರ್ಯಾಮಿಯಾಗಿ ಒಳಗೆ ಇರುವವನು, ಆದ್ದರಿಂದಲೇ ಬೇರೆಯವರಿಗೆ ಆವೃತನು(ಗೋಚರಿಸದವನು), ಅನಾವೃತಃ=ತನಗೆ ಅನಾವೃತನು, ಸಾಕ್ಷೀ=ಸರ್ವಸಾಕ್ಷಿಯು (ಎಲ್ಲವನ್ನೂ ಪ್ರತ್ಯಕ್ಷ ನೋಡುವವನು), ನಿರಾತ್ಮಾ=ಸ್ವಾಮಿರಹಿತನು, ಆತ್ಮಾ=ಎಲ್ಲ ಜಗತ್ತಿಗೆ ಸ್ವಾಮಿಯು, ಆತ್ಮನಃ ಪರಃ=ಜೀವರಾಶಿಗಿಂತ ಉತ್ತಮನು.

ತದ್ದ್ರಷ್ಟುಃ=ಕೇವಲ ಸಾಕ್ಷಿಯಾಗಿ ಶರೀರಾದಿಗಳನ್ನು ನೋಡುವ ಆತ್ಮನಃ=ಪರಮಾತ್ಮನಿಗೆ ಅಪಾರ್ಥಾಃ=ಪ್ರಯೋಜನವಿಲ್ಲದ ದೇಹಾದಿ=ಜಡದೇಹಾದಿಗಳು ತದ್ಧರ್ಮಾಃ=ಜಡದೇಹದ ಧರ್ಮಗಳಾದ ಜನನ-ಮರಣಾದಿಗಳು ನ ಸ್ಯುಃ=ಇರಲಾರವು. ಕೈವಲ್ಯಂ=ನಿರ್ದುಃಖತ್ವವು ತಸ್ಯ ಧರ್ಮಃ=ಭಗವಂತನ ಧರ್ಮವು. ಸುಷುಪ್ತಂ=ಮುಕ್ತಿಯು ತನ್ನಿದರ್ಶನಂ=ಅದಕ್ಕೆ ದೃಷ್ಟಾಂತವು.

'ಸುಷುಪ್ತಂ' ಎಂದು ಹೇಳಿದ್ದು ಉಪಲಕ್ಷಣ. ಜಾಗ್ರತ್ ಎಂಬುದನ್ನೂ ದೃಷ್ಟಾಂತ ಮಾಡಬೇಕು. ಆಗ ಕೈವಲ್ಯಂ=ಸ್ವತಂತ್ರವಾಗಿ ಪ್ರವರ್ತಿಸುವದು ತಸ್ಯ ಧರ್ಮಃ=ಶ್ರೀಹರಿಯ ಧರ್ಮವು. ಆ ವಿಷಯದಲ್ಲಿ ಜಾಗ್ರತ್ ಜೀವನು ದೃಷ್ಟಾಂತನು.

ನಿರ್ದುಃಖತ್ವವಿಷಯದಲ್ಲಿ ಸುಷುಪ್ತವು ದೃಷ್ಟಾಂತ ಎಂದರೆ ಗಾಢನಿದ್ರೆಯಲ್ಲಿರುವ ಜೀವನು (ಜೀವಸಮೂಹವು) ದೃಷ್ಟಾಂತ ಎಂದರ್ಥ. ನಿದ್ದೆಯಲ್ಲಿದ್ದವನು ಕೈವಲ್ಯ ಎಂದರೆ ಸ್ವರೂಪಜ್ಞಾನದಿಂದಲೇ ತಿಳಿಯಲ್ಪಡುವವನು. ಈ ವಿಷಯದಲ್ಲಿಯೂ ದೃಷ್ಟಾಂತನಾಗುವನು ಎಂದು ತಿಳಿಯಬೇಕು.

**ಭಾಗವತ ತಾತ್ಪರ್ಯ -**

ಈ ಎರಡು ಶ್ಲೋಕಗಳಲ್ಲಿ ಏಳನೇ ಶ್ಲೋಕದಲ್ಲಿ ಸರ್ವಗ ಎಂಬ ಪದದಿಂದ ಆ ಆ ದೇಹಾದಿಗಳಿಂದ ಆವೃತನೆಂದೂ ಹೇಳಿ, ಅದಕ್ಕೆ ವಿರುದ್ಧವಾಗಿ ಅನಾವೃತಃ ಎಂದು ಅನಾವೃತತ್ವವನ್ನೂ ಹೇಳಿರುವರು. ಮತ್ತು ನಿರಾತ್ಮಾ ಎಂದು ಜಡತ್ವವನ್ನು ಹೇಳಿ ಮತ್ತೆ ಆತ್ಮಾ ಎಂದು ಚೇತನತ್ವವನ್ನೂ ಹೇಳುವರು. ಇನ್ನು ಎಂಟನೇ ಶ್ಲೋಕದಲ್ಲಿ ಕೈವಲ್ಯ ಶಬ್ದದ ಅರ್ಥವೇನು ? 'ಸುಷುಪ್ತಂ ತನ್ನಿದರ್ಶನಂ' ಎಂಬುದಕ್ಕೆ ದ್ರಾಷ್ಟಾಂತಿಕ ಯಾವುದು ? ಎಂಬ ಎಲ್ಲ ಶಂಕೆಗಳಿಗೆ ಉತ್ತರವನ್ನು ಪ್ರಾಮಾಣದಿಂದಲೇ ತಿಳಿಸುವರು ಶ್ರೀಮದಾಚಾರ್ಯರು -

> ಅನ್ಯೇಷಾಮಾವೃತೋ ವಿಷ್ಣುಃ ಸ್ವಸ್ಯಾನಾವೃತ ಏವ ಚ ।
> ಆತ್ಮಾ ಸರ್ವಸ್ಯ ಜಗತಸ್ತಸ್ಯಾತ್ಮಾಽನ್ಯೋ ನ ವಿದ್ಯತೇ ॥
> ಸುಷುಪ್ತವಚ್ಚ ನಿರ್ದುಃಖೋ ಜಾಗ್ರದ್ವಚ್ಚ ಪ್ರವೃತ್ತಿಮಾನ್ ।
> ಅನನ್ಯಸದೃಶತ್ವಾಚ್ಚ ಕೇವಲೋಽಸೌ ಹರಿಃ ಸ್ಮೃತಃ ॥ ಇತಿ ತಂತ್ರಸಾರೇ ॥

**ಆತ್ಮನೈವಾವಗಮ್ಯತ್ವಾದ್ಧರಿರೇಷಃ ಸುಷುಪ್ತವತ್ ।**
**ಕೇವಲತ್ವೇನ ವಿಜ್ಞೇಯೋ ಮುಕ್ತಿಸ್ತದ್ವದದುಃಖತಾ ॥ ಇತ್ಯಧ್ಯಾತ್ಮೇ ॥**

ಬೇರೆಯವರಿಗೆ ಆವೃತನು, ತನಗೆ ಅನಾವೃತನು ಆಗಿರುವನು ಶ್ರೀಹರಿಯು. ಆ ಕಾರಣ ಸರ್ವಗ ಅನಾವೃತ ಎಂಬುವುದು ವಿರುದ್ಧವಲ್ಲ. ಪರಮಾತ್ಮ ಸಮಸ್ತಜಗತ್ತಿಗೆ ಸ್ವಾಮಿಯು, ಅವನಿಗೆ ಮತ್ತೊಬ್ಬನು ಸ್ವಾಮಿಯಿಲ್ಲ ಇದು ಆತ್ಮಾ-ನಿರಾತ್ಮಶಬ್ದಾರ್ಥ. ಹೊರತು ಜಡ-ಚೇತನವೆಂದಲ್ಲ ಕಾರಣ ವಿರೋಧವಿಲ್ಲ

ನಿದ್ರೆಯಲ್ಲಿದ್ದವನಂತೆ ನಿರ್ದುಃಖನು, ಎಚ್ಚರದಲ್ಲಿದ್ದವನಂತೆ ಸ್ವತಂತ್ರಪ್ರವೃತ್ತಿಯುಳ್ಳವನು, ಅನನ್ಯಸದೃಶನೂ ಆದ್ದರಿಂದ (ಮತ್ತೊಬ್ಬರಂತೆ ಇಲ್ಲದವನೂ ಆದ್ದರಿಂದ) ಹರಿಯು ಕೇವಲನೆನಿಸುವನು ಎಂದು ತಂತ್ರಸಾರದಲ್ಲಿ ಹೇಳಿದೆ.

ಕೈವಲ್ಯಶಬ್ದಾರ್ಥವನ್ನೇ ನಿರ್ದುಃಖ ಪದದಿಂದ ತಿಳಿಸುವರು. ಸುಷುಪ್ತನೆಂದರೆ ಮಲಗಿದ ಜೀವ. ನಿರ್ದುಖನಾದ ಹರಿಯು ದ್ರಾಷ್ಟಾಂತಿಕನು. ಸುಪ್ತನಾದ ಜೀವ ದೃಷ್ಟಾಂತ ಎಂದಂತಾಯಿತು. ಎಂಟನೇ ಶ್ಲೋಕದಲ್ಲಿರುವ ಸುಷುಪ್ತಪದವು ಉಪಲಕ್ಷಣವೆಂದು ತಿಳಿದು ಜಾಗ್ರತ್ಕಾಲೀನ ಜೀವದೃಷ್ಟಾಂತದಿಂದ ಕೈವಲ್ಯಶಬ್ದಾರ್ಥವಾದ ಸ್ವಾತಂತ್ರೇಣ ಪ್ರವೃತ್ತಿಯನ್ನು ಪರಮಾತ್ಮ ಧರ್ಮವೆಂದು ಮೂಲಾರ್ಥವನ್ನು ಹೇಳಿರುವರು ಜಾಗ್ರದ್ವಚ್ಚ ಪ್ರವೃತ್ತಿಮಾನ್ ಎಂದು. ಅನನ್ಯಸದೃಶ ಎಂಬುದೂ ಕೈವಲ್ಯಶಬ್ದಾರ್ಥವೇ. ಇಲ್ಲಿಯೂ ಸುಷುಪ್ತ ದೃಷ್ಟಾಂತ. ಎಚ್ಚೆತ್ತವರಿಗಿಂತ ವಿಲಕ್ಷಣನಾಗಿ ಸ್ವರೂಪಸುಖ ಅನುಭವಿಸುವನಷ್ಟೇ. (ಅಂದರೆ ಇತರರು ಜಾಗ್ರತ್ಕಾಲದಲ್ಲಿ ಸ್ವರೂಪಸುಖವನ್ನು ಅನುಭವಿಸುವುದಿಲ್ಲ, ಇವನಾದರೂ ಜಾಗ್ರತ್ಕಾಲದಲ್ಲಿಯೇ ಸ್ವರೂಪಸುಖ ಅನುಭವಿಸುವನು ಎಂದು ಭಾವ.) ತನ್ನ ಸ್ವರೂಪಜ್ಞಾನದಿಂದಲೇ ತಿಳಿಯಲ್ಪಡುವನಾದ್ದರಿಂದಲೂ ಶ್ರೀಹರಿಯು ಕೇವಲನು. ಈ ವಿಷಯದಲ್ಲಿಯೂ ಸುಷುಪ್ತನು ದೃಷ್ಟಾಂತನು. ನಿದ್ರೆಯಲ್ಲಿ ಜೀವನೂ ತನ್ನನ್ನೂ ಸ್ವರೂಪಜ್ಞಾನದಿಂದಲೇ ತಿಳಿಯುವನು. ಆದ ಕಾರಣ ಮುಕ್ತಿಯು ಸುಷುಪ್ತಿ ಎನಿಸುವದು. ಮುಕ್ತನು ನಿರ್ದುಃಖ ಎಂಬಲ್ಲಿ ದೃಷ್ಟಾಂತನಾಗುವನು ಎಂದು ತಾತ್ಪರ್ಯದ ಭಾವ.

ಎದ್ದಮೇಲೆ ಇದುವರೆಗೆ ನಾನು ಸುಖವಾಗಿ ನಿದ್ರಿಸಿದೆ ಎಂದು ಹೇಳುವುದೇ ಜೀವನು ತನ್ನನ್ನು ಸ್ವರೂಪಜ್ಞಾನದಿಂದ ತಿಳಿಯುವನು ಎಂಬುದಕ್ಕೆ ಜ್ಞಾಪಕ. ಅಂತೂ ಕೈವಲ್ಯಂ ಎಂದರೆ ನಿರ್ದುಃಖ, ಸ್ವರೂಪಜ್ಞಾನದಿಂದ ಜ್ಞೇಯ, ಅನನ್ಯಸದೃಶ ಎಂದು ಮೂರು ಅರ್ಥ. ಇದಕ್ಕೆ ಸುಷುಪ್ತ ಎಂದರೆ ಗಾಢನಿದ್ರೆ ಮಾಡುವವನು, ಮುಕ್ತನೂ ದೃಷ್ಟಾಂತ ಎಂದಂತಾಯಿತು.

ಎರಡು ಶ್ಲೋಕಗಳಲ್ಲಿಯ ಪದಗಳಿಗೆ ಹೇಳಿದ ಅರ್ಥಗಳಿಗೆ ಪ್ರಮಾಣ ಕೆಳಗಿನಂತೆ -

ಏಕಂ ಸ್ವಸ್ಮಿನ್ ಅಭೇದತಃ, ಶುದ್ಧಃ ಜನನಾದಿದೋಷದೂರತ್ವಾತ್ - 'ನ ಜಾಯತೇ ಮ್ರಿಯತೇ ವಾ ಕುತಶ್ಚಿತ್ (ವಿಪಶ್ಚಿತ್)' 'ಪೂರ್ಣಃ ಸತ್ಯಃ ಶುದ್ಧಬುದ್ಧಸ್ವರೂಪೋ ನಿತ್ಯಚಿನ್ಮಯಃ' 'ಅತ್ರಾಯಂ ಪುರುಷಃ ಸ್ವಯಂಜ್ಯೋತಿಃ' 'ಪರಂ ಜ್ಯೋತಿರುಪಸಂಪದ್ಯ' 'ಕೇವಲೋ ನಿರ್ಗುಣಶ್ಚ' 'ವಿಜ್ಞಾನಮಾನಂದಂ ಬ್ರಹ್ಮ' 'ಅಂತರ್ಬಹಿಶ್ಚ ತತ್ಸರ್ವಂ' 'ಸಾಕ್ಷೀ ಚೇತಾ' 'ಉತ್ತಮಃ ಪುರುಷಸ್ತ್ವನ್ಯಃ'॥೭॥೮॥

ಯಾವುದಕ್ಕಾಗಿ ಭಗವಂತನ ಸ್ವರೂಪವನ್ನು ಹೇಳಿದರೋ ಅದನ್ನು ಈಗ ಹೇಳುವರು-

**ಯ ಏವಂ ಸಂತಮಾತ್ಮಾನಮಾತ್ಮಸ್ಥಂ ವೇದ ಪೂರುಷಃ ।**
**ನಾಜ್ಯತೇ ಪ್ರಕೃತಿಸ್ಥೋಽಪಿ ತದ್ಗುಣೈಃ ಸಮವಸ್ಥಿತಃ ॥೯॥**

ಯಃ ಪೂರುಷಃ=ಯಾವ ಮನುಷ್ಯನು ಏವಂ ಸಂತಂ=ಮೇಲಿನ ಶ್ಲೋಕಗಳಲ್ಲಿ ವರ್ಣಿಸಿದಂತೆ ಇರುವ, ಆತ್ಮಸ್ಥಂ=ಜೀವಾಂತರ್ಯಾಮಿಯಾದ, ಆತ್ಮಾನಂ=ಪರಮಾತ್ಮನನ್ನು ವೇದ=ತಿಳಿಯುವನೋ ಸಃ=ಅವನು ಯತಃ=ಯಾವ ಕಾರಣ ಸಮವಸ್ಥಿತಃ=ಅಭಿಮಾನತ್ಯಾಗ ಮಾಡಿರುವನೋ ತತಃ=ಆದ್ದರಿಂದ ಪ್ರಕೃತಿಸ್ಥೋಽಪಿ=ಪ್ರಕೃತಿ ಕಾರ್ಯಶರೀರದಲ್ಲಿದ್ದರೂ ತದ್ಗುಣೈಃ=ದೇಹಗುಣವಾದ ಸುಖದುಃಖಗಳಿಂದ ನ ಆಜ್ಯತೇ=ಲೇಪಉಳ್ಳವನಾಗುವದಿಲ್ಲ. ಭಗವದ್‌ಜ್ಞಾನದಿಂದ ಶರೀರಾಭಿಮಾನತ್ಯಾಗವಾಗುವದು. ಆದರಿಂದ ಸುಖ-ದುಃಖಲೇಪವಾಗಲಾರದು ಎಂದು ಭಾವ. ॥೯॥

ಮನಃಶುದ್ಧಿಯೂ ಅಭಿಮಾನತ್ಯಾಗಕ್ಕೆ ಕಾರಣವಾದ್ದರಿಂದ ಮನಃಶುದ್ಧಿಕಾರಣವನ್ನು ಹೇಳುವರು -

**ಯಃ ಸ್ವಧರ್ಮೇಣ ಮಾಂ ನಿತ್ಯಂ ನಿರಾಶೀಃ ಶ್ರದ್ಧಯಾಽನ್ವಿತಃ ।**
**ಭಜತೇ ಶನಕೈಸ್ತಸ್ಯ ಮನೋ ರಾಜನ್ ಪ್ರಸೀದತಿ ॥೧೦॥**

ರಾಜನ್=ಪೃಥುವೇ ! ಯಃ=ಯಾವನು ಶ್ರದ್ಧಯಾ ಅನ್ವಿತಃ=ಆಸ್ತಿಕ್ಯಬುದ್ಧಿಯುಳ್ಳವನಾಗಿ ನಿರಾಶೀಃ=ಫಲಕಾಮನೆ ಇಲ್ಲದವನಾಗಿ ಮಾಂ=ನನ್ನನ್ನು ನಿತ್ಯಂ=ದಿನವೂ ಸ್ವಧರ್ಮೇಣ=ತನಗೆ ವಿಹಿತವಾದ ಧರ್ಮದಿಂದ ಭಜತೇ=ಆರಾಧಿಸುವನೋ ತಸ್ಯ=ಅವನಿಗೆ ಮನಃ=ಮನಸ್ಸು ಶನಕೈಃ=ನಿಧಾನವಾಗಿ ಪ್ರಸೀದತಿ=ಶುದ್ಧವಾಗುವದು. ॥೧೦॥

ಹಿಂದೆ ಹೇಳಿದ ರೀತಿಯಿಂದ ಉಂಟಾದ ಅಭಿಮಾನತ್ಯಾಗ-ಮನಃಶುದ್ಧಿಯ ಫಲ ಹೇಳುವರು -

**ಪರಿತ್ಯಕ್ತಗುಣಃ ಸಮ್ಯಗ್ದರ್ಶನೋ ವಿಶದಾಶಯಃ ।**
**ಶಾಂತಿಂ ಮೇ ಸಮವಸ್ಥಾನಂ ಬ್ರಹ್ಮ ಕೈವಲ್ಯಮಶ್ನುತೇ ॥೧೧॥**

ಪರಿತ್ಯಕ್ತಗುಣಃ=ವಿಷಯಾಭಿಮಾನ ಬಿಟ್ಟವನಾಗಿ, ವಿಶದಾಶಯಃ=ಅಂತಃಕರಣಶುದ್ಧಿಯುಳ್ಳವನಾಗಿ, ಸಮ್ಯಗ್ದರ್ಶನಃ=ನಿದುಷ್ಟಬ್ರಹ್ಮಾಪರೋಕ್ಷಜ್ಞಾನವುಳ್ಳವನಾಗುವನು. ಆದರಿಂದ ಸಮವಸ್ಥಾನಂ=ಸ್ವರೂಪಾವಿರ್ಭಾವಕಾರಣನಾದ, ಕೈವಲ್ಯಂ=ನಿರ್ದುಃಖನಾದ, ಬ್ರಹ್ಮ=ಬ್ರಹ್ಮಪ್ರಾಪ್ತಿರೂಪವಾದ ಶಾಂತಿಂ=ಮೋಕ್ಷವನ್ನು ಮೇ=ನನ್ನ ಪ್ರಸಾದದಿಂದ ಅಶ್ನುತೇ=ಪಡೆಯುವನು. ॥೧೧॥

ಮೋಕ್ಷಕ್ಕಾಗಿ ಶ್ರೀಹರಿಯನ್ನು ಈ ರೀತಿಯಾಗಿಯೂ ತಿಳಿಯಬೇಕೆಂದು ಹೇಳುವರು-

**ಉದಾಸೀನಮಿವಾಧ್ಯಕ್ಷಂ ದ್ರವ್ಯಜ್ಞಾನಕ್ರಿಯಾತ್ಮನಾಮ್ ।**
**ಕೂಟಸ್ಥಮಿಮಮಾತ್ಮಾನಂ ಯೋ ವೇದಾಪ್ನೋತಿ ಶೋಭನಮ್ ॥ ೧೨॥**

ದ್ರವ್ಯಜ್ಞಾನಕ್ರಿಯಾತ್ಮನಾಂ=ಪಂಚಮಹಾಭೂತಗಳು ಜ್ಞಾನೇಂದ್ರಿಯ ಕರ್ಮೇಂದ್ರಿಯಾತ್ಮಕವಾದ ದೇಹಗಳಿಗೆ ಅಧ್ಯಕ್ಷಂ=ಅಧಿಪತಿಯಾದ, ಉದಾಸೀನಮಿವ ಸ್ಥಿತಂ=ಕ್ಲೇಶವಿಲ್ಲದೇ ಕಾರ್ಯ ಮಾಡುವದರಿಂದ ಉದಾಸೀನನಂತಿರುವ, ಕೂಟಸ್ಥಂ=ನಿರ್ವಿಕಾರನಾದ, ಇಮಂ=ಹಿಂದೆ ಹೇಳಿದ ಗುಣಗಳುಳ್ಳ ಆತ್ಮಾನಂ=ಪರಮಾತ್ಮನನ್ನು ಯಃ ವೇದ=ಯಾವನು ತಿಳಿಯುವನೋ ಸಃ=ಅವನು ಶೋಭನಂ ಆಪ್ನೋತಿ=ತನ್ನ ಸ್ವರೂಪಾವಿರ್ಭಾವವನ್ನೂ ಬ್ರಹ್ಮನನ್ನೂ ಹೊಂದುವನು.

ಇಲ್ಲಿ 'ಉದಾಸೀನ' ಪದದಿಂದ ಕರ್ತೃತ್ವವೇ ಇಲ್ಲವೆಂದು ಹೇಳಿದಂತೆ ತೋರುವದು. ಆ ಕಾರಣ ವಿವಕ್ಷಿತವಾದ ತಾತ್ಪರ್ಯವನ್ನು ಪ್ರಮಾಣದಿಂದಲೇ ಹೇಳುವರು -

**''ಹರಿರಕ್ಲಿಷ್ಟಕಾರಿತ್ವಾದುದಾಸೀನ ಇತೀರ್ಯತೇ'' ಇತಿ ಚ ।**

ಶ್ರೀಹರಿಯು ಕ್ಲೇಶವಿಲ್ಲದೇ ಕಾರ್ಯ ಮಾಡುವುದರಿಂದ ಉದಾಸೀನ ಎಂದು ಕರೆಸಿಕೊಳ್ಳುವನು ಎಂದು ಹೇಳಿದೆ. ॥೧೨॥

ಕೇವಲ ಬ್ರಹ್ಮಜ್ಞಾನದಿಂದಲೇ ಅಭಿಮಾನತ್ಯಾಗವಾಗಲಾರದು. ಬೇರೆ ಕಾರಣಗಳೂ ಇವೆ ಎಂದು ಹೇಳುವರು -

**ಭಿನ್ನಸ್ಯ ಲಿಂಗಸ್ಯ ಗುಣಪ್ರವಾಹಂ**
**ದ್ರವ್ಯಕ್ರಿಯಾಕಾರಕಚೇತನಾತ್ಮನಃ ।**

**ದೃಷ್ಟ್ವಾ ಸುಸಂಪತ್ಸು ವಿಪತ್ಸು ಸೂರಯೋ**
**ನ ವಿಕ್ರಿಯಂತೇ ಮಯಿ ಬದ್ಧಸೌಹೃದಾಃ ॥೧೩॥**

ಭಿನ್ನಸ್ಯ=ಜೀವನಿಂದ ಭಿನ್ನವಾದ ಲಿಂಗಸ್ಯ=ಲಿಂಗಶರೀರಕ್ಕೆ ಮಯಿ=ನನ್ನಲ್ಲಿ ಬದ್ಧಸೌಹೃದಾಃ =ದೃಢವಾದ ಪ್ರೇಮವುಳ್ಳ ಸೂರಯಃ=ಜ್ಞಾನಿಗಳು ದ್ರವ್ಯಕ್ರಿಯಾಕಾರಕಚೇತನಾತ್ಮನಃ= ಭೂತಗಳು, ಕರ್ಮ-ಜ್ಞಾನೇಂದ್ರಿಯಾತ್ಮಕವಾದ ಅಚೇತನಾತ್ಮಕ ಮತ್ತು ಚೇತನಾತ್ಮಕವಾದ ಲಿಂಗಸ್ಯ=ಅಡಗಿದ ಪದಾರ್ಥಗಳನ್ನು ತಿಳಿಸುವ ಚೇತನಾಚೇತನಾತ್ಮಕ ಮನಸಿನಿಂದಲೇ ಗುಣಪ್ರವಾಹಃ=ಸತ್ವಾದಿಗುಣಕಾರ್ಯವಾದ ಸಂಸಾರವು ಎಂದು ದೃಷ್ಟ್ವಾ=ತಿಳಿದು ಸುಸಂಪತ್ಸು=ಒಳ್ಳೆ ಸಂಪತ್ತು ಬಂದಾಗ ವಿಪತ್ಸು=ವಿಪತ್ತು ಬಂದಾಗ ನ ವಿಕ್ರಿಯಂತೇ=ನಾನು ಹುಟ್ಟಿದೆ, ನಾನು ಸತ್ತೆ ಎಂಬ ವಿಕಾರವನ್ನು ಹೊಂದುವದಿಲ್ಲ.

ಸತ್ವಾದಿಗುಣಾತ್ಮಕ ಸಂಸಾರವು ಜೀವರಿಂದ ಭಿನ್ನವಾದ ಮನಸ್ಸಿನ ವಿಕಾರವೆಂದು ಸಮ್ಮತವು. ಹೀಗೆ ತಿಳಿದ ಜ್ಞಾನಿಯು ವಿಕಾರ ಹೊಂದುವದಿಲ್ಲ, ಹಾಗೆಯೇ ಅವನ ಸ್ವರೂಪಮನಸೂ ಕೂಡ ವಿಕಾರ ಹೊಂದುವದಿಲ್ಲ ಎಂದು ತಾತ್ಪರ್ಯ.

**ಭಾಗವತ ತಾತ್ಪರ್ಯ -**

ಮೇಲಿನ ಶ್ಲೋಕದ ತಾತ್ಪರ್ಯವನ್ನು ಪ್ರಮಾಣದಿಂದಲೇ ಹೇಳುವರು -

**ಜೀವಾದ್ಭಿನ್ನಸ್ಯ ಮನಸೋ ಗುಣಾಃ ಸತ್ವಾದಯೋ ಮತಾಃ ।**
**ತಜ್ಜ್ಞಾತ್ವಾ ನ ವಿಕುರ್ವೀತ ಸ್ವಸ್ವರೂಪಂ ಮನಸ್ತಥಾ ॥ ಇತಿ ಷಾಡ್ಗುಣ್ಯೇ ॥**

ಜೀವನಿಂದ ಭಿನ್ನವಾದ, ಅಚೇತನವಾದ ಲಿಂಗಶರೀರಕ್ಕೆ ಮನಸ್ಸು ಹಾಗೂ ಸ್ವರೂಪಮನಸ್ಸು ಇವೆರಡರಿಂದ ಸತ್ವಾದಿಗುಣವಿಕಾರರೂಪ ಸಂಸಾರ ಬರುವದೆಂದು ತಿಳಿದು, ವಿಕಾರವನ್ನು ಹೊಂದಬಾರದು ಎಂದು ಷಾಡ್ಗುಣ್ಯದಲ್ಲಿ ಹೇಳಿದೆ. ॥೧೩॥

ಬೇರೆ ಮೋಕ್ಷಸಾಧನಗಳನ್ನು ತಿಳಿಸುತ್ತ 'ಸ್ವಧರ್ಮೇಣ' ಎಂದು ಹೇಳಿದ ರಾಜನ ಸ್ವಧರ್ಮವನ್ನು ಉಪದೇಶಿಸುವನು -

**ಸಮಃ ಸಮಾನೋತ್ತಮಮಧ್ಯಮಾಧಮಃ**
**ಸುಖೇ ಚ ದುಃಖೇ ಚ ಜಿತೇಂದ್ರಿಯಾಶಯಃ ।**
**ಮಯೋಪಕ್ಲೃಪ್ತಾಖಿಲಸತ್ತ್ವಸಂಯುತೋ**
**ವಿಧತ್ಸ್ವ ಧೀರಾಖಿಲಲೋಕರಕ್ಷಣಮ್ ॥೧೪॥**

ಹೇ ಧೀರ=ಧೈರ್ಯಶಾಲಿಯಾದ ಹೇ ಪೃಥುವೇ ! ಸುಖೇ ಚ ದುಃಖೇ ಚ ಸಮಃ= ಸುಖ ಬಂದಾಗ ಹಿಗ್ಗದೇ, ದುಃಖ ಬಂದಾಗ ಕುಗ್ಗದೇ ಇದ್ದು (ಇದರಿಂದ ದ್ವಂದಸಹಿಷ್ಣುತೆ ತಿಳಿಸಿದರು) ಸಮಾನೋತ್ತಮಮಧ್ಯಮಾಧಮಃ=ನಿನಗಿಂತ ಉತ್ತಮ ಮಧ್ಯಮ ಅಧಮರಲ್ಲಿ ಅವರವರ ಯೋಗ್ಯತೆಗನುಗುಣವಾಗಿ ವರ್ತಿಸುವವನಾಗಿ, (ಇದರಿಂದ ಸರ್ವತಃ ಸಮಬುದ್ಧಿತ್ವ ತಿಳಿಸಿದರು) ಜಿತೇಂದ್ರಿಯಾಶಯಃ=ಇಂದ್ರಿಯಗಳು ಮನಸ್ಸನ್ನು ಗೆದ್ದವನಾಗಿ, ಮಯಾ=ನನ್ನಿಂದ ಉಪಕ್ಲೃಪ್ತಾಖಿಲಸತ್ತ್ವಸಂಯುತಃ ಉಪಕ್ಲೃಪ್ತ=ಸಂಪಾದಿಸಲ್ಪಟ್ಟ ಅಖಿಲಸತ್ವ=ಬ್ರಾಹ್ಮಣಶ್ರೇಷ್ಠರೇ ಮೊದಲಾದ ಪ್ರಾಣಿ(ಜೀವಿ)ಗಳಿಂದ ಸಂಯುತಃ= ಕೂಡಿದವನಾಗಿ, ಅಖಿಲಲೋಕರಕ್ಷಣಂ ವಿಧತ್ಸ್ವ=ಎಲ್ಲ ಜಗತ್ತನ್ನು ರಕ್ಷಿಸು. (ರಕ್ಷಣೆ ಮಾಡು.)

ಜಗತ್ತಿನ ರಕ್ಷಣೆ ಮಾಡುವಾಗ ದಂಡಾದಿಗಳನ್ನು ಮಾಡಬೇಕಾಗುವದು. ಆದ್ದರಿಂದ ಅದನ್ನು ಬಿಟ್ಟು ಬೇರೆ ಏನಾದರೂ ಹೇಳು ಎಂದರೆ, ಹಾಗಲ್ಲ, ಇದು ನಿನಗೆ ವಿಹಿತವಾದ್ದರಿಂದ ದೋಷವಲ್ಲ ಎಂದು ಹೇಳುವನು -

**ಶ್ರೇಯಃ ಪ್ರಜಾಪಾಲನಮೇವ ರಾಜ್ಞೋ**
**ಯತ್ಸಾಂಪರಾಯೇ ಸುಕೃತಂ ಷಷ್ಠಮಂಶಮ್ ।**
**ಅತೋಽನ್ಯಥಾ ಹೃತಪುಣ್ಯಃ ಪ್ರಜಾನಾ-**
**ಮರಕ್ಷಿತಾ ಕರಹಾರೋಽಘಮತ್ತಿ** ॥೧೪॥

ಯತ್=ಯಾವ ಕಾರಣ ಸಾಂಪರಾಯೇ=ಮೋಕ್ಷದಲ್ಲಿ ಅಥವಾ ಸ್ವರ್ಗದಲ್ಲಿಯಾಗಲಿ ಷಷ್ಠಮಂಶಮ್ ಅತ್ತಿ=ಪ್ರಜೆಗಳು ಮಾಡಿದ ಪುಣ್ಯಭಾಗವನ್ನು ಅನುಭವಿಸುವನು. ಅತೋಽನ್ಯಥಾ=ಇಲ್ಲವಾದರೆ, ಅಂದರೆ ಕರಹಾರಃ ಸನ್= ಪ್ರಜೆಗಳಿಂದ ಕರ ಸ್ವೀಕರಿಸಿ ಪ್ರಜಾನಾಂ ಅರಕ್ಷಿತಾ=ಪ್ರಜೆಗಳನ್ನು ರಕ್ಷಿಸದಿರುವವನು ಹೃತಪುಣ್ಯಃ=ಪ್ರಜೆಗಳಿಂದ ಅಪಹರಿಸಲ್ಪಟ್ಟ ಪುಣ್ಯವುಳ್ಳವನಾಗಿ ಪ್ರಜಾನಾಂ ಅಘಂ ಅತ್ತಿ= ಪ್ರಜೆಗಳು ಮಾಡಿದ ಪಾಪವನ್ನು ಅನುಭವಿಸುವನು. ಅತಃ=ಆದ್ದರಿಂದ ರಾಜ್ಞಃ=ರಾಜನಿಗೆ ಪ್ರಜಾಪಾಲನಂ ಏವ ಶ್ರೇಯಃ=ಪ್ರಜೆಗಳನ್ನು ರಕ್ಷಿಸುವದೇ ಮೋಕ್ಷಸಾಧನವು. ದಂಡಾದಿಯುಕ್ತವಾದರೂ ಇದು ನಿನಗೆ ವಿಹಿತವಾದುದು ಎಂದು ಭಾವ. ॥೧೪॥

ನಮ್ಮ ಯೋಗ್ಯತೆಯನ್ನು ತಿಳಿದ ಗುರುವಿನಿಂದ ಉಪದೇಶಿಸಲ್ಪಟ್ಟ ಜ್ಞಾನವೇ ಎಲ್ಲರಿಗೂ ಮೋಕ್ಷಸಾಧನವೆಂದು ಪ್ರಸಿದ್ಧವಾಗಿದೆ. ಆದ್ದರಿಂದ ಪ್ರಜಾರಕ್ಷಣೆ ಯಾಕೆ ಬೇಕು ? ಎಂದರೆ, ರಾಜರಿಗೆ ಪ್ರಜಾರಕ್ಷಣೆ ಮಾಡುವದರಿಂದಲೇ ಅಂತಹ ಗುರುಗಳ ಪ್ರಾಪ್ತಿಯಾಗುವದು ಎಂಬ ಅಭಿಪ್ರಾಯದಿಂದ ಹೇಳುವನು -

**ಏವಂ ದ್ವಿಜಾಗ್ರ್ಯಾನುಮತಾನುವೃತ್ತೋ**
**ಧರ್ಮೇ ಪ್ರಜಾನಾಂ ಚ ಸಮೋಽವಿತಾಽಸ್ಯಾಃ ।**
**ಹ್ರಸ್ವೇನ ಕಾಲೇನ ಗೃಹೋಪಯಾತಾನ್**
**ದ್ರಷ್ಟಾಽಸಿ ಸಿದ್ಧಾನನುರಕ್ತಲೋಕಃ ॥೧೬॥**

ಏವಂ=ನಾನು ಹೇಳಿದ ರೀತಿಯಿಂದ ದ್ವಿಜಾಗ್ರ್ಯಾನುಮತಾನುವೃತ್ತಃ=ಬ್ರಾಹ್ಮಣಶ್ರೇಷ್ಠರಿಗೆ ಸಮ್ಮತವಾದ ಧರ್ಮವನ್ನು ಅನುಸರಿಸುವವನಾಗಿ, ಪ್ರಜಾನಾಂ ಸಮಃ=ಪ್ರಜೆಗಳನ್ನು ಸಮನಾಗಿ ಕಾಣುವವನಾಗಿ, ಅನುರಕ್ತಲೋಕಃ=ಜನರ ಪ್ರೀತಿಪಾತ್ರನಾದವನಾಗಿ, ಅಸ್ಯಾಃ=ಪೃಥಿವಿಯ ಅವಿತಾ=ರಕ್ಷಣೆ ಮಾಡುವವನಾಗಿ, ಹ್ರಸ್ವೇನ ಕಾಲೇನ=ಕೆಲವೇ ಕಾಲದಲ್ಲಿ ಗೃಹೋಪಯಾತಾನ್=ಮನೆಗೆ ಆಗಮಿಸಿದ ಸಿದ್ಧಾನ್=ಸನಕಾದಿಗಳನ್ನು ದ್ರಷ್ಟಾಸಿ=ನೋಡುವವನಾಗುತ್ತಿ.

**ಪಾಠಾಂತರ - ಅರ್ಥಾಂತರ**

ಇಲ್ಲಿ ಯಾದವಾರ್ಯರಿಗೆ ಸಮ್ಮತವಾದ ಪಾಠವು ಹೀಗಿದೆ "ದ್ವಿಜಾಗ್ರ್ಯಾನುಮಾತಾನುವೃತ್ತಧರ್ಮಪ್ರಧಾನಾನ್ಯತಮೋಽವಿತಾಽಸ್ಯಾಃ" ಎಂದು. ಆಗ ದ್ವಿಜಾಗ್ರ್ಯಾನುಮತಃ=ಬ್ರಾಹ್ಮಣಶ್ರೇಷ್ಠರಿಗೆ ಸಮ್ಮತವೂ ಆದ, ಅನುವೃತ್ತಃ=ಪರಂಪರಾಪ್ರಾಪ್ತವಾದ ಧರ್ಮಃ=ಧರ್ಮವೇ ಪ್ರಧಾನಃ=ಮುಖ್ಯವಾಗಿವುಳ್ಳ ಅನ್ಯತಮಃ=ಅರ್ಥಕಾಮಗಳುಳ್ಳವನಾಗಿ ಎಂದರ್ಥ ತಿಳಿಯಬೇಕು. ॥೧೬॥

ಪ್ರತ್ಯಕ್ಷೀಕರಿಸಿಕೊಳ್ಳಲ್ಪಟ್ಟ ವೈಕುಂಠನೂ ಸಹ ಯಾವ ವರವನ್ನೂ ಕೊಡಲಿಲ್ಲವೆಂಬ ಅಪವಾದವನ್ನು ಪರಿಹರಿಸುವರು -

**ವರಂ ಚ ಮತ್ಕಂಚನ ಮಾನವೇಂದ್ರ**
**ವೃಣೀಷ್ವ ತೇಽಹಂ ಗುಣಶೀಲಯಂತ್ರಿತಃ ।**
**ನಾಹಂ ಮಖೈರ್ವೈ ಸುಲಭಸ್ತಪೋಭಿ-**
**ರ್ಯೋಗೇನ ವಾ ಯಃ ಸಮವೃತ್ತವರ್ತೀ ॥೧೭॥**

ಯತ್=ಯಾವ ಕಾರಣ ಸಮವೃತ್ತವರ್ತೀ=ಆ ಆ ವಸ್ತುವಿನ ಯೋಗ್ಯತಾನುಸಾರ ವರ್ತನೆಯುಳ್ಳ ಸಮದರ್ಶಿಗಳಲ್ಲಿ ಇರುವ ಸ್ವಭಾವವುಳ್ಳವನೋ ಆ ಕಾರಣ ಮಾನವೇಂದ್ರ=ರಾಜನೇ ! ಅಹಂ=ನಾನು ಮಖೈಃ=ಯಜ್ಞಗಳಿಂದಾಗಲೀ, ತಪೋಭಿಃ=ತಪಸ್ಸುಗಳಿಂದಾಗಲೀ, ಯೋಗೇನ ವಾ=ಅಷ್ಟಾಂಗಯೋಗಗಳಿಂದಾಗಲೀ ನ ಸುಲಭಃ=ಸುಲಭನಲ್ಲ. ಆದರೆ ತೇ=ನಿನ್ನ ಗುಣಶೀಲಯಂತ್ರಿತಃ=ಭಕ್ತಿ ಮುಂತಾದ

ಗುಣಗಳಿಂದ ಸ್ವಭಾವದಿಂದಲೂ ವಶನಾಗಿರುವೆನು. ಕಾರಣ ಮತ್=ನನ್ನಿಂದ ಕಂಚನ ವರಂ=ಬೇಕಾದ ಒಂದು ವರವನ್ನು ವೃಣೀಷ್ವ=ಸ್ವೀಕರಿಸು. ॥೧೭॥

**ಮೈತ್ರೇಯ ಉವಾಚ -**

**ಸ ಇತ್ಥಂ ಲೋಕಗುರುಣಾ ವಿಷ್ವಕ್ಸೇನೇನ ವಿಶ್ವಜಿತ್ ।**
**ಅನುಶಾಸಿತ ಆದೇಶಂ ಶಿರಸಾ ಜಗೃಹೇ ಹರೇಃ ॥೧೮॥**

ಲೋಕಗುರುಣಾ=ಜಗದ್ಗುರುವಾದ ವಿಷ್ವಕ್ಸೇನೇನ=ಪರಮಾತ್ಮನಿಂದ ಇತ್ಥಂ=ಈ ರೀತಿಯಾಗಿ ಅನುಶಾಸಿತಃ=ಆಜ್ಞಪ್ತನಾಗಿ ಹರೇಃ ಆದೇಶಂ ಶಿರಸಾ ಜಗೃಹೇ=ಶ್ರೀಹರಿಯ ಆಜ್ಞೆಯನ್ನು ತಲೆಬಾಗಿ ಸ್ವೀಕರಿಸಿದನು. ॥೧೮॥

**ಸ್ಪೃಶಂತಂ ಪಾದಯೋಃ ಶೀರ್ಷ್ಣ ವ್ರೀಡಂತಂ ಸ್ವೇನ ಕರ್ಮಣಾ ।**
**ಶತಕ್ರತುಂ ಪರಿಷ್ವಜ್ಯ ವಿದ್ವೇಷಂ ವಿಸಸರ್ಜ ಹ ॥೧೯॥**

ಮನಸಾ ಪೃಥುವಿನಲ್ಲಿ ಸನ್ನಿಹಿತನಾದ ರಾಜರಾಜೇಶ್ವರನ ಪಾದವನ್ನೇ ಶೀರ್ಷ್ಣ=ತಲೆಯಿಂದ ಪಾದಯೋಃ=ಪಾದಗಳಲ್ಲಿ ಸ್ಪೃಶಂತಂ=ಸ್ಪರ್ಶಿಸುವ, ಸ್ವೇನ ಕರ್ಮಣಾ=ತಾನು ಮಾಡಿದ ಕುದುರೆಯ ಕಳ್ಳತನದಿಂದ ವ್ರೀಡಂತಂ=ನಾಚುತ್ತಿರುವ ಶತಕ್ರತುಂ=ಇಂದ್ರನನ್ನು ಪರಿಷ್ವಜ್ಯ=ಆಲಿಂಗಿಸಿಕೊಂಡು ವಿದ್ವೇಷಂ=ದ್ವೇಷವನ್ನು ವಿಸಸರ್ಜ ಹ=ಬಿಟ್ಟನು ಎಂಬುದು ಪ್ರಸಿದ್ಧ.

**ಭಾಗವತ ತಾತ್ಪರ್ಯ -**

ಈ ಶ್ಲೋಕದಲ್ಲಿ ಉತ್ತಮನಾದ ಇಂದ್ರನು ಅಧಮನಾದ ಪೃಥುವಿಗೆ ತಲೆಬಾಗಿ ನಮಸ್ಕರಿಸಿದ್ದು ಹೇಗೆ ? ಎಂಬ ಶಂಕೆಗೆ, ಹಿಂದಿನ ಅಧ್ಯಾಯದಲ್ಲಿ ೧೭ನೇ ಶ್ಲೋಕದಲ್ಲಿ ''ದೇವಾಃ ಶಕ್ತಾಸ್ತು ಮೋಹಾಯ ದರ್ಶಯೇಯುರಶಕ್ತವತ್'' ಎಂಬುದಾಗಿ ತಾತ್ಪರ್ಯ ಹೇಳಿಯಾಗಿದೆ. ಆದರೂ ದೃಢಪಡಿಸಲು ಬೇರೆ ಪ್ರಮಾಣ ಹೇಳುವರು -

**ಆಯಾಸದುಃಖವ್ರೀಡಾದೀನ್ ಪ್ರಾಯಶಃ ಸುಖಿನೋಽಪಿ ತು ।**
**ನಿಯಮಾದೃಷಿಭೂತೇಷು ಮೋಹಾಯಾದರ್ಶಯನ್ ಸುರಾಃ ॥ ಇತಿ ಬ್ರಹ್ಮತರ್ಕೇ॥**

ತಾರತಮ್ಯನಿಯಮಾನುಸಾರವಾಗಿ ಋಷಿಗಳು ರಾಜರುಗಳಿಂದ ವಿಶೇಷವಾಗಿ ಸುಖವುಳ್ಳವರಾಗಿದ್ದರೂ ದೇವತೆಗಳು ಅಜ್ಞಜನಮೋಹನಕ್ಕಾಗಿ ಬಹುಶಃ (ಕೆಲವು ಸಲ ಶ್ರೀಹರಿಯ ಆಜ್ಞಾನುಸಾರ) ಆಯಾಸ-ದುಃಖ-ಲಜ್ಜೆ-ನಮಸ್ಕಾರ ಮುಂತಾದವನ್ನು ಋಷಿಗಳ ರಾಜರುಗಳ ವಿಷಯದಲ್ಲಿ ತೋರಿಸುವರು ಎಂದು ಭಾವ.

ಅಪರೋಕ್ಷಜ್ಞಾನಿಯಾದ ಜೀವನ್ಮುಕ್ತನಾದ ಪೃಥುವಿಗೆ ದ್ವೇಷಪ್ರಸಕ್ತಿ ಯಾಕೆ ? ಯಜ್ಞ ಮುಗಿಯಲಿಲ್ಲವೆಂಬ ದುಃಖವೇಕೆ ? ಅಂದಮೇಲೆ ದುಃಖಪಟ್ಟನು ಎಂದು ಹೇಳುವದಾಗಲೀ, ದುಃಖಶಾಂತಿಗಾಗಿ ಬ್ರಹ್ಮದೇವರು ಉಪದೇಶ ಮಾಡಿದರು ಇತ್ಯಾದಿಗಳೆಲ್ಲ ಹೇಗೆ ಸಂಗತ ? ಎಂದರೆ, ಜೀವನ್ಮುಕ್ತರಿಗೂ ದುಃಖಾದಿಪ್ರಸಕ್ತಿಯನ್ನು ಪ್ರಮಾಣದಿಂದ ತಿಳಿಸುವರು -

**ಅಪಕ್ವಭಕ್ತಿಯುಕ್ತಾ ಯೇ ನ ತೇಷಾಂ ವಿಷ್ಣುದರ್ಶನಮ್ ।**
**ಪ್ರಾಯೋ ಭವತಿ ದುಃಖಸ್ಯ ತ್ವಭಾವಃ ಪ್ರಾಯಶೋ ಭವೇತ್ ॥**

**ಇತಿ ಪ್ರಕಾಶಸಂಹಿತಾಯಾಮ್ ॥**

ಅಪಕ್ವಭಕ್ತಿಯುಳ್ಳ ಜೀವನ್ಮುಕ್ತರಾದ ಋಷಿಗಳು-ರಾಜರುಗಳಿಗೆ ಬಹಳವಾಗಿ ಬ್ರಹ್ಮದರ್ಶನವಾಗಲಾರದು. ಪ್ರಾರಬ್ಧಕರ್ಮವಶಾತ್ ತಿರೋಹಿತವಾಗಿರುವದು. ಪ್ರಯತ್ನ ಮಾಡಿದಾಗ ಮಾತ್ರ ಕೆಲವೇ ಸಲ ಆವಿರ್ಭವಿಸುವುದು. ಆದ್ದರಿಂದ ದುಃಖ-ದ್ವೇಷಗಳ ಅಭಾವ ಪ್ರಾಯಶಃ ಇರುವದು. ಅಂದಮೇಲೆ ರಾಜನಾದ ಪೃಥುವಿಗೆ ಕದಾಚಿತ್ ಪ್ರಯತ್ನದಿಂದ ಬ್ರಹ್ಮದರ್ಶನವಾದಾಗ ಆನಂದಭರಿತನಾದವನಿಗೆ ದುಃಖ-ದ್ವೇಷಗಳಿಲ್ಲದಿದ್ದರೂ ಬ್ರಹ್ಮದರ್ಶನವು ತಿರೋಧಾನವಾದಾಗ ದ್ವೇಷಾದಿಪ್ರಸಕ್ತಿ ಇದ್ದೇ ಇದೆ.

ಪಕ್ವಭಕ್ತಿಯುತರಾದ ದೇವತೆಗಳಿಗೆ ಪ್ರಾಯಃ ಬ್ರಹ್ಮದರ್ಶನವಾಗುವದು. ಕೆಲವೇ ಸಲ ತಿರೋಧಾನವಾಗುವದು. ಅವರಿಗೆ ದುಃಖಾದಿಗಳು ಬಹಳವಾಗಿ ಇರುವದಿಲ್ಲವೆಂದು ಸೂಚಿತವಾಗುವದು. ॥೧೯॥

**ಭಗವಾನಪಿ ವಿಶ್ವಾತ್ಮಾ ಪೃಥುನೋಪಹೃತಾರ್ಹಣಃ ।**
**ಸಮುಜ್ಜಿಹಾನಯಾ ಭಕ್ತ್ಯಾ ಗೃಹೀತಚರಣಾಂಬುಜಃ ॥೨೦॥**

ವಿಶ್ವಾತ್ಮಾ=ಗುಣಪೂರ್ಣವಾದ ದೇಹವುಳ್ಳ ಭಗವಾನಪಿ=ಶ್ರೀಹರಿಯೂ ಸಹ ಪೃಥುನಾ=ಪೃಥುರಾಜನಿಂದ ಉಪಹೃತಾರ್ಹಣಃ=ಪೂಜಿಸಲ್ಪಟ್ಟು ಸಮುಜ್ಜಿಹಾನಯಾ ಭಕ್ತ್ಯಾ=ಪ್ರತಿದಿನವೂ ಅಭಿವೃದ್ಧವಾದ ಭಕ್ತಿಯಿಂದ ಗೃಹೀತಚರಣಾಂಬುಜಃ=ಹಿಡಿಯಲ್ಪಟ್ಟ ಪಾದಕಮಲಗಳುಳ್ಳವನಾಗಿ, (ಅನ್ವಯ ಮುಂದುವರೆಯುತ್ತದೆ)

**ಭಾಗವತ ತಾತ್ಪರ್ಯ -**

ಮೂಲದಲ್ಲಿಯ ವಿಶ್ವಾತ್ಮಾ ಎಂಬ ಪದಕ್ಕೆ ''ಜಗತ್ತಿನಿಂದ ಅಭಿನ್ನ'' ಎಂಬ ಅರ್ಥವಾಗದಿರಲಿ ಎಂದು ಪ್ರಮಾಣದಿಂದಲೇ ವಿಶ್ವಶಬ್ದಾರ್ಥವನ್ನು ಹೇಳುವರು -

**ಜಗತ್ಸಮಸ್ತಂ ವಿಶ್ವಂ ಚ ನಿಖಿಲಂ ಪೂರ್ಣಮುಚ್ಯತೇ ॥ ಇತ್ಯಭಿಧಾನಮ್ ॥**

ಜಗತ್ ಸಮಸ್ತ ವಿಶ್ವ ನಿಖಿಲ ಈ ಎಲ್ಲ ಶಬ್ದಗಳಿಂದ ಪೂರ್ಣವಾದ ವಸ್ತು ಹೇಳಲ್ಪಡುವದು. ॥೨೦॥

**ಪ್ರಸ್ಥಾನಾಭಿಮುಖೋಽಪ್ಯೇನಮನುಗ್ರಹವಿಲಂಬಿತಃ ।**
**ಪಶ್ಯನ್ ಪದ್ಮಪಲಾಶಾಕ್ಷೋ ನ ಪ್ರತಸ್ಥೇ ಸುಹೃತ್ ಸತಾಮ್ ॥೨೧ ॥**

ಪ್ರಸ್ಥಾನಾಭಿಮುಖಃ ಅಪಿ=ಪ್ರಯಾಣಕ್ಕೆ ಸಿದ್ಧನಾಗಿದ್ದರೂ ಏನಂ ಪಶ್ಯನ್=ಪೃಥುವನ್ನು ನೋಡಿ ಸತಾಂ ಸುಹೃತ್=ಸಜ್ಜನರಿಗೆ ಅನಿಮಿತ್ತೋಪಕಾರಕನಾದ, ಪದ್ಮಪಲಾಶಾಕ್ಷಃ=ಕಮಲದ ದಳದಂತೆ ವಿಶಾಲವಾದ ಕಣ್ಣುಗಳುಳ್ಳ, ಅನುಗ್ರಹವಿಲಂಬಿತಃ ಸನ್=ಅನುಗ್ರಹದಿಂದ ವಿಲಂಬವುಳ್ಳವನಾಗಿ ನ ಪ್ರತಸ್ಥೇ=ಹೊರಡಲಿಲ್ಲ. ॥೨೧॥

ಈ ರೀತಿಯಾಗಿ ಭಗವಂತನ ಉತ್ತಮವಾದ ಅನುಗ್ರಹವನ್ನು ಹೇಳಿ ಪೃಥುವಿನ ಅತಿಶಯಭಕ್ತಿಯನ್ನು ಹೇಳುವರು -

**ಸ ಆದಿರಾಜೋ ರಚಿತಾಂಜಲಿರ್ಹರಿಂ**
**ವಿಲೋಕಿತುಂ ನಾಶಕದಶ್ರುಲೋಚನಃ ।**
**ನ ಕಿಂಚನೋವಾಚ ಸ ಬಾಷ್ಪವಿಕ್ಲವೋ**
**ಹೃದೋಪಗುಹ್ಯಾಮುಮಥ ವ್ಯವಸ್ಥಿತಃ ॥೨೨॥**

ಸಃ=ಆದಿರಾಜಃ=ಆ ಪೃಥುರಾಜನು ರಚಿತಾಂಜಲಿಃ=ಕೈಜೋಡಿಸಿದವನಾಗಿ ಅಶ್ರುಲೋಚನಃ=ಆನಂದಾಶ್ರುಗಳಿಂದ ಕೂಡಿದ ಕಣ್ಣುಗಳುಳ್ಳವನಾಗಿ ಹರಿಂ=ಶ್ರೀಹರಿಯನ್ನು ವಿಲೋಕಿತುಂ ನ ಅಶಕತ್=ನೋಡಲು ಸಮರ್ಥನಾಗಲಿಲ್ಲ. ಬಾಷ್ಪವಿಕ್ಲವಃ=ಕಣ್ಣೀರಿನಿಂದ ಬಳಲಿದವನಾಗಿ ನ ಕಿಂಚನ ಉವಾಚ=ಏನೂ ಮಾತನಾಡಲಿಲ್ಲ. ಹೃದಾ ಅಮುಂ ಉಪಗುಹ್ಯ ವ್ಯವಸ್ಥಿತಃ=ಮನಸ್ಸಿನಿಂದ ಶ್ರೀಹರಿಯನ್ನು ಧ್ಯಾನ ಮಾಡುತ್ತ ನಿಂತನು. ॥೨೨॥

**ಅಥಾಭಿಮೃಜ್ಯಾಶ್ರುಕಣಾನ್ವಿಲೋಕಯನ್**
**ಅತೃಪ್ತದೃಗ್ಗೋಚರಮಾಹ ಪೂರುಷಮ್ ।**
**ಪದಾ ಸ್ಪೃಶಂತಂ ಕ್ಷಿತಿಮಂಸ ಉನ್ನತೇ**
**ವಿನ್ಯಸ್ತಹಸ್ತಾಗ್ರಮುರಂಗವಿದ್ವಿಷಃ ॥೨೩॥**

ಅಥ=ಅನಂತರ ಅಶ್ರುಕಣಾನ್=ಕಣ್ಣೀರನ್ನು ಅಭಿಮೃಜ್ಯ=ಒರಸಿಕೊಂಡು ಅತೃಪ್ತದೃಗ್ಗೋಚರಂ=ಅಲಂಬುದ್ಧಿ ಇಲ್ಲದ (ಸಾಕೆನಿಸದ) ಕಣ್ಣುಗಳಿಗೆ ವಿಷಯನಾದ, ಪದಾ=ಕಾಲಿನಿಂದ ಕ್ಷಿತಿಂ=ಭೂಮಿಯನ್ನು ಸ್ಪೃಶಂತಂ=ಮುಟ್ಟುವ (ತನಗೆ ಅನುಗ್ರಹ

ಮಾಡಲು ಭೂಮಿಯಲ್ಲಿ ನಿಂತಿರುವ), ಉರಂಗವಿದ್ವಿಷಃ=ಗರುಡನ ಉನ್ನತೇ ಅಂಸೇ=ಎತ್ತರವಾದ ಹೆಗಲಮೇಲೆ ವಿನ್ಯಸ್ತಹಸ್ತಾಗ್ರಂ=ಕೈಯಿರಿಸಿದ, ಪುರುಷಂ=ಶ್ರೀಹರಿಯನ್ನು ಕುರಿತು ಆಹ=ಹೇಳಿದನು.

**ದುರ್ಘಟಭಾವ**

ಶ್ರೀಹರಿಯು ಪ್ರಯಾಣಕ್ಕೆ ಹೊರಟವನು ನಿಂತನಷ್ಟೇ ! ಆದ್ದರಿಂದ ಉರಂಗವಿದ್ವಿಷಃ ಅಂಸೇ=ಗರುಡನ ಹೆಗಲಮೇಲೆ ಏರಲು ಪದಾ=ಒಂದು ಕಾಲಿನಿಂದ ಕ್ಷಿತಿಂ=ಭೂಮಿಯನ್ನು ಅಸ್ಪೃಶಂತಂ=ಮುಟ್ಟದಿರುವ, ಪದಾ ಕ್ಷಿತಿಂ ಸ್ಪೃಶಂತಂ=ಇನ್ನೊಂದು ಕಾಲಿನಿಂದ ಭೂಮಿಯನ್ನು ಸ್ಪರ್ಶಿಸುವ ಆದ್ದರಿಂದಲೇ ಅಂಸೇ ವಿನ್ಯಸ್ತಹಸ್ತಾಗ್ರಂ=ಗರುಡನ ಹೆಗಲಮೇಲೆ ಕೈಯಿರಿಸಿದ್ದು ಎಂದರ್ಥ. ಒಂದು ಕಾಲನ್ನು ಎತ್ತಿದ್ದರೂ ಒಂದು ಕಾಲು ನೆಲದಲ್ಲಿದ್ದದ್ದರಿಂದ ಗರುಡನ ಹೆಗಲಮೇಲೆ ಕೈಇಡಬೇಕಾಯಿತು ಎನ್ನುವರು ಶ್ರೀಸತ್ಯಾಭಿನವರು. ॥೨೩॥

**ಪೃಥುರುವಾಚ -**

**ವರಾನ್ ವಿಭೋ ತ್ವದ್ವರದೇಶ್ವರಾದ್ಬುಧಃ**
**ಕಥಂ ವೃಣೀತೇ ಗುಣವಿಕ್ರಿಯಾತ್ಮನಾಮ್ ।**
**ಯೇ ನಾರಕಾಣಾಮಪಿ ಸಂತಿ ದೇಹಿನಾಂ**
**ತಾನೀಶ ಕೈವಲ್ಯಪತೇರ್ವೃಣೀತ ಕಃ ॥೨೪॥**

ವಿಭೋ=ಸ್ವಾಮಿಯೇ ! ಯೇ ಐಹಿಕಾಃ=ಯಾವ ಐಹಿಕಸುಖಸಾಧನಗಳಾದ ಸ್ರಕ್‌ಚಂದನವನಿತಾದಿಗಳು ಗುಣವಿಕ್ರಿಯಾತ್ಮನಾಂ=ವಿಷಯಗಳಿಂದ ವಿಕಾರಗೊಳ್ಳುವ ಮನಸ್ಸುಳ್ಳ ನಾರಕಾಣಾಂ ಅಪಿ=ನರಕದಲ್ಲಿರುವವರಿಗೂ ಸಂತಿ=ಇರುವವೋ ತಾನ್= ಅವುಗಳನ್ನು ಈಶ=ಒಡೆಯನೇ ! ಕಃ ಬುಧಃ=ಯಾವ ಬುದ್ಧಿವಂತನು ವರದೇಶ್ವರಾತ್=ವರ ಕೊಡುವ ಬ್ರಹ್ಮಾದಿಗಳಿಗೂ ನಿಯಾಮಕನಾದ, ಕೈವಲ್ಯಪತೇಃ=ಮುಕ್ತಿಗೆ ಒಡೆಯನಾದ ತ್ವತ್= ನಿನ್ನಿಂದ ವೃಣೀತ=ಕೇಳಿಯಾನು ? ಕಥಂ ವೃಣೀತೇ=ಹೇಗೆ ಕೇಳುವನು ? ಕೇಳಲಾರನೆಂದರ್ಥ.

ಕುಬೇರನ ಹತ್ತಿರ ಹೋಗಿ ಒಣಗಿದ ರೊಟ್ಟಿಯನ್ನು ಕೇಳುವಂತೆ ನಿನ್ನಲ್ಲಿ ಆ ಈ ವರಗಳನ್ನು ಯಾವ ಬುದ್ಧಿವಂತನೂ ಕೇಳಲಾರ. ಕಾರಣ ನಾನೂ ಕೇಳಲಾರೆನು ಎಂದು ಭಾವ. ॥೨೪॥

ಕೇಳುವದಾದರೆ ನಿನ್ನ ಪಾದಾರವಿಂದದ ಕಥಾ ಶ್ರವಣವನ್ನೇ ಕೇಳುವೆನು ಅದಿಲ್ಲದ ಮೋಕ್ಷವೂ ನನಗೆ ಬೇಡವೆಂದು ಹೇಳುವನು.

**ನ ಕಾಮಯೇ ನಾಥ ತದಪ್ಯಹಂ ಕ್ವಚಿ-**
**ನ್ನ ಯತ್ರ ಯುಷ್ಮಚ್ಚರಣಾಂಬುಜಾಸವಮ್ ।**
**ಮಹತ್ತಮಾಂತರ್ಹೃದಯಾನ್ಮುಖಚ್ಯುತಂ**
**ವಿಧತ್ಸ್ವ ಕರ್ಣಾಮೃತಮೇಷ ಮೇ ವರಃ ॥೨೫॥**

ಹೇ ನಾಥ=ಸ್ವಾಮಿಯೇ ! ಮಹತ್ತಮಾಂತರ್ಹೃದಯಾತ್=ಅತ್ಯಂತಶ್ರೇಷ್ಠರಾದ ಜ್ಞಾನಿಗಳ ಹೃದಯಾಂತರಾಲದಿಂದ ಮುಖಚ್ಯುತಂ=ಮುಖದಿಂದ ಹೊರಹೊಮ್ಮಿದ ಯುಷ್ಮಚ್ಚರಣಾಂಬುಂಜಾಸವಂ=ನಿಮ್ಮ ಪಾದಕಮಲಗಳನ್ನಾಶ್ರಯಿಸಿದ ಮಕರಂದ-ಪ್ರಾಯವಾದ ಯಶಃ=ಕಥಾಶ್ರವಣವು ಯತ್ರ=ಯಾವ ಕೈವಲ್ಯದಲ್ಲಿ ನ=ಇರುವದಿಲ್ಲವೋ ತದಪಿ=ಆ ಕೈವಲ್ಯವನ್ನೂ ಕ್ವಚಿತ್=ಯಾವ ಕಾಲದಲ್ಲಿಯೂ ನ ಕಾಮಯೇ=ಇಚ್ಛಿಸಲಾರೆನು. ಆದ್ದರಿಂದ ಕರ್ಣಾಮೃತಂ=ಕಿವಿಗಳಿಗೆ ಅಮೃತದಂತೆ ಸುಖವನ್ನೀಯುವ ತತ್=ಆ ಕಥಾಶ್ರವಣವನ್ನೇ ವಿಧತ್ಸ್ವ=ಅನುಗ್ರಹಿಸು. ಏಷಃ ಮೇ ವರಃ=ಇದೇ ನಾನು ಬೇಡುವ ವರವು.

ನನ್ನ ಕೀರ್ತಿಕಥಾಶ್ರವಣದಿಂದಾಗುವ ಫಲವಾದರೂ ಏನು ? ಏಕೆ ನೀನು ಅದನ್ನೇ ಬೇಡುವಿ ? ಎಂದರೆ, ಅದರಿಂದಾಗುವ ಫಲವನ್ನೇ ತಿಳಿಸುತ್ತ ಹೇಳಿದ್ದನ್ನೇ ವಿಶದಪಡಿಸುವನು -

**ಸ ಉತ್ತಮಶ್ಲೋಕಮಹನ್ಮುಖಚ್ಯುತೋ**
**ಭವತ್ಪದಾಂಭೋಜಸುಧಾಕಣಾನಿಲಃ ।**
**ಸ್ಮೃತಿಂ ಪುನರ್ವಿಸ್ಮೃತತತ್ತ್ವವರ್ತ್ಮನಾಂ**
**ಕುಯೋಗಿನಾಂ ನೋ ವಿತರತ್ಯಲಂ ವರೈಃ ॥೨೬॥**

ಹೇ ಉತ್ತಮಶ್ಲೋಕ=ಬ್ರಹ್ಮಾದಿಗಳಿಂದ ಸ್ತುತಿಸಲ್ಪಡುವವನೇ ! ಮಹನ್ಮುಖಚ್ಯುತಃ= ಮಹಾತ್ಮರ ಮುಖದಿಂದ ಹೊರಟ ಸಃ ಭವತ್ಪದಾಂಭೋಜಸುಧಾಕಣಾನಿಲಃ=ಆ ನಿನ್ನ ಪಾದಕಮಲಗಳನ್ನಾಶ್ರಯಿಸಿದ ಕಥಾಸುಧೆಯ ಒಂದು ಹನಿಯಿಂದ ಕೂಡಿದ ಗಾಳಿಯು (ದೂರದಿಂದ ಕಥಾಶ್ರವಣವೂ ಸಹ) ವಿಸ್ಮೃತತತ್ತ್ವವರ್ತ್ಮನಾಂ=ತತ್ತ್ವಮಾರ್ಗವನ್ನು ಮರೆತ ಕುಯೋಗಿನಾಂ=ಕುತ್ಸಿತಸಾಧಕರಾದ ನಃ=ನಮಗೆ ಪುನಃ=ಮತ್ತೆ ಸ್ಮೃತಿಂ ವಿತರತಿ=ತತ್ತ್ವಜ್ಞಾನದ ಸ್ಮರಣವನ್ನು ನೀಡುವದು. ಆದ್ದರಿಂದ ವರೈಃ ಅಲಂ=ಬೇರೆ ವರಗಳು (ಸಾಕು) ಬೇಡವೆಂದರ್ಥ. ॥೨೬॥

ನನ್ನ ಕಥೆಯನ್ನು ನೀನು ಬೇಕಾದಷ್ಟು ಕೇಳಿರುವಿ ಮತ್ತೆಕೆ ಅದೇ ವರವನ್ನು ಕೇಳುವಿ ಎಂದರೆ ಹೇಳುವನು

**ಯಶಃ ಶಿವಂ ಸುಶ್ರವ ಆರ್ಯಸಂಗಮೇ**
**ಯದೃಚ್ಛಯಾ ಚೋಪಶೃಣೋತಿ ತೇ ಸಕೃತ್ ।**
**ಕಥಂ ಗುಣಜ್ಞೋ ವಿರಮೇದ್ವಿನಾ ಪಶುಂ**
**ಶ್ರೀರ್ಯತ್ಪ್ರವವ್ರೇ ಗುಣಸಂಗ್ರಹೇಚ್ಛಯಾ ॥೨೭॥**

ಹೇ ಸುಶ್ರವಃ=ಶುಭಕೀರ್ತಿಯೇ ! ಯಃ=ಯಾವನು ಆರ್ಯಸಂಗಮೇ=ತತ್ತ್ವಜ್ಞಾನಿಗಳ ಸಮಾಗಮವಾದಾಗ, ಶ್ರೀಃ=ಲಕ್ಷ್ಮೀದೇವಿಯು ಯತ್=ಯಾವ ನಿನ್ನ ಕಥಾವನ್ನು *ಗುಣಸಂಗ್ರಹೇಚ್ಛಯಾ=ಚೆನ್ನಾಗಿ ಉಪದೇಶ ಮಾಡುವದಕ್ಕಾಗಿ ಪ್ರವವ್ರೇ=ಸ್ವೀಕರಿಸಿರುವಳೋ ಅಂತಹ, ಯದೃಚ್ಛಯಾ=ಶ್ರೀಹರಿಯ ಇಚ್ಛೆಯಿಂದ ಪ್ರಾಸಂಗಿಕವಾಗಿ ದೊರೆತ, ತೇ (ತವ)=ನಿನ್ನ ಯಶಃ ಶಿವಂ=ಕಥಾರೂಪವಾದ ಕೀರ್ತಿಸಂಪತ್ತನ್ನು ಸಕೃತ್=ಒಂದುಸಲ ಉಪಶೃಣೋತಿ=ಕೇಳುವನೋ ಸಃ=ಅಂತಹ ಗುಣಜ್ಞಃ=ಸಾರಜ್ಞನಾದವನು ಪಶುಂ ವಿನಾ=ಅಜ್ಞಾನಿಯನ್ನು ಬಿಟ್ಟು ಕಥಂ ವಿರಮೇತ್=ಹೇಗೆ ವಿರಮಿಸುವನು ?

*ಅಥವಾ ಗುಣ ಎಂದರೆ ಆವೃತ್ತಿ. ಅದನ್ನು ಸಂಗ್ರಹೇಚ್ಛಯಾ=ಮಾಡುವ ಇಚ್ಛೆಯಿಂದ ಎಂದರ್ಥ. ಶ್ರವಣಾವೃತ್ತಿ ಮಾಡಿದರೆ ಆನಂದಾಭಿವೃದ್ಧಿ ಆಗುವದು ಎಂದು ಭಾವ. "ಗುಣಸ್ತ್ವಾವೃತ್ತಿಶಬ್ದಾದಿಜ್ಯೇಂದ್ರಿಯಾಮುಖ್ಯತಂತುಷು" ಎಂದು ಯಾದವ ಇದೆ. ॥೨೭॥

**ಅಥಾಭಜಂ ತ್ವಾಖಿಲಪೂರುಷೋತ್ತಮಂ**
**ಗುಣಾಲಯಂ ಪದ್ಮಕರೇವ ಲಾಲಸಃ ।**
**ಅಪ್ಯಾವಯೋರೇಕಪತಿಸ್ಪೃಧೋಃ**
**ಕಲಿರ್ನ ಸ್ಯಾತ್ಕೃತಸ್ತ್ವಚ್ಚರಣೈಕತಾನಯೋಃ ॥೨೮॥**

ಅಥ=ಆದ್ದರಿಂದ ಅಖಿಲಪೂರುಷೋತ್ತಮಂ=ಸರ್ವೋತ್ತಮನಾದ, ಗುಣಾಲಯಂ= ಗುಣಾಶ್ರಯನಾದ ತ್ವಾ=ನಿನ್ನನ್ನು ಪದ್ಮಕರಾ ಇವ=ಲಕ್ಷ್ಮೀದೇವಿಯಂತೆ ಲಾಲಸಃ=ಆಸಕ್ತಿಯಿಂದ ಅಭಜಂ=ಭಜಿಸುವೆನು. (ಯದ್ಯಪಿ ಒಬ್ಬನನ್ನೇ ಇಬ್ಬರು ಪ್ರೀತಿಸಿದರೆ ಪರಸ್ಪರ ವಿರೋಧವಾಗುವದು ಸಹಜ.) ಅಪಿ=ಆದರೂ ಏಕಪತಿಸ್ಪೃಧೋಃ=ಒಬ್ಬನೇ ಯಜಮಾನನನ್ನು ಇಚ್ಛಿಸುವ ತ್ವಚ್ಚರಣೈಕತಾನಯೋಃ=ನಿನ್ನ ಪಾದದಲ್ಲಿಯೇ ಮನಸಿಟ್ಟ ಆವಯೋಃ=ಲಕ್ಷ್ಮೀದೇವಿಗೂ ನನಗೂ (ಇಂದ್ರನಿಗೂ ನನಗೂ ಯಜ್ಞವಿಷಯದಲ್ಲಿ ಆದಂತೆ) ಕಲಿಃ=ಜಗಳವು ಕೃತಃ ನ ಸ್ಯಾತ್=ಆಗಲಾರದು. ಅವಳೂ ಭಕ್ತವತ್ಸಲು ತಾನೇ ? ॥೨೮॥

**ಜಂತೋರ್ಜಗತ್ಯಾಂ ಜಗದೀಶ ವೈಶಸಂ**
**ಸ್ಯಾದೇವ ಯತ್ಕರ್ಮಣಿ ನಃ ಸಮೀಹಿತಮ್ ।**

**ಕರೋಷಿ ಫಲ್ಗ್ವಪ್ಯುರು ದೀನವತ್ಸಲ**
**ಸ್ವ ಏವ ಧಿಷ್ಣ್ಯೇಽಭಿರತಸ್ಯ ಕಿಂ ತಯಾ ॥೨೯॥**

ಹೇ ದೀನವತ್ಸಲ=ದುಃಖಿತರಾದವರಲ್ಲಿ ವಾತ್ಸಲ್ಯವುಳ್ಳವನೇ ! ತ್ವಂ=ನೀನು ಯತ್=ಯಾವ ಕಾರಣ ನಃ ಸಮೀಹಿತಂ=ನಮ್ಮಿಂದ ಮಾಡಲ್ಪಟ್ಟ ಸೇವೆಯು ಫಲ್ಗು ಅಪಿ=ಚಿಕ್ಕದಾದರೂ ಉರು ಕರೋಷಿ=ದೊಡ್ಡದಾಗಿ ಪರಿಗಣಿಸುವಿ.

(ಲೋಕದಲ್ಲಿ ದೊಡ್ಡವರಿಂದ ಸೇವಿಸಲು ಯೋಗ್ಯರಾದ ರಾಜಾದಿಗಳನ್ನು ಚಿಕ್ಕವರು ಸೇವಿಸಲು ಅಧಿಕಾರವಿರುವದಿಲ್ಲ. ಆದರೆ ನೀನು ಲೌಕಿಕರಾಜರಂತೆ ಅಲ್ಲ. ಭಕ್ತರು ಮಾಡಿದ ಸೇವೆಯ ಅಲ್ಪತೆಗೆ ಬೆಲೆ ಕೊಡದೇ, ಭಕ್ತರ ಮೇಲಿನ ವಾತ್ಸಲ್ಯದಿಂದ ಅವರ ಭಕ್ತಿಯನ್ನೇ ಗಮನಿಸಿ ಸಂತುಷ್ಟನಾಗುವಿ. ಆದ್ದರಿಂದ ಅಲ್ಪನಾದ ನನಗೆ ನಿನ್ನನ್ನು ಭಜಿಸುವ ಯೋಗ್ಯತೆ ಇದೆ ಎಂದು ಭಾವ.)

ನಿನ್ನ ಸೇವೆಯಲ್ಲಿಯ ಅಲ್ಪತೆಯನ್ನು ತುಚ್ಛೀಕರಿಸಿರುವದು ಹೇಗೆ ತಿಳಿಯಿತು ನಿಮಗೆ ? ಎಂದರೆ, ಯತಃ=ಯಾವ ಕಾರಣ ಯಾವ ಲಕ್ಷ್ಮೀದೇವಿಯು ಮಹಾಸೇವೆ ಮಾಡುವಳೋ ಅವಳಲ್ಲಿಯೂ ಸಹ ನಿನಗಿರುವ ಮಹಾಪ್ರೀತಿಯು ವಾತ್ಸಲ್ಯಪ್ರಯುಕ್ತವೇ ಹೊರತು ಸೇವೆಯ ಮಹತ್ವದಿಂದಲ್ಲ ಎಂದು ಹೇಳುವನು :- ಸ್ವೇ ಧಿಷ್ಣ್ಯೇ=ಸ್ವರೂಪಭೂತವಾದ ಮಹಿಮೆಯಲ್ಲಿ ಅಭಿರತಸ್ಯ=ಆಸಕ್ತನಾದ (ಅಂದರೆ ಸ್ವರಮಣನಾದ) ನಿನಗೆ ಕಿಂ ತಯಾ=ಆ ಲಕ್ಷ್ಮೀದೇವಿಯಿಂದಲೂ ವಾತ್ಸಲ್ಯವನ್ನು ಬಿಟ್ಟು ಭಾರಿಸೇವೆಯಿಂದ ಆಗುವ ಪ್ರಯೋಜನವೇನು ? ಏನೂ ಇಲ್ಲ. ಅಂದಮೇಲೆ ನಿನ್ನನ್ನು ಭಜಿಸಲು ಭಕ್ತಿಯು ಪ್ರಯೋಜಕವೇ ಹೊರತು ಅಲ್ಪತ್ವಾದಿಗಳು ಅಲ್ಲವೆಂದು ಭಾವ.

ಇಲ್ಲಿ ಅತಿ ಚಿಕ್ಕದಾದ ಶುಭಕಾರ್ಯ ಮಾಡಿದರೂ ಅದಕ್ಕೆ ಫಲ ಕೊಡುವದೇ ಅದನ್ನು ದೊಡ್ಡದು ಮಾಡುವದು. ಹೊರತು ಚಿಕ್ಕಪುಣ್ಯಕ್ಕೆ (ಪರಮಾಣುಪುಣ್ಯಕ್ಕೆ) ಪರ್ವತದಷ್ಟು ಸುಖ ಕೊಡುವದಲ್ಲ. ಹಾಗೆ ಮಾಡಿದರೆ ವೈಷಮ್ಯ ಬರುವದು. ನಿರ್ದೋಷನಾದವನಿಗೆ ಅದು ಸಾಧ್ಯವಿಲ್ಲ ಎಂದು ವಿಜಯಧ್ವಜರ ಅಭಿಪ್ರಾಯ.

ಹೇ ಜಗದೀಶ=ಎಲೋ ಜಗದೊಡೆಯನೇ ! ಜಗತ್ಯಾಂ=ಲೋಕದಲ್ಲಿ ಕರ್ಮಣಿ= ಒಬ್ಬನೇ ಸ್ವಾಮಿಯನ್ನು ಸೇವಿಸುದೆಂಬ ಕಾರ್ಯವು ಕ್ರಿಯಮಾಣೇ=ಒಬ್ಬನಿಂದ ಮಾಡುವಾಗ ಜಂತೋಃ=ಅವನನ್ನೇ ಭಜಿಸುವ ಇನ್ನೊಬ್ಬನ ಜೊತೆಗೆ ವೈಶಸಂ ಸ್ಯಾದೇವ=ವಿರೋಧ, ಕಲಹ ಆಗುವುದೇ. ಅಪಿ=ಆದರೂ ಒಬ್ಬನನ್ನೇ ಭಜಿಸುವ ಲಕ್ಷ್ಮೀದೇವಿಗೂ ನನಗೂ ಕಲಹವಾಗಲಾರದು ಎಂದು ಹಿಂದಿನ ಶ್ಲೋಕದಲ್ಲಿ ಅನ್ವಯ ಮಾಡಬೇಕು.

**ಭಾಗವತ ತಾತ್ಪರ್ಯ :-**

ಮೇಲಿನ ಶ್ಲೋಕದಲ್ಲಿಯ ದಿಷ್ಣ್ಯ ಶಬ್ದಕ್ಕೆ ಪ್ರಕೃತೋಪಯೋಗಿ ಅರ್ಥ ಹೇಳುವರು-

**'ಧಿಷ್ಣ್ಯಂ ತೇಜಶ್ಚ ಸಾಮರ್ಥ್ಯಂ ಮಹಿಮಾ ಧಾಮ ಚೋಚ್ಯತೇ' ಇತ್ಯಭಿಧಾನಮ್।**

ಧಿಷ್ಣ್ಯ, ತೇಜಸ್ಸು ಸಾಮರ್ಥ್ಯ, ಧಾಮು ಈ ಶಬ್ದಗಳಿಂದ ಮಹಿಮೆಯು ಹೇಳಲ್ಪಡುತ್ತದೆ ಎಂದು ಅಭಿಧಾನವಿದೆ.

ಮೇಲಿನ ಶ್ಲೋಕದಲ್ಲಿಯ ''ಜಂತೋಃ...ಕರ್ಮಣಿ'' ವರೆಗೆ ಹಿಂದಿನ ಶ್ಲೋಕದಲ್ಲಿ ಅನ್ವಿತವಾದ ಮೇಲೆ ''ನಃ ಸಮೀಹಿತಂ'' ಎಂಬುವ ಮುಂದಿನ ಶ್ಲೋಕಕ್ಕೆ ಹಿಂದಿನಿಂದ ಸಂಗತಿ ತೋರುವದಿಲ್ಲ, ಆ ಕಾರಣ ಸಂಗತಿ ತಿಳಿಸುವರು -

**ಅಲ್ಪಪುಣ್ಯತ್ವಾನ್ನ ಮದ್ಭಕ್ತಿಯೋಗ್ಯ ಇತಿ ನ (ವಕ್ತವ್ಯಂ) ಮಂತವ್ಯಂ । ಯತಃ ಫಲ್ಗ್ವಪ್ಯುರು ಕರೋಷಿ ವಾತ್ಸಲ್ಯಾತ್ । ವಿನಾ ವಾತ್ಸಲ್ಯಂ ಶ್ರಿಯಾಽಪಿ ಕಿಂ ತವ ॥**

''ಅಲ್ಪಪುಣ್ಯ ಉಳ್ಳವನಾದ್ದರಿಂದ ನೀನು ನನ್ನನ್ನು ಭಜಿಸಲು (ಭಕ್ತಿ ಮಾಡಲು) ಯೋಗ್ಯನಲ್ಲ ಎಂದು ಹೇಳಕೂಡದು'' ಎಂಬುದಾಗಿ ''ನಃ ಸಮೀಹಿತಂ'' ಇತ್ಯಾದಿಗಳಿಂದ ಹೇಳುವರು. ಏಕೆಂದರೆ ನೀನು ಭಕ್ತವತ್ಸಲನಾದ್ದರಿಂದ ಭಕ್ತರು ಅಲ್ಪಸಾಧನ ಮಾಡಿದರೂ ಮಹತ್ತನ್ನಾಗಿ ಮಾಡುವಿ. ವಾತ್ಸಲ್ಯದ ಹೊರತು ನಿನಗೆ ಲಕ್ಷ್ಮಿಯಿಂದಲೂ ಸಾಧ್ಯವಾದ ಪ್ರಯೋಜನ ಏನಿದೆ ? ಏನೂ ಇಲ್ಲ. ಯಾವ ಲಕ್ಷ್ಮೀದೇವಿ ಮಹಾಸೇವೆ ಮಾಡುತ್ತಾಳೆಯೋ ಅವಳಲ್ಲಿಯೂ ಮಹಾಪ್ರೀತಿಯು ನಿನಗೆ ಅವಳಲ್ಲಿರುವ ವಾತ್ಸಲ್ಯದಿಂದಲೇ. ಅವಳ ಸೇವೆಯ ಮಹತ್ವದಿಂದ ಅಲ್ಲವೆಂದು ಭಾವ. ॥೨೯॥

ನಿನ್ನ ಭಜಿಸುವ ಯೋಗ್ಯತೆಗೆ ಭಕ್ತಿಯೇ ಪ್ರಯೋಜಕ ಹೊರತು ಮಹತ್ತರವಾದ ಪುಣ್ಯ ಮುಂತಾದವು ಅಲ್ಲ ಎನ್ನುವದಕ್ಕೆ ಇನ್ನೊಂದು ಯುಕ್ತಿಯನ್ನು ಹೇಳುವರು -

**ಭಜಂತ್ಯಥ ತ್ವಾಮತ ಏವ ಸಾಧವೋ**
**ವ್ಯುದಸ್ತಮಾಯಾಗುಣವಿಭ್ರಮೋದಯಮ್ ।**
**ಭವತ್ಪದಾನುಸ್ಮರಣಾದೃತೇ ಸತಾಂ**
**ನಿಮಿತ್ತಮನ್ಯದ್ಭಗವನ್ನ ವಿದ್ಮಹೇ ॥೩೦॥**

ಸಾಧವಃ=ಯಾವ ಕಾಮನೆಯೂ ಇಲ್ಲದ ಸಜ್ಜನರು ಅತ ಏವ=ನೀನು ಭಕ್ತವತ್ಸಲನಾದುದರಿಂದಲೇ ವ್ಯುದಸ್ತಮಾಯಾಗುಣವಿಭ್ರಮೋದಯಂ=ಸತ್ವಾದಿಗುಣಗಳ ವಿಕಾರವನ್ನು ದೂರೀಕರಿಸಿದ ತ್ವಾಂ=ನಿನ್ನನ್ನು ಭಜಂತಿ=ಸೇವಿಸುವರು. ಅಥ=ಯುಕ್ತ್ಯಂತರವು.

ಸತಾಂ=ಸಜ್ಜನರಿಗೆ ಭವತ್ಪದಾನುಸ್ಮರಣಾತ್ ಋತೇ=ನಿನ್ನ ಪಾದಸ್ಮರಣದ ಹೊರತು ಅನ್ಯತ್ ನಿಮಿತ್ತಂ=ಬೇರೆ ಉದ್ದೇಶವನ್ನು ಫಲವನ್ನು ನ ವಿದ್ಮಹೇ=ತಿಳಿಯಲಾರೆ, ಯಾವುದೂ ಇಲ್ಲವೆಂದರ್ಥ.

ನಿನ್ನ ಸ್ಮರಣವೇ ಅವರಿಗೆ ಆವಶ್ಯಕವು. 'ಅಥ'ಶಬ್ದಕ್ಕೆ ಆನಂತರ್ಯ ಮೊದಲಾದ ಅರ್ಥಗಳು ಅಸಂಗತವೆಂದು ತಿಳಿದು, ಸಂಗತವಾದ ಅರ್ಥ ಹೇಳುವರು ಮತ್ತು ಅತ ಏವ ಎಂಬುದರಿಂದ ಪರಾಮೃಶ್ಯವಾದ ಹೇತು ಯಾವದು ? ಎಂದೂ ತಿಳಿಸುವರು -

**ಅಥ ಅನ್ಯಚ್ಚ । ಅತಃ ವಾತ್ಸಲ್ಯಾದೇವ ।**

''ಈ ವಿಷಯದಲ್ಲಿ ಬೇರೊಂದು ಪ್ರಮಾಣವೂ ಹೇಳಲ್ಪಡುವದು'' ಎಂದು ಅಥಶಬ್ದಕ್ಕೆ ಅರ್ಥ. ಸ್ವರಮಣನೆಂದು ಹೇಳಿದ ಯುಕ್ತಿಯನ್ನು ಚಶಬ್ದದಿಂದ ಸಮುಚ್ಚಯ ಮಾಡುವರು. ''ಅತಃ'' ಎನ್ನುವದಕ್ಕೆ ನಿನಗೆ ಭಕ್ತರಲ್ಲಿ ವಾತ್ಸಲ್ಯವಿದ್ದುದರಿಂದಲೇ ಎಂದರ್ಥ. ।।೩೦।।

ಮುಕ್ತಿಗೆ ಮುಖ್ಯಕಾರಣವಾದದ್ದು ನಿನ್ನ ಸ್ಮರಣವೇ ಹೊರತು ಬೇರೊಂದಿಲ್ಲವೆಂದರೆ, ಹಾಗಾದರೆ ''ವರಂ ವೃಣೀಷ್ವ'' ಎಂದು ಭಗವಂತನು ಹೇಳಿದ್ದೇಕೆ ? ಎಂದರೆ, ಮೋಕ್ಷವು ದುರ್ಲಭವಾದ್ದರಿಂದ ಈ ವಿಧವಾದ ಮಾತುಗಳಿಂದ ಪ್ರಲೋಭನೆ ಮಾಡುವದು ಅವನ ಸ್ವಭಾವವೇ ಎಂಬ ಅಭಿಪ್ರಾಯದಿಂದ ಹೇಳುವನು -

**ಮನ್ಯೇ ಗಿರಂ ತೇ ಜಗತಾಂ ವಿಮೋಹಿನೀಂ**
**ವರಂ ವೃಣೀಷ್ವೇತಿ ಭಜಂತಮಾತ್ಥ ಯತ್ ।**
**ವಾಚಾ ನು ತಂತ್ಯಾ ಯದಿ ತೇ ಜನೋಽಸಿತಃ**
**ಕಥಂ ಪುನಃ ಕರ್ಮ ಕರೋತಿ ಮೋಹಿತಃ ।।೩೧।।**

ಭಜಂತಂ=ಸೇವೆ ಮಾಡುವವನಿಗೆ ವರಂ ವೃಣೀಷ್ವ ಇತಿ ಆತ್ಥ ಯತ್=ವರವನ್ನು ಕೇಳು ಎಂದೇನು ಹೇಳಿದಿಯೋ ತಾಂ ತೇ ಗಿರಂ=ಆ ನಿನ್ನ ಮಾತನ್ನು ಜಗತಾಂ ವಿಮೋಹಿನೀಂ ಮನ್ಯೇ=ಎಲ್ಲರಿಗೂ ಮೋಹಕವೆಂದು ತಿಳಿಯುವೆನು.

ಅಷ್ಟೇ ಅಲ್ಲ ''ಸ್ವರ್ಗಕಾಮೋ ಯಜೇತ'' ಮುಂತಾದ ವೇದವಾಕ್ಯಗಳಿಂದಲೂ ಮೋಹಗೊಳಿಸುವಿ ಎಂದು ಹೇಳುವನು- ಯದಿ ಪುನಃ=ಒಂದುವೇಳೆ ತೇ ವಾಚಾ ತಂತ್ಯಾ=ವೇದರೂಪವಾದ ನಿನ್ನ ವಾಕ್‌ತಂತಿಯಿಂದ ಅಸಿತಃ=ಬದ್ಧನಾಗದಿದ್ದರೆ ತರ್ಹಿ ಮೋಹಿತಃ=ಫಲಗಳಿಂದ ಮೋಹಿತನಾಗಿ ಕಥಂ ಕರ್ಮ ಕರೋತಿ=ಕರ್ಮವನ್ನು ಹೇಗೆ ಮಾಡುವನು ? ಮಾಡಲಾರನೆಂದರ್ಥ. ಫಲಕಾಮನೆಯಿಂದ ಕರ್ಮವನ್ನಂತೂ ಮಾಡುವನು. ಆಂದಮೇಲೆ ವೇದವಾಕ್ಯದಿಂದ ಮೋಹಿತನಾಗಿರುವನು ಎಂದರ್ಥ.

ಅನಾದಿಕಾಲದಿಂದಲೇ ನಿನ್ನ ಬಂಧಕಶಕ್ತಿಯಿಂದ ಮೋಹಿತರಾದವರಿಗೆ ಮತ್ತೆ ವರವನ್ನು ಕೇಳೆಂದು ಹೇಳಿ ಮೋಹಗೊಳಿಸುವದು ಸತ್ತವನನ್ನು ಕೊಲ್ಲುವಂತೆ ಎಂಬ ಅಭಿಪ್ರಾಯದಿಂದ ಹೇಳುವನು -

**ತ್ವನ್ಮಾಯಯಾಽದ್ಧಾ ಜಗದೀಶ ಖಂಡಿತೋ**
**ಯದನ್ಯದಾಶಾಸ್ತ ಋತಾತ್ಮನೋಽಬುಧಃ ।**
**ಯಥಾ ಚರೇದ್ಬಾಲಹಿತಂ ಪಿತಾ ಸ್ವಯಂ**
**ತಥಾ ತ್ವಮೇವಾರ್ಹಸಿ ನಃ ಸಮೀಹಿತಮ್ ॥೩೨॥**

ಅಬುಧಃ=ಅಜ್ಞಾನಿಗಳಾದ ಜನರು ಋತಾತ್ಮನಃ=ವಿಕಾರವಿಲ್ಲದ ನಿನ್ನಿಂದ (ಶ್ರೀಹರಿಯಿಂದ) ಅನ್ಯತ್=ಸ್ವರ್ಗಾದಿಗಳನ್ನು ಆಶಾಸ್ತೇ=ಮೊದಲಿನಿಂದಲೂ ಅಪೇಕ್ಷಿಸುತ್ತಲೇ ಇರುವರು. ಆದ್ದರಿಂದ ಹೇ ಜಗದೀಶ=ಜಗದೊಡೆಯನೇ ! ತ್ವನ್ಮಾಯಯಾ=ನಿನ್ನ ಬಂಧಕಶಕ್ತಿಯಿಂದ ಅದ್ಧಾ=ನಿಶ್ಚಯವಾಗಿ ಖಂಡಿತಃ=ನಿನ್ನ ನಿಷ್ಕಾಮಭಜನೆಯಿಂದ ವಿಯೋಜಿತರಾಗಿರುವರು. (ಬಿಟ್ಟಿರುವರು ಎಂದರ್ಥ.) ಕಾರಣ ಅಂಥವರನ್ನು ಕುರಿತು ವರವನ್ನು ಕೇಳು ಮುಂತಾಗಿ ಹೇಳುವುದು ದಯಾಲುವಾದ ನಿನಗೆ ಉಚಿತವಲ್ಲ.

ಆದ್ದರಿಂದ ಯಥಾ=ಹೇಗೆ ಪಿತಾ=ತಂದೆಯು ಬಾಲಹಿತಂ=ಮಗನಿಗೆ ಹಿತವಾದುದನ್ನು ಸ್ವಯಂ=ತಾನಾಗಿಯೇ (ಮಗನು ವಿಜ್ಞಾಪಿಸದಿದ್ದರೂ) ಚರೇತ್=ಮಾಡುವನೋ ತಥಾ= ಹಾಗೆಯೇ ನಃ=ನಮ್ಮ ವಿಷಯದಲ್ಲಿ ಸಮೀಹಿತಂ=ಹಿತವನ್ನು ಮಾಡಲು ತ್ವಮೇವ=ನೀನೇ ಅರ್ಹಸಿ=ಯೋಗ್ಯನಾಗಿರುವಿ. ನಮಗೆ ಹಿತವಾದುದನ್ನು ಮಾಡು ಎಂದು ಭಾವ.

**ಶ್ರೀಭಗವಾನುವಾಚ -**

**ಸಾಧು ತೇಽವಸಿತಂ ರಾಜನ್ ಆಶಾಸ್ತೇ ನ ಯದಾಶಿಷಃ ।**
**ಸ್ವರ್ಗಾಪವರ್ಗನರಕಾನ್ ಸಮಂ ಪಶ್ಯತಿ ಮತ್ಪರಃ ॥೩೩॥**

ಆಶಿಷಃ=ಕಾಮನೆಗಳನ್ನು ನ ಆಶಾಸ್ತೇ ಇತಿ ಯತ್ ತತ್=ನೀನು ಅಪೇಕ್ಷಿಸುವದಿಲ್ಲವೋ ಆದ್ದರಿಂದ ತೇ ಅವಸಿತಂ=ನಿನ್ನಿಂದ ನಿಶ್ಚಿತವಾದುದು ಸಾಧು=ಒಳ್ಳೆಯದೇ. ಮತ್ಪರಃ=ನನ್ನ ಭಕ್ತರು ಸ್ವರ್ಗಾಪವರ್ಗನರಕಾನ್=ಸ್ವರ್ಗ, ಮೋಕ್ಷ, ನರಕಗಳನ್ನು ಸಮಂ ಪಶ್ಯಂತಿ=ಸಮವಾಗಿ ಕಾಣುವರು. ಅಂದರೆ ಭಕ್ತಿಯ ಫಲವಾಗಿ ಮೋಕ್ಷವನ್ನು ಕೊಡುವೆನೆಂದರೇ ಉತ್ತಮಾಧಿ ಕಾರಿಗಳು ಬೇಡವೆನ್ನುವರು. ಆದ್ದರಿಂದ ಸ್ವರ್ಗ-ನರಕಗಳಂತೆ ಹೇಯವೇ ಆಯಿತು ಅಪವರ್ಗ. ಈ ರೀತಿ ಸಮತ್ವ ತಿಳಿಯಬೇಕು. ಅವರಿಗೆ ಶ್ರೀಹರಿಯೇ ಪುರುಷಾರ್ಥ, ಮಿಕ್ಕಿದೆಲ್ಲ ಹೇಯವೆಂದು ಭಾವ. ॥೩೩॥

ನನ್ನ ಭಕ್ತನು ರೋಷವನ್ನು ಬಿಡುವುದೇ ನನ್ನ ಪ್ರೀತಿಗೆ ಕಾರಣವೆಂದು ಹೇಳುವನು-

**ಪ್ರೀತೋಽಹಂ ತೇ ಮಹಾರಾಜ ರೋಷಂ ದುಸ್ತ್ಯಜಮತ್ಯಜಃ ।**
**ಶ್ರದ್ಧಧಾನೋ ಮದಾದೇಶಂ ತನ್ಮಹ್ಯಂ ಪರಮಾರ್ಹಣಮ್ ॥೩೪॥**

ಹೇ ಮಹಾರಾಜ=ಎಲೋ ಪೃಥುವೇ ! ಮದಾದೇಶಂ=ನನ್ನ ಆಜ್ಞೆಯನ್ನು ಶ್ರದ್ಧಧಾನಃ=ಗೌರವಿಸಿ ದುಸ್ತ್ಯಜಂ=ಬಿಡಲಾಗದ ರೋಷಂ=ಕೋಪವನ್ನು ಅತ್ಯಜಃ=ಬಿಟ್ಟಿರುವಿ. ತತ್=ಅದು (ನನ್ನ ಆಜ್ಞೆಯನ್ನು ಪಾಲಿಸುವುದು) ಮಹ್ಯಂ=ನನಗೆ ಪರಮಾರ್ಹಣಂ=ಶ್ರೇಷ್ಠವಾದ ಪೂಜೆಯು. ಆ ಕಾರಣ ಅಹಂ=ನಾನು ತೇ=ನಿನಗೆ ಪ್ರೀತಃ=ಸಂತುಷ್ಟನಾಗಿರುವೆನು. ॥೩೪॥

**ಮೈತ್ರೇಯ ಉವಾಚ –**

**ಇತಿ ವೈನ್ಯಸ್ಯ ರಾಜರ್ಷೇಃ ಪ್ರತಿನಂದ್ಯಾರ್ಥವದ್ವಚಃ ।**
**ಪೂಜಿತೋಽನುಗೃಹೀತ್ವೈನಂ ಗಂತುಂ ಚಕ್ರೇಽಚ್ಯುತೋ ಮತಿಮ್ ॥೩೫॥**

ಇತಿ=ಈ ರೀತಿಯಾಗಿ ರಾಜರ್ಷೇಃ=ರಾಜರ್ಷಿಯಾದ ವೈನ್ಯಸ್ಯ=ಪೃಥುವಿನ ಅರ್ಥವದ್ವಚಃ=ಅರ್ಥಪೂರ್ಣವಾದ ಮಾತನ್ನು ಪ್ರತಿನಂದ್ಯ=ಶ್ಲಾಘಿಸಿ ಪೂಜಿತಃ=ರಾಜನಿಂದ ಪೂಜಿಸಲ್ಪಟ್ಟು ಏನಂ=ರಾಜನನ್ನು ಅನುಗೃಹೀತ್ವಾ=ಅನುಗ್ರಹ ಮಾಡಿ, ಅಚ್ಯುತಃ=ಶ್ರೀಹರಿಯು ಗಂತುಂ ಮತಿಂ ಚಕ್ರೇ=ಹೊರಡಲು ಮನಸ್ಸು ಮಾಡಿದನು. ॥೩೫॥

**ದೇವರ್ಷಿಪಿತೃಗಂಧರ್ವಸಿದ್ಧಚಾರಣಪನ್ನಗಾಃ ।**
**ಕಿನ್ನರಾಪ್ಸರಸೋಽಮರ್ತ್ಯಾಃ ಖಗಾ ಭೂತಾನ್ಯನೇಕಶಃ ॥೩೬॥**

ದೇವರ್ಷಿಪಿತೃಗಂಧರ್ವಸಿದ್ಧಚಾರಣಪನ್ನಗಾಃ=ದೇವತೆಗಳು, ಋಷಿಗಳು, ಪಿತೃಗಳು, ಗಂಧರ್ವರು, ಸಿದ್ಧರು, ಚಾರಣರು, ಪನ್ನಗಾಃ=ಹಾವುಗಳು ಕಿನ್ನರಾಪ್ಸರಸಃ=ಕಿನ್ನರರು, ಅಪ್ಸರೆಯರು ಅಮರ್ತ್ಯಾಃ=ಸುರರು ಖಗಾಃ=ಪಕ್ಷಿಗಳು ಅನೇಕಶಃ ಭೂತಾನಿ=ಎಲ್ಲ ಪ್ರಾಣಿಗಳು, (ಅನ್ವಯ ಮುಂದುವರೆಯುತ್ತದೆ)॥೩೬॥

**ಯಜ್ಞೇಶ್ವರಧಿಯಾ ರಾಜ್ಞಾ ವಾಗ್ವಿತ್ತಾಂಜಲಿಭಕ್ತಿತಃ ।**
**ಸಭಾಜಿತಾ ಯಯುಃ ಸರ್ವೇ ವೈಕುಂಠಾನುಗತಾಸ್ತತಃ ॥೩೭॥**

ರಾಜ್ಞಾ=ರಾಜನಿಂದ ಯಜ್ಞೇಶ್ವರಧಿಯಾ=ಎಲ್ಲರಲ್ಲಿ ಶ್ರೀಹರಿಯು ಸನ್ನಿಹಿತನಾಗಿರುವನು ಎಂಬ ತಿಳುವಳಿಕೆಯಿಂದ ವಾಗ್ವಿತ್ತಾಂಜಲಿಭಕ್ತಿತಃ=ಒಳ್ಳೆಯಮಾತು ಹಾಗೂ ದಕ್ಷಿಣೆಗಳಿಂದ ಕೈಜೋಡಿಸಿ ಭಕ್ತಿಯಿಂದ ಸಭಾಜಿತಾಃ=ಗೌರವಿಸಲ್ಪಟ್ಟು ಸರ್ವೇ=ಎಲ್ಲರೂ ವೈಕುಂಠಾನುಗತಾಃ=ಪರಮಾತ್ಮನನ್ನು ಅನುಸರಿಸಿ ತತಃ=ಅಲ್ಲಿಂದ ಯಯುಃ=ತೆರಳಿದರು.

**ಭಾಗವತ ತಾತ್ಪರ್ಯ -**

ಯಜ್ಞೇಶ್ವರಧಿಯಾ ಎಂಬುದಕ್ಕೆ ವಿವಕ್ಷಿತ ಅರ್ಥವನ್ನು ಪ್ರಮಾಣದಿಂದ ತಿಳಿಸುವರು -

**ಭೂತೇಷು ಹರಿರಿತ್ಯೇವ ಹರ್ಯರ್ಪಣಧಿಯಾ ತಥಾ ।**
**ಸರ್ವಭೂತೇಷು ಚ ಹರೇಃ ಪೂಜಾ ಕಾರ್ಯಾಽಽತ್ಮವೇದಿಭಿಃ ॥ ಇತಿ ಪಾದ್ಮೇ ॥**

ಎಲ್ಲ ಪ್ರಾಣಿಗಳಲ್ಲಿಯೂ ಶ್ರೀಹರಿಯು ನಿಯಾಮಕನಾಗಿ ಸನ್ನಿಹಿತನಾಗಿದ್ದಾನೆ ಎಂಬ ಬುದ್ಧಿಯಿಂದಲೂ, ನಾನು ಮಾಡಿದ ಸಕಲಕರ್ಮಗಳು ಶ್ರೀಹರಿಗೆ ಅರ್ಪಿತವಾಗಲಿ ಎಂಬ ಬುದ್ಧಿಯಿಂದಲೂ ಮತ್ತು ಪರಮಾತ್ಮನೇ ನನ್ನಲ್ಲಿದ್ದು ಎಲ್ಲ ಕಾರ್ಯಗಳನ್ನು ಮಾಡಿಸುತ್ತಾನೆ ಎಂಬ ಬುದ್ಧಿಯಿಂದಲೂ ಆತ್ಮಜ್ಞಾನಿಗಳು ಎಲ್ಲ ಪ್ರಾಣಿಗಳಲ್ಲಿಯೂ ಶ್ರೀಹರಿಯನ್ನು ಪೂಜಿಸಬೇಕು ಎಂದು ಪಾದ್ಮಪುರಾಣದಲ್ಲಿ ಹೇಳಿದೆ. ।।೩೭।।

ಹೊರಡಲು ಮನಸ್ಸು ಮಾಡಿದನಷ್ಟೇ. ಹೋಗಲಿಲ್ಲ ? ಎಂಬ ಶಂಕೆ ಬೇಡ ಎಂದು ಹೇಳುವರು -

**ಭಗವಾನಪಿ ರಾಜರ್ಷೇಃ ಸೋಪಾಧ್ಯಾಯಸ್ಯ ಪಶ್ಯತಃ ।**
**ಹರನ್ನಿವ ಮನೋಽಮುಷ್ಯ ಸ್ವಧಾಮ ಪ್ರತ್ಯಗಾತ್ಪ್ರಭುಃ ।।೩೮।।**

ಪ್ರಭುಃ=ಸಮರ್ಥನಾದ ಭಗವಾನ್ ಅಪಿ=ಶ್ರೀಹರಿಯಾದರೂ ಸೋಪಾಧ್ಯಾಯಸ್ಯ=ಉಪಾಧ್ಯಾಯರಿಂದ ಸಹಿತನಾದ ರಾಜರ್ಷೇಃ=ಪೃಥುರಾಜನು ಪಶ್ಯತಃ ಸತಃ=ನೋಡುತ್ತಿರುವಾಗಲೇ ಅಮುಷ್ಯ=ರಾಜನ ಮನಃ ಹರನ್ನಿವ=ಮನಸ್ಸನ್ನು ಅಪಹರಿಸುವವನಂತೆ ಸ್ವಧಾಮ=ತನ್ನ ಸ್ಥಾನಕ್ಕೆ ಪ್ರತ್ಯಗಾತ್=ಹಿಂದಿರುಗಿಹೋದನು. ।।೩೮।।

**ಅದೃಷ್ಟಾಯ ನಮಸ್ಕೃತ್ಯ ಸ್ವಸ್ಯ ಸಂದರ್ಶಿತಾತ್ಮನೇ ।**
**ವಾಸುದೇವಾಯ ದೇವಾನಾಂ ದೇವಾಯ ಸ್ವಪುರಂ ಯಯೌ ।।೩೯।।**

॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ ವಿಂಶೋಽಧ್ಯಾಯಃ ॥

ಇತ್ತ ಪೃಥುರಾಜನು, ಅದೃಷ್ಟಾಯ=(ಸ್ವಭಾವತಃ) ಕಣ್ಣಿಗೆ ಕಾಣದ, ಆದರೂ ಸ್ವಸ್ಯ=ತನಗೆ ಸಂದರ್ಶಿತಾತ್ಮನೇ=ತೋರಿಸಲ್ಪಟ್ಟ ತನ್ನ ಸ್ವರೂಪವುಳ್ಳ ದೇವಾನಾಂ ದೇವಾಯ=ದೇವತೆಗಳಿಗೂ ದೇವನಾದ, ವಾಸುದೇವಾಯ=ಶ್ರೀಹರಿಗೆ ನಮಸ್ಕೃತ್ಯ=ನಮಸ್ಕಾರ ಮಾಡಿ ಸ್ವಪುರಂ ಯಯೌ=ತನ್ನ ಪಟ್ಟಣಕ್ಕೆ ತೆರಳಿದನು. ।।೩೯।।

॥ ಇಲ್ಲಿಗೆ ಇಪ್ಪತ್ತನೇ ಅಧ್ಯಾಯವು ಮುಗಿಯಿತು ॥

# ಅಥ ಏಕವಿಂಶೋಽಧ್ಯಾಯಃ

ದೇವತೆಗಳನ್ನು ಬಿಟ್ಟು ಬ್ರಾಹ್ಮಣರು ಶ್ರೀಹರಿಯ ಸನ್ನಿಧಾನಪಾತ್ರರು ಎಂದು ಈ ಅಧ್ಯಾಯದಲ್ಲಿ ಪ್ರತಿಪಾದಿಸುವರು. ಅದರಲ್ಲಿ ಹಿಂದಿನ ಅಧ್ಯಾಯದ ಕೊನೆಗೆ ಪೃಥುರಾಜನು ತನ್ನ ಪುರಕ್ಕೆ ಹೋದನೆಂದು ಹೇಳಿದರಷ್ಟೆ. ಆ ಪುರವನ್ನು ಮೂರು ಶ್ಲೋಕಗಳಿಂದ ವರ್ಣಿಸುವರು -

**ಮೌಕ್ತಿಕೈಃ ಕುಸುಮಸ್ರಗ್ಭಿರ್ದುಕೂಲೈಃ ಸ್ವರ್ಣತೋರಣೈಃ ।**
**ಮಹಾಸುರಭಿಭಿರ್ಧೂಪೈರ್ಮಂಡಿತಂ ತತ್ರ ತತ್ರ ವೈ ॥೧॥**

ಮೌಕ್ತಿಕೈಃ=ಮುತ್ತುಗಳಿಂದಲೂ, ಕುಸುಮಸ್ರಗ್ಭಿಃ=ಹೂವಿನ ಮಾಲೆಗಳಿಂದಲೂ, ದುಕೂಲೈಃ=ರೇಷ್ಮೆಯ ವಸ್ತ್ರಗಳಿಂದಲೂ, ಸ್ವರ್ಣತೋರಣೈಃ=ಚಿನ್ನದ ತೋರಣಗಳಿಂದಲೂ, ಮಹಾಸುರಭಿಭಿಃ=ಭಾರೀ ಸುಗಂಧವುಳ್ಳ ಧೂಪೈಃ=ಧೂಪಗಳಿಂದಲೂ ತತ್ರ ತತ್ರ=ಅಲ್ಲಲ್ಲಿ ಮಂಡಿತಂ=ಅಲಂಕೃತವಾದ, (ಅನ್ವಯ ಮುಂದುವರೆಯುತ್ತದೆ)॥೧॥

**ಚಂದನಾಗುರುತೋಯಾರ್ದ್ರರಥ್ಯಾಚತ್ವರಮಾರ್ಗವತ್ ।**
**ಪುಷ್ಪಾಕ್ಷತಫಲೈಸ್ತೋಯೈರ್ಲಾಜೈರರ್ಚಿಭಿರರ್ಚಿತಮ್ ॥೨॥**

ಚಂದನಾಗುರುತೋಯಾರ್ದ್ರರಥ್ಯಾಚತ್ವರಮಾರ್ಗವತ್=ಗಂಧ ಹಾಗೂ ಅಗರುಗಳಿಂದ ಮಿಶ್ರವಾದ ನೀರಿನಿಂದ ತೋಯಿಸಿದ ರಾಜಮಾರ್ಗ, ಮನೆಯಂಗಳ, ಮತ್ತು ಇತರ ದಾರಿಗಳುಳ್ಳ ಪುಷ್ಪಾಕ್ಷತಫಲೈಃ=ಹೂಗಳು ಮಂತ್ರಾಕ್ಷತೆ ಹಣ್ಣುಗಳಿಂದಲೂ ತೋಯೈಃ= ಗೋಮಯಮಿಶ್ರಿತನೀರಿನಿಂದಲೂ (ವಿಜಯಧ್ವಜೀಯಪ್ರಕಾರ) ಅಥವಾ ಅರ್ಘ್ಯಆದ್ಯಜಂತ ಮಾಡಿ, ನೀರು ತುಂಬಿದ ಬಂಗಾರದ ಕಲಶಗಳಿಂದಲೂ (ದುರ್ಘಟಭಾವದೀಪಿಕಾಪ್ರಕಾರ) ಲಾಜೈಃ=ಅರಳುಗಳಿಂದಲೂ, ಅರ್ಚಿಭಿಃ=ದೀಪಜ್ವಾಲೆಗಳಿಂದಲೂ ಅರ್ಚಿತಂ=ಅಲಂಕೃತವಾದ (ಅನ್ವಯ ಮುಂದುವರೆಯುವುದು)॥೨॥

**ಸಂವೃತೈಃ ಕದಲೀಸ್ತಂಭೈಃ ಪೂಗಪೋತೈಃ ಪರಿಷ್ಕೃತಮ್ ।**
**ತರುಪಲ್ಲವಮಾಲಾಭಿಃ ಸರ್ವತಃ ಸಮಲಂಕೃತಮ್ ॥೩॥**

ಕದಲೀಸ್ತಂಭೈಃ=ಬಾಳೆಯ ಕಂಬಗಳಿಂದ ಸಂವೃತೈಃ=ಯುಕ್ತವಾದ ಪೂಗಪೋತೈಃ= ಅಡಿಕೆಯ ಗಿಡಗಳಿಂದ ಅಥವಾ ಅಡಿಕೆಹೂಗಳಿಂದ ಪರಿಷ್ಕೃತಂ=ಅಲಂಕೃತವಾದ, ತರುಪಲ್ಲವಮಾಲಾಭಿಃ=ಗಿಡಗಳಿಂದ ಚಿಗುರುಮಾಲೆಗಳಿಂದ ಸರ್ವತಃ ಸಮಲಂಕೃತಂ= ಸುತ್ತಲೂ ಅಲಂಕೃತವಾದ ಸ್ವಪುರಂ=ತನ್ನ ಪಟ್ಟಣವನ್ನು ಕುರಿತು ಯಯೌ=ಹೋದನು॥೩॥

**ಪ್ರಜಾಸ್ತಂ ದೀಪಬಲಿಭಿಃ ಸಂಭೃತಾಶೇಷಮಂಗಲೈಃ ।**
**ಅಭೀಯುರ್ಮೃಷ್ಟಕನ್ಯಾಶ್ಚ ಮೃಷ್ಟಕುಂಡಲಮಂಡಿತಾಃ ॥೪॥**

ಪ್ರಜಾಃ=ಪ್ರಜೆಗಳು ದೀಪಬಲಿಭಿಃ=ದೀಪಗಳು ಪೂಜಾಸಾಮಗ್ರಿಗಳಿಂದಲೂ ಸಂಭೃತಾಶೇಷಮಂಗಲೈಃ=ಸಂಪಾದಿಸಲ್ಪಟ್ಟ ಮಂಗಲದ್ರವ್ಯಗಳಿಂದಲೂ ಕೂಡಿಕೊಂಡು ಅಭೀಯುಃ=ಎದುರುಗೊಂಡರು. ಚ=ಮತ್ತು ಮೃಷ್ಟಕುಂಡಲಮಂಡಿತಾಃ=ಶುದ್ಧವಾದ ಕುಂಡಲಗಳಿಂದ ಅಲಂಕೃತರಾದ ಮೃಷ್ಟಕನ್ಯಾಃ=ಶುದ್ಧರಾದ ಕನ್ಯೆಯರೂ ಸಹ ಅಭೀಯುಃ=ಎದುರಾಗಿ ಹೋದರು. ॥೪॥

**ಶಂಖದುಂದುಭಿಘೋಷೇಣ ಬ್ರಹ್ಮಘೋಷೇಣ ಚರ್ತ್ವಿಜಾಮ್ ।**
**ವಿವೇಶ ಭವನಂ ವೀರಃ ಸ್ತೂಯಮಾನೋ ಗತಸ್ಮಯಃ ॥೫॥**

ವೀರಃ=ಪೃಥುರಾಜನು ಶಂಖದುಂದುಭಿಘೋಷೇಣ=ಶಂಖ, ನಗಾರಿಗಳ ಧ್ವನಿಯಿಂದಲೂ ಚ=ಮತ್ತು ಋತ್ವಿಜಾಂ=ಬ್ರಾಹ್ಮಣರ ಬ್ರಹ್ಮಘೋಷೇಣ=ವೇದಘೋಷದಿಂದಲೂ ಸಹಿತನಾಗಿ ಸ್ತೂಯಮಾನಃ=ಸೂತಮಾಗಧರಿಂದ ಸ್ತೋತ್ರ ಮಾಡಿಸಿಕೊಳ್ಳುತ್ತ ಗತಸ್ಮಯಃ=ಗರ್ವರಹಿತನಾಗಿ ಭವನಂ=ಅರಮನೆಯನ್ನು ವಿವೇಶ=ಪ್ರವೇಶ ಮಾಡಿದನು. ॥೫॥

**ಪೂಜಿತಃ ಪೂಜಯಾಮಾಸ ತತ್ರ ತತ್ರ ಮಹಾಯಶಾಃ ।**
**ಪೌರಾನ್ ಜಾನಪದಾಂಸ್ತಾಂಸ್ತಾನ್ ಪ್ರೀತಃ ಪ್ರಿಯವರಪ್ರದಃ ॥೬॥**

ಮಹಾಯಶಾಃ=ಬಹಳ ಕೀರ್ತಿಶಾಲಿಯಾದ ಪೃಥುವು ತತ್ರ ತತ್ರ=ಪಟ್ಟಣಗಳಲ್ಲಿಯೂ, ದೇಶಗಳಲ್ಲಿಯೂ ಪೂಜಿತಃ=ಗೌರವಿಸಲ್ಪಟ್ಟು ಪ್ರೀತಃ=ಸಂತುಷ್ಟನಾಗಿ ಪ್ರಿಯವರಪ್ರದಃ= ಇಷ್ಟವಾದ ವರಗಳನ್ನು ಕೊಡುವ ರಾಜನು ತಾನ್ ತಾನ್=ಆ ಆ ಪೌರಾನ್=ಪಟ್ಟಣಿಗರನ್ನು ಜಾನಪದಾನ್=ದೇಶದ ಜನರನ್ನೂ ಪೂಜಯಾಮಾಸ=ಯಥಾಯೋಗ್ಯವಾಗಿ ಗೌರವಿಸಿದನು. ॥೬॥

**ಸ ಏವಮಾದೀನ್ಯನವದ್ಯಚೇಷ್ಟಿತಃ**
**ಕರ್ಮಾಣಿ ಭೂಯಾಂಸಿ ಮಹನ್ಮಹತ್ತಮಃ ।**
**ಕುರ್ವನ್ ಶಶಾಸಾವನಿಮಂಡಲಂ ಯಶಃ**
**ಸ್ಫೀತಂ ನಿಧಾಯಾರುರುಹೇ ಪರಂ ಪದಮ್ ॥೭॥**

ಮಹನ್ಮಹತ್ತಮಃ=ಉತ್ತಮರಲ್ಲಿ ಉತ್ತಮನಾದ ಅನವದ್ಯಚೇಷ್ಟಿತಃ=ದೋಷರಹಿತವಾದ ವ್ಯಾಪಾರವುಳ್ಳ ಸಃ=ಪೃಥುರಾಜನು ಏವಮಾದೀನಿ=ಇವೇ ಮೊದಲಾದ ಭೂಯಾಂಸಿ= ಮಹತ್ತರವಾದ ಕರ್ಮಾಣಿ=ಕಾರ್ಯಗಳನ್ನು ಕುರ್ವನ್=ಮಾಡುವವನಾಗಿ ಅವನಿಮಂಡಲಂ =ಭೂಮಂಡಲವನ್ನು ಶಶಾಸ=ರಕ್ಷಿಸಿದನು. ಸ್ಫೀತಂ ಯಶಃ=ಅಭಿವೃದ್ಧವಾದ ಕೀರ್ತಿಯನ್ನು ನಿಧಾಯ=ಜಗತ್ತಿನಲ್ಲಿ ಇರಿಸಿ ಪರಂ ಪದಂ=ಪರಮಾತ್ಮನ ಸ್ಥಾನವನ್ನು ಆರುರುಹೇ=ಏರಿದನು. ಮುಕ್ತಿಯನ್ನು ಪಡೆದನು ಎಂದರ್ಥ. ॥೭॥

**ಸೂತ ಉವಾಚ**

**ಶ್ರುತ್ವಾಽಽದಿರಾಜಸ್ಯ ಯಶೋ ವಿಜೃಂಭಿತಂ**
**ಗುಣೈರಶೇಷೈರ್ಗುಣವತ್ಸಭಾಜಿತಮ್ ।**
**ಕ್ಷತ್ತಾ ಮಹಾಭಾಗವತಃ ಸದಸ್ಪತೇ**
**ಕೌಶಾರವಿಂ ಪ್ರಾಹ ಗುರುಂ ಸಮರ್ಚಯನ್ ॥೮॥**

ಹೇ ಸದಸಸ್ಪತೇ=ಎಲೋ ರಾಜನೇ ! ಆದಿರಾಜಸ್ಯ=ಪೃಥುವಿನ ಅಶೇಷೈಃ ಗುಣೈಃ ವಿಜೃಂಭಿತಂ=ಎಲ್ಲ ಗುಣಗಳಿಂದ ಉತ್ಕೃಷ್ಟವಾದ ಗುಣವತ್ಸಭಾಜಿತಂ=ಗುಣವಂತರಾದ ಜನರಿಂದ ಸತ್ಕೃತವಾದ (ಅಂದರೆ ಸ್ತುತಿಸಲ್ಪಡುವ) ಯಶಃ=ಕೀರ್ತಿಯನ್ನು ಶ್ರುತ್ವಾ=ಕೇಳಿ ಮಹಾಭಾಗವತಃ=ಭಗವದ್ಭಕ್ತನಾದ ಕ್ಷತ್ತಾ=ವಿದುರನು ಗುರುಂ=ಗುರುಗಳಾದ ಕೌಶಾರವಿಂ= ಮೈತ್ರೇಯರನ್ನು ಸಮರ್ಚಯನ್=ಪೂಜಿಸುವವನಾಗಿ ಪ್ರಾಹ=ಹೇಳಿದನು. ॥೮॥

**ವಿದುರ ಉವಾಚ**

**ಸೋಽಭಿಷಿಕ್ತಃ ಪೃಥುರ್ವಿಪ್ರೈರ್ಲಬ್ಧಾಶೇಷಸುರಾರ್ಹಣಃ ।**
**ಬಿಭ್ರಚ್ಚ ವೈಷ್ಣವಂ ತೇಜೋ ಬಾಹ್ವೋರ್ಯಾಭ್ಯಾಂ ದುದೋಹ ಗಾಮ್ ॥೯॥**

ಯಾಭ್ಯಾಂ=ಯಾವ ಬಾಹುಗಳಿಂದ ಗಾಂ ದುದೋಹ=ಗೋರೂಪಳಾದ ಪೃಥ್ವಿಯನ್ನು ಹಾಲುಕರೆದನೋ ತಯೋಃ ಬಾಹ್ವೋಃ=ಆ ಬಾಹುಗಳಲ್ಲಿ ವೈಷ್ಣವಂ ತೇಜಃ=ವಿಷ್ಣುವಿನ ಸಾಮರ್ಥ್ಯವನ್ನು ಬಿಭ್ರತ್ ಧರಿಸಿರುವ, ಲಬ್ಧಾಶೇಷಸುರಾರ್ಹಣಃ=ಎಲ್ಲ ದೇವತೆಗಳಿಂದ ಮಾಡಲ್ಪಟ್ಟ ಗೌರವವನ್ನು ಪಡೆದ, ಯಃ ಪೃಥುಃ=ಯಾವ ಪೃಥುರಾಜನಿರುವನೋ

ಸಃ=ಅವನು ವಿಪ್ರೈಃ=ಬ್ರಾಹ್ಮಣರಿಂದ ಅಭಿಷಿಕ್ತಃ=ಪಟ್ಟಾಭೀಷೇಕ ಮಾಡಿಸಿಕೊಂಡವನಾಗಿ, ಮಾಡಿದ ಶುದ್ಧವಾದ ಕಾರ್ಯಗಳನ್ನು ಹೇಳು ಎಂದು ಅನ್ವಯ. ||೯||

**ಕೋಽನ್ವಸ್ಯ ಕೀರ್ತಿಂ ನ ಶೃಣೋತ್ಯಭಿಜ್ಞೋ**
**ಯದ್ವಿಕ್ರಮೋಚ್ಛಿಷ್ಟಮಶೇಷಭೂಪಾಃ ।**
**ಲೋಕಾಃ ಸಪಾಲಾ ಉಪಜೀವಂತಿ ಕಾಮ-**
**ಮದ್ಯಾಪಿ ತನ್ಮೇ ವದ ಕರ್ಮ ಶುದ್ಧಮ್ ||೧೦||**

ಯದ್ವಿಕ್ರಮೋಚ್ಛಿಷ್ಟಂ=ಯಾವ ಪೃಥುವಿನ ಪೃಥವಿಯನ್ನು ದೋಹನಮಾಡುವ ವಿಷಯದಲ್ಲಿ ಮಾಡಿದ ಪರಾಕ್ರಮದ ಉಚ್ಛಿಷ್ಟದಂತಿರುವ ಕಾಮಂ=ತಮ್ಮ ಅಭೀಷ್ಟಗಳನ್ನು ಸಪಾಲಾಃ=ಲೋಕಪಾಲಕರಿಂದ ಸಹಿತವಾದ ಲೋಕಾಃ=ಎಲ್ಲ ಜನರು ಅಶೇಷಭೂಪಾಃ=ಎಲ್ಲ ರಾಜರುಗಳು ಅದ್ಯಾಪಿ=ಈಗಲೂ ಉಪಜೀವಂತಿ=ಅನುಭವಿಸುವರೋ, ಅಸ್ಯ=ಇಂಥವನ ಕೀರ್ತಿಂ=ಯಶಸ್ಸನ್ನು ಕಃ ಅಭಿಜ್ಞಃ ನ ಶೃಣೋತಿ=ಯಾವ ಬುದ್ಧಿವಂತನು ಕೇಳಲಾರನು ? ಎಲ್ಲರೂ ಕೇಳುವವರೇ. ತತ್=ಆದ್ದರಿಂದ ಶುದ್ಧಂ ಕರ್ಮ=ಅವನು ಮಾಡಿದ ಪರಿಶುದ್ಧವಾದ ಕಾರ್ಯಗಳನ್ನು ಮೇ=ನನಗೆ ವದ=ಹೇಳಿರಿ.

**ಭಾಗವತ ತಾತ್ಪರ್ಯ -**

ಇಲ್ಲಿ ''ಲೋಕಪಾಲಕರೂ ಇವನನ್ನು ಉಪಜೀವಿಸುವರು'' ಎಂಬುದರ ಯೋಗ್ಯವಾದ ತಾತ್ಪರ್ಯವನ್ನು ಪ್ರಮಾಣದಿಂದಲೇ ತಿಳಿಸುವರು -

**ದೇವೇಭ್ಯ ಋಷಯೋ ಭೂಪಾಶ್ಚೋಚ್ಯಂತೇ ಶಕ್ತಿಮತ್ತಯಾ ।**
**ಕ್ವಚಿತ್ಕ್ವಚಿನ್ಮೋಹನಾರ್ಥಂ ಕಾದಾಚಿತ್ಕಾಚ್ಚ ಹೇತುತಃ || ಇತಿ ನಾರದೀಯೇ ||**

ಕೆಲವು ಸ್ಥಳದಲ್ಲಿ ಅಸುರಜನಮೋಹನಕ್ಕಾಗಿಯೂ, ಶ್ರೀಹರಿಯ ತಾತ್ಕಾಲಿಕ ಆವೇಶವಿರುವುದರಿಂದಲೂ, ಋಷಿಗಳು ರಾಜರುಗಳು ದೇವತೆಗಳಿಗಿಂತ ಹೆಚ್ಚು ಸಾಮರ್ಥ್ಯವುಳ್ಳವರು ಎಂದು ಹೇಳುತ್ತಾರೆ ಎಂದು ನಾರದೀಯಪುರಾಣದಲ್ಲಿ ಹೇಳಿದೆ.

ಕಾರಣ ಇಲ್ಲಿ ಅಸುರಜನಮೋಹನಕ್ಕಾಗಿ ಶ್ರೀಹರಿಯ ಆವೇಶನಿಮಿತ್ತದಿಂದಲೂ ಲೋಕಪಾಲಕರಾದ ದೇವತೆಗಳು ಪೃಥುವನ್ನು ಉಪಜೀವಿಸುವರು ಎಂದು ಹೇಳಿರುವರಾದ್ದರಿಂದ ಯಾವ ವಿರೋಧವಿಲ್ಲ. ||೧೦||

**ಮೈತ್ರೇಯ ಉವಾಚ -**

**ಗಂಗಾಯಮುನಯೋರ್ನದ್ಯೋರಂತರಾ ಕ್ಷೇತ್ರಮಾವಸನ್ ।**
**ಆರಬ್ಧಾನೇವ ಬುಭುಜೇ ಭೋಗಾನ್ ಪುಣ್ಯಜಿಹಾಸಯಾ ||೧೧||**

ಗಂಗಾಯಮನಯೋಃ ನದ್ಯೋಃ ಅಂತರಾ=ಗಂಗಾ, ಯಮುನಾ ನದಿಗಳ ಮಧ್ಯದಲ್ಲಿ ಇರುವ ಕ್ಷೇತ್ರಂ ಆವಸನ್=ಪವಿತ್ರವಾದ ಸ್ಥಳದಲ್ಲಿ ವಾಸಿಸುವವನಾಗಿ ಪುಣ್ಯಜಿಹಾಸಯಾ=ಪುಣ್ಯಗಳನ್ನು ಕಳೆದುಕೊಳ್ಳುವ ಇಚ್ಛೆಯಿಂದ (ಹೊರತು ಸುಖಪಡುವುದಕ್ಕಾಗಿ ಅಲ್ಲ) ಆರಬ್ಧಾನೇವ=ಪ್ರಾರಬ್ಧಕರ್ಮದಿಂದ ಪ್ರಾಪ್ತವಾದ ಭೋಗಾನ್=ವಿಷಯಗಳನ್ನು ಬುಭುಜೇ=ಅನುಭವಿಸಿದನು. ॥೧೧॥

**ಸರ್ವತ್ರಾಸ್ಖಲಿತಾದೇಶಃ ಸಪ್ತದ್ವೀಪೈಕದಂಡಧೃಕ್ ।**
**ಅನ್ಯತ್ರ ಬ್ರಾಹ್ಮಣಕುಲಾದನ್ಯತ್ರಾಚ್ಯುತಗೋತ್ರತಃ ॥೧೨॥**

ಅಚ್ಯುತಗೋತ್ರತಃ ಅನ್ಯತ್ರ=ಭಗವಂತನ ನಾಮವನ್ನು ಜಪ ಮಾಡುವ ವೈಷ್ಣವರನ್ನು ಬಿಟ್ಟು ಬ್ರಾಹ್ಮಣಕುಲಾದನ್ಯತ್ರ=ಬ್ರಾಹ್ಮಣರ ಕುಲವನ್ನು ಹೊರತುಪಡಿಸಿ ಸಪ್ತದ್ವೀಪೈಕದಂಡಧೃಕ್=ಏಳುದ್ವೀಪಗಳಿಗೆ ಒಬ್ಬನೇ ನಿಯಾಮಕನಾಗಿ ಸರ್ವತ್ರ=ಎಲ್ಲೆಡೆಗೆ ಅಸ್ಖಲಿತಾದೇಶಃ=ತಡೆಯಿಲ್ಲದ ಆಜ್ಞೆವುಳ್ಳವನಾಗಿ ಇದ್ದನು. ॥೧೨॥

**ಏಕದಾಽಸೀನ್ಮಹಾಸತ್ರದೀಕ್ಷಾ ತತ್ರ ದಿವೌಕಸಾಮ್ ।**
**ಸಮಾಜೋ ಬ್ರಹ್ಮರ್ಷೀಣಾಂ ಚ ದೇವರ್ಷೀಣಾಂ ಚ ಸತ್ತಮ ॥೧೩॥**

ಸತ್ತಮ=ವಿದುರನೇ ! ಏಕದಾ=ಒಂದುಸಲ ಮಹಾಸತ್ರದೀಕ್ಷಾ ಆಸೀತ್=ದೊಡ್ಡ ಯಜ್ಞದೀಕ್ಷೆಯನ್ನು ಸ್ವೀಕರಿಸಿದ್ದನು. ತತ್ರ=(ಆಗ) ಅಲ್ಲಿ ದಿವೌಕಸಾಂ=ದೇವತೆಗಳ, ಬ್ರಹ್ಮರ್ಷೀಣಾಂ=ಬ್ರಹ್ಮರ್ಷಿಗಳ, ಚ=ಮತ್ತು ದೇವರ್ಷೀಣಾಂ=ದೇವರ್ಷಿಗಳ ಸಮಾಜಃ ಆಸೀತ್=ಮೇಲನವಾಗಿತ್ತು. (ಎಲ್ಲರೂ ಸೇರಿದ್ದರು ಎಂದು ಭಾವ.)॥೧೩॥

**ತಸ್ಮಿನ್ನರ್ಹತ್ತು ಸರ್ವೇಷು ಸ್ವರ್ಚಿತೇಷು ಯಥಾರ್ಹತಃ ।**
**ಉತ್ಥಿತಃ ಸ ಸದೋಮಧ್ಯೇ ತಾರಾಣಾಮುಡುರಾಡಿವ ॥೧೪॥**

ತಸ್ಮಿನ್=ಆ ಸಮಾಜದಲ್ಲಿ ಅರ್ಹತ್ತು ಸರ್ವೇಷು=ಪೂಜನೀಯರಾದವರು ಎಲ್ಲರೂ ಯಥಾರ್ಹತಃ=ಯೋಗ್ಯತೆಗನುಗುಣವಾಗಿ ಸ್ವರ್ಚಿತೇಷು=ಚೆನ್ನಾಗಿ ಪೂಜಿಸಲ್ಪಡುತ್ತಿರಲು ಸಃ=ಪೃಥುರಾಜನು ಸದೋಮಧ್ಯೇ=ಸಭೆಯ ಮಧ್ಯದಲ್ಲಿ, ತಾರಾಣಾಂ ಮಧ್ಯೇ ಉಡುರಾಟ್ ಇವ=ನಕ್ಷತ್ರಗಳ ಮಧ್ಯದಲ್ಲಿ ಚಂದ್ರನಂತೆ ಉತ್ಥಿತಃ ಸನ್=ಎದ್ದವನಾಗಿ,

೧೯ನೇ ಶ್ಲೋಕದಲ್ಲಿಯ 'ಸಮಂತತ ಉಪವಿಷ್ಟಾನ್ ಐಕ್ಷತ' ಎನ್ನುವಲ್ಲಿ ಅನ್ವಯ. ಸುತ್ತಲೂ ಕುಳಿತವರನ್ನು ನೋಡಿದನು ಎಂದರ್ಥ.॥೧೪॥

ಪೃಥುವಿನ ಲಕ್ಷಣ ಹೇಳುವರು -

**ಪ್ರಾಂಶುಃ ಪೀನಾಯತಭುಜೋ ಗೌರಃ ಕಂಜಾರುಣೇಕ್ಷಣಃ ।**
**ಸುನಾಸಃ ಸುಮುಖಃ ಸೌಮ್ಯಃ ಪೀನಾಂಸಃ ಸುದ್ವಿಜಸ್ಮಿತಃ ॥೧೫॥**

ಪ್ರಾಂಶುಃ=ಎತ್ತರವಾಗಿರುವ, ಪೀನಾಯತಭುಜಃ=ಪುಷ್ಟವಾದ ಮತ್ತು ವಿಶಾಲವಾದ ಭುಜಗಳುಳ್ಳ, ಗೌರಃ=ನಿರ್ಮಲನಾದ ಅಥವಾ ಕೆಂಪಾದ ಕಂಜಾರುಣೇಕ್ಷಣಃ=ಕಮಲದಂತೆ ಕೆಂಪಾದ ಕಣ್ಣುಗಳುಳ್ಳ, ಸುನಾಸಃ=ಉದ್ದಾದ ಮೂಗುಳ್ಳ, ಸುಮುಖಃ=ಸುಂದರವಾದ ಮುಖವುಳ್ಳ, ಸೌಮ್ಯಃ=ಸುಂದರನಾದ ಅಥವಾ ಬ್ರಾಹ್ಮಣಪ್ರಿಯನಾದ ಅಥವಾ ಸೋಮಪಾನಾರ್ಹನಾದ, ಪೀನಾಂಸಃ=ಪುಷ್ಟವಾದ ಹೆಗಲುಗಳುಳ್ಳ, ಸುದ್ವಿಜಸ್ಮಿತಃ=ಒಳ್ಳೆಯ ಹಲ್ಲುಗಳು ಮತ್ತು ಮಂದಹಾಸವುಳ್ಳ॥೧೫॥

**ವ್ಯೂಢವಕ್ಷಾ ಬೃಹಚ್ಛ್ರೋಣಿರ್ವಲೀವಲ್ಗುತರೋದರಃ ।**
**ಆವರ್ತನಾಭಿರೋಜಸ್ವೀ ಕಾಂಚನೋರುರುದಗ್ರವಾಕ್ ॥೧೬॥**

ವ್ಯೂಢವಕ್ಷಾಃ=ವಿಶಾಲವಾದ (ಉನ್ನತವಾದ) ವಕ್ಷಸ್ಥಳವುಳ್ಳ, ಬೃಹಚ್ಛ್ರೋಣಿಃ= ದೊಡ್ಡದಾದ ನಿತಂಬಗಳುಳ್ಳ, ವಲೀವಲ್ಗುತರೋದರಃ=ರೇಖೆಗಳಿಂದ ಅತ್ಯಂತ ಸುಂದರವಾದ ಹೊಟ್ಟೆಯುಳ್ಳ, ಆವರ್ತನಾಭಿಃ=ಸುಳಿಯಂತೆ ತಗ್ಗಾದ ಹೊಕ್ಕಳುಳ್ಳ, ಓಜಸ್ವೀ= ಅವಷ್ಟಂಭಶಕ್ತಿಯುಳ್ಳ, ಕಾಂಚನೋರುಃ=ಚಿನ್ನದಂತೆ ಹೊಳೆಯುವ ತೊಡೆಗಳುಳ್ಳ, ಉದಗ್ರವಾಕ್=ಉನ್ನತವಾದ ಮಾತುಗಳುಳ್ಳ॥೧೬॥

**ಸೂಕ್ಷ್ಮವಕ್ರಾಸಿತಸ್ನಿಗ್ಧಮೂರ್ಧಜಃ ಕಂಬುಕಂಧರಃ ।**
**ಮಹಾಧನೇ ದುಕೂಲಾಗ್ರ್ಯೇ ಪರಿಧಾಯೋಪಧಾಯ ಚ ॥೧೭॥**

ಸೂಕ್ಷ್ಮವಕ್ರಾಸಿತಸ್ನಿಗ್ಧಮೂರ್ಧಜಃ=ಸೂಕ್ಷ್ಮವಾದ ವಕ್ರವಾದ (ಗುಂಗುರು) ಕೆಂಪಾದ ಮೃದುವಾದ ಕೂದಲುಗಳುಳ್ಳ, ಕಂಬುಕಂಧರಃ=ಶಂಖದಂತೆ ತ್ರಿವಳಿಯುಳ್ಳ (ಮೂರುರೇಖೆಗಳುಳ್ಳ) ಕುತ್ತಿಗೆಯುಳ್ಳವನಾದ, ಮಹಾಧನೇ=ಬಹಳ ಬೆಲೆಬಾಳುವ ದುಕೂಲಾಗ್ರ್ಯೇ=ರೇಷ್ಮೆವಸ್ತ್ರಗಳನ್ನು ಪರಿಧಾಯ ಉಪಧಾಯ ಚ=ಉಟ್ಟುಕೊಂಡು ಹಾಗೂ ಹೊದ್ದುಕೊಂಡುವನಾಗಿ,॥೧೭॥

**ವ್ಯಂಜಿತಾಶೇಷಗಾತ್ರಶ್ರೀರ್ನಿಯಮೇ ನ್ಯಸ್ತಭೂಷಣಃ ।**
**ಕೃಷ್ಣಾಜಿನಧರಃ ಶ್ರೀಮಾನ್ ಕುಶಪಾಣಿಃ ಕೃತೋಚಿತಃ ॥೧೮॥**

ನಿಯಮೇ=ಯಜ್ಞದ ನಿಯಮಕ್ಕಾಗಿ ನ್ಯಸ್ತಭೂಷಣಃ=ಆಭರಣಗಳನ್ನು ತ್ಯಜಿಸಿದ, ಆದ್ದರಿಂದಲೇ ಅವುಗಳಿಂದ ಮುಚ್ಚದಿರುವುದರಿಂದ ವ್ಯಂಜಿತಾಶೇಷಗಾತ್ರಶ್ರೀಃ=ವ್ಯಕ್ತವಾದ ಎಲ್ಲ ಅವಯವಗಳ ಸ್ವಾಭಾವಿಕ ಶೋಭೆಯುಳ್ಳ ಕೃಷ್ಣಾಜಿನಧರಃ=ಕೃಷ್ಣಾಜಿನವನ್ನು ಧಾರಣ ಮಾಡಿದ, ಕುಶಪಾಣಿಃ=ಪವಿತ್ರವನ್ನು ಧರಿಸಿದ, ಕೃತೋಚಿತಃ=ಮಾಡಬೇಕಾದ ಕರ್ಮಗಳನ್ನು ಮಾಡಿದ, ಶ್ರೀಮಾನ್=ಕಾಂತಿಯುತನಾದ ಪೃಥುವು.॥೧೮॥

**ಶಿಶಿರಸ್ನಿಗ್ಧತಾರಾಕ್ಷಃ ತಾನೈಕ್ಷತ ಸಮಂತತಃ ।**
**ಊಚಿವಾನಿದಮುರ್ವೀಶಃ ಸದಸ್ಯಾನ್ ಹರ್ಷಯನ್ನಿವ ।**
**ಚಾರು ಚಿತ್ರಪದಂ ಶ್ಲಕ್ಷ್ಣಂ ಹೃದ್ಯಂ ಗೂಢಮವಿಕ್ಲವಮ್ ॥೧೯॥**

ಶಿಶಿರಸ್ನಿಗ್ಧತಾರಾಕ್ಷಃ=ಸಂತಾಪವನ್ನು ಕಳೆಯುವ ಪ್ರಕಾಶಮಾನವಾದ ಕಣ್ಣುಗುಡ್ಡೆಗಳಿಂದ ಸಹಿತವಾದ ಕಣ್ಣುಗಳುಳ್ಳ ಉರ್ವೀಶಃ=ಪೃಥುರಾಜನು ಸಮಂತತಃ=ನಾಲ್ಕುದಿಕ್ಕಿನಲ್ಲಿರುವ ಜನರನ್ನು ಐಕ್ಷತ=ನೋಡಿದನು. ತಾನ್ ಸದಸ್ಯಾನ್=ಆ ಸಭಿಕರನ್ನು ಹರ್ಷಯನ್ ಇವ=ಸಂತೋಷಪಡಿಸುವವನಂತೆ ಚಾರು=ಸುಂದರವಾದ, ಚಿತ್ರಪದಂ=ಅದ್ಭುತವಾದ ಶಬ್ದಗಳುಳ್ಳ ಶ್ಲಕ್ಷ್ಣಂ=ಮಧುರವಾದ, ಹೃದ್ಯಂ=ಮನೋಹರವಾದ, ಗೂಢಂ=ಗಂಭೀರವಾದ, ಅವಿಕ್ಲವಂ=ಅಸ್ಖಲಿತವಾದ, ಇದಂ(ವಚನಂ)=ಈ ಮಾತನ್ನು ಊಚಿವಾನ್=ಆಡಿದನು.

**ಪೃಥುರುವಾಚ -**

**ಸಭ್ಯಾಃ ಶೃಣುತ ಭದ್ರಂ ವಃ ಸಾಧವೋ ಯ ಇಹಾಗತಾಃ ।**
**ಸತ್ಸು ಜಿಜ್ಞಾಸುಭಿರ್ಧರ್ಮಮಾವೇದ್ಯಂ ಸ್ವಮನೀಷಿತಮ್ ॥೨೦॥**

ಸಭ್ಯಾಃ=ಸಭಿಕರೇ ! ಶೃಣುತ=ಕೇಳಿರಿ. ವಃ ಭದ್ರಂ ಅಸ್ತು=ನಿಮಗೆ ಕಲ್ಯಾಣವಾಗಲಿ. ಯೇ ಸಾಧವಃ ಇಹ ಆಗತಾಃ=ಯಾವ ಸಜ್ಜನರು ಇಲ್ಲಿ ಬಂದಿರುವರೋ ತೇಷು ಸತ್ಸು=ಆ ಸಜ್ಜನರಲ್ಲಿ ಜಿಜ್ಞಾಸುಭಿಃ=ತಿಳಿಯಲಿಚ್ಛೆಯುಳ್ಳವರಿಂದ ಸ್ವಮನೀಷಿತಂ ಧರ್ಮಂ=ತನ್ನ ಮನಸ್ಸಿನಲ್ಲಿ ತಿಳಿಯಲಿಚ್ಚಿಸಿದ ಧರ್ಮವು ಆವೇದ್ಯಂ=ನಿವೇದಿಸಲ್ಪಡಬೇಕು. (ಪ್ರಶ್ನಿಸಬೇಕೆಂದು ಭಾವ.)

ನಾನು ಮುಂದೆ ಆಡುವ ಮಾತುಗಳಿಂದ ಧರ್ಮಜಿಜ್ಞಾಸೆ ಉಂಟುಮಾಡುತ್ತಿದ್ದೇನೆಯೇ ಹೊರತು ನಿಮ್ಮನ್ನು ಕುರಿತು ಧರ್ಮಬೋಧನ ಮಾಡುವುದಲ್ಲ ಎಂದು ಭಾವ॥೨೦॥

ತನ್ನ ಮನಸ್ಸಿನಲ್ಲಿರುವುದನ್ನು ಹೇಳುವನು -

**ಅಹಂ ದಂಡಧರೋ ಧಾತ್ರಾ ಪ್ರಜಾನಾಮಿಹ ಯೋಜಿತಃ ।**
**ರಕ್ಷಿತಾ ವೃತ್ತಿದಸ್ತೇಷು ಸೇತುಷು ಸ್ಥಾಪಿತಾ ಪೃಥಕ್ ॥೨೧॥**

ಅಹಂ=ನಾನು ಪ್ರಜಾನಾಂ=ಪ್ರಜೆಗಳಿಗೆ ದಂಡಧರಃ=ಯೋಗ್ಯಶಿಕ್ಷೆಗಳನ್ನು ಕೊಡುವುದಕ್ಕಾಗಿ ಧಾತ್ರಾ=ಶ್ರೀಹರಿಯಿಂದ ಯೋಜಿತಃ=ನಿಯೋಜಿಸಲ್ಪಟ್ಟಿರುವೆನು. ಆ ಕಾರಣ ರಕ್ಷಿತಾ=ರಕ್ಷಕನು, ವೃತ್ತಿದಃ=ಜೀವನೋಪಾಯ ಕೊಡುವವನು, ತೇಷು ಪೃಥಕ್ ಸೇತುಷು ಸ್ಥಾಪಿತಾ=ಆ ಧರ್ಮಮರ್ಯಾದೆಗಳಲ್ಲಿರಿಸುವವನು. ।।೨೧।।

ಪ್ರಜಾಶಿಕ್ಷಣದಿಂದ ನಿನಗಾಗುವ ಫಲ ಏನು ? ಎಂದರೆ ಹೇಳುವನು -

**ತಸ್ಯ ಮೇ ತದನುಷ್ಠಾನಾದ್ ಯದಾಹುರ್ಬ್ರಹ್ಮವಾದಿನಃ ।**
**ಲೋಕಾಃ ಸ್ಯುಃ ಕಾಮಸಂದೋಹಾ ಯಸ್ಯ ತುಷ್ಯತಿ ದಿಷ್ಟದೃಕ್ ।।೨೨।।**

ತಸ್ಯ=ಪ್ರಜಾರಕ್ಷಣೆಗಾಗಿ ನಿಯೋಜಿಸಲ್ಪಟ್ಟ ಮೇ=ನನಗೆ ತದನುಷ್ಠಾನಾತ್=ಪ್ರಜಾರಕ್ಷಣ ಮಾಡುವುದರಿಂದ ದಿಷ್ಟದೃಕ್=ಕರ್ಮಸಾಕ್ಷಿಯಾದ ಶ್ರೀಹರಿಯು ತುಷ್ಯತಿ=ಸಂತುಷ್ಟನಾಗುವನು. ಯಸ್ಯ ತುಷ್ಯತಿ ತಸ್ಯ=ಪ್ರಜಾರಕ್ಷಣೆಯಿಂದ ಯಾವನಿಗೆ ಸಂತುಷ್ಟನಾಗುವನೋ ಅವನಿಗೆ ಬ್ರಹ್ಮವಾದಿನಃ=ವೇದವಾದಿಗಳು ಯತ್ (ಯಾನ್ ಲೋಕಾನ್) ಆಹುಃ=ಯಾವ ಲೋಕಗಳಾಗುವವು ಎಂದು ಹೇಳಿರುವರೋ ತೇ=ಅಂತಹ ಕಾಮಸಂದೋಹಾಃ= ಅಭೀಷ್ಟಗಳನ್ನು ಪೂರ್ಣಮಾಡುವ ಲೋಕಾಃ=ಲೋಕಗಳು ಸ್ಯುಃ=ಆಗುವವು. ।।೨೨।।

**ಯ ಉದ್ಧರೇತ್ ಕರಂ ರಾಜಾ ಪ್ರಜಾ ಧರ್ಮೇಷ್ವಶಿಕ್ಷಯನ್ ।**
**ಪ್ರಜಾನಾಂ ಶಮಲಂ ಭುಂಕ್ತೇ ಭಾಗಂ ಚ ಸ್ವಂ ಜಹಾತಿ ಸಃ ।।೨೩।।**

ಯಃ ರಾಜಾ=ಯಾವ ರಾಜನು ಪ್ರಜಾಃ=ಪ್ರಜೆಗಳನ್ನು ಧರ್ಮೇಷು ಧರ್ಮಮಾರ್ಗದಲ್ಲಿ ನಡೆಯುವಂತೆ ಅಶಿಕ್ಷಯನ್=ಶಿಕ್ಷಿಸದೇ ಕರಂ=ಕಾಣಿಕೆಯನ್ನು (ಟ್ಯಾಕ್ಸ್) ಉದ್ಧರೇತ್= ಸ್ವೀಕರಿಸುವನೋ ಸಃ=ಅವನು ಪ್ರಜಾನಾಂ=ಪ್ರಜೆಗಳು ಮಾಡಿದ ಶಮಲಂ=ಪಾಪದ ಫಲವನ್ನು ಭುಂಕ್ತೇ=ಅನುಭವಿಸುವನು. ಚ=ಮತ್ತು ಸ್ವಂ ಭಾಗಂ ಜಹಾತಿ=ತನಗೆ ಬರಬೇಕಾದ ಅವರು ಮಾಡಿದ ಪುಣ್ಯದ ಆರನೇ ಒಂದು ಭಾಗವನ್ನು ಬಿಡುವನು, ಅನುಭವಿಸಲಾರನು ಎಂದರ್ಥ.

**ತತ್ ಪ್ರಜಾ ಭರ್ತೃಪಿಂಡಾರ್ಥಂ ಸ್ವಾರ್ಥಮಪ್ಯನಸೂಯವಃ ।**
**ಕುರುತಾಧೋಕ್ಷಜಧಿಯಂ ತರ್ಹಿ ಮೇಽನುಗ್ರಹಃ ಕೃತಃ ।।೨೪।।**

ತತ್(ತಸ್ಮಾತ್)=ಪ್ರಜೆಗಳ ಶಿಕ್ಷಣದಿಂದ ನನಗೆ ಉತ್ತಮಲೋಕಗಳು ದೊರೆಯುವುದರಿಂದ, ಮತ್ತು ಸರಿಯಾಗಿ ಶಿಕ್ಷಣ ಮಾಡದಿದ್ದಲ್ಲಿ ಪಾಪ ಬರುವುದರಿಂದಲೂ ಹೇ ಪ್ರಜಾಃ=ಎಲೋ ಪ್ರಜೆಗಳೇ ! ಅನಸೂಯವಃ=ಅಸೂಯೆ ಇಲ್ಲದ ನೀವು ಭರ್ತೃಪಿಂಡಾರ್ಥಂ=ಯಜಮಾನ- ನಾದವನಿಗೆ ಆರನೇ ಒಂದುಭಾಗ ಪುಣ್ಯ ಬರುವುದಕ್ಕಾಗಿ ಸ್ವಾರ್ಥಂ ಅಪಿ=ನಿಮಗಾಗಿಯೂ

ಅಧೋಕ್ಷಜಧಿಯಂ ಕುರುತ=ಶ್ರೀಹರಿಯಲ್ಲಿ ಮನಸ್ಸನ್ನು ಇಡಿರಿ. ತರ್ಹಿ=ಆಗ ಮೇ ಅನುಗ್ರಹಃ ಕೃತಃ ಸ್ಯಾತ್=ನನಗೆ ಅನುಗ್ರಹ ಮಾಡಿದಂತಾಗುವುದು. ।।೨೪।।

**ಯೂಯಂ ತದನುಮೋದಧ್ವಂ ಪಿತೃದೇವರ್ಷಯೋಽಮಲಾಃ ।**
**ಕರ್ತುಃ ಶಾಸ್ತುರನುಜ್ಞಾತುಸ್ತುಲ್ಯಂ ಯತ್ ಪ್ರೇತ್ಯ ತತ್ ಫಲಮ್ ।।೨೫।।**

ಅಮಲಾಃ=ದೋಷರಹಿತರಾದ ಪಿತೃದೇವರ್ಷಯಃ=ಪಿತೃಗಳೇ ದೇವತೆಗಳೇ ಋಷಿಗಳೇ ! ಯೂಯಂ=ನೀವು ತತ್=ನಾನು ಹೇಳಿದುದನ್ನು ಅನುಮೋದಧ್ವಂ= ಅನುಮೋದನೆ ಮಾಡಿರಿ. ಕರ್ತುಃ=ಕಾರ್ಯ ಮಾಡುವವನಿಗೆ ಯತ್ ಫಲಂ=ಯಾವ ಫಲ ಬರುವದೋ ತತ್=ಆ ಫಲವು ಶಾಸ್ತುಃ=ಕರ್ಮ ಮಾಡು ಎಂದು ಹೇಳಿದವನಿಗೆ ಮತ್ತು ಅನುಜ್ಞಾತುಃ=ಅನುಮೋದಿಸುವವನಿಗೂ ಪ್ರೇತ್ಯ=ಮರಣಾನಂತರ ತುಲ್ಯಂ=ಯೋಗ್ಯತಾನುಸಾರ ಬರುವುದು. ।।೨೫।।

ನಿನ್ನ ತಂದೆಯಾದ ವೇನನು ಜೀವನನ್ನು ಬಿಟ್ಟು ಈಶ್ವರ ಬೇರೆ ಇಲ್ಲ ಎಂದು ಮತವನ್ನು ಪ್ರವರ್ತಿಸಿರುವನು. ಆದ್ದರಿಂದ ಶ್ರೀಹರಿಯಲ್ಲಿ ಮನಸಿಡಿರಿ ಎಂದು ಹೇಗೆ ಹೇಳುವಿ ? ಎಂದರೆ, ಜೀವನಿಂದ ಭಿನ್ನನಾದ ಈಶ್ವರನಿದ್ದಾನೆ ಎನ್ನಲು ಪ್ರಮಾಣವನ್ನು ತಿಳಿಸುವನು -

**ಅಸ್ತಿ ಯಜ್ಞಪತಿರ್ನಾಮ ಕೇಷಾಂಚಿದಿಹ ಸತ್ತಮಾಃ ।**
**ಇಹಾಮುತ್ರ ಚ ಲಕ್ಷ್ಯಂತೇ ಜ್ಯೋತ್ಸ್ನಾವತ್ಯಃ ಕ್ವಚಿದ್ ಭುವಃ ।।೨೬।।**

ಯಜ್ಞಪತಿಃ=ಯಜ್ಞ ಮೊದಲಾದ ಕರ್ಮಗಳಿಗೆ ಫಲ ಕೊಡುವ ವಿಷ್ಣುವು ಅಸ್ತಿ ಇತಿ ನಾಮ=ಇದ್ದಾನೆ ಎಂಬುವುದು ಪ್ರಸಿದ್ಧ. ಇಹ=ಈ ಲೋಕದಲ್ಲಿ ಕೇಷಾಂಚಿತ್ ಮತಃ=ವೇದವ್ಯಾಸಾದಿಗಳಿಗೆ ಸಮ್ಮತವು. ಸತ್ತಮಾಃ=ಬ್ರಾಹ್ಮಣಶ್ರೇಷ್ಠರೆ ! ಇಹ=ಈ ಲೋಕದಲ್ಲಿಯೂ ಅಮುತ್ರ ಚ=ಪರಲೋಕದಲ್ಲಿಯೂ ಸಹ ಜ್ಯೋತ್ಸ್ನಾವತ್ಯಃ=ಪ್ರಕಾಶವುಳ್ಳ ಭುವಃ=ಯೋಗ್ಯತಾನುಸಾರವಾಗಿ ಪೂರ್ಣರಾದ ದೇವತೆಗಳು, ಕೆಲವು ಮನುಷ್ಯರು ಲಕ್ಷ್ಯಂತೇ=ಶಾಸ್ತ್ರದಿಂದಲೂ ಪ್ರತ್ಯಕ್ಷದಿಂದಲೂ ತಿಳಿದು ಬರುವರು.

ಇದರಿಂದ ಪ್ರಕಾಶ ಮುಂತಾದ ಫಲ ಕೊಡುವ ಈಶ್ವರನಿದ್ದಾನೆ ಎಂದು ಒಪ್ಪಬೇಕು. ಇಲ್ಲವಾದರೆ ಬೇರೆಯವರಿಗೆ ಇಲ್ಲದ ಪ್ರಕಾಶಾದಿಗಳು ಅವರಿಗೆ ಏಕೆ ಬರಬೇಕು ? ಆದ್ದರಿಂದ ಆ ರೀತಿ ಫಲ ಕೊಡುವ ಈಶ್ವರನನ್ನು ಒಪ್ಪಲೇಬೇಕೆಂದು ಭಾವ.

**ಭಾಗವತ ತಾತ್ಪರ್ಯ -**

ಜ್ಯೋತ್ಸ್ನಾವತ್ಯಃ ಭುವಃ ಎಂಬುದಕ್ಕೆ ಪ್ರಕೃತದಲ್ಲಿ ಸಂಗತವಾದ ಅರ್ಥವನ್ನು ಪ್ರಮಾಣದಿಂದಲೇ ತಿಳಿಸುವರು -

"ಪ್ರಕಾಶವದ್ಭುವೋ ದೇವಾ ಮಾನುಷಾಶ್ಚಾಪಿ ಕೇಚನ" ಇತಿ ವಾರಾಹೇ ॥

ಪ್ರಕಾಶವಿಶೇಷವುಳ್ಳ ಸ್ಥಾನವಿಶೇಷಗಳು, ಯೋಗ್ಯತಾನುಸಾರಪೂರ್ಣರಾದ ಎಲ್ಲ ದೇವತೆಗಳು, ಕೆಲವು ಮನುಷ್ಯರೂ ಇದ್ದಾರೆ ಎಂದು ವರಾಹಪುರಾಣದಲ್ಲಿದೆ. ಆದ್ದರಿಂದ ನಾಸ್ತಿಕವಾದ ಸರಿಯಲ್ಲ. ಈಶ್ವರ-ಸ್ವರ್ಗ-ದೇವತೆಗಳು ಇದ್ದಾರೆಂದು ತಿಳಿಯುವುದೇ ಸರಿಯಾದುದು ಎಂದು ಭಾವ.

**ವಿಜಯಧ್ವಜೀಯಪ್ರಕಾರ :-**

ಇಹ=ಮನುಷ್ಯಲೋಕದಲ್ಲಿ ಮತ್ತು ಅವರ ಶರೀರದಲ್ಲಿ ಅಮುತ್ರ=ಸ್ವರ್ಗ ಮೊದಲಾದ ಸ್ಥಳದಲ್ಲಿ ಜ್ಯೋತ್ಸ್ನಾವತ್ಯಃ=ಬಹಳ ಪ್ರಕಾಶವುಳ್ಳ ಭುವಃ=ಸ್ಥಾನವಿಶೇಷಗಳು, ಇಂದ್ರಿಯಾದಿಪ್ರೇರಕರಾಗಿ ಇರುವುದರಿಂದ (ಭವನಾದ್ ಭುವಃ) ಭುವಃ ಎನಿಸುವ ದೇವತೆಗಳು ಲಕ್ಷ್ಯಂತೇ=ಪ್ರಮಾಣದಿಂದ ತಿಳಿದುಬರುವರು. ಸುಖಕಾರಣವಾದ್ದರಿಂದ, ಬೆಳದಿಂಗಳಿಗೆ ಸದೃಶವಾದ ರತ್ನಪ್ರಕಾಶದಿಂದ ಯುಕ್ತವಾದ್ದರಿಂದ ಜೋತ್ಸ್ನಾವತ್ಯಃ ಎಂದಿರುವರು ಎಂದರ್ಥ. ॥೨೬॥

ಕೇಷಾಂಚಿತ್ ಎಂದು ಹೇಳಿದವರನ್ನೇ ನಾಮನಿರ್ದೇಶ ಮಾಡುವರು -

**ಮನೋರುತ್ತಾನಪಾದಸ್ಯ ಧ್ರುವಸ್ಯಾಪಿ ಮಹೀಪತೇಃ ।**
**ಪ್ರಿಯವ್ರತಸ್ಯ ರಾಜರ್ಷೇರಂಗಸ್ಯಾಸ್ಮತ್ಪಿತುಃ ಪಿತುಃ ॥೨೭॥**

ಮನೋಃ=ಸ್ವಾಯಂಭುವ ಮನುವಿನ, ಮಹೀಪತೇಃ=ರಾಜನಾದ ಉತ್ತಾನಪಾದಸ್ಯ= ಉತ್ತಾನಪಾದನ, ಧ್ರುವಸ್ಯ=ಧ್ರುವರಾಜನ, ರಾಜರ್ಷೇಃ=ರಾಜರ್ಷಿಯಾದ ಪ್ರಿಯವ್ರತಸ್ಯ= ಪ್ರಿಯವ್ರತನ, ಅಸ್ಮತ್ಪಿತುಃ=ನನ್ನ ತಂದೆಯಾದ ವೇನನ ಪಿತುಃ=ತಂದೆಯಾದ ಅಂಗಸ್ಯ= ಅಂಗರಾಜನ, ॥೨೭॥

**ಈದೃಶಾನಾಮಥಾನ್ಯೇಷಾಮಜಸ್ಯ ಚ ಭವಸ್ಯ ಚ ।**
**ಪ್ರಹ್ಲಾದಸ್ಯ ಬಲೇಶ್ಚಾಪಿ ಕೃತ್ಯಮಸ್ತಿ ಗದಾಭೃತಃ ॥೨೮॥**

ಈದೃಶಾನಾಂ=ಈ ವಿಧರಾದ ಅನ್ಯೇಷಾಂ=ಬೇರೆ ರಾಜರುಗಳಿಗೂ, ಅಜಸ್ಯ= ಬ್ರಹ್ಮದೇವರಿಗೂ, ಭವಸ್ಯ ಚ=ರುದ್ರದೇವರಿಗೂ ಸಹ, ಉಪಲಕ್ಷಣಯಾ ಎಲ್ಲ ದೇವತೆಗಳಿಗೂ, ಪ್ರಹ್ಲಾದಸ್ಯ=ಪ್ರಹ್ಲಾದರಾಜನಿಗೂ, ಬಲೇಃ=ಬಲಿಚಕ್ರವರ್ತಿಗೂ ಗದಾಭೃತಃ= ಶ್ರೀಹರಿಯಿಂದ ಕೃತ್ಯಂ ಅಸ್ತಿ=ಪ್ರಕಾಶವಿಶೇಷಾದಿಗಳುಂಟು. (ಶ್ರೀಹರಿಯ ಪೂಜೆಯೆಂಬ ಕಾರ್ಯ ಉಂಟು.- ವಿಜ) ಅಂದರೆ ಇವರೆಲ್ಲ ಶ್ರೀಹರಿಯ ಪೂಜೆ ಮಾಡಿ ಉನ್ನತಸ್ಥಾನ ಪಡೆದಿರುವರು ಎಂದು ಭಾವ. ॥೨೮॥

ದೇವತೆಗಳೇ ಮೊದಲಾದವರಿಗೆ ಸಾಮರ್ಥ್ಯವಿಶೇಷವಾಗಲೀ, ಸ್ಥಾನವಿಶೇಷಗಳಾಗಲೀ ಕರ್ಮಾದಿಗಳಿಂದಲೇ ದೊರೆಯುವ ಕಾರಣ ಶ್ರೀಹರಿ ಏಕೆ ಬೇಕು ? ಎಂದರೆ, ಹೇಳುವರು -

**ರಾಜ್ಯಸ್ವರ್ಗಾಪವರ್ಗಾಣಾಂ ಪ್ರಾಯೇಣೈಕಾತ್ಮಹೇತುತಾ ।**
**ದೌಹಿತ್ರಾದೀನೃತೇ ಮೃತ್ಯೋಃ ಶೋಚ್ಯಾನ್ ಧರ್ಮವಿಮೋಹಿತಾನ್ ॥೨೯॥**

ರಾಜ್ಯಸ್ವರ್ಗಾಪವರ್ಗಾಣಾಂ=ರಾಜ್ಯ, ಸ್ವರ್ಗ, ಮೋಕ್ಷ ಇವುಗಳು ಪ್ರಾಯೇಣ ಏಕಾತ್ಮಹೇತುತಾ=ಎಲ್ಲರಿಗಿಂತ ಪ್ರಧಾನನಾದುದರಿಂದ ಏಕಾತ್ಮನೆನಿಸಿದ ಶ್ರೀಹರಿಯೇ ಸ್ವತಂತ್ರಕಾರಣನಾಗಿ ಉಳ್ಳವುಗಳಾಗಿವೆ.

ಹಿಂದೆ ''ಕೇಷಾಂಚಿತ್'' ಎಂದು ಹೇಳಿದ್ದರಿಂದ ಕೆಲವರ ದೃಷ್ಟಿಯಿಂದ ಶ್ರೀಹರಿಯು ಇಲ್ಲ ಎಂದರ್ಥವಾಗಿದೆ. ಅವರಾರೆಂದು ತಿಳಿಸುವರು -

ಧರ್ಮವಿಮೋಹಿತಾನ್=ಧರ್ಮವಿಷಯದಲ್ಲಿ ವಿಪರೀತಜ್ಞಾನವುಳ್ಳ ಶೋಚ್ಯಾನ್= ಶೋಚನೀಯರಾದ ಮೃತ್ಯೋಃ=ಮೃತ್ಯುವಿನ ದೌಹಿತ್ರಾದೀನ್ ಋತೇ=ಮಗಳ ಮಗನಾದ ವೇನ ಮತ್ತು ಮಣಿಮಂತ ಮೊದಲಾದವರನ್ನು ಬಿಟ್ಟು ಜ್ಞಾನಿಗಳ ಮತದಲ್ಲಿ ಶ್ರೀಹರಿ ಇರುವನು ಎಂದು ಭಾವ.

**ಭಾಗವತ ತಾತ್ಪರ್ಯ -**

ಏಕಾತ್ಮಶಬ್ದಕ್ಕೆ ಪ್ರಕೃತ ಸಂಗತವಾದ ಅರ್ಥವನ್ನು ಹೇಳುವರು -

**''ಏಕಾತ್ಮಾ ಹರಿರುದ್ದಿಷ್ಟಃ ಪ್ರಧಾನತ್ವಾತ್ ಸಮಸ್ತತಃ'' ಇತಿ ಚ ।**

ಬ್ರಹ್ಮಾದಿ ಎಲ್ಲ ಜಗತ್ತಿಗಿಂತಲೂ ಶ್ರೇಷ್ಠನಾದುದರಿಂದಲೇ ಶ್ರೀಹರಿಯು ಏಕಾತ್ಮನೆಂದು ಹೇಳಲ್ಪಡುವನು ಎಂದೂ ವರಾಹಪುರಾಣದಲ್ಲಿದೆ.

ಇಲ್ಲಿ ಪ್ರಾಯಃ ಎಂಬ ಪದಕ್ಕೆ ಪ್ರಾಚುರ್ಯ (ಬಹುಶಃ) ಎಂದರ್ಥವಾದರೆ, ಕೆಲವು ಸಲ ಕಾರಣತ್ವ ಇಲ್ಲ ಎಂದು ಅರ್ಥ ತೋರುವುದು. ಆದ್ದರಿಂದ ಯೋಗ್ಯವಾದ ಅರ್ಥ ಹೇಳುವರು -

**ಪ್ರಾಯ ಇತ್ಯವಧಾರಣಾಕ್ಷೇಪಃ ।**

ಕ್ಷೇಪ, ಆಕ್ಷೇಪ ಎಂದು ಅವಧಾರಣವು ಎರಡುವಿಧವು. ಅವುಗಳಲ್ಲಿ ಆಕ್ಷೇಪರೂಪ ಅವಧಾರಣವು 'ಪ್ರಾಯಃ'ಪದದ ಅರ್ಥವು.

ಪ್ರಮಾಣ ಹೇಳುವರು -

**''ಪ್ರಾಯಃಪದಂ ಸ್ಯಾತ್ ಪ್ರಾಚುರ್ಯೇ ಚಾಕ್ಷೇಪಾತ್ಮಾವಧಾರಣೇ ।**
**ಅರ್ಥತೋಽವಧೃತಿಃ ಕ್ಷೇಪೋ ಮುಖಾಕ್ಷೇಪೋಽವಧಾರಣಮ್ ॥ ಇತಿ ಚ ॥**

ಪ್ರಾಚುರ್ಯ ಎಂಬ ಅರ್ಥದಲ್ಲಿಯೂ, ಆಕ್ಷೇಪರೂಪವಾದ ಅವಧಾರಣ ಎಂಬರ್ಥದಲ್ಲಿಯೂ ಪ್ರಾಯಃ ಎಂಬ ಪದವಿದೆ. ಅರ್ಥಾತ್ ಎಲ್ಲಿ ಅವಧಾರಣ ತಿಳಿಯಲ್ಪಡುವುದೋ ಅಂತಹ ಅವಧಾರಣವು ಕ್ಷೇಪವೆನಿಸುತ್ತದೆ. ಉದಾ :- ಈ ಗ್ರಾಮದಲ್ಲಿ ಇವನು ಪಂಡಿತನೆಂದು ಹೇಳಿದರೆ ಅರ್ಥಾತ್ ಇನ್ನೊಬ್ಬನು ಪಂಡಿತನಲ್ಲ ಎಂದು ತಿಳಿಯುತ್ತದೆ. ಇದು ಕ್ಷೇಪ.

ಮುಖ ಎಂಬ ಅವಿಭಕ್ತಿಕನಿರ್ದೇಶವಿದೆ. 'ಮುಖಾದವಧಾರಣಂ ಆಕ್ಷೇಪಃ' ಅಂದರೆ ಅವಧಾರಣವಾಚಕವಾದ ಏವಶಬ್ದದಿಂದ ಅವಧಾರಣವು (ಅನ್ಯಯೋಗವ್ಯವಚ್ಛೇದವು) ಸಾಕ್ಷಾತ್ತಾಗಿ ಎಲ್ಲಿ ತೋರುತ್ತದೋ ಅಂತಹುದು ಆಕ್ಷೇಪರೂಪ ಅವಧಾರಣವೆನಿಸುತ್ತದೆ. ಉದಾ :- ಪಾರ್ಥ ಏವ ಧನುರ್ಧರಃ ಎಂದರೆ, ಅರ್ಜುನ ಒಬ್ಬನೇ ಧನುರ್ಧಾರಿ. ಬೇರೆಯವರು ಧನುರ್ಧಾರಿಗಳಲ್ಲ ಎಂದು ಅರ್ಥ ಎಂದೂ ವರಾಹದಲ್ಲಿದೆ.

ಇದರಿಂದ ''ಪ್ರಾಯೇಣ ಏಕಾತ್ಮಹೇತುತಾ'' ಎಂದರೆ, ಶ್ರೀಹರಿಯೇ ಕಾರಣ. ಬೇರೆ ಯಾರೂ ಕಾರಣ ಅಲ್ಲ ಎಂದು ಅರ್ಥವಾಗುವುದು ಎಂದು ಭಾವ. ॥೨೯॥

ಇಲ್ಲಿಯವರೆಗೆ ಶ್ರೀಹರಿಯು ಸರ್ವೋತ್ತಮನೆಂದು ಸ್ಥಾಪಿಸಿ, ಪ್ರಕೃತ ಅವನ ಭಜನ ಮಾಡಿರೆಂದು ಹೇಳುವುದಕ್ಕಾಗಿ ಅವನನ್ನು ಭಜಿಸುವವರಿಗೆ ಆಗುವ ಫಲವನ್ನು ಎರಡು ಶ್ಲೋಕಗಳಿಂದ ಹೇಳುವರು -

**ಯತ್ಪಾದಸೇವಾಭಿರುಚಿಸ್ತಪಸ್ವಿನಾ-**
**ಮಶೇಷಜನ್ಮೋಪಚಿತಂ ಮಲಂ ಧಿಯಃ ।**
**ಸದ್ಯಃ ಕ್ಷಿಣೋತ್ಯನ್ವಹಮೇಧತೀ ಸತೀ**
**ಯಥಾ ಪದಾಂಗುಷ್ಠವಿನಿಃಸೃತಾ ಸರಿತ್ ॥೩೦॥**

ಯಥಾ=ಹೇಗೆ ಪದಾಂಗುಷ್ಠವಿನಿಃಸೃತಾ ಸರಿತ್=ಪರಮಾತ್ಮನ ಕಾಲಿನ ಹೆಬ್ಬೆರಳಿನಿಂದ ಹೊರಟ ನದಿಯು ಪಾಪನಾಶಕವೋ ತಥಾ=ಹಾಗೆ ಅನ್ವಹಂ=ಪ್ರತಿದಿನವೂ ಏಧತೀ= ಬೆಳೆಯುವ ಸತೀ=ನಿರ್ದುಷ್ಟವಾದ ಯತ್ಪಾದಸೇವಾಭಿರುಚಿಃ=ಯಾವ ಪರಮಾತ್ಮನ ಚರಣಸೇವೆಯ ಆಸಕ್ತಿಯು ತಪಸ್ವಿನಾಂ=ತಪಸ್ಸು ಮಾಡುವ ಮುನಿಗಳಿಗೆ

ಅಶೇಷಜನ್ಮೋಪಚಿತಂ=ಎಲ್ಲ ಜನ್ಮಗಳಲ್ಲಿ ಮಾಡಿದ ಧಿಯಃ ಮಲಂ=ಮನಸ್ಸಿನ ಕೊಳೆಯನ್ನು ಸದ್ಯಃ ಕ್ಷಿಣೋತಿ=ಶೀಘ್ರದಲ್ಲಿ ನಾಶಮಾಡುವುದು.

ಇಲ್ಲಿ ಫಲವಿದೆ ಎಂದು ತಿಳಿಯಲು ಗಂಗಾದೃಷ್ಟಾಂತವನ್ನು ಹೇಳಿದ್ದಷ್ಟೇ ಹೊರತು ಫಲ ಸಮಾನವೆಂದಲ್ಲ. ಕೃಷ್ಣನ ಪಾದಸೇವೆಯು ಜ್ಞಾನದಿಂದ ಬರುವ ಪ್ರಸಾದಕ್ಕೆ ಸಾಕ್ಷಾತ್ ಸಾಧನವಾಗಿದೆ. ಗಂಗಾಸೇವೆಯಾದರೂ ಶುದ್ಧಾಂತಃಕರಣನಾದವನಿಗೆ ಭಗವಂತನ ಸೇವೆಯನ್ನು ದೊರಕಿಸಿಕೊಟ್ಟು ಅದರ ಮೂಲಕ ಜ್ಞಾನಸಾಧ್ಯಪ್ರಸಾದಕ್ಕೆ ಸಾಧನವಾಗಿದೆ.

**ವಿನಿರ್ಧೂತಾಶೇಷಮನೋಮಲಃ ಪುಮಾ-**
**ನಸಂಗವಿಜ್ಞಾನವಿಶೇಷವೀರ್ಯವಾನ್ ।**
**ಯದಂಘ್ರಿಮೂಲೇ ಕೃತಕೇತನಃ ಪುನ-**
**ರ್ನ ಸಂಸೃತಿಂ ಕ್ಲೇಶವಹಾಂ ಪ್ರಪದ್ಯತೇ ॥೩೦॥**

ವಿನಿರ್ಧೂತಾಶೇಷಮನೋಮಲಃ=ಮನಸ್ಸಿನ ಎಲ್ಲ ದೋಷಗಳನ್ನು ಕಳೆದುಕೊಂಡ ಪುಮಾನ್=ಅಧಿಕಾರಿಯು ಅಸಂಗವಿಜ್ಞಾನವಿಶೇಷವೀರ್ಯವಾನ್ ಅಸಂಗ=ವೈರಾಗ್ಯ, ವಿಜ್ಞಾನವಿಶೇಷ=ಅಪರೋಕ್ಷಜ್ಞಾನವೆಂಬ ವೀರ್ಯವಾನ್=ಸಾಮರ್ಥ್ಯವುಳ್ಳವನಾಗಿ ಯದಂಘ್ರಿಮೂಲೇ=ಯಾವ ಪರಮಾತ್ಮನ ಪಾದಮೂಲದಲ್ಲಿ (ವೈಕುಂಠದಲ್ಲಿ) ಕೃತಕೇತನಃ=ಆಶ್ರಯವನ್ನು ಪಡೆದು ಕ್ಲೇಶವಹಾಂ=ದುಃಖದಾಯಕವಾದ ಸಂಸೃತಿಂ= ಸಂಸಾರವನ್ನು ಪುನಃ ನ ಪ್ರಪ್ರದ್ಯತೇ= ಮತ್ತೆ ಹೊಂದಲಾರನು. ॥೩೦॥

**ತಮೇವ ಯೂಯಂ ಭಜತಾತ್ಮವೃತ್ತಿಭಿ-**
**ರ್ಮನೋವಚಃಕಾಯಗುಣೈಃ ಸ್ವಕರ್ಮಭಿಃ ।**
**ಅಮಾಯಿನಃ ಕಾಮದುಘಾಂಘ್ರಿಪಂಕಜಂ**
**ಯಥಾಧಿಕಾರಾವಸಿತಾರ್ಥಸಿದ್ಧಯೇ ॥೩೨॥**

ಯೂಯಂ=ನೀವು ಅಮಾಯಿನಃ=ಕಪಟವಿಲ್ಲದವರಾಗಿ ಕಾಮದುಘ್ರಾಂಘ್ರಿಪಂಕಜಂ= ಅಭೀಷ್ಟಪ್ರದವಾದ ಪಾದಕಮಲಗಳುಳ್ಳ ತಂ ಏವ=ಈ ವಿಧವಾಗಿ ಫಲಪ್ರದನಾದ ಶ್ರೀಹರಿಯನ್ನೇ ಆತ್ಮವೃತ್ತಿಭಿಃ=ಭಗವದ್ವಿಷಯಕಗಳಾದ ಮನೋವಚಃಕಾಯಗುಣೈಃ=ಮನುಸ್ಸು ಮಾತು ದೇಹಗಳ ಕಾರ್ಯವಾದ ಧ್ಯಾನ, ಸ್ತುತಿ, ಸೇವಾಗಳಿಂದ ಸ್ವಕರ್ಮಭಿಃ=ನಿಮಗೆ ವಿಹಿತವಾದ ಕರ್ಮಗಳಿಂದಲೂ ಯಥಾಧಿಕಾರಾವಸಿತಾರ್ಥಸಿದ್ಧಯೇ=ಯೋಗ್ಯತಾನುಸಾರ ನಿಶ್ಚಿತವಾದ ಮೋಕ್ಷಾನಂದದ ಪ್ರಾಪ್ತಿಗಾಗಿ ಭಜತ=ಸೇವಿಸಿರಿ. ॥೩೨॥

ವಿಹಿತಕರ್ಮಗಳನ್ನು ತಿಳಿಸುತ್ತ ಅವುಗಳ ಫಲವನ್ನು ವಿವರಿಸುವರು -

**ಅಸಾವಿಹಾನೇಕಗುಣಾಧ್ವರೈಃ ಸತಾ**
**ಪೃಥಗ್ವಿಧೈರ್ದ್ರವ್ಯಗುಣಕ್ರಿಯೋಕ್ತಿಭಿಃ ।**
**ಸಂಪದ್ಯತೇಽರ್ಥಾಶಯಲಿಂಗನಾಮಭಿ-**
**ರ್ವಿಶುದ್ಧವಿಜ್ಞಾನಘನಸ್ವರೂಪತಃ ॥೩೩॥**

ಇಹ=ಕರ್ಮಭೂಮಿಯಲ್ಲಿ ಅಸೌ=ಪೂರ್ವೋಕ್ತನಾದ ಶ್ರೀಹರಿಯು ಸತಾ=ಅಧಿಕಾರಿಯಾದ ಪುರುಷನಿಂದ ದ್ರವ್ಯಗುಣಕ್ರಿಯೋಕ್ತಿಭಿಃ ದ್ರವ್ಯ=ಪುರೋಡಾಶಾದಿಗಳು ಗುಣ=ವಸಂತಾದಿಕಾಲಗಳು ಕ್ರಿಯಾ=ಋತ್ವಿಕ್‌ಗಳು ಮಾಡುವ ವ್ಯಾಪಾರ ಉಕ್ತಿಭಿಃ=ಮಂತ್ರಗಳಿಂದ, ಅರ್ಥಾಶಯಲಿಂಗನಾಮಭಿಃ ಅರ್ಥ=ಸ್ವರ್ಗಾದಿಪ್ರಯೋಜನಗಳು ಆಶಯ=ಸಂಕಲ್ಪ ಲಿಂಗ=ಅಶ್ವಮೇಧ ಮೊದಲಾದ ಚಿಹ್ನಗಳು ನಾಮಭಿಃ=ಅಶ್ವಮೇಧ ಮೊದಲಾದ ಹೆಸರುಗಳಿಂದ, ಪೃಥಗ್ವಿಧೈಃ=ಪರಸ್ಪರ ವಿಲಕ್ಷಣಗಳಾದ, ಅನೇಕಗುಣಾಧ್ವರೈಃ=ಬಹಳ ಗುಣಗಳುಳ್ಳ ಯಜ್ಞಗಳಿಂದ ವಿಶುದ್ಧವಿಜ್ಞಾನಘನಸ್ವರೂಪತಃ=ನಿರ್ಮಲವಾದ ವಿಶೇಷಜ್ಞಾನನಿಬಿಡವಾದ ಶ್ರೀಹರಿಸ್ವರೂಪವನ್ನು ತಿಳಿದು ಸಂಪದ್ಯತೇ=ಹೊಂದಲ್ಪಡುವನು.

ನಾನಾವಿಧ ಯಜ್ಞಗಳಿಂದ ತನ್ನ ಅಂತರ್ಯಾಮಿಯಾದ ಶ್ರೀಹರಿಯ ಜ್ಞಾನ ಮಾಡಿಕೊಂಡು ಭಗವತ್ಪ್ರಾಪ್ತಿರೂಪವಾದ ಮುಕ್ತಿಯನ್ನು ಪಡೆಯುವನು ಎಂದರ್ಥ. ॥೩೩॥

ಹಿಂದೆ ಪ್ರಕಾಶವಿಶೇಷ ಇರುವದೆಂಬ ಕರ್ಮಫಲವೈಚಿತ್ರ್ಯಾನ್ಯಥಾನುಪಪತ್ತಿಯಿಂದ ಅದಕ್ಕೆ ಕಾರಣನಾದ ಶ್ರೀಹರಿಯೇ ಇರುವನೆಂದು ತಿಳಿಯುವರು. ಪ್ರಧಾನಾದಿಗಳಲ್ಲ ಎಂದು ಹೇಳಿದರು. ಅದನ್ನೇ ವಿವರಿಸುವರು -

**ಪ್ರಧಾನಕಾಲಾಶಯಕರ್ಮಸಂಗ್ರಹಃ**
**ಶರೀರಶೇಷಂ ಪ್ರತಿಪದ್ಯ ಚೇತನಃ ।**
**ಕ್ರಿಯಾಫಲತ್ವೇನ ವಿಭುರ್ವಿಭಾವ್ಯತೇ**
**ಯಥಾಽನಲೋ ದಾರುಷು ತದ್ಗುಣಾತ್ಮಕಃ ॥೩೪॥**

ಯಥಾ= ಹೇಗೆ ದಾರುಷು=ಅಶ್ವತ್ಥ ಮೊದಲಾದ ಕಟ್ಟಿಗೆಯಲ್ಲಿ ಇರುವ ಅನಲಃ=ಅಗ್ನಿಯು ಮಥನ ಮಾಡುವುದರಿಂದ ತದ್ಗುಣಾತ್ಮಕಃ=ಕಟ್ಟಿಗೆ ದೊಡ್ಡದಾಗಿದ್ದರೆ ದೊಡ್ಡದಾಗಿ, ಕಟ್ಟಿಗೆ ಸಣ್ಣದಾದರೆ ಸಣ್ಣದಾಗಿ (ಕಾಷ್ಠಗುಣಸ್ಥೌಲ್ಯಾದಿಸದೃಶಸ್ಥೌಲ್ಯಾದಿಮಾನ್) ತಿಳಿಯುವುದೋ ತಥಾ=ಹಾಗೆ ವಿಭುಃ=ಸಮರ್ಥನಾದ ಚೇತನಃ=ಸರ್ವಜ್ಞನಾದ ಪರಮಾತ್ಮನು ಪ್ರಧಾನಕಾಲಾಶಯಕರ್ಮಸಂಗ್ರಹಃ ಪ್ರಧಾನ=ಪ್ರಕೃತಿಯು ಕಾಲ=ಫಲ

ಕೊಡುವ (ಪಾಚಕ) ಕಾಲವು ಆಶಯ=ಅಂತಃಕರಣವು ಕರ್ಮ=ಪುಣ್ಯಪಾಪಗಳನ್ನು ಸಂಗ್ರಹಃ=ಸ್ವೀಕರಿಸುವವನಾಗಿ, ಶರೀರಶೇಷಂ=ದೇಹವೇ ಅಂಗವಾಗಿವುಳ್ಳ ಜೀವನನ್ನು ಪ್ರತಿಪದ್ಯ=ಹೊಂದಿ ಕ್ರಿಯಾಫಲತ್ವೇನ=ಕರ್ಮಫಲದಾತೃವಾಗಿ ವಿಭಾವ್ಯತೇ=ವಿಚಾರದಿಂದ ತಿಳಿಯಲ್ಪಡುವನು.

ಪ್ರಧಾನಾದಿಗಳನ್ನು ಸ್ವೀಕರಿಸಿ ಎಂದಿದ್ದರಿಂದ ಅವುಗಳಿಗೆ ಅಸ್ವಾತಂತ್ರ್ಯ, ಶ್ರೀಹರಿಗೆ ಸ್ವಾತಂತ್ರ್ಯ ತಿಳಿಸಿದಂತಾಯಿತು.

**ವಿಜಯಧ್ವಜೀಯಪ್ರಕಾರ :-**

ಪ್ರಧಾನಾದಿಶಬ್ದವಾಚ್ಯರಾದ ಲಕ್ಷ್ಮ್ಯಾದಿಗಳಿಂದ ಪರಿವೃತನಾಗಿ, ಜೀವಾಂತರ್ಗತನಾಗಿ ಜೀವನ ಪರಿಮಾಣಗುಣಗಳಿಗೆ ಅನುಸರಿಸಿ, ಅವನು ಮಾಡಿದ ಕರ್ಮಗಳಿಗೆ ಫಲದಾತೃವಾಗಿ, ಗುರುಶಿಷ್ಯರು ಮಾಡುವ ವ್ಯಾಖ್ಯಾನ ಮತ್ತು ಶ್ರವಣವೆಂಬ ಮಥನದಿಂದ ಅಭಿವ್ಯಕ್ತನಾಗಿ ಶ್ರೀಹರಿಯು ತಿಳಿಯಲ್ಪಡುವನು. ಪ್ರಧಾನಾದಿಗಳು ಹರಿಯ ಅಧಿ ೕನ-ಭಿನ್ನವೆಂದು ತಿಳಿಸಲು ಅವುಗಳನ್ನು ಹೇಳಿದ್ದು.

ಬೆಂಕಿಯು ಕಟ್ಟಿಗೆಯಲ್ಲಿದ್ದರೂ ಕಟ್ಟಿಗೆಯ ಗುಣ-ದೋಷಸಂಪರ್ಕ ಬೆಂಕಿಗೆ ಇರುವುದಿಲ್ಲ ಹೇಗೋ ಹಾಗೆ ಪರಮಾತ್ಮನು ಜೀವನ ದೇಹದಲ್ಲಿದ್ದರೂ ಅವನಿಗೆ ಅದರ ಗುಣ-ದೋಷಸಂಪರ್ಕವಿಲ್ಲ. ಎಲ್ಲವನ್ನೂ ಸುಟ್ಟರೂ ಬೆಂಕಿಗೆ ಅಲಂಬುದ್ಧಿ ಹೇಗೆ ಇರುವುದಿಲ್ಲವೋ ಹಾಗೆ ಜಗತ್ತನ್ನೇ ಭಕ್ಷಣ ಮಾಡಿದರೂ ಪರಮಾತ್ಮನಿಗೆ ಅಲಂಬುದ್ಧಿ ಇಲ್ಲವೆಂದು ತಿಳಿಸಲು ಕಟ್ಟಿಗೆ-ಬೆಂಕಿಯ ದೃಷ್ಟಾಂತ ಕೊಟ್ಟಿರುವರು.

**ಭಾಗವತ ತಾತ್ಪರ್ಯ -**

ಕೆಲವು ತಿಳಿಯುವುದಿಲ್ಲ, ಕೆಲವಕ್ಕೆ ವಿಪರೀತಾರ್ಥ ಆಗುವವು. ಅವನ್ನು ಪರಿಹರಿಸಲು ಶ್ಲೋಕದ ತಾತ್ಪರ್ಯ ಹೇಳುವರು -

ಪ್ರಧಾನಾದೀನ್ ಗೃಹೀತ್ವಾ ಜೀವಂ ಪ್ರಾಪ್ಯ ಪುಣ್ಯಕರ್ಮಭಿರ್ಜ್ಞಾಯತೇ । ಯಥಾ ಗುಣವದಿಂಧನೇಽಗ್ನಿರ್ಮಥನಾದಿನಾ ॥

ಅಗ್ನಿಯು (ವೇದೋಕ್ತ) ಗುಣವುಳ್ಳ ಮಥನ, ಸೂರ್ಯಕಾಂತಮಣಿಸಂಬಂಧದಿಂದ ತಿಳಿಯುವಂತೆ, ಶ್ರೀಹರಿಯು ಪ್ರಕೃತಿ ಮೊದಲಾದವುಗಳನ್ನು ಅಮುಖ್ಯಕಾರಣಗಳನ್ನಾಗಿ ಇಟ್ಟುಕೊಂಡು, ಜೀವನನ್ನು ಹೊಂದಿ, ಪುರುಷರಿಂದ ಮಾಡಲ್ಪಡುವ ಪುಣ್ಯಕರ್ಮ-ಶಾಸ್ತ್ರಾರ್ಥವಿಚಾರಗಳಿಂದ ತಿಳಿಯಲ್ಪಡುತ್ತಾನೆ. ।।೩೪।।

ಅವತಾರಿಕೆ :- (ಯಾದ) ಈವರೆಗೆ ಭಗವಂತನ ಭಜನದಲ್ಲಿ ಪ್ರವೃತ್ತರಾಗದಿರುವವರಿಗೆ ಪ್ರವೃತ್ತರಾಗಬೇಕೆಂದು ಹೇಳಿ, ತಾವಾಗಿಯೇ ಪ್ರವೃತ್ತರಾದವರನ್ನು ಅಭಿನಂದಿಸುತ್ತ ಪ್ರವೃತ್ತಿಯನ್ನು ದೃಢಪಡಿಸುವರು -

(ವಿಜ) ಗುರುಶಿಷ್ಯರ ವ್ಯಾಖ್ಯಾನ-ಶ್ರವಣಗಳಿಂದ ಶ್ರೀಹರಿ ಅಭಿವ್ಯಕ್ತನಾಗುವನೆಂದು ಹೇಳಿದೆಯಷ್ಟೇ. ಗುರುವಾಗಲೀ ಶಿಷ್ಯನಾಗಲೀ ಶ್ರೀಹರಿಯ ಮುಖದಿಂದ ಜನಿಸಿದವರಾದ್ದರಿಂದ, ಅವರಿಗೆ ವ್ಯಾಖ್ಯಾನಾದಿಗಳೇ ಮುಖ್ಯವ್ಯಾಪಾರವಾದ್ದರಿಂದ, ಮುಖ್ಯವೂ ಸಾತ್ವಿಕವೂ ಆದ್ದರಿಂದ ನೀರಿಗೆ ಹರಿಯುವುದು ಸ್ವಭಾವವಾದಂತೆ ಬ್ರಾಹ್ಮಣರಿಗೆ ವ್ಯಾಖ್ಯಾನದಲ್ಲಿ ಸ್ವಾಭಾವಿಕಪ್ರವೃತ್ತಿ ಇರುವುದು ಎಂಬ ಅಭಿಪ್ರಾಯದಿಂದ ಅವರನ್ನು ಸ್ತುತಿಸುವರು -

**ಅಹೋ ಬತಾಮೀ ವಿತರಂತ್ಯನುಗ್ರಹಂ**
**ಹರಿಂ ಗುರುಂ ಯಜ್ಞಭುಜಾಮಧೀಶ್ವರಮ್ ।**
**ಸ್ವಧರ್ಮಯೋಗೇನ ಯಜಂತಿ ಮಾಮಕಾ**
**ನಿರಂತರಂ ಕ್ಷೋಣಿತಲೇ ಧೃತವ್ರತಾಃ ॥೩೫॥**

ಧೃತವ್ರತಾಃ=ಬೇರೆ ಕೆಲಸ ಮಾಡದೇ ದೀಕ್ಷೆಯಿಂದ ವ್ರತಧಾರಣ ಮಾಡಿದ ಮಾಮಕಾಃ ಅಮೀ=ನನ್ನ ಪ್ರಜೆಗಳಾದ, (ತನಗೆ ಫಲ ಬರುವದೆಂದು ಸೂಚಿಸುವನು) ಪರಮಾತ್ಮನ ಮುಖದಿಂದ ಜನಿಸಿದ ಬ್ರಾಹ್ಮಣರು ಕ್ಷೋಣಿತಲೇ=ದುಃಖ(ನಾಶ)ಕ್ಷಯಕ್ಕೆ ಕಾರಣವಾದುದರಿಂದ ಕ್ಷೋಣಿಯೆನಿಸಿದ, ನಿಲ್ಲಲು ಕಾರಣವಾದ್ದರಿಂದ ತಲವೆನಿಸಿದ ಭೂಮಿಯಲ್ಲಿ (ಕ್ಷಿಣು ಕ್ಷಯೇ-ತಲ ಪ್ರತಿಷ್ಠಾಯಾಂ ಎಂದು ಧಾತುಗಳಿವೆ) ನಿರಂತರಂ= ಯಾವಾಗಲೂ ಸ್ವಧರ್ಮಯೋಗೇನ=ತಮಗೆ ವಿಹಿತವಾದ ಧರ್ಮ ಎಂಬ ಉಪಾಯದಿಂದ ಅಥವಾ ಭಕ್ತಿರೂಪ ಉಪಾಯದಿಂದ ಗುರುಂ=ಗುರುವಾದ, ಯಜ್ಞಭುಜಾಂ ಅಧೀಶ್ವರಂ =ಯಜ್ಞಭೋಕ್ತೃಗಳಾದ ದೇವತೆಗಳಿಗೆ ನಿಯಾಮಕನಾದ, ಹರಿಂ=ಶ್ರೀಹರಿಯನ್ನು ಯಜಂತಿ=ಪೂಜಿಸುವರು. ಆದ್ದರಿಂದ ಅನುಗ್ರಹಂ ವಿತರಂತಿ=ಅನುಗ್ರಹ ಮಾಡುವರು.

ಈ ರೀತಿ ಸಾಮಾನ್ಯವಾಗಿ ಪ್ರಜೆಗಳಿಗೆ ತಿಳಿಸಿ (ತನ್ನ ವಂಶದಲ್ಲಿರುವ) ರಾಜರಿಗೆ ತಿಳಿಸುವನು -

**ಮಾ ಜಾತು ತೇಜಃ ಪ್ರಭವೇನ್ಮಹರ್ಧಿಭಿ-**
**ಸ್ತಿತಿಕ್ಷಯಾ ತಪಸಾ ವಿದ್ಯಯಾ ಚ ।**
**ದೇದೀಪ್ಯಮಾನೇಽಜಿತದೇವತಾನಾಂ**
**ಕುಲೇ ಸ್ವಯಂ ರಾಜಕುಲೇ ದ್ವಿಜಾನಾಮ್ ॥೩೬॥**

ರಾಜಕುಲೇ=ರಾಜರ ಕುಲದಲ್ಲಿರುವ ಮಹರ್ದ್ಧಿಭಿಃ=ಬಹುಸಂಪತ್ತಿನಿಂದ ಉಂಟಾದ ತೇಜಃ=ಸಾಮರ್ಥ್ಯವು ತಿತಿಕ್ಷಯಾ=ದ್ವಂದ್ವಸಹಿಷ್ಣುತೆಯಿಂದಲೂ, ತಪಸಾ=ತಪಸ್ಸಿನಿಂದಲೂ, ವಿದ್ಯಯಾ=ಜ್ಞಾನದಿಂದಲೂ ದೇದೀಪ್ಯಮಾನೇ=ಪ್ರಕಾಶಮಾನವಾದ ಅಜಿತದೇವತಾನಾಂ= ಶ್ರೀಹರಿಯೇ ದೇವತೆಯಾಗಿ ಉಳ್ಳ ದ್ವಿಜಾನಾಂ ಕುಲೇ=ಬ್ರಾಹ್ಮಣರ ಕುಲದಲ್ಲಿ ಜಾತು=ಯಾವ ಕಾಲದಲ್ಲಿಯೂ ಮಾ ಪ್ರಭವೇತ=ಅವರಿಗೆ ಅನಿಷ್ಟ ಮಾಡಲು ಸಮರ್ಥವಲ್ಲ.

ಇದರಿಂದ ತಮಗೆ ಅನಿಷ್ಟ ಮಾಡುವವರ ನಾಶ ಮಾಡಲು ಅವರಿಗೆ ಸಾಮರ್ಥ್ಯವಿದೆ ಎಂದು ಸೂಚಿತವಾಗುವುದು. ॥೩೬॥

ಬ್ರಾಹ್ಮಣಕುಲಕ್ಕೆ ಅನಿಷ್ಟ ಮಾಡಬಾರದು ಎಂದಷ್ಟೇ ಅಲ್ಲ, ಅವರಲ್ಲಿ ಭಕ್ತಿಯನ್ನೂ ಮಾಡಬೇಕು ಎಂದು ಕೈಮುತ್ಯದಿಂದ ಹೇಳುವನು -

**ಬ್ರಹ್ಮಣ್ಯದೇವಃ ಪುರುಷಃ ಪುರಾತನೋ**
**ನಿತ್ಯಂ ಹರಿರ್ಯಚ್ಚರಣಾಭಿವಂದನಾತ್ ।**
**ಅವಾಪ ಲಕ್ಷ್ಮೀಮನಪಾಯಿನೀಂ ಯಶೋ**
**ಜಗತ್ಪವಿತ್ರಂ ಚ ಮಹತ್ತಮಾಗ್ರಣೀಃ ॥೩೭॥**

ಹರಿಃ=ಇಂದ್ರನು ನಿತ್ಯಂ=ಯಾವಾಗಲೂ ಯಚ್ಚರಣಾಭಿವಂದನಾತ್=ಯಾವ ಶ್ರೀಹರಿಯ ಪಾದಗಳಿಗೆ ನಮಿಸುವುದರಿಂದ ಅನಪಾಯಿನೀಂ=ಬಹುಕಾಲವಿರುವ ಲಕ್ಷ್ಮೀಂ=ಸಂಪತ್ತನ್ನು, ಜಗತ್ಪವಿತ್ರಂ=ಜಗತ್ತನ್ನು ಪಾವನಗೊಳಿಸುವ ಯಶಃ=ಕೀರ್ತಿಯನ್ನು ಅವಾಪ=ಪಡೆದನೋ ಸಃ ಅಪಿ=ಅಂಥಹ ಮಹತ್ತಮಾಗ್ರಣೀಃ=ಇಂದ್ರಾದಿದೇವತೆಗಳಿಗಿಂತ ಉತ್ತಮರಾದ ಬ್ರಹ್ಮಾದಿಗಳಿಗಿಂತಲೂ ಶ್ರೇಷ್ಠನಾದ ಪುರಾತನಃ ಪುರುಷಃ=ಅನಾದಿಯಾದ ಪೂರ್ಣಷಡ್ಗುಣನಾದ ಶ್ರೀಹರಿಯೂ ಸಹ ನಿತ್ಯಂ ಬ್ರಹ್ಮಣ್ಯದೇವಃ=ಸರ್ವದಾ ಬ್ರಾಹ್ಮಣಪ್ರಿಯನು, ಕ್ರೀಡಾದಿಗುಣವಿಶಿಷ್ಟನು ಆಗಿರುವನು.

ಬ್ರಾಹ್ಮಣವಾತ್ಸಲ್ಯವೂ ಕ್ರೀಡಾಮಾತ್ರವೆಂದು ತಿಳಿಸಲು 'ದೇವಃ' ಎಂದಿರುವರು. ಇದರಿಂದ ರಾಜರುಗಳು ಬ್ರಾಹ್ಮಣರಲ್ಲಿ ಪ್ರೀತಿಯುಕ್ತರಾಗಿರಬೇಕು ಎಂದು ಬೇರೆ ಹೇಳಬೇಕಾಗಿಲ್ಲವೆಂದಂತಾಯಿತು.

**ಭಾಗವತ ತಾತ್ಪರ್ಯ -**

ಈ ಶ್ಲೋಕದಲ್ಲಿ ಶ್ರೀಮನ್ನಾರಾಯಣನು ಬ್ರಾಹ್ಮಣರ ಪಾದಸೇವೆ ಮಾಡಿ ಸಂಪತ್ತು-ಕೀರ್ತಿಗಳನ್ನು ಪಡೆದುಕೊಂಡನೆಂದು ಅರ್ಥ ತೋರುವುದು. ಆ ಕಾರಣ ಸರಿಯಾದ ಅರ್ಥವನ್ನು, ಯೋಜನೆಯನ್ನು, ಸಮಾಖ್ಯಾಪ್ರಮಾಣವನ್ನೂ ತಿಳಿಸುವರು -

ಹರಿರಿಂದ್ರೋ ಯಚ್ಚರಣಾಭಿವಂದನಾದನಪಾಯಿನೀಂ ಲಕ್ಷ್ಮೀಮವಾಪ । ಸೋಽಪಿ ವಿಷ್ಣುರ್ಬ್ರಾಹ್ಮಣಪ್ರಿಯಃ ॥

"ಯತ್ಪ್ರಸಾದೇನ ದೇವೇಂದ್ರೋ ವೇದೋದಿತಯಶಾ ಅಭೂತ್ ।
ಸೋಽಪಿ ವಿಷ್ಣುರಮೇಯಾತ್ಮಾ ಸದಾ ಬ್ರಾಹ್ಮಣವತ್ಸಲಃ" ಇತಿ ಹರಿವೇಶೇಷು ॥

ದೇವೇಂದ್ರನು ಯಾವ ಶ್ರೀಹರಿಯ ಪಾದಗಳಿಗೆ ನಮಸ್ಕರಿಸಿ ಬಹುಕಾಲದಲ್ಲಿ ಉಳಿಯುವ ಸಂಪತ್ತನ್ನು ಪಡೆದನೋ ಆ ವಿಷ್ಣುವೂ ಕೂಡ ಬ್ರಾಹ್ಮಣರಲ್ಲಿ ಪ್ರೀತಿ ಮಾಡುವನು. ದೇವೇಂದ್ರನು ಯಾವ ಶ್ರೀಹರಿಯ ಅನುಗ್ರಹದಿಂದ ವೇದೋಕ್ತವಾದ ಕೀರ್ತಿಯುಳ್ಳವನು ಆಗಿರುವನೋ ಅಂತಹ ಸರ್ವಗುಣಪೂರ್ಣನಾದ ಶ್ರೀವಿಷ್ಣುವು ಸದಾ ಬ್ರಾಹ್ಮಣರಲ್ಲಿ ಪ್ರೀತಿಯುಳ್ಳವನು ಎಂದು ಹರಿವಂಶಗಳಲ್ಲಿ ಹೇಳಿದೆ. ॥೩೭॥

ಬ್ರಾಹ್ಮಣಕುಲಸೇವೆಯಿಂದ ಶ್ರೀಹರಿಯು ಪ್ರೀತನಾಗುವನು. ಆದ್ದರಿಂದಲೂ ಅವಶ್ಯವಾಗಿ ಕ್ಷತ್ರಿಯರು ಬ್ರಾಹ್ಮಣಸೇವೆ ಮಾಡಬೇಕು ಎಂದು ಹೇಳುವನು -

**ಯತ್ಸೇವಯಾಽಶೇಷಗುಹಾಶ್ರಯಃ ಸ್ವರಾಟ್**
**ವಿಪ್ರಪ್ರಿಯಸ್ತುಷ್ಯತಿ ಕಾಮಮೀಶ್ವರಃ ।**
**ತದೇವ ತದ್ಧರ್ಮಪರೈರ್ವಿನೀತೈಃ**
**ಸರ್ವಾತ್ಮನಾ ಬ್ರಹ್ಮಕುಲಂ ನಿಷೇವ್ಯತಾಮ್ ॥೩೮॥**

ಯತ್ಸೇವಯಾ=ಯಾವ ಬ್ರಾಹ್ಮಣರ ಸೇವೆಯಿಂದ ಅಶೇಷಗುಣಾಶ್ರಯಃ= ಸಕಲಗುಣಗಳಿಗೆ ಆಶ್ರಯನಾದ ಸ್ವರಾಟ್=ಸ್ವತಂತ್ರನಾದ ವಿಪ್ರಪ್ರಿಯಃ=ಬ್ರಾಹ್ಮಣಪ್ರಿಯನಾದ ಈಶ್ವರಃ=ಶ್ರೀಹರಿಯು ಕಾಮಂ ತುಷ್ಯತಿ=ಬಹಳವಾಗಿ ಸಂತುಷ್ಟನಾಗುವನೋ, ತದೇವ ಬ್ರಹ್ಮಕುಲಂ=ಆ ಬ್ರಾಹ್ಮಣಕುಲವೇ ತದ್ಧರ್ಮಪರೈಃ=ವಿಷ್ಣುಪ್ರೀತಿಕರಧರ್ಮವನ್ನು ಮಾಡುವುದರಲ್ಲಿ ಆಸಕ್ತರಾದವರಿಂದ ವಿನೀತೈಃ=ವಿನಯವುಳ್ಳವರಿಂದ ಸರ್ವಾತ್ಮನಾ=ಎಲ್ಲ ರೀತಿಯಿಂದ ನಿಷೇವ್ಯತಾಂ=ಸೇವಿಸಲ್ಪಡಲಿ. ॥೩೮॥

ಪರಮಾತ್ಮನ ಪ್ರೀತಿಯಿಂದೇನು ಪ್ರಯೋಜನ ? ಎಂದರೆ, ಮೋಕ್ಷವೇ ಆಗವುದು ಎಂದು ಹೇಳುವರು -

**ಪುಮಾಲ್ಲಭೇತಾಪ್ಯತಿವೇಲಮಾತ್ಮನಃ**
**ಪ್ರಸಾದತೋಽತ್ಯಂತಶಮಂ ಸ್ವತಃ ಸ್ವಯಮ್ ।**
**ಯನ್ನಿತ್ಯಸಂಬಂಧನಿಷೇವಯಾ ತತಃ**
**ಪರಂ ಕಿಮತ್ರಾಸ್ತಿ ಸುಖಂ ಹವಿರ್ಭುಜಾಮ್ ॥೩೯॥**

ಯನ್ನಿತ್ಯಸಂಬಂಧನಿಷೇವಯಾ=ಯಾವ ಶ್ರೀಹರಿಯ ನಿತ್ಯಸಂಬಂಧವುಳ್ಳ ಬ್ರಾಹ್ಮಣರ ಸೇವೆಯಿಂದ ಪುಮಾನ್=ಅಧಿಕಾರಿಯು ಅತಿವೇಲಂ=ಶೀಘ್ರವಾಗಿ ಆತ್ಮನಃ=ಪರಮಾತ್ಮನ ಪ್ರಸಾದತಃ=ಅನುಗ್ರಹದಿಂದ ಸ್ವತಃ ಸ್ವಯಂ=ವಸ್ತುತಃ ಸ್ವರೂಪಭೂತವಾದ ಅತ್ಯಂತಶಮಂ= ಕೇವಲ ಸುಖಾನುಭವರೂಪವಾದ ಮೋಕ್ಷವನ್ನು ಲಭೇತ=ಹೊಂದುವನೋ ತತಃ=ಅಂತಹ ಮೋಕ್ಷಸುಖದಿಂದ ಪರಂ=ಭಿನ್ನವಾದ ಸುಖಂ=ಸುಖವು ಅತ್ರ=ಸಂಸಾರದಲ್ಲಿ ಹವಿರ್ಭುಜಾಂ ಅಪಿ ಅಸ್ತಿ ಕಿಂ=ದೇವತೆಗಳಿಗಾದರೂ ಉಂಟೇ ? ಇಲ್ಲವೆಂದರ್ಥ. ಇಂಥ ಬ್ರಾಹ್ಮಣಕುಲವನ್ನು ಸೇವಿಸಿರಿ ಎಂದು ಅನ್ವಯ.

**ಭಾಗವತ ತಾತ್ಪರ್ಯ -**

ತತಃ ಎಂಬ ಶಬ್ದಾರ್ಥವನ್ನು ತಿಳಿಸುತ್ತ "ಹವಿರ್ಭುಜಾಂ" ಎಂಬ ಪದವನ್ನೂ ಪ್ರಕೃತಕ್ಕೆ ಸಂಗತವಾಗಿ ವ್ಯಾಖ್ಯಾನಿಸುವರು -

**ತಸ್ಮಾನ್ಮೋಕ್ಷಸುಖಾತ್ಪರಂ ಹವಿರ್ಭುಜಾಂ ದೇವಾನಾಮಪ್ಯತ್ರ ಸಂಸಾರೇಽಸ್ತಿ ಕಿಂ ?**

ಮೋಕ್ಷಸುಖಕ್ಕಿಂತ ಅಧಿಕವಾದ ಸುಖವು ಹವಿಸ್ಸನ್ನು ಭೋಗ ಮಾಡುವ ದೇವತೆಗಳಿಗೂ ಸಂಸಾರದಲ್ಲಿಯೇ ಇದೆಯೇ ? ಇಲ್ಲವೆಂದು ಭಾವ. ಅಲ್ಪಾಧಿಕಾರಿಗಳಿಗೆ ಮೋಕ್ಷಸುಖವೇ ಮುಖ್ಯಪ್ರಯೋಜನ. ಅದರಿಂದ ಸಂಪಾದಿಸಬೇಕಾದ ಬೇರೆ ಯಾವುದೂ ಇಲ್ಲವೆಂದು ಭಾವ. ।।೩೯।।

ಮುಂದೆ ಹೇಳುವ ಕಾರಣದಿಂದಲೂ ಬ್ರಾಹ್ಮಣರ ಸೇವೆ ಹರಿಪ್ರೀತಿಜನಕವೆಂದು ಹೇಳುವರು -

**ಅಶ್ನಾತ್ಯನಂತಃ ಖಲು ತತ್ತ್ವಕೋವಿದೈಃ**
**ಶ್ರದ್ಧಾಹುತಂ ಯನ್ಮುಖ ಇಜ್ಯನಾಮಭಿಃ ।**
**ನ ವೈ ತಥಾ ಚೇತನಯಾ ಬಹಿಷ್ಕೃತೇ**
**ಹುತಾಶನೇ ಪಾರಮಹಂಸ್ಯವರ್ಯಗುಃ ।।೪೦।।**

ತತ್ತ್ವಕೋವಿದೈಃ=ಭಗವತ್ತತ್ವವನ್ನರಿತ ಬ್ರಾಹ್ಮಣರಲ್ಲಿ ಹರಿಯ ವಿಶೇಷಸನ್ನಿಧಾನವಿದೆ ಎಂದು ತಿಳಿದವರಿಂದ ಯನ್ಮುಖೇ=ಯಾವ ಬ್ರಾಹ್ಮಣರ ಮುಖದಲ್ಲಿ ಶ್ರದ್ಧಾಹುತಂ=ಆಸ್ತಿಕ್ಯಬುದ್ಧಿಯಿಂದ ಕೊಡಲ್ಪಟ್ಟ ಅನ್ನಾದಿಗಳನ್ನು ಯಥಾ=ಹೇಗೆ ಪಾರಮಹಂಸ್ಯವರ್ಯಗುಃ=ಸನ್ಯಾಸಿಗಳಿಂದ ವಿಚಾರ ಮಾಡಲ್ಪಡುವ ವೇದವಾಕ್ಯಗಳಿಂದ ಪ್ರತಿಪಾದ್ಯನಾದ ಅನಂತಃ=ಶ್ರೀಹರಿಯು ಅಶ್ನಾತಿ=ಸ್ವೀಕರಿಸುವನೋ ಅದರಿಂದ ಅನಂತಫಲ ಕೊಡುವನೋ ತಥಾ=ಹಾಗೆ ಚೇತನಯಾ ಬಹಿಷ್ಕೃತೇ=ಜಡವಾದ ಹುತಾಶನೇ=ಅಗ್ನಿಯಲ್ಲಿ ಇಜ್ಯನಾಮಭಿಃ=ಪೂಜನೀಯರಾದ

ದೇವತೆಗಳ ಹೆಸರುಗಳಿಂದ ''ಇಂದ್ರಾಯ ಸ್ವಾಹಾ'' ಮುಂತಾದ ಮಂತ್ರಗಳಿಂದ ಶ್ರದ್ಧಾಹುತಂ=ಹೋಮ ಮಾಡಿದ ಹವಿಸ್ಸು ಮುಂತಾದದ್ದನ್ನು ನ ಅಶ್ನಾತಿ=ಸ್ವೀಕರಿಸಲಾರನು.

**ಭಾಗವತ ತಾತ್ಪರ್ಯ -**

**ಪಾರಮಹಂಸ್ಯವರ್ಯಾಃ ಗಾವೋ ಯಸ್ಯ ॥**

ಪಾರಮಹಂಸ್ಯವರ್ಯಗಾಃ ಎಂದರೆ - ಪರಮಹಂಸರಿಂದ ವಿಚಾರ ಮಾಡುವ ವೇದವಾಕ್ಯಗಳುಳ್ಳ ಎಂದರ್ಥ. ಶ್ರೀಹರಿಯನ್ನು ಪ್ರತಿಪಾದಿಸುವ ವೇದವಿಚಾರ ಮಾಡುವ ಬ್ರಾಹ್ಮಣರು ತತ್ರಾಪಿ ಪರಮಹಂಸರು ಉತ್ತಮ ಅಧಿಷ್ಠಾನರೆಂದು ಭಾವ. ॥೪೦॥

**ಅವತಾರಿಕೆ :-**

(ಯಾದ) ಕೇವಲ ಪರಮಹಂಸರಷ್ಟೇ ಉತ್ತಮರಲ್ಲ. ಕಿಂತು ಶ್ರೀಹರಿಧ್ಯಾನಪರರಾದ ಅಪರೋಕ್ಷಜ್ಞಾನಿಗಳು ಎಲ್ಲರೂ ಉತ್ತಮರೇ ಎಂದು ಹೇಳುವರು -

(ವಿಜ) ಅಗ್ನಿಗಿಂತ ಅಧಿಕವೆನ್ನಲು ಚೈತನ್ಯವೇ ಪ್ರಯೋಜಕ ಎಂದಾದರೆ, ಅವೈದಿಕರೂ ಸಹ ಆರಾಧನೆಗೆ ವಿಷಯರಾಗಬೇಕಾಗುವದು (ಚೇತನರಾದವರನ್ನೆಲ್ಲ ಆರಾಧಿಸಬೇಕಾಗುವುದು) ಎಂದು ಶಂಕಿಸಿ, ಹಾಗಲ್ಲ ಎಂದು ತಿಳಿಸಲು ಬ್ರಹ್ಮಕುಲದ ವೈಶಿಷ್ಟ್ಯ ತಿಳಿಸುವರು -

**ಯದ್ ಬ್ರಹ್ಮ ನಿತ್ಯಂ ವಿರಜಂ ಸನಾತನಂ**
**ಶ್ರದ್ಧಾತಪೋಮಂಗಲಮೌನಸಂಯಮೈಃ ।**
**ಸಮಾಧಿನಾ ಬಿಭ್ರದಿಹಾರ್ಥಸಿದ್ಧಯೇ**
**ಯತ್ರೇದಮಾದರ್ಶ ಇವಾವಭಾಸತೇ ॥೪೧॥**

(ಯಾರು) ಯತ್=ಯಾವ ಬ್ರಹ್ಮಕುಲವು ವಿರಜಂ=ಪಾರತಂತ್ರ್ಯಾದಿದೋಷರಹಿತನಾದ, ಸನಾತನಂ=ಸರ್ವದಾ ಏಕಪ್ರಕಾರನಾದ, ನಿತ್ಯಂ=ನಿತ್ಯನಾದ, ಬ್ರಹ್ಮ= ಗುಣಪೂರ್ಣನಾದ ಪರಮಾತ್ಮನನ್ನು ಶ್ರದ್ಧಾತಪೋ*ಮಂಗಲಮೌನಸಂಯಮೈಃ=ಆಸ್ತಿಕ್ಯಬುದ್ಧಿ ತಪಸ್ಸು ವಿಹಿತಾಚರಣ-ನಿಷಿದ್ಧವರ್ಜನ, ವ್ಯರ್ಥಮಾತನಾಡದಿರುವುದು ಇಂದ್ರಿಯನಿಗ್ರಹಗಳಿಂದ ಉಂಟಾದ ಸಮಾಧಿನಾ=ಅಪ್ರಯತ್ನಧ್ಯಾನದಿಂದ ಯತ್ರ=ಯಾವ ಸಮಾಧಿಯನ್ನು ಮಾಡಿದಾಗ ಇದಂ=ಬ್ರಹ್ಮನು ಆದರ್ಶೇ ಇವ=ಕನ್ನಡಿಯಲ್ಲಿ ಕಾಣುವಂತೆ ಚಿತ್ತೇ=ಮನಸ್ಸಿನಲ್ಲಿ ಅವಭಾಸತೇ=ಅಪರೋಕ್ಷವಾಗಿ ತಿಳಿಯುವನೋ ಅಂತಹ ಸಮಾಧಿಯಿಂದ ಅರ್ಥಸಿದ್ಧಯೇ=ಮೋಕ್ಷ ದೊರೆಯುವುದಕ್ಕಾಗಿ ಬಿಭ್ರತ್=ಧರಿಸುವುದೋ ತದ್ಬ್ರಹ್ಮಕುಲಂ ನಿಷೇವ್ಯತಾಂ=ಅಂತಹ ಬ್ರಹ್ಮಕುಲವು ಸೇವಿಸಲ್ಪಡಲಿ ಎಂದು ಅನ್ವಯ.

ಯನ್ನಿತ್ಯಸಂಬಂಧನಿಷೇವಯಾ=ಯಾವ ಶ್ರೀಹರಿಯ ನಿತ್ಯಸಂಬಂಧವುಳ್ಳ ಬ್ರಾಹ್ಮಣರ ಸೇವೆಯಿಂದ ಪುಮಾನ್=ಅಧಿಕಾರಿಯು ಅತಿವೇಲಂ=ಶೀಘ್ರವಾಗಿ ಆತ್ಮನಃ=ಪರಮಾತ್ಮನ ಪ್ರಸಾದತಃ=ಅನುಗ್ರಹದಿಂದ ಸ್ವತಃ ಸ್ವಯಂ=ವಸ್ತುತಃ ಸ್ವರೂಪಭೂತವಾದ ಅತ್ಯಂತಶಮಂ= ಕೇವಲ ಸುಖಾನುಭವರೂಪವಾದ ಮೋಕ್ಷವನ್ನು ಲಭೇತ=ಹೊಂದುವನೋ ತತಃ=ಅಂತಹ ಮೋಕ್ಷಸುಖದಿಂದ ಪರಂ=ಭಿನ್ನವಾದ ಸುಖಂ=ಸುಖವು ಅತ್ರ=ಸಂಸಾರದಲ್ಲಿ ಹವಿರ್ಭುಜಾಂ ಅಪಿ ಅಸ್ತಿ ಕಿಂ=ದೇವತೆಗಳಿಗಾದರೂ ಉಂಟೇ ? ಇಲ್ಲವೆಂದರ್ಥ. ಇಂಥ ಬ್ರಾಹ್ಮಣಕುಲವನ್ನು ಸೇವಿಸಿರಿ ಎಂದು ಅನ್ವಯ.

**ಭಾಗವತ ತಾತ್ಪರ್ಯ -**

ತತಃ ಎಂಬ ಶಬ್ದಾರ್ಥವನ್ನು ತಿಳಿಸುತ್ತ "ಹವಿರ್ಭುಜಾಂ" ಎಂಬ ಪದವನ್ನೂ ಪ್ರಕೃತಕ್ಕೆ ಸಂಗತವಾಗಿ ವ್ಯಾಖ್ಯಾನಿಸುವರು -

**ತಸ್ಮಾನ್ಮೋಕ್ಷಸುಖಾತ್ಪರಂ ಹವಿರ್ಭುಜಾಂ ದೇವಾನಾಮಪ್ಯತ್ರ ಸಂಸಾರೇಽಸ್ತಿ ಕಿಂ ?**

ಮೋಕ್ಷಸುಖಕ್ಕಿಂತ ಅಧಿಕವಾದ ಸುಖವು ಹವಿಸ್ಸನ್ನು ಭೋಗ ಮಾಡುವ ದೇವತೆಗಳಿಗೂ ಸಂಸಾರದಲ್ಲಿಯೇ ಇದೆಯೇ ? ಇಲ್ಲವೆಂದು ಭಾವ. ಅಲ್ಪಾಧಿಕಾರಿಗಳಿಗೆ ಮೋಕ್ಷಸುಖವೇ ಮುಖ್ಯಪ್ರಯೋಜನ. ಅದರಿಂದ ಸಂಪಾದಿಸಬೇಕಾದ ಬೇರೆ ಯಾವುದೂ ಇಲ್ಲವೆಂದು ಭಾವ. ||೩೯||

ಮುಂದೆ ಹೇಳುವ ಕಾರಣದಿಂದಲೂ ಬ್ರಾಹ್ಮಣರ ಸೇವೆ ಹರಿಪ್ರೀತಿಜನಕವೆಂದು ಹೇಳುವರು -

**ಅಶ್ನಾತ್ಯನಂತಃ ಖಲು ತತ್ವಕೋವಿದೈಃ**
**ಶ್ರದ್ಧಾಹುತಂ ಯನ್ಮುಖ ಇಜ್ಯನಾಮಭಿಃ ।**
**ನ ವೈ ತಥಾ ಚೇತನಯಾ ಬಹಿಷ್ಕೃತೇ**
**ಹುತಾಶನೇ ಪಾರಮಹಂಸ್ಯವರ್ಯಗುಃ ||೪೦||**

ತತ್ವಕೋವಿದೈಃ=ಭಗವತ್ತತ್ವವನ್ನರಿತ ಬ್ರಾಹ್ಮಣರಲ್ಲಿ ಹರಿಯ ವಿಶೇಷಸನ್ನಿಧಾನವಿದೆ ಎಂದು ತಿಳಿದವರಿಂದ ಯನ್ಮುಖೇ=ಯಾವ ಬ್ರಾಹ್ಮಣರ ಮುಖದಲ್ಲಿ ಶ್ರದ್ಧಾಹುತಂ=ಆಸ್ತಿಕ್ಯಬುದ್ಧಿಯಿಂದ ಕೊಡಲ್ಪಟ್ಟ ಅನ್ನಾದಿಗಳನ್ನು ಯಥಾ=ಹೇಗೆ ಪಾರಮಹಂಸ್ಯವರ್ಯಗುಃ=ಸನ್ಯಾಸಿಗಳಿಂದ ವಿಚಾರ ಮಾಡಲ್ಪಡುವ ವೇದವಾಕ್ಯಗಳಿಂದ ಪ್ರತಿಪಾದ್ಯನಾದ ಅನಂತಃ=ಶ್ರೀಹರಿಯು ಅಶ್ನಾತಿ=ಸ್ವೀಕರಿಸುವನೋ ಅದರಿಂದ ಅನಂತಫಲ ಕೊಡುವನೋ ತಥಾ=ಹಾಗೆ ಚೇತನಯಾ ಬಹಿಷ್ಕೃತೇ=ಜಡವಾದ ಹುತಾಶನೇ=ಅಗ್ನಿಯಲ್ಲಿ ಇಜ್ಯನಾಮಭಿಃ=ಪೂಜನೀಯರಾದ

ದೇವತೆಗಳ ಹೆಸರುಗಳಿಂದ ''ಇಂದ್ರಾಯ ಸ್ವಾಹಾ'' ಮುಂತಾದ ಮಂತ್ರಗಳಿಂದ ಶ್ರದ್ಧಾಹುತಂ=ಹೋಮ ಮಾಡಿದ ಹವಿಸ್ಸು ಮುಂತಾದದ್ದನ್ನು ನ ಅಶ್ನಾತಿ=ಸ್ವೀಕರಿಸಲಾರನು.

**ಭಾಗವತ ತಾತ್ಪರ್ಯ -**

**ಪಾರಮಹಂಸ್ಯವರ್ಯಾಃ ಗಾವೋ ಯಸ್ಯ ||**

ಪಾರಮಹಂಸ್ಯವರ್ಯಗಾಃ ಎಂದರೆ - ಪರಮಹಂಸರಿಂದ ವಿಚಾರ ಮಾಡುವ ವೇದವಾಕ್ಯಗಳುಳ್ಳ ಎಂದರ್ಥ. ಶ್ರೀಹರಿಯನ್ನು ಪ್ರತಿಪಾದಿಸುವ ವೇದವಿಚಾರ ಮಾಡುವ ಬ್ರಾಹ್ಮಣರು ತತ್ರಾಪಿ ಪರಮಹಂಸರು ಉತ್ತಮ ಅಧಿಷ್ಠಾನರೆಂದು ಭಾವ. ||೪೦||

**ಅವತಾರಿಕೆ :-**

(ಯಾದ) ಕೇವಲ ಪರಮಹಂಸರಷ್ಟೇ ಉತ್ತಮರಲ್ಲ. ಕಿಂತು ಶ್ರೀಹರಿಧ್ಯಾನಪರರಾದ ಅಪರೋಕ್ಷಜ್ಞಾನಿಗಳು ಎಲ್ಲರೂ ಉತ್ತಮರೇ ಎಂದು ಹೇಳುವರು -

(ವಿಜ) ಅಗ್ನಿಗಿಂತ ಅಧಿಕವೆನ್ನಲು ಚೈತನ್ಯವೇ ಪ್ರಯೋಜಕ ಎಂದಾದರೆ, ಅವೈದಿಕರೂ ಸಹ ಆರಾಧನೆಗೆ ವಿಷಯರಾಗಬೇಕಾಗುವದು (ಚೇತನರಾದವರನ್ನೆಲ್ಲ ಆರಾಧಿಸಬೇಕಾಗುವುದು) ಎಂದು ಶಂಕಿಸಿ, ಹಾಗಲ್ಲ ಎಂದು ತಿಳಿಸಲು ಬ್ರಹ್ಮಕುಲದ ವೈಶಿಷ್ಟ್ಯ ತಿಳಿಸುವರು -

**ಯದ್ ಬ್ರಹ್ಮ ನಿತ್ಯಂ ವಿರಜಂ ಸನಾತನಂ**
**ಶ್ರದ್ಧಾತಪೋಮಂಗಲಮೌನಸಂಯಮೈಃ |**
**ಸಮಾಧಿನಾ ಬಿಭ್ರದಿಹಾರ್ಥಸಿದ್ಧಯೇ**
**ಯತ್ರೇದಮಾದರ್ಶ ಇವಾವಭಾಸತೇ ||೪೧||**

(ಯಾರು) ಯತ್=ಯಾವ ಬ್ರಹ್ಮಕುಲವು ವಿರಜಂ=ಪಾರತಂತ್ರ್ಯಾದಿದೋಷರಹಿತನಾದ, ಸನಾತನಂ=ಸರ್ವದಾ ಏಕಪ್ರಕಾರನಾದ, ನಿತ್ಯಂ=ನಿತ್ಯನಾದ, ಬ್ರಹ್ಮ= ಗುಣಪೂರ್ಣನಾದ ಪರಮಾತ್ಮನನ್ನು ಶ್ರದ್ಧಾತಪೋ*ಮಂಗಲಮೌನಸಂಯಮೈಃ=ಆಸ್ತಿಕ್ಯಬುದ್ಧಿ, ತಪಸ್ಸು, ವಿಹಿತಾಚರಣ-ನಿಷಿದ್ಧವರ್ಜನ, ವ್ಯರ್ಥಮಾತನಾಡದಿರುವುದು ಇಂದ್ರಿಯನಿಗ್ರಹಗಳಿಂದ ಉಂಟಾದ ಸಮಾಧಿನಾ=ಅಪ್ರಯತ್ನಧ್ಯಾನದಿಂದ ಯತ್ರ=ಯಾವ ಸಮಾಧಿಯನ್ನು ಮಾಡಿದಾಗ ಇದಂ=ಬ್ರಹ್ಮನು ಆದರ್ಶೇ ಇವ=ಕನ್ನಡಿಯಲ್ಲಿ ಕಾಣುವಂತೆ ಚಿತ್ತೇ=ಮನಸ್ಸಿನಲ್ಲಿ ಅವಭಾಸತೇ=ಅಪರೋಕ್ಷವಾಗಿ ತಿಳಿಯುವನೋ ಅಂತಹ ಸಮಾಧಿಯಿಂದ ಅರ್ಥಸಿದ್ಧಯೇ=ಮೋಕ್ಷ ದೊರೆಯುವುದಕ್ಕಾಗಿ ಬಿಭ್ರತ್=ಧರಿಸುವುದೋ ತದ್ಬ್ರಹ್ಮಕುಲಂ ನಿಷೇವ್ಯತಾಂ=ಅಂತಹ ಬ್ರಹ್ಮಕುಲವು ಸೇವಿಸಲ್ಪಡಲಿ ಎಂದು ಅನ್ವಯ.

***ಪ್ರಶಸ್ತಾಚರಣಂ ನಿತ್ಯಮಪ್ರಶಸ್ತಸ್ಯ ವರ್ಜನಮ್ ।**
**ಏತದ್ಧಿ ಮಂಗಲಂ ಪ್ರೋಕ್ತಮೃಷಿಭಿಸ್ತತ್ವದರ್ಶಿಭಿಃ॥**

ಎಂಬ ಪ್ರಮಾಣಾನುಸಾರವಾಗಿ ಮಂಗಲ ಎಂದರೆ ವಿಹಿತಾಚರಣ-ನಿಷಿದ್ಧವರ್ಜನ ಎಂದರ್ಥ. ॥೪೧॥

ಈ ರೀತಿ ಬ್ರಾಹ್ಮಣರ ಪ್ರಶಂಸೆ ಮಾಡಿ, ಅವರ ಸೇವೆಯನ್ನು ಎಲ್ಲ ರಾಜರೂ ಮಾಡಬೇಕೆಂದು ಹೇಳಿ, ರಾಜನಾದ ನನಗೂ ಅವರ ಪಾದಸೇವೆ ಬದುಕಿರುವವರೆಗೂ ದೊರೆಯಲಿ ಎಂದು ಹೇಳುವನು -

**ತೇಷಾಮಹಂ ಪಾದಸರೋಜರೇಣು-**
**ಮಾರ್ಯಾ ವಹೇಯಾಧಿಕಿರೀಟ ಆಯುಃ ।**
**ಯಂ ನಿತ್ಯದಾ ಬಿಭ್ರತ ಆಶು ಪಾಪಂ**
**ನಶ್ಯತ್ಯಮುಂ ಸರ್ವಗುಣಾ ಭಜಂತಿ ॥೪೨॥**

ಹೇ ಆರ್ಯಾಃ=ಜ್ಞಾನಿಗಳೇ ! ಯಂ=ಯಾವ ಪಾದಧೂಳಿಯನ್ನು ನಿತ್ಯದಾ ಬಿಭತ್ರಃ= ಯಾವಾಗಲೂ ಧರಿಸುವವನ ಪಾಪಂ=ಪಾಪವು ಆಶು ನಶ್ಯತಿ=ಬೇಗನೇ ನಾಶವಾಗುವುದೋ ಆಯುಃ=ಜೀವ ಇರುವವರೆಗೆ ಬ್ರಾಹ್ಮಣರನ್ನು ಸೇವಿಸುವವನನ್ನು ಸರ್ವಗುಣಾಃ ಭಜಂತಿ= ಎಲ್ಲ ಗುಣಗಳೂ ಹೊಂದುವವು. ತೇಷಾಂ=ಅಂತಹ ಬ್ರಾಹ್ಮಣರ ಪಾದಸರೋಜರೇಣುಂ= ಪಾದಕಮಲಗಳ ಧೂಳಿಯನ್ನು ಅಧಿಕಿರೀಟಂ=ಕಿರೀಟದ ಮೇಲೇ ವಹೇಯ=ಧರಿಸುವೆನು.

**ಗುಣಾಲಯಂ ಶೀಲಧನಂ ಕೃತಜ್ಞಂ**
**ಶ್ರದ್ಧಾಶ್ರಯಂ ಸಂವೃಣತೇ ನು ಸಂಪದಃ ।**
**ಪ್ರಸೀದತಾಂ ಬ್ರಹ್ಮಕುಲಂ ಗವಾಂ ಚ**
**ಜನಾರ್ದನಃ ಸಾನುಚರಶ್ಚ ಮಹ್ಯಮ್ ॥೪೩॥**

ಗುಣಾಲಯಂ=ಗುಣವಂತನಾದವನನ್ನು, ಶೀಲಧನಂ=ಒಳ್ಳೆಯ ಸ್ವಭಾವದವನನ್ನೂ, ಕೃತಜ್ಞಂ=ಉಪಕಾರಸ್ಮರಣವುಳ್ಳವನನ್ನೂ, ಶ್ರದ್ಧಾಶ್ರಯಂ=ಶ್ರದ್ಧಾಳುವನ್ನು ಸಂಪದಃ=ಸಂಪತ್ತು ಸಂವೃಣತೇ=ತಾನಾಗಿಯೇ ಆಶ್ರಯನಾಗಿ ಸ್ವೀಕರಿಸುವವು. (ಸಂಪತ್ತು ಬರುವದೆಂದರ್ಥ.) ಮಹ್ಯಂ=ನನಗೆ ಬ್ರಹ್ಮಕುಲಂ=ಬ್ರಾಹ್ಮಣರ ಸಮೂಹವು, ಗವಾಂ ಚ ಕುಲಂ=ಗೋಗಳ ಸಮೂಹವು, ವೇದಗಳ ಸಮೂಹವೂ ಸಾನುಚರಃ=ಭೃತ್ಯಸಹಿತನಾದ ಜನಾರ್ದನಃ= ಶ್ರೀಹರಿಯೂ ಪ್ರಸೀದತಾಂ=ಸಂತುಷ್ಟರಾಗಲಿ. ॥೪೩॥

**ಮೈತ್ರೇಯ ಉವಾಚ -**

**ಇತಿ ಬ್ರುವಾಣಂ ನೃಪತಿಂ ಪಿತೃದೇವದ್ವಿಜಾತಯಃ ।**
**ತುಷ್ಟುವುರ್ಹೃಷ್ಟಮನಸಃ ಸಾಧುವಾದೇನ ಸಾಧವಃ ॥೪೪॥**

ಇತಿ=ಈ ರೀತಿಯಾಗಿ ಬ್ರುವಾಣಂ=ಹೇಳುತ್ತಿರುವ ನೃಪತಿಂ=ರಾಜನನ್ನು ಸಾಧುವಾದೇನ =ನಿರ್ದುಷ್ಟಮಾತುಗಳಿಂದ ಹೃಷ್ಟಮನಸಃ=ಸಂತೋಷಹೊಂದಿದ ಸಾಧವಃ=ಸಜ್ಜನರಾದ ಪಿತೃದೇವದ್ವಿಜಾತಯಃ=ಪಿತೃಗಳು ದೇವತೆಗಳು ಬ್ರಾಹ್ಮಣರು ತುಷ್ಟುವುಃ=ಸ್ತೋತ್ರ ಮಾಡಿದರು. ॥೪೪॥

**ಪುತ್ರೇಣ ಜಾಯತೇ ಲೋಕ ಇತಿ ಸತ್ಯವತೀ ಶ್ರುತಿಃ ।**
**ಬ್ರಹ್ಮದಂಡಹತಃ ಪಾಪೋ ಯದ್ ವೇನೋಽತ್ಯತರತ್ ತಮಃ ॥೪೫॥**

ಯತ್=ಯಾವ ಕಾರಣ ಪಾಪಃ ವೇನಃ=ಪಾಪಿಯಾದ ವೇನನು ಬ್ರಹ್ಮದಂಡಹತಃ= ಬ್ರಾಹ್ಮಣರ ಶಾಪದಿಂದ ಸುಡಲ್ಪಟ್ಟವನಾದರೂ ತಮಃ=ನಿತ್ಯನರಕ ಮತ್ತು ಅನಿತ್ಯನರಕಗಳನ್ನು ಅತ್ಯತರತ್=ಅತಿಕ್ರಮಿಸಿ ಸ್ವರ್ಗವನ್ನು ಹೊಂದಿದನೋ ತತ್=ಆದ್ದರಿಂದ ಶ್ರುತಿಃ=''ಪುತ್ರೇಣ ಜಾಯತೇ ಲೋಕಃ'' ಎಂಬ ಅರ್ಥವನ್ನು ತಿಳಿಸುವ ''ಶಶ್ವತ್ಪುತ್ರೇಣ ಪಿತರೋಽತ್ಯಾಯನ್ ಬಹುಲಂ ತಮಃ'' ಎಂಬ ಶ್ರುತಿಯು ಸತ್ಯವತೀ=ಯಥಾರ್ಥವಾಗಿದೆ.

**ಭಾಗವತ ತಾತ್ಪರ್ಯ -**

ಇಲ್ಲಿ ''ಭಗವನ್ನಿಂದಯಾ ವೇನೋ ದ್ವಿಜೈಃ ತಮಸಿ ಪಾತಿತಃ'' ಎಂದು ಹೇಳಿರುವುದರಿಂದ ವೇನನಿಗೆ ಸ್ವರ್ಗಪ್ರಾಪ್ತಿ ಹೇಳಿದ್ದು ಹೇಗೆ ? ಎಂದು ಶಂಕೆ ಬಂದರೆ, ''ತ್ರ್ಯಂಶೋ ವೇನಃ ಸಮುದ್ದಿಷ್ಟಃ'' ಎಂಬ ಪ್ರಮಾಣವನ್ನು ಹೇಳಿ (೧೪ನೇ ಅಧ್ಯಾಯದ ೪೮ನೇ ಶ್ಲೋಕದ ತಾತ್ಪರ್ಯದಲ್ಲಿ ಕೂರ್ಮಪುರಾಣವಚನವನ್ನು ಉದಾಹರಿಸಿ) ಹಿಂದೆಯೇ ಈ ಶಂಕೆಯನ್ನು ಪರಿಹರಿಸಿದ್ದರೂ ಮತ್ತೆ ಪ್ರಮಾಣಾಂತರದಿಂದ ಪರಿಹರಿಸುವರು -

**''ವೇನಸ್ಥೋ ರಾಜಸೋ ಜೀವಃ ಪೃಥುನಾ ಸ್ವರ್ಗತಿಂ ಗತಃ ।**
**ಸ್ವಯಂ ತು ತಮ ಏವಾಪ ಸಾತ್ವಿಕಃ ಪೃಥುತಾಮಗಾತ್'' ಇತಿ ಬ್ರಹ್ಮಾಂಡೇ ॥**

ವೇನನಲ್ಲಿರುವ ರಾಜಸಜೀವನು ಮಗನಾದ ಪೃಥುವಿನ ಸಾಮರ್ಥ್ಯದಿಂದ ಸ್ವರ್ಗವನ್ನು ಪಡೆದನು. ಸ್ವಯಂ ಅತಿತಾಮಸನಾದ ವೇನನೆಂಬುವ ದೈತ್ಯನು ನಿತ್ಯನರಕವನ್ನೇ ಹೊಂದಿದನು. ಅವನಲ್ಲಿರುವ ಸಾತ್ವಿಕಜೀವನು ಪೃಥುರಾಜನಾದನು. ತುಶಬ್ದವು ಚಶಬ್ದಾರ್ಥಕವಾಗಿದೆ. ಆದ್ದರಿಂದ ವೇನನಲ್ಲಿರುವ ತಾಮಸಜೀವನು ನಿಷಾದನಾದನು ಎಂದರ್ಥ. ಆದ್ದರಿಂದ ಪೂರ್ವಾಪರವಿರೋಧವಿಲ್ಲ.

**ವಿಜಯಧ್ವಜೀಯಪ್ರಕಾರ -**

ಬ್ರಹ್ಮದಂಡಹತಃ=ಬ್ರಾಹ್ಮಣರ ಶಾಪಗ್ರಸ್ತನಾದ ಪಾಪಃ ವೇನಃ=ವೇನನೆಂಬ ದೈತ್ಯನು ತಮಃ ಅತರತ್ ಇತಿ ಯತ್ ತತ್ ಅತಿ=ಪ್ರಶಂಸಾಮಾತ್ರಂ ನ ಸತ್ಯಂ=ತಮಸ್ಸನ್ನು ದಾಟಿದನು ಎಂದು ಹೇಳಿದುದು ಕೇವಲ ಪ್ರಂಶಸೆಯೇ ಹೊರತು ನಿಜವಲ್ಲ (ತೃ ಪ್ಲವನತರಣಯೋಃ - ಪ್ಲು ಗತೌ ಎಂದು ಧಾತುಗಳಿವೆ. ಅತಿ ಸ್ಯಾದಧಿಕೇಽಥೋರ್ಕ್ತೌ ಪ್ರಶಂಸಾಯಾಮತಿಕ್ರಮೇ ಎಂದು ಅಭಿಧಾನವಿದೆ.) ನಿಜವೇನೆಂದರೆ ಅತಿ=ಎಲ್ಲಕ್ಕಿಂತ ಅಧಿಕವಾದ ದುಃಖದಿಂದ ಕೂಡಿದ ತಮಃ ಅತರತ್=ತಮಸ್ಸನ್ನು ಹೊಂದಿದನು. ಯಃ ತಾಮಸಃ ವೇನಃ=ಎಲ್ಲರಿಗೂ ದುಃಖಕರನಾಗಿದ್ದ ಯಾವ ವೇನನಿದ್ದನೋ ಸಃ=ಅವನು ಅತ್ಯತರತ್=ಸುಖಭೋಗಲೋಕಗಳನ್ನು ಅತಿಕ್ರಮಿಸಿ ಅಂಧಂತಮಸ್ಸಿಗೆ ಹೋದನು.

ಬ್ರಹ್ಮದಂಡಹತಃ=ಬ್ರಾಹ್ಮಣರ ದಂಡ ಅಂದರೆ ರಾಜರಿಗೆ ಯೋಗ್ಯವಾದ ಶಿಕ್ಷೆ ಅದರಿಂದ ಹತಃ=ಹೋದಂತಹ ('ದಂಡೋಽಸ್ತ್ರೀ ಶಾಸನೇ ರಾಜ್ಞಾಂ' ಎಂದು ಯಾದವಕೋಶ. ಹನ ಹಿಂಸಾಗತ್ಯೋಃ ಎಂದು ಧಾತು.) ಪಾಪಃ=ರಜೋಗುಣಪಾನ ಮಾಡುವ ಅಥವಾ 'ಪಾತಿ ಇತಿ' ರಕ್ಷಿಸುವವನು ಪಾಪ ಎಂದರೆ ರಾಜಸನಾದ ವೇನನು ತಮಃ ಅತ್ಯತರತ್=ತಮಸ್ಸನ್ನು ಅತಿಕ್ರಮಿಸಿ ಸ್ವರ್ಗಕ್ಕೆ ಹೋದನು. ಯತ್ ಅತರತ್=ದಾಟಲಶಕ್ಯವಾದ ತಮೋಗುಣವನ್ನು ಅತಿಕ್ರಮಿಸಿ ಇರುವ ಸತ್ವವನ್ನು 'ವೇತ್ತಿ ಇತಿ ವೇನಃ' ಜ್ಞಾನಾಂಶನಾದ ವೇನನು ಅತಿ(ಅಧಿ ಕಾರ್ಥಂ)=ಭಕ್ತ್ಯಾದಿಗುಣವಿಸ್ತಾರವೆಂಬ ಪೃಥುತ್ವಂ ಅತರತ್=ಪೃಥುತ್ವವನ್ನು ಹೊಂದಿದನು. ಪಾಪಾನ್ ನ ಪಾತಿ ನ ರಕ್ಷತಿ ಇತಿ ಅಥವಾ ಪಿಬತಿ ಸಂಹರತಿ ಇತಿ ಪಾಪಃ=ಪಾಪದಿಂದ ರಕ್ಷಿಸದಿರುವ ಅಥವಾ ಪಾಪವನ್ನು ಸಂಹರಿಸುವುದರಿಂದ ಪಾಪವೆನಿಸುವ, ಬ್ರಹ್ಮ=ವೇದ ಅದರಲ್ಲಿ ಹೇಳಿದ ದಂಡ=ಹಿಂಸೆ ಯಾವ ಪಶುವಿಗೆ ಇದೆಯೋ ಅಂತಹ ಪಶು ಅದು ಬ್ರಹ್ಮದಂಡ. ತಂ ಬ್ರಹ್ಮದಂಡಂ=ಅಂತಹ ಪಶುವನ್ನು ಹಂತಿ, ನ ಅನ್ಯಂ ಅವಿಹಿತಂ ಇತಿ ಬ್ರಹ್ಮದಂಡಹತಃ ಎಂದರ್ಥ. (ದಂಡೋ ಹಿಂಸಾಯಾಂ ಲಗುಡೇ ಗುಡೇ ಇತಿ ಚ ।)

ಈ ರೀತಿ ಅರ್ಧಶ್ಲೋಕಕ್ಕೆ ಸಾತ್ವಿಕ-ರಾಜಸ-ತಾಮಸಜೀವರಿಗೆ ಮೂರುಗತಿ ಹೇಳುವಂತೆ ವ್ಯಾಖ್ಯಾನಿಸಿರುವರು ವಿಜಯಧ್ವಜತೀರ್ಥರು. ।।೪೫।।

ಶ್ರುತಿಯು ಯಥಾರ್ಥವಾಗಿದೆ ಎಂಬುದಕ್ಕೆ ಮತ್ತೊಂದು ಜ್ಞಾಪಕ ಹೇಳುವರು -

**ಹಿರಣ್ಯಕಶಿಪುಶ್ಚಾಪಿ ಭಗವನ್ನಿಂದಯಾ ತಮಃ ।**
**ವಿವಿಕ್ಷುರತ್ಯಗಾತ್ ಸೂನೋಃ ಪ್ರಹ್ಲಾದಸ್ಯಾನುಭಾವತಃ ।।೪೬।।**

ಭಗವನ್ನಿಂದಯಾ=ಪರಮಾತ್ಮನನ್ನು ನಿಂದಿಸಿದ್ದರಿಂದ ತಮಃ ವಿವಿಕ್ಷುಃ=ತಮಸ್ಸಿನಲ್ಲಿ ಬೀಳುವ ಸಂಭಾವನೆಗೆ ವಿಷಯನಾದ (ತಮಸ್ಸಿಗೆ ಬೀಳಲು ಸಂಭಾವಿತನಾಗಿದ್ದ) ಹಿರಣ್ಯಕಶಿಪುಃ ಅಪಿ= ಹಿರಣ್ಯಕಶಿಪುವೂ ಸಹ ಪ್ರಹ್ಲಾದಸ್ಯ ಅನುಭಾವತಃ=ಪ್ರಹ್ಲಾದನ (ವ್ರತ) ಸಾಮರ್ಥ್ಯದಿಂದ ಅತ್ಯಗಾತ್=ತಮಸ್ಸನ್ನು ಅತಿಕ್ರಮಿಸಿ ಊರ್ಧ್ವಲೋಕಕ್ಕೆ ಹೋದನು. ಈ ಕಾರಣದಿಂದಲೂ ಶ್ರುತಿಯು ಸತ್ಯವೆಂದು ಭಾವ. ।।೪೬।।

ಪ್ರೀತರಾದ ಎಲ್ಲರೂ ತಮ್ಮ ಮನೋಗತವನ್ನು ತಿಳಿಸುವರು -

**ವೀರವರ್ಯ ಪಿತಃ ಪೃಥ್ವ್ಯಾಃ ಸಮಾಃ ಸಂಜೀವ ಶಾಶ್ವತೀಃ ।**
**ಯಸ್ಯೇದೃಶ್ಯಚ್ಯುತೇ ಭಕ್ತಿಃ ಸರ್ವಲೋಕೈಕಭರ್ತರಿ ।।೪೭।।**

ಯಸ್ಯ=ಯಾವನಿಗೆ ಸರ್ವಲೋಕೈಕಭರ್ತರಿ=ಸಮಸ್ತಲೋಕಗಳಿಗೆ ಮುಖ್ಯನಿಯಾಮಕನಾದ ಅಚ್ಯುತೇ=ಶ್ರೀಹರಿಯಲ್ಲಿ ಭಕ್ತಿಃ ಈದೃಶೀ=ಈ ವಿಧವಾದ ಭಕ್ತಿಯಿದೆಯೋ ಅಂತಹ ಹೇ ವೀರವರ್ಯ=ವೀರಶ್ರೇಷ್ಠನೇ ! ಪೃಥ್ವ್ಯಾಃ ಪಿತಃ=ಹೇ ತಂದೆಯೇ ! (ಪೃಥ್ವೀಪಾಲಕನಾದ್ದರಿಂದ ತಂದೆ ಎಂದು ಸಂಬೋಧನ) ಶಾಶ್ವತೀಃ ಸಮಾಃ=ಬಹುಕಾಲದವರೆಗೆ ಸಂಜೀವ=ಚೆನ್ನಾಗಿ ಬಾಳು. ।।೪೭।।

**ಅಹೋ ವಯಂ ಹ್ಯದ್ಯ ಪವಿತ್ರಕೀರ್ತೇ ತ್ವಯೈವ ನಾಥೇನ ಮುಕುಂದನಾಥಾಃ ।**
**ಯದುತ್ತಮಶ್ಲೋಕತಮಸ್ಯ ವಿಷ್ಣೋಃ ಬ್ರಹ್ಮಣ್ಯದೇವಸ್ಯ ಕಥಾಂ ವ್ಯನಕ್ಷಿ ।।೪೮।।**

ಹೇ ಪವಿತ್ರಕೀರ್ತೇ=ಮಂಗಲಕರವಾದ ಕೀರ್ತಿಯುಳ್ಳ ಪೃಥುರಾಜನಲ್ಲಿರುವ ರಾಜರಾಜೇಶ್ವರರೂಪಿ ಹರಿಯೇ ! ತ್ವಯೈವ ನಾಥೇನ=ನೀನು ಸ್ವಾಮಿಯಾದುದರಿಂದಲೇ ವಯಂ=ನಾವು ಮುಕುಂದನಾಥಾಃ ಸ್ಮ=ಮುಕುಂದನೇ ಸ್ವಾಮಿಯಾಗಿ ಉಳ್ಳವರಾಗಿದ್ದೇವೆ. ಯತ್=ಯಾವ ಕಾರಣ ಉತ್ತಮಶ್ಲೋಕತಮಸ್ಯ ವಿಷ್ಣೋಃ=ಬ್ರಹ್ಮಾದಿಗಳಿಂದ ಸ್ತುತ್ಯರಾದವರಲ್ಲಿ ಉತ್ತಮನಾದ ಬ್ರಹ್ಮಣ್ಯದೇವಸ್ಯ=ಬ್ರಾಹ್ಮಣಪ್ರಿಯನಾದ, ಕ್ರೀಡಾದಿಗುಣವಿಶಿಷ್ಟನಾದ ಶ್ರೀವಿಷ್ಣುವಿನ ಕಥಾಂ ವ್ಯನಕ್ಷಿ=ಕಥೆಯನ್ನು ವ್ಯಕ್ತಮಾಡುವಿ.

**ಭಾಗವತ ತಾತ್ಪರ್ಯ -**

ಈ ಶ್ಲೋಕದಲ್ಲಿ ಪೃಥುವಿಗೆ ಮುಕುಂದನಿಂದ ಅಭೇದ ತೋರುವುದು. ಆ ಕಾರಣ ವಿವಕ್ಷಿತವಾದ ತಾತ್ಪರ್ಯವನ್ನು ಹೇಳುವರು -

"ಅಹೋ ವಯಮಿತ್ಯಾದಿ ತತ್ಸ್ಥಪರಮೇಶ್ವರಾಪೇಕ್ಷಯಾ । 'ಯೋ ಬ್ರಹ್ಮಕ್ಷತ್ರಮಾವಿಶ್ಯ' ಇತಿ ವಚನಾತ್ ।।"

ಈ ಅಧ್ಯಾಯದ ಕೊನೆಯ ಶ್ಲೋಕದಲ್ಲಿ 'ಯೋ ಬ್ರಹ್ಮ ಕ್ಷತ್ರಮಾವಿಶ್ಯ' ಯಾವ ವಿಷ್ಣುವು ಕ್ಷತ್ರಿಯನಾದ ಪೃಥುವಿನಲ್ಲಿ ಪ್ರವೇಶಿಸಿ ಬ್ರಾಹ್ಮಣಕುಲವನ್ನು (ಜಗತ್ತನ್ನು) ರಕ್ಷಿಸುವುದಾಗಿ ಹೇಳಿದೆಯಾದ್ದರಿಂದ ''ಅಹೋ ವಯಂ'' ಮುಂತಾಗಿ ಅಧ್ಯಾಯ ಮುಗಿಯುವವರೆಗೆ ಹೇಳಿದ್ದು ಪೃಥುವಿನಲ್ಲಿ ಆವಿಷ್ಟನಾದ ಶ್ರೀಹರಿಯ ವಿವಕ್ಷೆಯಿಂದಲೇ. ।।೪೮।।

**ನಾತ್ಯಂತಿಕಮಿದಂ ನಾಥ ತವ ಜೀವ್ಯಾನುಶಾಸನಮ್ ।**
**ಪ್ರಜಾನುರಾಗೋ ಮಹತಾಂ ಪ್ರಕೃತಿಃ ಕರುಣಾತ್ಮನಾಮ್ ।।೪೯।।**

ನಾಥ=ಸ್ವಾಮಿಯೇ ! ತವ=ನಿನ್ನ ಇದಂ=ಈ ಜೀವ್ಯಾನುಶಾಸನಮ್ ಜೀವ್ಯಾನಾಂ=ಭೃತ್ಯರಾದವರ ಅನುಶಾಸನಂ=ರಕ್ಷಿಸುವುದು ನ ಆತ್ಯಂತಿಕಂ=ಆಶ್ಚರ್ಯವೇನಲ್ಲ, ಕರುಣಾತ್ಮನಾಂ=ದಯಾಳುಗಳಾದ ಮಹತಾಂ=ದೊಡ್ಡವರಿಗೆ ಪ್ರಜಾನುರಾಗಃ ಪ್ರಕೃತಿಃ=ಪ್ರಜೆಗಳ ಮೇಲೆ ಪ್ರೀತಿ ಮಾಡುವುದು ಸ್ವಭಾವವೇ ಆಗಿದೆ. ।।೪೯।।

**ಅದ್ಯ ನಸ್ತಮಸಃ ಪಾರಸ್ತ್ವಯೋಪಾಸಾದಿತಃ ಪ್ರಭೋ ।**
**ಭ್ರಾಮ್ಯತಾಂ ನಷ್ಟದೃಷ್ಟೀನಾಂ ಕರ್ಮಭಿರ್ದೈವಸಂಜ್ಞಿತೈಃ ।।೫೦।।**

ಪ್ರಭೋ=ಸ್ವಾಮಿಯೇ ! ದೈವಸಂಜ್ಞಿತೈಃ ಕರ್ಮಭಿಃ=ದೈವವೆನಿಸುವ ಪುಣ್ಯಪಾಪಗಳಿಂದ ಭ್ರಾಮ್ಯತಾಂ=ತಿರುಗುತ್ತಿರುವ (ಒಂದೆಡೆ ನಿಲ್ಲದಿರುವ) ನಷ್ಟದೃಷ್ಟೀನಾಂ=ಜ್ಞಾನವಿಲ್ಲದ ನಃ=ನಮಗೆ ಅದ್ಯ=ಈಗ ತಮಸಃ ಪಾರಂ=ಅಜ್ಞಾನಪರಿಹಾರವು ತ್ವಯಾ ಉಪಾಸಾದಿತಃ ನಿನ್ನಿಂದ ಸಂಪಾದಿಸಲ್ಪಟ್ಟಿತು. ।।೫೦।।

**ನಮೋ ವಿವೃದ್ಧಸತ್ವಾಯ ಪುರುಷಾಯ ಮಹೀಯಸೇ ।**
**ಯೋ ಬ್ರಹ್ಮ ಕ್ಷತ್ರಮಾವಿಶ್ಯ ಬಿಭರ್ತೀದಂ ಸ್ವತೇಜಸಾ ।।೫೧।।**

।। ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ ಏಕವಿಂಶೋಽಧ್ಯಾಯಃ ।।

ಯಃ=ಯಾವ ವಿಷ್ಣುವು ಕ್ಷತ್ರಂ=ಕ್ಷತ್ರಿಯನಾದ ಪೃಥುವಿನಲ್ಲಿ ಆವಿಶ್ಯ=ಪ್ರವೇಶ ಮಾಡಿ ಇದಂ ಬ್ರಹ್ಮ=ಈ ಬ್ರಾಹ್ಮಣಕುಲವನ್ನು ಸ್ವತೇಜಸಾ=ತನ್ನ ಸಾಮರ್ಥ್ಯದಿಂದ ಬಿಭರ್ತಿ=ರಕ್ಷಿಸುವನೋ ತಸ್ಮೈ=ಅಂತಹ ಮಹೀಯಸೇ=ಮಹಾತ್ಮನಾದ ಪುರುಷಾಯ=ಪೂರ್ಣಗುಣನಾದ ವಿವೃದ್ಧಸತ್ವಾಯ=ಪರಿಪೂರ್ಣಜ್ಞಾನ-ಬಲವುಳ್ಳ ಶ್ರೀಹರಿಗೆ ನಮಃ=ನಮಸ್ಕಾರವು. ಈ ರೀತಿ ಸ್ತುತಿಸಿದರು ಎಂದು ಅನ್ವಯ. ।।೫೧।।

।। ಇಲ್ಲಿಗೆ ಇಪ್ಪತ್ತೊಂದನೇ ಅಧ್ಯಾಯವು ಮುಗಿಯಿತು ।।

# ಅಥ ದ್ವಾವಿಂಶೋಽಧ್ಯಾಯಃ

ಈ ಅಧ್ಯಾಯದಲ್ಲಿ ಪೃಥು-ಸನತ್ಕುಮಾರರ ಸಂವಾದದ ಮೂಲಕ ಎಲ್ಲರಿಂದಲೂ ಭಿನ್ನವಾದ, ಅನುಗ್ರಹವಿಲ್ಲದೇ ತಿಳಿಯಲಾಗದ ಭಗವತ್ತತ್ವವನ್ನು ನಿರೂಪಿಸುವರು. ಮೊದಲಿಗೆ ಸನತ್ಕುಮಾರರೇ ಮೊದಲಾದ ಮುನಿಗಳ ಆಗಮನವನ್ನು ಹೇಳುವರು -

**ಜನೇಷು ಪ್ರಗೃಣತ್ಸ್ವೇವಂ ಪೃಥುಂ ಪೃಥುಲವಿಕ್ರಮಮ್ ।**
**ತತ್ರೋಪಜಗ್ಮುರ್ಮುನಯಃ ಚತ್ವಾರಃ ಸೂರ್ಯವರ್ಚಸಃ ॥೧॥**

ಜನೇಷು=ಜನರು ಏವಂ=ಹಿಂದಿನ ಅಧ್ಯಾಯದಲ್ಲಿ ಹೇಳಿದ ಪ್ರಕಾರ ಪೃಥುಲವಿಕ್ರಮಂ =ಬಹುಪರಾಕ್ರಮಿಯಾದ ಪೃಥುಂ=ಪೃಥುರಾಜನನ್ನು ಪ್ರಗೃಣತ್ಸು ಸತ್ಸು=ಸ್ತೋತ್ರಮಾಡುತ್ತಿರಲು ತತ್ರ=ಅಲ್ಲಿಗೆ ಸೂರ್ಯವರ್ಚಸಃ=ಸೂರ್ಯನಂತೆ ಕಾಂತಿಯುಳ್ಳ ಚತ್ವಾರಃ=ನಾಲ್ಕುಜನ ಮುನಯಃ=ಋಷಿಗಳು ಉಪಜಗ್ಮುಃ=ಬಂದರು. ॥೧॥

**ತಾಂಸ್ತು ಸಿದ್ಧೇಶ್ವರಾನ್ ರಾಜಾ ವ್ಯೋಮ್ನೋಽವತರತೋಽರ್ಚಿಷಾ ।**
**ಲೋಕಾನಪಾಪಾನ್ ಕುರ್ವಂತ್ಯಾ ಸಾನುಗೋಽಚಷ್ಟ ಲಕ್ಷಿತಾನ್ ॥೨॥**

ರಾಜಾ=ಪೃಥುರಾಜನು ವ್ಯೋಮ್ನಃ=ಆಕಾಶದಿಂದ ಅವತರತಃ=ಇಳಿದು ಬರುತ್ತಿರುವ, ಲೋಕಾನ್=ಜನರನ್ನು ಅಪಾಪಾನ್ ಕುರ್ವಂತ್ಯಾ=ಪಾಪರಹಿತರನ್ನಾಗಿ ಮಾಡುವ ಅರ್ಚಿಷಾ=ಕಾಂತಿಯಿಂದ ಲಕ್ಷಿತಾನ್=ಸನಕಾದಿಗಳೆಂದು ತಿಳಿಸಲ್ಪಟ್ಟ ಸಿದ್ಧೇಶ್ವರಾನ್ ತಾನ್ ತು=ಸಿದ್ಧರಲ್ಲಿ ಶ್ರೇಷ್ಠರಾದ ಆ ಮುನಿಗಳನ್ನು ಸಾನುಗಃ=ಪರಿವಾರಸಹಿತನಾಗಿ ಅಚಷ್ಟ= ನೋಡಿದನು. ॥೨॥

**ತದ್ದರ್ಶನೋದ್ಗತಪ್ರಾಣಾನ್ ಪ್ರತ್ಯಾದಿತ್ಸುರಿವೋತ್ಥಿತಃ ।**
**ಸಸದಸ್ಯಾನುಗೋ ವೈನ್ಯ ಇಂದ್ರಿಯೇಶೋ ಗುಣಾನಿವ ॥೩॥**

ಇಂದ್ರಿಯೇಶಃ=ಜೀವನು ಗುಣಾನ್ ಇವ=ವಿಷಯಗಳನ್ನು ಕುರಿತು ಹೋಗುವಂತೆ (ಇಂದ್ರಿಯಗಳು ತನ್ನನ್ನು ಬಿಟ್ಟು ಶಬ್ದಾದಿವಿಷಯಗಳನ್ನು ಕುರಿತು ಹೊರಟಾಗ ಅವುಗಳನ್ನು ತಿರುಗಿ ತೆಗೆದುಕೊಳ್ಳಲು ಜೀವನು ಹೇಗೆ ಏಳುವನೋ ಹಾಗೆ ಎಂದರ್ಥ.) ವೈನ್ಯಃ=ಪೃಥುರಾಜನು ಸಸದಸ್ಯಾನುಗಃ=ಸಭಿಕರು-ಭೃತ್ಯರಿಂದಲೂ ಸಹಿತನಾಗಿ ತದ್ದರ್ಶನೋದ್ಗತ-ಪ್ರಾಣಾನ್=ಸನಕಾದಿಗಳ ದರ್ಶನದಿಂದ ಹೊರಹೊರಟ ಪ್ರಾಣಗಳನ್ನು ಪ್ರತ್ಯಾದಿತ್ಸುಃ ಇವ=ತಿರುಗಿಸ್ವೀಕರಿಸುವ ಇಚ್ಛೆಯಿಂದಲೋ ಏನೋ ಎನ್ನುವಂತೆ ಉತ್ಥಿತಃ=ಎದುರಾಗಿ ಎದ್ದುಹೋದನು.

> ಊರ್ಧ್ವಂ ಪ್ರಾಣಾ ಹ್ಯುತ್ಕ್ರಾಮಂತಿ ಯೂನಃ ಸ್ಥವಿರ ಆಗತೇ ।
> ಪ್ರತ್ಯುತ್ಥಾನಾಭಿವಾದಾಭ್ಯಾಂ ಪುನಸ್ತಾನ್ ಪ್ರತಿಪದ್ಯತೇ ॥

ಎಂದು ವಚನವಿದೆ. ''ತನಗಿಂತ ಹಿರಿಯರು ಬಂದಾಗ ಎದ್ದು ನಮಸ್ಕಾರಾದಿಗಳನ್ನು ಮಾಡದಿದ್ದರೆ ಶ್ರೀಘ್ರದಲ್ಲಿ ಪ್ರಾಣಗಳು ಹೋಗುವವು. ಅವುಗಳನ್ನು ಸ್ಥಿರಪಡಿಸುವುದಕ್ಕಾಗಿ ಎದ್ದು ನಮಸ್ಕಾರಾದಿಗಳನ್ನು ಮಾಡಿದಲ್ಲಿ ಪ್ರಾಣವನ್ನು ಮತ್ತೆ ಹೊಂದುವನು'' ಎಂದಿದೆ. ಈ ತತ್ತ್ವವನ್ನರಿತ ರಾಜನು ಸನಕಾದಿಗಳು ಬರುವಾಗ ಎದ್ದು ಗೌರವಿಸದನು ಎಂದರ್ಥ. ।।೩।।

> **ಗೌರವಾದ್ಯಂತ್ರಿತಃ ಸಭ್ಯಃ ಪ್ರಶ್ರಯಾನತಕಂಧರಃ ।**
> **ವಿಧಿವತ್ ಪೂಜಯಾಂಚಕ್ರೇ ಗೃಹೀತಾರ್ಘ್ಯಾರ್ಹಣಾಸನಾನ್ ।।೪।।**

ಗೌರವಾತ್=ಗೌರವದಿಂದ ಯಂತ್ರಿತಃ=ವಶನಾದ, ಸಭ್ಯಃ=ಸಭಿಕರುಳ್ಳ ಪ್ರಶ್ರಯಾನತ-ಕಂಧರಃ=ವಿನಯದಿಂದ ತಲೆಬಾಗಿಸಿದ ಪೃಥುವು ಗೃಹಿತಾರ್ಘ್ಯಾರ್ಹಣಾಸನಾನ್=ಅರ್ಘ್ಯ ಮುಂತಾದ ಪೂಜೆಯನ್ನು ಮತ್ತು ಆಸನವನ್ನು ಸ್ವೀರಿಸಿದ ಮುನಿಗಳನ್ನು ವಿಧಿವತ್=ವಿಧಿಯಲ್ಲಿ ಹೇಳಿದ ರೀತಿಯಿಂದ ಪೂಜಯಾಂಚಕ್ರೇ=ಪೂಜಿಸಿದನು. ।।೪।।

> **ತತ್ಪಾದಶೌಚಸಲಲೈರ್ಮಾರ್ಜಿತಾಲಕಬಂಧನಃ ।**
> **ತತ್ರ ಶೀಲವತಾಂ ವೃತ್ತಿಮಾಚರನ್ ಮಾನಯನ್ನಿವ ।।೫।।**

ತತ್ಪಾದಶೌಚಸಲಿಲೈಃ=ಅವರ ಪಾದಗಳನ್ನು ತೊಳೆದ ನೀರಿನಿಂದ ಮಾರ್ಜಿತಾಲಕ-ಬಂಧನಃ=ತೋಯಿಸಿದ ಕೇಶಪಾಶವುಳ್ಳವನಾಗಿ ತತ್ರ=ಅವರ ವಿಷಯದಲ್ಲಿ ಮಾನಯನ್ನಿವ=ಗೌರವಿಸುವವನಂತೆ ಶೀಲವತಾಂ ವೃತ್ತಿಂ ಆಚರನ್=ಗುಣವಂತರಂತೆ ನಡೆದುಕೊಂಡನು.

> **ಹಾಟಕಾಸನ ಆಸೀನಾನ್ ಸ್ವಧಿಷ್ಣ್ಯೇಷ್ವಿವ ಪಾವಕಾನ್ ।**
> **ಶ್ರದ್ಧಾಸಂಯಮಸಂಪನ್ನಃ ಪ್ರೀತಃ ಪ್ರಾಹ ಭವಾಗ್ರಜಾನ್ ।।೬।।**

ಸ್ವಧಿಷ್ಣ್ಯೇಷು=ತಮ್ಮ ಸ್ಥಾನಗಳಲ್ಲಿರುವ ಪಾವಕಾನ್ ಇವ=ಅಗ್ನಿಯಂತೆ ಹಾಟಕಾಸನೇ=ಚಿನ್ನದ ಆಸನದಲ್ಲಿ ಆಸೀನಾನ್=ಕುಳಿತಿರುವ, ಭವಾಗ್ರಜಾನ್=ರುದ್ರದೇವರಿಗಿಂತ ಮೊದಲು ಜನಿಸಿದ ಸನಕಾದಿಗಳನ್ನು ಕುರಿತು ಶ್ರದ್ಧಾಸಂಯಮಸಂಪನ್ನಃ=ಆಸ್ತಿಕ್ಯಬುದ್ಧಿ-ವಿನಯದಿಂದ ಕೂಡಿದವನಾಗಿ ಪ್ರೀತಃ ಪ್ರಾಹ=ಸಂತುಷ್ಟನಾಗಿ ಹೇಳಿದನು. ।।೬।।

೧೦ ಶ್ಲೋಕಗಳಿಂದ ಪ್ರೀತಿಪೂರ್ವಕಮಾತುಗಳನ್ನು ತಿಳಿಸುವರು -

**ಪೃಥುರುವಾಚ -**

**ಅಹೋ ಆಚರಿತಂ ಕೃಷ್ಣೇ ಮಂಗಲಂ ಮಂಗಲಾಯನಾಃ ।**
**ಯಸ್ಯ ವೋ ದರ್ಶನಂ ಹ್ಯಾಸೀದ್ ದುರ್ದರ್ಶಾನಾಂ ಕುಯೋಗಿನಃ ।।೭।।**

ಹೇ ಮಂಗಲಾಯನಾಃ=ವಿಹಿತಾಚರಣ,ನಿಷಿದ್ಧತ್ಯಾಗವೆಂಬ ಮಂಗಲಕ್ಕೆ ಆಶ್ರಯರಾದವರೇ ! ಕುಯೋಗಿನಃ=ಸಾಧನೆ ಮಾಡದವರಿಗೆ ದುರ್ದರ್ಶಾನಾಂ=ಕಾಣಲಾಗದ ವಃ=ನಿಮ್ಮ ದರ್ಶನಂ=ದರ್ಶನವು ಯಸ್ಯ=ಯಾವ ನನಗೆ ಆಸೀತ್=ಆಗಿದೆಯೋ ಅಂತಹ ನನ್ನಿಂದ ಕೃಷ್ಣೇ=ಶ್ರೀಕೃಷ್ಣನ ವಿಷಯದಲ್ಲಿ ಮಂಗಲಂ ಆಚರಿತಂ ಹಿ=ಶುಭಾಚರಣೆ ನಿಶ್ಚಯವಾಗಿ ಮಾಡಲ್ಪಟ್ಟಿದೆ. ಅಹೋ=ಆಶ್ಚರ್ಯ. ।।೭।।

**ಕಿಂ ತಸ್ಯ ದುರ್ಲಭತರಮಿಹಲೋಕೇ ಪರತ್ರ ಚ ।**
**ಯಸ್ಯ ವಿಪ್ರಾಃ ಪ್ರಸೀದಂತಿ ಶಿವೋ ವಿಷ್ಣುಶ್ಚ ಸಾನುಗಃ ।।೮।।**

ಯಸ್ಯ=ಯಾವನಿಗೆ ವಿಪ್ರಾಃ ಪ್ರಸೀದಂತಿ=ಬ್ರಾಹ್ಮಣರು ಪ್ರಸನ್ನರಾಗುವರೋ ತಸ್ಯ=ಅವನಿಗೆ ಶಿವಃ=ರುದ್ರದೇವರು ಚ=ಮತ್ತು ವಿಷ್ಣುಃ=ಶ್ರೀಹರಿಯೂ ಪ್ರಸಿದತಃ=ಪ್ರಸನ್ನರಾಗುವರು. ತಸ್ಯ=ಈ ಮೂವರ ಪ್ರೀತಿಪಾತ್ರನಾದವನಿಗೆ ಇಹಲೋಕೇ ಪರತ್ರ ಚ=ಈ ಲೋಕದಲ್ಲಿಯಾಗಲೀ ಪರಲೋಕದಲ್ಲಿಯಾಗಲೀ ದುರ್ಲಭಂ ಕಿಂ=ದೊರೆಯದಿರುವುದು ಯಾವುದು ? ಯಾವುದೂ ಇಲ್ಲ, ಎಲ್ಲವೂ ದೊರೆಯುವುದು ಎಂದರ್ಥ. ।।೮।।

ದುರ್ದರ್ಶರು ಎಂಬುದನ್ನು ಅಧಿಕ ದೃಷ್ಟಾಂತದಿಂದ ತಿಳಿಸುವರು -

**ನೈವ ಲಕ್ಷಯತೇ ಲೋಕೋ ಲೋಕಾನ್ ಪರ್ಯಟತೋಽಪಿ ಯಾನ್ ।**
**ಯಥಾ ಸರ್ವದೃಶಂ (ಸರ್ವದೃಶಃ) ಸರ್ವ ಆತ್ಮಾನಂ ಯೇಽಸ್ಯ ಹೇತವಃ।।೯।।**

ಯೇ=ಯಾರು ಅಸ್ಯ=ಈ ಜಗತ್ತಿಗೆ ಹೇತವಃ=ಕಾರಣರಾಗಿದ್ದಾರೋ ಆದ್ದರಿಂದಲೇ ಸರ್ವಜ್ಞರಾಗಿದ್ದಾರೋ ಅಂತಹ ಸರ್ವೇ=ಬ್ರಹ್ಮಾದಿದೇವತೆಗಳು ಸರ್ವದೃಶಂ=ಸರ್ವಸಾಕ್ಷಿಯಾದ ಆತ್ಮಾನಂ=ಅಂತರ್ಯಾಮಿ ಪರಮಾತ್ಮನನ್ನು ಯಥಾ=ಹೇಗೆ ಸಾಕಲ್ಯೇನ ತಿಳಿಯುವುದಿಲ್ಲವೋ

ತಥಾ=ಹಾಗೆಯೇ ಲೋಕಾನ್ ಪರ್ಯಟತೋऽಪಿ=ಲೋಕಸಂಚಾರ ಮಾಡಿದರೂ ಯಾನ್=ಯಾರನ್ನು (ತಾನ್=ಪ್ರಸಿದ್ಧರಾದ ಸನಕಾದಿಗಳನ್ನು) ಲೋಕಃ=ಜನರು ನೈವ ಲಕ್ಷಯತೇ=ತಿಳಿಯಲಾರರು.

ಸರ್ವದೃಶಃ ಎಂಬ ಪಾಠವಿದ್ದಲ್ಲಿ ಅದು ಸರ್ವೇ ಎಂಬುದಕ್ಕೆ ವಿಶೇಷಣ. ಸರ್ವದೃಶಃ=ಸರ್ವಜ್ಞರಾದ ಸರ್ವೇ=ಎಲ್ಲ ಬ್ರಹ್ಮಾದಿಗಳು ಎಂದರ್ಥ.

ಸರ್ವದೃಶಂ ಎಂಬ ಪಾಠವಿದ್ದಲ್ಲಿ ಅದು ಆತ್ಮಾನಂ ಎಂಬುದಕ್ಕೆ ವಿಶೇಷಣ. ಆಗ ಜಗತ್ಕಾರಣ ಎಂದು ಹೇಳುವ ಹೇತುಶಬ್ದವೇ ಬ್ರಹ್ಮಾದಿಗಳಿಗೆ ಸರ್ವಜ್ಞತ್ವವನ್ನು ತಿಳಿಸುತ್ತದೆ. ಆ ಮೂಲಕ, ಬ್ರಹ್ಮಾದಿಗಳಿಗೆ ನಾರಾಯಣನ ಜ್ಞಾನವೇ ಇಲ್ಲವೆಂದು ಹೇಳುವುದು ಸರಿಯಲ್ಲ. ಕಿಂತು ಶ್ರೀಹರಿಯು ತನ್ನನ್ನು ತಾನು ತಿಳಿದಂತೆ ಬ್ರಹ್ಮಾದಿಗಳು ಅವನನ್ನು ಪೂರ್ಣ ತಿಳಿಯಲಾರರು ಎಂದು ತಿಳಿಸುವುದು.

**ಭಾಗವತ ತಾತ್ಪರ್ಯ -**

ಮೇಲಿನ ಶ್ಲೋಕದಲ್ಲಿ ಬ್ರಹ್ಮಾದಿಗಳಿಗೆ ಸರ್ವಥಾ ಹರಿಯ ಜ್ಞಾನವೇ ಇಲ್ಲ ಎಂದು ಹೇಳಿದಂತೆ ತೋರುವುದು. ಆ ಕಾರಣ ವಿವಕ್ಷಿತವಾದ ತಾತ್ಪರ್ಯವನ್ನು ಪ್ರಮಾಣದಿಂದಲೇ ತಿಳಿಸುವರು -

**''ಸರ್ವಜ್ಞಾಶ್ಚ ವಿರಿಂಚಾದ್ಯಾ ನ ಜಾನೀಯುರ್ಹರಿಂ ಪರಮ್ ।**
**ಹೇತವೋ ಜಗತೋऽಪ್ಯಸ್ಯ ಯಥಾऽಸೌ ವೇದ ಕೇಶವಃ'' ಇತಿ ತಂತ್ರಸಾರೇ॥**

ಬ್ರಹ್ಮರುದ್ರಪ್ರವರ್ತಕನಾದ ಶ್ರೀಹರಿಯು ತನ್ನನ್ನು ತಾನು ತಿಳಿದಂತೆ, ಜಗತ್ತಿಗೆ ಕಾರಣರಾದ ಬ್ರಹ್ಮರುದ್ರಾದಿದೇವತೆಗಳು ಸರ್ವಜ್ಞರಾದರೂ ಅಂತರ್ಯಾಮಿಯಾಗಿ ತಮ್ಮಲ್ಲಿಯೇ ಇರುವ, ಪೂರ್ಣನಾದ ಶ್ರೀಹರಿಯನ್ನು ಸಂಪೂರ್ಣವಾಗಿ ತಿಳಿಯುವುದಿಲ್ಲ ಎಂದು ತಂತ್ರಸಾರದಲ್ಲಿ ಹೇಳಿದೆ. ॥೯॥

**ಅಧನಾ ಅಪಿ ತೇ ಧನ್ಯಾಃ ಸಾಧವೋ ಗೃಹಮೇಧಿನಃ ।**
**ಯದ್ಗೃಹಾ ಅರ್ಹವರ್ಯಾಂಬುತೃಣಭೂಮಿಸುವಾಗ್ಧರಾಃ ॥೧೦॥**

ಯದ್ಗೃಹಾಃ=ಯಾವ ಗೃಹಸ್ಥರ ಮನೆಗಳು ಅರ್ಹವರ್ಯಾಂಬುತೃಣಭೂಮಿ-ಸುವಾಗ್ಧರಾಃ=ಪೂಜ್ಯರಿಗೆ ಸ್ವೀಕರಿಸಲು ಯೋಗ್ಯವಾದ ನೀರು, ಹುಲ್ಲಿನ ಆಸನ (ಚಾಪೆ), ಭೂಮಿ, ಒಳ್ಳೆಯ ಮಾತುಗಳನ್ನು ಧರಿಸಿರುವವೋ ತೇ ಗೃಹಮೇಧಿನಃ=ಅಂತಹ ಗೃಹಸ್ಥಾಶ್ರಮಿಗಳು ಅಧನಾಃ ಅಪಿ=ನಿರ್ಧನಿಕರಾದರೂ ಸಹ ಧನ್ಯಾಃ=ಧನ್ಯರು. (ಪುಣ್ಯಶಾಲಿಗಳು ಎಂದರ್ಥ.) ॥೧೦॥

**ವ್ಯಾಲಾಲಯದ್ರುಮಾ ಹ್ಯೇತೇ ಸಂಸಿದ್ಧಾಖಿಲಸಂಪದಃ ।**
**ಯದ್ಗೃಹಾಸ್ತೀರ್ಥಪಾದೀಯಪಾದತೀರ್ಥವಿವರ್ಜಿತಾಃ ॥೧೧॥**

ಯದ್ಗೃಹಾಃ=ಯಾವ ಗೃಹಸ್ಥರ ಮನೆಗಳು ತೀರ್ಥಪಾದೀಯಪಾದತೀರ್ಥ-ವಿವರ್ಜಿತಾಃ=ವೈಷ್ಣವರ ಪಾದ ತೊಳೆದ ನೀರಿನ ಸಂಬಂಧವಿಲ್ಲದವುಗಳೋ ತೇ=ಅಂತಹ ಮನೆಗಳು ಸಂಸಿದ್ಧಾಖಿಲಸಂಪದಃ ಅಪಿ=ಎಲ್ಲವಿಧ ಸಂಪತ್ತುಗಳಿಂದ ಭರಿತವಾಗಿದ್ದರೂ ಸಹ ವ್ಯಾಲಾಲಯದ್ರುಮಾಃ ಹಿ=ದುಷ್ಟಸರ್ಪಗಳು ವಾಸಿಸುವ ಗಿಡದಂತೆ ತ್ಯಾಜ್ಯವೇ ಸರಿ.

**ಸ್ವಾಗತಂ ವೋ ದ್ವಿಜಶ್ರೇಷ್ಠಾ ಯದ್ವ್ರತಾನಿ ಮುಮುಕ್ಷವಃ ।**
**ಚರಂತಿ ಶ್ರದ್ಧಯಾ ಧೀರಾ ಬಾಲಾ ಏವ ಬೃಹಂತಿ ವೈ ॥೧೨॥**

ಯತ್=ಯಾವ ಕಾರಣ ಬಾಲಾಃ=ವಯಸ್ಸಿನಿಂದ ಬಾಲಕರೇ ನೀವು. ಆದರೆ ಧೀರಾಃ= ಜ್ಞಾನಿಗಳು, ಮುಮುಕ್ಷವಃ (ಸಂತಃ)=ಮೋಕ್ಷೇಚ್ಛುಗಳಾಗಿ ಶ್ರದ್ಧಯಾ=ಶ್ರದ್ಧೆಯಿಂದ ಬೃಹಂತಿ ವ್ರತಾನಿ ಚರಂತಿ=ಶ್ರೇಷ್ಠವಾದ ಪರಮಹಂಸಧರ್ಮವನ್ನು ಅನುಷ್ಠಾನ ಮಾಡುವಿರಿ. ತತ್= ಆದ್ದರಿಂದ ಹೇ ದ್ವಿಜಶ್ರೇಷ್ಠಾಃ=ಹೇ ಬ್ರಾಹ್ಮಣಶ್ರೇಷ್ಠರೇ ! ವಃ=ನಿಮಗೆ ಸ್ವಾಗತಂ=ಶುಭಾಗಮನ-ವಾಯಿತು.

ವಃ=ನಿಮ್ಮ ಯದ್ವ್ರತಾನಿ=ಯಾವ ವ್ರತಗಳು ಇವೆಯೋ ಅವು ಬೃಹಂತಿ=ಶ್ರೇಷ್ಠವಾದವು. ನೀವು ಧೀರಾಃ=ಜ್ಞಾನಿಗಳು, ಧೈರ್ಯಶೀಲರು. ಬಾಲಾಃ=ಪಂಡಿತರು. ಆದ್ದರಿಂದಲೇ ಮುಮುಕ್ಷವಃ ಚರಂತಿ=ಮೋಕ್ಷೇಚ್ಛೆಯಿಂದ ಸಂಚರಿಸುವಿರಿ. ತೇಷಾಂ ವಃ=ಅಂತಹ ನಿಮಗೆ ಸ್ವಾಗತಂ=ಸುಸ್ವಾಗತವು. ಹೀಗೂ ಅರ್ಥ.

ಬಾಲ್ಯೇನ ತಿಷ್ಠಾಸೇತ್ ಎಂಬಲ್ಲಿ ಯುಕ್ತಿನಿರ್ಣೀತಜ್ಞಾನಕ್ಕೆ ಬಾಲ್ಯ ಎಂದು ಕರೆದಿರುವರು. ಹಾಗಾಗಿ ಬಾಲಶಬ್ದಕ್ಕೆ ಪಂಡಿತರು ಎಂದು ಅರ್ಥ ಬರುವುದು. ॥೧೨॥

ಅಕುಶಲಸಂಭಾವನಾವಿಷಯರಾದ ನಮ್ಮಲ್ಲಿರುವ ಅಕುಶಲವನ್ನು ಕಂಡು ಅದನ್ನು ಪರಿಹರಿಸುವ ಇಚ್ಛೆಯಿಂದ ಬಂದಿರುವಿರೇನು ? ಎಂದು ಕೇಳುವನು -

**ಕಚ್ಚಿನ್ನಃ ಕುಶಲಂ ನಾಥಾ ಇಂದ್ರಿಯಾರ್ಥಾರ್ಥವೇದಿನಾಮ್ ।**
**ವ್ಯಸನಾವಾಪ ಏತಸ್ಮಿನ್ ಪತಿತಾನಾಂ ಸ್ವಕರ್ಮಭಿಃ ॥೧೩॥**

ಹೇ ನಾಥಾಃ=ಸ್ವಾಮಿಗಳಾದ ಸನಕಾದಿಗಳೇ ! ಸ್ವಕರ್ಮಭಿಃ=ನಾವು ಮಾಡಿದ ಕರ್ಮಗಳಿಂದ ವ್ಯಸನಾವಾಪೇ=ದುಃಖಭೂಮಿಯಾದ ಏತಸ್ಮಿನ್=ಈ ಸಂಸಾರದಲ್ಲಿ ಪತಿತಾನಾಂ=ಬಿದ್ದಿರುವ ಇಂದ್ರಿಯಾರ್ಥಾರ್ಥವೇದಿನಾಂ=ಇಂದ್ರಿಯಗಳಿಂದ ಭೋಗ

ಮಾಡುವುದಕ್ಕಾಗಿ ಧನ ಮೊದಲಾದವನ್ನು ತಿಳಿಯುವ ನಃ ಕುಶಲಂ ಕಚ್ಚಿತ್=ನಮಗೆ ಕುಶಲ ಉಂಟೇ ? ಯಾವ ಕುಶಲವೂ ಇಲ್ಲವೆಂದರ್ಥ.

ನಮಗೆ ಅಕುಶಲವು ಸಂಭಾವಿತವೇ ಆಗಿದೆ. ಸಂಸಾರದಲ್ಲಿ ತೊಳಲಾಡುವ ನಮಗೆ ಸುಖ ಎಲ್ಲಿಯದು ? ಎಂದು ಭಾವ. ।।೧೩।।

ಆಗಮಿಸಿರುವ ನಮ್ಮ ಕುಶಲಪ್ರಶ್ನೆ ಮಾಡದೇ ನಿನ್ನ ಕುಶಲಪ್ರಶ್ನೆಯನ್ನೇ ಮಾಡುವಿಯಲ್ಲ ? ಇದು ಹೇಗೆ ? ಎಂದರೆ, ನಿಮ್ಮಲ್ಲಿ ಅಕುಶಲದ ಪ್ರಸಕ್ತಿಯೇ ಇಲ್ಲವೆಂದು ಹೇಳುವನು -

**ಭವತ್ಸು ಕುಶಲಪ್ರಶ್ನ ಆತ್ಮಾರಾಮೇಷು ನೇಷ್ಯತೇ ।**
**ಕುಶಲಾಕುಶಲಾ ಯತ್ರ ನ ಸಂತಿ ಮತಿವೃತ್ತಯಃ ।।೧೪।।**

ಯತ್ರ=ಯಾರಲ್ಲಿ ಕುಶಲಾಕುಶಲಾಃ ಮತಿವೃತ್ತಯಃ=ಇದು ಕುಶಲ ಇದು ಅಕುಶಲ ಎಂಬ ಮನೋವಿಕಾರಗಳು ನ ಸಂತಿ=ಇರುವುದಿಲ್ಲವೋ ತೇಷು ಆತ್ಮಾರಾಮೇಷು=ಅಂತಹ ಶ್ರೀಹರಿಯಲ್ಲಿಯೇ ಸಂತೋಷಿಸುವ ಭವತ್ಸು=ನಿಮ್ಮ ವಿಷಯದಲ್ಲಿ ಕುಶಲಪ್ರಶ್ನಃ ನ ಇಷ್ಯತೇ=ಕುಶಲಪ್ರಶ್ನೆ ಮಾಡುವ ಅವಶ್ಯಕತೆ ಇಲ್ಲ.

ಸುಖ-ದುಃಖಗಳು ಬಂದಾಗ ನೀವು ಸಮಚಿತ್ತವೃತ್ತಿಯುಳ್ಳವರಾದ್ದರಿಂದ ನಿಮಗೆ ಅಕುಶಲಸಂಭಾವನೆಯೇ ಇಲ್ಲವೆಂದು ಭಾವ. ।।೧೪।।

**ತದಹಂ ಕೃತವಿಶ್ರಂಭಃ ಸುಹೃದ್ರೋऽತ್ರ ತಪಸ್ವಿನಾಮ್ ।**
**ಸಂಪೃಚ್ಛೇ ಭವ ಏತಸ್ಮಿನ್ ಕ್ಷೇಮಃ ಕೇನಾಂಜಸಾ ಭವೇತ್ ।।೧೫।।**

ತತ್=ಆತ್ಮಾರಾಮರಾದ್ದರಿಂದ ಕೃತವಿಶ್ರಂಭಃ=ನಿಮ್ಮಲ್ಲಿ ಕುಶಲವಿದೆ ಎಂಬ ವಿಶ್ವಾಸ ಮಾಡಿದವನಾಗಿ ತಪಸ್ವಿನಾಂ=ಯೋಗಿಗಳಿಗೆ ಸುಹೃದಃ=ಅನಿಮಿತ್ತ ಉಪಕಾರಕರಾದ ವಃ=ನಿಮ್ಮನ್ನು ಅತ್ರ=ಈ ವಿಷಯದಲ್ಲಿ ಏತಸ್ಮಿನ್ ಭವೇ=ಈ ಸಂಸಾರದಲ್ಲಿರುವ ಜನರಿಗೆ ಕೇನ=ಯಾವ ಸಾಧನದಿಂದ ಅಂಜಸಾ=ಚೆನ್ನಾಗಿ ಕ್ಷೇಮಃ ಭವೇತ್=ಆತ್ಯಂತಿಕ ದುಃಖನಿವೃತ್ತಿರೂಪ ಮೋಕ್ಷವಾಗುವುದು ? ಎಂದು ಸಂಪೃಚ್ಛೇ=ಆದರದಿಂದ ಕೇಳುವೆನು. ।।೧೫।।

ವಿಷ್ಣುವೇ ಮೋಕ್ಷ ಕೊಡುವವನು. ಆದ್ದರಿಂದ ಮೋಕ್ಷಸಾಧನ ಹೇಳುವವನು ಅವನೇ. ನಾವಲ್ಲವಲ್ಲ ? ಎಂದರೆ, ನಿಜ. ಆದರೆ ವಿಷ್ಣುವೇ ನಿಮ್ಮಲ್ಲಿ ಸನ್ನಿಹಿತನಾಗಿ ಉಪದೇಶಿಸುವನು ಎಂದು ಹೇಳುವನು -

**ವ್ಯಕ್ತಂ ಹ್ಯಾತ್ಮವತಾಮಾತ್ಮಾ ಭಗವಾನಾತ್ಮಭಾವನಃ ।**
**ಸ್ವಾನಾಮನುಗ್ರಹಾಯೇಮಾಂ ಸಿದ್ಧರೂಪೀ ಚರತ್ಯಜಃ ।।೧೬।।**

ಆತ್ಮವತಾಂ=ದೇಹಧಾರಣ ಮಾಡಿದವರಿಗೆ ಆತ್ಮಾ=ಅಂತರ್ಯಾಮಿಯಾದ ಅಜಃ= ಶ್ರೀಹರಿಯು ಆತ್ಮಭಾವನಃ=(ಆತ್ಮಾನಂ=ತನ್ನನ್ನು ಭಾವಯತಿ=ಪ್ರಕಾಶಗೊಳಿಸುವುದರಿಂದ) ತನ್ನ ಸ್ವರೂಪೋಪದೇಶಕನಾಗಿ ಇಮಾಂ=ಪೃಥ್ವಿಯನ್ನು ಸಿದ್ಧರೂಪೀ ಸನ್=ಜ್ಞಾನಿಗಳೇ ಪ್ರತಿಮೆಯಾಗಿ ಉಳ್ಳವನಾಗಿ (ಅಂದರೆ ಜ್ಞಾನಿಗಳಲ್ಲಿ ಸನ್ನಿಹಿತನಾಗಿ) ಸ್ವಾನಾಂ ಅನುಗ್ರಹಾಯ= ಭಕ್ತರ ಮೇಲೆ ಅನುಗ್ರಹ ಮಾಡುವುದಕ್ಕಾಗಿ ಚರತಿ=ಸಂಚರಿಸುವನು. ವ್ಯಕ್ತಂ=ನಿಶ್ಚಿತವೇ.

**ಭಾಗವತ ತಾತ್ಪರ್ಯ -**

ಈ ಶ್ಲೋಕದಲ್ಲಿ "ಅಜಃ ಸಿದ್ಧರೂಪೀ ಸಂಚರತಿ" ಎಂದು ಹೇಳಿದ್ದರಿಂದ ಸಿದ್ಧರಾದ ಸನಕಾದಿಗಳು ಶ್ರೀಹರಿಯಿಂದ ಅಭಿನ್ನರು ಎಂದು ಅಪಾರ್ಥ ಆಗುವುದು. ಆ ಕಾರಣ ವಿವಕ್ಷಿತವಾದ ತಾತ್ಪರ್ಯವನ್ನು ಪ್ರಮಾಣದಿಂದಲೇ ತಿಳಿಸುವರು -

**"ಹರೇಸ್ತು ಪ್ರತಿಮಾ ಪ್ರಾಜ್ಞಾಸ್ತತ್ರಸ್ಥಃ ಕೇಶವಃ ಸ್ವಯಮ್ ।**
**ದದಾತಿ ಜ್ಞಾನಮೀಶೇಶಃ ಪರಮಾತ್ಮಾ ಸ್ವಯಂ ವಿಭುಃ" ಇತಿ ಚ ॥**

ಪ್ರಾಜ್ಞರು (ಜ್ಞಾನಿಗಳು) ಶ್ರೀಹರಿಯ ವಿಶೇಷಸನ್ನಿಧಾನಪಾತ್ರರು. ಅವರಲ್ಲಿ ಕೇಶವನು ಸಾಕ್ಷಾತ್ತಾಗಿ ಇರುವನು. ಸ್ವಯಂ ಸಮರ್ಥನಾದ, ಬ್ರಹ್ಮಾದಿಗಳಿಗೆ ನಿಯಾಮಕನಾದ ಪರಮಾತ್ಮನು ಮೋಕ್ಷಸಾಧನವಾದ ಜ್ಞಾನವನ್ನು ಜ್ಞಾನಿಗಳಲ್ಲಿದ್ದು ಉಪದೇಶಿಸುವನು ಎಂದು ಭಾವ. ॥೧೬॥

**ಮೈತ್ರೇಯ ಉವಾಚ -**

**ಪೃಥೋಸ್ತತ್ಸೂಕ್ತಮಾಕರ್ಣ್ಯ ಸಾರಂ ಸುಷ್ಠು ಮಿತಂ ಮಧು ।**
**ಸ್ಮಯಮಾನ ಇವ ಪ್ರೀತ್ಯಾ ಕುಮಾರಃ ಪ್ರತ್ಯುವಾಚ ಹ ॥೧೭॥**

ಪೃಥೋಃ=ಪೃಥುರಾಜನ ಸಾರಂ=ಶ್ರೇಷ್ಠವಾದ, ಸುಷ್ಠು=ಅಪಶಬ್ದಗಳಿಲ್ಲದ, ಮಿತಂ= ಅಲ್ಪಾಕ್ಷರಗಳುಳ್ಳ ಮಧು=ಕಿವಿಗೆ ಇಂಪಾದ, ತತ್=ಆ ಸೂಕ್ತಂ=ಶೋಭನವಾದ ಮಾತನ್ನು ಆಕರ್ಣ್ಯ=ಕೇಳಿ ಸ್ಮಯಮಾನ ಇವ=ಮುಗುಳು ನಗುತ್ತಿರುವಂತೆ ಕಾಣುವ ಕುಮಾರಃ= ಸನತ್ಕುಮಾರರು ಪ್ರೀತ್ಯಾ=ಪ್ರೀತಿಯಿಂದ ಪ್ರತ್ಯುವಾಚ ಹ=ಉತ್ತರಿಸಿದರು. ॥೧೭॥

**ಸನತ್ಕುಮಾರ ಉವಾಚ -**

**ಸಾಧು ಪೃಷ್ಟಂ ಮಹಾರಾಜ ಸರ್ವಭೂತಹಿತಾತ್ಮನಾ ।**
**ಭವತಾ ವಿದುಷಾ ಚಾಪಿ ಸಾಧೂನಾಂ ಗತಿರೀದೃಶೀ ॥೧೮॥**

ಚ(ಯಸ್ಮಾತ್)=ಯಾವ ಕಾರಣ ಸಾಧೂನಾಂ=ಸಜ್ಜನರ ಗತಿಃ=ಸ್ಥಿತಿಯು ಈದೃಶೀ=ಪರೋಪಕಾರನಿರತವಾಗಿರುವದೋ ತಸ್ಮಾತ್=ಆದ್ದರಿಂದ ಸರ್ವಭೂತಹಿತಾತ್ಮನಾ= ಎಲ್ಲ ಜನರಿಗೆ ಹಿತವನ್ನುಂಟುಮಾಡುವ ಮನಸ್ಸುಳ್ಳ ವಿದುಷಾ ಅಪಿ ಭವತಾ=ಮೋಕ್ಷಸಾಧನವನ್ನು ತಿಳಿದವನಾದರೂ ನಿನ್ನಿಂದ ಯತ್ ಪೃಷ್ಟಂ=ಏನು ಪ್ರಶ್ನಿಸಲ್ಪಟ್ಟಿತ್ತೋ ತತ್ ಸಾಧು=ಅದು ಒಳ್ಳೆಯದೇ. ।।೧೮।।

ತಾವೂ ಕೂಡ ಪೃಥುಸಮಾಗಮವನ್ನು ಅಭಿನಂದಿಸುವರು -

**ಸಂಗಮಃ ಖಲು ಸಾಧೂನಾಮುಭಯೇಷಾಂ ಸುಸಂಮತಃ ।**
**ಸತ್ಸಂಭಾಷಣಸಂಪ್ರಶ್ನಃ ಸರ್ವೇಷಾಂ ವಿತನೋತಿ ಶಮ್ ।।೧೯।।**

ಸಾಧೂನಾಂ=ಸಜ್ಜನರಾದ ನಿಮ್ಮ ಸಂಗಮಃ=ಸಮಾವೇಶವು ಉಭಯೇಷಾಂ=ಹೇಳುವ ನಮಗೂ ಕೇಳುವ ನಿಮಗೂ ಸಂಮತಃ=ಸುಖಜನಕವಾಗಿದೆ. ಯತ್ಸಂಭಾಷಣಸಂಪ್ರಶ್ನಃ=ಯಾವ ನಿಮ್ಮ ಸಂಭಾಷಣಸಹಿತವಾದ ಸಂಪ್ರಶ್ನವು ಸರ್ವೇಷಾಂ ನಃ=ನಮ್ಮೆಲ್ಲರಿಗೂ ಶಂ ವಿತನೋತಿ=ಸುಖವನ್ನು ಭಗವನ್ನಿಷ್ಠೆಯನ್ನು ಕೊಡುವುದು.

'ಸತ್ಸಂಭಾಷಣಸಂಪ್ರಶ್ನಃ' ಎಂಬ ಪಾಠವಿದ್ದಲ್ಲಿ ಸಜ್ಜನರ ಒಳ್ಳೆಯ ಮಾತುಗಳಿಂದ ಕೂಡಿದ ಒಳ್ಳೆಯ ಪ್ರಶ್ನೆಯು ಎಂಥರ್ಥ. ।।೧೯।।

ಈ ರೀತಿ ಪೃಥುವಿನ ಸಮಾಗಮವನ್ನು ಪ್ರಶ್ನೆಯನ್ನು ಅಭಿನಂದಿಸಿ ಈಗ ಯಾವುದು ಮೋಕ್ಷಸಾಧನವೆಂದು ಪ್ರಸಿದ್ಧವಾಗಿದೆಯೋ (ಶ್ರೀಹರಿಕಥಾಶ್ರವಣದಲ್ಲಿ ರತಿ ಮುಂತಾದವು) ಅದೆಲ್ಲವೂ ನಿನಗೆ ಇದ್ದೇ ಇದೆ. ನಾವು ಕಲಿಸಬೇಕಾದದ್ದೇನೂ ಇಲ್ಲ ಎಂದು ಉತ್ತರ ಹೇಳುತ್ತ, ಅನುವಾದರೂಪವಾಗಿ ಮೊದಲಿನಿಂದ ಮೋಕ್ಷಸಾಧನ ಪರಂಪರೆಯನ್ನು ಉಪದೇಶಿಸುವರು-

**ಅಸ್ತ್ಯೇವ ರಾಜನ್ ಭವತೋ ಮಧುದ್ವಿಷಃ**
**ಪಾದಾರವಿಂದೇಽಸ್ಯ ಗುಣಾನುವಾದನೇ ।**
**ರತಿಃ ಸದಾ ಯಾ ವಿಧುನೋತಿ ನೈಷ್ಠಿಕೀ**
**ಕಾಮಂ ಕಷಾಯಂ ಮಲಮಂತರಾತ್ಮನಃ ।।೨೦।।**

ಹೇ ರಾಜನ್=ಎಲೋ ಪೃಥುವೇ ! ಯಾ=ಯಾವ ಭಗವದ್ರತಿಯು ಅಂತರಾತ್ಮನಃ= ಮನಸ್ಸಿನ ಮಲಂ=ಮುಖ್ಯದೋಷವಾದ ಕಾಮಂ=ದುಷ್ಟಕಾಮನೆಯನ್ನು, ಕಷಾಯಂ= ಶ್ರೀಹರಿಸ್ಮರಣೆರೂಪವಾದ ಪ್ರಾಯಶ್ಚಿತ್ತದಿಂದ ನಾಶವಾಗುವುದರಿಂದ ಕಷಾಯವೆನಿಸುವ ಪಾಪವನ್ನು ವಿಧುನೋತಿ=ಪರಿಹರಿಸುವುದೋ ಸಾ=ಅಂತಹ, ಮಧುದ್ವಿಷಃ=ಪರಮಾತ್ಮನ

ಪದಾರವಿಂದೇ=ಪಾದಕಮಲಗಳಲ್ಲಿ ಅಸ್ಯ ಗುಣಾನುವಾದನೇ=ಪರಮಾತ್ಮನ ಗುಣಗಳ ಅನುವಾದವನ್ನು ಪ್ರಶ್ನೆ ಮಾಡುವ ಮೂಲಕ ಪ್ರವರ್ತಿಸುವುದರಲ್ಲಿ ಅರ್ಥಾತ್ ಶ್ರವಣದಲ್ಲಿ ಸದಾ=ಯಾವಾಗಲೂ ನೈಷ್ಠಿಕೀ=ನಿಷ್ಠೆಯಿಂದ ಮಾಡಲ್ಪಡುವ ರತಿಃ=ಆಸಕ್ತಿಯು ಭವತಃ=ನಿನಗೆ ಅಸ್ತ್ಯೇವ=ಇದ್ದೇ ಇದೆ.

**ಭಾಗವತ ತಾತ್ಪರ್ಯ -**

ತಿಳಿಯದಿರುವುದರಿಂದ ಕಷಾಯ ಶಬ್ದಾರ್ಥ ಹೇಳುವರು -

**ಕಷಣೇನ ಗಚ್ಛತೀತಿ ಕಷಾಯಃ ಪಾಪಂ ತದುಭಯಮೇವ ಮಲಮ್ ||**

ಹರಿಸ್ಮರಣರೂಪವಾದ ಪ್ರಾಯಶ್ಚಿತ್ತದಿಂದ ಹೋಗುವುದಾದ್ದರಿಂದ ಕಷಾಯವೆಂದರೆ ಪಾಪ ಮತ್ತು ಕಾಮ (ವಿಷಯಾಭಿಲಾಷೆ). ಇವೆರಡು ಮನಸ್ಸಿನ ಮುಖ್ಯದೋಷಗಳು. ಇವೆರಡನ್ನೂ ಕಳೆಯುವ ಭಗವದ್ರತಿ ನಿನ್ನಲ್ಲಿ ಇದ್ದೇ ಇದೆ ಎಂದು ಭಾವ. ಯದ್ಯಪಿ ಪಾಪವು ಕಾಮಕ್ರೋಧಗಳಂತೆ ಮನೋವೃತ್ತಿರೂಪವಾದ ದೋಷವಲ್ಲ. ಆದರೂ ಕಾಮಾದಿಗಳ ದ್ವಾರಾ ಮನೋಜನ್ಯವಾದ್ದರಿಂದ ಮನೋಮಲವೆಂದಿದ್ದಾರೆ.

ಕ್ರೋಧಾದಿಗಳು ಅಪ್ರಧಾನವೆಂಬ ಅಭಿಪ್ರಾಯದಿಂದ, ಪ್ರಧಾನ ಇವೆರಡೇ ಎಂಬ ಅಭಿಪ್ರಾಯದಿಂದ ಏವಕಾರವಿಟ್ಟಿರುವರು. ||೨೦||

ಶ್ರವಣಾಸಕ್ತಿಯಿಂದ ಮನೋನೈರ್ಮಲ್ಯ ಬರುವುದೆಂದು ಹೇಳಿ, ಮನೋನೈರ್ಮಲ್ಯ-ದಿಂದ ವಿಷಯವೈರಾಗ್ಯ, ಅದರಿಂದ ಶ್ರೀಹರಿಯಲ್ಲಿ ದೃಢಭಕ್ತಿಯು ಉಂಟಾಗುವುದು ಎಂದು ಹೇಳುವರು -

**ಶಾಸ್ತ್ರೇಷ್ವಿಯಾನೇವ ಸುನಿಶ್ಚಿತೋ ನೃಣಾಂ**
**ಕ್ಷೇಮಸ್ಯ ಸಮ್ಯಗ್ವಿಮೃಶೇಷು ಹೇತುಃ |**
**ಅಸಂಗ ಆತ್ಮವ್ಯತಿರಿಕ್ತವಸ್ತುನಿ ದೃಢಾ**
**ರತಿರ್ಬ್ರಹ್ಮಣಿ ನಿರ್ಗುಣೇ ಚ ಯಾ ||೨೧||**

ಶಾಸ್ತ್ರೇಷು=ವೇದಾದಿಶಾಸ್ತ್ರಗಳು ಸಮ್ಯಗ್ವಿಮೃಶೇಷು=ಚೆನ್ನಾಗಿ ವಿಚಾರವುಳ್ಳವುಗಳಾಗಲು ಅಂದರೆ ಶಾಸ್ತ್ರಗಳನ್ನು ಚೆನ್ನಾಗಿ ವಿಚಾರ ಮಾಡಿದಾಗ, ಆತ್ಮವ್ಯತಿರಿಕ್ತವಸ್ತುನಿ ಅಸಂಗಃ= ಪರಮಾತ್ಮನಿಂದ ಭಿನ್ನವಾದ ಬ್ರಹ್ಮಾದಿತೃಣಪರ್ಯಂತ ಎಲ್ಲ ಪದಾರ್ಥಗಳಲ್ಲಿ ಹೇಯತಾಬುದ್ಧಿಯು (ಅಸಾರತಾಬುದ್ಧಿ ಅಂದರೆ ವೈರಾಗ್ಯವೆಂದರ್ಥ), ಚ=ಮತ್ತು ಆ ವೈರಾಗ್ಯದಿಂದ ಬ್ರಹ್ಮಣಿ=ಗುಣಪೂರ್ಣನಾದ ನಿರ್ಗುಣೇ=ಸತ್ವಾದಿಗುಣರಹಿತನಾದ

ಶ್ರೀಹರಿಯಲ್ಲಿ ಯಾ ದೃಢಾ ರತಿಃ=ಏನು ದೃಢವಾದ ಭಕ್ತಿ ಇದೆಯೋ ಇಯಾನೇವ=ಇವೆರಡೇ ಕ್ಷೇಮಸ್ಯ=ಮೋಕ್ಷಕ್ಕೆ ಸುನಿಶ್ಚಿತಃ ಹೇತುಃ=ಚೆನ್ನಾಗಿ ನಿಶ್ಚಯಿಸಲ್ಪಟ್ಟ ಮುಖ್ಯಸಾಧನಗಳು.

**ಭಾಗವತ ತಾತ್ಪರ್ಯ -**

ಶ್ರದ್ಧೆಯಿಂದ ಭಗವದ್ಧರ್ಮಾನುಷ್ಠಾನ ಮೊದಲಾದವೂ ಮೋಕ್ಷಸಾಧನವೆಂದು ಶಾಸ್ತ್ರದಲ್ಲಿ ಹೇಳಿರುವಾಗ 'ಇವೆರಡೇ ಸಾಧನಗಳು' ಎಂದು ಹೇಳಿದುದು ಹೇಗೆ ? ಎಂಬ ಶಂಕೆಯನ್ನು ಪ್ರಮಾಣದಿಂದಲೇ ಪರಿಹರಿಸುವರು -

**''ರತಿಃ ಪರಾತ್ಮನಿ ಹರಾವನ್ಯತ್ರಾರತಿರೇವ ಚ ।**
**ಪುಮರ್ಥಸಾಧನಂ ಜ್ಞೇಯಂ ನಾತೋಽನ್ಯನ್ಮುಖ್ಯಮಿಷ್ಯತೇ'' ಇತಿ ॥**

ಸರ್ವೋತ್ತಮನಾದ ಶ್ರೀಹರಿಯಲ್ಲಿ ಭಕ್ತಿ ಮತ್ತು ಇತರ ಜಗತ್ತಿನಲ್ಲಿ ವಿರಕ್ತಿ ಇವೆರಡೇ ಮೋಕ್ಷಸಾಧನವೆಂದು ತಿಳಿಯಬೇಕು. ಇವುಗಳಿಂದ ಭಿನ್ನವಾದವು ಮುಖ್ಯಸಾಧನಗಳಲ್ಲ. ಧರ್ಮಾಚರಣಾದಿಗಳು ಅಮುಖ್ಯಸಾಧನವೆಂದು ಭಾವ. ।।೨೧।।

ಧರ್ಮಾಚರಣೆ ಮುಂತಾದ ಉಳಿದೆಲ್ಲವು ಅಮುಖ್ಯವೇಕೆ ? ಎಂದರೆ, ಮುಖ್ಯಸಾಧನವೆಂದು ಹೇಳಿದ ವೈರಾಗ್ಯ-ಭಕ್ತಿಗಳ ದೃಢತೆಗೆ ಅವು ಕಾರಣವಾಗಿವೆ ಎಂಬ ಅಭಿಪ್ರಾಯದಿಂದ ಹೇಳುವರು -

**ತಚ್ಛ್ರದ್ಧಯಾ ಭಗವದ್ಧರ್ಮಚರ್ಯಯಾ**
**ಜಿಜ್ಞಾಸಯಾಽಧ್ಯಾತ್ಮಿಕಯೋಗನಿಷ್ಠಯಾ ।**
**ಯೋಗೇಶ್ವರೋಪಾಸನಯಾ ಚ ನಿತ್ಯಂ**
**ಪುಣ್ಯಶ್ರವಃಕಥಯಾ ಪುಣ್ಯಯಾ ಚ ।।೨೨।।**

ತಚ್ಛ್ರದ್ಧಯಾ=ಭಗವಂತನಲ್ಲಿ ಶ್ರದ್ಧೆಯಿಂದ, ಭಗವದ್ಧರ್ಮಚರ್ಯಯಾ=ವರ್ಣಾಶ್ರಮಗಳಿಗೆ ವಿಹಿತವಾದವುಗಳನ್ನು ಮಾಡುವುದರಿಂದ, ಜಿಜ್ಞಾಸಯಾ=ಬ್ರಹ್ಮವಿಚಾರದಿಂದ, ಆಧ್ಯಾತ್ಮಿಕಯೋಗನಿಷ್ಠಯಾ=ಅಷ್ಟಾಂಗಯೋಗದಿಂದ, ಯೋಗೇಶ್ವರೋಪಾಸನಯಾ= ಶ್ರೀಹರಿಯ ಉಪಾಸನೆಯಿಂದ, ಪುಣ್ಯಯಾ=ಪುಣ್ಯಜನಕವಾದ ಪುಣ್ಯಶ್ರವಃಕಥಯಾ ಚ= ಶ್ರೀಹರಿಯ ಕಥೆಯಿಂದಲೂ,।।೨೨।।

**ಅರ್ಥೇಂದ್ರಿಯಾರಾಮಗುಣೇಷ್ವತೃಷ್ಣಯಾ**
**ತತ್ಸಮ್ಮತಾನಾಮಪರಿಗ್ರಹೇಣ ಚ ।**
**ವಿವಿಕ್ತರುಚ್ಯಾ ಪರಿತೋಷ ಆತ್ಮನ್**
**ವಿನಾ ಹರೇರ್ಗುಣಪೀಯೂಷಪಾನಾತ್ ।।೨೩।।**

ಅರ್ಥೇಂದ್ರಿಯಾರಾಮಗುಣೇಷು=ದೇಹೇಂದ್ರಿಯಗಳ ಕ್ರೀಡಾವನದಂತಿರುವ ವಿಷಯಗಳಲ್ಲಿ ಅತೃಷ್ಣಯಾ=ಅಭಿಲಾಷೆಯಿಲ್ಲದಿರುವುದರಿಂದ ತತ್ಸಮ್ಮತಾನಾಂ ಅಪರಿಗ್ರಹೇಣ=ವಿಷಯಗಳು ಯಾರಿಗೆ ಬೇಕೋ ಅಂಥವರನ್ನು ಬಿಡುವುದರಿಂದ (ವಿಜ ಃ ತತ್ಸಮ್ಮತಾನಾಂ=ವಿಷಯಗಳಿಗೆ ಸಮ್ಮತರಾದ ಮಾಲೆ-ಗಂಧ-ಸ್ತ್ರೀ ಮುಂತಾದವನ್ನು ಸ್ವೀಕರಿಸದಿರುವುದರಿಂದ) ವಿವಿಕ್ತರುಚ್ಯಾ=ಏಕಾಂತದೇಶದಲ್ಲಿ ರುಚಿಯಿಂದ ಆತ್ಮನ್ (ಆತ್ಮನಿ)=ಪರಮಾತ್ಮನಲ್ಲಿ ಪರಿತೋಷಃ=ಸಾರತಾಜ್ಞಾನದಿಂದ ಸಂತೋಷ ಅಥವಾ ಆತ್ಮನಿ= ದೇಹಭೋಗವಿಷಯದಲ್ಲಿ ಪರಿತೋಷಃ=ಅಲಂಬುದ್ಧಿಯು ಹರೇಃ ಗುಣಪೀಯೂಷಪಾನಾತ್ ವಿನಾ=ಪರಮಾತ್ಮನ ಗುಣಗಳೆಂಬ ಅಮೃತಪಾನವಿಲ್ಲದಾಗ, ವಿವಿಕ್ತರುಚ್ಯಾ ಪರಿತೋಷಃ= ಏಕಾಂತದಿಂದ ಸಂತೋಷ. ಹರಿಕಥಾ ಇದ್ದರೆ ವಿವಿಕ್ತರುಚಿ ಬೇಕಿಲ್ಲ. ।।೨೩।।

**ಅಹಿಂಸಯಾ ಪಾರಮಹಂಸಚರ್ಯಯಾ**
**ಸ್ಮೃತ್ಯಾ ಮುಕುಂದಾಚರಿತಾಗ್ರ್ಯಸೀಧುನಾ ।**
**ಯಮೈರಕಾಮೈರ್ನಿಯಮೈರಭಿಧ್ಯಯಾ**
**ನಿರೀಹಯಾ ದ್ವಂದ್ವತಿತಿಕ್ಷಯಾ ಚ ।।೨೪।।**

ಅಹಿಂಸಯಾ=ವ್ಯರ್ಥಹಿಂಸೆಯನ್ನು ಬಿಡುವುದರಿಂದ, ಪಾರಮಹಂಸಚರ್ಯಯಾ= ಪರಮಹಂಸರ ಮುಖ್ಯಧರ್ಮವಾದ ಶಮ-ದಮಾದಿಗಳೇ ಪ್ರಧಾನವಾಗಿರುವ ನಡುವಳಿಕೆಯಿಂದ, ಮುಕುಂದಾಚರಿತಾಗ್ರ್ಯಸೀಧುನಾ=ಪರಮಾತ್ಮನ ಚರಿತೆಯೆಂಬ ಶ್ರೇಷ್ಠಅಮೃತವೇ ವಿಷಯವಾಗಿವುಳ್ಳ ಸ್ಮೃತ್ಯಾ=ಸ್ಮರಣದಿಂದ, ಯಮೈಃ=ಸತ್ಯ ಅಸ್ತೇಯ ಬ್ರಹ್ಮಚರ್ಯ ದಯಾ ಆರ್ಜವ ಕ್ಷಮಾ ಧೃತಿ ಮಿತಾಹಾರ ಶೌಚಗಳಿಂದ, ಅಕಾಮೈಃ= ಕಾಮನಾರಾಹಿತ್ಯದಿಂದ, ನಿಯಮೈಃ=ತಪ ಸಂತೋಷ ಆಸ್ತಿಕ್ಯ ದಾನ ಈಶ್ವರಪೂಜನ ಸಿದ್ಧಾಂತಶ್ರವಣ ಅಸತ್ಕಾರ್ಯಲಜ್ಜಾ ಜಪ ವ್ರತಗಳಿಂದ, ವಿಷ್ಣು-ವೈಷ್ಣವರನ್ನು ನಿಂದಿಸದಿರುವುದರಿಂದಲೂ ಅಭಿಧ್ಯಯಾ=ಅಖಂಡಸ್ಮರಣದಿಂದ, ನಿರೀಹಯಾ=ಅನಿಷಿದ್ಧ ವ್ಯಾಪಾರದಿಂದ, ದ್ವಂದ್ವತಿತಿಕ್ಷಯಾ ಚ=ಶೀತೋಷ್ಣಾದಿ ದ್ವಂದ್ವಸಹನೆಯಿಂದಲೂ.।।೨೪।।

**ಹರೇರ್ಮುಹುಸ್ತತ್ಪರಕರ್ಣಪೂರಯಾ**
**ಗುಣಾಭಿಧಾನೇನ ವಿಜೃಂಭಮಾಣಯಾ ।**
**ಭಕ್ತ್ಯಾ ಹ್ಯಸಂಗಃ ಸದಸತ್ಪರಾತ್ಮನಿ**
**ಸ್ಯಾನ್ನಿರ್ಗುಣೇ ಬ್ರಹ್ಮಣಿ ಚಾಂಜಸಾ ರತಿಃ ।।೨೫।।**

ಮುಹುಃ=ಪುನಃ ಪುನಃ (ಮತ್ತೆ ಮತ್ತೆ) ತತ್ಪರಕರ್ಣಪೂರಯಾ=ಹರಿಭಕ್ತರ ಕಿವಿಗಳಿಗೆ ಅಲಂಕಾರಗಳಾದ ಗುಣಾಭಿಧಾನೇನ=ಗುಣಗಳನ್ನು ಹೇಳುವುದರಿಂದ ವಿಜೃಂಭಮಾಣಯಾ=

ಅಭಿವೃದ್ಧವಾದ ಹರೇಃ ಭಕ್ತ್ಯಾ=ಶ್ರೀಹರಿಯಲ್ಲಿ ಭಕ್ತಿಯು ಮೂಡುವುದರಿಂದ ಅಂಜಸಾ ಅಸಂಗಃ=ವಿಷಯವೈರಾಗ್ಯವು ಸ್ಯಾತ್=ಉಂಟಾಗುವುದು. ಸದಸತ್ಪರಾತ್ಮನಿ=ಕಾರ್ಯಕಾರಣಾತ್ಮಕ ಮೂರ್ತಾಮೂರ್ತ ಪ್ರಪಂಚಕ್ಕಿಂತ ಉತ್ತಮನು ಅಂತರ್ಯಾಮಿಯೂ ಆದ ನಿರ್ಗುಣೇ=ಸತ್ವಾದಿಗುಣರಹಿತನಾದ ಬ್ರಹ್ಮಣಿ=ಆನಂದಾದಿಗುಣಪೂರ್ಣನಾದ ಶ್ರೀಹರಿಯಲ್ಲಿ ಅಂಜಸಾ ರತಿಃ ಸ್ಯಾತ್=ಚೆನ್ನಾಗಿ ಆಸಕ್ತಿಯು ಉಂಟಾಗುವುದು.

ಸದಸತ್ (ಪ್ರಥಮಾ ಸಪ್ತಮ್ಯರ್ಥೇ)=ಕಾರ್ಯಕಾರಣಾತ್ಮಕಪ್ರಪಂಚದಲ್ಲಿ ಅಸಂಗಃ= ವೈರಾಗ್ಯವು ಸ್ಯಾತ್=ಉಂಟಾಗುವುದು. ವಿಜಯಧ್ವಜೀಯಪ್ರಕಾರ ಹೀಗೂ ಅರ್ಥ. ॥೨೫॥

ದೃಢವಾದ ವೈರಾಗ್ಯ-ಭಕ್ತಿಗಳಿಂದಾದರೂ ಏನು ಪ್ರಯೋಜನ ? ಎಂದರೆ ಹೇಳುವರು-

**ಯದಾ ರತಿರ್ಬ್ರಹ್ಮಣಿ ನೈಷ್ಠಿಕೀ ಪುಮಾನ್**
**ಆಚಾರ್ಯವಾನ್ ಜ್ಞಾನವಿರಾಗರಂಹಸಾ ।**
**ದಹತ್ಯಬೀಜಂ ಹೃದಯಂ ಜೀವಕೋಶಂ**
**ಪಂಚಾತ್ಮಕಂ ಯೋನಿಮಿವೋತ್ಥಿತೋಽಗ್ನಿಃ ॥೨೬॥**

ಯದಾ=ಯಾವಾಗ ಬ್ರಹ್ಮಣಿ=ಪರಮಾತ್ಮನಲ್ಲಿ ನೈಷ್ಠಿಕೀ ರತಿಃ=ಸರ್ವೋತ್ಕೃಷ್ಟವಾದ ದೃಢವಾದ ಅಪರೋಕ್ಷಜ್ಞಾನವಾಗುವುದೋ ತದಾ=ಆಗ ಪುಮಾನ್=ಅಧಿಕಾರಿಯು ಆಚಾರ್ಯವಾನ್=ಗುರುಗಳ ಸಮಗ್ರ ಅನುಗ್ರಹವುಳ್ಳವನಾಗಿ ಜ್ಞಾನವಿರಾಗರಂಹಸಾ= ಅಪರೋಕ್ಷಜ್ಞಾನ, ಬಲವಾದ ವೈರಾಗ್ಯಗಳ ವೇಗದಿಂದ ಜೀವಕೋಶಂ=ಜೀವನಿಗೆ ಕೋಶದಂತಿರುವ (ವರೆ) ಅಂದರೆ ಆವರಕವಾದ ಪಂಚಾತ್ಮಕಂ=ಪಂಚಭೂತಾದ್ಯಾತ್ಮಕವಾದ ಲಿಂಗಶರೀರರೂಪವಾದ ಬಾಹ್ಯೋಪಾಧಿಯನ್ನು ಅ, ಬೀಜಂ ಹೃದಯಂ=ಸ್ವರೂಪೋಪಾಧಿ ಯನ್ನು ಬಿಟ್ಟು ಅಗ್ನಿಃ=ಮಥನದಿಂದುಂಟಾದ ಅಗ್ನಿಯು ಯೋನಿಂ ಇವ=ತನಗೆ ಅಧಿಷ್ಠಾನವಾದ ಅರಣಿಯನ್ನು ಸುಡುವಂತೆ ದಹತಿ=ಸುಡುವನು. (ಲಿಂಗಶರೀರ ನಾಶವಾಗುವುದೆಂದು ಭಾವ.)

**ಭಾಗವತ ತಾತ್ಪರ್ಯ -**

ಈ ಶ್ಲೋಕದಲ್ಲಿ ''ಜೀವಕೋಶಂ ದಹತಿ'' ಎಂಬುದಾಗಿ ಜೀವನಿಗೆ ಆವರಕವಾದ ಲಿಂಗಶರೀರ ನಾಶವಾಗುವುದು ಎಂದು ಹೇಳಿದಾಗ, ಅದರಲ್ಲಿರುವ ಜೀವನೂ ನಾಶವಾಗಬೇಕಲ್ಲ ? ಎಂದು ಶಂಕೆ ಬಂದರೆ, ಅದಕ್ಕೆ ಉತ್ತರರೂಪವಾಗಿ ''ಅಬೀಜಂ ಹೃದಯಂ'' ಎಂದು ಹೇಳಿದ್ದಾರೆ. ಇಲ್ಲಿ ಬೀಜ ಎಂದರೆ (ವ್ಯಂಜಕನಾದ್ದರಿಂದ) ಜೀವಸ್ವರೂಪ ಎಂದರ್ಥ. ಹೃದಯ ಎಂದರೆ ಉಪಾಧಿ ಎಂದರ್ಥ. ಅಂದಮೇಲೆ

ಜೀವಸ್ವರೂಪ ಭಿನ್ನ ಎಂದರ್ಥವಾಗುವುದು. ಇಷ್ಟರಿಂದ ಶಂಕೆ ಪರಿಹಾರವಾಗದು. ಏಕೆಂದರೆ ದೇವದತ್ತನಿಂದ ಭಿನ್ನವಾದ, ಅವನಿಗಿರುವ ಮನೆ ಸುಟ್ಟಾಗ ಒಳಗಿರುವ ದೇವದತ್ತನು ಸುಡುವುದು ಕಂಡಿದೆ. ಆದ್ದರಿಂದ ವಿವಕ್ಷಿತವಾದ ಅರ್ಥವನ್ನು ತಿಳಿಸುವರು-

**ಅಬೀಜಂ ಹೃದಯಂ ಬೀಜಹೃದಯಂ ವಿನಾ ।**

ಅಂದರೆ ಇಲ್ಲಿ ನಞಗೆ ಭಿನ್ನ ಎಂದರ್ಥವಲ್ಲ. ಕಿಂತು ವಿನಾಶಬ್ದಾರ್ಥವಾದ ವರ್ಜನ ಎಂದರ್ಥ. ಆದ್ದರಿಂದ "ಅಬೀಜಂ ಹೃದಯಂ" ಎಂದರೆ ಜೀವಸ್ವರೂಪವಾದ ಉಪಾಧಿಯನ್ನು ಬಿಟ್ಟು ಎಂದರ್ಥ. ಅಪರೋಕ್ಷಜ್ಞಾನದಿಂದ ಬಾಹ್ಯ ಉಪಾಧಿಯಾದ ಲಿಂಗಶರೀರವು ನಾಶವಾಗುವುದು. ಹೊರತು ಸ್ವರೂಪ ಉಪಾಧಿಯು ನಾಶವಾಗುವುದಲ್ಲ. ಕಾರಣ ಜೀವನಾಶವಾಗಲಾರದು ಎಂದು ಭಾವ.

ಜೀವನಿಗೆ ಎರಡು ಉಪಾಧಿಗಳು. ಅದರಲ್ಲಿ ಒಂದಕ್ಕೆ ನಾಶ ಇದೆ. ಇನ್ನೊಂದಕ್ಕೆ ನಾಶ ಇಲ್ಲ ಎನ್ನುವುದಕ್ಕೆ ಪ್ರಮಾಣ ಕೊಡುವರು -

**ಜೀವೋಪಾಧಿರ್ದ್ವಿಧಾ ಪ್ರೋಕ್ತಃ ಸ್ವರೂಪಂ ಬಾಹ್ಯಮೇವ ಚ ।**
**ಬಾಹ್ಯೋಪಾಧಿರ್ಲಯಂ ಯಾತಿ ಮುಕ್ತಾವನ್ಯಸ್ಯ ತು ಸ್ಥಿತಿಃ ॥**

ಜೀವನಿಗೆ ಪ್ರತಿಬಿಂಬತ್ವಸಂಪಾದಕವಾದ ಉಪಾಧಿಯು ಸ್ವರೂಪ, ಬಾಹ್ಯ ಎಂದು ಎರಡುವಿಧವಾಗಿದೆ. ಲಿಂಗಶರೀರರೂಪವಾದ ಬಾಹ್ಯ ಉಪಾಧಿಯು ನಾಶವಾಗುವುದು. ಹಠವೆನಿಸುವ ಯೋಗ್ಯತಾರೂಪವಾದ ಸ್ವರೂಪೋಪಾಧಿಯು ಮುಕ್ತಿಯಲ್ಲಿಯೂ ಉಳಿಯುವುದು ಎಂದು ಭಾವ.

ಸ್ವರೂಪ ಉಪಾಧಿಗೂ ನಾಶ ಹೇಳಿದರೆ ಬಾಧಕ ಹೇಳುವರು -

**ಸರ್ವೋಪಾಧಿವಿನಾಶೇ ಹಿ ಪ್ರತಿಬಿಂಬಃ ಕಥಂ ಭವೇತ್ ।**
**ಕಥಂ ಚಾತ್ಮವಿನಾಶಾಯ ಪ್ರಯತ್ನಃ ಸೇತ್ಸ್ಯತಿ ಕ್ವಚಿತ್ ।**
**ಅಪುಮರ್ಥತಾ ಚ ಮುಕ್ತೇಃ ಸ್ಯಾದಭಾವಾತ್ಪುಂಸ ಏವ ತು ।**
**ಜ್ಞಾನಜ್ಞೇಯಾದ್ಯಭಾವಾಚ್ಚ ಸರ್ವಥಾ ನೋಪಪದ್ಯತೇ ।**
**ತಸ್ಮಾದೇತನ್ಮತಂ ಯೇಷಾಂ ತಮೋನಿಷ್ಠಾ ಹಿ ತೇ ಮತಾಃ ॥ ಇತಿ ಸ್ಕಾಂದೇ ॥**

ಎಲ್ಲ ಉಪಾಧಿಗಳೂ (ಅಂದರೆ ಬಾಹ್ಯೋಪಾಧಿಯಂತೆ ಸ್ವರೂಪ ಉಪಾಧಿಯೂ) ನಾಶವಾಗುವುದಾದರೆ ಪ್ರತಿಬಿಂಬನಾದ ಜೀವನು ಹೇಗೆ ಇರಲು ಸಾಧ್ಯ ? ಅವನಿಗೂ ನಾಶ ಬರಬೇಕಾಗುವುದು. ಹಾಗೆ ಜೀವನು ನಾಶವಾಗುವುದಾದರೆ, ಜೀವನ ವಿನಾಶಕ್ಕೆ

ಪ್ರಯತ್ನವನ್ನು ಯಾರೂ ತಾನೇ ಎಲ್ಲಿಯಾದರೂ ಮಾಡಿಯಾರು ? ಯಾರೂ ಮಾಡಲಾರರು.

ಮುಕ್ತಿಯು ಪುರುಷಾರ್ಥವಾಗದೇ ಹೋಗಬೇಕಾಗುವುದು. ಕಾರಣ ಪ್ರತಿಬಿಂಬನಾದ ಜೀವನೇ ಇಲ್ಲದಂತಾಗುವುದರಿಂದ, ಸುಖಭೋಕ್ತೃವಾದ ಜೀವನೇ ಇಲ್ಲವಾದರೆ ಸುಖಾನುಭವ ಹಾಗೂ ಭೋಗ್ಯಪದಾರ್ಥಗಳೂ ಇಲ್ಲವೆಂದಾಗಬೇಕಾಗುವುದರಿಂದ ಮುಕ್ತಿಗೆ ಪುರುಷಾರ್ಥತ್ವವು ಸರ್ವಥಾ ಕೂಡದೇ ಹೋಗಬೇಕಾಗುವುದು. ಮುಕ್ತಿಯಲ್ಲಿ ಸುಖಭೋಗಾದಿಗಳು ಯಾವುದೂ ಇಲ್ಲವೆಂದು ಹೇಳುವವರು ತಮೋಯೋಗ್ಯರು ಎಂದು ಸ್ಕಾಂದಪುರಾಣದಲ್ಲಿದೆ. ।।೨೬।।

ಬಾಹ್ಯೋಪಾಧಿಯಂತೆ ಸ್ವರೂಪೋಪಾಧಿಯೂ ನಾಶವಾಗುವುದು ಎಂದರೆ ಅನಿಷ್ಟ ಹೇಳುವರು ಮೂಲದಲ್ಲಿ -

**ದಗ್ಧಾಶಯೋ ಮುಕ್ತಸಮಸ್ತತದ್ಗುಣೋ**
**ನೈವಾತ್ಮನೋ ಬಹಿರಂತರ್ವಿಚಷ್ಟೇ ।**
**ಪರಾತ್ಮನೋರ್ಯದ್ ವ್ಯವಧಾನಂ ಪುರಸ್ತಾತ್**
**ಸ್ವಪ್ನೇ ಯಥಾಽಪುರುಷಸ್ತದ್ವಿನಾಶೇ** ।।೨೭।।

ಯದಿ ದಗ್ಧಾಶಯಃ=ಒಂದುವೇಳೆ ಅಪರೋಕ್ಷಜ್ಞಾನದಿಂದ ಸ್ವರೂಪೋಪಾಧಿ ನಾಶವಾದರೆ ಮುಕ್ತಸಮಸ್ತತದ್ಗುಣಃ=ತನ್ನ ಎಲ್ಲ ಗುಣಗಳನ್ನು ಕಳೆದುಕೊಳ್ಳುವನು (ನಷ್ಟಗುಣವುಳ್ಳವನಾಗುವನು) ಅಂದರೆ ಜೀವಸ್ವರೂಪ ನಾಶವಾದರೆ ಅವನ ಜ್ಞಾನಾದಿಧರ್ಮಗಳೂ ನಾಶವಾಗುವವು ಎಂದು ಭಾವ.

ಆತ್ಮನಃ=ತನ್ನ ಅಂತಃ=ಒಳಗಿರುವ ಸುಖಾದಿಗಳನ್ನು ಬಹಿಃ=ಹೊರಗಿರುವ ರೂಪಾದಿಗಳನ್ನು ನೈವ ವಿಚಷ್ಟೇ=ತಿಳಿಯಲಾರನು. ವಿಷಯಭೋಗವಾಗಲೀ ಸುಖಾನುಭವವಾಗಲೀ ಇಲ್ಲದೇ ಹೋಗಬೇಕಾಗುವುದು ಎಂದು ಭಾವ. ಪರಾತ್ಮನೋಃ=(ಪರ)ಪರಮಾತ್ಮ (ಆತ್ಮಾ)ಜೀವ ಇವರ ಮಧ್ಯದಲ್ಲಿ ಯದ್=ಯಾವಾಗ ಪುರಸ್ತಾತ್=ಮುಕ್ತಿಯಂತೆ ಮೊದಲು ವ್ಯವಧಾನಂ= ಪರದೆ ಇದ್ದಿತೋ (ಅಪರೋಕ್ಷಜ್ಞಾನವಾಗದ ಸಂಸಾರಾವಸ್ಥೆಯಲ್ಲಿ ) ತದಾ=ಆಗ ಸ್ವಪ್ನೇ ಯಥಾ=ಕನಸಿನಲ್ಲಿ ಹೇಗೆ ಅಲ್ಪ ಅಸ್ಥಿರ ವಿಷಯಭೋಗಾದಿಗಳು ಇರುವವೋ ಹಾಗೆ ಅಲ್ಪ ಅಸ್ಥಿರ ವಿಷಯಭೋಗಾದಿಗಳಾದರೂ ಇರುವವು. ತದ್ವಿನಾಶೇ= ಜೀವನ ಸ್ವರೂಪವಾದ ಉಪಾಧಿನಾಶವಾದರೆ ಅಪುರುಷಃ=ಪ್ರತಿಬಿಂಬನಾದ ಜೀವನಾಶವೇ ಆಗುವುದು. ಪುರುಷನೇ ಇಲ್ಲವಾದರೆ ಜ್ಞಾನ-ವಿಷಯಭೋಗ ಯಾವುದೂ ಇಲ್ಲದಂತಾಗಿ ಮುಕ್ತಿಯು

ಪುರುಷಾರ್ಥವಾಗಲಾರದು. ಅಂದಮೇಲೆ ಮುಕ್ತಿಗಿಂತಲೂ ಸಂಸಾರವೇ ಮೇಲು ಎಂದಾಗುವುದು. ಆದರೆ ಅದು ಸರಿಯಲ್ಲ. ಆ ಕಾರಣ ಸ್ವರೂಪೋಪಾಧಿನಾಶವನ್ನು ಅಂಗೀಕರಿಸಬಾರದು.

ಹಿಂದಿನ ಶ್ಲೋಕದ ತಾತ್ಪರ್ಯದಲ್ಲಿ ಉದಾಹರಿಸಿದ

**''ಸರ್ವೋಪಾಧಿವಿನಾಶೇ ಹಿ ಪ್ರತಿಬಿಂಬಃ ಕಥಂ ಭವೇತ್''**

ಎಂಬ ಸ್ಕಾಂದವಚನದಿಂದ ಈ ಶ್ಲೋಕದಲ್ಲಿಯ ''ಅಪುರುಷಃ ತದ್ವಿನಾಶೇ'' ಎಂಬುದಕ್ಕೆ ತಸ್ಯ=ಎಲ್ಲ ಉಪಾಧಿಗಳೂ ನಾಶವಾದರೆ ಅಪುರುಷಃ=ಪ್ರತಿಬಿಂಬ ನಾಶವಾಗಬೇಕಾಗುವುದು ಎಂದು ತಾತ್ಪರ್ಯ ಹೇಳಿದಂತಾಯಿತು.

''ಅಪುರುಷಃ ತದ್ವಿನಾಶೇ'' ಎಂಬುದಕ್ಕೇನೇ ''ಕಥಂ ಚಾತ್ಮವಿನಾಶಾಯ ಪ್ರಯತ್ನಃ ಸೇತ್ಸ್ಯತಿ'' ಎಂದು ಬೇರೆ ರೀತಿ ವ್ಯಾಖ್ಯಾನ. ''ತದ್ವಿನಾಶೇ ಅಪುರುಷಃ ಸ್ಯಾತ್ ಯತ್ನವಾನ್ ನ ಸ್ಯಾತ್'' ಎಂದು ಮೂಲಯೋಜನೆ ಮಾಡಿ ಪ್ರತಿಬಿಂಬನಾದ ಜೀವನೇ ನಾಶವಾದ್ದರಿಂದ ತನ್ನ ಮೋಕ್ಷಕ್ಕಾಗಿ ಪ್ರಯತ್ನ ಮಾಡದೇ ಹೋಗಲಿ ಎಂದರ್ಥ. ''ನ ವಿದ್ಯತೇ ಅರ್ಥೀ ಪುರುಷಃ ಯಸ್ಯ ಸಃ ಅಪುರುಷಃ ಮೋಕ್ಷಃ ಸ್ಯಾತ್'' ಹೀಗೆ ಮೂಲಯೋಜನೆ ಮಾಡಿ 'ಅಪುಮರ್ಥತಾ ಚ ಮುಕ್ತೇಃ ಸ್ಯಾತ್' ಎಂದು ಹೇಳಿರುವರು. 'ತದ್ವಿನಾಶೇ' ಎಂಬುದರ ತಾತ್ಪರ್ಯ ''ಅಭಾವಾತ್ ಪುಂಸ ಏವ ತು'' ಎಂಬುದು.

ಮುಂದಿನ ಶ್ಲೋಕದಲ್ಲಿ ಪೂರ್ವಾರ್ಧವಾದ ''ದಗ್ಧಾಶಯೋ ಮುಕ್ತಸಮಸ್ತತದ್ಗುಣಃ'' ಎಂಬುದರ ಅರ್ಥವನ್ನು ''ಜ್ಞಾನಜ್ಞೇಯಾದ್ಯಭಾವಾಚ್ಚ'' ಎಂದು ಹೇಳಿರುವರು. ''ಬಹಿರಂತಃ ವಿಚಷ್ಟೇ'' ಎಂಬುದರ ಭಾವವೇ ಇದು. ಹೇಳಿದ ಎಲ್ಲ ತರ್ಕಗಳಿಗೆ ವಿಪರ್ಯಯ ಪರ್ಯವಸಾನವನ್ನು ತಸ್ಮಾತ್ ಎಂಬ ವಾಕ್ಯದಿಂದ ಹೇಳಿದೆ.

**ಭಾಗವತ ತಾತ್ಪರ್ಯ -**

ಈ ರೀತಿಯಾಗಿ ಪೂರ್ವಾರ್ಧವನ್ನು, ಉತ್ತರಾರ್ಧದಲ್ಲಿ ''ಅಪುರುಷಃ ತದ್ವಿನಾಶೇ'' ಎಂಬ ಅಂಶವನ್ನು ಅನಿಷ್ಟಾಪಾದನಪರವಾಗಿ ಪ್ರಮಾಣದಿಂದ ವ್ಯಾಖ್ಯಾನಿಸಿ, ಈ ಸಮಗ್ರಶ್ಲೋಕವನ್ನು ತಮ್ಮ ಮಾತುಗಳಿಂದಲೂ ಅನಿಷ್ಟಾಪದನಪರವಾಗಿ ವ್ಯಾಖ್ಯಾನಿಸುವರು-

**ದಗ್ಧಾಶಯಃ । ಬೀಜಾಶಯನಾಶೇ ತದ್ಗುಣಾನಾಂ ಜ್ಞಾನಾದೀನಾಮಭಾವಾನ್ನ ಕಿಂಚಿದ್ವಿಚಕ್ಷೀತ । ಪರಾತ್ಮನೋರ್ಯದಾ ವ್ಯವಧಾನಂ ಸಂಸಾರಾವಸ್ಥಾಯಾಂ ತದಾ ಸ್ವಪ್ನ ಇವೇತ್ಯೇತಾವದ್ಬೀಜಹೃದಯನಾಶೇ ತ್ವಪುರುಷ ಏವ । ಆತ್ಮನಾಶ ಏವೇತ್ಯರ್ಥಃ । ಅತಃ ಸಂಸಾರಾವಸ್ಥೈವೋತ್ತಮಾ ಸ್ಯಾತ್ ।**

ಈ ವಿಷಯದಲ್ಲಿ ಸಮಾಖ್ಯಾಪ್ರಮಾಣ ಹೇಳುವರು -

**"ಭಿದಾ ಯದಿ ನ ದೃಶ್ಯೇತ ಜೀವಾತ್ಮ-ಪರಮಾತ್ಮನೋಃ ।**
**ಮುಕ್ತೌ ತದಾ ವಿಮೋಕ್ಷಾಯ ಕೋ ಯತ್ನಂ ಕರ್ತುಮರ್ಹತಿ" ಇತಿ ಬ್ರಹ್ಮಾಂಡೇ ॥**

**ಮಗ್ನಸ್ಯ ಹಿ ಪರೇಽಜ್ಞಾನೇ ಕಿಂ ನ ದುಃಖಕರಂ ಭವೇತ್ ।**
**ಪ್ರವೃತ್ತಿಧರ್ಮಮೇವಾಹಂ ಮನ್ಯೇ ಭರತಸತ್ತಮ" ಇತಿ ಮೋಕ್ಷಧರ್ಮೇಷು ॥**

ಜೀವನ ಸ್ವರೂಪೋಪಾಧಿಯೂ ನಾಶವಾಗುವುದಾದರೆ ಜೀವನ ಗುಣಗಳಾದ ಜ್ಞಾನ-ಸುಖ-ಇಚ್ಛಾದಿಗಳೂ ನಾಶವಾಗಬೇಕಾಗುವುದರಿಂದ ಜೀವನಿಗೆ ಯಾವ ಜ್ಞಾನವೂ ಇಲ್ಲವೆಂದಾಗಬೇಕಾಗುವುದು. ಜೀವನಿಗೆ ಸಂಸಾರದಶೆಯಲ್ಲಿ ಶ್ರೀಹರಿಯ ಜ್ಞಾನಪ್ರತಿಬಂಧಕವಾದ ಆವರಣನಿಮಿತ್ತದಿಂದ ಅಪರೋಕ್ಷಜ್ಞಾನವಿಲ್ಲದಿರುವಾಗ ಸ್ವಪ್ನದಲ್ಲಿ ಅಲ್ಪ-ಅಸ್ಥಿರವಾದ ವಿಷಯಭೋಗಾದಿಗಳು ಇದ್ದಂತೆ ಅಲ್ಪ-ಅಸ್ಥಿರ ವಿಷಯಭೋಗಾದಿಗಳು ಇವೆ. ಜೀವಸ್ವರೂಪ ಉಪಾಧಿಗೆ ನಾಶವಾಗುವುದಾದರೆ ಪ್ರತಿಬಿಂಬನಾದ ಜೀವನಿಗೆ ಮುಕ್ತಿಕಾಲದಲ್ಲಿ ವಿನಾಶವೇ ಬರಬೇಕಾವುದು. ಆತ್ಮನಾಶವೇ ಆಗುವುದೆಂದರ್ಥ. ಜ್ಞಾನಾದಿಗಳು ಇಲ್ಲವಾದರೆ ವಿಷಯಭೋಗ ಕೂಡದಿರುವುದರಿಂದ ಮೋಕ್ಷವು ಪುರುಷಾರ್ಥವಾಗದೇ ಹೋಗಬೇಕಾಗುವುದರಿಂದ ಮೋಕ್ಷಾವಸ್ಥೆಗಿಂತ ಸಂಸಾರಾವಸ್ಥೆಯೇ ಮೇಲು (ಉತ್ತಮ) ಎಂದಾಗಬೇಕಾಗುವುದು. ಜೀವಾತ್ಮ-ಪರಮಾತ್ಮರಿಗೆ ಮೋಕ್ಷದಲ್ಲಿ ಭೇದವೂ ಕಾಣದೇ ಹೋದರೆ ಮುಕ್ತಿಯಲ್ಲಿ ಜೀವನಾಶನಾಗಿ ಯಾವ ಜ್ಞಾನ ಇಲ್ಲವೆಂದು ಹೇಳಿದರೆ ಅಂತಹ ಅಪುರುಷಾರ್ಥವಾದ ಮುಕ್ತಿಯನ್ನು ಪಡೆಯಲು ಯಾವನು ತಾನೇ ಪ್ರಯತ್ನ ಮಾಡಿಯಾನು ? ಯಾರೂ ಮಾಡಲಾರರು ಎಂದು ಬ್ರಹ್ಮಾಂಡಪುರಾಣದಲ್ಲಿದೆ.

ಯಾವವಿಧ ಜ್ಞಾನವೂ ಇಲ್ಲದಿರುವ ಅವಸ್ಥೆಯು ಮಹಾದುಃಖಕ್ಕೇನೇ ಕಾರಣವಾಗುವುದು. ಈ ಅವಸ್ಥೆಗಿಂತ ಪ್ರವೃತ್ತಧರ್ಮಫಲವಾದ ಸಂಸಾರಸುಖಾನುಭವವೇ ಉತ್ತಮವೆಂದು ತಿಳಿಯುವೆನು ಎಂದು ಮೋಕ್ಷಧರ್ಮದಲ್ಲಿದೆ. ।।೨೭।।

ಉಪಾಧಿನಾಶವಾದರೆ ಜೀವನಾಶವಾಗಬೇಕು. ಜೀವನಾಶವಾದರೆ ಜ್ಞಾನಾದಿಗಳೇ ಇಲ್ಲವಾಗುವುದರಿಂದ ವಿಷಯಭೋಗ ಇಲ್ಲದೇ ಹೋಗಬೇಕಾಗುವುದು ಎಂದು ಹೇಳಿದ ಪ್ರಸಂಗಕ್ಕೆ ವ್ಯತಿರೇಕವ್ಯಾಪ್ತಿಯನ್ನು ತಿಳಿಸುವರು -

**ಆತ್ಮಾನಮಿಂದ್ರಿಯಾರ್ಥಂ ಚ ಪರಂ ಯದುಭಯೋರಪಿ ।**
**ಸತ್ಯಾಶಯ ಉಪಾಧೌ ವೈ ಪುಮಾನ್ ಪಶ್ಯತಿ ನಾನ್ಯದಾ ।।೨೮।।**

ಆತ್ಮಾನಂ=ತನ್ನನ್ನು (ಜೀವನನ್ನು) ಇಂದ್ರಿಯಾರ್ಥಂ=ಶಬ್ದಾದಿವಿಷಯಗಳನ್ನು ಉಭಯೋಃ ಪರಂ=ಜೀವ-ವಿಷಯಗಳಿಗಿಂತ ಉತ್ತಮನಾದ ಪರಮಾತ್ಮನನ್ನು ಪ್ರಮಾನ್=ಅಧಿಕಾರಿಯು ಆಶಯೇ ಉಪಾಧೌ ಸತಿ ಪಶ್ಯತಿ=ಅಂತಃಕರಣ ರೂಪವಾದ ಉಪಾಧಿಯು ಇರುವಾಗಲೇ ನೋಡುವನು. ಅನ್ಯದಾ ನ ಪಶ್ಯತಿ=ಉಪಾಧಿಗಳಿಲ್ಲದಿರುವಾಗ ನೋಡಲಾರನು.

''ಯಾವಾಗ ವಿಷಯದರ್ಶನವೋ ಆಗ ಉಪಾಧಿ ಇರುವುದು'' ಹೀಗೆ ಹೇಳಿ ಉಪಾಧಿ ಇಲ್ಲವಾದರೆ ದರ್ಶನವಿಲ್ಲದಾಗುವುದು ಎಂಬ ತರ್ಕಕ್ಕೆ ವ್ಯತಿರೇಕವ್ಯಾಪ್ತಿ ತಿಳಿಸಿದಂತಾಯಿತು. ।।೨೮।।

ಎಲ್ಲ ಉಪಾಧಿನಾಶವಾದರೆ ಪ್ರತಿಬಿಂಬನಾಶವಾಗಬೇಕಾಗುತ್ತದೆ ಎಂಬ ವಿಷಯದಲ್ಲಿ ದೃಷ್ಟಾಂತ ಹೇಳುವರು -

**ನಿಮಿತ್ತೇ ಸತಿ ಸರ್ವತ್ರ ಜಲಾದಾವಪಿ ಪೂರುಷಃ ।**
**ಆತ್ಮನಶ್ಚ ಪರಸ್ಯಾಪಿ ಭಿದಾಂ ಪಶ್ಯತಿ ನಾನ್ಯದಾ ।।೨೯।।**

ಯಥಾ=ಹೇಗೆ ಸರ್ವತ್ರ=ಜಗತ್ತಿನಲ್ಲಿ ಜಲಾದೌ ನಿಮಿತ್ತೇ ಸತಿ ಅಪಿ=ನೀರು ಮುಂತಾದ ಉಪಾಧಿ ಇದ್ದಾಗಲೇ ಪೂರುಷಃ=ಮನುಷ್ಯನು ಆತ್ಮನಃ=ಬಿಂಬನಾದ ತನಗೂ ಪರಸ್ಯಾಪಿ=ಪ್ರತಿಬಿಂಬಕ್ಕೂ ಇರುವ ಭಿದಾಂ=ಮಾಲಿನ್ಯ ಮುಂತಾದ ವೈಲಕ್ಷಣ್ಯವನ್ನು ಪಶ್ಯತಿ=ನೋಡುವನು. ಅನ್ಯದಾ=ಎಲ್ಲ ಉಪಾಧಿನಾಶವಾದಾಗ ನ ಪಶ್ಯತಿ=ನೋಡಲಾರನು. ತಥಾ ಹಾಗೆ. ।।೨೯।।

**ಇಂದ್ರಿಯೈರ್ವಿಷಯಾಕೃಷ್ಟೈರಾಕ್ಷಿಪ್ತಂ ಧ್ಯಾಯತೋ ಮನಃ ।**
**ಚೇತನಾಂ ಹರತೇ ಬುದ್ಧೇಃ ಸ್ತಂಬಸ್ತೋಯಮಿವ ಹ್ರದಾತ್ ।।೩೦।।**

ಸ್ತಂಬಃ=ತೂಬು (ನೀರು ಹೋಗುವ ದಾರಿಯು) ಹ್ರದಾತ್=ಕೆರೆಯಿಂದ ತೋಯಂ ಇವ=ನೀರನ್ನು ಹೊರಗೆ ಹಾಕುವಂತೆ (ಖಾಲಿ ಮಾಡುವಂತೆ) ಧ್ಯಾಯತಃ=ಅಶೋಭನ-ಗಳಾದವುಗಳಲ್ಲಿ ಶೋಭನಗಳೆಂಬ ಭಾವನೆಯಿಂದ ವಿಷಯಗಳನ್ನು ಸ್ಮರಣ ಮಾಡುವವನ ಮನಃ=ಮನಸ್ಸು ವಿಷಯಾಕೃಷ್ಟೈಃ=ವಿಷಯಗಳಲ್ಲಿ ಆಸಕ್ತವಾದ ಇಂದ್ರಿಯೈಃ=ಇಂದ್ರಿಯಗಳಿಂದ ಆಕ್ಷಿಪ್ತಂ ಭವತಿ=ವಿಷಯಭೋಗ ಮಾಡುವುದಕ್ಕಾಗಿ ತನ್ನಲ್ಲಿಯೂ ವಿಷಯಗಳಲ್ಲಿಯೂ ಆಸಕ್ತಿಯುಳ್ಳದ್ದಾಗುವುದು. ಈ ರೀತಿಯಾಗಿ ವಿಷಯಾಸಕ್ತವಾದ ಮನಸ್ಸು ಬುದ್ಧೇಃ=ಬುದ್ಧಿಯ (ಮನೋವೃತ್ತಿವಿಶೇಷದ) ಚೇತನಾಂ=ಶಾಸ್ತ್ರಾಧ್ಯಯನದಿಂದುಂಟಾದ ಯಥಾರ್ಥವಸ್ತುಗಳ ಸ್ಮರಣಶಕ್ತಿಯನ್ನು ಹರತೇ=ಕ್ರಮವಾಗಿ ನಾಶಮಾಡುವುದು.

ಹರಿಕಥಾಶ್ರವಣ ಮಾಡಿ ಅದರಿಂದುಂಟಾದ ವೈರಾಗ್ಯದಿಂದ ಎಲ್ಲರೂ ಮುಕ್ತರು ಆಗುವುದಿಲ್ಲ ಏಕೆ ? ಎಂದರೆ, ಜ್ಞಾನ ಬರದಿರಲು ಕಾರಣ ಹೇಳುವರು -

**ಭಾಗವತ ತಾತ್ಪರ್ಯ -**

ಈ ಶ್ಲೋಕಕ್ಕೆ ಪ್ರಕೃತ ಸಂಗತಿಯನ್ನು ತಿಳಿಸುವರು -

''ಏವಂವಿಧಾಜ್ಞಾನಕಾರಣಮಾಹ - ಇಂದ್ರಿಯೈರ್ವಿಷಯಾಕೃಷ್ಟೈರಿತ್ಯಾದಿ ।
'ಬಹುಸ್ಮರಣಶಕ್ತಿಸ್ತು ಚೇತನೇತ್ಯುಚ್ಯತೇ ಬುಧೈಃ' ಇತಿ ಶಬ್ದನಿರ್ಣಯೇ ॥

ಯಾವುದೇ ರೀತಿಯಿಂದ ಶಾಸ್ತ್ರದಿಂದ ಉಂಟಾದ ತತ್ವಜ್ಞಾನನಾಶಕ್ಕೆ ಕಾರಣವನ್ನು ''ಇಂದ್ರಿಯೈಃ ವಿಷಯಾಕೃಷ್ಟೈಃ'' ಎಂಬ ಶ್ಲೋಕದಿಂದ ಹೇಳುವರು.

ಚೇತನಾ ಮತ್ತು ಬುದ್ಧಿ ಎರಡು ಅಂತಃಕರಣಗಳೇ ಎಂದರೆ ಅಸಂಗತವಾಗುವುದು. ಕಾರಣ ಚೇತನಾಶಬ್ದಾರ್ಥ ಹೇಳುವರು :- ಶಾಸ್ತ್ರೋಕ್ತಾರ್ಥಬಹುಸ್ಮರಣಶಕ್ತಿಯು ಚೇತನಾ ಎಂದು ಜ್ಞಾನಿಗಳಿಂದ ಹೇಳಲ್ಪಡುವುದು ಎಂದು ಶಬ್ದನಿರ್ಣಯದಲ್ಲಿದೆ. ॥೩೦॥

**ಭ್ರಶ್ಯತ್ಯನುಸ್ಮೃತಿಶ್ಚಿತ್ತಂ ಜ್ಞಾನಭ್ರಂಶಃ ಸ್ಮೃತಿಕ್ಷಯೇ ।**
**ತದ್ರೋಧಂ ಕವಯಃ ಪ್ರಾಹುರಾತ್ಮಾಪಹ್ನವಮಾತ್ಮನಃ ॥೩೧॥**

**ಯಾದುಪತ್ಯಭಾವ -**

ಅನು=ಸ್ಮರಣಶಕ್ತಿಯ ನಾಶವಾದ ನಂತರ ಸ್ಮೃತಿಃ=ಶಾಸ್ತ್ರಾರ್ಥಸ್ಮರಣವು ಭ್ರಶ್ಯತಿ= ನಾಶವಾಗುವುದು. ಸ್ಮೃತಿಕ್ಷಯೇ ಸತಿ=ಸ್ಮರಣನಾಶವಾದರೆ ಚಿತ್ತಂ=ಚಿತ್ತವೃತ್ತಿರೂಪವಾದ ಭಗವದ್ಭಕ್ತಿಯು ಭ್ರಶ್ಯತಿ=ನಾಶವಾಗುವುದು. ಅನು=ಭಕ್ತಿನಾಶಾನಂತರ ಜ್ಞಾನಭ್ರಂಶಃ= ಯಥಾರ್ಥಜ್ಞಾನನಾಶವು ವಿಪರೀತಜ್ಞಾನವೂ ಭವತಿ=ಆಗುವುದು. ತದ್ರೋಧಂ=ಸಮ್ಯಗ್ ಜ್ಞಾನನಾಶ ವಿಪರೀತಜ್ಞಾನಗಳು ಆತ್ಮನಃ=ಅಧಿಕಾರಿಗೆ ಆತ್ಮಾಪಹ್ನವಂ=ಪುರುಷಾರ್ಥ ನಾಶಕವೆಂದು ಕವಯಃ=ಜ್ಞಾನಿಗಳು ಪ್ರಾಹುಃ=ಹೇಳುವರು.

**ವಿಜಯಧ್ವಜರ ವ್ಯಾಖ್ಯಾನದ ಭಾವ -**

ಬಹುಸ್ಮರಣಶಕ್ತಿ ನಾಶವಾದಾಗ ಶಾಸ್ತ್ರಾರ್ಥಗಳ ಸ್ಮರಣಶಕ್ತಿ ನಾಶವಾಗುವುದು. ಆಗ ಶ್ರೀಹರಿಯು ಸ್ವತಂತ್ರನು, ಸರ್ವೋತ್ತಮನು, ಸರ್ವಸ್ವಾಮಿಯು, ಪಂಚಭೇದವಿದೆ, ಎಲ್ಲ ಜಗತ್ತು ಹರಿಯ ಅಧೀನ ಮುಂತಾದ ತತ್ವಜ್ಞಾನನಾಶವಾಗುವುದು. ಜ್ಞಾನರೂಪನಾದ ಅಧಿಕಾರಿಗೆ ಜ್ಞಾನನಾಶವೆಂದರೆ ತನ್ನ ನಾಶವೇ ಇದ್ದಂತೆ ಎಂದು ಜ್ಞಾನಿಗಳು ಹೇಳುವರು.

**ಭಾಗವತ ತಾತ್ಪರ್ಯ -**

ಇಲ್ಲಿ ಕೆಲವು ಪದಗಳಿಗೆ ಅರ್ಥವೇ ಆಗುವುದಿಲ್ಲ. ಕೆಲವಕ್ಕೆ ವಿಪರೀತ ಅರ್ಥವಾಗುವುದು. ಕಾರಣ ಇಂದ್ರಿಯೈಃ ಮುಂತಾದ ೪ ಶ್ಲೋಕಗಳ ತಾತ್ಪರ್ಯವನ್ನು ಪ್ರಮಾಣದಿಂದಲೇ ಹೇಳುವರು -

> "ಸ್ವಪಕ್ಷಪಾತಸ್ತ್ವಭ್ಯಾಸಾದ್ಭೋಗಾರ್ಥಂ ವ್ಯಾಪೃತಸ್ಯ ತು ।
> ಭವೇತ್ತತೋಽನೇಕಶಾಸ್ತ್ರಯಥಾರ್ಥಸ್ಮರಣೇಶಿತಾ ।
> ನಶ್ಯತ್ಯತಃ ಸ್ಮೃತೇರ್ನಾಶಾದ್ಭಗವತ್ಪಕ್ಷಪಾತಿತಾ ।
> ವಿನಶ್ಯೇತ್ತೇನ ಚೈವಾಸ್ಯ ಭವೇತ್ ಜ್ಞಾನವಿಪರ್ಯಯಃ ।
> ನ ಚ ಜ್ಞಾನವಿಪರ್ಯಾಸಾದನ್ಯನ್ನಾಶಕರಂ ಕ್ವಚಿತ್ ।
> ಸರ್ವಸ್ಯೈತಸ್ಯ ಮೂಲಂ ಹಿ ದುಷ್ಟಸಂಸರ್ಗ ಏವ ತು ।
> ದುಷ್ಟಸಂಗೋ ವಿರಕ್ತಸ್ಯಾಪ್ಯನ್ಯಥಾಜ್ಞಾನಕಾರಣಮ್ ।
> ದುಷ್ಟಸಂಗಾದ್ಧಿ ವಿಷ್ಣೋಶ್ಚ ಸ್ವಾತ್ಮತ್ವಂ ಮನ್ಯತೇ ಬುಧಃ ।
> ಅಭಾವಂ ಸ್ವಾತ್ಮನೋಽನ್ಯಸ್ಯ ಮುಕ್ತಿಂ ಚಾಪಿ ನಿರತ್ಮತಾಮ್ ॥ ಇತ್ಯಾದಿ ಸ್ಕಾಂದೇ ॥

ವಿಷಯಭೋಗ ಮಾಡಲು ವಿಶೇಷವಾಗಿ ಆಸಕ್ತನಾದವನಿಗೆ (ಇದರಿಂದ ಧ್ಯಾಯತಃ ಎಂಬ ಪದದ ಅರ್ಥ ತಿಳಿಸಿದಂತಾಯಿತು.) ಭೋಗೋಪಯೋಗಿ ವ್ಯಾಪಾರದಲ್ಲಿ ಹೆಚ್ಚು ಪ್ರವೃತ್ತಿಯಿರುವುದರಿಂದ ತನ್ನಲ್ಲಿ ತನ್ನ ದೇಹಾದಿವಿಷಯಗಳಲ್ಲಿ ಆಸಕ್ತಿ ಉಂಟಾಗುವುದು. (ಮನಃ ಆಕ್ಷಿಪ್ತಂ ಎಂಬುದರ ಅರ್ಥ ಇದು.) ದೇಹಾದಿಗಳಲ್ಲಿ ಆಸಕ್ತಿಯಿಂದ ಮನಸ್ಸಿಗೆ ಇರುವ ಅನೇಕ ಶಾಸ್ತ್ರಾರ್ಥಸ್ಮರಣಸಾಮರ್ಥ್ಯ ನಾಶವಾಗುವುದು. (ಚೇತನಾಂ ಹರತೇ ಎಂಬುದರ ಅರ್ಥ.) ಸ್ಮರಣಶಕ್ತಿನಾಶದಿಂದ ಸ್ಮರಣನಾಶವಾಗುವುದು. (೩೧ ನೇ ಶ್ಲೋಕದಲ್ಲಿ ಭ್ರಶ್ಯತ್ಯನುಸ್ಮೃತಿಃ ಎಂಬುದರ ಅರ್ಥ.) ಸ್ಮೃತಿಯ ನಾಶದಿಂದ ಭಗವತ್ಪಕ್ಷಪಾತಿತಾ= ಭಗವದ್ಭಕ್ತಿಯು ವಿಶೇಷವಾಗಿ ನಾಶವಾಗುವುದು. (೩೧ ನೇ ಶ್ಲೋಕದಲ್ಲಿ ಸ್ಮೃತಿಕ್ಷಯೇ ಚಿತ್ತಂ ಭ್ರಶ್ಯತಿ ಎಂಬುದರ ಅರ್ಥ.) ಭಗವದ್ಭಕ್ತಿಯ ನಾಶದಿಂದ ಅಧಿಕಾರಿಗೆ ಭಗವಂತನ ಸರಿಯಾದ ಜ್ಞಾನನಾಶ, ವಿಪರೀತಜ್ಞಾನವೂ ಆಗುವವು. (ಜ್ಞಾನಭ್ರಂಶ ಎಂಬುದರ ಅರ್ಥ.) ಜ್ಞಾನಭ್ರಂಶದಿಂದ ನರಕಾದಿಗಳಾಗುವುವು (೩೧ ನೇ ಶ್ಲೋಕದ ಉತ್ತರಾರ್ಧದ ಅರ್ಥ.)

ನ ಚ ಜ್ಞಾನವಿಪರ್ಯಾಸಾದನ್ಯನ್ನಾಶಕರಂ ಕ್ವಚಿತ್ । ಎನ್ನುವುದು ೩೨ ನೇ ಶ್ಲೋಕದ ತಾತ್ಪರ್ಯ. ಸಮ್ಯಕ್‌ಜ್ಞಾನನಾಶ-ವಿಪರೀತಜ್ಞಾನಪ್ರಾಪ್ತಿಗಿಂತ ಹೆಚ್ಚಿನ ಸ್ವಾರ್ಥನಾಶಕ ಅನರ್ಥಕಾರಕವಾದುದು ಬೇರಾವುದೂ ಇಲ್ಲ.

(೩೪ ನೇ ಶ್ಲೋಕದ ಸಂಗತಿ ತಿಳಿಸುತ್ತ ವ್ಯಾಖ್ಯಾನಿಸುವರು) ಹಿಂದೆ ಹೇಳಿದ ಎಲ್ಲದಕ್ಕೂ (ಅಂದರೆ - ವಿಷಯಧ್ಯಾನದಿಂದ ಹಿಡಿದು ಜ್ಞಾನವಿಪರ್ಯಯವರೆಗಿನ ಅನರ್ಥಗಳಿಗೆ) ದುರ್ಜನರ ಸಹವಾಸವೇ ಮುಖ್ಯಕಾರಣವು. (೩೪ ನೇ ಮೂಲದಲ್ಲಿ ಸಂಗ ಎಂದರೆ ದುಷ್ಟಸಂಗ ಎಂದಂತಾಯಿತು.) ದುಷ್ಟರ ಸಂಪರ್ಕವು ವಿರಕ್ತನಿಗೂ ಕೂಡ ವಿಷಯಧ್ಯಾನಾದಿಗಳ ದ್ವಾರಾ ಮಿಥ್ಯಾಜ್ಞಾನಕ್ಕೆ ಕಾರಣವಾಗುವುದು, ಯಥಾರ್ಥಜ್ಞಾನನಾಶಕವೂ ಆಗಿದೆ. (ವಿಷಯಾಸಕ್ತರಿಗೆ ಸುತರಾಂ ಅನರ್ಥಕರ ಎಂಬುದು ಸಿದ್ಧ) ಯಥಾರ್ಥಜ್ಞಾನವಿಲ್ಲದವನು ದುಷ್ಟಸಂಸರ್ಗದಿಂದಲೇ ತನಗಿಂತ ಸರ್ವೋತ್ತಮನಾದ ಶ್ರೀವಿಷ್ಣುವಿಗೂ ಕೂಡ ತನ್ನಿಂದ ಐಕ್ಯವನ್ನು ತಿಳಿಯುತ್ತಾನೆ. ಚೈತನ್ಯಾತಿರಿಕ್ತಪ್ರಪಂಚವು ಮಿಥ್ಯೆಯೆಂದೂ, ಅತ್ಯಂತಪ್ರಿಯವಾದ ಅಹಮರ್ಥಕ್ಕೆ ಮುಕ್ತಿಯಲ್ಲಿ ನಾಶವನ್ನೂ ತಿಳಿಯುತ್ತಾನೆ ಮುಂತಾಗಿ ಸ್ಕಾಂದಪುರಾಣದಲ್ಲಿದೆ. (೩೦ ರಿಂದ ೩೪ ರವರೆಗಿನ ತಾತ್ಪರ್ಯ.)

**ನಾತಃ ಪರತರೋ ಲೋಕೇ ಪುಂಸಃ ಸ್ವಾರ್ಥವ್ಯತಿಕ್ರಮಃ ।**
**ಯದ್ಧ್ಯನ್ಯಸ್ಯ ಪ್ರೇಯಸ್ತ್ವಮಾತ್ಮನಃ ಸ್ವವ್ಯತಿಕ್ರಮಾತ್ ॥೩೨॥**

ಲೋಕೇ=ಜಗತ್ತಿನಲ್ಲಿ ಪುಂಸಃ=ಮನುಷ್ಯನಿಗೆ ಅತಃ=ಸ್ವರೂಪಜ್ಞಾನನಾಶಕ್ಕಿಂತ ಪರತರಃ=ಅತಿಶಯವಾದ (ಅಧಿಕವಾದ) ಸ್ವಾರ್ಥವ್ಯತಿಕ್ರಮಃ=ಪುರುಷಾರ್ಥನಾಶಕವು ಅನರ್ಥಕಾರಕವೂ ಆದದ್ದು ನ=ಇರುವುದಿಲ್ಲ. ಯತ್=ಯದ್ಯಪಿ ಅನ್ಯಸ್ಯ=ಮಕ್ಕಳು ಹೆಂಡತಿಯ ಮೇಲೆ ಆತ್ಮನಃ ಪ್ರೇಯಸ್ತ್ವಂ ಆಸ್ತಿ=ಅತಿಶಯ ಪ್ರೀತಿಯುಂಟು, ತಥಾಪಿ= ಆದರೂ ಸ್ವವ್ಯತಿಕ್ರಮಾತ್=ತನ್ನ ನಾಶಕ್ಕಿಂತ ಪರತರಃ=ಹೆಚ್ಚಿನದು ಅವರ ನಾಶವು ನ=ಅಲ್ಲ.

**ಅರ್ಥೇಂದ್ರಿಯಾರ್ಥಾಭಿಧ್ಯಾನಂ ಸರ್ವಾರ್ಥಾಪಹ್ನವೋ ನೃಣಾಮ್ ।**
**ಭ್ರಂಶಿತೋ ಜ್ಞಾನವಿಜ್ಞಾನಾದ್ ಯೇನಾವಿಶತಿ ಮುಗ್ಧತಾಮ್ ॥೩೩॥**

ಅಥ=ಆದ್ದರಿಂದ ಯೇನ=ಯಾವ ವಿಷಯಧ್ಯಾನದಿಂದ ಜ್ಞಾನವಿಜ್ಞಾನಾತ್=ಸಾಮಾನ್ಯ-ವಿಶೇಷ ಜ್ಞಾನಗಳಿಂದ ಭ್ರಂಶಿತಃ=ಭ್ರಷ್ಟನಾಗಿ ಮುಗ್ಧತಾಂ ಆವಿಶತಿ=ಅಜ್ಞತೆಯನ್ನೂ, ಅದರ ಕಾರ್ಯವಾದ ಸಂಸಾರವನ್ನು ಹೊಂದುವನು. ಮೋಕ್ಷಮಾರ್ಗದಿಂದ ವಿಮುಖನಾಗುವನು. ಇಂದ್ರಿಯಾರ್ಥಾಭಿಧ್ಯಾನಂ=ವಿಷಯಗಳ ನಿರಂತರ ಚಿಂತನವು ನೃಣಾಂ=ಜನರಿಗೆ ಸರ್ವಾರ್ಥಾಪಹ್ನವಃ=ಎಲ್ಲ ಪುರುಷಾರ್ಥನಾಶಕವು. ಮೋಕ್ಷಕ್ಕೆ ವಿರೋಧಿ ಎಂದರ್ಥ.

ಶಾಸ್ತ್ರ ಓದಿದವನಿಗೆ ವಿಷಯಾಸಕ್ತಿ ಏಕೆ ಬರುವುದು ? ಎಂದು ಹೇಳುವರು -

**ನ ಕುರ್ಯಾತ್ ಕರ್ಹಿಚಿತ್ ಸಂಗಂ ತಮಸ್ತೀವ್ರಂ ತಿತೀರ್ಷುಣಾ ।**
**ಧರ್ಮಾರ್ಥಕಾಮಮೋಕ್ಷಾಣಾಂ ಯದತ್ಯಂತವಿಘಾತಕಮ್ ॥೩೪॥**

ಯತ್=ಯಾವದು ಧರ್ಮಾರ್ಥಕಾಮಮೋಕ್ಷಾಣಾಂ=ನಾಲ್ಕು ಪುರುಷಾರ್ಥಗಳಿಗೆ ಅತ್ಯಂತವಿಘಾತಕಂ=ನಾಶಕವೋ ತತ್=ಅಂತಹ ಸಂಗಂ=ದುಷ್ಟರ ಸಂಪರ್ಕವನ್ನು ತೀವ್ರಂ= ಅಲ್ಪಪ್ರಯತ್ನದಿಂದ ಹೋಗದ ತಮಃ=ಮಿಥ್ಯಾಜ್ಞಾನವನ್ನು ತಿತೀರ್ಷುಣಾ=ದಾಟಲಿಚ್ಛಿಸುವವನು ಕರ್ಹಿಚಿತ್=ಯಾವ ಕಾಲದಲ್ಲಿಯೂ ನ ಕುರ್ಯಾತ್=ಮಾಡಬಾರದು. ।।೩೪।।

ಧರ್ಮಾದಿಗಳ ಜೊತೆಗೆ ಹೇಳಿದ್ದರಿಂದ ಮೋಕ್ಷವೂ ಅವುಗಳಿಗೆ ಸಮ ಎಂಬ ಭ್ರಾಂತಿಯನ್ನು ಪರಿಹರಿಸುವರು -

**ತತ್ರಾಪಿ ಮೋಕ್ಷ ಏವಾರ್ಥ ಆತ್ಯಂತಿಕತಯೇಷ್ಯತೇ ।**
**ತ್ರೈವರ್ಗ್ಯಾರ್ಥೋ ಯತೋ ನಿತ್ಯಂ ಕೃತಾಂತಭಯಸಂಯುತಃ ।।೩೫।।**

ಯತಃ=ಯಾವ ಕಾರಣ ತ್ರೈವರ್ಗ್ಯಾರ್ಥಃ=ಧರ್ಮ,ಅರ್ಥ,ಕಾಮ ಎಂಬ ತ್ರಿವರ್ಗದಿಂದ ಬರುವ ಐಹಿಕ-ಆಮುಷ್ಮಿಕ ಪುರುಷಾರ್ಥವು ನಿತ್ಯಂ=ಯಾವಾಗಲೂ ಕೃತಾಂತಭಯಸಂಯುತಃ= ಕಾಲನಾಮಕ ಶ್ರೀಹರಿಯ ಭಯದಿಂದ ಕೂಡಿದುದು. ಶ್ರೀಹರಿಯ ಭ್ರೂವಿಲಾಸ-ದಿಂದುಂಟಾಗುವ ನಾಶವುಳ್ಳದ್ದೆಂದರ್ಥ. ಅತಃ=ಆದ್ದರಿಂದ ತತ್ರಾಪಿ=ಧರ್ಮಾದಿ ನಾಲ್ಕು ಪುರುಷಾರ್ಥಗಳಲ್ಲಿಯೂ ಮೋಕ್ಷಃ ಏವ ಅರ್ಥಃ=ಮೋಕ್ಷವೆಂಬ ಪುರುಷಾರ್ಥವೇ ಆತ್ಯಂತಿಕತಯಾ=ಮತ್ತೆ ತಿರುಗಿಬರುವದೆಂಬ ನಾಶದ ಭಯವಿಲ್ಲದ್ದೆಂದು ಇಷ್ಯತೇ=ಪ್ರಾಮಾಣಿಕರಿಂದ ಅಂಗೀಕರಿಸಲ್ಪಟ್ಟಿದೆ. ।।೩೫।।

**ಪರಾವರೇ ಚ ಯೇ ಭಾವಾ ಗುಣವ್ಯತಿಕರಾದನು ।**
**ನ ತೇಷಾಂ ವಿದ್ಯತೇ ಕ್ಷೇಮ ಈಶವಿಧ್ವಂಸಿತಾಶಿಷಾಮ್ ।।೩೬।।**

ಯೇ=ಯಾವ ಪರಾವರೇ ಭಾವಾಃ=ಉತ್ಕೃಷ್ಟವಾದ ಸ್ವರ್ಗಾದಿ ಬ್ರಹ್ಮಲೋಕ(ಸತ್ಯಲೋಕ) ಪರ್ಯಂತ ಪದಾರ್ಥಗಳು ಗುಣವ್ಯತಿಕರಾದನು ಭವಂತಿ=ಸತ್ವಾದಿಗುಣವೈಷಮ್ಯದ ನಂತರ ಇರುವವೋ (ತ್ರಿಗುಣಾತ್ಮಕಪ್ರಕೃತಿ ಜನ್ಯವೆಂದರ್ಥ.) ಈಶವಿಧ್ವಂಸಿತಾಶಿಷಾಂ= ಕಾಲನಾಮಕನಾದ ಶ್ರೀಹರಿಯಿಂದ ನಾಶ ಮಾಡಲ್ಪಟ್ಟ ಭೋಗ್ಯವಸ್ತುಗಳುಳ್ಳವುಗಳೋ ತೇಷಾಂ=ಅವುಗಳಿಗೆ ಕ್ಷೇಮಃ ನ= ಸ್ಥಿರತೆ ಇಲ್ಲ.

"ಕ್ಷೇಮೀ ನ" ಎಂಬ ಪಾಠದಲ್ಲಿ ಆ ಲೋಕದಲ್ಲಿ ನಿತ್ಯಾನಂದ ಇಲ್ಲವೆಂದರ್ಥ. ಅಂತೂ ಪ್ರಾಕೃತವಾದ ಸತ್ಯಲೋಕದವರೆಗೂ ಅನಿತ್ಯತೆ ಇರುವುದು. ಪ್ರಾಕೃತವಲ್ಲದ ಮೋಕ್ಷ ಮಾತ್ರ ನಿತ್ಯವಾದುದು ಎಂದು ಭಾವ. ।।೩೬।।

ಈವರೆಗೆ ಜ್ಞಾನವಿಲ್ಲದೇ ಮೋಕ್ಷವಿಲ್ಲವೆಂದು ಹೇಳಿ, ಜ್ಞಾನದಿಂದಲೇ ಮೋಕ್ಷವೆಂದು ಹೇಳಲು, ಮೋಕ್ಷಕ್ಕಾಗಿ ಯಾವ ರೀತಿಯ ಜ್ಞಾನ ಆವಶ್ಯಕ ? ಎಂದು ಪ್ರಶ್ನೆ ಬಂದರೆ, ಅದಕ್ಕೆ ಉತ್ತರರೂಪವಾಗಿ ಅವಶ್ಯ ತಿಳಿಯಬೇಕಾದದ್ದನ್ನು ಹೇಳುವರು -

**ಮನೋಮಾತ್ರಮಿದಂ ವಿಶ್ವಂ ಯಥಾ ಸ್ವಪ್ನೇ ಮನಃ ಕ್ರಿಯಾ ।**
**ಕ್ರಿಯಾ ಚ ವಾಸನಾಮಾತ್ರಂ ಸಾऽನೀಹಾಯಾಂ ಪ್ರಲೀಯತೇ ॥೩೭॥**

**ಆತ್ಮಾ ತ್ವನೀಹಯಾ ಸಾಕ್ಷಾತ್ ಸ್ವಯಂಜ್ಯೋತಿಃ ಪ್ರಸಿದ್ಧ್ಯತಿ ।**
**ಏವಂ ವ್ಯುದಸ್ಯಾತ್ಮಮಾಯಾಂ *ಭಿದಾಮುಪರಮೇನ್ಮುನಿಃ ॥೩೮॥**

*''ಜಾನಂಸ್ತೂಪರಮೇನ್ಮುನಿಃ'' ಪಾಠಾಂತರ.

ಯಥಾ=ಹೇಗೆ ಸ್ವಪ್ನೇ=ಕನಸಿನಲ್ಲಿ ಮನಃಕ್ರಿಯಾ=ಶ್ರೀಹರಿಯ ಇಚ್ಛೆಯಿಂದ (ಜೀವನ ವಾಸನೋಪಾದನಕವಾಗಿ) ನಿರ್ಮಿತವಾದ ಕಾರ್ಯಗಳಿರುವವೋ ಹಾಗೆ ಇದಂ= ಪ್ರತ್ಯಕ್ಷಪ್ರಮಾಣಸಿದ್ಧವಾದ ವಿಶ್ವಂ=ಜಗತ್ತು ಮನೋಮಾತ್ರಂ=ಶ್ರೀಹರಿಯ ಇಚ್ಛೆಯಿಂದ ನಿರ್ಮಿತವು, ರಕ್ಷಿತವು. ಕ್ರಿಯಾ ಚ=ಕಾರ್ಯವಾದ (ಕ್ರಿಯತೇ ಇತಿ ಕ್ರಿಯಾ=ಕಾರ್ಯಂ) ಪ್ರಪಂಚವು ವಾಸನಾಮಾತ್ರಂ=ಶ್ರೀಹರಿಯ (ವಸತೀತಿ ವಾಸನಾ) ಇಚ್ಛೆಯಿಂದಲೇ ಸ್ಥಿರವಾದುದು.

(ಧಾತೂನಾಂ ಅನೇಕಾರ್ಥತ್ವಾತ್ ಎಂದಿದ್ದರಿಂದ ಧಾತುಗಳಿಗೆ ಅನೇಕಾರ್ಥಗಳಿವೆ. ಶ್ರೀಮನ್ನ್ಯಾಯಸುಧೆಯಲ್ಲಿ ಮಾಙಮಾನೇ ತ್ರೈಙಪಾಲನೇ ಎಂಬ ಎರಡು ಧಾತುಗಳಿಂದ ನಿಷ್ಪನ್ನವಾದ ಮಾತ್ರಶಬ್ದಕ್ಕೇನೇ ನಿರ್ಮಿತ-ರಕ್ಷಿತ ಎಂದರ್ಥ ಮಾಡಿರುವರು. ಇಲ್ಲಿ ಮೋನೋಮಾತ್ರ ಎಂಬುದಕ್ಕೆ ಇಚ್ಛಾನಿರ್ಮಿತ ಎಂದರ್ಥ ಹೇಳಿದೆಯಾದ್ದರಿಂದ ವಾಸನಾಮಾತ್ರ ಎಂಬುದಕ್ಕೆ ಕೇವಲ ರಕ್ಷಿತ ಎಂದಿಷ್ಟೇ ಅರ್ಥ ಮಾಡುವುದು. ಮತ್ತು ವಸ ಆಚ್ಛಾದನೇ ಎಂಬ ಧಾತು ಇರುವುದರಿಂದ ''ವಾಸಯತೀತಿ ವಾಸನಾ'' ಶ್ರೀಹರಿಯ ಇಚ್ಛೆಯಿಂದ ಆವೃತವಾದ್ದರಿಂದಲೂ ವಾಸನಾಮಾತ್ರ, ಅಂದರೆ ಹರೀಚ್ಛೆಯಿಂದಲೇ ಬದ್ಧವಾದುದು. ಆದ್ದರಿಂದಲೇ ಅನೀಹಾಯಾಂ=ಸೃಷ್ಟಿಸ್ಥಿತಿ ವಿರುದ್ಧ ಇಚ್ಛೆಯಾದಾಗ ಸಂಜಿಹೀರ್ಷಾ ಬಂದಾಗ ಸಾ=ಜಗತ್ತು ಪ್ರಲೀಯತೇ ನಾಶವಾಗುವುದು. ॥೩೭॥

ಅನೀಹಯಾ ತು=ಸಂಜಿಹಿರ್ಷಾದಿಂದಲೇ ಸಾಕ್ಷಾತ್=ಮುಖ್ಯವಾಗಿ ಸ್ವಯಂಜ್ಯೋತಿಃ= ಅನನ್ಯಾಧೀನಪ್ರಕಾಶವುಳ್ಳ ಆತ್ಮಾ=ವ್ಯಾಪ್ತನಾದ ಶ್ರೀಹರಿಯು ಪ್ರಸಿದ್ಧ್ಯತಿ=ಮುಕ್ತರಿಂದ ಹೊಂದಲ್ಪಡುವನು. ಏವಂ ಜಾನನ್=ಈ ರೀತಿಯಾಗಿ ತಿಳಿದು ಆತ್ಮಮಾಯಾಂ=ಹರಿಯ ಬಂಧಕಶಕ್ತಿಯನ್ನು ವ್ಯುದಸ್ಯ=ಪರಿಹರಿಸಿಕೊಂಡು ಉಪರಮೇತ್=ಶ್ರೀಹರಿಯ ಸಮೀಪದಲ್ಲಿ

ಆವಿರ್ಭೂತಸ್ವರೂಪಾನಂದವುಳ್ಳವನಾಗಬೇಕು. (ಭಿದಾಂ ಎಂಬ ಪಾಠದಲ್ಲಿ ಭಿದಾಂ ಆತ್ಮಮಾಯಾಂ ಎಂದನ್ವಯ, ಭಿದಾಂ=ಭಿದಾ ಎಂಬ ಆತ್ಮಮಾಯಾಂ=ಹರಿಯ ಬಂಧಕಶಕ್ತಿಯನ್ನು ಎಂದರ್ಥ ತಿಳಿಯಬೇಕು. ।।೩೮।।

**ಭಾಗವತ ತಾತ್ಪರ್ಯ -**

ಸರಿಯಾಗಿ ಅರ್ಥವಾಗದಿರುವುದರಿಂದ ಈ ಎರಡೂ ಶ್ಲೋಕಗಳ ತಾತ್ಪರ್ಯವನ್ನು ಹೇಳುವರು -

**ಮನೋಮಾತ್ರಂ ಹರೇರ್ಯಸ್ಮಾನ್ಮನಸಾ ಮೀಯತೇ ಜಗತ್ ।**
**ವ್ಯಾಪ್ತೇ ಮನಸಿ ವಿಷ್ಣೋಶ್ಚ ಸ್ಥಿತತ್ವಾದ್ವಾಸನಾಮಯಮ್ ॥**
**ವಸ ಆಚ್ಛಾದನೇತ್ಯಸ್ಮಾದ್ಧಾತೋರ್ವಾ ವಾಸನಾಮಯಮ್ ।**
**ಅತೋ ವಿಷ್ಣೋರನೀಹಾಯಾಂ ಲೀಯತೇ ಸಕಲಂ ಜಗತ್ ॥**

**"ಅನೀಹಾವಸ್ಥ ಏವಾಸೌ ಮುಮುಕ್ಷುಭಿರವಾಪ್ಯತೇ ।**
**ಏವಂ ವಿದ್ವಾನ್ ಬಂಧಶಕ್ತಿಂ ವ್ಯುದಸ್ಯ ಹರಿಮಾಪ್ನುತೇ ॥**
**ಪ್ರಕೃತಿರ್ಭಿದಾ ಚ ಮಾಯಾ ಚ ಭ್ರಮಶ್ಚೇತ್ಯಭಿಧೀಯತೇ ।**
**ಬಂಧಶಕ್ತಿರ್ಯಥಾ ಲೋಕೋ ಬಂಭ್ರಮೀತ್ಯನಿಶಂ ಭುವಿ" ಇತಿ ತಂತ್ರಸಾರೇ ॥**

ಯಾವ ಕಾರಣ ಜಗತ್ತು ಶ್ರೀಹರಿಯ ಇಚ್ಛೆಯಿಂದಲೇ ಸೃಷ್ಟಿಸಲ್ಪಟ್ಟು ರಕ್ಷಿಸಲ್ಪಡುವುದೋ ಆದುದರಿಂದ ಮನೋಮಾತ್ರವೆನಿಸುವುದು. ವ್ಯಾಪ್ತನಾದ ವಿಷ್ಣುವಿನ ಮನಸ್ಸಿನಲ್ಲಿರುವುದರಿಂದ ಜಗತ್ತು ವಾಸನಾಮಯವೆನಿಸುತ್ತದೆ. ಅಥವಾ ವಸ ಆಚ್ಛಾದನೇ ಎಂದು ಧಾತುವ್ಯಾಖ್ಯಾನ ಇರುವುದರಿಂದ ಹರಿಯ ಇಚ್ಛೆಯಿಂದ ಆವೃತ್ತವಾದ್ದರಿಂದಲೂ ವಾಸನಾಮಯವೆನಿಸುತ್ತದೆ. ಹೀಗೆ ಸೃಷ್ಟಿ-ಸ್ಥಿತಿಗಳು ಹರಿಯ ಇಚ್ಛಾಧೀನವಾದುದರಿಂದ ಸಂಹಾರೇಚ್ಛೆ ಬಂದಾಗ ಸಂಪೂರ್ಣ ಜಗತ್ತು ನಾಶವಾಗುವುದು. ।।೩೭।।

ಸೃಷ್ಟ್ಯಾದಿ ಇಚ್ಛಾರಹಿತನಾದ ಸಂಜಿಹಿರ್ಷಾವುಳ್ಳ ಶ್ರೀಹರಿಯು ಮುಮುಕ್ಷುಗಳಿಂದ ಹೊಂದಲ್ಪಡುವನು. ಹೀಗೆ ತಿಳಿದವನು ಬಂಧಕಶಕ್ತಿಯನ್ನು ಕಳೆದುಕೊಂಡು ಶ್ರೀಹರಿಯನ್ನು ಹೊಂದುತ್ತಾನೆ. ಯಾವ ಬಂಧಕಶಕ್ತಿಯಿಂದ ಬದ್ಧನಾಗಿ ಯಾವಾಗಲೂ ಸಂಸಾರದಲ್ಲಿ ತಿರುಗುತ್ತಾನೋ, ಆ ಬಂಧಕಶಕ್ತಿಯು ಪ್ರಕೃತಿ, ಭಿದಾ, ಮಾಯಾ, ಭ್ರಮ ಎಂಬ ಶಬ್ದಗಳಿಂದ ಹೇಳಲ್ಪಡುತ್ತದೆ ಎಂದು ತಂತ್ರಸಾರದಲ್ಲಿದೆ. ।।೩೮।।

ಮುಕ್ತರಿಂದ ಹೊಂದಲ್ಪಡುವ ಶ್ರೀಹರಿಗೆ ಮುಕ್ತಿಯ ನಂತರ ವಿಶ್ವ-ತೈಜಸ-ಪ್ರಾಜ್ಞರಂತೆ ಜಾಗ್ರತ್-ಸ್ವಪ್ನ-ಸುಷುಪ್ತಿಪ್ರದತ್ವವು ಇಲ್ಲ ಎಂದು ತಿಳಿಸುತ್ತ ಅವನ ಸ್ವರೂಪ ತಿಳಿಸುವರು -

**ನ ಯತ್ರ ನಿದ್ರಾ ಮೂರ್ಛಾ ವಾ ನಾರ್ಥದೃಕ್ ಚ ಮನೋರಥಃ ।**
**ನಾನುವೃತ್ತಿರ್ನ ಪ್ರಲಯಸ್ತದ್ ಬ್ರಹ್ಮ ವಿಜಿತಾತ್ಮನಃ ॥೩೯॥**

**ಭಾಗವತ ತಾತ್ಪರ್ಯ -**

ಅನುವೃತ್ತಿ ಶಬ್ದಾರ್ಥ ಹೇಳುವರು -

"ಅನುವೃತ್ತಿರಿತಿ ಪ್ರಾಜ್ಞೈರ್ಜೀವನ್ಮುಕ್ತಿರುದೀರ್ಯತೇ" ಇತಿ ಶಬ್ದನಿರ್ಣಯೇ ॥

ಜೀವನ್ಮುಕ್ತಿಯು ಅನುವೃತ್ತಿ ಎಂಬುದಾಗಿ ಜ್ಞಾನಿಗಳಿಂದ ಕರೆಸಿಕೊಳ್ಳುವದು ಎಂದು ಶಬ್ದನಿರ್ಣಯದಲ್ಲಿದೆ.

ಯತ್ರ=ಯಾವ ಮುಕ್ತಪ್ರಾಪ್ಯನಾದ ಶ್ರೀಹರಿಯಲ್ಲಿ (ತುರೀಯರೂಪ) ನಿದ್ರಾ=ಸುಷುಪ್ತಿಯು ಮೂರ್ಛಾ=ಮೂರ್ಛಾವಸ್ಥೆಯು ಅರ್ಥದೃಕ್=ಜಾಗ್ರದವಸ್ಥೆಯು ಮನೋರಥಃ= ಮಾನಸವಾಸನಾಜನ್ಯವಾದ ಸ್ವಪ್ನವು ಅನುವೃತ್ತಿಃ=ಜೀವನ್ಮುಕ್ತವಸ್ಥೆಯು ಪ್ರಲಯಃ=ಪ್ರಲಯವು ನ=ಈ ಎಲ್ಲ ಅವಸ್ಥೆಗಳು ಪ್ರೇರ್ಯವಾಗುವುದಿಲ್ಲವೋ ತತ್=ಆ ಬ್ರಹ್ಮ=ಸ್ವರೂಪಾನಂದದಿಂದ ಪೂರ್ಣ ಮಾಡುವ ತುರೀಯನು ವಿಜಿತಾತ್ಮನಃ ಪ್ರಸಿದ್ಧ್ಯತಿ ಮನೋಜಯವುಳ್ಳ ಅಧಿಕಾರಿಗೆ ದೊರೆಯುವನು. ॥೩೯॥

ಜೀವಾತ್ಮ-ಪರಮಾತ್ಮರ ಭೇದವನ್ನೂ ಮೋಕ್ಷಕ್ಕಾಗಿ ಅವಶ್ಯ ತಿಳಿಯಬೇಕು ಎಂಬ ಅಭಿಪ್ರಾಯದಿಂದ ಅವರ ಸ್ವರೂಪವನ್ನು ತಿಳಿಸುವರು -

**ತತ್ತ್ವಂ ನರೇಂದ್ರ ಜಗತಾಮಥ ತಸ್ಥುಷಾಂ ಚ**
**ದೇಹೇಂದ್ರಿಯಾಸುಧಿಷಣಾತ್ಮಭಿರಾವೃತಾನಾಮ್ ।**
**ಯಃ ಕ್ಷೇತ್ರವಿತ್ ತ್ವಮನಯೋರ್ಹೃದಿ ವಿಷ್ಟಗಾಧಿಃ**
**ಪ್ರತ್ಯಕ್ ಚಕಾಸ್ತಿ ಭಗವಾಂಸ್ತಮವೈಹಿ ಸೋಽಸ್ಮಿ ॥೪೦॥**

ಹೇ ನರೇಂದ್ರ=ಎಲೋ ಪೃಥುರಾಜನೇ ! ದೇಹೇಂದ್ರಿಯಾಸುಧಿಷಣಾತ್ಮಭಿಃ=ದೇಹ, ಇಂದ್ರಿಯ, ಪ್ರಾಣ, ಬುದ್ಧಿ ಅಹಂಕಾರಗಳಿಂದ ಆವೃತಾನಾಂ=ಆವರಿಸಲ್ಪಟ್ಟ ಜಗತಾಂ= ಜಂಗಮಗಳಿಗೂ, ಚ=ಮತ್ತು ತಸ್ಥುಷಾಂ=ಸ್ಥಾವರಗಳಿಗೂ ಯತ್ ತತ್ತ್ವಂ=ಯಾವನು ಸತ್ತಾದಿಪ್ರದನೋ ಅಥವಾ ಸ್ಥಾವರ-ಜಂಗಮಗಳಲ್ಲಿ ವ್ಯಾಪ್ತನೋ, ಯಃ=ಯಾವನು ಕ್ಷೇತ್ರವಿತ್=ಅವ್ಯಕ್ತಾದಿತತ್ವಗಳನ್ನು ತಿಳಿದವನೋ, ಪ್ರತ್ಯಕ್=ಎಲ್ಲರ ಒಳಗೆ ಚಕಾಸ್ತಿ= ಪ್ರಕಾಶಿಸುವನೋ, ಸಃ=ಅವನು ಭಗವಾನ್=ಷಡ್ಗುಣೈಶ್ವರ್ಯಶಾಲಿಯಾದ ಶ್ರೀಹರಿಯು ತ್ವಂ=ನೀನು. ಅನಯೋಃ=ಚರಾಚರಪ್ರಾಣಿಗಳ ಮಧ್ಯದಲ್ಲಿ ಒಬ್ಬನಾದ ಜೀವನು, ವಿಷ್ಟಾಧಿಃ=

ನಾನಾವಿಧದುಃಖದಿಂದ ಕೂಡಿದವನು, ಹೃದಿ=ಹೃದಯದಲ್ಲೇ ಇರುವವನು ಅಹಂ ಜೀವೋಽಸ್ಮಿ=ನಾನೂ ಜೀವನೇ. ಆದರೆ ಜ್ಞಾನದಿಂದ ಮಹತ್ತಮನು ಹೊರತು ಭಗವಂತನಲ್ಲ ಎಂದು ಅನ್ವೈಹಿ=ಯಾವನು ಎಲ್ಲರ ಹೃದಯದಲ್ಲಿ ಪ್ರಕಾಶಿಸುವನೋ ಅವನನ್ನು ಪರಮಾತ್ಮನೆಂದು ತಿಳಿ. ಆದ್ದರಿಂದ ಜೀವಾತ್ಮರೂ ಭಿನ್ನರೆಂದು ತಿಳಿಯಬೇಕು ಎಂದರ್ಥ.

**ಭಾಗವತ ತಾತ್ಪರ್ಯ -**

ಈ ಶ್ಲೋಕದಲ್ಲಿ ಜಂಗಮಸ್ಥಾವರಗಳ ತತ್ತ್ವ=ಸ್ವರೂಪ ಎಂದು ಅಭೇದಜ್ಞಾನ ಬರುವುದನ್ನು ಪರಿಹರಿಸಲು ತತ್ವಶಬ್ದಾರ್ಥವನ್ನು ಪ್ರಮಾಣದಿಂದಲೇ ಹೇಳುವರು -

''ಸರ್ವಸತ್ತಾಪ್ರದತ್ವಾತ್ತು ಸರ್ವತತ್ವಂ ಹರಿಃ ಸ್ಮೃತಃ ।
ಸವತ್ರ ವಿತತತ್ವಾದ್ವಾ ಸೋಽಹಂ ತ್ವಮತಿ ಚೋಚ್ಯತೇ ।
ಸರ್ವಾಂತರ್ಯಾಮಕತ್ವಾತ್ತು ನ ಜೀವಾತ್ಮತ್ವತೋ ಹರಿಃ'' ಇತಿ ತತ್ವನಿರ್ಣಯೇ ॥

ತ್ವಮನಯೋಃ ಸ್ಥಾವರಜಂಗಮಯೋರ್ಮಧ್ಯೇ ಏಕೋ ಜೀವಃ ವಿಷ್ಟಗಾಧಿಃ ನಾನಾದುಃಖಃ ಸನ್ ಹೃದಿ ಸ್ಥಿತಮನ್ವೈಹಿ ಅಹಂ ಚ ಸ ಜೀವೋಽಸ್ಮಿ ಜ್ಞಾನಾನ್ಮಹಾನ್ ಭವಾಮಿ ಯಃ ಕ್ಷೇತ್ರವಿತ್ । ಸರ್ವಸ್ಯ ಪ್ರತ್ಯಕ್ ಚಕಾಸ್ತಿ ಸ ಭಗವಾನಿತಿ ।

'ವ್ಯವಧಾನೇನಾನ್ವಯೋಽಪಿ ಯೋಗ್ಯತಾಪೇಕ್ಷಯಾ ಭವೇತ್' ಇತಿ ಶಬ್ದನಿರ್ಣಯೇ ।
'ಅಭಿಮಾನಸ್ತ್ವಹಂಕಾರ ಆತ್ಮಾ ಚೇತ್ಯಭಿಧೀಯತೇ' ಇತಿ ಚ ॥

ಎಲ್ಲ ವಸ್ತುಗಳಿಗೆ ಸತ್ತಾ-ಪ್ರತೀತಿ-ಪ್ರವೃತ್ತಿಗಳನ್ನು ಕೊಡುವುದರಿಂದ ಅಥವಾ ಸರ್ವತ್ರ ವ್ಯಾಪ್ತನಾದುದರಿಂದ ಶ್ರೀಹರಿಯು ಸರ್ವತತ್ವ ಎನಿಸುವನು.

ಈ ಶ್ಲೋಕಕ್ಕೇ ಹೀಗೆ ಜೀವೇಶ್ವರವೈಲಕ್ಷಣ್ಯ ಹೇಳುವುದೆಂದು ವ್ಯಾಖ್ಯಾನಿಸಿದರೆ, ''ಸೋಽಹಂ'' ''ತತ್ವಮಸಿ'' ಮುಂತಾದ ಶ್ರುತಿವಿರೋಧ ಬರುವುದಲ್ಲ ? ಎಂದರೆ, ಆ ವಾಕ್ಯಗಳ ವ್ಯಾಖ್ಯಾನ ಮಾಡುವ ರೀತಿಯನ್ನು ತಿಳಿಸುವರು -

ಎಲ್ಲರ ಹೃದಯದಲ್ಲಿ ನಿಯಾಮಕನಾಗಿರುವ ಶ್ರೀಹರಿಯು ಸೂರ್ಯಾಂತರ್ಗತನಾಗಿ ಸಃ ಎಂದು, ನನ್ನಲ್ಲಿ ಅಂತರ್ಯಾಮಿಯಾಗಿ ಅಹಂ ಎಂದೂ, ನಿನ್ನಲ್ಲಿ ಅಂತರ್ಯಾಮಿಯಾಗಿ ತ್ವಂ ಎಂದೂ, ತತ್=ಪೂರ್ವೋಕ್ತಬ್ರಹ್ಮನು ಹೇಳಲ್ಪಡುವನು. ಹೊರತು ಶ್ರೀಹರಿಯು ಜೀವಸ್ವರೂಪನಾದುದರಿಂದ 'ಸಃ ಅಹಂ' ಎಂದು ಹೇಳಲ್ಪಡುವುದಿಲ್ಲ ಎಂದು ತತ್ವನಿರ್ಣಯದಲ್ಲಿದೆ.

ದ್ವಿತೀಯಾರ್ಧದಲ್ಲಿ ಏಕವಾಕ್ಯತಾಭ್ರಮ ನಿವಾರಿಸಲು ವಾಕ್ಯಭೇದ ಮಾಡಿ ಯೋಜಿಸುವರು :-

ಈ ಸ್ಥಾವರ-ಜಂಗಮಗಳಲ್ಲಿ ಒಬ್ಬ ಜೀವನಾದ ನೀನು ನಾನಾದುಃಖವುಳ್ಳವನಾಗಿರುವಿ. ಅಂತಹವನನ್ನು ಹೃದಯದಲ್ಲಿ ಮಾತ್ರ ಇರತಕ್ಕ ಜೀವನನ್ನಾಗಿ ತಿಳಿ. ನಿನಗೆ ಉಪದೇಶಕನಾದ ನಾನೂ ಕೂಡ ನಿನ್ನಂತೆಯೇ ಜೀವನೇ ಆಗಿರುತ್ತೇನೆ. ಜ್ಞಾನದಿಂದ ಮಾತ್ರ ನಿನಗಿಂತ ಶ್ರೇಷ್ಠನಾಗಿರುತ್ತೇನೆ. ಯಾವನು ಸರ್ವಾಂತರ್ಯಾಮಿಯಾಗಿ, ಸರ್ವರಿಗೂ ಅಭಿಮುಖನಾಗಿ ಪ್ರಕಾಶಿಸುವನೋ ಆತನೇ ಶ್ರೀಹರಿಯು.

ಸನ್ನಿಹಿತವಾದದ್ದನ್ನು ಬಿಟ್ಟು ವ್ಯವಧಾನದಿಂದ ಅನ್ವಯ ಸರಿಯಲ್ಲ ಎಂಬ ಶಂಕೆಯನ್ನು ಪ್ರಮಾಣದಿಂದ ಪರಿಹರಿಸುವರು :- ಸನ್ನಿಧಿಗಿಂತ ಯೋಗ್ಯತೆಯೇ ಬಲಿಷ್ಠವಾದ ಪ್ರಯುಕ್ತ, ಅರ್ಥಾಬಾಧರೂಪಯೋಗ್ಯತೆಯನ್ನು ಅಪೇಕ್ಷಿಸಿ ವ್ಯವಧಾನದಿಂದ ಅನ್ವಯವು ಕೂಡುತ್ತದೆ ಎಂದು ಶಬ್ದನಿರ್ಣಯದಲ್ಲಿದೆ.

ಇಲ್ಲಿ ಆತ್ಮಶಬ್ದಕ್ಕೆ ದೇಹ-ಮನಸ್ಸು ಎಂದರ್ಥ ಹೇಳಲಾಗದು. ದೇಹಧಿಷಣಾ ಎಂದು ಅವುಗಳನ್ನು ಹೇಳಿಯಾಗಿದೆ. ಇನ್ನು ಜೀವನನ್ನೂ ಹೇಳಲಾಗದು. ಸ್ಥಾವರಾವರಕತ್ವ ಕೂಡಲಾರದು. ಆದ್ದರಿಂದ ಅಭಿಮಾನಕ್ಕೆ ಅಪರಪರ್ಯಾಯವಾದ ಅಹಂಕಾರವೇ ಆತ್ಮಶಬ್ದಾರ್ಥ ಎಂಬ ಅಭಿಪ್ರಾಯದಿಂದ ಈ ವಿಷಯದಲ್ಲಿ ಪ್ರಮಾಣ ಹೇಳುವರು -

ಅಹಂಕಾರವು ಅಭಿಮಾನ ಆತ್ಮಾ ಎಂಬ ಶಬ್ದಗಳಿಂದ ಹೇಳಲ್ಪಡುತ್ತದೆ ಎಂದೂ ಹೇಳಿದೆ.

ಈ ಶ್ಲೋಕದಲ್ಲಿ 'ತ್ವಂ ಅಹಂ ಚ ಜೀವಾವೇವ' ಅಂದರೆ ನೀನು ನಾನು ಇಬ್ಬರೂ ಜೀವರೇ ಎಂದು ಹೇಳದೇ, 'ಸೋಽಹಂ ಜೀವಃ' ಎಂದು ಪ್ರತ್ಯೇಕ ಹೇಳಲು ಏನು ಕಾರಣ ? ಎಂದರೆ, ಹಾಗೆ ಹೇಳಿದಲ್ಲಿ ಇಬ್ಬರಿಗೂ ಸಾಮ್ಯ ತೋರುವದು. ಸಾಮ್ಯವಾದರೂ ಇಲ್ಲ, ಆದ್ದರಿಂದ ತನಗೆ ಜ್ಞಾನಾದಿಗಳಿಂದ ಮಹತ್ವಸೂಚನೆ ಮಾಡಲು ಪ್ರತ್ಯೇಕವಾಗಿ ಜೀವತ್ವ ಹೇಳಿದ್ದು ಎಂದು ಭಾವ॥೪೦॥

''ಪುರುಷ ಏವೇದಂ ಸರ್ವಂ'' ಮುಂತಾದ ಶ್ರುತಿಗಳಿಂದ ಜಗತ್ತಿನಿಂದ ಅಭಿನ್ನನೆಂದು ತೋರುವ ಶ್ರೀಹರಿಗೆ ಹೇಗೆ ಜೀವನಿಂದ ವೈಲಕ್ಷಣ್ಯ ಹೇಳುವುದು ? ಎಂದರೆ, ವಿರುದ್ಧಪ್ರಮಾಣಗಳಿರುವುದರಿಂದ ಆ ರೀತಿ ತೋರುವುದು ಭ್ರಾಂತಿ ಎಂದು ಹೇಳುತ್ತ ಜೀವವಿಲಕ್ಷಣನೇ ಶ್ರೀಹರಿ ಎಂಬ ಸಿದ್ಧಾಂತ ತಿಳಿಯಬೇಕು ಎಂದು ಹೇಳುವರು -

**ಯಸ್ಮಿನ್ನಿದಂ ಸದಸದಾತ್ಮತಯಾ ವಿಭಾತಿ**
**ಮಾಯಾವಿವೇಕವಿಧುತಿಃ ಸ್ರಜಿವಾಹಿಬುದ್ಧಿಃ ।**
**ತಂ ನಿತ್ಯಮುಕ್ತಪರಿಶುದ್ಧವಿಬುದ್ಧತತ್ತ್ವಂ**
**ಪ್ರತ್ಯೂಢಕರ್ಮಕಲಿಲಪ್ರಕೃತಿಂ ಪ್ರಪದ್ಯೇ ॥೪೧॥**

ಯಸ್ಮಿನ್=ಯಾವ ಶ್ರೀಹರಿಯಲ್ಲಿ ಸದಸತ್=ಮೂರ್ತಾಮೂರ್ತಾತ್ಮಕವಾದ ಇದಂ=ಈ ಪ್ರಪಂಚವು (ಪುರುಷ ಏವೇದಂ ಸರ್ವಂ ಮುಂತಾದ ವಾಕ್ಯಗಳಿಂದ) ಆತ್ಮತಯಾ= ಸ್ವರೂಪವಾಗಿ (ಅಭಿನ್ನವಾಗಿ) ವಿಭಾತಿ=ತೋರುವದೋ ಅದು ಆ ಪ್ರತೀತಿಯು ಸ್ರಜಿ= ಮಾಲೆಯಲ್ಲಿ (ಉಪಲಕ್ಷಣತಯಾ ಹಗ್ಗದಲ್ಲಿ) ಅಹಿಬುದ್ಧಿಃ ಇವ=ಹಾವು ಎಂಬ ಬುದ್ಧಿಯಂತೆ ಮಾಯಾವಿವೇಕವಿಧುತಿಃ=ಮಾಯಾಶಬ್ದಾರ್ಥವಾದ ಜ್ಞಾನ ಮತ್ತು ಜಗತ್ತಿನ ವಿವೇಕದಿಂದ (ಅಂದರೆ ಶ್ರೀಹರಿಸ್ವರೂಪವು ಜ್ಞಾನಾತ್ಮಕವು, ಜಗತ್ತು ಜ್ಞಾನಾತ್ಮಕವಲ್ಲ ಎಂಬ ಭೇದಜ್ಞಾನದಿಂದ) ನಿರಾಕರಣವುಳ್ಳದ್ದು (ಮಾಯಾವಿವೇಕೇನ ವಿದುತಿಃ ಯಸ್ಯಾಃ ಸಾ ಎಂದು ವಿಗ್ರಹ.) ವಾಕ್ಯದಿಂದ ಭ್ರಾಂತಿ ಬಂದರೂ ಯೋಗಿಗಳಿಗೆ ಭೇದಜ್ಞಾನದಿಂದ ಹೋಗುವುದು ಎಂದರ್ಥ.

ತಂ=ಅಂತಹ ಜಗದಭೇದಾರೋಪಾಧಿಷ್ಠಾನನಾದ, ನಿತ್ಯಮುಕ್ತಪರಿಶುದ್ಧವಿಬುದ್ಧತತ್ವಂ= ನಿತ್ಯಮುಕ್ತನಾದ ನಿತ್ಯಪರಿಶುದ್ಧನಾದ ನಿತ್ಯಸರ್ವಜ್ಞನಾದ ಯಾವ ಅನಾರೋಪಿತನಾದ ಸ್ವರೂಪವುಳ್ಳ ಆದ್ದರಿಂದಲೇ ಪ್ರತ್ಯೂಢಕರ್ಮಕಲಿಲಪ್ರಕೃತಿಂ=ದೂರೀಕರಿಸಲ್ಪಟ್ಟ ಕರ್ಮ ಮತ್ತು ಸತ್ವಾದಿಗುಣಮಿಶ್ರ ಪ್ರಕೃತಿಯುಳ್ಳ ಅಂದರೆ ಚಿನ್ಮಾತ್ರದೇಹವುಳ್ಳ ಶ್ರೀಹರಿಯನ್ನು ಭ್ರಮಪರಿಹಾರಕ್ಕಾಗಿ ಪ್ರಪದ್ಯೇ (ಪ್ರಪದ್ಯೇತ)=ಈ ರೀತಿ ಜೀವವಿಲಕ್ಷಣನೆಂದು ತಿಳಿಯಬೇಕು, ಭಜಿಸಬೇಕು ಎಂದರ್ಥ.

**ಭಾಗವತ ತಾತ್ಪರ್ಯ -**

ಈ ಶ್ಲೋಕಕ್ಕೆ ''ವಿವೇಕದಿಂದ ನಿವೃತ್ತವಾಗುವುದರಿಂದ ಯಾವ ಬ್ರಹ್ಮನಲ್ಲಿ ಈ ಪ್ರಪಂಚವು ಕಾರ್ಯಕಾರಣಾತ್ಮಕವಾಗಿ ಸುಳ್ಳಾಗಿಯೇ ತೋರುವದು'' ಎಂಬ ಅಪವ್ಯಾಖ್ಯಾನವನ್ನು ನಿರಾಕರಿಸಲು ಪ್ರಮಾಣದಿಂದಲೇ ತಾತ್ಪರ್ಯ ಹೇಳುವರು -

''ಯತ್ಸ್ವರೂಪತಯಾ ಭಾತಮಜ್ಞಾನಾಂ ಗಗನಾದಿಕಮ್ ।
ವಿವೇಕಜ್ಞಾನಿನಾಂ ರಜ್ಜೌ ಸರ್ಪಮಾವದ್ವಿಧೂಯತೇ ।
ತನ್ನಿತ್ಯಮುಕ್ತಭಾವೇನ ನಿರಸ್ತಪ್ರಕೃತಿಂ ಭಜೇತ್'' ಇತಿ ಜ್ಞಾನವಿವೇಕೇ ।

''ನ ಭ್ರಾಂತಿರ್ಜಗತೋ ದೃಷ್ಟಿಃ ನ ಭ್ರಾಂತಿರ್ಹರಿದರ್ಶನಮ್ ।
ಅನ್ಯೋನ್ಯಾತ್ಮತಯಾ ದೃಷ್ಟಿಃ ಭ್ರಾಂತಿರಿತ್ಯವಧಾರ್ಯತಾಮ್'' ಇತಿ ಚ ।।

''ಮಾಯೇತಿ ಜ್ಞಾನನಾಮ ಸ್ಯಾನ್ಮಾಯೇತಿ ಪ್ರಕೃತಿಸ್ತಥಾ ।
ಜ್ಞಾನಂ ಸ್ವರೂಪಂ ವಿಷ್ಣೋಸ್ತು ಪ್ರಕೃತಿರ್ನ ಹರೇಸ್ತನುಃ ।
ಏವಂ ವಿವೇಕಿನೋ ವಿಶ್ವಂ ಬ್ರಹ್ಮರೂಪೇಣ ನೇಕ್ಷ್ಯತೇ'' ಇತಿ ವಾರಾಹೇ।

ಜ್ಞಾನಪ್ರಕೃತ್ಯಾಖ್ಯಮಾಯಾದ್ವಯಸ್ಯ ವಿವೇಕಜ್ಞಾನಾತ್ ಸದಸತೋಃ ವಿಷ್ಣ್ವಾತ್ಮತಯಾ ಪ್ರತೀತಿಃ ಸ್ರಜ್ಯಹಿಬುದ್ಧಿರಿವ ವಿಧೂಯತ ಇತ್ಯರ್ಥಃ।

ಪಂಚಭೂತಾತ್ಮಕಂ ದೇಹಂ ವಿಷ್ಣೋಃ ಪಶ್ಯಂತ್ಯಯೋಗಿನಃ ।
ತಥಾ ನ ಯೋಗಿರಾದ್ಧಾಂತೋ ಜ್ಞಾನಂ ದೇಹೋ ಯತೋ ಹರೇ''ರಿತಿ ಷಾಡ್ಗುಣ್ಯೇ ।

**ತಾತ್ಪರ್ಯದ ಭಾವಾರ್ಥ-**

ಶ್ರೀಹರಿಗೂ ಜಗತ್ತಿಗೂ ಭೇದವನ್ನು ತಿಳಿಯುವ ಜ್ಞಾನಿಗಳಿಗೆ ಹಗ್ಗದಲ್ಲಿ ಹಾವು ಎಂಬ ಭ್ರಮೆಯಂತೆ ಅಜ್ಞರಿಗೆ ಆಕಾಶಾದಿಜಗತ್ತು ಶ್ರೀಹರಿಯ ಸ್ವರೂಪವೆಂದು ತೋರುವ ಭ್ರಮವು ನಿವೃತ್ತವಾಗುವುದು. ಆದಕಾರಣ ಆ ಶ್ರೀಹರಿಯನ್ನು ನಿತ್ಯಮುಕ್ತನಾದುದರಿಂದ ಪ್ರಕೃತಿಯ ಕರ್ಮಾದಿಗಳ ಸಂಪರ್ಕವಿಲ್ಲದವನೆಂದು ಭಜಿಸಬೇಕು ಎಂದು ಜ್ಞಾನವಿವೇಕದಲ್ಲಿ ಹೇಳಿದೆ.

ಎಲ್ಲವೂ ಬ್ರಹ್ಮ ಎಂಬ ಪ್ರತೀತಿ ಭ್ರಾಂತಿಯಾದರೆ ಎಲ್ಲ ಪದಾರ್ಥಗಳೂ ಬ್ರಹ್ಮನೂ ಭ್ರಾಂತಿಕಲ್ಪಿತರು ಎಂದಾಗುವುದಲ್ಲ. ಕಲ್ಪಿತವು ಅಸತ್ ಅಲ್ಲವೇ ? ಎಂಬ ಶಂಕೆಗೆ ಉತ್ತರ ನ ಭ್ರಾಂತಿಃ ಎಂಬುದು. ಜಗತ್ತು ಸತ್ಯವೆಂಬ ಜ್ಞಾನವು ಭ್ರಮೆಯಲ್ಲ. ಶ್ರೀಹರಿ ಸರ್ವೋತ್ತಮ ಎಂಬ ಜ್ಞಾನವೂ ಭ್ರಮೆಯಲ್ಲ. ಪರಸ್ಪರವಾಗಿ ಜಗತ್ತಿಗೂ ಶ್ರೀಹರಿಗೂ ಅಭೇದವಿದೆಯೆಂಬ ಜ್ಞಾನವೇ ಭ್ರಾಂತಿಯೆಂದು ತಿಳಿಯಬೇಕು. ಅಂದರೆ ಜ್ಞಾನ ಒಂದೇ ಆದರೂ ಅಂಶಭೇದದಿಂದ ಭ್ರಾಂತಿಯಲ್ಲವಾದುದರಿಂದ ಬ್ರಹ್ಮ-ಜಗತ್ತುಗಳಿಗೆ ಮಿಥ್ಯಾತ್ವಪ್ರಸಂಗವಿಲ್ಲವೆಂದು ಭಾವ. ಭ್ರಮಸ್ಥಲದಲ್ಲಿ ಜ್ಞಾನದ ಅಧಿಷ್ಠಾನತಾದಾತ್ಮ್ಯಾಂಶ ಆರೋಪ್ಯಾಂಶಕ್ಕೂ ಭ್ರಾಂತಿತ್ವವು ಸಿದ್ಧಾಂತವಾಗಿದೆ. ಆದರೂ ಎಲ್ಲಡೆ ಅಲ್ಲ.

ಎಲ್ಲಿ ಆರೋಪ್ಯವು ಅಧಿಷ್ಠಾನಸನ್ನಿಹಿತವಾಗಿರುವುದಿಲ್ಲವೋ ಅಲ್ಲಿ ಆರೋಪ್ಯ ಮತ್ತು ತಾದಾತ್ಮ್ಯ ಎರಡೂ ಮಿಥ್ಯಾ=ಅಸತ್ ಆಗುವವು. ಎಲ್ಲಿ ಆರೋಪ್ಯವು ಅಧಿ ಷ್ಠಾನಸನ್ನಿಹಿತವಾಗಿರುವುದೋ ಅಲ್ಲಿ ತಾದಾತ್ಮ್ಯ ಒಂದೇ ಅಸತ್=ಆರೋಪ್ಯವಲ್ಲ. ಉದಾಹರಣೆ - ನಮಗೆ ದೂರದಲ್ಲಿರುವ ಮಾವು-ಹಲಸಿನ ಗಿಡಗಳನ್ನು ನೋಡಿದಾಗ ಅವು ವಾಸ್ತವಿಕವಾಗಿ ಸಮೀಪದಲ್ಲಿದ್ದುದರಿಂದ ಮಾವಿನಮರ ಒಂದೇ ಇದೆ ಎಂದು ಭ್ರಮೆ ಬಂದರೆ, ಆಗ 'ಅವು ಒಂದು' ಎನ್ನುವ ಅಂಶ ಮಾತ್ರ ಸುಳ್ಳು. ಹೊರತು ಮಾವು ಹಲಸು ಎರಡೂ ಸುಳ್ಳಲ್ಲ. ಶಿಂಪನ್ನು ನೋಡಿ ಬೆಳ್ಳಿ ಎಂದು ತಿಳಿದಾಗ ಬೆಳ್ಳಿಯೂ ಸುಳ್ಳು. ಬೆಳ್ಳಿಯ ಅಭೇದವು ಶಿಂಪಿಗೆ ಸುಳ್ಳೇ. ಪ್ರಕೃತದಲ್ಲಿ ಜಗತ್ತು ಬ್ರಹ್ಮ ಇಬ್ಬರೂ ಪ್ರಮಾಣಸಿದ್ಧರಾದ್ದರಿಂದ ಅವರಿಬ್ಬರಿಗೆ ಅಭೇದಾಂಶದಲ್ಲಿಯೇ ಜ್ಞಾನವು ಭ್ರಮ. ಕಾರಣ ಅಭೇದ ಅಸತ್ಯ. ಜಗತ್ತು ಬ್ರಹ್ಮ ಸತ್ಯವೆಂದು ತಿಳಿಯಬೇಕು.

ಮಾಯಾಶಬ್ದದಿಂದಲೇ ಮಿಥ್ಯಾತ್ವ ಹೇಳುವರಲ್ಲ ? ಎಂದರೆ ಇಲ್ಲಿ ಮಾಯಾ ಎಂಬುದು ಭಿನ್ನಪದವಲ್ಲ ಕಿಂತು ಮಾಯಾವಿವೇಕವಿಧುತಿಃ ಎಂಬುದು ಒಂದೇ ಪದವೆಂಬ ಅಭಿಪ್ರಾಯದಿಂದ ಆ ಪದಗಳ ಪ್ರಕೃತೋಪಯುಕ್ತ ಅರ್ಥ ಹೇಳುವರು ''ಮಾಯಾ...'' ಮುಂತಾಗಿ.

ಮಾಯಾ ಎಂಬುದು ಜ್ಞಾನದ ಹೆಸರು. ಮಾಯಾ ಎಂದರೆ ಪ್ರಕೃತಿಯೂ ಹೌದು. (ಜ್ಞಾನ-ಪ್ರಕೃತಿ ಎರಡೂ ಮಾಯಾಶಬ್ದಾರ್ಥವಾಗಿವೆ.) ವಿಷ್ಣುವಿನ ಸ್ವರೂಪವು ಜ್ಞಾನಾತ್ಮಕವಾದುದು. ಪ್ರಕೃತಿಯು ಆದರ ಕಾರ್ಯವಾದ ಜಗತ್ತು ಹರಿಯ ತನು=ಸ್ವರೂಪವಲ್ಲ ಎಂಬುದು ವಿವೇಕ. ಈ ರೀತಿಯ ವಿವೇಕಜ್ಞಾನವುಳ್ಳವನು ಜಗತ್ತನ್ನು ಬ್ರಹ್ಮನೆಂದು ಭ್ರಮಿಸುವುದಿಲ್ಲ ಎಂದು ವರಾಹಪುರಾಣದಲ್ಲಿದೆ.

ತಮ್ಮ ವಾಕ್ಯದಿಂದ ಶ್ಲೋಕತಾತ್ಪರ್ಯ ಸ್ಪಷ್ಟಪಡಿಸುವರು - ಹಗ್ಗದಲ್ಲಿ ಹಾವು ಎಂಬ ಬುದ್ಧಿಯಂತೆ ಮೂರ್ತಾಮೂರ್ತಜಗತ್ತು ಶ್ರೀಹರಿಯಿಂದ ಅಭಿನ್ನವೆಂಬ ಜ್ಞಾನವು ಭ್ರಮೆಯು. ಪರಮಾತ್ಮನು ಜ್ಞಾನಸ್ವರೂಪನು, ಜಗತ್ತು ಪ್ರಕೃತಿಕಾರ್ಯವು ಎಂದು ಮಾಯಾಶಬ್ದದ ಎರಡು ಅರ್ಥಗಳ ಭೇದಜ್ಞಾನದಿಂದ ನಿವೃತ್ತವಾಗುವುದು. 'ಪ್ರತ್ಯೂಢಕರ್ಮಕಲಿಲಪ್ರಕೃತಿಂ' ಎಂದು ಶ್ರೀಹರಿಗೆ ಜಡದೇಹವಿಲ್ಲವೆಂದು ಹೇಳಿದೆ. ಈ ವಿಷಯದಲ್ಲಿ ಪ್ರಮಾಣ ಹೇಳುವರು -

ಮಿಥ್ಯಾಜ್ಞಾನಿಗಳು ಶ್ರೀವಿಷ್ಣುವಿನ ದೇಹವು ಪಂಚಭೂತಾತ್ಮಕ, ಜಡವೆಂದು ತಿಳಿಯುವರು. ಜ್ಞಾನಿಗಳ ಸಿದ್ಧಾಂತ ಹಾಗಲ್ಲ. ಏಕೆಂದರೆ ಶ್ರೀಕೃಷ್ಣನ ದೇಹವು ಜ್ಞಾನಾನಂದಾತ್ಮಕವೇ ಹೊರತು ಪಾಂಚಭೌತಿಕವಲ್ಲ ಎಂದು ಷಾಡ್ಗುಣ್ಯದಲ್ಲಿ ಹೇಳಿದೆ.

ಉಪದೇಶಿಸಿದ ಭೇದಜ್ಞಾನವಷ್ಟೇ ಮೋಕ್ಷಸಾಧನವಲ್ಲ, ಕಿಂತು ಭಕ್ತಿಯೂ ಬೇಕು ಎಂಬ ಅಭಿಪ್ರಾಯದಿಂದ ಪುರಾಕಲ್ಪವೆಂಬ ಅರ್ಥವಾದವನ್ನು ತಿಳಿಸುತ್ತ ಭಕ್ತಿಯನ್ನು ಮಾಡು ಎಂದು ಹೇಳುವರು -

**ಯತ್ಪಾದಪಂಕಜಪರಾಗ(ಪಲಾಶ)ವಿಲಾಸಭಕ್ತ್ಯಾ**
**ಕರ್ಮಾಶಯಗ್ರಥಿತಮುದ್‌ಗ್ರಥಯಂತಿ ಸಂತಃ ।**
**ತತ್ವಂ ನ ತದ್ ದ್ವಿಮತಯೋऽಪಿ ವಿರುದ್ಧಮಾರ್ಗ-**
**ಸ್ರೋತೋಗುಣಾಸ್ತಮರಣಂ ಭಜ ವಾಸುದೇವಮ್ ॥೪೨॥**

ಸಂತಃ=ಸಜ್ಜನರು ಯತ್ಪಾದಪಂಕಜಪಲಾಶವಿಲಾಸಭಕ್ತ್ಯಾ=ಯಾವ ಶ್ರೀಕೃಷ್ಣನ ಪಾದಕಮಲಗಳ ಎಲೆಯಂತಿರುವ ಬೆರಳುಗಳ ಕಾಂತಿಯ ಭಕ್ತಿಯಿಂದ ಆಶಯಗ್ರಥಿತಂ=

ಅಂತಃಕರಣಸಂಬದ್ಧವಾದ ಕರ್ಮ=ಪಾಪವನ್ನು ಉದ್‌ಗ್ರಥಯಂತಿ=ಕಳೆದುಕೊಳ್ಳುವರೋ, ಯತಃ=ಯಾವ ಕಾರಣ ವಿರುದ್ಧಮಾರ್ಗಸ್ರೋತೋಗುಣಾಃ=ಮೋಕ್ಷಮಾರ್ಗಕ್ಕೆ ವಿರುದ್ಧವಾದ್ದರಿಂದ ಹೇಯವೆಂದು ತಿಳಿಯಲ್ಪಟ್ಟ ಸಂಸಾರಪ್ರವಾಹದಲ್ಲಿ ಅನುಭವಿಸುವ ವಿಷಯಗಳುಳ್ಳವರೋ ಆದ್ದರಿಂದ ದ್ವಿಮತಯಃ ಅಪಿ=ಜಗತ್ತು ಪರಮಾತ್ಮ ಇಬ್ಬರಲ್ಲಿ ಬುದ್ಧಿವುಳ್ಳವರಾದರೂ ಭಕ್ತಿವಿಶೇಷದಿಂದ ತತ್ವಂ=ಅಂತಃಕರಣಸಂಬಂದ್ಧವಾದ ಭಗವತ್ಸ್ವರೂಪವನ್ನು ನ ಉದ್‌ಗ್ರಥಯಂತಿ=ಕಳೆದುಕೊಳ್ಳುವುದಿಲ್ಲವೋ ತಂ ವಾಸುದೇವಂ=ಆ ಶ್ರೀಕೃಷ್ಣನನ್ನು ಅರಣಂ ವ್ರಜ=ಶರಣು ಹೋಗು.

**ಭಾಗವತ ತಾತ್ಪರ್ಯ –**

ದ್ವಿಮತಯಃ ಎಂಬುದರ ಅರ್ಥ ತಿಳಿಸುತ್ತ ವಾಕ್ಯಾಭಿಪ್ರಾಯವನ್ನು ಹೇಳುವರು -

**ದ್ವಿಮತಯಃ ಜಗತಿ ಭಗವತಿ ಚ ಪ್ರತೀತಿಯುಕ್ತಾ ಅಪಿ ಭಕ್ತಿವಿಶೇಷಾತ್ ತತ್ವಂ ನ ಉದ್ಗ್ರಥಯಂತಿ । ಸಂಸಾರಗುಣಾಸ್ತೇಷಾಂ ವಿರುದ್ಧಾ ಏವ ಪ್ರತೀಯಂತೇ ಯತಃ ॥**

ಜಗತ್ತಿನಲ್ಲಿ ಪರಮಾತ್ಮನಲ್ಲಿಯೂ ಜ್ಞಾನವುಳ್ಳವರಾದರೋ ಪ್ರತಿದಿನವು ಅಭಿವೃದ್ಧವಾದ ಭಕ್ತಿವಿಶೇಷದಿಂದ ಭಗವತ್ಸ್ವರೂಪ ಕಳೆದುಕೊಳ್ಳುವುದಿಲ್ಲ. ಏಕೆಂದರೆ ಸಂಸಾರದಲ್ಲಿ ಅನುಭವಿಸುವ ವಿಷಯಗಳು ಅವರಿಗೆ ಮೋಕ್ಷವಿರೋಧಿಗಳೆಂದು ತೋರುತ್ತವೆ.

ಏಕಾಂತಭಕ್ತರಲ್ಲದ ಸಾತ್ವಿಕರು ಕೆಲವು ಸಲ ವಿಷಯಾಸಕ್ತರಾದರೂ ಆ ವಿಷಯಾಸಕ್ತಿ ಸ್ವಾಭಾವಿಕವಲ್ಲ. ಕಾರಣ ಕೊನೆಗೊಮ್ಮೆ ಶ್ರೀಕೃಷ್ಣನ ತಾರತಮ್ಯವನ್ನು ತಿಳಿದು ಭಕ್ತಿಯಿಂದ ಕರ್ಮವಾಸನಾರೂಪಸಂಸಾರವನ್ನು ಕಳೆದುಕೊಳ್ಳುವರು. ಅಂದಮೇಲೆ ಏಕಾಂತಭಕ್ತರನ್ನು ಕೇಳಬೇಕೇ ? ಕೈಮುತ್ಯಸಿದ್ಧವೆಂದು ಭಾವ. ॥೪೨॥

ಇಲ್ಲಿಯವರೆಗೆ ಭಕ್ತಿಪ್ರಧಾನವಾದ ಮೋಕ್ಷಮಾರ್ಗವನ್ನು ಉಪದೇಶಿಸಿ, ಬೇರೆ ಮಾರ್ಗದಲ್ಲಿ ರುಚಿ ಹುಟ್ಟದಿರಲೆಂದು ಯೋಗಪ್ರಧಾನಕ ಮೋಕ್ಷಮಾರ್ಗವನ್ನು ನಿಂದಿಸುತ್ತ ಭಕ್ತಿಮಾರ್ಗವನ್ನೇ ಹೇಳುವರು -

**ಕೃಚ್ಛ್ರೋ ಮಹಾನಿಹ ಭವಾರ್ಣವಮಪ್ಲವೇಶಾಃ**
**ಷಡ್ವರ್ಗನಕ್ರಮಸುಖೇನ ತಿತೀರ್ಷಯಂತಿ ।**
**ತತ್ ತ್ವಂ ಹರೇರ್ಭಗವತೋ ಭಜನೀಯಮಂಘ್ರಿಂ**
**ಕೃತ್ವೋಡುಪಂ ವ್ಯಸನಮುತ್ತರ ದುಸ್ತರಾರ್ಣಮ್ ॥೪೩॥**

ಯೇ=ಯಾರು ಅಪ್ಲವೇಶಾಃ=(ಈಶ ಎಂದರೆ ಈಶಭಕ್ತಿ ಎಂದಿಟ್ಟುಕೊಂಡು) ಭಗವದ್‌ಭಕ್ತಿ ಎಂಬ ನೌಕೆ ಇಲ್ಲದವರು ಷಡ್ವರ್ಗನಕ್ರಂ=ಕಾಮಾದಿ ಅರಿಷಡ್ವರ್ಗಗಳೇ ಮೊಸಳೆಗಳಾಗಿವುಳ್ಳ ಭವಾರ್ಣವಂ=ಸಂಸಾರಸಮುದ್ರವನ್ನು ಅಸುಖೇನ=ಸುಖರಹಿತವಾದ (ಕಷ್ಟಸಾಧ್ಯವಾದ) ಯೋಗಮಾರ್ಗದಿಂದ ತಿತೀರ್ಷಯಂತಿ=ದಾಟಲಚ್ಛಿಸುವರೋ ತೇಷಾಂ=ಅವರಿಗೆ ಇಹ=ಸಂಸಾರಸಾಗರವನ್ನು ದಾಟಲು ಮಹಾನ್ ಕೃಚ್ಛ್ರಃ=ಬಹಳ ಕಷ್ಟವಾಗುವುದು. ತತ್=ಆದ್ದರಿಂದ ತ್ವಂ=ನೀನು ಭಗವತಃ ಹರೇಃ=ಪರಮೈಶ್ವರ್ಯಶಾಲಿಯಾದ ಶ್ರೀಕೃಷ್ಣನ ಭಜನೀಯಂ ಅಂಘ್ರಿಂ=ಸೇವ್ಯವಾದ ಪಾದಗಳನ್ನು, ಅವುಗಳಲ್ಲಿ ಭಕ್ತಿಯನ್ನು ಉಡುಪಂ ಕೃತ್ವಾ=ನೌಕೆಯನ್ನಾಗಿ ಮಾಡಿಕೊಂಡು ದುಸ್ತರಾರ್ಣಂ=ಬೇರೆ ರೀತಿಯಿಂದ ದಾಟಲು ಅಸಾಧ್ಯವಾದ ವ್ಯಸನಂ=ಸಂಸಾರದುಃಖವನ್ನು ಉತ್ತರ=ದಾಟು, ಪರಿಹರಿಸಿಕೋ.

**ಮೈತ್ರೇಯ ಉವಾಚ –**

**ಸ ಏವಂ ಬ್ರಹ್ಮಪುತ್ರೇಣ ಕಾಮಾರೇಣಾತ್ಮಮೇಧಸಾ ।**
**ದರ್ಶಿತಾತ್ಮಗತಿಃ ಸಮ್ಯಕ್ ಪ್ರಶಸ್ಯೋವಾಚ ತಂ ನೃಪಃ ॥೪೪॥**

ಸಃ ನೃಪಃ=ಪೃಥುರಾಜನು ಏವಂ=ಈ ರೀತಿಯಾಗಿ ಬ್ರಹ್ಮಪುತ್ರೇಣ=ಬ್ರಹ್ಮನ ಮಗನಾದ ಆತ್ಮಮೇಧಸಾ=ಶ್ರೀಕೃಷ್ಣನ ಜ್ಞಾನವುಳ್ಳ ಅಥವಾ ಮನೋಯೋಗವುಳ್ಳ ಕುಮಾರೇಣ= ಸನತ್ಕುಮಾರರಿಂದ ಸಮ್ಯಕ್=ಚೆನ್ನಾಗಿ ದರ್ಶಿತಾತ್ಮಗತಿಃ=ತಿಳಿಸಲ್ಪಟ್ಟ ಪರಮಾತ್ಮನ ಸ್ಥಿತಿಯುಳ್ಳವನಾಗಿ ಪ್ರಶಸ್ಯ ಉವಾಚ=ಅವರನ್ನು ಸ್ತುತಿಸಿ ಮಾತನಾಡಿದನು. ॥೪೪॥

**ಪೃಥುರುವಾಚ –**

**ಕೃತೋ ಮೇಽನುಗ್ರಹಃ ಪೂರ್ವಂ ಹರಿಣಾರ್ತಾನುಕಂಪಿನಾ ।**
**ತಮಾಪಾದಯಿತುಂ ಬ್ರಹ್ಮನ್ ಭಗವನ್ ಯೂಯಮಾಗತಃ ॥೪೫॥**

ಭಗವನ್=ಪೂಜ್ಯರಾದ ಬ್ರಹ್ಮನ್=ಜ್ಞಾನಿಗಳೇ! ಪೂರ್ವಂ=ಮೊದಲೇ ಆರ್ತಾನುಕಂಪಿನಾ= ದೀನದಯಾಲುವಾದ ಹರಿಣಾ=ಶ್ರೀಕೃಷ್ಣನಿಂದ ಮೇ=ನನಗೆ ಅನುಗ್ರಹಃ ಕೃತಃ=ಅನುಗ್ರಹವು ಮಾಡಲ್ಪಟ್ಟಿದೆ. ತಂ=ಆ ಅನುಗ್ರಹವನ್ನು ಆಪಾದಯಿತಂ=ಸಂಪನ್ನಗೊಳಿಸಲು ಯೂಯಂ= ನೀವು ಆಗತ(ತಾ)ಃ=ಬಂದಿರುವಿರಿ. ॥೪೫॥

**ನಿಷ್ಪಾದಿತಂ ಚ ಕಾರ್ತ್ಸ್ನ್ಯೇನ ಭಗವದ್ಭಿರ್ಘೃಣಾಲುಭಿಃ ।**
**ಸಾಧುದತ್ತಂ ಹಿ ಸರ್ವಂ ಮೇ ಆತ್ಮನಾ ಸಹ ಕಿಂ ದದೇ ॥೪೬॥**

ಘೃಣಾಲುಭಿಃ=ಕೃಪಾಳುಗಳಾದ ಭಗವದ್ಭಿಃ=ಪೂಜ್ಯರಾದ ತಮ್ಮಿಂದ ಕಾರ್ತ್ಸ್ನ್ಯೇನ ನಿಷ್ಪಾದಿತಂ=ಸಂಪೂರ್ಣವಾಗಿ ಸಂಪಾದಿಸಲ್ಪಟ್ಟಿದೆ. ಆತ್ಮನಾ ಸಹ=ನನ್ನ ದೇಹಸಹಿತವಾಗಿ ಮೇ

ಸರ್ವಂ=ನನ್ನದೆಲ್ಲವೂ ಸಾಧುದತ್ತಂ=ಸಜ್ಜನರಿಗೆ ಕೊಡಲ್ಪಟ್ಟಿದೆ. ಅವರ ಅನುಗ್ರಹದಿಂದ ಬಂದುದು, ಅದಕ್ಕೆ ಅವರೇ ದೊರೆಗಳು. ಆದ್ದರಿಂದ ಕಿಂ ದದೇ=ಏನು ಗುರುದಕ್ಷಿಣೆ ಕೊಡಲಿ ? ಎಂದು ಭಾವ. ।।೪೬।।

ಯಾರು ಮಾಲಿಕರೋ ಅವರು ಕೊಟ್ಟದ್ದನ್ನು ಅವರಿಗೇನೇ ದಾನವಾಗಿ ಕೊಡಲು ಬರುವುದಿಲ್ಲ. ಆದರೂ ಸಮುದ್ರದ ನೀರನ್ನು ತೆಗೆದುಕೊಂಡು ಸಮುದ್ರದಲ್ಲಿಯೇ ಅರ್ಘ್ಯ ನೀಡುವಂತೆ, ಅವರದನ್ನೇ ಅವರಿಗೆ ಸಮರ್ಪಣ ಮಾಡಬಹುದು. ಹಾಗೆ ಮಾಡುವೆನು ಎನ್ನುತ್ತಾನೆ -

**ಪ್ರಾಣಾ ದಾರಾಃ ಸುತಾ ಬ್ರಹ್ಮನ್ ಗೃಹಾಶ್ಚ ಸಪರಿಗ್ರಹಾಃ ।**
**ರಾಯೋ ಮಹೀ ಬಲಂ ಕೋಶ ಇತಿ ಸರ್ವಂ ನಿವೇದಿತಮ್ ।।೪೭।।**

ಹೇ ಬ್ರಹ್ಮನ್=ಮುನಿಗಳೇ ! ಪ್ರಾಣಾಃ=ಪ್ರಾಣಗಳು, ದಾರಾಃ=ಹೆಂಡತಿ, ಸುತಾಃ= ಮಕ್ಕಳು, ಸಪರಿಗ್ರಹಾಃ ಗೃಹಾಃ=ಸಲಕರಣೆಗಳಿಂದ ಸಹಿತವಾದ ಮನೆ, ರಾಯಃ=ಹಣ, ಮಹೀ=ಭೂಮಿ, ಬಲಂ=ಸೈನ್ಯ, ಕೋಶಃ=ಖಜಾನೆಯು ಇತಿ ಸರ್ವಂ=ಮೊದಲಾದ ಎಲ್ಲವೂ ನಿವೇದಿತಂ=ನಿಮಗೆ ಸಮರ್ಪಿಸಲ್ಪಟ್ಟಿದೆ. ।।೪೭।।

**ಸೇನಾಪತ್ಯಂ ಚ ರಾಜ್ಯಂ ಚ ದಂಡನೇತೃತ್ವಮೇವ ಚ ।**
**ಸರ್ವಲೋಕಾಧಿಪತ್ಯಂ ಚ ವೇದಶಾಸ್ತ್ರವಿದರ್ಹತಿ ।।೪೮।।**

ಸೇನಾಪತ್ಯಂ=ಸೇನಾಧಿಪತ್ಯವನ್ನು, ರಾಜ್ಯಂ=ರಾಜ್ಯವನ್ನು, ದಂಡನೇತೃತ್ವಂ= ಅಪರಾಧಾನುಗುಣ ಶಿಕ್ಷೆ ಕೊಡುವುದು, ನಿಯಮಿಸುವುದು ಸರ್ವಲೋಕಾಧಿಪತ್ಯಂ ಚ=ಎಲ್ಲ ಲೋಕಗಳ ಅಧಿಪತ್ಯವನ್ನೂ ಸಹ ವೇದಶಾಸ್ತ್ರವಿತ್=ವೇದ-ಶಾಸ್ತ್ರಜ್ಞಾನಿಯೇ ಅರ್ಹತಿ= ಪಡೆಯುವವನು. ।।೪೮।।

**ಸ್ವಮೇವ ಬ್ರಾಹ್ಮಣೋ ಭುಂಕ್ತೇ ಸ್ವಂ ವಸ್ತೇ ಸ್ವಂ ದದಾತಿ ಚ ।**
**ತಸ್ಯೈವಾನುಗ್ರಹೇಣಾನ್ನಂ ಭುಂಜತೇ ಕ್ಷತ್ರಿಯಾದಯಃ ।।೪೯।।**

ಬ್ರಾಹ್ಮಣಃ=ಬ್ರಹ್ಮಜ್ಞಾನಿಯು ಸ್ವಮೇವ ಭುಂಕ್ತೇ=ತನ್ನದನ್ನೇ ಉಣ್ಣುವನು, ಅನುಭವಿಸುವನು. ಸ್ವಂ ವಸ್ತೇ=ತನ್ನದನ್ನೇ ಉಡುವನು. ಸ್ವಂ ದದಾತಿ=ತನ್ನದನ್ನೇ ಕೊಡುವನು. ತಸ್ಯ=ಬ್ರಾಹ್ಮಣರ ಅನುಗ್ರಹೇಣೈವ=ಆಶೀರ್ವಾದದಿಂದಲೇ ಕ್ಷತ್ರಿಯಾದಯಃ=ಕ್ಷತ್ರಿಯರೇ ಮೊದಲಾದವರು ಅನ್ನಂ ಭುಂಜತೇ=ಊಟ ಮಾಡುವರಷ್ಟೇ ! ಕ್ಷತ್ರಿಯರು ದಾನ ಕೊಡಲು ಸ್ವತಂತ್ರರಲ್ಲವೆಂದು ಭಾವ. ।।೪೯।।

**ಯೈರೀದೃಶೀ ಭಗವತೋ ಗತಿರಾತ್ಮವಾದ**
**ಏಕಾಂತತೋ ನಿಗಮಿಭಿಃ ಪ್ರತಿಪಾದಿತಾ ನಃ ।**
**ತುಷ್ಯಂತ್ವದಭ್ರಕರುಣಾಃ ಸ್ವಕೃತೇನ ನಿತ್ಯಂ**
**ಕೋ ನಾಮ ತತ್ ಪ್ರತಿಕರೋತಿ ವಿನೋದಪಾತ್ರಮ್ ॥೫೦॥**

ಯೈಃ=ಯಾರಿಂದ ಆತ್ಮವಾದೇ=ಶ್ರೀಕೃಷ್ಣನ ಪ್ರವಚನದಲ್ಲಿ ಏಕಾಂತತಃ=ನಿಯಮದಿಂದ ನಿಗಮಿಭಿಃ=ವೇದಾರ್ಥನಿಶ್ಚಯವುಳ್ಳವರಿಂದ ನಃ=ನಮಗೆ ಈದೃಶೀ=ಈ ವಿಧವಾದ ಭಗವತಃ ಗತಿಃ=ಶ್ರೀಕೃಷ್ಣನ ಸ್ವರೂಪವು ಪ್ರತಿಪಾದಿತಾ=ತಿಳಿಸಲ್ಪಟ್ಟಿತೋ ತೇ ಯೂಯಂ=ಅಂತಹ ನೀವು ಅದಭ್ರಕರುಣಾಃ=ಬಹಳ ದಯಾಳುಗಳು. ಸ್ವಕೃತೇನ=ನೀವೇ ಮಾಡಿದ ದೀನೋದ್ಧಾರದಿಂದ ನಿತ್ಯಂ ತುಷ್ಯಂತು=ಅಭಿವೃದ್ಧವಾದ ಸಂತೋಷವುಳ್ಳವರಾಗಿರಿ. ಕಃ ನಾಮ=ಯಾರು ತಾನೇ ತತ್ ಪ್ರತಿಕರೋತಿ=ಮಾಡಿದ ಉಪಕಾರಕ್ಕೆ ಪ್ರತ್ಯುಪಕಾರ ಮಾಡುವರು ? ಸಾಧ್ಯವಿಲ್ಲವೆಂದು ಭಾವ. ಇನ್ನು ಯಾರು ಪ್ರತ್ಯುಪಕಾರ ಮಾಡಲು ಪ್ರಯತ್ನಿಸಿದರೆ ವಿನೋದಪಾತ್ರಂ= ಅಪಹಾಸಕ್ಕೀಡಾಗುವನು. ಅಥವಾ (ವಿನಾ ಉದಪಾತ್ರಂ ಎಂದು ಪದಚ್ಛೇದ ಮಾಡಿಕೊಂಡು) ಉದಪಾತ್ರಂ ವಿನಾ ಕಃ ಪ್ರತಿಕರೋತಿ=ಭಕ್ತಿಪೂರ್ವಕವಾಗಿ ಕೈಮುಗಿಯುವುದನ್ನು ಬಿಟ್ಟು ಮತ್ತೇನು ಪ್ರತ್ಯುಪಕಾರ ಮಾಡಬಲ್ಲರು ? ಎಂದೂ ಅರ್ಥ.

**ಮೈತ್ರೇಯ ಉವಾಚ -**

**ತ ಆತ್ಮಯೋಗಪತಯ ಆದಿರಾಜೇನ ಪೂಜಿತಾಃ ।**
**ಶೀಲಂ ತದೀಯಂ ಶಂಸಂತಃ ಖೇಽಭೂವನ್ ಮಿಷತಾಂ ನೃಣಾಮ್ ॥೫೧॥**

ಆದಿರಾಜೇನ=ಪೃಥುರಾಜನಿಂದ ಪೂಜಿತಾಃ=ಗೌರವಿಸಲ್ಪಟ್ಟ ಆತ್ಮಯೋಗಪತಯಃ= ಅಧ್ಯಾತ್ಮಯೋಗೋಪದೇಶಕರಾದ ತೇ=ಸನತ್ಕುಮಾರಾದಿಗಳು ತದೀಯಂ=ರಾಜನ ಶೀಲಂ ಶಂಸಂತಃ=ಸ್ವಭಾವವನ್ನು ಹೊಗಳುತ್ತ ನೃಣಾಂ ಮಿಷತಾಂ=ಜನರು ನೋಡುವಾಗಲೇ ಖೇ ಅಭೂವನ್=ಆಕಾಶಮಾರ್ಗದಲ್ಲಿದ್ದರು. ॥೫೧॥

**ವೈನ್ಯಸ್ತು ಧುರ್ಯೋ ಮಹತಾಂ ಸಂಸ್ಥಿತ್ಯಾಽಧ್ಯಾತ್ಮಶಿಕ್ಷಯಾ ।**
**ಆಪ್ತಕಾಮಮಿವಾತ್ಮಾನಂ ಮೇನ ಆತ್ಮನ್ಯವಸ್ಥಿತಃ ॥೫೨॥**

ವೈನ್ಯಃ ತು=ಪೃಥುರಾಜನಾದರೂ ಸಂಸ್ಥಿತ್ಯಾ=ತನ್ನ ಯೋಗ್ಯತಾನುಸಾರ ಸಂಪೂರ್ಣವಾದ ಅಧ್ಯಾತ್ಮಶಿಕ್ಷಯಾ=ಪರಮಾತ್ಮನ ತತ್ವಜ್ಞಾನ ಮಾಡಿಕೊಳ್ಳುವುದರಿಂದ ಮಹತಾಂ=ತನಗಿಂತ ಚಿಕ್ಕವರಾದ ಎಲ್ಲರಿಗಿಂತ ಧುರ್ಯಃ=ಸ್ವಾಭಾವಿಕವಾದ ಎಲ್ಲ ಜ್ಞಾನಭಕ್ತ್ಯಾದಿಗುಣಗಳ ಉತ್ಕರ್ಷದ ಭಾರವಾಹಕನಾಗಿ ಆತ್ಮನಿ ಅವಸ್ಥಿತಃ=ಸದಾ ಹರ್ಯನುಸಂಧಾನವುಳ್ಳವನಾಗಿ ಆತ್ಮಾನಂ=ತನ್ನನ್ನು ಆಪ್ತಕಾಮಮಿವ ಮೇನೇ=ಮುಕ್ತನಂತೆ ತಿಳಿದುಕೊಂಡನು.

**ಭಾಗವತ ತಾತ್ಪರ್ಯ -**

ಮಹಚ್ಛಬ್ದಕ್ಕೆ ತನಗಿಂತಲೂ ಕಡಿಮೆಯವರಿಗಿಂತ ಉತ್ತಮ ಎಂದಷ್ಟೇ ಅರ್ಥವಾದರೆ ದೈತ್ಯಧುರೀಣರಾದ ಬಲಿಯು ಧುರ್ಯನಾಗಬೇಕಾಗುವುದು. ಕಾರಣ ಇಲ್ಲಿ ಬೇಕಾದ ಮಹತ್‌ಶಬ್ದಾರ್ಥವನ್ನು ಹೇಳುವರು -

**'ನೈಜಃ ಸರ್ವಗುಣೋತ್ಕರ್ಷಃ ಸರ್ವೇಭ್ಯೋ ಮಹದುಚ್ಯತೇ' ಇತಿ ಶಬ್ದನಿರ್ಣಯೇ।**

ತನಗಿಂತ ಕಡಿಮೆಯವರಿಗಿಂತ ಸ್ವಾಭಾವಿಕವಾಗಿ ಜ್ಞಾನ-ಭಕ್ತಿ ಮುಂತಾದ ಎಲ್ಲ ಗುಣಗಳ ಉತ್ಕರ್ಷವು (ಹೆಚ್ಚಳವು) ಮಹತ್ ಎನಿಸುತ್ತದೆ ಎಂದು ಶಬ್ದನಿರ್ಣಯದಲ್ಲಿದೆ.

**ಕರ್ಮಾಣಿ ಚ ಯಥಾಕಾಲಂ ಯಥಾದೇಶಂ ಯಥಾಬಲಮ್ ।**
**ಯಥೋಚಿತಂ ಯಥಾವಿತ್ತಮಕರೋದ್ ಬ್ರಹ್ಮಸಾತ್ಕೃತಮ್ ॥೫೩॥**

ಯಥಾಕಾಲಂ=ಯೋಗ್ಯಕಾಲದಲ್ಲಿ ಯಥಾದೇಶಂ=ಯೋಗ್ಯದೇಶದಲ್ಲಿ ಯಥಾಬಲಂ= ತನ್ನ ಸಾಮರ್ಥ್ಯಾನುಸಾರವಾಗಿ ಯಥೋಚಿತಂ=ಶ್ರೇಷ್ಠವಾಗುವಂತೆ ಯಥಾವಿತ್ತಂ=ತನಗಿರುವ ಸಂಪತ್ತಿಗೆ ಅನುಗುಣವಾಗಿ ಬ್ರಹ್ಮಸಾತ್ಕೃತಂ=ಶ್ರೀಕೃಷ್ಣನಿಗೆ ಸಮರ್ಪಿತವಾಗುವಂತೆ ಕರ್ಮಾಣಿ= ಯಜ್ಞಯಾಗಾದಿಕರ್ಮಗಳನ್ನು ಅಕರೋತ್=ಮಾಡಿದನು. ॥೫೩॥

**ಫಲಂ ಬ್ರಹ್ಮಣಿ ವಿನ್ಯಸ್ಯ ನಿರ್ವಿಷಂಗಃ ಸಮಾಹಿತಃ ।**
**ಕರ್ಮಾಧ್ಯಕ್ಷಂ ಚ ಮನ್ವಾನ ಆತ್ಮಾನಂ ಪ್ರಕೃತೇಃ ಪರಮ್ ॥೫೪॥**

ಫಲಂ=ಫಲವನ್ನು ಬ್ರಹ್ಮಣಿ ವಿನ್ಯಸ್ಯ=ಶ್ರೀಕೃಷ್ಣನಲ್ಲಿ ಸಮರ್ಪಿಸಿ ನಿರ್ವಿಷಂಗಃ= ವಿಷಯಾಸಕ್ತಿ ಇಲ್ಲದಲೇ ಸಮಾಹಿತಃ=ಏಕಾಗ್ರಚಿತ್ತನಾಗಿ ಪ್ರಕೃತೇಃ ಪರಂ=ಪ್ರಕೃತಿಗಿಂತ ಉತ್ತಮನಾದ (ಅಪ್ರಾಕೃತನಾದ) ಆತ್ಮಾನಂ=ಶ್ರೀಕೃಷ್ಣನನ್ನು ಕರ್ಮಾಧ್ಯಕ್ಷಂ ಚ ಮನ್ವಾನಃ=ಕರ್ಮಗಳಿಗೆ ಸಾಕ್ಷಿ ಎಂದು, ಕರ್ಮಗಳನ್ನು ಮಾಡಿಸುವವನ ಎಂದು, ಪೂಜ್ಯನು ಎಂದು ತಿಳಿದವನಾಗಿ ಕರ್ಮಗಳನ್ನು ಮಾಡಿದನು. ॥೫೪॥

**ಗೃಹೇಷು ವರ್ತಮಾನೋಽಪಿ ಸ ಸಾಮ್ರಾಜ್ಯಶ್ರಿಯಾಽನ್ವಿತಃ ।**
**ನಾಸಜ್ಜತೇಂದ್ರಿಯಾರ್ಥೇಷು ನಿರಹಂಮತಿರರ್ಕವತ್ ॥೫೫॥**

ನಿರಹಂಮತಿಃ=ಅಹಂಕಾರವಿಲ್ಲದ (ಕರ್ತೃತ್ವಾಭಿಮಾನರಹಿತನಾದ) ಸಃ=ಪೃಥುರಾಜನು ಸಾಮ್ರಾಜ್ಯಶ್ರಿಯಾ ಅನ್ವಿತಃ=ರಾಜ್ಯಲಕ್ಷ್ಮಿಯಿಂದ ಕೂಡಿದವನಾಗಿ ಗೃಹೇಷು ವರ್ತಮಾನಃ ಅಪಿ=ಮನೆಯಲ್ಲಿಯೇ ವಾಸ ಮಾಡಿದರೂ ಇಂದ್ರಿಯಾರ್ಥೇಷು ನ ಅಸಜ್ಜತ= ವಿಷಯಗಳಲ್ಲಿ ಆಸಕ್ತನಾಗಲಿಲ್ಲ. ॥೫೫॥

**ಏವಮಧ್ಯಾತ್ಮಯೋಗೇನ ಕರ್ಮಾಣ್ಯನುಸಮಾಚರನ್ ।**
**ಪುತ್ರಾನುತ್ಪಾದಯಾಮಾಸ ಪಂಚಾರ್ಚಿಷ್ಯಾತ್ಮಸಮ್ಮತಾನ್ ॥೫೬॥**

ಏವಂ=ಈ ರೀತಿಯಾಗಿ ಅಧ್ಯಾತ್ಮಯೋಗೇನ=ಶ್ರೀಹರಿಯಲ್ಲಿ ಮನಸ್ಸಿಟ್ಟವನಾಗಿ ಕರ್ಮಾಣಿ=ಕರ್ಮಗಳನ್ನು ಸಮಾಚರನ್=ಮಾಡುವವನಾಗಿ ಅರ್ಚಿಷಿ=ಅರ್ಚಿ ಎಂಬ ಪತ್ನಿಯಲ್ಲಿ ಆತ್ಮಸಮ್ಮತಾನ್=ತನಗೆ ಅನುಗುಣರಾದ ಪಂಚ ಪುತ್ರಾನ್=ಐದು ಗಂಡು ಮಕ್ಕಳನ್ನು ಉತ್ಪಾದಯಾಮಾಸ=ಹುಟ್ಟಿಸಿದನು. ॥೫೬॥

**ವಿಜಿತಾಶ್ವಂ ಧೂಮಕೇಶಂ ಹರ್ಯಕ್ಷಂ ದ್ರವಿಣಂ ವೃಕಮ್ ।**
**ಸರ್ವೇಷಾಂ ಲೋಕಪಾಲಾನಾಂ ದಧಾರೈಕಃ ಪೃಥಗ್‌ಗುಣಾನ್ ॥೫೭॥**

ವಿಜಿತಾಶ್ವಂ=ವಿಜಿತಾಶ್ವನನ್ನು, ಧೂಮಕೇಶಂ=ಧೂಮಕೇಶನನ್ನು, ಹರ್ಯಕ್ಷಂ=ಹರ್ಯಕ್ಷನನ್ನು ದ್ರವಿಣಂ=ದ್ರವಿಣನನ್ನು ವೃಕಂ=ವೃಕನನ್ನು ಹೀಗೆ ಐದು ಮಕ್ಕಳನ್ನು ಪಡೆದನು. ಏಕಃ=ಒಬ್ಬನೇ ಸರ್ವೇಷಾಂ ಲೋಕಪಾಲಾನಾಂ=ಎಲ್ಲ ಲೋಕಪಾಲಕರ ಪೃಥಕ್ ಗುಣಾನ್=ಅವರವರ ಗುಣಗಳನ್ನು ದಧಾರ=ಧರಿಸಿದನು. ॥೫೭॥

**ಗೋಪೀಥಾಯ ಜಗತ್ಸೃಷ್ಟೇಃ ಕಾಲೇ ಸ್ವೇ ಸ್ವೇಽಚ್ಯುತಾತ್ಮಕಃ ।**
**ಮನೋವಾಙ್ಮೂರ್ತಿಭಿಃ ಸೌಮ್ಯೈರ್ಗುಣೈಃ ಸಂರಂಜಯನ್ ಪ್ರಜಾಃ ॥೫೮॥**

ಜಗತ್ಸೃಷ್ಟೇಃ=ಹುಟ್ಟಿದ ಜಗತ್ತನ್ನು ಗೋಪೀಥಾಯ=ರಕ್ಷಿಸಲು ಸ್ವೇ ಸ್ವೇ ಕಾಲೇ=ತಮ್ಮ ತಮ್ಮ ಕಾಲದಲ್ಲಿ ಮನೋವಾಙ್ಮೂರ್ತಿಭಿಃ=ಮನಸ್ಸು ಮಾತು ಮೈಗಳಿಂದ (ಮನೋವಾಕ್ ಕಾಯಗಳಿಂದ) ಅಚ್ಯುತಾತ್ಮಕಃ=ಶ್ರೀಹರಿಯಲ್ಲಿ ಮನಸಿಟ್ಟವನಾಗಿ ಸೌಮ್ಯೈಃ ಗುಣೈಃ=ಶಾಂತವಾದ ಗುಣಗಳಿಂದ ಪ್ರಜಾಃ=ಪಜೆಗಳನ್ನು ಸಂರಂಜಯನ್=ಸಂತೋಷಗೊಳಿಸುವನಾಗಿ.॥೫೮॥

ರಾಜಶಬ್ದನಿರ್ವಚನ ಮಾಡಿ ಇಂದ್ರಾದಿಲೋಕಪಾಲಕರ ಗುಣಧಾರಣ ತೋರಿಸುವರು-

**ರಾಜೇತ್ಯಧಾನ್ನಾಮಧೇಯಂ ಸೋಮರಾಜ ಇವಾಪರಃ ।**
**ಸೂರ್ಯವದ್ ವಿಸೃಜನ್ ಗೃಹ್ಣನ್ ಪ್ರತಪಂಶ್ಚ ಭುವೋ ವಸು ॥೫೯॥**

ಅಪರಃ ಸೋಮರಾಜ ಇವ=ಚಂದ್ರನಂತೆ ರಾಜಾ ಇತಿ=ರಾಜನೆಂಬ ನಾಮಧೇಯಂ=ಹೆಸರನ್ನು ಅಧಾತ್=ಧರಿಸಿದನು. (ರಂಜನಾತ್ ರಾಜಾ-ಪ್ರಜೆಗಳನ್ನು ಸಂತೋಷಗೊಳಿಸುವವನಾದ್ದರಿಂದ ರಾಜಾ ಎಂದು ಹೆಸರನ್ನು ಅನ್ವರ್ಥಪಡಸಿದನು.) ಭುವಃ=ಭೂಮಿಯಿಂದ ವಸು=ನೀರನ್ನು ಸೂರ್ಯವತ್=ಸೂರ್ಯನು ತೆಗೆದುಕೊಂಡು ಬಿಡುವಂತೆ ವಸು=ಧನರತ್ನಗಳನ್ನು ಗೃಹ್ಣನ್=ಸ್ವೀಕರಿಸುತ್ತ ವಿಸೃಜನ್=ಕೊಡುತ್ತ (ಕರ ಸ್ವೀಕರಿಸುತ್ತ, ದಾನ ಕೊಡುತ್ತ) ಪ್ರತಪನ್=ಸೂರ್ಯನು ತಾಪಗೊಳಿಸುವಂತೆ, ಪ್ರಜೆಗಳಿಗೆ ಆಜ್ಞೆ ಮಾಡುತ್ತ.॥೫೯॥

**ದುರ್ಧರ್ಷಸ್ತೇಜಸೇವಾಗ್ನಿರ್ಮಹೇಂದ್ರ ಇವ ದುರ್ಜಯಃ ।**
**ತಿತಿಕ್ಷಯಾ ಧರಿತ್ರೀವ ದ್ಯೌರಿವಾಭೀಷ್ಟದೋ ನೃಣಾಮ್ ॥೬೦॥**

ತೇಜಸಾ=ವರ್ಚಸ್ಸಿನಿಂದ (ಪ್ರಭಾವದಿಂದ) ಅಗ್ನಿರಿವ=ಅಗ್ನಿಯಂತೆ ದುರ್ಧರ್ಷಃ= ಎದುರಿಸಲಾಗದವನಾಗಿ, ಮಹೇಂದ್ರ ಇವ ದುರ್ಜಯಃ=ಇಂದ್ರನಂತೆ ಗೆಲ್ಲಲಾಗದವನಾಗಿ, ತಿತಿಕ್ಷಯಾ=ಸಹನೆಯಿಂದ ಧರಿತ್ರೀ ಇವ=ಭೂಮಿಯಂತೆ ಇದ್ದವನಾಗಿ, ದ್ಯೌರಿವ=ಸ್ವರ್ಗದಂತೆ ನೃಣಾಂ=ಜನರಿಗೆ ಅಭೀಷ್ಟದಃ=ಅಪೇಕ್ಷಿತವಾದದ್ದನ್ನು ಕೊಡುವವನು ಆಗಿದ್ದನು. ॥೬೦॥

**ವರ್ಷತಿ ಸ್ಮ ಯಥಾಕಾಮ್ಯೈಃ ಪರ್ಜನ್ಯ ಇವ ತರ್ಪಯನ್ ।**
**ಸಮುದ್ರ ಇವ ದುರ್ಬೋಧಃ ಸತ್ಯೇನಾಚಲರಾಡಿವ ॥೬೧॥**

ಪರ್ಜನ್ಯಃ ಇವ=ಮೋಡಗಳಂತೆ ಯಥಾಕಾಮ್ಯೈಃ ತರ್ಪಯನ್=ತೃಪ್ತಿಪಡಿಸುತ್ತ, ವರ್ಷತಿ ಸ್ಮ=ಕಾಮನೆಗಳಿಂದ ಮಳೆಗರೆಯುತ್ತಿದ್ದನು. (ಎಲ್ಲರ ಅಭೀಷ್ಟಗಳನ್ನು ನೀಡುತ್ತಿದ್ದನು.) ಸಮುದ್ರಃ ಇವ ದುರ್ಬೋಧಃ=*ಸಮುದ್ರದಂತೆ ತಿಳಿಯದಾದನು. ಸತ್ಯೇನ ಅಚಲರಾಡಿವ=ಸತ್ಯವಚನದಿಂದ ಮೇರುಪರ್ವತದಂತೆ ಅಚಲವಾಗಿದ್ದನು.

*ಸಮುದ್ರವು ಗಂಭೀರ. (ಆಳವಾದುದು.) ಇವನು ಅಭಿಪ್ರಾಯದಿಂದ ತಿಳಿಯದವನಾಗಿದ್ದನು ಎಂದು ಭಾವ. ॥೬೧॥

**ಧರ್ಮರಾಡಿವ ಶಿಕ್ಷಾಯಾಮಾಶ್ಚರ್ಯೇ ಹಿಮವಾನಿವ ।**
**ಕುಬೇರ ಇವ ಕೋಶಾಢ್ಯೋ ಗುಪ್ತಾರ್ಥೋ ವರುಣೋ ಯಥಾ ॥೬೨॥**

ಶಿಕ್ಷಾಯಾಂ=ಅಪರಾಧಿಗಳಿಗೆ ದಂಡನೆ ಮಾಡುವುದರಲ್ಲಿ ಧರ್ಮರಾಟ್ ಇವ= ಯಮಧರ್ಮರಾಜನಂತೆ, ಆಶ್ಚರ್ಯೇ=ಅದ್ಭುತತೆಯಲ್ಲಿ ಹಿಮವಾನ್ ಇವ=ಹಿಮಾಲಯದಂತೆ, ಕುಬೇರಃ ಇವ=ಕುಬೇರನಂತೆ ಕೋಶಾಢ್ಯಃ=ಧನವಂತನು, ವರುಣೋ ಯಥಾ=ವರುಣನಂತೆ ಗುಪ್ತಾರ್ಥಃ=ರಹಸ್ಯವಾದ ಸಂಪತ್ತುಳ್ಳವನು ಆಗಿದ್ದನು. ॥೬೨॥

**ಮಾತರಿಶ್ವೇವ ಸರ್ವಾತ್ಮಾ ಬಲೇನ ಮಹತೌಜಸಾ ।**
**ಅವಿಷಹ್ಯತಯಾ ದೇವೋ ಭಗವಾನ್ ಭೂತರಾಡಿವ ॥೬೩॥**

ಬಲೇನ =ದೈಹಿಕಬಲದಿಂದ ಮಹತೌಜಸಾ=ಅವಷ್ಟಂಭನಶಕ್ತಿಯಿಂದ ಮಾತರಿಶ್ವಾ ಇವ ಸರ್ವಾತ್ಮಾ=ಗಾಳಿಯಂತೆ ಎಲ್ಲಕಡೆ ಸಂಚರಿಸುವ ಶಕ್ತಿಯುಳ್ಳವನು. ಅವಿಷಹ್ಯತಯಾ= ಸಹಿಸಲಾಗದ್ದರಿಂದ ಭಗವಾನ್ ದೇವಃ ಭೂತರಾಟ್ ಇವ=ಪೂಜ್ಯರಾದ ರುದ್ರದೇವರಂತೆ, ಇದ್ದನು. ॥೬೩॥

**ಕಂದರ್ಪ ಇವ ಸೌಂದರ್ಯೇ ಮನಸ್ವೀ ಮೃಗರಾಡಿವ ।**
**ವಾತ್ಸಲ್ಯೇ ಮನುವನ್ನೃಣಾಂ ಪ್ರಭುತ್ವೇ ಭಗವಾನಜಃ ॥೬೪॥**

ಸೌಂದರ್ಯೇ=ರೂಪದಲ್ಲಿ ಕಂದರ್ಪಃ ಇವ=ಮನ್ಮಥನಂತೆ, ಮೃಗರಾಡಿವ=ಸಿಂಹದಂತೆ ಮನಸ್ವೀ=ಧೈರ್ಯಶಾಲಿಯು, ನೃಣಾಂ ವಾತ್ಸಲ್ಯೇ=ಜನರನ್ನು ಪ್ರೀತಿಸುವುದರಲ್ಲಿ ಮನುವತ್=ಮನುವಿನಂತೆ, ಪ್ರಭುತ್ವೇ=ನಿಯಮನದಲ್ಲಿ ಭಗವಾನ್ ಅಜಃ ಇವ=ಬ್ರಹ್ಮದೇವರಂತೆ ಇದ್ದನು. ॥೬೪॥

**ಬೃಹಸ್ಪತಿರ್ಬ್ರಹ್ಮವಾದೇ ಆತ್ಮತತ್ತ್ವೇ ಸ್ವಯಂ ಹರಿಃ ।**
**ಭಕ್ತ್ಯಾ ಗೋಗುರುವಿಪ್ರೇಷು ವಿಷ್ವಕ್ಸೇನಾನುವರ್ತಿಷು ॥೬೫॥**

ಬ್ರಹ್ಮವಾದೇ=ವೇದವನ್ನು ಹೇಳುವುದರಲ್ಲಿ ಬೃಹಸ್ಪತಿಃ=ಬೃಹಸ್ಪತಿಯಂತೆ, ಆತ್ಮತತ್ತ್ವೇ=ಶ್ರೀಹರಿಯನ್ನು ತಿಳಿಯುವುದರಲ್ಲಿ ಸ್ವಯಂ ಹರಿಃ=ಸಾಕ್ಷಾತ್ ಶ್ರೀಹರಿಯಿದ್ದಂತೆ (ಅಧಿಕದೃಷ್ಟಾಂತ) ಇದ್ದನು.

ವಿಷ್ವಕ್ಸೇನಾನುವರ್ತಿಷು=ಭಗವದ್ಭಕ್ತರಾದ ಗೋಗುರುವಿಪ್ರೇಷು=ಗೋಗಳು ಗುರುಗಳು ಬ್ರಾಹ್ಮಣರುಗಳಲ್ಲಿ ಭಕ್ತ್ಯಾ=ಭಕ್ತಿಯಿಂದ, (ಅನ್ವಯ ಮುಂದುವರಿಯುವುದು)॥೬೫॥

**ಹ್ರಿಯಾ ಪ್ರಶ್ರಯಶೀಲಾಭ್ಯಾಮಾತ್ಮತುಲ್ಯಪರೋದ್ಯಮೈಃ ।**
**ಕೀರ್ತ್ಯೋರ್ಧ್ವಗೀತಯಾ ಪುಂಭಿಸ್ತ್ರೈಲೋಕ್ಯೇ ತತ್ರ ತತ್ರ ಹ ॥೬೬॥**

**ಪ್ರವಿಷ್ಟಃ ಕರ್ಣರಂಧ್ರೇಷು ಸ್ತ್ರೀಣಾಂ ರಾಮಃ ಸತಾಮಿವ ॥೬೭॥**

॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ ದ್ವಾವಿಂಶೋಽಧ್ಯಾಯಃ ॥

ಹ್ರಿಯಾ=ಲಜ್ಜಾದಿ ಗುಣಗಳಿಂದ, ಪ್ರಶ್ರಯಶೀಲಾಭ್ಯಾಂ=ವಿನಯ ಸ್ವಭಾವಗಳಿಂದ ಆತ್ಮತುಲ್ಯಪರೋದ್ಯಮೈಃ=ತನಗೆ ಹಿತವಾಗುವ ಪ್ರಯತ್ನಗಳಂತೆ ಇರುವ ಪರಹಿತ-ಪ್ರಯತ್ನಗಳಿಂದ ತ್ರೈಲೋಕ್ಯೇ=ಮೂರುಲೋಕಗಳಲ್ಲಿ ತತ್ರ ತತ್ರ=ಅಲ್ಲಲ್ಲಿ ಪುಂಭಿಃ=ಜನರಿಂದ ಊರ್ಧ್ವಗೀತಯಾ=ಉಚ್ಚವಾಗಿ ಗಾನಮಾಡಲ್ಪಟ್ಟ ಕಿರ್ತ್ಯಾ=ಕೀರ್ತಿಯಿಂದಲೂ ಸತಾಂ=ಸಜ್ಜನರ ಹಾಗೂ ಸ್ತ್ರೀಣಾಂ=ಸ್ತ್ರೀಯರ ಕರ್ಣರಂಧ್ರೇಷು=ಕಿವಿಗಳಲ್ಲಿ ರಾಮ ಇವ ಪ್ರವಿಷ್ಟಃ=ಶ್ರೀರಾಮನಂತೆ ಪ್ರವೇಶಿಸಿದನು. ಅವನ ಕೀರ್ತಿ ಎಲ್ಲೆಡೆ ಹರಡಿತು ಎಂದು ಭಾವ॥೬೬-೬೭॥

**ಭಾಗವತ ತಾತ್ಪರ್ಯ -**

೬೫ ನೇ ಶ್ಲೋಕದಲ್ಲಿ ಪರಮಾತ್ಮನ ಜ್ಞಾನ ಮಾಡಿಕೊಳ್ಳುವುದರಲ್ಲಿ ಶ್ರೀಹರಿಯ ಸಾಮ್ಯ ಹೇಗೆ ? ಎಂಬ ಶಂಕೆ ಬರುವುದರಿಂದ ಅದನ್ನು ಪ್ರಮಾಣದಿಂದಲೇ ಪರಿಹರಿಸುವರು -

'ಅನಾದ್ಯಂತಂ ಪರಂ ಬ್ರಹ್ಮ ನ ದೇವಾ ಋಷಯೋ ವಿದುಃ ।
ಏಕಸ್ತದ್ವೇದ ಭಗವಾನ್ ಪ್ರಭುರ್ನಾರಾಯಣಃ ಸ್ವರಾಟ್' ಇತಿ ಮೋಕ್ಷಧರ್ಮೇಷು ।

ತುದಿ-ಮೊದಲಿಲ್ಲದ ಪರಬ್ರಹ್ಮನನ್ನು ದೇವತೆಗಳಾಗಲೀ, ಋಷಿಗಳಾಗಲೀ ತಿಳಿಯಲಾರರು. ಸ್ವತಂತ್ರನಾದ, ಸರ್ವಸಮರ್ಥನಾದ, ಐಶ್ವರ್ಯಶಾಲಿಯಾದ ನಾರಾಯಣನು ಒಬ್ಬನೇ ಆ ಪರಮಾತ್ಮನನ್ನು ತಿಳಿದವನು. ಪೃಥುವು ಕರ್ಮಜದೇವತೆಯಾದ್ದರಿಂದ ಅವನೂ ತಿಳಿಯಲಾರನೆಂದರ್ಥ. ಆದ್ದರಿಂದ ಅಧಿಕದೃಷ್ಟಾಂತ ಕೊಟ್ಟಿರುವರು ಎಂದರ್ಥ.

**ಭಾಗವತ ತಾತ್ಪರ್ಯ -**

೬೭ ನೇ ಶ್ಲೋಕದಲ್ಲಿ ಪೃಥುವಿಗೆ ಶ್ರೀರಾಮನ ದೃಷ್ಟಾಂತವೂ ಸಹ ಅಧಿಕದೃಷ್ಟಾಂತವೆಂದು ತಿಳಿಸುವರು -

''ಗುರುವಿಪ್ರೇಷು ಭಕ್ತ್ಯಾ ಚ ಪರೇಷಾಂ ಹಿತಕೃತ್ತಯಾ ।
ಪ್ರಶ್ರಯೇಣ ಚ ಕೀರ್ತ್ಯಾ ಚ ಪೃಥೂ ರಾಮಮನುವ್ರತಃ'' ಇತಿ ಬ್ರಹ್ಮಾಂಡೇ ॥

''ನ ಗುರುರ್ನ ಚ ಧರ್ಮೋಽಸ್ತಿ ರಾಮದೇವಸ್ಯ ಕುತ್ರಚಿತ್ ।
ತಥಾಪಿ ಧರ್ಮರಕ್ಷಾರ್ಥಂ ಗುರುಭಕ್ತಿಮದರ್ಶಯತ್'' ಇತಿ ವಾರಾಹೇ ॥

ಬ್ರಾಹ್ಮಣರಲ್ಲಿ ಗುರುಗಳಲ್ಲಿ ಭಕ್ತಿ ಮಾಡುವುದರಲ್ಲಿ, ಪರರಿಗೆ ಹಿತ ಮಾಡುವುದರಲ್ಲಿ, ವಿನಯದಲ್ಲಿ, ಕೀರ್ತಿಯಲ್ಲಿ ಪೃಥುವು ಶ್ರೀರಾಮನನ್ನು ಅನುಸರಿಸಿದನು ಎಂದು ಬ್ರಹ್ಮಾಂಡಪುರಾಣದಲ್ಲಿದೆ.

ಶ್ರೀರಾಮಚಂದ್ರನಿಗೆ ಗುರುಗಳಾಗಲೀ ಧರ್ಮಗಳಾಗಲೀ ಇಲ್ಲ. ಆದರೂ ಧರ್ಮರಕ್ಷಣೆಗಾಗಿ ಗುರುಭಕ್ತಿಯನ್ನು ಪ್ರದರ್ಶಿಸಿದನು ಎಂದು ವರಾಹಪುರಾಣದಲ್ಲಿದೆ.

॥ ಇಲ್ಲಿಗೆ ಇಪ್ಪತ್ತೆರಡನೇ ಅಧ್ಯಾಯವು ಮುಗಿಯಿತು ॥

# ಅಥ ತ್ರಯೋವಿಂಶೋಽಧ್ಯಾಯಃ

ಈ ಅಧ್ಯಾಯದಲ್ಲಿ ಯೋಗದಿಂದ ದೇಹತ್ಯಾಗ ಮಾಡುವ ರೀತಿಯನ್ನು ಮತ್ತು ಪೃಥಿವ್ಯಾದಿತತ್ವಗಳಿಗೂ ಅವುಗಳ ಅಭಿಮಾನಿಗಳಿಗೂ ತಮ್ಮ ತಮ್ಮ ಕಾರಣದಲ್ಲಿ ಪ್ರವೇಶವೆಂಬ ಲಯದ ಚಿಂತನೆಯನ್ನು ದೇಹತ್ಯಾಗ ಮಾಡುವಾಗ ಮಾಡಬೇಕು ಎಂದು ತಿಳಿಸುವರು. ಮೊದಲಿಗೆ ಪೃಥುರಾಜನು ತಪಸ್ಸು ಪ್ರಾರಂಭ ಮಾಡಿದ ರೀತಿಯನ್ನು ತಿಳಿಸುವರು.

**ಮೈತ್ರೇಯ ಉವಾಚ –**

**ದೃಷ್ಟ್ವಾಽಽತ್ಮಾನಂ ಪ್ರವಯಸಮೇಕದಾ ವೈನ್ಯ ಆತ್ಮವಾನ್ ।**
**ಆತ್ಮನಾ ವರ್ಧಿತಾಶೇಷಸಾನುಸರ್ಗಃ ಪ್ರಜಾಪತಿಃ ॥೧॥**

ಆತ್ಮನಾ=ತನ್ನಿಂದ ವರ್ಧಿತಾಶೇಷಸಾನುಸರ್ಗಃ=(ವರ್ಧಿತ)ಬೆಳಿಸಲ್ಪಟ್ಟ (ಅಶೇಷ)ಎಲ್ಲ ಸಾನುಸುರ್ಗಃ=ಅನ್ನಪಾನಾದಿಗಳು ಪುರಗ್ರಾಮಾದಿಗಳೆಂಬ ಅನುಸರ್ಗಸಹಿತವಾದ ಪುತ್ರಪೌತ್ರಾದಿಸರ್ಗವುಳ್ಳ (ಮಕ್ಕಳು-ಮೊಮ್ಮಕ್ಕಳನ್ನು ಪಡೆದು ಸಾಕಷ್ಟು ಪಟ್ಟಣಗ್ರಾಮಗಳನ್ನು ನಿರ್ಮಾಣ ಮಾಡಿ ಧಾನ್ಯಾದಿಗಳನ್ನು ಬೆಳೆಸಿ ಸಮೃದ್ಧನಾದ ಎಂದರ್ಥ) ಪ್ರಜಾಪತಿಃ=ಪ್ರಜಾಪಾಲಕನಾದ ಆತ್ಮವಾನ್=ಮನೋಜಯವುಳ್ಳ ವೈನ್ಯಃ=ಪೃಥುರಾಜನು ಆತ್ಮಾನಂ=ತನ್ನನ್ನು ಏಕದಾ=ಒಂದುಸಲ ಪ್ರವಯಸಂ=ವೃದ್ಧನಾದದ್ದನ್ನು ದೃಷ್ಟ್ವಾ=ನೋಡಿ (ತಿಳಿದು),

'ತಪೋವನಂ ಅಗಾತ್' ಎಂದು ಮೂರನೇ ಶ್ಲೋಕದಲ್ಲಿ ಅನ್ವಯ. ॥೧॥

**ಜಗತಸ್ತಸ್ಥುಷಶ್ಚಾಪಿ ವೃತ್ತಿದೋ ಧರ್ಮಭೃತ್ ಸತಾಮ್ ।**
**ನಿಷ್ಪಾದಿತೇಶ್ವರಾದೇಶೋ ಯದರ್ಥಮಿಹ ಜಜ್ಞಿವಾನ್ ॥೨॥**

ಯದರ್ಥಂ=ಯಾವುದಕ್ಕಾಗಿ ಇಹ=ಭೂಮಿಯಲ್ಲಿ ಜಗ್ಮಿವಾನ್=ಹುಟ್ಟಿದನೋ ನಿಷ್ಪಾದಿತೇಶ್ವರಾದೇಶಃ=ಪ್ರಜಾಪಾಲನ ಮಾಡಬೇಕೆಂಬ ಶ್ರೀಹರಿಯ ಆಜ್ಞೆಯನ್ನು ನೆರವೇರಿಸಿದವನಾಗಿ ಜಗತಃ ತಸ್ಥುಷಶ್ಚ=ಜಂಗಮಸ್ಥಾವರಗಳಿಗೆ ವೃತ್ತಿದಃ=ಜೀವನೋಪಾಯ ಕಲ್ಪಿಸಿದವನಾಗಿ ಸತಾಂ=ಸಜ್ಜನರ ಧರ್ಮಭೃತ್=ಧರ್ಮ ಸಂರಕ್ಷಿಸುವವನೂ ಆಗಿದ್ದನು. ಉದ್ಯಾನಗಳನ್ನು ಮಾಡುವ ಮುಖಾಂತರ ಸ್ಥಾವರಗಳಿಗೆ ಬದುಕನ್ನು ಇತ್ತವನೆಂದು ಭಾವ.

**ಆತ್ಮಜೇಷ್ವಾತ್ಮಜಾಂ ನ್ಯಸ್ಯ ವಿರಹಾದ್ ರುದತೀಮಿವ ।**
**ಪ್ರಜಾಸು ವಿಮನಾಸ್ವೇಕಃ ಸದಾರೋऽಗಾತ್ ತಪೋವನಮ್ ॥೩॥**

ವಿರಹಾತ್ ರುದತೀಂ ಇವ ಸ್ಥಿತಾಂ=ಮುಂದೆ ಆಗುವ ರಾಜನ ವಿಯೋಗದಿಂದ ಅಳುತ್ತಿರುವಂತೆ ಕಾಣುವ ಆತ್ಮಜಾಂ=ಪೃಥ್ವಿಯನ್ನು ಆತ್ಮಜೇಷು=ತನ್ನ ಮಕ್ಕಳಲ್ಲಿ ನ್ಯಸ್ಯ=ಇರಿಸಿ ಪ್ರಜಾಸು=ಪ್ರಜೆಗಳು ವಿಮನಾಸು (ಸತ್ಸು)=ಚಿಂತಾಕ್ರಾಂತರಾಗಿರಲು ಸದಾರಃ=ಪತ್ನೀಸಹಿತನಾಗಿ ತಪೋವನಂ ಆಗಾತ್=ತಪಸ್ಸಿಗಾಗಿ ವನಕ್ಕೆ ತೆರಳಿದನು. ॥೩॥

**ತತ್ರಾಪಾದ್ಯಾತ್ಮನಿಯಮೋ ವೈಖಾನಸಸುಸಮ್ಮತೇ ।**
**ಆರಬ್ಧ ಉಗ್ರತಪಸಿ ಯಥಾ ಸ್ವವಿಷಯೇ ಪುರಾ ॥೪॥**

ಪುರಾ=ರಾಜನಾಗಿರುವಾಗ ಸ್ವವಿಷಯೇ=ತನ್ನ ರಾಷ್ಟ್ರದಲ್ಲಿ ಉಗ್ರತಪಸಿ=ದುಷ್ಕರ ಸಂತಾಪಗೊಳಿಸುವ ವಿಷಯದಲ್ಲಿ ಯಥಾ ಆರಬ್ಧಃ=ಹೇಗೆ ಪ್ರಾರಂಭಿಸಿದನೋ ತಥಾ=ಹಾಗೆ ತತ್ರ=ಆ ವನದಲ್ಲಿ ವೈಖಾನಸಸುಸಮ್ಮತೇ=ವಾನಪ್ರಸ್ಥರಿಗೆ ಒಪ್ಪಿಗೆಯಾದ ಆಪಾದ್ಯಾತ್ಮ-ನಿಯಮಃ=ಸಂಪಾದಿಸಬೇಕಾದ ಗಡ್ಡೆ-ಗೆಣಸುಗಳನ್ನೇ ಆಹಾರವಾಗಿರುವ ಮನೋದಾರ್ಢ್ಯ-ವುಳ್ಳವನಾಗಿ ಉಗ್ರಾತಪಸಿ ಆರಬ್ಧಃ=ಕಾಯಕ್ಲೇಶರೂಪವಾದ ತಪಸ್ಸಿನಲ್ಲಿ ಪ್ರವೃತ್ತನಾದನು.

ಮನೋನಿಯಮಗಳನ್ನೇ ಹೇಳುವರು

**ಕಂದಮೂಲಫಲಾಹಾರಃ ಶುಷ್ಕಪರ್ಣಾಶನಃ ಕ್ವಚಿತ್ ।**
**ಅಬ್ಭಕ್ಷಃ ಕತಿಚಿತ್ ಪಕ್ಷಾನ್ ವಾಯುಭಕ್ಷಸ್ತತಃ ಪರಮ್ ॥೫॥**

ಕಂದಮೂಲಫಲಾಹಾರಃ=ವನದಲ್ಲಿಯೇ ದೊರಕುವ ಗೆಡ್ಡೆ- ಗೆಣಸು-ಹಣ್ಣುಗಳೇ ಆಹಾರವಾಗಿವುಳ್ಳವನಾಗಿ ಕ್ವಚಿತ್=ಕೆಲವೊಮ್ಮೆ ಶುಷ್ಕಪರ್ಣಾಶನಃ=ಒಣಗಿದ ಎಲೆಗಳನ್ನೇ ಆಹಾರವಾಗಿ ಉಳ್ಳವನಾಗಿ ಕತಿಚಿತ್ ಪಕ್ಷಾನ್=ಕೆಲವು ದಿನಗಳು ಅಬ್ಭಕ್ಷಃ=ನೀರು ಮಾತ್ರ ಆಹಾರವಾಗಿ ಉಳ್ಳವನಾಗಿ, ತತಃ ಪರಂ=ನಂತರ ವಾಯುಭಕ್ಷಃ=ಗಾಳಿಯೇ ಆಹಾರವಾಗಿ ಉಳ್ಳವನಾಗಿದ್ದನು. ॥೫॥

ತಪಸ್ಸಿನಲ್ಲಿ ಉಗ್ರತೆಯನ್ನು ತೋರಿಸುವರು -

**ಗ್ರೀಷ್ಮೇ ಪಂಚತಪಾ ವೀರೋ ವರ್ಷಾಸ್ವಾಸಾರಷಾಣ್ಮುನಿಃ ।**
**ಆಕಂಠಮಗ್ನಃ ಶಿಶಿರೇ ಉದಕೇ ಸ್ಥಂಡಿಲೇಶಯಃ ॥೬॥**

ವೀರಃ ಮುನಿಃ=ವೀರನಾದ ಮುನಿಚರ್ಯೆಯಲ್ಲಿರುವ ಪೃಥುವು ಗ್ರೀಷ್ಮೇ=ಬೇಸಿಗೆಯಲ್ಲಿ (ಗ್ರೀಷ್ಮಋತುವಿನಲ್ಲಿ) ಪಂಚತಪಾಃ=ನಾಲ್ಕು ದಿಕ್ಕುಗಳಲ್ಲಿ ಅಗ್ನಿ ಮತ್ತು ಮೇಲೆ ಸೂರ್ಯ ಹೀಗೆ ಪಂಚಾಗ್ನಿತಪಸ್ಸನ್ನು ಆಚರಿಸುವವನಾಗಿ, ವರ್ಷಾಸು=ಮಳೆಗಾಲದಲ್ಲಿ ಆಸಾರಷಾಟ್=ಮಳೆಯನ್ನು ಸಹಿಸುವವನಾಗಿ, ಶಿಶಿರೇ=ಚಳಿಗಾಲದಲ್ಲಿ ಉದಕೇ=ನೀರಿನಲ್ಲಿ ಆಕಂಠಮಗ್ನಃ=ಕುತ್ತಿಗೆವರೆಗೆ ಮುಳುಗಿದವನಾಗಿ ಹಾಗೂ ರಾತ್ರಿಯಲ್ಲಿ ಸ್ಥಂಡಿಲೇಶಯಃ=ಗೋಮಯದಿಂದ ಸಾರಿಸಿದ ಶುದ್ಧಭೂಮಿಯಲ್ಲಿ ಮಲಗುವವನಾಗಿ, (ಅನ್ವಯ ಮುಂದುವರೆಯುತ್ತದೆ)॥೬॥

**ತಿತಿಕ್ಷುರ್ಯತವಾಕ್ ದಾಂತ ಊರ್ಧ್ವರೇತಾ ಜಿತಾನಿಲಃ ।**
**ಆರಿರಾಧಯಿಷುಃ ಕೃಷ್ಣಮಾಚರತ್ ತಪ ಉತ್ತಮಮ್ ॥೭॥**

ತಿತಿಕ್ಷುಃ=ಸುಖ-ದುಃಖ, ಬಿಸಿಲು-ಗಾಳಿ ಎಲ್ಲ ದ್ವಂದ್ವಸಹಿಷ್ಣುವಾಗಿ, ಯತವಾಕ್=ವಾಜನಿಯಮವುಳ್ಳವನಾಗಿ, (ಮೌನವ್ರತ ಮಾಡುತ್ತ) ದಾಂತಃ=ಇಂದ್ರಿಯನಿಗ್ರಹವುಳ್ಳವನಾಗಿ, ಊರ್ಧ್ವರೇತಾಃ=ಬ್ರಹ್ಮಚರ್ಯವುಳ್ಳವನಾಗಿ, ಜಿತಾನಿಲಃ=ವಾಯುಜಯವುಳ್ಳವನಾಗಿ, ಕೃಷ್ಣಂ=ಶ್ರೀಕೃಷ್ಣನನ್ನು ಆರಿರಾಧಯಿಷುಃ=ಚೆನ್ನಾಗಿ ಸಂತೋಷಪಡಿಸುವ ಇಚ್ಛೆಯುಳ್ಳವನಾಗಿ ಉತ್ತಮಂ ತಪಃ ಆಚರತ್=ಉಗ್ರವಾದ ತಪಸ್ಸನ್ನು ಮಾಡಿದನು. ॥೭॥

**ತೇನ ಕ್ರಮಾನುಸಿದ್ಧೇನ ಧ್ವಸ್ತಕರ್ಮಾಽಮಲಾಶಯಃ ।**
**ಪ್ರಾಣಾಯಾಮೈಃ ಸನ್ನಿರುದ್ಧಷಡ್ವರ್ಗಚ್ಛಿನ್ನಬಂಧನಃ ॥೮॥**

ಕ್ರಮಾನುಸಿದ್ಧೇನ=ಕ್ರಮವಾಗಿ ಪ್ರಾಪ್ತವಾದ ತೇನ=ತಪಸ್ಸಿನಿಂದ ಧ್ವಸ್ತಕರ್ಮಾ=ಪಾಪವನ್ನು ಕಳೆದುಕೊಂಡವನಾಗಿ, ಆದ್ದರಿಂದಲೇ ಅಮಲಾಶಯಃ=ಶುದ್ಧಾಂತಃಕರಣನಾಗಿ, ಪ್ರಾಣಾಯಾಮೈಃ=ಶ್ವಾಸನಿರೋಧದಿಂದ ಸನ್ನಿರುದ್ಧಷಡ್ವರ್ಗಃ=ಕಾಮಾದಿ ಷಡ್ವರ್ಗವನ್ನು ನಾಶಪಡಿಸಿದವನಾಗಿ, ಛಿನ್ನಬಂಧನಃ=ಅಹಂಕಾರ ಮಮಕಾರಗಳನ್ನು ಕಳೆದುಕೊಂಡವನೂ ಆಗಿ,

**ಸನತ್ಕುಮಾರೋ ಭಗವಾನ್ ಯದಾಹಾಧ್ಯಾತ್ಮಿಕಂ ಪರಮ್ ।**
**ಯೋಗಂ ತೇನೈವ ಪುರುಷಮಭಜತ್ ಪುರುಷರ್ಷಭಃ ॥೯॥**

ಪುರುಷರ್ಷಭಃ=ಶ್ರೇಷ್ಠನಾದ ರಾಜನು ಭಗವಾನ್ ಸನತ್ಕುಮಾರಃ=ಪೂಜ್ಯರಾದ ಸನತ್ಕುಮಾರರು ಆಧ್ಯಾತ್ಮಿಕಂ=ಭಗವದ್ವಿಷಯಕವಾದ ಪರಂ=ಉತ್ತಮವಾದ ಯೋಗಂ=

ಉಪಾಸನಾ ಉಪಾಯವನ್ನು ಯದಾಹ=ಏನು ಹೇಳಿದರೋ ತೇನೈವ=ಅದರಿಂದಲೇ ಪುರುಷಂ ಅಭಜತ್=ಶ್ರೀಕೃಷ್ಣನನ್ನು ಆರಾಧಿಸಿದನು. ॥೯॥

**ಭಗವದ್ಧರ್ಮಿಣಃ ಸಾಧೋಃ ಶ್ರದ್ಧಯಾ ಯತತಃ ಸದಾ ।**
**ಭಕ್ತಿರ್ಭಗವತಿ ಬ್ರಹ್ಮಣ್ಯನನ್ಯವಿಷಯಾಽಭವತ್ ॥೧೦॥**

ಭಗವದ್ಧರ್ಮಿಣಃ=ಭಗವದ್ಧರ್ಮಗಳನ್ನಾಚರಿಸುವ, ಸಾಧೋಃ=ಸಜ್ಜನನಾದ, ಶ್ರದ್ಧಯಾ=ಶ್ರದ್ಧೆಯಿಂದ ಸದಾ ಯತತಃ=ಸರ್ವದಾ ಪ್ರಯತ್ನಿಸುವ ಪೃಥುವಿಗೆ ಭಗವತಿ ಬ್ರಹ್ಮಣಿ=ಪೂರ್ಣನಾದ ಭಗವಂತನಲ್ಲಿ ಅನನ್ಯವಿಷಯಾ ಭಕ್ತಿಃ ಅಭವತ್=ಭಗವದೇಕ-ವಿಷಯಕವಾದ ಭಕ್ತಿಯು ಉಂಟಾಯಿತು. ॥೧೦॥

ಭಕ್ತಿಯ ಫಲ ಹೇಳುವರು -

**ತಸ್ಯಾನಯಾ ಭಗವತಃ ಪರಿಶುದ್ಧಕರ್ಮ-**
**ಸತ್ತ್ವಾತ್ಮನಸ್ತದನು ಸಂಸ್ಮರಣಾನುಪೂರ್ವ್ಯಾ ।**
**ಜ್ಞಾನಂ ವಿರಕ್ತಿಮದಭೂನ್ನಿಶಿತೇನ ಯೇನ**
**ಚಿಚ್ಛೇದ ಸಂಶಯಪದಂ ನಿಜಜೀವಕೋಶಮ್ ॥೧೧॥**

ತಯಾ=ಭಕ್ತಿಯಿಂದ ನಿಶಿತೇನ=ಹರಿತವಾದ ಯೇನ=ಯಾವ ಜ್ಞಾನವೆಂಬ ಖಡ್ಗದಿಂದ ಸಂಶಯಪದಂ=ಸಂಶಯ-ವಿಪರೀತಜ್ಞಾನಗಳಿಗೆ ಆಶ್ರಯವಾದ ನಿಜಜೀವಕೋಶಂ= ತನ್ನದೆಂದು ತಿಳಿದ ಬಾಹ್ಯ ಅಂತಃಕರಣವನ್ನು ಅಥವಾ ಲಿಂಗಶರೀರವನ್ನು ಚಿಚ್ಛೇಧ= ಕತ್ತರಿಸಿದನೋ, ಅಂತಹ ಜ್ಞಾನಂ=ಅಪರೋಕ್ಷಜ್ಞಾನವು ಪರಿಶುದ್ಧಕರ್ಮಸತ್ತ್ವಾತ್ಮನಃ= ಪರಿಶುದ್ಧವಾದ ಕರ್ಮವುಳ್ಳ ಸತ್ವಗುಣಯುಕ್ತವಾದ ಮನಸ್ಸುಳ್ಳ ತಸ್ಯ=ಪೃಥುರಾಜನಿಗೆ ತದುನುಸಂಸ್ಮರಣಾನುಪೂರ್ವ್ಯಾ=ಶ್ರೀಹರಿಯ ನಿರಂತರಧ್ಯಾನದ ಕ್ರಮವುಳ್ಳ ಅಂದರೆ ತನ್ನ ಯೋಗ್ಯತಾನುಸಾರವಾಗಿ ಅಭಿವೃದ್ಧವಾದಂತೆಲ್ಲ ಅಭಿವೃದ್ಧವಾದ ಅನಯಾ=ಭಕ್ತಿಯಿಂದ ವಿರಕ್ತಿಮತ್=ವೈರಾಗ್ಯಾಭಿವೃದ್ಧಿಯುಳ್ಳ ಜ್ಞಾನವು ಅಭೂತ್=ಉಂಟಾಯಿತು. (ಆವಿರ್ಭೂತವಾಯಿತು.)

**ಭಾಗವತ ತಾತ್ಪರ್ಯ -**

ಕರ್ಮಜದೇವತೆಯಾದ ಪೃಥುವು ಅಪರೋಕ್ಷಜ್ಞಾನಿಯೇ ಆದ್ದರಿಂದ 'ಈಗ ಅಪರೋಕ್ಷಜ್ಞಾನವಾಯಿತು' ಎಂದು ಹೇಗೆ ಹೇಳಲು ಸಾಧ್ಯ ? ಎಂಬ ಶಂಕೆಯನ್ನು ಪ್ರಮಾಣದಿಂದಲೇ ಪರಿಹರಿಸುವರು -

''ಆವಿರ್ಭಾವತಿರೋಭಾವೌ ಜ್ಞಾನಸ್ಯ ಜ್ಞಾನಿನೋಽಪಿ ತು ।
ಅಪೇಕ್ಷ್ಯಾಜ್ಞಸ್ತಥಾ ಜ್ಞಾನಮುತ್ಪನ್ನಮಿತಿ ಚೋಚ್ಯತೇ'' ಇತಿ ತಂತ್ರಸಾರೇ ॥

ಅಪರೋಕ್ಷಜ್ಞಾನಿಗಳಿಗೂ ಸಹ ಅಪರೋಕ್ಷಜ್ಞಾನದ ಆವಿರ್ಭಾವವನ್ನು ಇಟ್ಟುಕೊಂಡು, ಜ್ಞಾನವು ಹುಟ್ಟಿತೆಂದು, ತಿರೋಭಾವವನ್ನಿಟ್ಟುಕೊಂಡು ಇವನು ಆಜ್ಞನೆಂದು ಪುರಾಣಾದಿಗಳಲ್ಲಿ ಹೇಳುವರು. ಹೊರತು ಆಗಲೇ ಹುಟ್ಟಿತೆಂದಾಗಲೀ, ಜ್ಞಾನ ಹುಟ್ಟಿಲ್ಲವೆಂದಾಗಲೀ ಅಲ್ಲ ಎಂದು ತಂತ್ರಸಾರದಲ್ಲಿದೆ.

ಜ್ಞಾನಾವಿರ್ಭಾವ ಪಡೆದ ಪೃಥುವಿನ ಪರಿಸ್ಥಿತಿ ಹೇಳುವರು -

**ಛಿನ್ನಾನ್ಯಧೀರಧಿಗತಾತ್ಮಗತಿರ್ನಿರೀಹಸ್ತತ್**
**ತತ್ಯಜೇಽಚ್ಛಿನದಿದಂ ವಯುನೇನ ಯೇನ ।**
**ತಾವನ್ನ ಯೋಗಗತಿಭಿರ್ಯತಿರಪ್ರಯತ್ನೋ**
**ಯಾವದ್ ಗದಾಗ್ರಜಕಥಾಸು ರತಿಂ ನ ಕುರ್ಯಾತ್ ॥೧೨॥**

ಛಿನ್ನಾನ್ಯಧೀಃ=ನಿಶ್ಶೇಷವಾಗಿ ನಾಶಗೊಳಿಸಿದ ಸಂಶಯ-ವಿಪರ್ಯಯಗಳುಳ್ಳ ಆದ್ದರಿಂದಲೇ ನಿರೀಹಃ=ವ್ಯರ್ಥವ್ಯಾಪಾರ ಮಾಡದ ಅಧಿಗತಾತ್ಮಗತಿಃ=ತನ್ನನ್ನೂ ಹಾಗೂ ಪರಮಾತ್ಮನನ್ನೂ ತಿಳಿದ (ಪರಮಾತ್ಮನ ಹಾಗೂ ತನ್ನ ಸ್ವರೂಪದ ಅಪರೋಕ್ಷಾವಿರ್ಭಾವ ಪಡೆದ) ಆದ್ದರಿಂದ ಯೇನ ವಯುನೇನ=ಯಾವ ಅಪರೋಕ್ಷವೃತ್ತಿಜ್ಞಾನದಿಂದ ಇದಂ=ಬಾಹ್ಯಾಂತಃಕರಣವನ್ನು ಅಚ್ಛಿನತ್=ನಾಶಪಡಿಸಿದನೋ ತತ್=ಆ ವೃತ್ತಿಜ್ಞಾನವನ್ನು ತತ್ಯಜೇ=ಈ ವೃತ್ತಿಜ್ಞಾನವು ಸ್ವರೂಪಜ್ಞಾನದಿಂದ ಭಿನ್ನವು, ನಶ್ವರವು, ಹೇಯವು ಎಂದು ಸ್ಪಷ್ಟವಾಗಿ ನೋಡಿದನು. ಅಥವಾ ತತ್ಯಜೇ=ಪ್ರಾಯೇಣ ಬಿಟ್ಟನು ಎಂದೇ ಅರ್ಥ.

ಈ ಅವಸ್ಥೆಯಲ್ಲಿ ಸ್ವರೂಪಜ್ಞಾನದಿಂದಲೇ ಶ್ರವಣಾದಿಗಳು ಆಗುವುದರಿಂದ ಎಂದು ಹೇಳುವರು :- ಯತಿಃ=ಇಂದ್ರಿಯಸಂಯಮವುಳ್ಳ ಅಧಿಕಾರಿಯು ಗದಾಗ್ರಜಕಥಾಸು= ಶ್ರೀಕೃಷ್ಣನ ಕಥಾಶ್ರವಣಾದಿಗಳಲ್ಲಿ ಯಾವತ್=ಎಲ್ಲಿಯವರೆಗೆ ರತಿಂ ನ ಕುರ್ಯಾತ್= ಸ್ವರೂಪಜ್ಞಾನದಿಂದಲೇ ಆಸಕ್ತಿಯನ್ನು ಇಡುವುದಿಲ್ಲವೋ ತಾವತ್=ಅಲ್ಲಿಯವರೆಗಷ್ಟೇ ಯೋಗಗತಿಭಿಃ=ಯಮಾದಿಮಾರ್ಗಗಳಿಂದ ಅಪ್ರಯತ್ನಃ ನ ಸ್ಯಾತ್=ಬಾಹ್ಯ ಮನೋವ್ಯಾಪಾರಶೂನ್ಯನಾಗುವುದಿಲ್ಲ. ಅಪರೋಕ್ಷಜ್ಞಾನಾನಂತರ ಸ್ವರೂಪಜ್ಞಾನದಿಂದಲೇ ಕಥಾರತಿಯು ಉಂಟಾದಾಗ ಅಪ್ರಯತ್ನಃ ಸ್ಯಾತ್=ಬಾಹ್ಯ ಮನೋವ್ಯಾಪಾರವುಳ್ಳವನಾಗುವನು ಕಾರಣ ಬಿಟ್ಟನೆಂದರ್ಥ.

**ಭಾಗವತ ತಾತ್ಪರ್ಯ -**

ಇಲ್ಲಿ ತತ್ ತತ್ಯಾಜ ಎಂದು ಜ್ಞಾನತ್ಯಾಗ ಹೇಳಿದೆ. ಅದು ಸರಿಯಲ್ಲ. ಪೃಥುರಾಜನಿಗೆ ಕೊನೆಯವರೆಗೆ 'ಅಧಿಗತಾತ್ಮಗತಿಃ' ಜ್ಞಾನವಿದೆಯೆಂದು (ವಿಷ್ಣುಕಥಾರತಿ ಇದೆಯೆಂದು) ಭಾಗವತದಲ್ಲಿ ಹೇಳಿದ ಕಾರಣ, ವಿವಕ್ಷಿತವಾದ ಅಭಿಪ್ರಾಯವನ್ನು ಹೇಳುವರು -

**"ಅಪರೋಕ್ಷತಯಾ ವೃತ್ತಿಜ್ಞಾನಭೇದನಿರೀಕ್ಷಣಮ್ ।**
**ಸ್ವರೂಪಜ್ಞಾನಸಂಸ್ಥಿತ್ಯಾ ಜ್ಞಾನತ್ಯಾಗ ಉದೀರ್ಯತೇ ।**
**ಸ್ವರೂಪಜ್ಞಾನತಃ ಸಮ್ಯಗ್ರತಿರ್ವಿಷ್ಣುಕಥಾಸು ಚ" ಇತಿ ಬ್ರಹ್ಮತರ್ಕೇ ॥**

ಬಾಹ್ಯಮನೋವೃತ್ತಿಜ್ಞಾನವು ನಶ್ವರವಾದ ಕಾರಣ ಸ್ವರೂಪಜ್ಞಾನದಿಂದ ಭಿನ್ನ ಎಂದು ಸ್ಪಷ್ಟವಾಗಿ ತಿಳಿದು, ಸ್ವರೂಪಜ್ಞಾನದಿಂದಲೇ ಬಹಳವಾಗಿ ಪರಾಪರತತ್ವಗಳನ್ನು ತಿಳಿದಿರುವುದರಿಂದ ವೃತ್ತಿಜ್ಞಾನವನ್ನು ಬಿಟ್ಟನು ಎಂದು ಹೇಳಿದ್ದೇ ಹೊರತು ಸರ್ವಥಾ ವೃತ್ತಿಜ್ಞಾನವಿಲ್ಲವೆಂದಲ್ಲ.

ವಿಷ್ಣುಕಥಾದಿರೂಪವ್ಯಾಪಾರದಲ್ಲಿ ಆಸಕ್ತಿಯು ಸ್ವರೂಪಜ್ಞಾನವಿರುವಾಗಲೇ ಚೆನ್ನಾಗಿ ಉಂಟಾಗುವುದು. ಅಂತಹ ಆಸಕ್ತಿಯು ವೃತ್ತಿಜ್ಞಾನ ಬಿಡಲು ನಿಮಿತ್ತವೆಂದು ಹೇಳಲ್ಪಡುತ್ತದೆ ಎಂದು ಬ್ರಹ್ಮತರ್ಕದಲ್ಲಿದೆ. ॥೧೨॥

**ಏವಂ ಸ ವೀರಪ್ರವರಃ ಸಂಯೋಜ್ಯಾತ್ಮಾನಮಾತ್ಮನಿ ।**
**ಬ್ರಹ್ಮಭೂತೋ ದೃಢಂ ಕಾಲೇ ತತ್ಯಾಜ ಸ್ವಕಲೇವರಮ್ ॥೧೩॥**

ಏವಂ=ಈ ರೀತಿಯಾಗಿ ವೀರಪ್ರವರಃ ಸಃ=ವೀರಾಗ್ರಣಿಯಾದ ಪೃಥುರಾಜನು ಆತ್ಮನಿ=ಪರಮಾತ್ಮನಲ್ಲಿ ಆತ್ಮಾನಂ=ಮನಸ್ಸನ್ನು ದೃಢಂ ಸಂಯೋಜ್ಯ=ಬಲವಾಗಿ ಇಟ್ಟು ಬ್ರಹ್ಮಭೂತಃ=ಬ್ರಹ್ಮನಲ್ಲಿ ಆಶ್ರಿತನೆಂಬ ಅನುಸಂಧಾನದಿಂದ ಕಾಲೇ=ಈ ದೇಹಕ್ಕೆ ಕಾರಣವಾದ ಪ್ರಾರಬ್ಧಕರ್ಮವು ಮುಗಿದ ಸಮಯದಲ್ಲಿ ಸ್ವಕಲೇವರಂ ತತ್ಯಾಜ=ತನ್ನ ದೇಹವನ್ನು ತ್ಯಜಿಸಿದನು.

**ಭಾಗವತ ತಾತ್ಪರ್ಯ -**

ಬ್ರಹ್ಮಣಿ ಭೂತಃ ॥

ಮೂಲದಲ್ಲಿ ಬ್ರಹ್ಮಭೂತಃ ಎಂದರೆ ಬ್ರಹ್ಮನಲ್ಲಿ ಆಶ್ರಯಿಸಿರುವವನು ತಾನು ಎಂದು ತಿಳಿದು ಎಂದರ್ಥ. ಹೊರತು ತಾನೇ ಬ್ರಹ್ಮನೆಂದು ತಿಳಿದು ಎಂದರ್ಥವಲ್ಲ. ॥೧೩॥

ಸ್ವಚ್ಛಂದಮೃತ್ಯುಗಳಾದ ಯೋಗಿಗಳ ದೇಹತ್ಯಾಗದ ರೀತಿಯನ್ನು ತಿಳಿಸಲು, ಪೃಥುವಿನ ಉತ್ಕ್ರಾಂತಿಪ್ರಕಾರವನ್ನು ಹೇಳುವರು -

**ಸಂಪೀಡ್ಯ ಪಾಯುಂ ಪಾರ್ಷ್ಣಿಭ್ಯಾಂ ವಾಯುಮುತ್ಸರ್ಪಯಞ್ಛನೈಃ ।**
**ನಾಭ್ಯಾಂ ಕೋಷ್ಠೇಷ್ವವಸ್ಥಾಪ್ಯ ಹೃದುರಃಕಂಠ(ಮೂರ್ಧಸು)ಶೀರ್ಷಣಿ ॥೧೪॥**

ಪಾಯುಂ=ಗುದವನ್ನು ಪಾರ್ಷ್ಣಿಭ್ಯಾಂ=ಹಿಂಬಡಗಳಿಂದ ಸಂಪೀಡ್ಯ=ಒತ್ತಿಹಿಡಿದು (ಇದರಿಂದ ವಜ್ರಾಸನ ಸೂಚಿತವಾಗುವುದು) ಅಂದಮೇಲೆ ವಜ್ರಾಸನದಲ್ಲಿ ಕುಳಿತು, ವಾಯುಂ=ಮೂಲಾಧಾರದಿಂದ ಉದಾನವಾಯುವನ್ನು ಉತ್ಸರ್ಪಯನ್=ಮೇಲಕ್ಕೆ ತೆಗೆದುಕೊಂಡುಹೋಗಿ ಶನೈಃ=ನಿಧಾನವಾಗಿ ನಾಭ್ಯಾಂ=ಹೊಕ್ಕಳಿನಲ್ಲಿ ಅವಸ್ಥಾಪ್ಯ=ಇರಿಸಿ ಹೃದುರಃಕಂಠಶೀರ್ಷಣಿ=ಹೃದಯ, ಎದೆಗುಂಡಿಗೆ, ಕುತ್ತಿಗೆ, ಹುಬ್ಬು ಇವುಗಳೆಂಬ ಕೋಷ್ಠೇಷು=ಸ್ಥಾನಗಳಲ್ಲಿ ಅವಸ್ಥಾಪ್ಯ=ನಿಲ್ಲಿಸಿ,॥೧೪॥

**ಉತ್ಸರ್ಪಯನ್ನಸುಂ ಮೂರ್ಧ್ನಿ ಕ್ರಮೇಣಾವೇಶ್ಯ ನಿಸ್ಪೃಹಃ ।**
**ವಾಯುಂ ವಾಯೌ ಕ್ಷಿತೌ ಕಾಯಂ ತೇಜಸ್ತೇಜಸ್ಯಯೂಯುಜತ್ ॥೧೫॥**

ಉತ್ಸರ್ಪಯನ್=ಮೇಲೆ ತರುತ್ತ ಕ್ರಮೇಣ=ಕ್ರಮವಾಗಿ ಅಸುಂ*=ಭ್ರೂಮಂಡಲ (ಹುಬ್ಬು) ದಲ್ಲಿರುವ ವಾಯುವನ್ನು ಮೂರ್ಧ್ನಿ=ಬ್ರಹ್ಮರಂಧ್ರದಲ್ಲಿ ಆವೇಶ್ಯ=ಪ್ರವೇಶ ಮಾಡಿಸಿ,

ಯಾದ. ಪ್ರಕಾರ - ಕಲೇವರಂ ತತ್ಯಾಜ=ದೇಹತ್ಯಾಗ ಮಾಡಿದನು ಎಂದು ಅನ್ವಯ. ವಿಜಯಧ್ವಜರ ಪ್ರಕಾರ - ನಿಸ್ಪೃಹಃ ತಿಷ್ಠೇತ್=ಸ್ಥಿರಚಿತ್ತನಾಗಿರಬೇಕು ಎಂದು ಅನ್ವಯ.

ದೇಹದಲ್ಲಿರುವ ಪಂಚಭೂತಗಳಿಗೆ ಬಾಹ್ಯಭೂತಗಳಲ್ಲಿ ಲಯಚಿಂತನೆ ಮಾಡಿದನೆಂದು ಹೇಳುವರು - ನಿಸ್ಪೃಹಃ=ಸ್ಥಿರಚಿತ್ತನಾಗಿ ವಾಯುಂ=ದೇಹದಲ್ಲಿಯ ವಾಯುವನ್ನು ವಾಯೌ=ಬಾಹ್ಯವಾಯುವಿನಲ್ಲಿ, ಕಾಯಂ=ದೇಹದಲ್ಲಿನ ಪೃಥಿವೀಭಾಗವನ್ನು ಕ್ಷಿತೌ=ಬಾಹ್ಯ ಪೃಥಿವಿಯಲ್ಲಿ, ತೇಜಃ=ದೇಹದಲ್ಲಿಯ ತೇಜಸ್ಸನ್ನು ತೇಜಸಿ=ಬಾಹ್ಯತೇಜಸ್ಸಿನಲ್ಲಿ ಅಯೂಯುಜತ್=ಯೋಜಿಸಿದನು, ಏಕೀಕರಿಸಿದನು.

*ಅಸೂನ್ ಎಂಬ ಪಾಠದಲ್ಲಿ ಬಹುವಚನವು ಜಾತ್ಯಭಿಪ್ರಾಯ ಎಂದು ಯಾದವಾರ್ಯರು, ಪಂಚವೃತ್ತಿಗಳಿರುವುದರಿಂದ ಬಹುವಚನ ಎಂದು ವಿಜಯಧ್ವಜರು.

**ಖಾನ್ಯಾಕಾಶೇ ದ್ರವಂ ತೋಯೇ ಯಥಾಸ್ಥಾನಂ ವಿಭಾಗಶಃ ।**
**ಕ್ಷಿತಿಮಂಭಸಿ ತತ್ ತೇಜಸ್ಯದೋ ವಾಯೌ ನಭಸ್ಯಮುಮ್ ॥೧೬॥**

ಖಾನಿ=ದೇಹದಲ್ಲಿರುವ ಛಿದ್ರಗಳನ್ನು (ಇಂದ್ರಿಯಗೋಲಕದಲ್ಲಿರುವ ಭೂತಾಕಾಶ-ಭಾಗವನ್ನು) ಆಕಾಶೇ=ಬಾಹ್ಯ ಭೂತಾಕಾಶದಲ್ಲಿ ದ್ರವಂ=ನೀರನ್ನು ತೋಯೇ=ಬಾಹ್ಯಜಲದಲ್ಲಿ ಆಯೂಯುಜತ್=ಸೇರಿಸಿದನು ಎಂದರ್ಥ.

ಈ ರೀತಿ ಲಯಗೊಳಿಸಿದ್ದೇಕೆ ? ಎಂದರೆ ಹೇಳುವರು - ಯಥಾಸ್ಥಾನಂ ಎಂದು. ಇಲ್ಲಿ ಸ್ಥಾನ ಎಂದರೆ ಕಾರಣವೆಂದರ್ಥ. ಕಾರಣವನ್ನು ಅತಿಕ್ರಮಿಸದೇ, ಅಂದರೆ ಬಾಹ್ಯಭೂತಗಳು ದೇಹದಲ್ಲಿರುವ ಭೂತಗಳಿಗೆ ಕಾರಣವಾಗಿವೆಯಾದ್ದರಿಂದ ಕಾರ್ಯಗಳಿಗೆ ಕಾರಣದಲ್ಲಿ ಲಯ ಯುಕ್ತವೆಂದು ಭಾವ. ದೇಹವೆಂಬ ಒಂದೇ ಕಾರ್ಯವಾಗಿ ಪರಿಣತಗಳಾದ ಪಂಚಭೂತಗಳಿಗೆ ಹೇಗೆ ಲಯವೆಂದರೆ ವಿಭಾಗಶಃ=ಬುದ್ಧಿಯಿಂದ ವಿಭಾಗ ಮಾಡಿ ಲಯ ಹೇಳಿದ್ದು ಎಂದು ಭಾವ.

ಬಾಹ್ಯ ಪಂಚಭೂತ ಮೊದಲಾದ ತತ್ವಗಳಿಗೆ ತಮ್ಮ ತಮ್ಮ ಕಾರಣಗಳಲ್ಲಿ ಲಯ ಹೇಳುವರು - ಕ್ಷಿತಿಂ=ಪೃಥ್ವಿಯನ್ನು ಅಂಭಸಿ=ನೀರಿನಲ್ಲಿ, ತತ್=ನೀರನ್ನು ತೇಜಸಿ=ತೇಜಸ್ಸಿನಲ್ಲಿ, ಅದಃ=ತೇಜಸ್ಸನ್ನು ವಾಯೌ=ವಾಯುವಿನಲ್ಲಿ, ಅಮುಂ=ವಾಯುವನ್ನು ನಭಸಿ=ಆಕಾಶದಲ್ಲಿ ಲಯಗೊಳಿಸಿದನು.

**ಭಾಗವತ ತಾತ್ಪರ್ಯ -**

ಈಗ ದೇಹತ್ಯಾಗ ಮಾಡುವ ಮೊದಲು ಮಾಡಿದ ಲಯ ಚಿಂತನವನ್ನು ಹೇಳುವರು. ಆ ಸಮಯದಲ್ಲಿ ದೇಹ ಕಾಣಿಸುತ್ತಿರುವುದರಿಂದ ದೇಹದಲ್ಲಿರುವ ಭೂತಗಳಿಗೆ ಲಯವಾಗಿಲ್ಲವಲ್ಲ ? ಎಂಬ ಶಂಕೆಯನ್ನು ಪ್ರಮಾಣದಿಂದ ಪರಿಹರಿಸುವರು -

**''ಅಸ್ಯೇದಂ ಕಾರಣಮಿತಿ ಜ್ಞಾನಮೇವ ವಿಲಾಪನಮ್ ।**
**ಸಮಾಧಿಕಾಲೇ ವಿಜ್ಞೇಯಂ ದೇಹಾದೇರ್ದರ್ಶನಾತ್ತ್ವನಃ'' ಇತಿ ಚ ॥**

ಅಸ್ಯ ಇದಂ ಕಾರಣಂ ಇತಿ (ಅತಃ ಇದಂ ತತ್ರ ಲಯಂ ಏಷ್ಯತಿ ಇತಿ ಶೇಷಃ) ಜ್ಞಾನಂ ಏವ ವಿಲಾಪನಮ್ । ಸಮಾಧಿಯ ನಂತರವೂ ದೇಹಗಳು ಭೂತಗಳು ಕಾಣಿಸುವುದರಿಂದ ಸಮಾಧಿಕಾಲದಲ್ಲಿ ವಾಯುವಿಗೆ ಆಕಾಶವು ಕಾರಣವಾದುದರಿಂದ ಆಕಾಶದಲ್ಲಿ ವಾಯುವು ಲಯ ಹೊಂದುವದು ಎಂದು ತಿಳಿಯುವುದೇ ಲಯಗೊಳಿಸುವುದು ಎಂದು ಭಾವ. ॥೧೬॥

**ಇಂದ್ರಿಯಾಣಿ ಸಮಸ್ತಾನಿ ತನ್ಮಾತ್ರಾಣಿ ಯಥೋದ್ಭವಮ್ ।**
**ಭೂತಾದಿಸ್ತಾನ್ ಸಮುತ್ಕ್ಷಿಪ್ಯ ಮಹತ್ಯಾತ್ಮನಿ ಸಂದಧೇ ॥೧೭॥**

ಸಮಸ್ತಾನಿ ಇಂದ್ರಿಯಾಣಿ=ಎಲ್ಲ ಇಂದ್ರಿಯಗಳನ್ನು ತನ್ಮಾತ್ರಾಣಿ=ಶಬ್ದಾದಿಗಳನ್ನು ಯಥೋದ್ಭವಂ=ಉತ್ಪತ್ತಿಯನ್ನು ಅತಿಕ್ರಮಿಸದೇ ಅಂದರೆ ಯಾವುದರಿಂದ ಯಾವುದು ಹುಟ್ಟಿದೆ ಅದಕ್ಕೆ ಅದರಲ್ಲಿ ಲಯವೆಂದು ಅರ್ಥ. ಭೂತಾದಿಃ=ತಾಮಸ ಅಹಂಕಾರವು ಉಪಲಕ್ಷಣತಯಾ ಮೂರುವಿಧ ಅಹಂಕಾರವು ತಾನ್=ಇಂದ್ರಿಯಾದಿಗಳನ್ನು ಭೂತಾದೌ ಸಮುತ್ಕ್ಷಿಪ್ಯ=ಅಹಂಕಾರದಲ್ಲಿ ಲಯಗೊಳಿಸಿ ತಂ=ಅಹಂಕಾರವನ್ನು ಮಹತ್ಯಾತ್ಮನಿ= ಮಹತ್ತತ್ವಾಭಿಮಾನಿಬ್ರಹ್ಮನಲ್ಲಿ ಸರಸ್ವತಿದ್ವಾರಾ ಸಂದಧೇ=ಸ್ಥಾಪಿಸಿದನು. ಪೃಥುರಾಜ ಧ್ಯಾನ ಮಾಡಿದನು ಎಂದು ಭಾವ.

**ಸಾರಾಂಶ -**

ಇಲ್ಲಿ ತತ್ವಗಳು ಹಾಗೂ ಅಭಿಮಾನಿದೇವತೆಗಳು ಎರಡೂ ವಿವಕ್ಷಿತವಾಗಿವೆ. ಇಂದ್ರಿಯಗಳನ್ನು ತೈಜಸಅಹಂಕಾರದಲ್ಲಿ, ಇಂದ್ರಾಯಾಭಿಮಾನಿ ದೇವತಾದೇಹವನ್ನು ಮನಸ್ಸನ್ನು ವೈಚಾರಿಕ ಅಹಂಕಾರದಲ್ಲಿ, ಪೃಥಿವ್ಯಾದಿಗಳನ್ನು ಗಂಧಾದಿಗಳ ಜೊತೆಗೆ ತಾಮಸ ಅಹಂಕಾರದಲ್ಲಿ, ಅಂದರೆ ಪೃಥಿವಿಯನ್ನು ಪೃಥಿವಿಸೂಕ್ಷ್ಮದಲ್ಲಿ, ಅದನ್ನು ಗಂಧವೆಂಬ ತನ್ಮಾತ್ರಾದಲ್ಲಿ ಗಂಧತನ್ಮಾತ್ರಾವನ್ನು ಜಲದಲ್ಲಿ (ಅಪ್ಪಿನಲ್ಲಿ), ಅಪ್‌ನ್ನು ಅಪ್‌ಸೂಕ್ಷ್ಮದಲ್ಲಿ ಅಪ್‌ಸೂಕ್ಷ್ಮವನ್ನು ರಸತನ್ಮಾತ್ರಾದಲ್ಲಿ, ರಸತನ್ಮಾತ್ರಾವನ್ನು ತೇಜಸ್ಸಿನಲ್ಲಿ, ತೇಜಸ್ಸನ್ನು ತೇಜಃಸೂಕ್ಷ್ಮದಲ್ಲಿ, ಅದನ್ನು ರೂಪತನ್ಮಾತ್ರದಲ್ಲಿ, ಮಾತ್ರಾಗಳನ್ನು ಮಾತ್ರಾಸೂಕ್ಷ್ಮಗಳಲ್ಲಿ (ಎಲ್ಲೆಡೆ), ರೂಪತನ್ಮಾತ್ರಾವನ್ನು ವಾಯುವಿನಲ್ಲಿ, ವಾಯುವನ್ನು ಸ್ಪರ್ಶತನ್ಮಾತ್ರಾದಲ್ಲಿ, ಅದನ್ನು ಸ್ಪರ್ಶಸೂಕ್ಷ್ಮದಲ್ಲಿ, ಸ್ಪರ್ಶತನ್ಮಾತ್ರಾವನ್ನು ಆಕಾಶದಲ್ಲಿ, ಆಕಾಶವನ್ನು ಶಬ್ದತನ್ಮಾತ್ರಾದಲ್ಲಿ, ಅದನ್ನು ತಾಮಸ ಅಹಂಕಾರದಲ್ಲಿ ಯೋಜಿಸಿದರು.

ಇಲ್ಲಿ ಪೃಥಿವಿ ಮೊದಲಾದ ಶಬ್ದದಿಂದ ಅವುಗಳ ಅಭಿಮಾನಿದೇವತೆಗಳೂ ವಿವಕ್ಷಿತರಾಗಿರುವರು. ಅವರಿಗೆ ತಮಗೆ ಜನಕರಾದ ದೇವತೆಗಳಲ್ಲಿ ಪ್ರವೇಶ ಮಾಡುವುದರಿಂದ ದೇಹಲಯವಾಗುವುದು. ಮೇಲೆ ಹೇಳಿದ ಮೂರುವಿಧ ಅಹಂಕಾರಾಭಿಮಾನಿಗಳಾದ ಗರುಡ-ರುದ್ರ-ಶೇಷರು ಇಂದ್ರಿಯಾದಿಗಳನ್ನು ತಮ್ಮಲ್ಲಿ ಲೀನಮಾಡಿಕೊಂಡು ಅಹಂಕಾರತತ್ವವನ್ನು ಮಹತ್ತತ್ವದಲ್ಲಿ ಅಭಿಮಾನಿರುದ್ರನನ್ನು ಮಹತ್ತತ್ವಾಭಿಮಾನಿ ವಿರಂಚನಲ್ಲಿ ಸರಸ್ವತಿ ಮುಖಾಂತರ ಲಯ ಹೊಂದುವರೆಂದು ಚಿಂತಿಸಿದನು.

ತತ್ವಗಳಿಗೆ ತತ್ವಗಳಲ್ಲಿ, ಅಭಿಮಾನಿಗಳಿಗೆ ಅಭಿಮಾನಿಗಳಲ್ಲಿ ಲಯವನ್ನು ತಿಳಿಯಬೇಕು. ಭೂತಗಳಲ್ಲಿ ಮಾತ್ರಾಗಳಿಗೆ, ಮಾತ್ರಾಗಳಿಗೆ ಮಾತ್ರಾಗಳಲ್ಲಿ ಲಯ ತಿಳಿಯಬೇಕು. ಯಾರಿಂದ

ಯಾರು ಜನಿಸುವರೋ ಅವರಿಗೆ ಅವರಲ್ಲಿ, ಜನ್ಯರಿಗೆ ಜನಕರಲ್ಲಿ ಲಯ. ಇದು ಸಾಮಾನ್ಯನಿಯಮ (ಜನ್ಯಜನಕಭಾವ ಇಲ್ಲದಿರುವಲ್ಲಿಯೂ ಚಿಕ್ಕವರಿಗೆ ಉತ್ತಮರಲ್ಲಿ ಲಯ. ಒಬ್ಬರಿಗೆ ಲಯ ಹೇಳಿದರೆ ಅವರಿಗೆ ಸಮಾನರಾದವರು ಅಲ್ಲಿ ಲಯವಾಗುವರು ಮುಂತಾದ ವಿಷಯವನ್ನು ಶಾಸ್ತ್ರದಲ್ಲಿ ಹೇಳಿದಂತೆ ವಿಶೇಷ ತಿಳಿಯುವುದು. ।।೧೭।।

**ತಂ ಸರ್ವಗುಣವಿನ್ಯಾಸಂ ಜೀವೇ ಮಾಯಾಮಯೇ ನ್ಯಧಾತ್ ।**
**ತಂ ಚಾನುಶಯಮಾತ್ಮಸ್ಥಮಸಾವನುಶಯೀ ಪುಮಾನ್ ।**
**ಜ್ಞಾನವೈರಾಗ್ಯವೀರ್ಯೇಣ ಸ್ವರೂಪಸ್ಥೋ ವ್ಯಧಾತ್ ಪ್ರಭುಃ ।।೧೮।।**

ಸರ್ವಗುಣವಿನ್ಯಾಸಂ=ಹಿಂದೆ ಹೇಳಿದ ಪ್ರಕಾರ ಅಹಂಕಾರ ಮುಂತಾದ ಎಲ್ಲ ಕಾರ್ಯಗಳಿಗೂ ಆಶ್ರಯನಾದ ತಂ=ವಿರಿಂಚನನ್ನು ಮಾಯಾಮಯೇ=ಶ್ರೀಹರಿಯ ವಿಯೋಗವಿಲ್ಲದಿರುವುದರಿಂದ ಮಾಯಾಶಬ್ದವಾಚ್ಯಳಾದ ಜೀವೇ=ಜೀವಶಬ್ದವಾಚ್ಯಳಾದ ಶ್ರೀತತ್ವದಲ್ಲಿ ನ್ಯಧಾತ್=ಅಧೀನವೆಂದು ಚಿಂತಿಸಿದನು. ತಂ ಚ=ಆ ಶ್ರೀತತ್ವವನ್ನೂ ಸಹ ಅನುಶಯಂ=ಶ್ರೀಕೇಶವನೊಡನೆ ಶಯನ ಮಾಡುವುದರಿಂದ ಅನುಶಯವೆಂದು ಕರೆಸಿಕೊಳ್ಳುವವಳನ್ನು ಆತ್ಮಸ್ಥಂ=ಆದಾನಾದಿಕರ್ತೃವಾದುದರಿಂದಲೂ ಸರ್ವವನ್ನು ತಿಳಿಯುವುದರಿಂದಲೂ ಆತ್ಮಶಬ್ದವಾಚ್ಯನಾದ ಶ್ರೀಹರಿಯ ಅಧೀನವೆಂದು ವ್ಯಧಾತ್=ಚಿಂತಿಸಿದನು.

ಅಸೌ=ಪೃಥುವು ಅನುಶಯೀ=ಲಕ್ಷ್ಮೀದೇವಿಯನ್ನು ಅನುಸರಿಸಿ ಇರುವ ಪುಮಾನ್=ಮನುಷ್ಯನು, ಶ್ರೀಯಿಂದ ಬದ್ಧನು. ಆದ್ದರಿಂದ ಬಂಧಕಳಾದ ಅವಳನ್ನು ಧ್ಯಾನ ಮಾಡುವುದು ಅವಶ್ಯಕವೆಂದೂ ಭಾವ. ಜ್ಞಾನವೈರಾಗ್ಯವೀರ್ಯೇಣ=ವಿಜ್ಞಾನ ವೈರಾಗ್ಯಗಳೆಂಬ ಬಲದಿಂದ ಪ್ರಭುಃ=ಸಮರ್ಥನಾದವನು, ಸ್ವರೂಪಸ್ಥಃ=ಅಪ್ರಾಕೃತ-ವಿಗ್ರಹನಾದ ಭಗವಂತನಲ್ಲಿ ಅತಿಯಾದ ಸ್ಥಿತಿಯುಳ್ಳವನೂ ಆದನು. ಪರಮಾತ್ಮನನ್ನು ಮತ್ತೊಬ್ಬರ ಅಧೀನವೆಂದು ಚಿಂತಿಸಲಿಲ್ಲವೆಂದು ಭಾವ.

**ಭಾಗವತ ತಾತ್ಪರ್ಯ -**

ಈ ಶ್ಲೋಕದಲ್ಲಿ ಮಾಯಾ, ಜೀವ, ಅನುಶಯ, ಅನುಶಯೀ, ಸ್ವರೂಪ ಶಬ್ದಗಳನ್ನು ವ್ಯಾಖ್ಯಾನಿಸುವರು - (ಅರ್ಥಾಬಾಧರೂಪ ಯೋಗ್ಯತಾಲಾಭಕ್ಕಾಗಿ)

**ಮಾಯೇತಿ ಪ್ರಕೃತಿಶ್ಚೇತಿ ಮಾಯಾಜೀವಶ್ಚ ಕಥ್ಯತೇ ।**
**ಶೇತೇಽನುಕೇಶವಂ ಯಸ್ಮಾತ್ ತಸ್ಮಾತ್ ಅನುಶಯೋಽಪಿ ಚ ।**

**ಏತೈಸ್ತು ನಾಮಭಿರ್ವಾಚ್ಯಾ ಶ್ರೀರ್ವಿಷ್ಣೋರನಪಾಯಿನೀ ।**
**ತಯೈವಾನುಶಯೀ ಜೀವಸ್ತಯಾ ಬದ್ಧೋ ಯತಃ ಸದಾ ।**
**ಪುರುಷಃ ಶಯನಾತ್ ಪೂರ್ಷು ತಥಾಽಹಾನಾದಹಂ ಸ್ಮೃತಃ ।**
**ಅಪ್ರಾಕೃತತನುತ್ವಾತ್ತು ಸ್ವರೂಪಂ ಹರಿರುಚ್ಯತೇ ।**
**ನಿತ್ಯಚಿದ್ದರ್ಶನಾನ್ನಿತ್ಯಂ ಬ್ರಹ್ಮ ಪೂರ್ಣತ್ವತಃ ಸದಾ" ಇತಿ ಭಾಗವತತಂತ್ರೇ ॥**

ಮಾಯಾ=ಜಡಪ್ರಕೃತಿಯು ಮಾಯಾ ಮುಂತಾದ ಶಬ್ದವಾಚ್ಯವು. ಶ್ರೀಕೇಶವನನ್ನು ಅನುಸರಿಸಿ ಸರ್ವದಾ ಇರುವುದರಿಂದ ಲಕ್ಷ್ಮೀದೇವಿಯು ಅನುಶಯ ಎನಿಸುತ್ತಾಳೆ. ಅಂತೂ ಮಾಯಾ, ಪ್ರಕೃತಿ, ಜೀವ, ಅನುಶಯ ಮೊದಲಾದ ಶಬ್ದಗಳಿಂದ ಶ್ರೀವಿಷ್ಣುವಿನಿಂದ ವಿಯೋಗವಿಲ್ಲದಿರುವ ಲಕ್ಷ್ಮೀದೇವಿಯೂ ಕೂಡ ಹೇಳಲ್ಪಡುವವಳು. ಹಾಗೆಯೇ ಅನಾದಿಕಾಲದಿಂದ ಲಕ್ಷ್ಮೀದೇವಿಯಿಂದ ಬದ್ಧನಾದ್ದರಿಂದ ಜೀವನೂ ಅನುಶಯೀ ಎನಿಸುತ್ತಾನೆ. ಜೀವನು ಶರೀರಗಳಲ್ಲಿ ಇರುವುದರಿಂದ ಪುರುಷನೆಂದೂ, ಹೇಯನಾಗದಿರುವುದರಿಂದ ಅಹಂ ಎಂದೂ ಹೇಳಲ್ಪಡುವವನು. ಶ್ರೀಹರಿಯು ಅಪ್ರಾಕೃತಶರೀರವುಳ್ಳವನಾದ್ದರಿಂದ ಸ್ವರೂಪ ಎಂದು ಹೇಳಲ್ಪಡುವವನು. ನಿತ್ಯಚಿದ್ರೂಪನಾದ್ದರಿಂದ ನಿತ್ಯನೆಂದು, ಸರ್ವಗುಣಪೂರ್ಣನಾದ್ದರಿಂದ ಬ್ರಹ್ಮನೆಂದೂ ಕರೆಯಲ್ಪಡುವವನು ಎಂದು ತಂತ್ರಭಾಗವತದಲ್ಲಿ ಹೇಳಿದೆ. ॥೧೮॥

**ಅರ್ಚಿರ್ನಾಮ ಮಹಾರಾಜ್ಞೀ ತತ್ಪತ್ನ್ಯನುಗತಾ ವನಮ್ ।**
**ಸುಕುಮಾರ್ಯತದರ್ಹಾ ಚ ಪದ್ಭ್ಯಾಂ ಯತ್ ಸ್ಪರ್ಶನಂ ಭುವಃ ॥೧೯॥**

ಯತ್ ಪದ್ಭ್ಯಾಂ ಭುವಃ ಸ್ಪರ್ಶನಂ=ಕಾಲಿನಿಂದ ಭೂಮಿಯನ್ನು ಮುಟ್ಟುವುದೇನಿದೆಯೋ ಅತದರ್ಹಾ=ಅದಕ್ಕೆ ಯೋಗ್ಯಳಲ್ಲದ ಸುಕುಮಾರೀ=ಕೋಮಲಳಾದ ತತ್ಪತ್ನೀ=ಪೃಥುವಿನ ಪತ್ನಿಯಾದ ಅರ್ಚಿಃ ನಾಮ=ಅರ್ಚಿ ಎಂಬ ಹೆಸರಿನ ಮಹಾರಾಜ್ಞೀ=ಮಹಾರಾಣಿಯು ವನಂ ಅನುಗತಾ=ಪೃಥುವನ್ನು ಹಿಂಬಾಲಿಸಿ ಅಡವಿಗೆ ತೆರಳಿದಳು. ॥೧೯॥

**ಅತೀವ ಭರ್ತುರ್ವ್ರತಧರ್ಮನಿಷ್ಠಯಾ**
**ಶುಶ್ರೂಷಯಾ ಚಾರ್ಷದೇಹಯಾತ್ರಯಾ ।**
**ನಾವಿಂದತಾರ್ತಿಂ ವ್ರತಕರ್ಶಿತಾಽಪಿ ಸಾ**
**ಪ್ರೇಯಸ್ಕರಸ್ಪರ್ಶನಮಾನನಿರ್ವೃತಾ ॥೨೦॥**

ಅತೀವ=ಬಹಳವಾಗಿ ಭರ್ತುಃ=ಗಂಡನ ವ್ರತಧರ್ಮನಿಷ್ಠಯಾ=ನೆಲದ ಮೇಲೆ ಮಲಗುವುದೇ ಮುಂತಾದ ವ್ರತವೇ ತನ್ನ ಧರ್ಮವೆಂಬ ನಿಶ್ಚಯದಿಂದ ಶುಶ್ರೂಷಯಾ=

ಸೇವೆ ಮಾಡುವುದರಿಂದ ಚ=ಮತ್ತು ಆರ್ಷದೇಹಯಾತ್ರಯಾ=ಋಷಿಗಳ ಆಹಾರವಾದ ಗೆಡ್ಡೆ-ಗೆಣಸುಗಳನ್ನು ತಿನ್ನುತ್ತಾ ಜೀವಿಸುವುದರಿಂದಲೂ ವ್ರತಕರ್ಶಿತಾ ಅಪಿ=ವ್ರತದಿಂದ ಸೊರಗಿದ್ದರೂ ಪ್ರೇಯಸ್ಕರಸ್ಪರ್ಶನಮಾನನಿರ್ವೃತಾ ಪ್ರೇಯಸ್ಕರ=ಪತಿಯ ಸ್ಪರ್ಶನಮಾನ-ನಿರ್ವೃತಾ=ಕೈಯಿಂದ ಮುಟ್ಟುವದೆಂಬ ಲಾಲನೆಯಿಂದ ಸಂತೋಷವುಳ್ಳವಳಾದ್ದರಿಂದ ಸಾ=ಅರ್ಚಿಯು ಆರ್ತಿಂ ನ ಅವಿಂದತ್=ದುಃಖವನ್ನು ತಿಳಿಯಲಿಲ್ಲ. ॥೨೦॥

**ದೇಹಂ ವಿಪನ್ನಾಖಿಲಚೇತನಾದಿಕಂ**
**ಪತ್ಯುಃ ಪೃಥಿವ್ಯಾ ದಯಿತಸ್ಯ ಚಾತ್ಮನಃ ।**
**ಆಲಕ್ಷ್ಯ ಕಿಂಚಿಚ್ಚ ವಿಲಪ್ಯ ಸಾ ಸತೀ**
**ಚಿತಾಮಥಾರೋಪಯದದ್ರಿಸಾನುನಿ ॥೨೧॥**

ಆತ್ಮನಃ=ತನಗೂ ಪೃಥಿವ್ಯಾಃ ಚ=ಪೃಥಿವಿಗೂ ದಯಿತಸ್ಯ=ಪ್ರಿಯನಾದ ಪತ್ಯುಃ=ಗಂಡನ ದೇಹಂ=ದೇಹವನ್ನು ವಿಪನ್ನಾಖಿಲಚೇತನಾದಿಕಂ=ನಷ್ಟವಾದ ಎಲ್ಲ ಚೇತನ-ಇಂದ್ರಿಯ-ಪ್ರಾಣಾದಿಗಳುಳ್ಳದ್ದಾಗಿ ಆಲಕ್ಷ್ಯ=ಸರಿಯಾಗಿ ತಿಳಿದು ಕಿಂಚಿತ್ ವಿಲಪ್ಯ=ಸ್ವಲ್ಪ ವಿಲಾಪ ಮಾಡಿ (ಅತ್ತು) ಸಾ ಸತೀ=ಆ ಸಾಧ್ವಿಯು ಅಥ ಅದ್ರಿಸಾನುನಿ=ಪರ್ವತಗಳ ಮಧ್ಯದ ಪ್ರದೇಶದಲ್ಲಿ ಚಿತಾಂ=ಚಿತೆಯ ಮೇಲೆ (ಶವವನ್ನು ಸುಡುವ ಕಟ್ಟಿಗೆಯ ಮೇಲೆ) ಆರೋಪಯತ್=ಇರಿಸಿದಳು. ॥೨೧॥

**ವಿಧಾಯ ಕೃತ್ಯಂ ಹ್ರದಿನೀಜಲಾಪ್ಲುತಾ**
**ದತ್ತ್ವೋದಕಂ ಭರ್ತುರುದಾರಕರ್ಮಣಃ ।**
**ನತ್ವಾ ದಿವಿಸ್ಥಾಂಸ್ತ್ರಿದಶಾಂಸ್ತ್ರಿಃ ಪರೀತ್ಯ**
**ವಿವೇಶ ವಹ್ನಿಂ ಧ್ಯಾಯತೀ ಭರ್ತೃಪಾದಮ್ ॥೨೨॥**

ಹ್ರದಿನೀಜಲಾಪ್ಲುತಾ=ನದಿಯ ನೀರಿನಲ್ಲಿ ಸ್ನಾನ ಮಾಡಿದವಳಾಗಿ ಕೃತ್ಯಂ=ಕಾಲೋಚಿತ-ವಾದುದನ್ನು (ಸಂಸ್ಕಾರಾದಿಗಳನ್ನು) ವಿಧಾಯ=ಮಾಡಿ ಉದಾರಕರ್ಮಣಃ=ಉತ್ಕೃಷ್ಟ-ಕಾರ್ಯಗಳನ್ನು ಮಾಡಿದ (ಪುಣ್ಯವಂತನಾದ) ಭರ್ತುಃ=ಗಂಡನಿಗೆ ಉದಕಂ ದತ್ವಾ=ತರ್ಪಣವನ್ನು ಕೊಟ್ಟು ದಿವಿಸ್ಥಾನ್=ಅಂತರಿಕ್ಷದಲ್ಲಿರುವ ತ್ರಿದಶಾನ್=ದೇವತೆಗಳನ್ನು ನತ್ವಾ=ನಮಸ್ಕರಿಸಿ ತ್ರಿಃ=ಮೂರು ಬಾರಿ ಪರೀತ್ಯ=ಪ್ರದಕ್ಷಿಣೆ ಮಾಡಿ ಭರ್ತೃಪಾದಂ ಧ್ಯಾಯತೀ=ಗಂಡನ ಪಾದಗಳನ್ನು ಸ್ಮರಿಸುತ್ತ ವಹ್ನಿಂ ವಿವೇಶ=ಅಗ್ನಿಪ್ರವೇಶ ಮಾಡಿದಳು.

**ವಿಲೋಕ್ಯಾನುಗತಾಂ ಸಾಧ್ವೀಂ ಪೃಥುಂ ವೀರವರಂ ಪತಿಮ್ ।**
**ತುಷ್ಟುವುರ್ವರದಾ ದೇವೈರ್ದೇವಪತ್ನ್ಯಃ ಸಹಸ್ರಶಃ ॥೨೩॥**

ವೀರವರಂ=ವೀರಶ್ರೇಷ್ಠನಾದ ಪತಿಂ=ಗಂಡನಾದ ಪೃಥುಂ=ಪೃಥುರಾಜನನ್ನು ಅನುಗತಾಂ=ಅನುಸರಿಸಿಹೋದ(ಸಹಗಮನ ಮಾಡಿದ) ಸಾಧ್ವೀಂ ವಿಲೋಕ್ಯ=ಸಾಧ್ವೀಯಾದ ಅರ್ಚಿಯನ್ನು ನೋಡಿ, ದೇವ್ಯಃ ಸಹ=ದೇವತೆಗಳೊಡನೆ ವರದಾಃ=ವರಗಳನ್ನು ಕೊಡುವ ಸಹಸ್ರಶಃ=ಸಾವಿರ ಸಾವಿರ ದೇವಪತ್ನ್ಯಃ=ದೇವತಾಸ್ತ್ರೀಯರು ತುಷ್ಟುವುಃ=ಸಂತೋಷಪಟ್ಟರು.

**ಕುರ್ವಂತ್ಯಃ ಕುಸುಮಾಸಾರಂ ತಸ್ಮಿನ್ ಮಂದರಸಾನುನಿ ।**
**ನದತ್ಸ್ವಮರತೂರ್ಯೇಷು ಗೃಣಂತಿ ಸ್ಮ ಪರಸ್ಪರಮ್ ॥೨೪॥**

ತಸ್ಮಿನ್ ಮಂದರಸಾನುನಿ=ಆ ಮಂದರಪರ್ವತದ ಸಮಪ್ರದೇಶದಲ್ಲಿ ಕುಸುಮಾಸಾರಂ= ಪುಷ್ಪವೃಷ್ಟಿಯನ್ನು ಕುರ್ವಂತ್ಯಃ=ಮಾಡುವವರಾಗಿ ಅಮರತೂರ್ಯೇಷು ನದತ್ಸು=ದೇವತೆಗಳ ವಾದ್ಯಗಳು ಧ್ವನಿ ಮಾಡುತ್ತಿರಲು ಪರಸ್ಪರಂ=ಪರಸ್ಪರವಾಗಿ ಗೃಣಂತಿ ಸ್ಮ=ಮಾತನಾಡುತ್ತಿದ್ದರು.

**ದೇವ್ಯ ಊಚುಃ -**

**ಅಹೋ ಇಯಂ ವಧೂರ್ಧನ್ಯಾ ಯಾ ಚೈವಂ ಭೂಭುಜಾಂ ಪತಿಮ್ ।**
**ಸರ್ವಾತ್ಮನಾ ಪತಿಂ ಭೇಜೇ ಯಜ್ಞೇಶಂ ಶ್ರೀವಧೂರಿವ ॥೨೫॥**

ಯಾ=ಯಾವಳು ಭೂಭುಜಾಂ ಪತಿಂ=ರಾಜರಿಗೂ ರಾಜನಾದ ಪತಿಂ=ಗಂಡನನ್ನು ಯಜ್ಞೇಶಂ=ಶ್ರೀಹರಿಯನ್ನು ಶ್ರೀವಧೂಃ ಇವ=ಲಕ್ಷ್ಮೀದೇವಿಯಂತೆ ಸರ್ವಾತ್ಮನಾ ಭೇಜೇ=ಎಲ್ಲರೀತಿಯಿಂದಲೂ ಸೇವಿಸದಳೋ ಇಯಂ ವಧೂಃ=ಈ ಅರ್ಚಿ ಎಂಬ ಹೆಣ್ಣುಮಗಳು ಧನ್ಯಾ=ಫಲಾಪೇಕ್ಷೆ ಇಲ್ಲದವಳು. ತನ್ನ ಯೋಗ್ಯತಾನುಸಾರ ಪೂರ್ಣಳು. ಅಹೋ=ಆಶ್ಚರ್ಯವು.

**ಭಾಗವತ ತಾತ್ಪರ್ಯ -**

ಇಲ್ಲಿ ಧನ್ಯಶಬ್ದಾರ್ಥವನ್ನು ಹೇಳುವರು -

**'ಅನಪೇಕ್ಷೋ ಗುಣೈಃ ಪೂರ್ಣೋ ಧನ್ಯ ಇತ್ಯುಚ್ಯತೇ ಬುಧೈಃ' ಇತಿ ಶಬ್ದನಿರ್ಣಯೇ ।**

ಫಲಾಪೇಕ್ಷೆ ಇಲ್ಲದವನು, ಗುಣಪೂರ್ಣನಾದವನು ಧನ್ಯನು ಎಂದು ಜ್ಞಾನಿಗಳಿಂದ ಹೇಳಲ್ಪಡುವನು ಎಂದು ಶಬ್ದನಿರ್ಣಯದಲ್ಲಿದೆ. ॥೨೫॥

**ಸೈಷಾ ನೂನಂ ವ್ರಜತ್ಯೂರ್ಧ್ವಮನುವೈನ್ಯಂ ಪತಿಂ ಸತೀ ।**
**ಪಶ್ಯತೋಽಸ್ಮಾನತೀತ್ಯಾರ್ಚಿರ್ದುರ್ವಿಭಾವ್ಯೇನ ಕರ್ಮಣಾ ॥೨೬॥**

ಸತೀ=ಸಾಧ್ವಿಯಾದ ಏಷಾ ಸಾ ಅರ್ಚಿಃ=ಸಹಗಮನ ಮಾಡಿದ ಈ ಅರ್ಚಿಯು ದುರ್ವಿಭಾವ್ಯೇನ ಕರ್ಮಣಾ=ಅನ್ಯರಿಂದ ಮಾಡಲಾಗದ ಕಾರ್ಯದಿಂದ ಅಸ್ಮಾನ್

ಅತೀತ್ಯ=ನಮ್ಮನ್ನೂ ಮೀರಿ ಪತಿಂ=ಗಂಡನಾದ ವೈನ್ಯಂ ಅನು=ಪೃಥುವನ್ನು ಅನುಸರಿಸಿ ನೂನಂ=ನಿಶ್ಚಯವಾಗಿ ಊರ್ಧ್ವಂ ವ್ರಜತಿ=ಉತ್ತಮ ಲೋಕವನ್ನು ಹೊಂದುವಳು. ॥೨೬॥

**ತೇಷಾಂ ದುರಾಪಂ ಕಿಂತ್ವನ್ಯನ್ಮರ್ತ್ಯಾನಾಂ ಭಗವತ್ಪದಮ್ ।**
**ವಿದ್ಯುಲ್ಲೋಲಾಯುಷೋ ಯೇ ವೈ ನೈಷ್ಕರ್ಮ್ಯಂ ಸಾಧಯಂತ್ಯುತ ॥೨೭॥**

ಯೇ=ಯಾರು ವಿದ್ಯುಲ್ಲೋಲಾಯುಷಃ=ಮಿಂಚಿನಂತೆ ಚಂಚಲವಾದ ಆಯುಷ್ಯವುಳ್ಳ ಮನುಷ್ಯರು ನೈಷ್ಕರ್ಮ್ಯಂ=ವಿಧಿಬಂಧನರಹಿತವಾದುದರಿಂದ ನೈಷ್ಕರ್ಮ್ಯವೆನಿಸಿಕೊಳ್ಳುವ ಭಗವತ್ಪದಂ=ಮೋಕ್ಷವನ್ನು ಸಾಧಯಂತಿ=ಸಂಪಾದಿಸುವರೋ ತೇಷಾಂ ಮರ್ತ್ಯಾನಾಂ= ಅಂತಹ ಮನುಷ್ಯರಿಗೆ ಅನ್ಯತ್=ಮೋಕ್ಷೇತರವಾದ ಯಾವ ಪುರುಷಾರ್ಥವಾದು ದುರಾಪಂ ಕಿಂ=ಹೊಂದಲು ಅಶಕ್ಯವೇನೂ ಅಲ್ಲ. ಮೋಕ್ಷಸಾಧನವಾದ ಜ್ಞಾನದಿಂದಲೇ ಎಲ್ಲ ಪುರುಷಾರ್ಥಗಳೂ ಅವರಿಗೆ ಆಗುವವು ಎಂದು ಭಾವ. ॥೨೭॥

**ಸ ವಂಚಿತೋ ಬತಾತ್ಮಧ್ರುಕ್ ಕೃಚ್ಛ್ರೇಣ ಮಹತಾ ಭುವಿ ।**
**ಲಬ್ಧ್ವಾಽಽಪವರ್ಗ್ಯಂ ಮಾನುಷ್ಯಂ ವಿಷಯೇಷು ವಿಷಜ್ಜತೇ ॥೨೮॥**

ಯಃ=ಯಾವನು ಮಹತಾ ಕೃಚ್ಛ್ರೇಣ=ಬಹಳ ಕಷ್ಟದಿಂದ ಭುವಿ=ಭೂಲೋಕದಲ್ಲಿ ಆಪವರ್ಗ್ಯಂ=ಮೋಕ್ಷಸಾಧನವಾದ ಜ್ಞಾನಕ್ಕೆ ಕಾರಣವಾದ ಮಾನುಷ್ಯಂ ಲಬ್ಧ್ವಾ=ಮನುಷ್ಯ ಶರೀರವನ್ನು ಪಡೆದು ವಿಷಯೇಷು ವಿಷಜ್ಜತೇ=ವಿಷಯಗಳಲ್ಲಿ ಆಸಕ್ತನಾಗುವನೋ ಸಃ=ಅವನು ಆತ್ಮಧ್ರುಕ್=ತನಗೆ ತಾನೇ ದ್ರೋಹ ಬಗೆದವನು, ವಂಚಿತಃ=ದೇವತೆಗಳಿಂದ ವಂಚಿತನು. ಬತ=ಖೇದವು.

**ಮೈತ್ರೇಯ ಉವಾಚ -**

**ಸ್ತುವಂತೀಷ್ವಮರಸ್ತ್ರೀಷು ಪತಿಲೋಕಂ ಗತಾ ವಧೂಃ ।**
**ಯಂ ವಾ ಆತ್ಮವಿದಾಂ ಧುರ್ಯೋ ವೈನ್ಯಃ ಪ್ರಾಪಾಚ್ಯುತಾಶಯಃ ॥೨೯॥**

ವಧೂಃ=ಅರ್ಚಿಯು ಅಮರಸ್ತ್ರೀಷು=ದೇವತಾಸ್ತ್ರೀಯರು ಸ್ತುವಂತೀಷು=ಸ್ತೋತ್ರ ಮಾಡುತ್ತಿರಲು, ಆತ್ಮವಿದಾಂ ಧುರ್ಯಃ=ಆತ್ಮಜ್ಞಾನಿಗಳಲ್ಲಿ ಧುರೀಣನಾದ ಅಚ್ಯುತಾಶಯಃ= ಶ್ರೀಹರಿಯಲ್ಲಿ ಮನಸ್ಸಿರಿಸಿದ ವೈನ್ಯಃ=ಪೃಥುರಾಜನು ಯಂ ಪ್ರಾಪ=ಯಾವ ಸ್ಥಾನವನ್ನು ಹೊಂದಿದನೋ ತಂ ಪತಿಲೋಕಂ=ಆ ಪತಿಯ ಲೋಕವನ್ನೇ ಗತಾ=ಹೊಂದಿದಳು. ॥೨೯॥

**ಇತ್ಥಂಭೂತಾನುಭಾವೋಽಸೌ ಪೃಥುಃ ಸ ಭಗವತ್ತಮಃ ।**
**ಕೀರ್ತಿತಂ ತಸ್ಯ ಚರಿತಮುದ್ದಾಮಚರಿತಸ್ಯ ತೇ ॥೩೦॥**

ಅಸೌ ಪೃಥುಃ=ಈ ಪೃಥುರಾಜನು ಇತ್ಥಂಭೂತಾನುಭಾವಃ=ಈ ರೀತಿಯಾದ ಪ್ರಭಾವವುಳ್ಳವನು, ಭಗವತ್ತಮಃ=ಅತಿಶಯವಾದ ಐಶ್ವರ್ಯಾದಿಗುಣವುಳ್ಳವನು. ಉದ್ದಾಮಚರಿತಸ್ಯ ತಸ್ಯ=ಉತ್ಕೃಷ್ಟಕಾರ್ಯಗಳನ್ನು ಮಾಡಿದ ಅವನ ಚರಿತಂ=ಚರಿತ್ರೆಯು ತೇ=ನಿನಗೆ ಕೀರ್ತಿತಂ=ನನ್ನಿಂದ ಹೇಳಲ್ಪಟ್ಟಿತು. ।।೩೦।।

**ಯ ಇದಂ ಸುಮಹತ್ಪುಣ್ಯಂ ಶ್ರದ್ಧಯಾಽವಹಿತಃ ಪಠೇತ್ ।**
**ಶ್ರಾವಯೇತ್ ಶೃಣುಯಾದ್ವಾಽಪಿ ಸ ಪೃಥೋಃ ಪದವೀಮಿಯಾತ್ ।।೩೧।।**

ಯಃ=ಯಾವನು ಸುಮಹತ್ಪುಣ್ಯಂ=ಮಂಗಲಕರವಾದ (ಪುಣ್ಯಜನಕವಾದ) ಶ್ರದ್ಧಯಾ=ಆಸ್ತಿಕ್ಯಬುದ್ಧಿಯಿಂದ ಅವಹಿತಃ=ಸಮಾಧಾನಮನಸ್ಕನಾಗಿ ಪಠೇತ್=ಪಠಿಸುವನೋ, ಶ್ರಾವಯೇತ್=ಮತ್ತೊಬ್ಬರಿಗೆ ಕೇಳಿಸವನೋ, ವಾ=ಅಥವಾ ಶೃಣುಯಾತ್=ತಾನು ಕೇಳುವನೋ ಸಃ=ಅವನು ಪೃಥೋಃ ಪದವೀಂ ಇಯಾತ್=ಪೃಥುವಿನ ಸ್ಥಾನವನ್ನು ಹೊಂದುವನು. ।।೩೧।।

**ಬ್ರಾಹ್ಮಣೋ ಬ್ರಹ್ಮವರ್ಚಸ್ವೀ ರಾಜನ್ಯೋ ಜಗತೀಪತಿಃ ।**
**ವೈಶ್ಯಃ ಪಠನ್ ವಿಶ್ಪತಿಃ ಸ್ಯಾಚ್ಛೂದ್ರ ಉತ್ತಮತಾಮಿಯಾತ್ ।।೩೨।।**

ಪಠನ್=ಪೃಥುರಾಜನ ಚರಿತ್ರೆಯನ್ನು ಪಠಿಸುವ ಬ್ರಾಹ್ಮಣಃ=ಬ್ರಾಹ್ಮಣನು ಬ್ರಹ್ಮವರ್ಚಸ್ವೀ ಸ್ಯಾತ್=ಬ್ರಹ್ಮಜ್ಞಾನದಿಂದ ಬರುವ ವರ್ಚಸ್ಸನ್ನು ಪಡೆಯುವನು. (ಬ್ರಹ್ಮಜ್ಞಾನ ಮಾಡಿಕೊಳ್ಳುವನು.) ರಾಜನ್ಯಃ=ಕ್ಷತ್ರಿಯನು ಜಗತೀಪತಿಃ ಸ್ಯಾತ್=ರಾಜನಾಗುವನು. ವೈಶ್ಯಃ= ವೈಶ್ಯನು ವಿಶ್ಪತಿಃ ಸ್ಯಾತ್=ಎಲ್ಲ ವೈಶ್ಯಕುಲಕ್ಕೇನೇ ಒಡೆಯನು ಆಗುವನು. ಶೂದ್ರಃ=ಶೂದ್ರನು ಉತ್ತಮತಾಂ ಇಯಾತ್=ತಮ್ಮ ಜಾತಿಯಲ್ಲಿಯೇ ಶ್ರೇಷ್ಠನಾಗುವನು. ।।೩೨।।

**ತ್ರಿಃಕೃತ್ವ ಇದಮಾಕರ್ಣ್ಯ ನರೋ ನಾರ್ಯಥವಾಽಽದೃತಃ ।**
**ಅಪ್ರಜಃ ಸುಪ್ರಜತಮೋ ನಿರ್ಧನೋ ಧನವತ್ತಮಃ ।।೩೩।।**

ನಾರೀ=ಸ್ತ್ರೀಯು ಅಥವಾ ನರಃ=ಪುರುಷನು ಆದೃತಃ=ಆದರವುಳ್ಳವನಾಗಿ ಇದಂ=ಈ ಚರಿತ್ರೆಯನ್ನು ತ್ರಿಃಕೃತ್ವಃ=ಮೂರು ಬಾರಿ ಆಕರ್ಣ್ಯ=ಕೇಳಿ, ಅಪ್ರಜಃ=ಮಕ್ಕಳಿಲ್ಲದವನು ಸುಪ್ರಜತಮಃ=ಒಳ್ಳೆಯ ಮಕ್ಕಳುಳ್ಳವರಲ್ಲಿ ಶ್ರೇಷ್ಠನಾಗುವನು. ನಿರ್ಧನಃ=ದರಿದ್ರನು ಧನವತ್ತಮಃ=ಶ್ರೇಷ್ಠಧನಿಕನು ಆಗುವನು. ।।೩೩।।

**ಇದಂ ಸ್ವಸ್ತ್ಯಯನಂ ಪುಂಸಾಮಮಂಗಲ್ಯನಿವಾರಣಮ್ ।**
**ಧನ್ಯಂ ಯಶಸ್ಯಮಾಯುಷ್ಯಂ ಸ್ವರ್ಗ್ಯಂ ಕಲಿಮಲಾಪಹಮ್ ।।೩೪।।**

ಇದಂ=ಈ ಚರಿತ್ರೆಯು ಸ್ವಸ್ತ್ಯಯನಂ=ಶುಭಾಶ್ರಯವು (ಶುಭಕಾರಕವು), ಪುಂಸಾಂ= ಜನರಿಗೆ ಅಮಾಂಗಲ್ಯನಿವಾರಣಂ=ಅಶುಭನಿವಾರಕವು, ಧನ್ಯಂ=ಯೋಗ್ಯತಾನುಸಾರವಾಗಿ ಪೂರ್ಣತೆಯನ್ನು ಕೊಡುವುದು, ಯಶಸ್ಯಂ=ಕೀರ್ತಿದಾಯಕವು, ಆಯುಷ್ಯಂ=ಆಯುಷ್ಯ-ಪ್ರದವು, ಸ್ವರ್ಗ್ಯಂ=ಸುಖಪ್ರದವು, ಕಲಿಮಲಾಪಹಂ=ಕಲಿಕಾಲದ ದೋಷಪರಿಹಾರಕವು ಅಥವಾ ಕಲಿ=ಕಲಹ ಮಲ=ದೋಷಗಳ ಅಪಹಂ=ನಾಶಕವೂ ಆಗಿದೆ. ।।೩೪।।

**ಧರ್ಮಾರ್ಥಕಾಮಮೋಕ್ಷಾಣಾಂ ಸಮ್ಯಕ್ ಸಿದ್ಧಿಮಭೀಪ್ಸುಭಿಃ ।**
**ಶ್ರದ್ಧಯೈತದನುಶ್ರಾವ್ಯಂ ಚತುರ್ಣಾಂ ಕಾರಣಂ ಪರಮ್ ।।೩೫।।**

ಧರ್ಮಾರ್ಥಕಾಮಮೋಕ್ಷಾಣಾಂ=ಧರ್ಮ ಅರ್ಥ ಕಾಮ ಮೋಕ್ಷ ಇವುಗಳ ಸಮ್ಯಕ್ ಸಿದ್ಧಿಂ=ಸರಿಯಾದ ಫಲವನ್ನು ಅಭೀಪ್ಸುಭಿಃ=ಇಚ್ಛಿಸುವವರಿಂದ ಚತುರ್ಣಾಂ=ನಾಲ್ಕು ಪುರುಷಾರ್ಥಗಳಿಗೆ ಪರಂ ಕಾರಣಂ=ಮುಖ್ಯಕಾರಣವಾದ ಏತತ್=ಈ ಚರಿತ್ರೆಯು ಶ್ರದ್ಧಯಾ=ಆಸಕ್ತಿಯಿಂದ ಅನುಶ್ರಾವ್ಯಂ=ಸದಾ ಕೇಳಲ್ಪಡಬೇಕಾದುದು. ।।೩೫।।

**ಸಂಗ್ರಾಮಾಭಿಮುಖೋ ರಾಜಾ ಶ್ರುತ್ವೈತದನುಯಾತಿ ಯಾನ್ ।**
**ಬಲಿಂ ತಸ್ಮೈ ಹರಂತ್ಯಗ್ರೇ ರಾಜಾನಃ ಪೃಥವೇ ಯಥಾ ।।೩೬।।**

ಸಂಗ್ರಾಮಾಭಿಮುಖಃ=ಯುದ್ಧಾಭಿಮುಖನಾದ ರಾಜನು (ಯುದ್ಧಕ್ಕೆ ಹೊರಟ ರಾಜನು ಎಂದರ್ಥ) ಏತತ್=ಈ ಪೃಥುಚರಿತ್ರೆಯನ್ನು ಶ್ರುತ್ವಾ=ಕೇಳಿ ಯಾನ್=ಯಾರನ್ನು ಅನುಯಾತಿ= ಬೆನ್ನುಹತ್ತುವನೋ ತೇ ರಾಜಾನಃ=ಆ ರಾಜರುಗಳು ಪೃಥವೇ ಯಥಾ=ಪೃಥುವಿಗೆ ಕಾಣಿಕೆಗಳನ್ನು ಇತ್ತಂತೆ ತಸ್ಮೈ=ಪೃಥುರಾಜನ ಚರಿತ್ರೆ ಕೇಳಿದ ರಾಜನಿಗೆ ಅಗ್ರೇ ಬಲಿಂ ಹರಂತಿ=ಮೊದಲೇನೇ ಕಾಣಿಕೆಗಳನ್ನು ಸಮರ್ಪಿಸುವರು. ।।೩೬।।

ಹೇಳಿದ ಫಲವು ವಿರಕ್ತನಾದ ಭಗವದ್‌ಭಕ್ತನಿಗೆ ಆಗುವುದು ಎಂದು ಹೇಳುವರು -

**ಮುಕ್ತಾನ್ಯಸಂಗೋ ಭವಗತ್ಯಚಲಾಂ ಭಕ್ತಿಮುದ್ವಹನ್ ।**
**ವೈನ್ಯಸ್ಯ ಚರಿತಂ ಪುಣ್ಯಂ ಶೃಣುಯಾಚ್ಛ್ರಾವಯೇತ್ ಪಠೇತ್ ।।೩೭।।**

ಮುಕ್ತಾನ್ಯಸಂಗಃ=ವಿಷಯಾಸಕ್ತಿಯನ್ನು ತೊರೆದವನಾಗಿ, ಭಗವತಿ=ಶ್ರೀಹರಿಯಲ್ಲಿ ಅಚಲಾಂ=ನಿಶ್ಚಲವಾದ ಭಕ್ತಿಂ=ಭಕ್ತಿಯನ್ನು ಉದ್ವಹನ್=ಮಾಡುವವನಾಗಿ, ಪುಣ್ಯಂ= ಪುಣ್ಯಕರವಾದ ವೈನ್ಯಂ ಚರಿತಂ=ಪೃಥುವಿನ ಚರಿತ್ರೆಯನ್ನು ಶೃಣುಯಾತ್=ಕೇಳಬೇಕು, ಶ್ರಾವಯೇತ್=ಕೇಳಿಸಬೇಕು, ಪಠೇತ್=ಪಠಿಸಬೇಕು. ।।೩೭।।

**ವೈಚಿತ್ರವೀರ್ಯಾಭಿಹಿತಂ ಮಹನ್ಮಾಹಾತ್ಮ್ಯಸೂಚಕಮ್ ।**
**ಅಸ್ಮಿನ್ ಕೃತಮತಿರ್ಮರ್ತ್ಯಃ ಪಾರ್ಥವೀಂ ಗತಿಮಾಪ್ನುಯಾತ್ ॥೩೮॥**

ಭೋಃ ವೈಚಿತ್ರವೀರ್ಯ=ಹೇ ವಿದುರನೇ ! ಮಹನ್ಮಾಹಾತ್ಮ್ಯಸೂಚಕಂ=ಭಗವಂತನ ಮಾಹಾತ್ಮ್ಯವನ್ನು ಸೂಚಿಸುವ ಅಸ್ಮಿನ್=ಈ ಚರಿತ್ರೆಯಲ್ಲಿ ಕೃತಮತಿಃ=ಮನಸ್ಸಿಟ್ಟ ಮರ್ತ್ಯಃ= ಮನುಷ್ಯನು ಪಾರ್ಥವೀಂ=ಪೃಥುರಾಜನ ಗತಿಂ=ಸ್ಥಾನವನ್ನು ಆಪ್ನುಯಾತ್=ಹೊಂದುವನು.

**ಅನುದಿನಮಿದಮಾದರೇಣ ಶೃಣ್ವನ್**
**ಪೃಥುಚರಿತಂ ಪ್ರಥಯನ್ ವಿಮುಕ್ತಸಂಗಃ ।**
**ಭಗವತಿ ಭವಸಿಂಧುಪಾರಭೂತೇ**
**ಸ ಚ ನಿಪುಣಾಂ ಲಭತೇ ರತಿಂ ಮನುಷ್ಯಃ ॥೩೯॥**

॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ ತ್ರಯೋವಿಂಶೋಽಧ್ಯಾಯಃ ॥

ಯಃ=ಯಾವ ಮನುಷ್ಯಃ=ಮನುಷ್ಯನು (ಅಧಿಕಾರಿಯು) ಅನುದಿನಂ=ಪ್ರತಿದಿನವೂ ಇದಂ=ಈ ಪೃಥುಚರಿತಂ=ಪೃಥುವಿನ ಚರಿತ್ರೆಯನ್ನು ಆದರೇಣ=ವಿಶ್ವಾಸದಿಂದ ಶೃಣ್ವನ್=ಕೇಳುವವನಾಗಿ ಪ್ರಥಯನ್=ಸಜ್ಜನರ ಸಭೆಯಲ್ಲಿ ಹೇಳುತ್ತ ವಿಸ್ತಾರಗೊಳಿಸುವನೋ ಸ ಚ=ಅಂತಹ ಅಧಿಕಾರಿಯು ವಿಮುಕ್ತಸಂಗಃ=ವಿರಕ್ತನಾಗಿ ಭವಸಿಂಧುಪಾರಭೂತೇ= ಸಂಸಾರಸಾಗರಕ್ಕೆ ಸೇತುವೆಯಂತೆ ಇರುವ ಭಗವತಿ=ಶ್ರೀಹರಿಯಲ್ಲಿ ನಿಪುಣಾಂ ರತಿಂ ಲಭತೇ=ಶ್ರೀಪ್ರಸಾದಜನಕವಾದ ಭಕ್ತಿಯನ್ನು ಪಡೆಯುವನು. ॥೩೯॥

॥ ಇಲ್ಲಿಗೆ ಇಪ್ಪತ್ಮೂರನೇ ಅಧ್ಯಾಯವು ಮುಗಿಯಿತು ॥

## ಅಥ ಚತುರ್ವಿಂಶೋಽಧ್ಯಾಯಃ

ಪ್ರಚೇತಸರ ಉತ್ಪತ್ತಿಯನ್ನು ತಿಳಿಸಲು ಪೃಥುವಿನ ವಂಶಪರಂಪರೆಯನ್ನು ಹೇಳುವರು. "ಈಶ್ವರಾತ್ ಜ್ಞಾನಮನ್ವಿಚ್ಛೇತ್ ಮೋಕ್ಷಮೀಚ್ಛೇಜ್ಜನಾರ್ದನಾತ್" ಎಂದಿರುವುದರಿಂದ ಮೋಕ್ಷಕ್ಕಾಗಿ ರುದ್ರದೇವರಿಂದ ಜ್ಞಾನೋಪದೇಶಪ್ರಕಾರವನ್ನು ಮತ್ತು ಬ್ರಹ್ಮಪದಯೋಗ್ಯರಾದ ಋಜುಗಳಿಗೆ ಉತ್ತಮಾಧಿಕಾರಿತ್ವವನ್ನೂ ಈ ಅಧ್ಯಾಯದಲ್ಲಿ ಹೇಳುವರು. ಅದರಲ್ಲಿ ಮೊದಲಿಗೆ ಇದರ ಉಪೋದ್ಘಾತ ಹೇಳುವರು -

**ಮೈತ್ರೇಯ ಉವಾಚ -**

**ವಿಜಿತಾಶ್ವೋಽಥ ರಾಜಾಽಽಸೀತ್ ಪೃಥುಪುತ್ರಃ ಪೃಥುಶ್ರವಾಃ ।**
**ಯವೀಯೇಭ್ಯೋಽದದತ್ ಕಾಷ್ಠಾ ಭ್ರಾತೃಭ್ಯೋ ಭ್ರಾತೃವತ್ಸಲಃ ॥೧॥**

ಅಥ=ಪೃಥುರಾಜನು ಸ್ವರ್ಗಸ್ಥನಾದ ನಂತರ ಪೃಥುಶ್ರವಾಃ=ವಿಶಾಲವಾದ ಕೀರ್ತಿಯುಳ್ಳ ಪೃಥುಪುತ್ರಃ=ಪೃಥುವಿನ ಹಿರಿಯಮಗನಾದ ವಿಜಿತಾಶ್ವಃ=ವಿಜಾತಾಶ್ವನೆಂಬುವವನು ರಾಜಾ ಆಸೀತ್=ರಾಜನಾದನು. ಭ್ರಾತೃವತ್ಸಲಃ=ತಮ್ಮಂದಿರ ಮೇಲೆ ಪ್ರೀತಿಯುಳ್ಳ ಇವನು ಯವೀಯೇಭ್ಯಃ=ಚಿಕ್ಕವರಾದ ಭ್ರಾತೃಭ್ಯಃ=ತಮ್ಮಂದಿರಿಗೆ ಕಾಷ್ಠಾಃ=ದಿಕ್ಕುಗಳನ್ನು ಅದದತ್=ಕೊಟ್ಟನು. ॥೧॥

**ಹರ್ಯಕ್ಷಾಯಾದಿಶತ್ ಪ್ರಾಚೀಂ ಧೂಮ್ರಕೇಶಾಯ ದಕ್ಷಿಣಾಮ್ ।**
**ಪ್ರತೀಚೀಂ ವೃಕಸಂಜ್ಞಾಯ ತುರ್ಯಾಂ ದ್ರವಿಣಸೇ ವಿಭುಃ ॥೨॥**

ವಿಭುಃ=ಸಮರ್ಥನಾದ ವಿಜಿತಾಶ್ವನು ಹರ್ಯಕ್ಷಾಯ=ಹರ್ಯಕ್ಷನಿಗೆ ಪ್ರಾಚೀಂ=ಪೂರ್ವದಿಕ್ಕನ್ನು, ಧೂಮ್ರಕೇಶಾಯ=ಧೂಮ್ರಕೇಶನಿಗೆ ದಕ್ಷಿಣಾಂ=ದಕ್ಷಿಣದಿಕ್ಕನ್ನು, ವೃಕಸಂಜ್ಞಾಯ=ವೃಕ ಎಂಬುವನಿಗೆ ಪ್ರತೀಚೀಂ=ಪಶ್ಚಿಮದಿಕ್ಕನ್ನು, ದ್ರವಿಣಸೇ=ದ್ರವಿಣನಿಗೆ ತುರ್ಯಾಂ=ನಾಲ್ಕನೆಯದಾದ ಉತ್ತರದಿಕ್ಕನ್ನು ಆದಿಶತ್=ಇತ್ತನು. ॥೨॥

**ಅಂತರ್ಧಾನಗತಿಂ ಶಕ್ರಾಲ್ಲಬ್ಧ್ವಾऽಂತರ್ಧಾನಸಂಜ್ಞಿತಃ ।**
**ಅಪತ್ಯತ್ರಯಮಾಧತ್ತ ಶಿಖಂಡಿನ್ಯಾಂ ಸುಸಂಮ್ಮತಃ ॥೩॥**

ಶಕ್ರಾತ್=ಇಂದ್ರನಿಂದ ಅಂತರ್ಧಾನಗತಿಂ=ಅದೃಶ್ಯನಾಗುವ ವಿದ್ಯೆಯನ್ನು ಲಬ್ಧ್ವಾ=ಪೃಥುರಾಜನ ಅಶ್ವಮೇಧದ ಅಶ್ವವನ್ನು ಗೆದ್ದು ತರುವಾಗ ಪಡೆದದ್ದರಿಂದ ಅಂತರ್ಧಾನಸಂಜ್ಞಿತಃ=ಅಂತರ್ಧಾನನೆಂಬ ಹೆಸರು ಪಡೆದ ವಿಜಿತಾಶ್ವನು (ಕುದುರೆ ಗೆದ್ದು ತಂದುದರಿಂದ ವಿಜಿತಾಶ್ವ ಎಂದು ಹೆಸರು) ಸುಸಂಮ್ಮತಃ=ಅತ್ಯಂತಸಮ್ಮತನಾದವನು ಶಿಖಂಡಿನ್ಯಾಂ=ಶಿಖಂಡಿನೀಯೆಂಬ ಹೆಂಡತಿಯಲ್ಲಿ ಅಪತ್ಯತ್ರಯಂ=ಮೂರು ಮಕ್ಕಳನ್ನು ಆಧತ್ತ=ಆಧಾನ ಮಾಡಿದನು. (ಪಡೆದನು.)॥೩॥

**ಪಾವಕಃ ಪವಮಾನಶ್ಚ ಶುಚಿರಿತ್ಯಗ್ನಯಃ ಪುರಾ ।**
**ವಶಿಷ್ಠಶಾಪಾದುತ್ಪನ್ನಾಃ ಪುನರ್ಯೋಗಗತಿಂ ಗತಾಃ ॥೪॥**

ಪಾವಕಃ ಪವಾಮಾನಃ ಶುಚಿಃ ಇತಿ=ಪಾವಕ, ಪವಮಾನ, ಶುಚಿ ಎಂಬುವರು ಪುರಾ ಅಗ್ನಯಃ=ಪೂರ್ವದಲ್ಲಿ ಅಗ್ನಿಯಾದವರು ವಶಿಷ್ಠಶಾಪಾತ್=ವಶಿಷ್ಠರ ಶಾಪದಿಂದ ಉತ್ಪನ್ನಾಃ=ಇವನ ಮಕ್ಕಳಾಗಿ ಜನಿಸಿದರು. ಪುನಃ ಮತ್ತೆ ಯೋಗಗತಿಂ ಗತಾಃ=ಅಗ್ನಿಗಳಾದರು.

**ಅಂತರ್ಧಾನೋ ನಭಸ್ವತ್ಯಾಂ ಹವಿರ್ಧಾನಮವಿಂದತ ।**
**ಯ ಇಂದ್ರಮಶ್ವಹರ್ತಾರಂ ವಿದ್ವಾನಪಿ ನ ಜಘ್ನಿವಾನ್ ॥೫॥**

ಯಃ=ಯಾವನು ಇಂದ್ರಂ=ಇಂದ್ರನನ್ನು ಅಶ್ವಹರ್ತಾರಂ=ಕುದುರೆಕಳ್ಳನೆಂದು ವಿದ್ವಾನ್ ಅಪಿ=ತಿಳಿದಿದ್ದರೂ ಸಹ ನ ಜಘ್ನಿವಾನ್=ಕೊಲ್ಲಲಿಲ್ಲವೋ (ಕೇವಲ ಗೆದ್ದು ಕುದರೆ ತಂದನು) ಸಃ ಅಂತರ್ಧಾನಃ=ಆ ವಿಜಿತಾಶ್ವನು ನಭಸ್ವತ್ಯಾಂ=ನಭಸ್ವತಿಯೆಂಬ ಬೇರೊಬ್ಬ ಹೆಂಡತಿಯಲ್ಲಿ ಹವಿರ್ಧಾನಂ ಅವಿಂದತ=ಹವಿರ್ಧಾನನೆಂಬ ಮಗನನ್ನು ಪಡೆದನು. ॥೫॥

**ರಾಜ್ಞಾಂ ವೃತ್ತಿಂ ಕರಾದಾನಂ ದಂಡಶುಲ್ಕಾದಿ ದಾರುಣಮ್ ।**
**ಮನ್ಯಮಾನೋ ದೀರ್ಘಸತ್ರವ್ಯಾಜೇನ ವಿಸಸರ್ಜ ಹ ॥೬॥**

ಕರಾದಾನಂ=ಕರವನ್ನು ಸ್ವೀಕರಿಸುವುದು ದಂಡಶುಲ್ಕಾದಿ=ದೈಹಿಕ ಆರ್ಥಿಕವಾದ ದಂಡರೂಪವಾದ ರಾಜ್ಞಾಂ ವೃತ್ತಿಂ=ರಾಜರ ಜೀವನೋಪಾಯವನ್ನು ದಾರುಣಂ=ಪರರಿಗೆ ಪೀಡಾದಾಯಕವೆಂದು ಮನ್ಯಮಾನಃ=ತಿಳಿದವನಾಗಿ ದೀರ್ಘಸತ್ರವ್ಯಾಜೇನ= ಸನ್ಯಾಸವನ್ನು ಸ್ವೀಕರಿಸುವ ಮೂಲಕ ವಿಸಸರ್ಜ ಹ=ತ್ಯಜಿಸಿದನು. ॥೬॥

**ತತ್ರಾಪಿ ಹಂಸಂ ಪುರುಷಂ ಪರಮಾತ್ಮಾನಮಾತ್ಮದೃಕ್ ।**
**ಯಜಂಸ್ತಲ್ಲೋಕತಾಮಾಪ ಪರಮೇಣ ಸಮಾಧಿನಾ ॥೭॥**

ಆತ್ಮದೃಕ್=ಪರಮಾತ್ಮಜ್ಞಾನಿಯಾದ ವಿಜಿತಾಶ್ವನು ತತ್ರಾಪಿ=ಆ ಸನ್ಯಾಸಾಶ್ರಮದಲ್ಲಿಯೂ ಹಂಸಂ=ನಿರ್ಮಲನಾದ ಪರಮಾತ್ಮಾನಂ=ಶ್ರೀಹರಿಯನ್ನು ಪರಮೇಣ ಸಮಾಧಿನಾ=ತನಗೆ ಯೋಗ್ಯವಾದ ಧ್ಯಾನದಿಂದ ಯಜನ್=ಪೂಜಿಸುವವನಾಗಿ ತಲ್ಲೋಕತಾಂ ಆಪ=ವೈಕುಂಠ-ಲೋಕವನ್ನು ಪಡೆದನು. ॥೭॥

**ಹವಿರ್ಧಾನಾದ್ಧವಿರ್ಧಾನೀ ವಿದುರಾಸೂತ ಷಟ್ ಸುತಾನ್ ।**
**ಬರ್ಹಿಷ್ಮಂತಂ ಗಯಂ ಶುಕ್ಲಂ ಕೃಷ್ಣಂ ಸತ್ಯಂ ಜಿತವ್ರತಮ್ ॥೮॥**

ಹೇ ವಿದುರ=ವಿದುರನೇ ! ಹವಿರ್ಧಾನಾತ್=ಅಂತರ್ಧಾನನ ಮಗನಾದ ಹವಿರ್ಧಾನನಿಂದ ಹವಿರ್ಧಾನೀ=ಹವಿರ್ಧಾನೀ ಎಂಬ ಹೆಸರಿನ ಅವನ ಪತ್ನಿಯು ಬರ್ಹಿಷ್ಮಂತಂ=ಬರ್ಹಿಷ್ಮಂತ, ಗಯಂ=ಗಯ, ಶುಕ್ಲಂ=ಶುಕ್ಲ, ಕೃಷ್ಣಂ=ಕೃಷ್ಣ, ಸತ್ಯಂ=ಸತ್ಯ, ಜಿತವ್ರತಂ=ಜಿತವ್ರತ ಎಂಬ ಷಟ್ ಸುತಾನ್=ಆರು ಜನ ಗಂಡುಮಕ್ಕಳನ್ನು ಅಸೂತ=ಪ್ರಸವಿಸಿದಳು. ॥೮॥

**ಬರ್ಹಿಷ್ಮಾಂಸ್ತು ಮಹಾಭಾಗೋ ಹಾವಿರ್ಧಾನಿಃ ಪ್ರಜಾಪತಿಃ ।**
**ಕ್ರಿಯಾಕಾಂಡೇಷು ನಿಷ್ಣಾತೋ ಯೋಗೇಷು ಚ ಕರೂದ್ವಹ ॥೯॥**

ಹೇ ಕುರೂದ್ವಹ=ವಿದುರನೇ ! ಹಾವಿರ್ಧಾನಿಃ=ಹವಿರ್ಧಾನನ ಪುತ್ರನಾದ ಬರ್ಹಿಷ್ಮತ್ ತು=ಬರ್ಹಿಷ್ಮಂತನಾದರೂ ಮಹಾಭಾಗಃ=ದೊಡ್ಡದೈವಶಾಲಿಯಾದ ಪ್ರಜಾಪತಿಃ=ರಾಜನು, ಕ್ರಿಯಾಕಾಂಡೇಷು=ಯಜ್ಞಾದಿ ಕರ್ಮಗಳನ್ನು ಮಾಡುವುದರಲ್ಲಿಯೂ ಚ=ಮತ್ತು ಯೋಗೇಷು ಚ=ಶ್ರೀಹರಿಧ್ಯಾನಾದಿಗಳಲ್ಲಿಯೂ ನಿಷ್ಣಾತಃ=ನಿವೃತ್ತಿಮಾರ್ಗಕ್ಕೆ ವಿರುದ್ಧವಾಗದೇ ನಿಪುಣನಾಗಿದ್ದನು. ॥೯॥

**ಯಸ್ಯೇದಂ ದೇವಯಜನಮನುಯಜ್ಞಂ ವಿತನ್ವತಃ ।**
**ಪ್ರಾಚೀನಾಗ್ರೈಃ ಕುಶೈರಾಸೀದಾಸ್ತೃತಂ ವಸುಧಾತಲಮ್ ॥೧೦॥**

ಯಸ್ಯ=ಯಾವ ಬರ್ಹಿಷ್ಮಂತನ ದೇವಯಜನಂ=ಯಜ್ಞಸ್ಥಾನವು ಅನುಯಜ್ಞಂ=ಪ್ರತಿಯೊಂದು ಯಜ್ಞ ಮಾಡುವಾಗ ವಿತನ್ವತಃ ಸತಃ=(ಹಾಕುವಾಗ) ಹರಡುತ್ತಿರಲು ಪ್ರಾಚೀನಾಗ್ರೈಃ ಕುಶೈಃ=ಪೂರ್ವಾಭಿಮುಖವಾಗಿ ಅಗ್ರಭಾಗವುಳ್ಳ ಕುಶೈಃ=ದರ್ಭೆಗಳಿಂದ ಇದಂ ವಸುಧಾತಲಂ=ಈ ಭೂಮಂಡಲವು ಆಸ್ತೃತಂ ಆಸೀತ್=ಹರಡಲ್ಪಟ್ಟಿತ್ತು. ಇದರಿಂದ ಇವನಿಗೆ 'ಪ್ರಾಚೀನಬರ್ಹಿ' ಎಂಬ ಹೆಸರು ಬಂದಿತು ಎಂದು ಭಾವ. ॥೧೦॥

**ಸಾಮುದ್ರೀಂ ದೇವದೇವೋಕ್ತಾಮುಪಯೇಮೇ ಶತದ್ರುತಿಮ್ ।**
**ಯಾಂ ವೀಕ್ಷ್ಯ ಚಾರುಸರ್ವಾಂಗೀಂ ಕಿಶೋರೀಂ ಸುಷ್ಟ್ವಲಂಕೃತಾಮ್ ।**
**ಪರಿಕ್ರಮಂತೀಮುದ್ವಾಹೇ ಚಕಮೇಽಗ್ನಿಃ ಶುಕೀಮಿವ ॥೧೧॥**

ಉದ್ವಾಹೇ=ಬೇರೆಯವರಿಗೆ ಮದುವೆ ಮಾಡಿಕೊಡುವಾಗ ಅಗ್ನಿಃ=ಅಗ್ನಿದೇವತೆಯು ಪರಿಕ್ರಾಮಂತೀಂ=ಪ್ರದಕ್ಷಿಣೆ ಮಾಡುತ್ತಿರುವ ಶುಕೀಂ ಇವ=ಶುಕಿ ಎಂಬ ಓರ್ವ ರಾಜಕುವರಿಯನ್ನು ಅಪೇಕ್ಷಿಸಿ ಸ್ವೀಕರಿಸಿ ಅಂತರ್ಧಾನ ಹೊಂದಿದನೋ ಹಾಗೆಯೇ ಚಾರುಸರ್ವಾಂಗೀಂ=ಮನೋಹರವಾದ ಎಲ್ಲ ಅವಯವಗಳುಳ್ಳ ಕೀಶೋರೀಂ=೧೫ ವರ್ಷದ ಬಾಲಕಿಯಾದ ಸುಷ್ಟು ಅಲಂಕೃತಾಂ=ಚೆನ್ನಾಗಿ ಅಲಂಕರಿಸಲ್ಪಟ್ಟ ಯಾಂ= ಯಾವಳನ್ನು ಚಕಮೇ-ಅಪೇಕ್ಷಿಸಿದನೋ ತಾಂ-ಅಂತಹ ಸಾಮುದ್ರೀಂ=ಸಮುದ್ರ ಕುವರಿಯಾದ ದೇವದೇವೋಕ್ತಾಂ=ಬ್ರಹ್ಮದೇವರಿಂದ ಹೇಳಲ್ಪಟ್ಟ ಶತದ್ರುತಿಂ=ಶತದ್ರುತಿ ಎಂಬುವಳನ್ನು ಉಪಯೇಮೇ=ಮದುವೆಯಾದನು.

**ಭಾಗವತ ತಾತ್ಪರ್ಯ -**

ಇಲ್ಲಿ ಶುಕೀಂ ಎಂಬ ಶಬ್ದದ ವಿವಕ್ಷಿತ ಅರ್ಥವನ್ನು ತಿಳಿಸುವರು -

**''ರಾಜಪುತ್ರೀಂ ಶುಕೀಮಗ್ನಿರಾವರ್ತಂತೀಂ ಪ್ರದಕ್ಷಿಣಮ್ ।**
**ಆದಾಯಾಂತರಧಾದ್ದಾನಸಮಯೇ ಮನ್ಮಥಾತುರಃ'' ಇತಿ ಬ್ರಾಹ್ಮೇ ॥**

ಅಗ್ನಿಯು ಬೇರೆಯವರಿಗೆ ವಿವಾಹ ಮಾಡಿ ದಾನ ಕೊಡುವ ಸಮಯದಲ್ಲಿ ತನಗೆ ಪ್ರದಕ್ಷಿಣೆ ಮಾಡುತ್ತಿರುವ ಶುಕೀ ಎಂಬ ರಾಜಪುತ್ರಿಯನ್ನು ಕಾಮಪೀಡಿತನಾಗಿ ಎತ್ತಿಕೊಂಡು ಅದೃಶ್ಯನಾದನು ಎಂದು ಬ್ರಾಹ್ಮಪುರಾಣದಲ್ಲಿ ಹೇಳಿದೆ. ॥೧೧॥

ಅಗ್ನಿಯು ಅಪೇಕ್ಷಿಸಿದ್ದೇನು ಆಶ್ಚರ್ಯವಲ್ಲವೆಂದು ಹೇಳುವರು -

**ವಿಭುದಾಸುರಗಂಧರ್ವಮುನಿಸಿದ್ಧಮಹೋರಗಾಃ ।**
**ವಿಜಿತಾಃ *ಸ್ಯುರ್ಯಯಾ ದಿಕ್ಷು ಕ್ವಣಯಂತ್ಯೈವ ನೂಪುರೈಃ ॥೧೨॥**

ನೂಪೂರೈಃ=ಕಾಲ್ಗೆಜ್ಜೆಗಳಿಂದ ದಿಕ್ಷು=ದಿಕ್ಕುಗಳಲ್ಲಿ ಸುತ್ತಲು ಕ್ವಣಯಂತ್ಯಾ ಏವ= ಶಬ್ದಮಾಡುವುದರಿಂದಲೇ ಯಯಾ=ಯಾವಳಿಂದ (ವಿಭುದಾಸುರಗಂಧರ್ವಮುನಿ ಸಿದ್ಧಮಹೋರಗಾಃ) ವಿಬುಧ=ದೇವತೆಗಳು ಅಸುರ=ದಾನವರು ಗಂಧರ್ವ=ಗಂಧರ್ವರು ಮುನಿ=ಋಷಿಗಳು ಸಿದ್ಧ=ಸಿದ್ಧರು ಮಹೋರಗಾಃ=ನಾಗಗಳೂ ವಿಜಿತಾಃ ಸ್ಯುಃ=ಗೆಲ್ಲಲ್ಪಟ್ಟರೋ, ಅಂತಹವಳನ್ನು ಸ್ವೀಕರಿಸಿ ಅಗ್ನಿಯು ಅದೃಶ್ಯನಾದನು ಎಂದು ಅನ್ವಯ.

*ಸೂರ್ಯಯಾ ಎಂದು ಪಾಠವಿದ್ದರೆ, ಸೂರ್ಯಯಾ=ಹೊಸದಾಗಿ ಮದುವೆ ಯಾದವಳಿಂದ ಎಂದು ಅರ್ಥ ತಿಳಿಯುವುದು. ।।೧೨।।

**ಪ್ರಾಚೀನಬರ್ಹಿಷಃ ಪುತ್ರಾಃ ಶತದ್ರುತ್ರ್ಯಾಂ ದಶಾಭವನ್ ।**
**ತಲ್ಯನಾಮವ್ರತಾಃ ಸರ್ವೇ ವೇದಸ್ನಾತಾಃ ಪ್ರಚೇತಸಃ ।।೧೩।।**

ಸರ್ವೇ=ಎಲ್ಲರೂ ಪ್ರಾಚೀನಬರ್ಹಿಷಃ=ಪ್ರಾಚೀನಬರ್ಹಿಗೆ ಶತದ್ರುತ್ರ್ಯಾಂ=ಶತದ್ರುತಿ ಎಂಬ ಪತ್ನಿಯಲ್ಲಿ ತುಲ್ಯನಾಮವ್ರತಾಃ=ಸಮಾನವಾದ ಹೆಸರು ಆಚರಣೆಯುಳ್ಳ ವೇದಸ್ನಾತಾಃ =ವೇದಪಾರಂಗತರು ಪ್ರಚೇತಸಃ=ಪ್ರಚೇತಸರೆಂಬ ದಶ ಪುತ್ರಾಃ ಅಭವನ್=ಹತ್ತು ಜನ ಮಕ್ಕಳು ಜನಿಸಿದರು. ।।೧೩।।

**ಪಿತ್ರಾऽऽದಿಷ್ಟಾಃ ಪ್ರಜಾಸರ್ಗೇ ತಪಸೇऽರ್ಣವಮಾವಿಶನ್ ।**
**ದಶವರ್ಷಸಹಸ್ರಾಣಿ ತಪಸಾऽऽರ್ಚಂಸ್ತಪಸ್ವಿನಃ ।।೧೪।।**

ಪಿತ್ರಾ=ತಂದೆಯಿಂದ ಪ್ರಜಾಸರ್ಗೇ=ಪ್ರಜೆಗಳನ್ನು ಸೃಷ್ಟಿಸಲು ಆದಿಷ್ಟಾಃ=ಆಜ್ಞಪ್ತರಾದ ಪ್ರಚೇತಸರು ತಪಸೇ=ತಪಸ್ಸು ಮಾಡುವುದಕ್ಕಾಗಿ ಅರ್ಣವಂ=ಸಮುದ್ರವನ್ನು ಆವಿಶನ್= ಪ್ರವೇಶಮಾಡಿದರು. ತಪಸ್ವಿನಃ=ತಪಸ್ಸನ್ನು ಮಾಡುವ ಇವರು ದಶವರ್ಷಸಹಸ್ರಾಣಿ= ಹತ್ತುಸಾವಿರ ವರುಷಗಳ ವರೆಗೆ ತಪಸಾ=ತಪಸ್ಸಿನಿಂದ ಆರ್ಚನ್=ಪೂಜಿಸಿದರು. ।।೧೪।।

ಇವರಿಗೆ ಗುರು ಯಾರು ? ಏನು ಜಪ ಮಾಡಿದರು ? ಏನು ಧ್ಯಾನ ಮಾಡಿದರು ? ಎಂದು ಹೇಳುತ್ತಾರೆ -

**ಯದುಕ್ತಂ ಪಥಿ ದೃಷ್ಟೇನ ಗಿರಿಶೇನ ಪ್ರಸೀದತಾ ।**
**ತದ್ ಧ್ಯಾಯಂತೋ ಜಪಂತಶ್ಚ ಪೂಜಯಂತಶ್ಚ ಸಂಯತಾಃ ।।೧೫।।**

ಪ್ರಸೀದತಾ=ಸಂತುಷ್ಟನಾದ, ಪಥಿ ದೃಷ್ಟೇನ=ಮಾರ್ಗದಲ್ಲಿ ಕಾಣಿಸಿಕೊಂಡ, ಗಿರಿಶೇನ= ರುದ್ರದೇವರಿಂದ ಯದುಕ್ತಂ=ಏನು ಹೇಳಲ್ಪಟ್ಟಿತೋ ತತ್=ಅದನ್ನು ಸಂಯತಾಃ= ಇಂದ್ರಿಯನಿಗ್ರಹವುಳ್ಳವರಾಗಿ ಧ್ಯಾಯಂತಃ=ಧ್ಯಾನ ಮಾಡುತ್ತ ಜಪಂತಃ=ಜಪಿಸುತ್ತ ಪೂಜಯಂತಃ ಚ=ಪೂಜಿಸುತ್ತಲೂ ಇದ್ದರು. ।।೧೫।।

**ವಿದುರ ಉವಾಚ -**

**ಪ್ರಚೇತಸಾಂ ಗಿರಿತ್ರೇಣ ಯಥಾऽऽಸೀತ್ ಪಥಿ ಸಂಗಮಃ ।**
**ಯದ್ವಾऽऽಹ ಹರಃ ಪ್ರೀತಸ್ತನ್ನೋ ಬ್ರಹ್ಮನ್ ವದಾರ್ಥವತ್ ।।೧೬।।**

ಪ್ರಚೇತಸಾಂ=ಪ್ರಚೇತಸರಿಗೆ ಗಿರಿತ್ರೇಣ=ರುದ್ರದೇವರಿಂದ ಸಂಗಮಃ=ಸಮಾಗಮವು ಯಥಾ ಆಸೀತ್=ಹೇಗೆ ಆಯಿತು ? ಪ್ರೀತಃ ಹರಃ ಅಪಿ=ಸಂತುಷ್ಟನಾದ ಶಿವನಾದರೂ ಯದಾಹ=ಏನು ಹೇಳಿದನು ? ಹೇ ಬ್ರಹ್ಮನ್=ಎಲೈ ಮೈತ್ರೇಯರೆ ! ಅರ್ಥವತ್=ಪ್ರಯೋಜನಭರಿತನಾದ ತತ್=ಅದನ್ನು ನಃ ವದ=ನಮಗೆ ಹೇಳಿರಿ. ।।೧೬।।

**ಸಂಗಮಃ ಖಲು ವಿಪ್ರರ್ಷೇ ಶಿವೇನ ಹಿ ಶರೀರಿಣಾಮ್ ।**
**ದುರ್ಲಭೋ ಮುನಯೋ ದಧ್ಯುರಸಂಗಾಃ ಯಮಭೀಪ್ಸಿತಮ್ ।।೧೭।।**

ವಿಪ್ರರ್ಷೇ=ಮೈತ್ರೇಯರೇ ! ಅಸಂಗಾಃ=ವಿರಕ್ತರಾದ ಮುನಯಃ=ಋಷಿಗಳು ಅಭೀಪ್ಸಿತಂ=ಸಜ್ಜನೇಷ್ಟನಾದ ಯಂ=ಯಾರನ್ನು ದಧ್ಯುಃ=ಧ್ಯಾನ ಮಾಡಿದರೋ ತೇನ ಶಿವೇನ=ಆ ರುದ್ರದೇವನಿಂದ ಸಂಗಮಃ=ಸಮಾಗಮವು ಶರೀರಿಣಾಂ=ಸಮಾನ್ಯಜನರಿಗೆ ದುರ್ಲಭಃ ಖಲು=ಅಸಾಧ್ಯವಷ್ಟೇ ? ।।೧೭।।

ಯದ್ಯಪಿ, ಆತ್ಮಾರಾಮರಿಗೆ ತಮ್ಮ ಸ್ಥಾನದಿಂದ ಹೊರಗೆ ಬರುವುದೇ ಅಸಂಭಾವಿತವು. ಲೋಕಾನುಗ್ರಹಕ್ಕಾಗಿ ಹೊರಹೊರಟರೂ ಸಹ ಅವರ ಸಮಾಗಮ, ಮಾತನಾಡುವುದು ಅಸಂಭಾವಿತವೇ ಎಂಬ ಶಂಕೆಗೆ ಉತ್ತರಿಸುವರು -

**ಆತ್ಮಾರಾಮೋಽಪಿ ಯಸ್ತ್ವಸ್ಯ ಲೋಕಕಲ್ಪಸ್ಯ ರಾಧಸೇ ।**
**ಶಕ್ತ್ಯಾ ಯುಕ್ತೋ ವಿಚರತಿ ಘೋರಯಾ ಭಗವಾನ್ ಭವಃ ।।೧೮।।**

ಆತ್ಮಾರಾಮೋಽಪಿ=ಭಗವಂತನ ದರ್ಶನದಿಂದಲೇ ತೃಪ್ತರಾದರೂ ಲೋಕಕಲ್ಪಸ್ಯ=ಜಗತ್ತಿನ ಸೃಷ್ಟಿಯ ರಾಧಸೇ(ಸಿದ್ಧಯೇ)=ಪಾಲನೆಗಾಗಿ (ಸೃಷ್ಟವಾದ ಜಗತ್ತಿನ ಪಾಲನೆಗಾಗಿ ಅಥವಾ ಲೋಕಾಯ=ವೈಕುಂಠಾದಿಲೋಕವನ್ನು ಪಡೆಯಲು ಕಲ್ಪಸ್ಯ=ಸಮರ್ಥರಾದ ಯೋಗ್ಯರಿಗೆ ರಾಧಸೇ=ಸಿದ್ಧಿಗಾಗಿ) ಘೋರಯಾ ಶಕ್ತ್ಯಾ=ವೈರಿನಿವಾರಣ ಸಾಮರ್ಥ್ಯದಿಂದ ಯುಕ್ತಃ=ಕೂಡಿಸಿಕೊಂಡು ಭಗವಾನ್ ಶಿವಃ=ರುದ್ರದೇವರು ವಿಚರತಿ=ಸಂಚರಿಸುವರು. ಆದ್ದರಿಂದ ಅವರ ಸಂಗಮ-ಸಂಭಾಷಣೆಗಳು ಹೇಗೆ ಸಾಧ್ಯ ? ಎಂದು ಭಾವ. ।।೧೮।।

ಇಂಥವರ ಜೊತೆಗೂ ಸಂಭಾಷಣೆ ನಡೆಯಿತು ಎಂದು ತಿಳಿಸಲು ಪ್ರಚೇತಸರ ಕಥೆಯನ್ನು ಹೇಳುವರು -

**ಮೈತ್ರೇಯ ಉವಾಚ -**

**ಪ್ರಚೇತಸಃ ಪಿತುರ್ವಾಕ್ಯಂ ಶಿರಸಾಽಧಾಯ ಸಾಧವಃ ।**
**ದಿಶಂ ಪ್ರತೀಚೀಂ ಪ್ರಯಯುಸ್ತಪಸ್ಯಾದೃತಚೇತಸಃ ।।೧೯।।**

ಸಾಧವಃ=ಸಜ್ಜನರಾದ, ತಪಸಿ ಆದೃತಚೇತಸಃ=ತಪಸ್ಸಿನಲ್ಲಿ ಆಸಕ್ತವಾದ ಮನಸ್ಸುಳ್ಳ ಪ್ರಚೇತಸಃ=ಪ್ರಚೇತಸರು ಪಿತುಃ ವಾಕ್ಯಂ=ತಂದೆಯ ಮಾತನ್ನು ಶಿರಸಾ ಆಧಾಯ=ತಲೆಬಾಗಿ ಸ್ವೀಕರಿಸಿ ಪ್ರತೀಚೀಂ ದಿಶಂ=ಪಶ್ಚಿಮದಿಕ್ಕಿಗೆ ಪ್ರಯಯುಃ=ತೆರಳಿದರು. ।।೧೯।।

**ಸಮುದ್ರಮುಪ ವಿಸ್ತೀರ್ಣಮಪಶ್ಯನ್ ಸುಮಹತ್ ಸರಃ ।**
**ಮಹನ್ಮನ ಇವ ಸ್ವಚ್ಛಂ ಪ್ರಸನ್ನಸಲಿಲಾಶಯಮ್ ।।೨೦।।**

ಸಮುದ್ರಂ ಉಪ=ಸಮುದ್ರದ ಸಮೀಪದಲ್ಲಿ ವಿಸ್ತೀರ್ಣಂ=ದಕ್ಷಿಣೋತ್ತರವಾಗಿ ವಿಶಾಲವಾದ ಮಹನ್ಮನಃ ಇವ ಸ್ವಚ್ಛಂ=ಭಗವದ್ಭಕ್ತರ ಮನಸ್ಸಿನಂತೆ ನಿರ್ಮಲವಾದ ಪ್ರಸನ್ನಸಲಿಲಾಶಯಂ=ಸಂತೋಷಭರಿತವಾದ ಮೀನು ಮುಂತಾದ ಜಲಚರ ಪ್ರಾಣಿಗಳಿಂದ ಕೂಡಿದ ಸುಮಹತ್ ಸರಃ=ಅತಿದೊಡ್ಡದಾದ ಸರೋವರವನ್ನು ಅಪಶ್ಯನ್=ನೋಡಿದರು.

**ನೀಲರಕ್ತೋತ್ಪಲಾಂಭೋಜಕಹ್ಲಾರೇಂದೀವರಾಕರಮ್ ।**
**ಹಂಸಸಾರಸಚಕ್ರಾಹ್ವಕಾರಂಡವನಿಕೂಜಿತಮ್ ।।೨೧।।**

ನೀಲರಕ್ತೋತ್ಪಲಾಂಭೋಜಕಹ್ಲಾರೇಂದೀವರಾಕರಂ ನೀಲ=ನೀಲಿಯಾದ ರಕ್ತ=ಕೆಂಪಾದ ಉತ್ಪಲ=ಕನ್ನೈದಿಲೆಗಳು ಅಂಭೋಜ=ಕಮಲ ಕಹ್ಲಾರ=ಏಳಗೆಂಪಿನ ಬಿಳಿನೈದಲೇ ಇಂದೀವರ= ಪದ್ಮವಿಶೇಷ ಇವುಗಳಿಗೆ ಆಕರಂ=ಉತ್ಪತ್ತಿಸ್ಥಾನವಾದ, ಹಂಸಸಾರಸಚಕ್ರಾಹ್ವಕಾರಂಡವನಿ-ಕೂಜಿತಂ ಹಂಸ=ಹಂಸ ಸಾರಸ=ಸಾರಸ ಚಕ್ರಾಹ್ವ=ಚಕ್ರವಾಕ ಕಾರಂಡವ=ನೀರಲ್ಲಿ ಮುಳುಗಿ ಮೀನು ತಿನ್ನುವ ಪಕ್ಷಿ ಇವುಗಳಿಂದ ನಿಕೂಜಿತಂ=ಶಬ್ದಿತವಾದ, (ಸರಃ ಅಪಶ್ಯನ್= ಸರೋವರವನ್ನು ನೋಡಿದರು ಎಂದು ಅನ್ವಯ.)।।೨೧।।

**ಮತ್ತಭ್ರಮರಸೌಸ್ವರ್ಯಹೃಷ್ಟರೋಮಲತಾಂಘ್ರಿಪಮ್ ।**
**ಪದ್ಮಕೋಶರಜೋ ದಿಕ್ಷು ವಿಕ್ಷಿಪತ್ಪವನೋತ್ಸವಮ್ ।।೨೨।।**

ಮತ್ತಭ್ರಮರಸೌಸ್ವರ್ಯಹೃಷ್ಟರೋಮಲತಾಂಘ್ರಿಪಂ ಮತ್ತ=ಸಂತುಷ್ಟವಾದ ಭ್ರಮರ=ಗುಂಗಿಹುಳದ ಸೌಸ್ವರ್ಯ=ಶೋಭನವಾದ ಸ್ವರಪರಂಪರೆಯಿಂದ ಹೃಷ್ಟ= ಪುಲಕಿತವಾದ ರೋಮ=ತೊಗಟೆಯುಳ್ಳ ಲತಾ=ಬಳ್ಳಿ ಅಂಘ್ರಿಪಂ=ಗಿಡಗಳುಳ್ಳ, ಪದ್ಮಕೋಶರಜಃ=ಕಮಲದ ಪರಾಗಗಳನ್ನು ದಿಕ್ಷು=ದಿಕ್ಕುಗಳಲ್ಲಿ ವಿಕ್ಷಿಪತ್ಪವನೋತ್ಸವಂ ವಿಕ್ಷಿಪತ್=ಹರಡುವ ಪವನೋತ್ಸವಂ=ಗಾಳಿಯ ಉತ್ಸವವುಳ್ಳ (ಅಂದರೆ ಶೀತಲವಾದ ಮಂದವಾದ ಸುಗಂಧವಾದ ಗಾಳಿಯುಳ್ಳ) ಸರಃ ಅಪಶ್ಯನ್=ಸರೋವರವನ್ನು ನೋಡಿದರು ಎಂದು ಅನ್ವಯ. ।।೨೨।।

**ತತ್ರ ಗಾಂಧರ್ವಮಾಕರ್ಣ್ಯ ದಿವ್ಯಮಾರ್ಗಮನೋಹರಮ್ ।**
**ವಿಸಿಸ್ಮಿರೇ ರಾಜಪುತ್ರಾ ಮೃದಂಗಪಣವಾದ್ಯವತ್ ॥೨೩॥**

ತತ್ರ=ಆ ಸರೋವರದಲ್ಲಿ ದಿವ್ಯಮಾರ್ಗಮನೋಹರಂ=ದಿವ್ಯವಾದ ಮಾರ್ಗವುಳ್ಳ ದೇವತೆಗಳಿಗೆ ಮನೋಹರವಾದ, ಮೃದಂಗಪಣವಾದ್ಯವತ್=ಮೃದಂಗ, ಪಣವ ಮುಂತಾದ ವಾದ್ಯಗಳಿಗೆ ಅನುಸಾರಿಯಾದ, ಗಾಂಧರ್ವಂ ಆಕರ್ಣ್ಯ=ಗಾನವನ್ನು ಕೇಳಿ ರಾಜಪುತ್ರಾಃ=ಪ್ರಚೇತಸರು ವಿಸಿಸ್ಮಿರೇ=ಆಶ್ಚರ್ಯಚಕಿತರಾದರು.

ದಿವ್ಯಮಾರ್ಗಂ ಎಂಬ ಪಾಠವಿದ್ದಾಗ ః- ದಿವ್ಯಾಃ=ಲೋಕವಿಲಕ್ಷಣಗಳಾದ ಮಾರ್ಗಾಃ= ಸಪ್ತಸ್ವರವುಳ್ಳ ಎಂದರ್ಥ. ॥೨೩॥

**ತರ್ಹ್ಯೇವ ಸರಸಸ್ತಸ್ಮಾನ್ನಿಷ್ಕ್ರಾಮಂತಂ ಸಹಾನುಗಮ್ ।**
**ಉಪಗೀಯಮಾನಮಮರಪ್ರವರಂ ವಿಬುಧಾನುಗೈಃ ॥೨೪॥**

**ತಪ್ತಹೇಮನಿಕಷಾಭಂ ಶಿತಿಕಂಠಂ ತ್ರಿಲೋಚನಮ್ ।**
**ಪ್ರಸಾದಸುಮುಖಂ ವೀಕ್ಷ್ಯ ಪ್ರಣೇಮುರ್ಜಾತಕೌತುಕಾಃ ॥೨೫॥**

ತರ್ಹ್ಯೇವ=ಆ ಗಾನ ಕೇಳಿಬರುವಾಗಲೇ ತಸ್ಮಾತ್ ಸರಸಃ=ಆ ಸರೋವರದಿಂದ ನಿಷ್ಕ್ರಾಮಂತಂ=ಹೊರಬರುವ, ಸಹಾನುಗಂ=ಸೇವಕಸಹಿತನಾದ, ವಿಬುಧಾನುಗೈಃ= ಗಂಧರ್ವರಿಂದ ಉಪಗೀಯಮಾನಂ=ಸ್ತುತಿಸಲ್ಪಡುವ, ಅಮರಪ್ರವರಂ=ದೇವಶ್ರೇಷ್ಠನಾದ,

ತಪ್ತಹೇಮನಿಕಷಾಭಂ=ಕಾಯಿಸಿದ ಚಿನ್ನವನ್ನು ತಿಕ್ಕುವ ಕಲ್ಲಿನಂತೆ ನಿರ್ಮಲನಾದ, ಶಿತಿಕಂಠಂ=ನೀಲಕಂಠನಾದ, ತ್ರಿಲೋಚನಂ=ಮೂರು ಕಣ್ಣುಗಳುಳ್ಳ ಪ್ರಸಾದಸುಮುಖಂ= ಪ್ರಸನ್ನವಾದ ಮುಖವುಳ್ಳ ರುದ್ರದೇವರನ್ನು ವೀಕ್ಷ್ಯ=ನೋಡಿ ಜಾತಕೌತುಕಾಃ=ಕುತೂಹಲ ಉಂಟಾದವರಾಗಿ ಪ್ರಣೇಮುಃ=ನಮಸ್ಕರಿಸಿದರು. ॥೨೪-೨೫॥

**ಸ ತಾನ್ ಪ್ರಪನ್ನಾರ್ತಿಹರೋ ಭಗವಾನ್ ಧರ್ಮವತ್ಸಲಃ ।**
**ಧರ್ಮಜ್ಞಾನ್ ಶೀಲಸಂಪನ್ನಾನ್ ಪ್ರೀತಾನ್ ಪ್ರೀತ ಉವಾಚ ಹ ॥೨೬॥**

ಧರ್ಮವತ್ಸಲಃ=ಧರ್ಮಪ್ರೇಮಿಯಾದ, ಭಗವಾನ್=ಐಶ್ವರ್ಯಶಾಲಿಯಾದ, ಪ್ರಪನ್ನಾರ್ತಿಹರಃ=ಶರಣಾಗತರಕ್ಷಕನಾದ, ಸಃ ಹರಃ=ಆ ರುದ್ರದೇವರು ಧರ್ಮಜ್ಞಾನ್= ಧರ್ಮವನ್ನು ತಿಳಿದವರಾದ ಶೀಲಸಂಪನ್ನಾನ್=ಒಳ್ಳೆಯ ಸ್ವಭಾವದವರಾದ ಪ್ರೀತಾನ್= ಸಂತುಷ್ಟರಾದ ತಾನ್=ಪ್ರಚೇತಸರನ್ನು ಕುರಿತು ಪ್ರೀತಃ=ಸಂತುಷ್ಟನಾದವನಾಗಿ ಉವಾಚ=ಹೇಳಿದನು. ॥೨೬॥

**ರುದ್ರ ಉವಾಚ -**

**ಯೂಯಂ ಬರ್ಹಿಷದಃ ಪುತ್ರಾ ವಿದಿತಂ ವಶ್ಚಿಕೀರ್ಷಿತಮ್ ।**
**ಅನುಗ್ರಹಾಯ ಭದ್ರಂ ವ ಏವಂ ಮೇ ದರ್ಶನಂ ಕೃತಮ್ ॥೨೭॥**

ಯೂಯಂ=ನೀವು ಬರ್ಹಿಷದಃ ಪುತ್ರಾಃ=ಪ್ರಾಚೀನಬರ್ಹಿಯ ಮಕ್ಕಳು. ವಃ=ನಿಮ್ಮ ಚಿಕೀರ್ಷಿತಂ=ಮಾಡಲಿಚ್ಛಿಸಿರುವುದೇನೆಂದು ವಿದಿತಂ=ತಿಳಿದಿದೆ. ವಃ=ನಿಮಗೆ ಅನುಗ್ರಹಾಯ =ಅನುಗ್ರಹ ಮಾಡಲೆಂದೇ ಮೇ=ನನ್ನ ಏವಂ=ಈ ರೀತಿ ಭದ್ರಂ=ಮಂಗಲಕರವಾದ ದರ್ಶನಂ ಕೃತಂ=ದರ್ಶನವು ಮಾಡಲ್ಪಟ್ಟಿತು.

ಇದರಿಂದ ದುಷ್ಟರನ್ನು ಕುರಿತು ಘೋರಶಕ್ತಿಯುತನಾಗಿ ಸಂಚರಿಸುವನೇ ಹೊರತು ಧಾರ್ಮಿಕರಿಗೆ ಅಲ್ಲವೆಂದು ಉತ್ತರಿಸಿದಂತಾಯಿತು. ॥೨೭॥

ವಿಷ್ಣುಭಕ್ತರಾದ ನಮ್ಮ ಮೇಲೆ ನಿನ್ನ ಅನುಗ್ರಹ ಹೇಗೆ ? ಎಂದರೆ ಹೇಳುವನು -

**ಯಃ ಪರಸ್ತಮಸಃ ಸಾಕ್ಷಾತ್ ತ್ರಿಗುಣಾಜ್ಜೀವಸಂಜ್ಞಿತಾತ್ ।**
**ಭಗವಂತಂ ವಾಸುದೇವಂ ಪ್ರಪನ್ನಃ ಸ ಪ್ರಿಯೋ ಹಿ ಮೇ ॥೨೮॥**

ಯಃ=ಯಾವನು ಜೀವಸಂಜ್ಞಿತಾತ್=''ಏತ್ಯೈಸ್ತು ನಾಮಭಿರ್ವಾಚ್ಯಾ ಶ್ರೀಃ'' ಎಂಬ ಪ್ರಮಾಣಾನುಸಾರ (ತಾತ್ಪರ್ಯ,೨೩-೧೮) ಜೀವಶಬ್ದವಾಚ್ಯಳಾದ, ತ್ರಿಗುಣಾತ್= ಗುಣತ್ರಯಾಭಿಮಾನಿನಿಯಾದ, ತಮಸಃ=ಲಕ್ಷ್ಮೀದೇವಿಗಿಂತಲೂ ಸಾಕ್ಷಾತ್=ಮುಖ್ಯವಾಗಿ ಪರಃ=ಉತ್ತಮನಾದವನೋ ತಂ ಭಗವಂತಂ=ಅಂತಹ ಷಡ್ಗುಣೈಶ್ವರ್ಯಸಂಪನ್ನನಾದ ವಾಸುದೇವಂ=ವಾಸುದೇವನನ್ನು ಪ್ರಪನ್ನಃ ಯಃ=ಶರಣು ಹೊಂದಿದವನು ಯಾರೋ ಸಃ=ಅವನು ಮೇ=ನನಗೆ ಪ್ರಿಯಃ=ಪ್ರೀತಿಪಾತ್ರನು. ಹಿ=ಆದ್ದರಿಂದ ನೀವೂ ಸಹ ನನ್ನ ಅನುಗ್ರಹಕ್ಕೆ ಯೋಗ್ಯರೆಂದು ಭಾವ. ॥೨೮॥

(ಯಾದ) ನೀವು ರುದ್ರದೇವರು ಭಗವದ್ಭಕ್ತರಾದರೆ ಭಗವದ್ಭಕ್ತರಾದ ನಮ್ಮ ಮೇಲೆ ಅನುಗ್ರಹ ಮಾಡುವುದು ಯುಕ್ತವಾಗುವುದು. ಆದರೆ ನೀವು ಭಗದ್ಭಕ್ತರೆಂಬುದೇ ಹೇಗೆ ? ಎಂದು ಶಂಕಿಸಿದರೆ, ದೃಷ್ಟಾಂತಪೂರ್ವಕವಾಗಿ ತಾವು ಭಗವದ್ಭಕ್ತರೆಂದು ಅನಾದಿಕಾಲದಿಂದ ಸಿದ್ಧವೆಂದು ಹೇಳುವರು -

(ವಿ) ಋಜುಗಳಿಗೂ ಸಹ ಬಹುಜನ್ಮಸಾಧನದಿಂದ ಸಾಧ್ಯವಾದುದು ಭಗವತ್ಪ್ರಸಾದವು. ಅಂದಮೇಲೆ ಇತರರ ಪಾಡೇನು ? ಎಂದು ಸೂಚಿಸುತ್ತ ವಿರಿಂಚಪದಪ್ರಾಪ್ತಿಯ ಸಾಧನವನ್ನು ತಿಳಿಸುವರು -

**ಸ್ವಧರ್ಮನಿಷ್ಠಃ ಶತಜನ್ಮಭಿಃ ಪುಮಾನ್**
**ವಿರಿಂಚತಾಮೇತಿ ತತಃ ಪರಂ ಹಿ ಮಾಮ್ ।**
**ಅವ್ಯಾಕೃತಂ ಭಾಗವತೋಽಥ ವೈಷ್ಣವಂ**
**ಪದಂ ಯಥಾಽಹಂ ವಿವಿಧೈಃ ಕಲಾತ್ಯಯೇ ॥೨೯॥**

ಯಥಾ=ಹೇಗೆ ಪುಮಾನ್=ಋಜುಜೀವನ ಸಮುದಾಯವು ಭಾಗವತಃ ಅಪಿ=ಅನಾದಿಕಾಲದಿಂದ ಜ್ಞಾನ-ಭಕ್ತಿ ಮುಂತಾದವುಗಳಿಂದ ಕೂಡಿದ್ದರೂ ಅಪರೋಕ್ಷ-ಜ್ಞಾನಾನಂತರ ವಿಶೇಷವಾಗಿ ಶತಜನ್ಮಭಿಃ=ನೂರು ಬ್ರಹ್ಮಕಲ್ಪಗಳಲ್ಲಿ ಸ್ವಧರ್ಮನಿಷ್ಠಃ= ವಿಶೇಷವಾಗಿ ಶ್ರೀಹರಿಯ ಉಪಸನಾದಿರೂಪವಾದ ತಮಗೆ ಯೋಗ್ಯವಾದ ಧರ್ಮದಲ್ಲಿದ್ದವರಾಗಿ ಅದರಿಂದುಟಾದ ಭಗವತ್ಪ್ರಸಾದದಿಂದ ವಿರಿಂಚತಾಂ ಏತಿ=ಬ್ರಹ್ಮಪದವಿಯನ್ನು ಹೊಂದುವನು. ತತಃ ಪರಂ=ಬ್ರಹ್ಮಪದವಿಯ ಅನುಭವಾನಂತರ ಮಾಂ ಏತಿ=ಅನುಜ್ಞೆ ಪಡೆಯಲು ಲಕ್ಷ್ಮೀದೇವಿಯನ್ನು ಹೊಂದುವನು. ಹಿ=ಪ್ರಮಾಣಸಿದ್ಧವು. ಅಥ=ರಮಾನುಜ್ಞೆ ಪಡೆದ ನಂತರ ಅವ್ಯಾಕೃತಂ=ಶ್ವೇತದ್ವೀಪಸ್ಥ ವಾಸುದೇವನನ್ನು ಏತಿ=ಹೊಂದುವನು. (ವಿರಿಂಚತಾಪ್ರಾಪ್ತಿಯು ೯೯ ಕಲ್ಪದಲ್ಲಿ ನೂರುಕಲ್ಪಾನಂತರ ವಾಸುದೇವಪ್ರಾಪ್ತಿ ಎಂದು ತಿಳಿಯಬೇಕು.)

ಅಥ=ಪ್ರಲಯಕಾಲದಲ್ಲಿ ಕಲಾತ್ಯಯೇ=ಲಿಂಗಶರೀರಭಂಗವಾದಮೇಲೆ ವೈಷ್ಣವಂ ಪದಂ=ಶ್ವೇತದ್ವೀಪಾದಿಗಳನ್ನು ಏತಿ=ಹೊಂದುವನು. ತಥಾ=ಹಾಗೆಯೇ ಅಹಂ=ನಾನು (ರುದ್ರಪದಯೋಗ್ಯಜೀವನು) ಅನಾದಿತಃ ಭಾಗವತೋಽಪಿ=ಅನಾದಿಕಾಲದಿಂದ ಭಗವದ್ಭಕ್ತನಾಗಿದ್ದರೂ ಅಪರೋಕ್ಷಜ್ಞಾನಾನಂತರ ವಿವಿಧೈಃ=ಶ್ರೀಹರಿಯ ಉಪಾಸನಾದಿ ಸಾಧನದಿಂದ ಪದಂ=ರುದ್ರಪದವಿಯನ್ನು ಪ್ರಾಪ್ಯ=ಹೊಂದಿ ವೈಷ್ಣವಂ ಪದಂ ಏತಿ= ಶ್ರೀಹರಿಯ ಸ್ಥಾನವನ್ನು ಹೊಂದುವನು.

ಯಥಾರ್ಹಂ ಎಂಬ ಪಾಠವಿದ್ದಾಗ ಯೋಗ್ಯತಾನುಸಾರ ವೈಷ್ಣವಪದವನ್ನು ಹೊಂದುವನು ಎಂದರ್ಥ. ಆಗಲೂ ಯಥಾ ತಥಾ ಎಂಬ ಪದಗಳನ್ನು ಅಧ್ಯಾಹಾರ ಮಾಡಿ ವ್ಯಾಖ್ಯಾನಿಸಬೇಕು. ಅಂತೂ ಋಜಜೀವರಂತೆ ರುದ್ರಪದವಿಯೋಗ್ಯರಾದ ಜೀವರಿಗೂ ಅನಾದಿಕಾಲದಿಂದ ಹರಿಭಕ್ತ್ಯಾದಿಗಳಿರುವುದರಿಂದ ರುದ್ರಪದವಿಗೆ ಬಂದ ನನಗೆ ಭಗವದ್ಭಕ್ತಿ ಇದ್ದೇ ಇದೆ ಎಂದು ಭಾವ.

ವಿಜಯಧ್ವಜರ ಪ್ರಕಾರ ''ಅವ್ಯಾಕೃತಂ ವಿಶತಿ ಯರ್ಹಿ ಗುಣತ್ರಯಾತ್ಮಾ ಕಾಲಂ ಪರಂ ಸ್ವಮನುಭೂಯ'' ಎಂಬ ಪ್ರಮಾಣಾನುಸಾರವಾಗಿ ಅವ್ಯಾಕೃತಂ ಎಂದರೆ ನಿರ್ವಿಕಾರವಾದ ಲಕ್ಷ್ಮೀತತ್ವವನ್ನು ಎಂದರ್ಥ.

**ಭಾಗವತ ತಾತ್ಪರ್ಯ -**

ಈ ಶ್ಲೋಕದಲ್ಲಿ ಮಾಂ ಎಂಬುವುದು ಅಸ್ಮಚ್ಛಬ್ದದ ರೂಪ ಎಂದಿಟ್ಟುಕೊಂಡು ನನ್ನನ್ನು ಎಂದು ಅರ್ಥ ಮಾಡಿದರೆ ಪ್ರಮಾಣವಿರುದ್ಧವಾಗುವುದು. ಕಾರಣ ಅಭಿಪ್ರೇತವಾದ ಅರ್ಥವನ್ನು ಹೇಳಿ ಸಂಪೂರ್ಣಶ್ಲೋಕವನ್ನೂ ಪ್ರಮಾಣದಿಂದಲೇ ವ್ಯಾಖ್ಯಾನಿಸುವರು -

**ಮಾಂ ಶ್ರೀಯಮ್ ।**

**"ಋಜವೋ ನಾಮ ಯೇ ದೇವಾ ಯೋಗ್ಯಾ ಬ್ರಹ್ಮಪದಸ್ಯ ತು ।**
**ತ ಏವ ಶತಜನ್ಮಾನಿ ವಿಶೇಷೋಪಾಸಕಾ ಹರೇಃ ।**
**ಪ್ರಾಪ್ಯ ಬ್ರಹ್ಮಪದಂ ಪಶ್ಚಾಚ್ಛ್ರಿಯಂ ಪ್ರಾಪ್ಯಾನುಮೋದಿತಾಃ ।**
**ತಯಾ ತತೋ ಹರಿಂ ಯಾಂತಿ ವಸಂತಿ ಹರಿಸನ್ನಿಧೌ ।**
**ಅನಾದಿಕಾಲಭಕ್ತಾಶ್ಚ ಜ್ಞಾನಿನಸ್ತೇ ನ ಸಂಶಯಃ ।**
**ವಿಶಿಷ್ಟಾ ಜ್ಞಾನಭಕ್ತ್ಯಾದೌ ಸರ್ವಜೀವನಿಕಾಯತಃ ।**
**ಸರ್ವದಾऽಪಿ ವಿಶೇಷೇಣ ಶತಜನ್ಮಪ್ರಯತ್ನತಃ ।**
**ಸ್ವಪದಪ್ರಾಪ್ತಿರುದ್ದಿಷ್ಟಾ ತತೋ ಮುಕ್ತಿರವಾಪ್ಯತೇ ।**
**ತಥೈವ ಚತ್ವಾರಿಂಶದ್ಭಿಃ ಪದಂ ಶೈವಂ ಚ ಜನ್ಮಭಿಃ ।**
**ವಿಂಶದ್ಭಿರ್ವೈಂದ್ರಂ ದಶಭಿರನ್ಯೇಷಾಮಪ್ಯುದೀರಿತಮ್" ಇತಿ ಷಾಡ್ಗುಣ್ಯೇ ॥**

ಮಾಂ ಎಂಬುದಕ್ಕೆ ಲಕ್ಷ್ಮೀದೇವಿಯನ್ನು ಎಂದರ್ಥ. ಹೊರತು ರುದ್ರನಾದ ನನ್ನನ್ನು ಎಂದರ್ಥವಲ್ಲ.

ಋಜಗಳೆಂದರೆ ಬ್ರಹ್ಮಪದವಿಗೆ ಯೋಗ್ಯರಾದ ದೇವತೆಗಳು. ಅವರೇ ೧೦೦ ಬ್ರಹ್ಮಕಲ್ಪಗಳಲ್ಲಿ ಶ್ರೀಹರಿಯನ್ನು ವಿಶೇಷವಾಗಿ ಉಪಾಸನೆ ಮಾಡಿ ಬ್ರಹ್ಮಪದವಿಯನ್ನು ಹೊಂದಿ, ಆಮೇಲೆ ಲಕ್ಷ್ಮೀದೇವಿಯನ್ನು ಹೊಂದಿ, ಅವಳಿಂದ ಅನುಜ್ಞೆ ಪಡೆದುಕೊಂಡು ಶ್ರೀಪರಮಾತ್ಮನನ್ನು ಹೊಂದಿ, ಶ್ರೀಹರಿಯ ಸಮೀಪದಲ್ಲಿ ವೈಕುಂಠಾದಿಲೋಕಗಳಲ್ಲಿ ವಾಸ ಮಾಡುತ್ತಾರೆ. ಅವರು ಅನಾದಿಕಾಲದಿಂದಲೂ ಭಗವದ್ಭಕ್ತರೇ. ಸರ್ವವೇದಾರ್ಥಜ್ಞಾನ ವುಳ್ಳವರೇ. ಇದಕ್ಕೆ ಸಂಶಯವಿಲ್ಲ. ಜ್ಞಾನ-ಭಕ್ತ್ಯಾದಿಗುಣಗಳಲ್ಲಿ ರುದ್ರಾದಿಸಮಸ್ತಜೀವರಿಗಿಂತ ಯಾವಾಗಲೂ ಉತ್ತಮರೇ. ಆದರೂ ಅಪರೋಕ್ಷಜ್ಞಾನ ಹುಟ್ಟಿದ ಜನ್ಮವನ್ನಾರಂಭಿಸಿ ೯೯ ಬ್ರಹ್ಮಕಲ್ಪಗಳಲ್ಲಿ ಶ್ರೀಹರಿಯ ವಿಶೇಷ ಉಪಾಸನೆ ಮಾಡಿ ಬ್ರಹ್ಮಪದವಿಯನ್ನು ಹೊಂದಿ, ನಂತರ ಮುಕ್ತರಾಗುತ್ತಾರೆ.

ಹಾಗೆಯೇ ರುದ್ರಪದವಿಗೆ ಯೋಗ್ಯನಾದ ಜೀವನು ೪೦ ಕಲ್ಪ ಸಾಧನೆ ಮಾಡಿ ರುದ್ರಪದವಿಯನ್ನು ಹೊಂದಿ, ಶೇಷಪದವಿಗೆ ಬಂದು ಮುಕ್ತನಾಗುತ್ತಾನೆ.

''ಪಂಚಾಶದ್ಬ್ರಹ್ಮಣಸ್ತಥಾ ರುದ್ರಸ್ಯ'' ಎಂದು ೫೦ ಕಲ್ಪ ರುದ್ರದೇವರ ಸಾಧನವೆಂದು ಹೇಳುವಂತೆ ತೋರುವ ಅನುವ್ಯಾಖ್ಯಾನ ವಿರೋಧವನ್ನು ಶಂಕಿಸಬಾರದು. ಇದಕ್ಕೆ ಶ್ರೀಮನ್ನ್ಯಾಯಸುಧೆಯಲ್ಲಿ ''ಪಂಚಾಶತಾಂ ಬ್ರಹ್ಮಣಾಂ ಕಾಲಾತ್ ಪೂರ್ವಮೇವ'' ಎಂದು ವ್ಯಾಖ್ಯಾನಿಸಿರುವರು. ೫೦ ಬ್ರಹ್ಮಕಲ್ಪಕ್ಕಿಂತ ಮೊದಲೂ ಎಂದರೆ ನಿರವಾಕಾಶವಾದ ಈ ವಾಕ್ಯದ ಪ್ರಕಾರ ೪೦ ಕಲ್ಪವೆಂದೇ ಅರ್ಥ ಆಗುವುದು.

೨೦ ಕಲ್ಪ ಸಾಧನ ಮಾಡಿ ಇಂದ್ರಪದವಿಗೆ ಯೋಗ್ಯನಾದ ಜೀವ ಇಂದ್ರಪದವಿ ಪಡೆದು ನಂತರ ಮುಕ್ತನಾಗುವನು. ಸೂರ್ಯಾದಿ ದೇವತೆಗಳು ೧೦ ಕಲ್ಪಸಾಧನೆ ಮಾಡಿ ಪದವಿಗಳನ್ನು ಪಡೆದು ಮೋಕ್ಷವನ್ನು ಹೊಂದುತ್ತಾರೆ ಎಂದು ಷಾಡ್ಗುಣ್ಯದಲ್ಲಿ ಹೇಳಿದೆ.

**ಅಥ ಭಾಗವತಾ ಯೂಯಂ ಪ್ರಿಯಾಃ ಸ್ಥ ಭಗವಾನ್ ಯಥಾ ।**
**ನ ಮೇ ಭಾಗವತಾನಾಂ ಚ ಪ್ರೇಯಾನನ್ಯೋಽಸ್ತಿ ಕರ್ಹಿಚಿತ್ ॥೩೦॥**

ಅಥ=ಯಾವ ಕಾರಣ ಋಜುಜೀವರಂತೆ ನಾನು ಅನಾದಿಭಕ್ತನೋ ಆದ್ದರಿಂದ ಭಾಗವತಾಃ ಯೂಯಂ=ಭಗವದ್ಭಕ್ತರಾದ್ದರಿಂದಲೇ ನೀವು ಮೇ=ನನಗೆ ಪ್ರಿಯಾಃ ಸ್ಥ ಯಥಾ ಭಗವಾನ್=ಭಗವಂತನಂತೆ ಪ್ರಿಯರಾಗಿದ್ದೀರಿ. (ಅಧಿಕದೃಷ್ಟಾಂತ.) ಮೇ=ಅನಾದಿಭಕ್ತನಾದ ನನಗೆ ಚ=ಮತ್ತು ಭಾಗವತಾನಾಂ=ಇತರ ಭಗವದ್ಭಕ್ತರಿಗೂ ಅನ್ಯಃ=ಪರಮಾತ್ಮನಿಂದ ಭಿನ್ನವಾದ ಯಾವ ಪದಾರ್ಥವೂ ಪ್ರೇಯಾನ್=ಅತಿಶಯಪ್ರಿಯವಾದುದು ಕರ್ಹಿಚಿತ್=ಯಾವ ಕಾಲದಲ್ಲಿಯೂ ನ=ಇಲ್ಲ. ಅದರಂತೆ ನೀವು ನನಗೆ ಪ್ರಿಯರಾಗಿರುವಿರಿ.

**ಭಾಗವತ ತಾತ್ಪರ್ಯ -**

ಇಲ್ಲಿಯ 'ಅಥ'ಶಬ್ದದ ಯೋಗ್ಯವಾದ ಅರ್ಥ ತಿಳಿಸುವರು -

**''ಅಥ ಏವಮನಾದಿಭಕ್ತೋಽಹಂ ಯತಃ ಅತಃ ಪ್ರಿಯಾ ಯೂಯಮ್ ।''**

ಹಿಂದಿನ ಶ್ಲೋಕದಲ್ಲಿ ಹೇಳಿದಂತೆ ನಾನು ಅನಾದಿಕಾಲದಿಂದಲೂ ಭಗವಂತನ ಭಕ್ತನಾದ್ದರಿಂದಲೇ ನೀವು ನನಗೆ ಪ್ರಿಯರು ಎಂದರ್ಥ. ॥೩೦॥

**ಇದಂ ವಿವಿಕ್ತಂ ಜಪ್ತವ್ಯಂ ಪವಿತ್ರಂ ಮಂಗಲಂ ಪರಮ್ ।**
**ನಿಶ್ರೇಯಸಕರಂ ಚಾಪಿ ಶ್ರೂಯತಾಂ ಯದ್ ವದಾಮಿ ವಃ ॥೩೧॥**

ಇದಂ=ಮುಂದೆ ಹೇಳುವುದು ವಿವಿಕ್ತಂ=ಸಂಕೀರ್ಣವಾಗದಂತೆ ಜಪ್ತವ್ಯಂ= ಜಪಿಸಬೇಕಾದುದು ಪವಿತ್ರಂ=ಪಾವಿತ್ರ್ಯವನ್ನು ಕೊಡುವುದು ಮಂಗಲಂ=ಸುಖದಾಯಕವು ಪರಂ=ಶ್ರೇಷ್ಠವಾದುದು ನಿಶ್ರೇಯಸಕರಂ ಚ=ಮೋಕ್ಷಪ್ರದವೂ ಆದ ಯತ್=ಯಾವುದನ್ನು ವಃ=ನಿಮಗೆ ವದಾಮಿ=ಹೇಳುವನೋ ತತ್ ಶ್ರೂಯತಾಂ=ಅದನ್ನು ಕೇಳಿ. ॥೩೧॥

**ಮೈತ್ರೇಯ ಉವಾಚ -**

**ಇತ್ಯನುಕ್ರೋಶಹೃದಯೋ ಭಗವಾನಾಹ ತಾಞ್ಛಿವಃ ।**
**ಬದ್ಧಾಂಜಲೀನ್ ರಾಜಪುತ್ರಾನ್ ನಾರಾಯಣಪರೋ ವಚಃ ॥೩೨॥**

ಇತಿ=ಈ ರೀತಿಯಾಗಿ ಅನುಕ್ರೋಶಹೃದಯಃ=ಕರುಣಾಪೂರ್ಣ ಮನಸ್ಸುಳ್ಳ ಭಗವಾನ್ ಶಿವಃ=ಐಶ್ವರ್ಯಶಾಲಿಯಾದ ರುದ್ರದೇವರು ಬದ್ಧಾಂಜಲೀನ್=ಕೈಜೋಡಿಸಿದ ತಾನ್ ರಾಜಪುತ್ರಾನ್=ರಾಜಕುಮಾರರಾದ ಆ ಪ್ರಚೇತಸರನ್ನು ಕುರಿತು ನಾರಾಯಣಪರಃ=ಶ್ರೀಹರಿ ಮನಸ್ಕರಾಗಿ ವಚಃ ಆಹ=ಮಾತನಾಡಿದರು. ॥೩೨॥

ಆದರದಿಂದ ತಾವು ಹೇಳಿದ್ದನ್ನು ಕೇಳುವುದಕ್ಕಾಗಿ ಶ್ರೋತೃಗಳನ್ನು ಅಭಿನಂದಿಸುತ್ತ ಅವರಲ್ಲಿ ತನ್ನ ಅನುಗ್ರಹವನ್ನು ವ್ಯಕ್ತಗೊಳಿಸುತ್ತ ಕರ್ತವ್ಯವನ್ನು ತಿಳಿಸುವರು -

**ರುದ್ರ ಉವಾಚ -**

**ಜಿತಂ ವ ಆತ್ಮವಿದ್ಧುರ್ಯಾಃ ಸ್ವಸ್ತಯೇ ಸ್ವಸ್ತಿರಸ್ತು ವಃ ।**
**ಭವತಾಂ ರಾಧಸೇಽರಾಧ್ಯಂ ಸರ್ವಸ್ಮಾ ಆತ್ಮನೇ ನಮಃ ॥೩೩॥**

ಹೇ ಆತ್ಮವಿದ್ಧುರ್ಯಾಃ=ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರೇ ! ವಃ=ನಿಮ್ಮಿಂದ ಜಿತಂ=ಎಲ್ಲವೂ ಗೆಲ್ಲಲ್ಪಟ್ಟಿದೆ. ಸ್ವಸ್ತಯೇ=ಚೆನ್ನಾಗಿ ಇರುವುದಕ್ಕೆ (ಸ್ವರೂಪಾನಂದಲಾಭಕ್ಕಾಗಿ) ವಃ=ನಿಮಗೆ ಸ್ವಸ್ತಿಃ ಅಸ್ತು=ಸಮೀಚೀನಸ್ಥಿತಿ ಅಂದರೆ ಭಕ್ತ್ಯಾದಿಗಳು ಇರಲಿ. ಭವತಾಂ=ನಿಮ್ಮಿಂದ ರಾಧಸೇ= ಮನೋಭೀಷ್ಟಸಿದ್ಧಿಗಾಗಿ ಸರ್ವಸ್ಮೈ=ಜಗದಂತರ್ಯಾಮಿಯಾದ ಆತ್ಮನೇ=ಸರ್ವಸ್ವಾಮಿಗೆ ನಮಃ=ನಮಸ್ಕಾರವು ಎಂಬ ಮಂತ್ರದಿಂದ ಆರಾಧ್ಯಂ= ನನ್ನಿಂದ ಹೇಳಲ್ಪಡುವ ಸ್ತೋತ್ರಪಾಠಾದಿಗಳಿಂದ ಪೂಜಿಸಲ್ಪಡಬೇಕು ಎಂದರ್ಥ.

**ಭಾಗವತ ತಾತ್ಪರ್ಯ -**

ಇಲ್ಲಿನ ಸರ್ವಸ್ಮೈ ಎಂಬುದಕ್ಕೆ 'ಸರ್ವರೂಪನಾದ ಪರಮಾತ್ಮನಿಗೆ' ಎಂಬ ವ್ಯಾಖ್ಯಾನನಿರಾಸಕ್ಕಾಗಿ ಅದರ ಅರ್ಥವನ್ನು ಪ್ರಮಾಣದಿಂದಲೇ ಹೇಳುವರು -

> **ಸರ್ವಾಂತರ್ಯಾಮಿಕತ್ವಾತ್ತು ಸರ್ವನಾಮಾ ಜನಾರ್ದನಃ ।**
> **ನ ತು ಸರ್ವಸ್ವರೂಪತ್ವಾತ್ ಸರ್ವೇಶೋಽಸೌ ಹರಿರ್ಯತಃ'' ಇತಿ ಬ್ರಹ್ಮತರ್ಕೇ ॥**

ಜನಾರ್ದನನು ಸರ್ವಾಂತರ್ಯಾಮಿಯಾದುದರಿಂದಲೇ ಸರ್ವ ಎಂದು ಕರೆಯಲ್ಪಡುವನು. ಹೊರತು ಸರ್ವವಸ್ತುಗಳ ಸ್ವರೂಪನಾದ್ದರಿಂದ ಅಲ್ಲ. ಏಕೆಂದರೆ ಈ ಪರಮಾತ್ಮನು ಸರ್ವನಿಯಾಮಕನಾಗಿದ್ದಾನೆ ಎಂದು ಬ್ರಹ್ಮತರ್ಕದಲ್ಲಿ ಹೇಳಿದೆ. ॥೩೩॥

ಧ್ಯೇಯಸ್ವರೂಪವನ್ನು ಉಪದೇಶಿಸುವರು -

**ನಮಃ ಪಂಕಜನಾಭಾಯ ಭೂತಸೂಕ್ಷ್ಮೇಂದ್ರಿಯಾತ್ಮನೇ ।**
**ವಾಸುದೇವಾಯ ಶಾಂತಾಯ ಕೂಟಸ್ಥಾಯ ಸ್ವರೋಚಿಷೇ ॥೩೪॥**

ಪಂಕಜನಾಭಾಯ=ಪದ್ಮನಾಭನಾದ, ಭೂತಸೂಕ್ಷ್ಮೇಂದ್ರಿಯಾತ್ಮನೇ= ಪಂಚಮಹಾಭೂತಗಳು ಶಬ್ದಾದಿತನ್ಮಾತ್ರಾಗಳು ಶ್ರೋತ್ರಾದಿ ಇಂದ್ರಿಯಗಳಲ್ಲಿ ವ್ಯಾಪ್ತನಾದ, ಶಾಂತಾಯ=ನಿರ್ವಿಕಾರನಾದ, ಸ್ವರೋಚಿಷೇ=ಸ್ವಪ್ರಕಾಶನಾದ, ವಾಸುದೇವಾಯ=ಶ್ರೀಕೃಷ್ಣನಿಗೆ ನಮಃ=ನಮಸ್ಕಾರವು. ॥೩೪॥

**ಸಂಕರ್ಷಣಾಯ ಸೂಕ್ಷ್ಮಾಯ ದುರಂತಾಯಾಂತಕಾಯ ಚ ।**
**ನಮೋ ವಿಶ್ವಪ್ರಬೋಧಾಯ ಪ್ರದ್ಯುಮ್ನಾಯಾಂತರಾತ್ಮನೇ ॥೩೫॥**

ಸಂಕರ್ಷಣಾಯ=ಎಲ್ಲರ ಮನಸ್ಸನ್ನು ತನ್ನ ಕಡೆಗೆ ಸೆಳೆಯುವ, ಸೂಕ್ಷ್ಮಾಯ=ಸೂಕ್ಷ್ಮನಾದ, ದುರಂತಾಯ=ಅಂತತ್ರಯಗಳಿಲ್ಲದ, ಅಂತಕಾಯ=ಸರ್ವಸಂಹರ್ತೃವಾದ, ವಿಶ್ವಪ್ರಬೋಧಾಯ=ಪೂರ್ಣಜ್ಞಾನಿಯಾದ ಅಥವಾ ಪ್ರಪಂಚಕ್ಕೆ ಒಳ್ಳೆಯ ಜ್ಞಾನ ನೀಡುವ, ಅಂತರಾತ್ಮನೇ=ನಿಯಾಮಕನಾದ, ಪ್ರದ್ಯುಮ್ನಾಯ=ಪ್ರದ್ಯುಮ್ನನಿಗೆ ನಮಃ=ನಮಸ್ಕಾರವು.

**ನಮೋ ನಮೋಽನಿರುದ್ಧಾಯ ಹೃಷೀಕೇಶೇಂದ್ರಿಯಾತ್ಮನೇ ।**
**ನಮಃ ಪರಮಹಂಸಾಯ ಪೂರ್ಣಾಯ ನಿಭೃತಾತ್ಮನೇ ॥೩೬॥**

ಹೃಷೀಕೇಶೇಂದ್ರಿಯಾತ್ಮನೇ=ಇಂದ್ರಿಯಗಳಿಗೆ ಪ್ರೇರಕನಾದ ಆದ್ದರಿಂದಲೇ ಇಂದ್ರಿಯಗಳಿಗೆ ಸ್ವಾಮಿಯಾದ, ನಿಭೃತಾತ್ಮನೇ=ವೃದ್ಧಿಹ್ರಾಸವಿಲ್ಲದ ಸ್ಥಿಮಿತರೂಪ ಉಳ್ಳ, ಪೂರ್ಣಾಯ=ಶುದ್ಧನಾದ, ಪರಮಹಂಸಾಯ=ಅತ್ಯಂತ ನಿರ್ದುಷ್ಟನಾದ, ಅನಿರುದ್ಧಾಯ= ಅನಿರುದ್ಧನಿಗೆ ನಮಃ ನಮಃ ನಮಃ=ನಮಸ್ಕಾರವು. ॥೩೬॥

**ಸ್ವರ್ಗಾಪವರ್ಗದ್ವಾರಾಯ ನಿತ್ಯಂ ಶುಚಿಷದೇ ನಮಃ ।**
**ನಮೋ ಹಿರಣ್ಯವೀರ್ಯಾಯ ಚಾತುರ್ಹೋತ್ರಾಯ ತಂತವೇ ॥೩೭॥**

ಸ್ವರ್ಗಾಪವರ್ಗದ್ವಾರಾಯ=ಸ್ವರ್ಗ-ಮೋಕ್ಷಗಳಿಗೆ ಮಾರ್ಗಭೂತನಾದ, ನಿತ್ಯಂ= ಯಾವಾಗಲೂ ಶುಚಿಷದೇ=ವಾಯ್ವಂತರ್ಗತನಾದ, (ಅಗ್ನ್ಯಂತರ್ಗತನಾದ) ಹಿರಣ್ಯವೀರ್ಯಾಯ=ಬಂಗಾರಮಯವಾದ ಬ್ರಹ್ಮಾಂಡಜನಕವಾದ ವೀರ್ಯ ಉಳ್ಳ ("ಹಿನೋತಿ ದುಃಖಂ, ರತಿಂ ಯಾಪಯತಿ ಇತಿ ಹಿರಣ್ಯಂ" ದುಃಖ ಕಳೆಯುವುದರಿಂದ ಸುಖವನ್ನು ನೀಡುವುದರಿಂದಲೂ ಹಿರಣ್ಯವೆನಿಸುವ ವೀರ್ಯವುಳ್ಳ) ತಂತವೇ=ವ್ಯಾಪ್ತನಾದ

ಅಥವಾ ಸಂತತಿಪ್ರವರ್ತಕನಾದ, ಚಾತುರ್ಹೋತ್ರಾಯ=ನಾಲ್ಕು ಹೋತೃಗಳಲ್ಲಿದ್ದು ಅವರು ಮಾಡುವ ಕರ್ಮಗಳನ್ನು ಮಾಡುವುದರಿಂದ ಚಾತುರ್ಹೋತ್ರ ನಾಮಕನಾದ ಪರಮಾತ್ಮನಿಗೆ ನಮಃ=ನಮಸ್ಕಾರವು. ।।೩೭।।

**ನಮ ಊರ್ಜ ಇಷೇ ತ್ರಯ್ಯಾಃ ಪತಯೇ ಯಜ್ಞರೇತಸೇ ।**
**ತೃಪ್ತಿದಾಯ ಚ ಜೀವಾನಾಂ ನಮಃ ಸರ್ವರಸಾತ್ಮನೇ ।।೩೮।।**

ಊರ್ಜೇ=ಪಿತೃಗಳ ಅನ್ನದಲ್ಲಿದ್ದು ಊರ್ಜನೆನಿಸಿದ, ಇಷೇ=ದೇವತೆಗಳ ಅನ್ನದಲ್ಲಿದ್ದು ಇಷ ಎನಿಸಿದ ಅಥವಾ ಇಚ್ಛಾರೂಪನಾದ, ತ್ರಯ್ಯಾಃ ಪತಯೇ=ವೇದಗಳಿಗೆ ಸ್ವಾಮಿಯಾದ, ಯಜ್ಞರೇತಸೇ=ಯಜ್ಞಕಾರಣವಾದ ಸೋಮಾಂತರ್ಗತನಾದ್ದರಿಂದ ಯಜರೇತಸನೆನಿಸುವ, ಜೀವಾನಾಂ=ಜೀವರಿಗೆ ತೃಪ್ತಿದಾಯ=ಮನುಷ್ಯರಿಗೆ ತೃಪ್ತಿಯನ್ನು ಕೊಡುವುದರಿಂದ ತೃಪ್ತಿದ ಎನಿಸಿದ, ಮನುಷ್ಯಾನ್ನದಲ್ಲಿದ್ದು ತೃಪ್ತಿದನೆನಿಸಿದ ಸರ್ವರಸತ್ಮಾನೇ=ಮಧುರಾದಿ ಸರ್ವರಸಗಳಲ್ಲಿದ್ದು ಸರ್ವರಸಾತ್ಮನೆನಿಸುವ ಶ್ರೀಹರಿಗೆ ನಮಃ=ನಮಸ್ಕಾರವು. ।।೩೮।।

**ಸರ್ವಸತ್ತ್ವಾತ್ಮದೇಹಾಯ ವಿಶೇಷಾಯ ಸ್ಥವೀಯಸೇ ।**
**ನಮಸ್ತ್ರೈಲೋಕ್ಯಪಾಲಾಯ ಸಹಓಜೋಬಲಾಯ ಚ ।।೩೯।।**

ಸರ್ವಸತ್ತ್ವಾತ್ಮದೇಹಾಯ=(ಸರ್ವಸತ್ತ್ವೇಷು ಆತ್ಮನಃ ದೇಹೋ ಯಸ್ಯ ಸಃ ತಸ್ಮೈ) ಎಲ್ಲ ಪ್ರಾಣಿಗಳಲ್ಲಿರುವ ತನ್ನ ದೇಹವುಳ್ಳವನಿಗೆ ಅಥವಾ (ಸರ್ವಸತ್ತ್ವಾನಾಂ ಆತ್ಮದಾ ಈಹಾ ಯಸ್ಯ ಸಃ ತಸ್ಮೈ) ಎಲ್ಲ ಪ್ರಾಣಿಗಳಿಗೂ ತನ್ನನ್ನು ಕೊಡುವ ವ್ಯಾಪಾರವುಳ್ಳ, ಅಥವಾ ಸರ್ವ=ಪೂರ್ಣವಾದ ಸತ್ವಂ=ಜ್ಞಾನಾನಂದಾದಿ ಸಾಧುಭಾವ, ತದಾತ್ಮಕವಾದ ದೇಹವುಳ್ಳ (ಪೂರ್ಣಜ್ಞಾನಾನಂದಾತ್ಮಕ ದೇಹವುಳ್ಳ), ವಿಶೇಷಾಯ=ವಿಶಿಷ್ಟನಾದ ಅಥವಾ ಪೃಥಿವಿಯಲ್ಲಿದ್ದು ಪೃಥಿವಿಗೆ ಉಳಿದವುಗಳಿಗಿಂತ ವಿಶೇಷವನ್ನು ಕೊಡುವುದರಿಂದ ವಿಶೇಷನೆನಿಸದ, ಸ್ಥವೀಯಸೇ=ಅತ್ಯಂತಸ್ಥೂಲನಾದ, ಚ=ಮತ್ತು ಸಹಓಜೋಬಲಾಯ ಸಹ=ದ್ವಂದ್ವಸಹಿಷ್ಣುತೆಶಕ್ತಿ ಓಜಃ=ಅವಷ್ಟಂಭಶಕ್ತಿ ಬಲಾಯ=ಬಾಹ್ಯ ಅವಯವಶಕ್ತಿಗಳಲ್ಲಿ ಆ ಆ ಹೆಸರಿನಿಂದ ಇರುವ ಶ್ರೀಹರಿಗೆ ನಮಃ=ನಮಸ್ಕಾರವು. ।।೩೯।।

**ಅರ್ಥಲಿಂಗಾಯ ನಭಸೇ ನಮೋಽಂತರ್ಬಹಿರಾತ್ಮನೇ ।**
**ನಮಃ ಪುಣ್ಯಾಯ ಶ್ಲೋಕಾಯ ಅಮುಷ್ಮೈ ಭೂರಿವರ್ಚಸೇ ।।೪೦।।**

ಅರ್ಥಲಿಂಗಾಯ=(ಅ-೧)ಶಾಸ್ತ್ರದಿಂದ ಎಲ್ಲ ಪುರುಷಾರ್ಥಗಳನ್ನು ತಿಳಿಸುವ, (ಅ-೨) ಶಾಸ್ತ್ರಗಳೇ ಜ್ಞಾಪಕಗಳಾಗಿವುಳ್ಳ, (ಅ-೩) ಮಹದಾದಿಕಾರ್ಯಗಳೇ ಜ್ಞಾಪಕಗಳಾಗಿವುಳ್ಳ, ನಭಸೇ=ಆಕಾಶಾಂತರ್ಗತನಾದ, ಅಥವಾ ಆಕಾಶದಂತೆ ಅಸಂಗನಾದ, ಅಥವಾ (ನ ಭಸ್ಯತೇ

ಪ್ರಕಾಶ್ಯತೇ ಜ್ಞಾಯತೇ) ತಿಳಿಯಲಾಗದ, ಅಂತರ್ಬಹಿರಾತ್ಮನೇ=ಬ್ರಹ್ಮಾಂಡದ ಹೊರಗೂ ಒಳಗೂ ವ್ಯಾಪ್ತನಾದ, ಪುಣ್ಯಾಯ ಶ್ಲೋಕಾಯ=ಪವಿತ್ರಗೊಳಿಸುವ ಕೀರ್ತಿಶಾಲಿಗಳಾದವರಲ್ಲಿ ಅಂತರ್ಯಾಮಿಯಾದ, ಅಥವಾ ಪುಣ್ಯಶ್ಲೋಕ ಎಂಬ ಹೆಸರುಳ್ಳ ಶ್ರೀಹರಿಗೆ ನಮಸ್ಕಾರವು.

**ಪ್ರವೃತ್ತಾಯ ನಿವೃತ್ತಾಯ ಪಿತೃದೇವಾಯ ಕರ್ಮಣೇ ।**
**ನಮೋ ಧರ್ಮವಿಪಾಕಾಯ ಮೃತ್ಯವೇ ದುಃಖದಾಯ ಚ ॥೪೧॥**

ಪ್ರವೃತ್ತಾಯ=ಪ್ರವೃತ್ತಿಮಾರ್ಗಪ್ರವರ್ತಕನಾದ, ನಿವೃತ್ತಾಯ=ನಿವೃತ್ತಿಮಾರ್ಗ ಪ್ರವರ್ತಕನಾದ, ಪಿತೃದೇವಾಯ=ಪಿತೃದೇವತೆಗಳಲ್ಲಿದ್ದು ಪಿತೃದೇವಶಬ್ದವಾಚ್ಯನಾದ, ಕರ್ಮಣೇ=ಕ್ರಿಯಾರೂಪನಾದ, ಧರ್ಮವಿಪಾಕಾಯ=ಪುಣ್ಯಫಲಪ್ರದನಾದ, ಮೃತ್ಯವೇ= ಮೃತ್ಯುವಿಗೆ ಕಾರಣನಾದ ಅಥವಾ (ಮೃತೇಃ ಉದ್ಗತಃ ಮೃತ್ಯುಃ ತಸ್ಮೈ) ಮರಣರಹಿತನಾದ, ಮೃತ್ಯುದೇವತೆಯಲ್ಲಿದ್ದು ಮೃತ್ಯುವೆನಿಸುವ, ಚ=ಮತ್ತು ದುಃಖದಾಯ=ಅಸುರರಿಗೆ ದುಃಖ ಕೊಡುವ,

ದುಃಖದಾಯಿನೇ ಎಂಬ ಪಾಠದಲ್ಲಿ 'ದುರಶೋಭನದುಃಖಯೋಃ' ಎಂದು ಯಾದವಕೋಶ ಇರುವುದರಿಂದ 'ಖಂ ಸುಖಂ' ಎಂದು ಶ್ರುತಿ ಇರುವುದರಿಂದಲೂ 'ದುಃಖಂ ದಾಯತಿ=ಶೋಷಯತಿ (ದೈ ಶೋಷಣೇ ಎಂದು ಧಾತು) ಇತಿ ದುಃಖದಾಯೀ ತಸ್ಮೈ' ದುಃಖವನ್ನು ಕಳೆಯುವ ಎಂದರ್ಥ.

ಎರಡೂ ಪಾಠದಲ್ಲಿ ಅಸುರರಿಗೆ ದುಃಖವನ್ನು ಕೊಡುವ, ಸಜ್ಜನರಿಗೆ ದುಃಖಶೋಷಕನಾದ, ಅಸಜ್ಜನರಿಗೆ ಸಜ್ಜನರಿಗೆ ಕ್ರಮವಾಗಿ ದುಃಖ-ಸುಖಗಳನ್ನು ಕೊಡುವ ಶ್ರೀಹರಿಗೆ ನಮಸ್ಕಾರವು ಎಂದರ್ಥ. ॥೪೧॥

**ನಮಸ್ತ ಆಶಿಷಾಮೀಶ ಮನವೇ ಕಾರಣಾತ್ಮನೇ ।**
**ನಮೋ ಧರ್ಮಾಯ ಬೃಹತೇ ಕೃಷ್ಣಾಯಾಕುಂಠಮೇಧಸೇ ॥೪೨॥**

ಹೇ ಆಶಿಷಾಂ ಈಶ=ಅಭೀಷ್ಟಗಳಿಗೊಡೆಯನೇ ! ಮನವೇ=ಜ್ಞಾನರೂಪನಾದ, ಕಾರಣಾತ್ಮನೇ=ಸಮಸ್ತಜಗತ್ತಿಗೆ ನಿಮಿತ್ತಕಾರಣನಾದ, ಧರ್ಮಾಯ=ಧಾರಕನಾದ, ಬೃಹತೇ=ಪೂರ್ಣನಾದ, ಅಕುಂಠಮೇಧಸೇ=ಅಪ್ರತಿಹತವಾದ ಬುದ್ಧಿಯುಳ್ಳ ಕೃಷ್ಣಾಯ=ಪಾಪಕರ್ಷಕನಾದ ತೇ=ನಿನಗೆ ನಮಃ ನಮಃ=ಪುನಃ ಪುನಃ ನಮಸ್ಕಾರವು.

**ಪುರುಷಾಯ ಪುರಾಣಾಯ ಸಾಂಖ್ಯಯೋಗೇಶ್ವರಾಯ ಚ ।**
**ಶಕ್ತಿತ್ರಯಸಮೇತಾಯ ಮೀಢುಷೇಽಹಂಕೃತಾತ್ಮನೇ ॥೪೩॥**

ಪುರುಷಾಯ=ಪೂರ್ಣಷಡ್ಗುಣನಾದ, ಪುರಾಣಾಯ=ಪುರಾತನನಾದ, ಸಾಂಖ್ಯ-ಯೋಗೇಶ್ವರಾಯ ಸಾಂಖ್ಯ=ಯಥಾರ್ಥಜ್ಞಾನ ಯೋಗ=ಅಷ್ಟಾಂಗಯೋಗರೂಪವಾದ ಉಪಾಯಗಳಿಗೆ ಈಶ್ವರಾಯ=ನಿಯಾಮಕನಾದ, ಶಕ್ತಿತ್ರಯಸಮೇತಾಯ=ಜ್ಞಾನ-ಇಚ್ಛಾ-ಕ್ರಿಯಾ ಎಂಬ ಮೂರುಶಕ್ತಿಗಳಿಂದ ಕೂಡಿದ ಶ್ರೀ-ಭೂ-ದುರ್ಗಾ ಎಂಬ ಮೂರು ಹೆಂಡಂದಿರಿಂದ ಕೂಡಿದ, ಮೀಢುಷೇ=ಭಕ್ತಾಭೀಷ್ಟಸೇಚಕನಾದ, ಅಹಂಕೃತಾತ್ಮನೇ=ರುದ್ರನಲ್ಲಿ ಮನಸಿರಿಸಿದ ನಿನಗೆ ನಮಸ್ಕಾರವು. ।।೪೩।।

**ಚೇತಆಕೂತಿರೂಪಾಯ ನಮೋ ವಾಚೋವಿಭೂತಯೇ ।**
**ದರ್ಶನಂ ನೋ ದಿದೃಕ್ಷೂಣಾಂ ದೇಹಿ ಭಾಗವತಾರ್ಚಿತಮ್ ।।೪೪।।**

ಚೇತಆಕೂತಿರೂಪಾಯ=ಜ್ಞಾನ ಮತ್ತು ಅಭಿಪ್ರಾಯಗಳನ್ನು ನೀಡುವ, ವಾಚೋವಿಭೂತಯೇ=ಶಬ್ದಗಳ ವಿವಿಧಸೃಷ್ಟಿ ಮಾಡುವ ನಿನಗೆ ನಮಃ=ನಮಸ್ಕಾರವು. ಭಾಗವತಾರ್ಚಿತಂ=ಭಗವದ್ಭಕ್ತರಿಂದ ಪೂಜಿತವಾದ ರೂಪವನ್ನು ದಿದೃಕ್ಷೂಣಾಂ= ನೋಡಲಿಚ್ಛಿಸುವ ನಃ=ನಮಗೆ ದರ್ಶನಂ ದೇಹಿ=ದರ್ಶನವನ್ನು ಕೊಡು. ।।೪೪।।

**ರೂಪಂ ಪ್ರಿಯತಮಂ ಸ್ವಾನಾಂ ಸರ್ವೇಂದ್ರಿಯಗುಣಾಂಜನಮ್ ।**
**ಸ್ನಿಗ್ಧಪ್ರಾವೃಡ್‌ಘನಶ್ಯಾಮಂ ಸರ್ವಸೌಂದರ್ಯಸಂಗ್ರಹಮ್ ।।೪೫।।**

ಸ್ವಾನಾಂ=ಭಕ್ತರಿಗೆ ಪ್ರಿಯತಮಂ=ಅತಿಶಯವಾಗಿ ಪ್ರಿಯನಾದ, ಸರ್ವೇಂದ್ರಿಯ-ಗುಣಾಂಜನಂ=ಎಲ್ಲ ಇಂದ್ರಿಯವಿಷಯಗಳಿಗೆ ವ್ಯಂಜಕನಾದ, ಸ್ನಿಗ್ಧಪ್ರಾವೃಡ್‌ಘನಶ್ಯಾಮಂ ಸ್ನಿಗ್ಧ=ನೀರಿನಿಂದ ಕೂಡಿದ ಪ್ರಾವೃಟ್=ಮಳೆಗಾಲದ ಘನ=ಮೋಡದಂತೆ ಶ್ಯಾಮಂ=ಕಪ್ಪುವರ್ಣ ಉಳ್ಳ, ಸರ್ವಸೌಂದರ್ಯಸಂಗ್ರಹ=ಎಲ್ಲ ಸೌಂದರ್ಯಸಂಗ್ರಹಕ್ಕೆ ಪಾತ್ರನಾದ,।।೪೫।।

**ಚಾರ್ವಾಯತಚತುರ್ಬಾಹುಂ ಸುಜಾತರುಚಿರಾನನಮ್ ।**
**ಪದ್ಮಕೋಶಪಲಾಶಾಕ್ಷಂ ಸುಂದರಭ್ರು ಸುನಾಸಿಕಮ್ ।।೪೬।।**

ಚಾರ್ವಾಯತಚತುರ್ಬಾಹುಂ ಚಾರು=ಸುಂದರವಾದ ಆಯತ=ವಿಶಾಲವಾದ ಚುತುರ್ಬಾಹುಂ=ನಾಲ್ಕುಕೈಗಳುಳ್ಳ, ಸುಜಾತರುಚಿರಾನನಂ ಸುಜಾತ=ಕೋಮಲವಾದ ರುಚಿರ=ಸುಂದರವಾದ ಆನನಂ=ಮುಖವುಳ್ಳ, ಪದ್ಮಕೋಶಪಲಾಶಾಕ್ಷಂ=ಕಮಲದ ಪತ್ರದಂತಿರುವ ಕಣ್ಣುಗಳುಳ್ಳ, ಸುಂದರಭ್ರು=ಸುಂದರವಾದ ಹುಬ್ಬುಗಳುಳ್ಳ, ಸುನಾಸಿಕಂ=ಒಳ್ಳೆಯ ಮೂಗುಳ್ಳ।।೪೬।।

**ಸುದ್ವಿಜಂ ಸುಕಪೋಲಾಸ್ಯಂ ಸಮಕರ್ಣವಿಭೂಷಿತಮ್ ।**
**ಪ್ರೀತಿಪ್ರಹಸಿತಾಂಪಾಗಮಲಕೈರುಪಶೋಭಿತಮ್ ।।೪೭।।**

ಸುದ್ವಿಜಂ=ಶೋಭನವಾದ ದಂತ(ಹಲ್ಲು)ಗಳುಳ್ಳ, ಸುಕಪೋಲಾಸ್ಯಂ=ಒಳ್ಳೆಯ ಕೆನ್ನೆಗಳುಳ್ಳ (ಮುಖವುಳ್ಳ) ಸಮಕರ್ಣವಿಭೂಷಿತಂ=ಒಂದೇರೀತಿಯ ಕಿವಿಗಳು ಹಾಗೂ ಆಭರಣವುಳ್ಳ, ಪ್ರೀತಿಪ್ರಹಸಿತಾಪಾಂಗಂ=ಪ್ರೀತಿಯಿಂದ ನಗುತ್ತಿರುವ ಕಣ್ಣುಗಳುಳ್ಳ, ಅಲಕೈರುಪಶೋಭಿತಂ=ಗುಂಗುರುಕೂದಲಿನಿಂದ ಶೋಭಿಸುವ.।।೪೭।।

**ಲಸತ್ಪಂಕಜಕಿಂಜಲ್ಕದುಕೂಲಂ ಮೃಷ್ಟಕುಂಡಲಮ್ ।**
**ಸ್ಫುರತ್ಕಿರೀಟವಲಯಹಾರನೂಪುರಮೇಖಲಮ್ ।।೪೮।।**

ಲಸತ್ಪಂಕಜಕಿಂಜಲ್ಕದುಕೂಲಂ ಲಸತ್=ಪ್ರಕಾಶಮಾನವಾದ ಪಂಕಜ=ಕಮಲದ ಕಿಂಜಲ್ಕ=ಕೇಸರದಂತಿರುವ ದುಕೂಲಂ=ವಸ್ತ್ರವುಳ್ಳ, ಮೃಷ್ಟಕುಂಡಲಂ=ಸುಂದರವಾದ ಕುಂಡಲಗಳುಳ್ಳ, ಸ್ಫುರತ್ಕಿರೀಟವಲಯಹಾರನೂಪುರಮೇಖಲಂ ಸ್ಫುರತ್=ಹೊಳೆಯುವ ಕಿರೀಟ=ಕಿರೀಟ ವಲಯ=ಕಡಗ ಹಾರ=ಹಾರ ನೂಪುರ=ಗೆಜ್ಜೆ ಮೇಖಲಂ= ಉಡುದಾರವುಳ್ಳ ।।೪೮।।

**ಶಂಖಚಕ್ರಗದಾಪದ್ಮಮಾಲಾಮಣ್ಯುತ್ತಮರ್ಧಿಮತ್ ।**
**ಸಿಂಹಸ್ಕಂಧಮುರೋ ಬಿಭ್ರತ್ ಸೌಭಗಗ್ರೀವಕೌಸ್ತುಭಮ್ ।।೪೯।।**

ಶಂಖಚಕ್ರಗದಾಪದ್ಮಮಾಲಾಮಣ್ಯುತ್ತಮರ್ಧಿಮತ್ ಶಂಖ=ಶಂಖ ಚಕ್ರ=ಚಕ್ರ ಗದಾ=ಗದೆ ಪದ್ಮ=ಪದ್ಮ ಮಾಲಾ=ವೈಜಯಂತೀಮಾಲೆ ಮಣಿ=ಕೌಸ್ತುಭಮಣಿಗಳಿಂದ ಉತ್ತಮ=ಉತ್ತಮವಾದ ಋದ್ಧಿಮತ್=ಉತ್ಕರ್ಷವುಳ್ಳ, ಸಿಂಹಸ್ಕಂಧಂ=ಶ್ರೇಷ್ಠವಾದ ಭುಜಗಳುಳ್ಳ, ಸೌಭಗಗ್ರೀವಕೌಸ್ತುಭಂ=ಸೌಂದರ್ಯಯುತವಾದ ಕುತ್ತಿಗೆ ಮತ್ತು ಕೌಸ್ತುಭವನ್ನು ಬಿಭ್ರತ್=ಧರಿಸಿದ ಉರಃ=ವಕ್ಷಸ್ಥಲವುಳ್ಳ।।೪೯।।

**ಶ್ರಿಯಾಽನಪಾಯಿನ್ಯಾಽಽಕ್ಷಿಪ್ತಂ ನಿಕಷಾಶ್ಮೋರಸೋಲ್ಲಸತ್ ।**
**ಪೂರರೇಚಕಸಂವಿಗ್ನವಲಿಮತ್ಪಲ್ಲವೋದರಮ್ ।।೫೦।।**

ಅನಪಾಯಿನ್ಯಾ=ನಿತ್ಯಮುಕ್ತಳಾದ ಶ್ರಿಯಾ=ಲಕ್ಷ್ಮೀದೇವಿಯಿಂದ ಆಕ್ಷಿಪ್ತಂ= ತಿರಸ್ಕೃತವಾದ, ನಿಕಷಾಶ್ಮೋರಸಾ ನಿಕಷಾಶ್ಮ=ಒರೆಗಲ್ಲಿನಂತಿರುವ ಉರಸಾ=ಎದೆಯಿಂದ ಉಲ್ಲಸತ್=ಶೋಭಿಸುವ, ಪೂರರೇಚಕಸಂವಿಗ್ನವಲಿಮತ್ಪಲ್ಲವೋದರಂ ಪೂರರೇಚಕ= ಶ್ವಾಸೋಚ್ಛ್ವಾಸಗಳಿಂದ ಸಂವಿಗ್ನ=ಸಂಚಲಿಸುವ ವಲಿಮತ್=ರೇಖಾಗಳುಳ್ಳ ಪಲ್ಲವೋದರಂ= ಚಿಗುರೆಲೆಯಂತೆ ಕೋಮಲವಾದ ಉದರವುಳ್ಳ।।೫೦।।

**ಪ್ರತಿಸಂಕ್ರಾಮಯದ್ ವಿಶ್ವಂ ನಾಭ್ಯಾಽಽವರ್ತಗಭೀರಯಾ ।**
**ಶ್ಯಾಮಶ್ರೋಣ್ಯಧಿರೋಚಿಷ್ಣುದುಕೂಲಸ್ವರ್ಣಮೇಖಲಮ್ ॥**
**ಸಮಚಾರ್ವಂಘ್ರಿಜಂಘೋರುನಿಮ್ನಜಾನುಸುದರ್ಶನಮ್ ॥೫೦॥**

ಆವರ್ತಗಭಿರಯಾ=ದಕ್ಷಿಣಾವರ್ತದಿಂದ (ಬಲತಿರುವುಳ್ಳ) ನಿಮ್ನವಾದ, ನೀರಿನಲ್ಲಿಯ ಸುಳಿಯಂತೆ ತಗ್ಗಾದ ನಾಭ್ಯಾ=ಹೊಕ್ಕಳಿನಿಂದ ಹೊರಬಂದ ವಿಶ್ವಂ=ಪ್ರಪಂಚವನ್ನು ಪ್ರತಿಸಂಕ್ರಾಮಯತ್=ನುಂಗುವಂತಿರುವ, ಶ್ಯಾಮಶ್ರೋಣ್ಯಧಿರೋಚಿಷ್ಣುದುಕೂಲ-ಸ್ವರ್ಣಮೇಖಲಂ ಶ್ಯಾಮಶ್ರೋಣ್ಯಾ=ಕಪ್ಪುಬಣ್ಣವುಳ್ಳ ನಿತಂಬಪ್ರದೇಶದಿಂದ ಅಧಿರೋಚಿಷ್ಣು= ಅಧಿಕವಾಗಿ ಶೋಭಿಸುವ ದುಕೂಲ=ವಸ್ತ್ರದಲ್ಲಿ ಸ್ವರ್ಣಮೇಖಲಂ=ಚಿನ್ನದ ಉಡುದಾರವುಳ್ಳ ಸಮ=ಒಂದೇರೀತಿಯಾಗಿರುವ ಚಾರು=ಸುಂದರವಾದ ಅಂಘ್ರಿ=ಪಾದಗಳು ಜಂಘ= ಮೀನಗಂಡ ಊರು=ತೊಡೆಗಳು ನಿಮ್ನ=ಎತ್ತರವಾದ ಜಾನು=ಮೊಣಕಾಲುಗಳು ಸುದರ್ಶನಂ =ಒಳ್ಳೆಯ ಕಣ್ಣುಗಳುಳ್ಳ ॥೫೦॥

**ಪದಾ ಶರತ್ಪದ್ಮಪಲಾಶರೋಚಿಷಾ**
**ನಖದ್ಯುಭಿರ್ನೋತುರಘಂ ವಿಧುನ್ವತಾ ।**
**ಪ್ರದರ್ಶಯ ಸ್ವೀಯಮಪಾಸ್ತಸಾಧ್ವಸಂ**
**ಪದಂ ಪುರೋಮಾರ್ಗ ಗುರುಸ್ತಮೋಜುಷಾಮ್ ॥೫೨॥**

ಪುರೋಮಾರ್ಗಗುರುಃ=ಉತ್ಕ್ರಾಂತರಾದವರಿಗೆ ಮುಂದಿನ ಅರ್ಚಿರಾದಿ ಮಾರ್ಗಗಳ ಉಪದೇಶಕನೂ ಆದ ನೀನು, ನೋತುಃ=ನಖವನ್ನು ಸ್ತೋತ್ರ ಮಾಡುವವರ ಅಘಂ=ಪಾಪವನ್ನು ನಖದ್ಯುಭಿಃ=ಉಗುರಿನ ಕಾಂತಿಯಿಂದ ವಿಧುನ್ವತಾ=ನಾಶಗೊಳಿಸುವ ಶರತ್ಪದ್ಮಪಲಾಶರೋಚಿಷಾ=ಶರತ್ಕಾಲದಲ್ಲಿರುವ ಕಮಲದ ದಳದಂತಿರುವ ಕಾಂತಿಯುಳ್ಳ ಪದಾ=ಪಾದಗಳಿಂದ ಯುತಂ=ಕೂಡಿದ, ಅಪಾಸ್ತಸಾಧ್ವಸಂ=ಭಯರಹಿತವಾದ ಸ್ವೀಯಂ ಪದಂ=ನಿನ್ನ ಸ್ವರೂಪವನ್ನು ತಮೋಜುಷಾಂ=ಅಜ್ಞಾನಿಗಳಾದ ನಮ್ಮ ಪುರಃ=ಮುಂದೆ ಪ್ರದರ್ಶಯ=ತೋರಿಸು. ॥೫೨॥

**ಏತದ್ರೂಪಮನುಧ್ಯೇಯಮಾತ್ಮಶುದ್ಧಿಮಭೀಪ್ಸತಾಮ್ ।**
**ಯದ್ಭಕ್ತಿಯೋಗೋಽಭಯದಃ ಸ್ವಧರ್ಮಮನುತಿಷ್ಠತಾಮ್ ॥೫೩॥**

ಯತ್=ಯಾವ ಕಾರಣ ಸ್ವಧರ್ಮಂ ಅನುತಿಷ್ಠತಾಂ=ವರ್ಣಾಶ್ರಮವಿಹಿತ ಧರ್ಮಗಳನ್ನಾಚರಿಸುವರಿಗೆ ಭಕ್ತಿಯೋಗಃ=ಭಕ್ತಿರೂಪ ಉಪಾಯವು ಅಭಯದಃ= ಮುಕ್ತಿಪ್ರದವಾಗಿದೆಯೋ ತತ್=ಆದ್ದರಿಂದ ಆತ್ಮಶುದ್ಧಿಂ=ಮುಕ್ತಿಯನ್ನು ಅಭೀಪ್ಸತಾಂ=

ಇಚ್ಛಿಸುವವರಿಗೆ ಏತದ್ ರೂಪಂ=ಇದುವರೆಗೆ ವರ್ಣಿಸಿದ ರೂಪವು ಅನುಧ್ಯೇಯಂ= ಯೋಗ್ಯತಾನುಸಾರ ಧ್ಯಾನ ಮಾಡಬೇಕಾದುದು. ||೫೩||

ಭಕ್ತಿಯ ಅವಶ್ಯಕತೆಯನ್ನು ಹೇಳುವರು -

**ಭವಾನ್ ಭಕ್ತಿಮತಾಂ ಲಭ್ಯೋ ದುರ್ಲಭಃ ಸರ್ವದೇಹಿನಾಮ್ ।**
**ಸ್ವಾರಾಜ್ಯಸ್ಯಾಪ್ಯಭಿಮತಾ ಏಕಾಂತೇನಾತ್ಮವಿದ್ಗತಿಃ ||೫೪||**

ದುರ್ಲಭಃ=ಭಕ್ತಿಯಿಲ್ಲದವರಿಗೆ ದೊರೆಯದವನಾದ ಭವಾನ್=ನೀನು ಭಕ್ತಿಮತಾಂ= ಭಕ್ತಿವುಳ್ಳ ಸರ್ವದೇಹಿನಾಂ=ಎಲ್ಲ ಜನರಿಗೂ ಲಭ್ಯಃ=ದೊರಕುವವನು. ಇಂದ್ರಾದೇಃ=ಇಂದ್ರ ಮೊದಲಾದವರಿಗೆ ಸ್ವಾರಾಜ್ಯಸ್ಯ=ಸ್ವರ್ಗಾಧಿಪತ್ಯ ಸಿಗುವುದಕ್ಕೆ ಏಕಾಂತೇನ ಆತ್ಮವಿದ್ ಗತಿಃ=ನಿಯಮೇನ ಪರಮಾತ್ಮಜ್ಞಾನಿಗಳಿಗೆ ಕಾರಣವಾದ ಭಕ್ತಿಯು ಅಭಿಮತಾ=ಸಾಧನವೆಂದು ಜ್ಞಾನಿಗಳಿಗೆ ಸಮ್ಮತವು.

(ವಿ) ಸ್ವಃ=ಸ್ವರ್ಗದಲ್ಲಿ ರಾಜ್ಯಂ ಯಸ್ಯ=ರಾಜ್ಯವುಳ್ಳ ಇಂದ್ರಾದಿಗಳಿಗೆ ಆತ್ಮವಿದ್ ಪರಮಾತ್ಮನ ಗತಿಃ ಮುಕ್ತಿಯು ಏಕಾಂತೇನ ಅಭಿಮತಾ ನಿಯಮೇನ ಬರುವುದು. ''ಆತ್ಮವಿದ್ ಪರಮಾತ್ಮಾ ಗಮ್ಯತೇ ಅನಯಾ ಇತಿ ಆತ್ಮವಿದ್‌ಗತಿಃ ಭಕ್ತಿಃ'' ಹೀಗೂ ಅರ್ಥ.

**ಭಾಗವತ ತಾತ್ಪರ್ಯ -**

ಅಪೇಕ್ಷಿತಪೂರಣ ಮಾಡುವರು -

**ಸ್ವಾರಾಜ್ಯಸ್ಯ ಇಂದ್ರಾದೇಃ ।**

ಇಂದ್ರಾದಿಗಳಿಗೆ ಸ್ವಾರಾಜ್ಯ ಸಿಗುವುದಕ್ಕೆ ಭಕ್ತಿ ಕಾರಣವೆಂದು ಭಾವ ||೫೪||

ಈ ವಿಧವಾದ ಭಕ್ತಿ ಇದ್ದವನು ಬೇರೆ ಕಾಮನೆಗಳನ್ನು ಮಾಡುವುದಿಲ್ಲವೆಂದು ಹೇಳುವರು -

**ತ್ವಾಂ ದುರಾರಾಧ್ಯಮಾರಾಧ್ಯ ಸತಾಮಪಿ ದುರಾಪಯಾ ।**
**ಏಕಾಂತಭಕ್ತ್ಯಾ ಕೋ ವಾಂಛೇತ್ ಪಾದಮೂಲಂ ವಿನಾ ಬಹಿಃ ||೫೫||**

ಸತಾಂ ಅಪಿ ದುರಾಪಯಾ=ಸಜ್ಜನರಿಗೂ ಸುಲಭವಲ್ಲದ ಏಕಾಂತಭಕ್ತ್ಯಾ=ಅನನ್ಯ ಭಕ್ತಿಯಿಂದ ದುರಾರಾಧ್ಯಂ=ಕಷ್ಟದಿಂದ ಆರಾಧ್ಯನಾದ ತ್ವಾಂ=ನಿನ್ನನ್ನು ಆರಾಧ್ಯ=ಆರಾಧಿಸಿ ಕಃ=ಯಾವನು ಪಾದಮೂಲಂ ವಿನಾ=ಪಾದಗಳನ್ನು ಬಿಟ್ಟು ಬಹಿಃ=ತುಚ್ಛವಾದ ಐಹಿಕ ಆಮುಷ್ಮಿಕಗಳನ್ನು ವಾಂಛೇತ್=ಇಚ್ಛಿಸುವನು ? ||೫೫||

ಅದಕ್ಕೆ ಕಾರಣ ಹೇಳುವರು -

**ಯತ್ರ ನಿರ್ವಿಷ್ಟಮರಣಂ ಕೃತಾಂತೋ ನಾವಮನ್ಯತೇ ।**
**ವಿಶ್ವಂ ವಿಷ್ಟಂಭಯನ್ ವೀರ್ಯಶೌರ್ಯವಿಸ್ಫುರಿತಭ್ರುವಾ ॥೫೬॥**

ವೀರ್ಯಶೌರ್ಯವಿಸ್ಫುರಿತಭ್ರುವಾ ವೀರ್ಯ=ಪ್ರಭಾವ ಶೌರ್ಯ=ಉತ್ಸಾಹಗಳಿಂದ ವಿಸ್ಫುರಿತ=ಚಂಚಲವಾದ ಭ್ರುವಾ=ಹುಬ್ಬಿನಿಂದ ವಿಶ್ವಂ=ಜಗತ್ತನ್ನು ವಿಷ್ಟಂಭಯನ್=ವಿಶೇಷವಾಗಿ ಸ್ತಂಭನ ಮಾಡುವ (ವಶ ಮಾಡಿಕೊಂಡ) ಕೃತಾಂತಃ=ಯಮನು ಯತ್ರ=ಯಾವ ಪರಮಾತ್ಮನ ಪಾದಮೂಲದಲ್ಲಿ ಅರಣಂ ನಿರ್ವಿಷ್ಟಂ=ಶರಾಣಾಗತನಾದವನನ್ನು ನ ಅವಮನ್ಯತೇ (ನಾಭಿಮನ್ಯತೇ)=ಅವಮಾನಗೊಳಿಸುವುದಿಲ್ಲ ನನ್ನವನಿವನು ಎಂದು ಅಭಿಮಾನಪಡುವುದಿಲ್ಲ

ಕೈಮುತ್ಯ ಹೇಳುವರು -

**ಕ್ಷಣಾರ್ಧೇನಾಪಿ ತುಲಯೇ ನ ಸ್ವರ್ಗಂ ನಾಪುನರ್ಭವಂ ।**
**ಭಗವತ್ಸಂಗಿಸಂಗಸ್ಯ ಮರ್ತ್ಯಾನಾಂ ಕಿಮುತಾಶಿಷಃ ॥೫೭॥**

ಭಗವತ್ಸಂಗಿಸಂಗಸ್ಯ=ಭಗವಂತನ ಸಂಗವುಳ್ಳ ಭಕ್ತರ ಸಹವಾಸದ ಕ್ಷಣಾರ್ಧೇನ ಅಪಿ=ಕೇವಲ ಅರ್ಧಕ್ಷಣದಿಂದುಂಟಾಗುವ ಸುಖವನ್ನು ಸ್ವರ್ಗಂ ನ ತುಲಯೇ= ಸ್ವರ್ಗಸಮವೆಂದು ಪರಿಗಣಿಸುವುದಿಲ್ಲ. ಅಪುನರ್ಭವಂ ನ ತುಲಯೇ=ಮೋಕ್ಷವನ್ನೂ ಸಮವೆಂದು ತಿಳಿಯುವುದಿಲ್ಲ. ಮರ್ತ್ಯಾನಾಂ=ಮರಣಶೀಲವಾದ ಆಶಿಷಃ=ರಾಜ್ಯಾದಿಗಳನ್ನು ನ ತುಲಯೇ ಇತಿ ಕಿಮುತ ? ಸರಿಯೆಂದು ಲೆಕ್ಕಿಸುವುದಿಲ್ಲವೆಂದು ಹೇಳಬೇಕೇ ?

**ಭಾಗವತ ತಾತ್ಪರ್ಯ -**

ಇಲ್ಲಿ ಸಾಧನವಾದ ಭಕ್ತರ ಸಂಗವು ಫಲವಾದ ಮೋಕ್ಷಕ್ಕಿಂತ ಹೆಚ್ಚು ಹೇಗೆ ? ಎಂಬ ಶಂಕೆಯನ್ನು ಪ್ರಮಾಣದಿಂದಲೇ ಪರಿಹರಿಸುವರು -

ಸಂಗೋ ಭಾಗವತೈರ್ಭೂಯಾನಪುನರ್ಭವಮಾತ್ರತಃ ।
ಯತೋ ವಿಶಿಷ್ಟಮಾನಂದಂ ಮುಕ್ತೌ ಜನಯತಿ ಸ್ಫುಟಮ್ ॥ ಇತಿ ಚ ॥

ಸಂಸಾರನಿವೃತ್ತಿರೂಪ ಕೇವಲ ಮೋಕ್ಷಕ್ಕಿಂತ ಭಗವದ್ಭಕ್ತಿಯನ್ನುಂಟುಮಾಡುವ ಭಗವದ್ಭಕ್ತರ ಸಂಗವು ಶ್ರೇಷ್ಠವು. ಏಕೆಂದರೆ - ಸಂಗದಿಂದುಂಟಾದ ಭಕ್ತಿಯು ಮುಕ್ತಿಯಲ್ಲಿ ಆನಂದಾತಿಶಯವನ್ನುಂಟುಮಾಡುವುದು. ಆ ಕಾರಣ ಶ್ರೇಷ್ಠ ॥೫೭॥

ಭಗವತ್ಸಂಗಿಗಳ ಸ್ವರೂಪವನ್ನು ತಿಳಿಸುತ್ತ ಅವರ ಸಂಗವಾಗಲಿ ಎಂದು ಅಪೇಕ್ಷಿಸುವರು-

**ಅಥಾನಘಾಂಘ್ರ್ಯೋಸ್ತವ ಕೀರ್ತಿತೀರ್ಥಯೋ-**
**ರಂತರ್ಬಹಿಃ ಸ್ನಾನವಿಧೂತಪಾಪ್ಮನಾಮ್ ।**
**ಭೂತೇಷ್ವನುಕ್ರೋಶಸುಸತ್ವಶೀಲಿನಾಂ**
**ಸ್ಯಾತ್ ಸಂಗಮೋಽನುಗ್ರಹ ಏಷ ನಸ್ತವ ॥೫೮॥**

ಹೇ ಅನಘ=ಪಾಪಹರನೇ ! ತವ=ನಿನ್ನ ಅಂಘ್ರ್ಯೋಃ=ಪಾದಗಳಿಂದ ಜನಿಸಿದ ಕೀರ್ತಿತೀರ್ಥಯೋಃ=ಶಾಸ್ತ್ರಶ್ರವಣ, ಗಂಗಾದಿನದಿಗಳಲ್ಲಿ ಅಂತಃ=ಒಳಗೂ ಬಹಿಃ=ಹೊರಗೂ ಮಾಡಿದ ಸ್ನಾನವಿಧೂತಪಾಪ್ಮನಾಂ=ಸ್ನಾನದಿಂದ ಪಾಪರಹಿತರಾದ ಭೂತೇಷು=ಅಸಜ್ಜನರನ್ನು ಬಿಟ್ಟು ಎಲ್ಲ ಪ್ರಾಣಿಗಳಲ್ಲಿ ಅನುಕ್ರೋಶ=ದಯೆ ಸುಸತ್ವ=ಒಳ್ಳೆಯ ಅಂತಃಕರಣಗಳಿಂದ ಕೂಡಿದ ಶೀಲಿನಾಂ=ಸ್ವಭಾವವುಳ್ಳ (ಸುತತ್ವಶೀಲಿನಾಂ ಎಂಬ ಪಾಠವಿದ್ದಾಗ=ಚೆನ್ನಾಗಿ ಪರಾಪರತತ್ವವಿಚಾರ ಮಾಡುವ ಸ್ವಭಾವವುಳ್ಳ ಎಂದರ್ಥ) ಭಕ್ತರ ಸಂಗಮಃ=ಸಮಾಗಮವು ಅಥ= ಮಹಾಫಲಪ್ರದವಾದುದರಿಂದ ನಃ ಸ್ಯಾತ್=ನನಗಾಗಲಿ. ಏಷಃ=ಇದು ನಃ=ನಮಗೆ ತವ ಅನುಗ್ರಹಃ=ಅನಗ್ರಹಜ್ಞಾಪಕವು.

**ಭಾಗವತ ತಾತ್ಪರ್ಯ -**

ಪಾದಗಳೇ ಕೀರ್ತಿ-ತೀರ್ಥಗಳಲ್ಲದ ಕಾರಣ, ಈ ಶ್ಲೋಕದಲ್ಲಿ ಅಂಘ್ರಿಗಳಿಗೂ ಕೀರ್ತಿ-ತೀರ್ಥಗಳಿಗೂ ಸಾಮಾನಾಧಿಕರಣ್ಯವು (ವಿಶೇಷವಿಶೇಷ್ಯಭಾವವು) ಬಾಧಿತವೆಂಬಂತೆ ತೋರುವುದು. ಆದ್ದರಿಂದ ವಿವಕ್ಷಿತವಾದ ಅರ್ಥ ಹೇಳುವರು -

**ಅಂಘ್ರ್ಯೋರ್ಜಾತಯೋಃ ಕೀರ್ತಿ-ತೀರ್ಥಯೋಃ ।**

ಪಾದಗಳಿಂದ ಜನಿಸಿದವುಗಳು ಕೀರ್ತಿ-ತೀರ್ಥಗಳು. ಅವುಗಳಲ್ಲಿ ಎಂದರ್ಥ.

ಇಲ್ಲಿ ಕೀರ್ತಿಶಬ್ದದಿಂದ ಹೇಳಲ್ಪಡುವ ಶಾಸ್ತ್ರಶ್ರವಣಕ್ಕೆ ಪಾದಗಳು ವಿಷಯತಯಾ ಜನಕ ಎಂದು ತಿಳಿಯಬೇಕು. (ವಿಷಯವೆಂದರ್ಥ.)

**ಯಸ್ಮಾದ್ಯಜ್ಜಾಯತೇ ಚಾಂಗಾತ್ ಲೋಕವೇದಾದಿಕಂ ಹರೇಃ ।**
**ತನ್ನಾಮವಾಚ್ಯಮಂಗಂ ತದ್ಯಥಾ ಬ್ರಹ್ಮಾದಿಕಂ ಮುಖಮ್ ॥**

ಎಂದಿರುವುದರಿಂದ ಅಂದರೆ ಶ್ರೀಹರಿಯ ಯಾವ ಅಂಗದಿಂದ ಯಾವುದು ಜನಿಸುವದೋ ಅದನ್ನು ಆ ಅಂಗವೆಂದು ಕರೆಯುವರು. ಉದಾ ಶ್ರೀಹರಿಯ ಮುಖವೆಂಬ ಅಂಗದಿಂದ ಜನಿಸಿದ ಬ್ರಾಹ್ಮಣನನ್ನು ''ಬ್ರಾಹ್ಮಣಃ ಅಸ್ಯ ಮುಖಂ'' ಎಂಬುದಾಗಿ ಮುಖವೆಂಬ ಅಂಗ ಎಂದು ಕರೆದಿದ್ದಾರೆ. ಇಲ್ಲಿ ಅಂಘ್ರಿಶಬ್ದಕ್ಕೆ ಅಂಘ್ರಿಜಾತ ಎಂದರ್ಥ ಅಥವಾ ಜಾತಯೋಃ ಎಂದು ಅಧ್ಯಾಹಾರ ಮಾಡಿಕೊಳ್ಳಬೇಕು ಎಂದು ತಿಳಿಯಬೇಕು.

ಇದುವರೆಗೆ ಜ್ಞಾನಿಗಳಿಗೆ ವಿಶಿಷ್ಟ ಆನಂದಜನಕವಾದುದರಿಂದ ಭಕ್ತರ ಸಂಗ ಅವಶ್ಯಕವೆಂದು ಹೇಳಿ, ಈಗ ಜಿಜ್ಞಾಸುಗಳೂ ಸಹ ಭಕ್ತರ ಸಂಗವನ್ನು ಪ್ರಾರ್ಥಿಸಬೇಕೆಂದು ಹೇಳುವರು -

**ನ ಯಸ್ಯ ಚಿತ್ತಂ ಬಹಿರರ್ಥವಿಭ್ರಮಂ**
**ಮನೋಗುಹಾಯಾಂ ಚ ನಿವಿಷ್ಟಮಾವಿಶೇತ್ ।**
**ಯದ್ಭಕ್ತಿಯೋಗಾನುಗೃಹೀತಮಂಜಸಾ**
**ಮುನಿರ್ವಿಚಷ್ಟೇ ನನು ತತ್ರ ತೇ ಪದಮ್ ॥೫೯॥**

ಯತ್=ಯಾವ ಭಕ್ತರ ಸಂಗದಿಂದ ಭಕ್ತಿಯೋಗಾನುಗೃಹೀತಂ=ಭಕ್ತಿರೂಪ ಉಪಾಯದಿಂದ ಅನುಗೃಹೀತವಾದ ಯಸ್ಯ=ಯಾವ ಅಧಿಕಾರಿಯ ಚಿತ್ತಂ=ಸ್ಮೃತಿಕಾರಣವಾದ ಮನಸ್ಸು ಬಹಿರರ್ಥವಿಭ್ರಮಂ ನ ಭವತಿ=ಶಬ್ದಾದಿವಿಷಯಗಳಲ್ಲಿ ವಿವಿಧಭ್ರಮಣವುಳ್ಳದ್ದಾಗುವುದಿಲ್ಲವೋ, (ವಿರಕ್ತವಾಗುವದೋ ಎಂದು ಭಾವ.) ಗುಹಾಯಾಂ ನಿವಿಷ್ಟಂ=ಹೃದಯದಲ್ಲಿರುವ ಮನಃ=ಮಂತ್ರವಾದುದರಿಂದ ಮನೋನಾಮಕನಾದ ಪರಬ್ರಹ್ಮನಲ್ಲಿ ಆವಿಶೇತ್=ಪ್ರವೇಶಿಸುವುದೋ (ಧ್ಯಾನಪರವಾಗುವುದೋ ಎಂದರ್ಥ.) ಸಃ ಮುನಿಃ=ಆ ಅಧಿಕಾರಿಯು ತತ್ರ=ಹೃದಯದಲ್ಲಿ ತೇ ಪದಂ=ನಿನ್ನ ಸ್ವರೂಪವನ್ನು ಅಂಜಸಾ ವಿಚಷ್ಟೇ=ಚೆನ್ನಾಗಿ ನೋಡುವನು. ನನು=ನಿಶ್ಚಿತವು. ಇಂತಹ ಭಗವತ್ಸಂಗಿಸಂಗವು ನಮಗೆ ಆಗಲಿ ಎಂದು ಭಾವ.

ಸಂಗದಿಂದುಂಟಾದ ಭಕ್ತಿ-ವೈರಾಗ್ಯಗಳಿಂದ ಪ್ರಬಲವಾದ ಮನಸ್ಸಿನಿಂದ ಅಪರೋಕ್ಷಜ್ಞಾನವಾಗುವುದು ಎಂದು ಭಾವ. ॥೫೯॥

**ಯತ್ರೇದಂ ವ್ಯಜ್ಯತೇ ವಿಶ್ವಂ *ವಿಶ್ವಸ್ಮಿನ್ನವಭಾತಿ ಯತ್ ।**
**ನ ತ್ವಂ* ಬ್ರಹ್ಮ ಪರಂಜ್ಯೋತಿರಾಕಾಶಮಿವ* ವಿಸ್ತೃತಮ್ ॥೬೦॥**

*ವಿಶ್ವಸ್ಮಿನ್ ನ ಚ ಭಾತಿ ಎಂದು ಪಾಠಾಂತರ. *ತತ್ತ್ವಂ ಬ್ರಹ್ಮ ಎಂದು ಪಾಠಾಂತರ. *ಆಕಾಶ ಇವ ಎಂದು ಪಾಠಾಂತರ.

ಯತ್ರ=ಯಾವ ಪರಮಾತ್ಮನಲ್ಲಿ ಇದಂ ವಿಶ್ವಂ=ಈ ಪ್ರಪಂಚವು ವ್ಯಜ್ಯತೇ=ಜ್ಞಾನಿಗಳಿಗೆ ವ್ಯಕ್ತವಾಗುವುದೋ ಯತ್=ಯಾವುದು ವಿಶ್ವಸ್ಮಿನ್ (ಸ್ಥಿತಮಪಿ)=ಜಗತ್ತಿನಲ್ಲಿ ಇದ್ದರೂ ನ ಭಾತಿ=ಅಜ್ಞಾನಿಗಳಿಗೆ ಕಾಣುವುದಿಲ್ಲವೋ ತತ್ ತ್ವಂ=ಅಂತಹ ನೀನು ಪರಂಜ್ಯೋತಿಃ=ಸ್ವಪ್ರಕಾಶನು, ಪರಂಬ್ರಹ್ಮ=ಪರಿಪೂರ್ಣನು, ಆಕಾಶಮಿವ ವಿಸ್ತೃತಂ=ಆಕಾಶದಂತೆ ವ್ಯಾಪ್ತನು, ತತ್ತ್ವಂ=ಅಂತಹ ಸರ್ವದಾ ಏಕ ಪ್ರಕಾರವಾದ ನಿನ್ನ ಸ್ವರೂಪವನ್ನು ಚಷ್ಟೇ=ನೋಡುವರು ಎಂದು ಅನ್ವಯ.

**ಭಾಗವತ ತಾತ್ಪರ್ಯ -**

ಈ ಶ್ಲೋಕದಲ್ಲಿ ಜಗತ್ತಿನಲ್ಲಿ ಬ್ರಹ್ಮನು ಇಲ್ಲವೇ ಇಲ್ಲವಾದ್ದರಿಂದ ಕಾಣುವುದಿಲ್ಲ ಎಂಬ ಶಂಕೆಯನ್ನು ಮತ್ತು ಜ್ಞಾನಿಗಳಿಗೆ ತೋರುವುದರಿಂದ 'ತೋರುವುದಿಲ್ಲ'ವೆಂದು ಹೇಳಿದ್ದು ಹೇಗೆ ? ಎಂಬ ಶಂಕೆಯನ್ನು ಎರಡನ್ನೂ ನಿರಾಕರಿಸಲು ಅಪೇಕ್ಷಿತ ಅಧ್ಯಾಹಾರ ಮಾಡಿ ಯೋಜಿಸುವರು -

**ವಿಶ್ವಸ್ಮಿನ್ ಸ್ಥಿತಮಪಿ ನ ಭಾತ್ಯಜ್ಞಾನಾಮ್ ।**

ಜಗತ್ತಿನಲ್ಲಿ ಇದ್ದರೂ ಅಜ್ಞಾನಿಗೆ ಕಾಣುವುದಿಲ್ಲ ಎಂದು ಭಾವ ॥೬೦॥

ಮತ್ತೆ ಭಗವತ್ಸ್ವರೂಪ ತಿಳಿಸುತ್ತ ಈ ವಿಧ ಭಗವಂತನನ್ನು ಅಪರೋಕ್ಷ ಮಾಡಿಕೊಂಡವರು ನಾವೇ ಎಂದು ಹೇಳುವರು -

**ಯೋ ಮಾಯಯೇದಂ ಪುರುರೂಪಯಾಽಸೃಜದ್-**
**ಬಿಭರ್ತಿ ಭೂಯಃ ಕ್ಷಪಯೇದವಿಕ್ರಿಯಃ ।**
**ಯದ್ಭೇದಬುದ್ಧಿಃ ಸದಿವಾಽತ್ಮಸಂಸ್ಥಯಾ**
**ತಮಾತ್ಮತಂತ್ರಂ ಭಗವನ್ ಪ್ರತೀಮಹಿ ॥೬೧॥**

ಯಃ=ಯಾವ ಪರಮಾತ್ಮನು ಆತ್ಮಸಂಸ್ಥಯಾ=ತನ್ನನ್ನು ಆಶ್ರಯಿಸಿದ ಪುರುರೂಪಯಾ= ಶುಕ್ಲ ಲೋಹಿತ, ಕೃಷ್ಣ (ಬಿಳಿ-ಕೆಂಪು-ಕಪ್ಪು) ಹೀಗೆ ಬಹುರೂಪವುಳ್ಳ (ಸತ್ವರಜ-ಸ್ತಮೋಗುಣಾತ್ಮಕವಾದ) ಮಾಯಾಯಾ=ಪ್ರಕೃತಿಯಿಂದ ಇದಂ=ಪ್ರಪಂಚವನ್ನು ಅಸೃಜತ್=ಸೃಷ್ಟಿಸಿದನೋ ಬಿಭರ್ತಿ=ರಕ್ಷಿಸುವನೋ ಭೂಯಃ=ಮತ್ತೆ ಕ್ಷಪಯೇತ್= ನಾಶಗೊಳಿಸುವನೋ, ಆದರೂ ಸ್ವಯಂ ತಾನು ಮಾತ್ರ ಅವಿಕ್ರಿಯಃ=ನಿರ್ವಿಕಾರ-ನಾಗಿರುವನು. ಇದರಿಂದ ಪ್ರಕೃತಿಯೇ ಮಹದಾದಿಕಾರ್ಯರೂಪವಾಗಿ ಪರಿಣಮಿಸುವದು, ಪರಮಾತ್ಮನು ನಿಮಿತ್ತಕಾರಣ ಮಾತ್ರ ಎಂದು ತಿಳಿಯಬೇಕು.

ಯದ್ಭೇದಬುದ್ಧಿಃ=ಶ್ರೀಹರಿಗೆ ಜೀವ-ಜಡಗಳಿಂದ ಭೇದಜ್ಞಾನವೇನಿದೆಯೋ ಅದು ಸದಿವಾ=ಸಮ್ಯಗ್‌ಜ್ಞಾನಿವಿಷಯವಾಗುವದು. ಈ ಜ್ಞಾನ ಸಮ್ಯಗ್‌ಜ್ಞಾನ ಏಕೆ ? ಎಂಬುದಕ್ಕೂ ಸದಿವಾ ಎಂಬುದೇ ಉತ್ತರ. ನಿರ್ದೋಷವಾದ ಈ ಸಮ್ಯಗ್‌ಜ್ಞಾನವು ದಿವಾ ಎನಿಸುವುದು. ಅದರಿಂದ ಸಹಿತವಾದುದು, ಅದಕ್ಕೆ ವಿಷಯವೆಂದರ್ಥ. ನಿರ್ದೋಷವೆಂದೇ ಸಾಕ್ಷಿಸಿದ್ಧವಾಗಿದೆ. ಆದ್ದರಿಂದ ಅಬಾಧ್ಯವೆಂದರ್ಥ. ಆದ್ದರಿಂದ ಭೇದ ಸತ್ಯವೆಂದು ಭಾವ.

ಭಗವನ್=ಪರಮಾತ್ಮನೇ ! ತಂ ಆತ್ಮತಂತ್ರಂ=ಆ ಸ್ವತಂತ್ರನಾದ (ನಿನ್ನನ್ನು) ಪರಮಾತ್ಮನನ್ನು ಪ್ರತೀಮಹಿ=ತಿಳಿಯುವೆನು.

**ಭಾಗವತ ತಾತ್ಪರ್ಯ -**

ಯಾವುದರಿಂದ ಅಜ್ಞಾನ ಬರುವದೋ ಆ ಮಾಯಯಾ=ಮೇಲ್ನೋಟಕ್ಕೆ ಜಗತ್ತನ್ನು ಸದಿವ=ಪರಮಾರ್ಥಸತ್‌ನಂತೆ ಸೃಷ್ಟಿಸಿದನು. ಎಂಬ ವ್ಯಾಖ್ಯಾನ ನಿರಾಕರಿಸಲು ವ್ಯಾಖ್ಯಾನಿಸುವರು -

**ಯಸ್ಯ ಜೀವಾದಿಭ್ಯೋ ಭೇದಬುದ್ಧಿಃ । ಸ ದಿವಾ ಸಮ್ಯಗ್‌ಜ್ಞಾನಂ ಸಮ್ಯಗ್‌ಜ್ಞಾನವಿಷಯಾ ಸತ್ಯೈವೇತ್ಯರ್ಥಃ ।**

**'ರಾತ್ರಿರಜ್ಞಾನಮುದ್ದಿಷ್ಟಂ ಸಮ್ಯಗ್‌ಜ್ಞಾನಂ ದಿವಾ ಸ್ಮೃತಮ್' ಇತಿ ಶಬ್ದನಿರ್ಣಯೇ।**

**'ಜೀವೇಭ್ಯೋ ಜಡತಶ್ಚೈವ ಭೇದಜ್ಞಾನಂ ಹರೇಃ ಸದಾ ।**
**ವಾಸ್ತವಂ ಜ್ಞಾನಮುದ್ದಿಷ್ಟಂ ತೇನ ಮುಕ್ತಿರವಾಪ್ಯತೇ' ಇತಿ ಷಾಡ್ಗುಣ್ಯೇ ॥**

ಶ್ರೀಹರಿಗೆ ಜೀವ-ಜಡಗಳಿಂದ ಭೇದವಿದೆ ಎಂಬ ಜ್ಞಾನವು ಯಥಾರ್ಥವಾಗಿದೆ. (ಸದಿವಾ ಎಂಬುದಕ್ಕೆ ಆವೃತ್ತಿ) ಇದು ನಿರ್ದೋಷವೆಂಬ ಜ್ಞಾನಕ್ಕೆ ವಿಷಯವಾಗಿದೆ. ಆದ್ದರಿಂದ ಸತ್ಯವೇ ಆಗಿದೆ (ಅಬಾಧ್ಯವಾಗಿದೆ) ಅಂದಮೇಲೆ ಭೇದ ಸತ್ಯವಾಗಿದೆ.

ರಾತ್ರಿ ಎಂದರೆ ಅಜ್ಞಾನವು. ದಿವಾ ಎಂದರೆ ಯಥಾರ್ಥಜ್ಞಾನ ಎಂದು ಶಬ್ದನಿರ್ಣಯದಲ್ಲಿದೆ. ಜೀವರಿಂದಲೂ ಜಡಗಳಿಂದಲೂ ಶ್ರೀಹರಿಯು ಭಿನ್ನನೆಂಬ ಜ್ಞಾನವು ವಾಸ್ತವಜ್ಞಾನವು, ಅದರಿಂದ ಮೋಕ್ಷವಾಗುವದು ಎಂದು ಷಾಡ್ಗುಣ್ಯದಲ್ಲಿ ಹೇಳಿದೆ. ।।೬೧।।

ಭಗವಂತನ ಜ್ಞಾನಕ್ಕಾಗಿ ಭಗವತ್ಸಂಗಿಸಂಗವೇ ಪ್ರಾರ್ಥ್ಯವೆಂದಾದರೆ ಕ್ರಿಯಾಕಲಾಪವನ್ನು ಹೇಳುವ ವೇದಗಳು ವ್ಯರ್ಥವೆಂದಾಯಿತಲ್ಲ ? ಎಂದರೆ, ಆ ಕ್ರಿಯೆಗಳಲ್ಲಿಯೂ ಶ್ರೀಹರಿಯೇ ಪೂಜ್ಯನೆಂದು ಯೋಗಿಗಳ ಭಾವನೆ ಎಂದು ಹೇಳುವರು -

**ಕ್ರಿಯಾಕಲಾಪೈರಿದಮೇವ ಯೋಗಿನಃ**
**ಶ್ರದ್ಧಾನ್ವಿತಾಃ ಸಾಧು ಯಜಂತಿ ಸಿದ್ಧಯೇ ।**
**ಭೂತೇಂದ್ರಿಯಾಂತಃಕರಣೋಪಲಕ್ಷಣಂ**
**ವೇದೇ ಚ ತಂತ್ರೇ ಚ ತ ಏವ ಕೋವಿದಾಃ ।।೬೨।।**

**ಭಾಗವತ ತಾತ್ಪರ್ಯ -**

ಭೂತೇಂದ್ರಿಯಾಂತಃಕರಣೈಃ ಉಪಲಕ್ಷ್ಯತೇ ।

ಶ್ರದ್ಧಾನ್ವಿತಾಃ=ಸತ್ತರೂ ಇದನ್ನು ಬಿಡಲಾರೆ ಎಂಬ ಶ್ರದ್ಧೆಯಿಂದ ಕೂಡಿದ ಯೋಗಿನಃ= ಕರ್ಮಯೋಗಿಗಳು ಕ್ರಿಯಾಕಲಾಪೈಃ=ಕ್ರಿಯಾಸಮೂಹಗಳಿಂದ ಇದಂ ಏವ=ಹಿಂದೆ ಹೇಳಿದ

ಲಕ್ಷಣಗಳಿಂದ ಕೂಡಿದ ಬ್ರಹ್ಮನನ್ನೇ ಸಿದ್ಧಯೇ=ಅಪರೋಕ್ಷಜ್ಞಾನಕ್ಕಾಗಿ ಸಾಧು=ಚೆನ್ನಾಗಿ (ಭಕ್ತರ ಸಂಗವಾಗುವಂತೆ) ಯಜಂತಿ=ಪೂಜಿಸುವರು. ತೇ ಏವ=ಅವರೇ (ಹರಿಯನ್ನು ಪೂಜಿಸುವವರೇ) ವೇದೇ=ವೇದದಲ್ಲಿ ಚ=ಮತ್ತು ತಂತ್ರೇ=ಪಂಚರಾತ್ರದಲ್ಲಿ ಕೋವಿದಾಃ=ತಾತ್ಪರ್ಯಾರ್ಥ ತಿಳಿದವರು. ಸರ್ವೋತ್ತಮನಾದ ಬ್ರಹ್ಮನಿರುವನು ಎನ್ನಲು ವೇದಾರ್ಥನಿರ್ಣಾಯಕ ಯುಕ್ತಿ ತಿಳಿಸಲು ಬ್ರಹ್ಮನಿಗೆ ವಿಶೇಷಣ ಇತ್ತಿರುವರು. ಭೂತೇಂದ್ರಿಯಾಂತಃಕರಣೋಪಲಕ್ಷಣಂ=ಇವುಗಳಿಂದ ತಿಳಿಯಲ್ಪಡುವನು ಎಂದರ್ಥ.

ಇದರಿಂದ ''ಈ ದೇಹವಂತೂ ಭೂತ-ಇಂದ್ರಿಯ-ಅಂತಃಕರಣಗಳಿಂದ ಪ್ರವೃತ್ತಿಯುಳ್ಳದ್ದಾಗಿ ಇದೆ. ಈ ದೇಹದ ವಿವಿಧಪ್ರವೃತ್ತಿಯು ತಾನಾಗಿಯೇ ಆಗುವುದಿಲ್ಲ, ಕಾರಣ ದೇಹವು ಅಚೇತನವಾಗಿದೆ. ಇನ್ನು ಬೇರೆ ಚೇತನರಿಂದಲೂ ಅಲ್ಲ, ಕಾರಣ ಅವರು ಅಸ್ವತಂತ್ರರಾಗಿರುವರು. ಆದ್ದರಿಂದ ದೇಹಾದಿನಿಯಾಮಕನಾದ ಸ್ವತಂತ್ರನಾದ ಒಬ್ಬ ಚೇತನನಿದ್ದಾನೆ. ಅವನೇ ಶ್ರೀಹರಿ'' ಎಂದು ಯುಕ್ತಿ ತಿಳಿಸಿದಂತಾಯಿತು. ॥೬೨॥

'ಯೋ ಮಾಯಯಾ' ಎಂಬ ೬೧ ನೇ ಶ್ಲೋಕದಲ್ಲಿ ಹೇಳಿದ ಸೃಷ್ಟಿ-ಸ್ಥಿತಿ-ಸಂಹಾರ ಕರ್ತೃತ್ವಗಳನ್ನು 'ತ್ವಮೇಕ ಆದ್ಯಃ' ಮುಂತಾದ ಮೂರು ಶ್ಲೋಕಗಳಿಂದ ವಿವರಿಸುವರು -

**ತ್ವಮೇಕ ಆದ್ಯಃ ಪುರುಷಃ ಸುಪ್ತಶಕ್ತಿ-**
**ಸ್ತಯಾ ರಜಃ ಸತ್ವತಮೋ ವಿಭಿದ್ಯತೇ ।**
**ಮಹಾನಹಂ ಖಂ ಮರುದಗ್ನಿವಾರ್ಧರಾಃ**
**ಸುರರ್ಷಯೋ ಭೂತಗಣಾ ಇದಂ ಯತಃ ॥೬೩॥**

ಸುಪ್ತಶಕ್ತಿಃ=ಜಗದ್ವ್ಯಾಪಾರವನ್ನು ಬಿಟ್ಟ ಪರಮಾತ್ಮನಲ್ಲಿ ವಿಶೇಷರತಳಾದ, ಶಕ್ಯಳಾದುದರಿಂದ ಶಕ್ತಿಶಬ್ದವಾಚ್ಯಳಾದ ಲಕ್ಷ್ಮೀದೇವಿ, ಜಗದ್ವ್ಯಾಪಾರವಿಲ್ಲದ ಜಡಪ್ರಕೃತಿ-ಯುಳ್ಳವನಾಗಿ ತ್ವಂ=ನೀನು ಏಕಃ=ಪ್ರಧಾನನು ಒಬ್ಬನೇ ಪುರುಷಃ=ಕರ್ತೃವಾದವನು. ಆದ್ಯಃ= ಪ್ರಪಂಚದ ಉತ್ಪತ್ತಿಯ ಮೊದಲು ಇದ್ದವನು. ತಯಾ=ಪ್ರಲಯಕಾಲದಲ್ಲಿ ಹರಿಯಲ್ಲಿ ರತಳಾದ ಸೃಷ್ಟಿಕಾಲದಲ್ಲಿ ಶ್ರೀಹರಿಯಿಂದ ಸೃಷ್ಟೀಚ್ಛೆಯನ್ನು ಪಡೆದ ಲಕ್ಷ್ಮೀದೇವಿಯಿಂದ ಹಾಗೂ ಪ್ರಬುದ್ಧವಾದ ಪರಿಣಾಮಶಕ್ತಿಯುಳ್ಳ ಜಡಪ್ರಕೃತಿಯಿಂದಲೂ (ಸಾಮ್ಯಾವಸ್ಥೆಯಲ್ಲಿದ್ದು ವಿಷಮಾವಸ್ಥೆ ಪಡೆದ) ರಜಃಸತ್ವತಮಃ ವಿಭಿದ್ಯತೇ=ರಜೋಗುಣ ಸತ್ವಗುಣ ತಮೋಗುಣಗಳು ಜನಿಸುವವು, ಇವುಗಳ ಅಭಿಮಾನಿನಿಯಾದ ರಮೆಯ ಭೂ-ಶ್ರೀ-ದುರ್ಗಾರೂಪಗಳು ವ್ಯಕ್ತವಾಗುವವು. ಸೃಷ್ಟ್ಯಾದಿಕ್ರಮಾನುಸಾರ ರಜೋಗುಣ ಮುಂಚೆ ಹೇಳಿರುವರು. ರಜೋಗುಣದಿಂದ ಸೃಷ್ಟಿ, ಸತ್ವಗುಣದಿಂದ ಸ್ಥಿತಿ, ತಮೋಗುಣದಿಂದ ಸಂಹಾರ ಮಾಡುವನು.

ಯತಃ=ಯಾವ ಗುಣತ್ರಯಗಳಿಂದ ಮಹಾನ್=ಗುಣವೈಷಮ್ಯನಾಮಕವಾದ ಸತ್ವಪ್ರಧಾನವಾದ ಮಹತತ್ತ್ವವು, ಅದಕ್ಕೆ ಅಭಿಮಾನಿಗಳಾದ ಬ್ರಹ್ಮದೇವರು ಜನಿಸಿದರು. ಅದರಿಂದ ಅಹಂ=ಅಹಂಕಾರವು, ಅದಕ್ಕೆ ಅಭಿಮಾನಿಗಳಾದ ರುದ್ರದೇವರು ಜನಿಸಿದರು. ತಾಮಸ ಅಹಂಕಾರದಿಂದ ಖಂ=ಆಕಾಶವು, ಮರುದಗ್ನಿವಾರ್ಧರಾಃ ಮರುತ್=ವಾಯು ಅಗ್ನಿ=ಅಗ್ನಿಯು ವಾರ್=ನೀರು ಧರಾಃ=ಭೂಮಿಯು, ತೈಜಸ ಅಹಂಕಾರದಿಂದ ಋಷಯಃ=ಜ್ಞಾನಕಾರಣವಾದ ಇಂದ್ರಿಯಗಳು, ವೈಕಾರಿಕ ಅಹಂಕಾರದಿಂದ ದೇವತೆಗಳ ದೇಹ ಜನಿಸಿದವು. ಪಂಚಮಹಾಭೂತಗಳಿಂದ ಮೇಲೆ ಹೇಳಿದ ಆಕಾಶಾದಿಗಳಿಂದ ಭೂತಗಣಾಃ=ಸುರನರತಿರ್ಯಗಾದಿ ಪ್ರಾಣಿಗಳು ಇದಂ=ಚರಾಚರ ಪ್ರಪಂಚವು ಜನಿಸಿತು. ಆ ಗುಣತ್ರಯಯ ಜನಿಸಿತು ಎಂದು ಅನ್ವಯ.

ಪ್ರಲಯಕಾಲದಲ್ಲಿ ಲಕ್ಷ್ಮೀದೇವಿ-ಜಡಪ್ರಕೃತಿಗಳೂ ಇರುವುದರಿಂದ ನೀನೊಬ್ಬನೇ ಇದ್ದಿ ಎಂದು ಈ ಶ್ಲೋಕದಲ್ಲಿ ಹೇಳಿದುದು ಹೇಗೆ ? ಎನ್ನುವುದಕ್ಕೆ ಉತ್ತರ ''ಸುಪ್ತಶಕ್ತಿಃ'' ಎನ್ನುವುದು. ಅವುಗಳಿದ್ದರೂ ಕಾರ್ಯ ಮಾಡದಿರುವುದರಿಂದ ಇಲ್ಲದಿದ್ದಂತೆಯೇ ಎಂದು ಭಾವ.

**ಭಾಗವತ ತಾತ್ಪರ್ಯ -**

ಇಲ್ಲಿ ಶಕ್ತಿಶಬ್ದವಾಚ್ಯಳಾದ ಲಕ್ಷ್ಮಿಗಾಗಲೀ, ಜಡಪ್ರಕೃತಿಗಾಗಲೀ ಪ್ರಸಿದ್ಧನಿದ್ರೆ ಇಲ್ಲದ ಕಾರಣ ಸುಪ್ತಶಬ್ದಕ್ಕೆ ವಿವಕ್ಷಿತವಾದ ಅರ್ಥ ಹೇಳುವರು -

**ಸುಪ್ತಶಕ್ತಿಃ ಸ್ವಾತ್ಮನ್ಯೇವಾಪ್ತಶಕ್ತಿಃ ।**

**''ಪ್ರಕೃತೇಃ ಸ್ವಾಪ ಉದ್ದಿಷ್ಟೋ ಹರ್ಯನ್ಯಸ್ಯ ತ್ವದರ್ಶನಮ್ ।**
**ವಿಶೇಷೇಣ ಹರೌ ಚಾಪಿ ರತಿರ್ಜ್ಞಾನಾತ್ಮಿಕಾ ಯತಃ'' ಇತಿ ಸತ್ಯಸಂಹಿತಾಯಾಂ ॥**

ಸು=ಜಗತ್ತಿನ ಸೃಷ್ಟ್ಯಾದಿ ವ್ಯಾಪಾರಗಳನ್ನು ಬಿಟ್ಟು ಆತ್ಮನ್ಯೇವ=ಪರಮಾತ್ಮನಲ್ಲಿಯೇ ಪ್ರ-ಆಪ್ತ=ರತಳಾದ ಶಕ್ತಿ ಎಂಬ ಲಕ್ಷ್ಮೀದೇವಿಯುಳ್ಳವನು. ಪ್ರಲಯಕಾಲದಲ್ಲಿ ಇತರ ವಸ್ತುಗಳು ಇಲ್ಲದಿರುವುದರಿಂದ ಶ್ರೀಹರಿಯಿಂದ ಭಿನ್ನವಾದ ವಸ್ತುಗಳನ್ನು ನೋಡದಿರುವುದು ಮತ್ತು ಸೃಷ್ಟ್ಯಾದಿ ವ್ಯಾಪಾರಗಳಿಲ್ಲದೇ ವಿಶೇಷವಾಗಿ ಶ್ರೀಹರಿಯಲ್ಲಿಯೇ ಆಸಕ್ತಳಾಗಿರುವುದು ಅವಳಿಗೆ ನಿದ್ರೆಯೆನಿಸುವುದು. ಏಕೆಂದರೆ ಅವಳು ಜ್ಞಾನಾತ್ಮಕದೇಹ ಉಳ್ಳವಳು. ಕಾರಣ ಪ್ರಸಿದ್ಧ ಅಜ್ಞಾನಕಾರ್ಯವಾದ ನಿದ್ರೆಯು ಅವಳಿಗೆ ಅಸಂಭಾವಿತ. ॥೬೩॥

ಸ್ಥಿತಿಕರ್ತೃತ್ವವನ್ನು ವಿವರಿಸುವರು -

**ಸೃಷ್ಟಂ ಸ್ವಶಕ್ತ್ಯೇದಮನುಪ್ರವಿಶ್ಯ**
**ಚತುರ್ವಿಧಂ ಪುರಮಾತ್ಮಾಂಶಕೇನ ।**
**ಅಥೋ ವಿದುಸ್ತ್ವಾಂ ಪುರುಷಂ ಸಂತಮತ್ರ**
**ಭುಂಕ್ತೇ ಹೃಷೀಕೈರ್ಮಧು ಸಾರಘಂ ಯತಃ ॥೬೪॥**

ಸ್ವಶಕ್ತ್ಯಾ=ತನ್ನ ಸ್ವರೂಪಶಕ್ತಿಗೆ ಅಧೀನವಾದ ಲಕ್ಷ್ಮೀದೇವಿ ಮತ್ತು ಜಡಪ್ರಕೃತಿಯಿಂದ ಸೃಷ್ಟಂ=ನಿರ್ಮಿಸಲ್ಪಟ್ಟ ಇದಂ=ಈ ಪ್ರಪಂಚವನ್ನು ಚತುರ್ವಿಧಂ=ಜರಾಯುಜ, ಅಂಡಜ, ಸ್ವೇದಜ, ಉದ್ಭಿಜ್ಜ ಎಂದು ನಾಲ್ಕುವಿಧವಾದ ಪುರಂ=ದೇಹವನ್ನು ಆತ್ಮಾಂಶಕೇನ=ತನ್ನ ಸ್ವರೂಪಾಂಶದಿಂದ ಅನುಪ್ರವಿಶ್ಯ=ಸ್ಥಿತಿಗಾಗಿ ಪ್ರವೇಶ ಮಾಡಿ ಅತ್ರ=ಶರೀರಗಳಲ್ಲಿ ಹೃಷೀಕೈಃ=ಜೀವರ ಇಂದ್ರಿಯಗಳಲ್ಲಿರುವ ನಿನ್ನ ಇಂದ್ರಿಯಗಳಿಂದ ಸಾರಘಂ=ವಿಷಯ-ಗಳಲ್ಲಿರುವ ಕೇವಲ ಸಾರವಾದ ಮಧು=ಸುಖವನ್ನು ಯತಃ ಭುಂಕ್ತೇ=ಯಾವ ಕಾರಣ ಅನುಭವಿಸುವಿಯೋ ಅಥೋ=ಆದ್ದರಿಂದ ತ್ವಾಂ=ನಿನ್ನನ್ನು ಪುರುಷಂ=ಪುರುಷನೆಂದು ಸಂತಂ=ನಿರ್ದೋಷನೆಂದೂ ವಿದುಃ=ತಿಳಿಯುವರು. (ತಿಳಿದಿರುವರು.)

**ಭಾಗವತ ತಾತ್ಪರ್ಯ -**

ಇಲ್ಲಿ ಸಾರಘಪದಕ್ಕೆ ಪ್ರಕೃತೋಪಯುಕ್ತ ಅರ್ಥ ಹೇಳುವರು -

**'ಅವಧಾರಣೇ ಘಶಬ್ದಃ ಸ್ಯಾತ್ಸಾರಮಾತ್ರಂ ತು ಸಾರಘಂ' ಇತಿ ಶಬ್ದನಿರ್ಣಯೇ ।**

ಅವಧಾರಣ ಎಂಬರ್ಥದಲ್ಲಿ ಘಶಬ್ದವಿದೆ. ಆದಕಾರಣ ವಿಷಯಗಳಲ್ಲಿರುವ ಸುಖ ಮಾತ್ರ ಸಾರಘವೆನಿಸುವುದು ಎಂದು ಶಬ್ದನಿರ್ಣಯದಲ್ಲಿದೆ ಎಂದು ಭಾವ. ಅಂತು ಪುರವೆನಿಸುವ ಶರೀರಗಳಲ್ಲಿ ಪ್ರವೇಶಿಸಿದ್ದರಿಂದ ಪುರುಷ ಎಂದು, ಸಾರಮಾತ್ರಭೋಕ್ತೃ-ವಾದುದರಿಂದ ಸಂತ=ನಿರ್ದೋಷನೆಂದು ತಿಳಿಯುವರು ಎಂದು ಭಾವ. ಅಥವಾ ಶ್ರೀಹರಿಯು ಶರೀರಪ್ರವೇಶ ಮಾಡಿರುವನು ಎನ್ನಲು ಪುರುಷಶಬ್ದವಾಚ್ಯನಾಗಿರುವುದೇ ಪ್ರಮಾಣ ಎಂದು ತಿಳಿಸಲು ಪುರುಷ ಎಂದಿರುವರು. ಶರೀರದಲ್ಲಿದ್ದರೂ ಅದರಿಂದ ದುಃಖಾದಿಗಳಿಲ್ಲವೆಂದು ತಿಳಿಸಲು ''ಯತಃ ಮಧು ಸಾರಘಂ ಭುಂಕ್ತೇ ಅಥೋ ಸಂತಂ ವಿದುಃ'' ಎಂದಿರುವರು ಎಂದು ತಿಳಿಯಬೇಕು. ॥೬೪॥

ಸಂಹಾರವನ್ನು ವಿವರಿಸುವರು -

**ಸ ಏಷ ಲೋಕಾನತಿಚಂಡವೇಗೋ ವಿಕರ್ಷಸಿ ತ್ವಂ ಖಲು ಕಾಲಯಾನಃ ।**
**ಭೂತಾನಿ ಭೂತೈರನುಮೇಯತತ್ತ್ವೋ ನಾವಲೀರ್ವಾಯುರಿವಾವಿಷಹ್ಯಃ॥೬೫॥**

ಸಃ=ಯಾವನು ತನ್ನ ಶಕ್ತಿಯಿಂದ ಜಗತ್ತನ್ನು ಸೃಷ್ಟಿಮಾಡಿ ಪ್ರವೇಶ ಮಾಡಿದನೋ ಅಂತಹ ಏಷಃ=ಇವನು ಅತಿಚಂಡವೇಗಃ=ಅಪರಿಹಾರ್ಯ ವೇಗವುಳ್ಳವನು, ಆದ್ದರಿಂದ ಅವಿಷಹ್ಯಃ=ಅಪರಿಹಾರ್ಯನು, ಅನುಮೇಯತತ್ವಃ=ಅನುಮಾನದಿಂದ ತಿಳಿಯಬೇಕಾದ ಸ್ವರೂಪನು ಭೂತ್ಯೈಃ=ರುದ್ರ,ಯಮಾದಿಗಳಿಂದ ಭೂತಾನಿ=ಪ್ರಾಣಿಗಳನ್ನು ಘನಾವಲೀಃ= ಮೋಡಗಳ ಸಾಲುಗಳನ್ನು ವಾಯುರಿವ=ಗಾಳಿಯು ನಾಶ ಮಾಡುವಂತೆ ಕಾಲಯಾನಃ=ನಾಶ ಮಾಡುವವನಾಗಿ ಲೋಕಾನ್=ಭೂರಾದಿಲೋಕಗಳನ್ನು ವಿಕರ್ಷಸಿ=ಸಂಹರಿಸುವಿ. ಖಲು=ನಿಶ್ಚಯ. ।।೬೫।।

ಕೇವಲ ಪ್ರಲಯಕಾಲದಲ್ಲಿ ಮಾತ್ರವಲ್ಲ, ಈಗಲೂ ನೀನೇ ಸಂಹಾರಕನೆಂದು ಹೇಳುವರು -

**ಪ್ರಮತ್ತಮುಚ್ಚೈರಿತಿಕೃತ್ಯಚಿಂತಯಾ ಪ್ರವೃದ್ಧಲೋಭಂ ವಿಷಯೇಷು ಲಾಲಸಮ್ ।**
**ತ್ವಮಪ್ರಮತ್ತಃ ಸಹಸಾಽಭಿಪದ್ಯತೇ ಕ್ಷುಲ್ಲೇಲಿಹಾನೋಽಹಿರಿವಾಖುಮಂತಕಃ ।।**

ಇತಿಕೃತ್ಯಚಿಂತಂಯಾ=ಇದನ್ನು ಹೀಗೆ ಮಾಡಬೇಕು ಅದನ್ನು ಹಾಗೆ ಮಾಡಬೇಕು ಮುಂತಾದ ಆಲೋಚನೆಗಳಿಂದ ಉಚ್ಚೈಃ ಪ್ರಮತ್ತಂ=ಶ್ರೀಹರಿಯನ್ನು ಮರೆತವನು, ಆದ್ದರಿಂದಲೇ ವಿಷಯೇಷು ಲಾಲಸಂ=ವಿಷಯಗಳಲ್ಲಿ ಅತಿಕಾಮುಕನಾದ, ಪ್ರವೃದ್ಧಲೋಭಂ =ಪ್ರಾಪ್ತವಾದ ವಿಷಯಗಳಲ್ಲಿ ಅತಿಯಾದ ಲೋಭವುಳ್ಳವನನ್ನು ಕ್ಷುಲ್ಲೇಲಿಹಾನಃ= ಹಸಿವೆಯಿಂದಾಗಿ ನಾಲಿಗೆಯಿಂದ ತುಟಿಯನ್ನು ಸ್ಪರ್ಶಿಸುವ (ತುಟಿಯಮೇಲೆ ನಾಲಿಗೆಯಾಡಿಸುವ) ಅಹಿಃ=ಹಾವು ಆಖುಂ ಇವ=ಇಲಿಯನ್ನು ಆಕ್ರಮಿಸುವಂತೆ ಅಂತಕಃ=ಸಂಹಾರಕನಾದ ಅಪ್ರಮತ್ತಃ=ಪ್ರಮಾದರಹಿತನಾದ ತ್ವಂ=ನೀನು ಅಭಿಪದ್ಯಸೇ= ಆಕ್ರಮಣ ಮಾಡುವಿ. ।।೬೬।।

ಭಗವಂತನ ಸ್ವರೂಪವನ್ನು ನಿರೂಪಿಸಿ ಅವನ ಪೂಜಾದಿಗಳನ್ನು ಸರ್ವಥಾ ಬಿಡಬಾರದು ಎಂದು ತಿಳಿಸಲು ಹಿಂದಿನ ವೃತ್ತಾಂತವನ್ನು (ಪುರಾಕಲ್ಪರೂಪ ಅರ್ಥವಾದವನ್ನು) ಹೇಳುವರು -

**ಕಸ್ತ್ವತ್ಪದಾಬ್ಜಂ ವಿಜಹಾತಿ ಪಂಡಿತೋ ಯತ್ತೇ ಪುಮಾನಪ್ಯಯಮಬ್ಜಕೇತನಃ ।**
**ವಿಶಂಕಯಾಽಸ್ಮದ್ಗುರುರರ್ಚತಿ ಸ್ಮ ಯದ್ ವಿನೋಪಪತ್ತಿಂ ಮನವಶ್ಚತುರ್ದಶ ।।**

ಯತ್=ಯಾವ ಕಾರಣ ಚತುರ್ದಶ ಮನವಃ=ಹದಿನಾಲ್ಕು ಮನುಗಳು ಉಪಪತ್ತಿಂ ವಿನಾ=ನಾನು ಮಾಡುವ ಅರ್ಚನಾದಿಗಳಿಂದ ಈ ವಿಧ ಫಲ ಉಂಟು (ಶ್ರೀಹರಿಪ್ರೀತಿ ಬಿಟ್ಟು) ಆ ಫಲ ನಮಗೆ ಬರಲಿ ಎಂಬ ಅಪೇಕ್ಷೆಯಿಲ್ಲದೇ, ಸ್ವಾಭಾವಿಕವಾಗಿಯೇ ಅರ್ಚತಿ=ಪೂಜಿಸುವರು.

ಯತ್=ಯಾವ ಕಾರಣ ಅಸ್ಮದ್ಗುರುಃ=ನನ್ನ ಜನಕರು, ಜ್ಞಾನೋಪದೇಶಕರೂ ಆದ್ದರಿಂದ ಗುರುಗಳಾದ ಅಯಂ=ಈ ಅಬ್ಜಕೇತನಃ=ಕಮಲಾಸನನಾದ ಬ್ರಹ್ಮದೇವರು ವಿಶಂಕಯಾ=ಶಂಕೆ ಇಲ್ಲದೇ ದೃಢವಿಶ್ವಾಸದಿಂದ ಅರ್ಚತಿ=ಪೂಜಿಸವರೋ ತತ್=ಆದ್ದರಿಂದ ಕಃ ಪಂಡಿತಃ ಪುಮಾನ್=ತತ್ವವನ್ನು ತಿಳಿದ ಯಾವ ಮನುಷ್ಯನು ತೇ=ಪರಮೋಪಕಾರಕನಾದ ನಿನ್ನನ್ನು ವಿಜಹಾತಿ=ಬಿಡುವನು ? ಯಾರೂ ಬಿಡಲಾರರು ಎಂದು ಭಾವ.

**ಭಾಗವತ ತಾತ್ಪರ್ಯ-**

ಈ ಶ್ಲೋಕದಲ್ಲಿಯ 'ಉಪಪತ್ತಿಂ ವಿನಾ' ಎಂಬುದರ ಪ್ರಕೃತ ಸಂಗತ ಅರ್ಥ ತಿಳಿಸುವರು -

**ಅಸ್ಮಾದೇತದ್ಭವತೀತ್ಯುಪಪತ್ತ್ಯಪೇಕ್ಷಾಂ ವಿನಾಪಿ ಸ್ವಭಾವತ ಏವ ॥**

'ಉಪಪತ್ತಿಂ ವಿನಾ' ಎಂದರೆ - ನಾನು ಮಾಡುವ ಶ್ರೀಹರಿಯ ಪೂಜಾದಿಗಳಿಂದ ಫಲ ಬರುವುದೆಂಬ ಅಪೇಕ್ಷೆಯಿಲ್ಲದೇ ಸ್ವಾಭಾವಿಕವಾಗಿಯೇ ಎಂದರ್ಥ. ॥೬೭॥

ಪರಮೋಪಕಾರಿಯಾದ, ಹೃದಯದಲ್ಲಿಯೇ ಇರುವ ಭಗವಂತನ ಜ್ಞಾನ ಎಲ್ಲರಿಗೂ ಸುಲಭ ಏಕಲ್ಲ ? ಎಂಬುದನ್ನು ಉಪಪಾದಿಸುವರು -

**ಯತ್ ಸ್ವಪ್ನೋಽಹರಹರ್ಮುಕ್ತಕ್ಲೇಶಃ ಶೇತೇಽಮೃತಾಂಬುಧೌ ।**
**ತಾವದ್ ವೇದಾಥ ತತ್ ತೇಂಽಘ್ರಿಂ ಜನೋ ನು ಸ್ಮರತೇ ಚ ತತ್ ॥೬೮॥**

ಜನಃ=(ಜನ್ಯತೇ ಇತಿ ಜನಃ) ಸಂಸಾರಿಯು ಅಹರಹಃ=ಪ್ರತಿದಿನವೂ ಯತ್ಸ್ಪೃಷ್ಟಃ= ಯಾವ ನಿನ್ನ ಪಾದಗಳಿಂದ ಸ್ಪರ್ಶಿಸಲ್ಪಟ್ಟು (ಪ್ರಾಜ್ಞನಿಂದ ಆಲಿಂಗಿತನಾಗಿ) ಯಾವತ್= ಯಾವಾಗ ಗಾಢನಿದ್ರೆಯಲ್ಲಿ ಮುಕ್ತಕ್ಲೇಶಃ ಸನ್=ಎಲ್ಲ ದುಃಖ ಇಲ್ಲದವನಾಗಿ ಅಮೃತಾಂಬುಧೌ ಶೇತೇ=ಸ್ವರೂಪಾನಂದವನ್ನು ಅನುಭವಿಸುವನೋ ತಾವತ್=ಆಗ ತೇ=ಈ ರೀತಿ ಉಕಾರಕನಾದ ನಿನ್ನ ಅಘ್ರಿಂ=ಪಾದವನ್ನು ಪ್ರಾಜ್ಞನಾಮಕಸ್ವರೂಪವನ್ನು ವೇದ ಕಿಂ=ತಿಳಿಯುವನೇನು ?

ಇಲ್ಲ, ಆಗ ಜ್ಞಾನಪ್ರಸಕ್ತಿಯೇ ಇಲ್ಲದ ಕಾರಣ ತಿಳಿದಿಲ್ಲ ಎನ್ನುವುದಾದರೆ ಉತ್ತರಿಸುವರು-

ಅಥ=ಎದ್ದಮೇಲೆ ತತ್ ಸ್ಮರತೇ ಚ=ಸ್ವರೂಪಸುಖವನ್ನು ಸ್ಮರಿಸುವನು. 'ಏತಾವಂತಂ ಕಾಲಂ ಸುಖಮಹಮಸ್ವಾಪ್ಸಂ' (ಇಲ್ಲಿಯವರೆಗೆ ಸುಖವಾಗಿ ಮಲಗಿದ್ದೆ) ಎಂದು ಅನುಭವವಿದೆಯಷ್ಟೇ ? ತಥಾಪಿ=ಆದರೂ ತೇ ಅಂಘ್ರಿಂ ನ ವೇತ್ತಿ=ಆಗಲೂ ನಿನ್ನನ್ನು ತಿಳಿಯುವುದಿಲ್ಲ, ಆಗ ಸಾಕ್ಷಿಗೆ ಸ್ವರೂಪಸುಖಾನುಭವ ಪ್ರಸಕ್ತಿ ಇದೆ. ಆದ್ದರಿಂದ ನಿನ್ನ ಜ್ಞಾನ ದುರ್ಲಭವೆಂದು ಭಾವ.

**ಭಾಗವತ ತಾತ್ಪರ್ಯ -**

ಈ ಶ್ಲೋಕದಲ್ಲಿ ಅಹರಹಃ ಮುಕ್ತಕ್ಲೇಶಃ ಎಂದು ಕ್ಲೇಶತ್ಯಾಗ ಹೇಳಿರುವುದು ಜಾಗ್ರದವಸ್ಥೆಯಲ್ಲಿ ಅಸಂಭವಿತವಾಗಿದೆ. ಆ ಕಾರಣ ವಿವಕ್ಷಿತ ತಾತ್ಪರ್ಯ ಹೇಳುವರು-

**ಅಹರಹಃ ಕ್ಲೇಶಮೋಕ್ಷಃ ಸುಪ್ತೌ । ತಾವದ್ವೇದೇತ್ಯಾಕ್ಷೇಪೋ ದೌರ್ಲಭ್ಯಜ್ಞಾಪನಾರ್ಥಮ್ ।**

ಪ್ರತಿನಿತ್ಯವೂ ಸುಷುಪ್ತಿಕಾಲದಲ್ಲಿ ಪ್ರಾಜ್ಞರೂಪಿ ಪರಮಾತ್ಮನ ಆಲಿಂಗನದಿಂದ ಕ್ಲೇಶಪರಿಹಾರವಾಗುವುದು. ಆದರೂ ಆ ಕಾಲದಲ್ಲಿ ಶ್ರೀಹರಿಯ ಜ್ಞಾನವು ಇರುವುದಿಲ್ಲ. ಆದ್ದರಿಂದ ಶ್ರೀಹರಿಯ ಜ್ಞಾನವು ದುರ್ಲಭವೆಂದು ತಿಳಿಸಲು ''ತಾವದ್ವೇದ ಕಿಂ'' ಎಂದು ಆಕ್ಷೇಪಪರವಾಗಿ ಮಾಡಿ ವ್ಯಾಖ್ಯಾನಿಸಿರುವರು. (ತಿಳಿದಿರುವನೇನು ? ಇಲ್ಲವೆಂದು ಭಾವ.)।।೬೮।।

ಸಂಸಾರಿಗಳಿಗೆ ಭಗವಂತನ ಜ್ಞಾನ ದುರ್ಲಭವೆಂದು ಹೇಳಿ, ಈಗ ಎಲ್ಲವೂ ನಶ್ವರವೆಂದು ತಿಳಿದ ಜ್ಞಾನಿಗಳಿಗೆ ಬ್ರಹ್ಮನು ಸುಲಭನೆಂದು ಹೇಳುವರು -

**ಅಥ ತ್ವಮಸಿ ನೋ ಬ್ರಹ್ಮನ್ ಪರಮಾತ್ಮನ್ ವಿಪಶ್ಚಿತಾಮ್ ।**
**ವಿಶ್ವಂ ರುದ್ರಭಯಧ್ವಸ್ತಮಕುತಶ್ಚಿದ್ಭಯಾ ಗತಿಃ ।।೬೯।।**

ಹೇ ಬ್ರಹ್ಮನ್ ಪರಮಾತ್ಮನ್=ಪರಮಾತ್ಮನೇ ! ವಿಶ್ವಂ=ಪ್ರಪಂಚವು ರುದ್ರಭಯಧ್ವಸ್ತಂ= ರುದ್ರದೇವರ ಭಯದಿಂದ ನಷ್ಟವಾದುದು. ಅಥ=ಆದ್ದರಿಂದ ಸಂಸಾರಿಗಳಿಗೆ ಪರಮಾತ್ಮನ ಜ್ಞಾನ ದುರ್ಲಭವಾದರೂ, ವಿಪಶ್ಚಿತಾಂ=(ವಿಶ್ವಂ ನಶ್ವರಂ) ಜಗತ್ತು ಅನಿತ್ಯವೆಂದು ತಿಳಿದ, ಜ್ಞಾನಿಗಳಾದ ನಃ=ನಮಗೆ ಅಕುತಶ್ಚಿದ್ ಭಯಾ ಗತಿಃ ಅಸಿ=ಯಾರಿಂದಲೂ ಭಯವಿಲ್ಲದ ಗಮ್ಯನಾಗಿರುವಿ.

'ಬ್ರಹ್ಮನ್' 'ಪರಮಾತ್ಮನ್' ಎಂದು ಎರಡು ಸಂಬೋಧನಗಳು ಹೊರಗಿನ ಒಳಗಿನ ಎರಡು ರೂಪಗಳ ಅಭಿಪ್ರಾಯದಿಂದ ಎಂದು ತಿಳಿಯಬೇಕು. ।।೬೯।।

**ಇದಂ ಜಪತ ಭದ್ರಂ ವೋ ವಿಸ್ರಭ್ಯ ನೃಪನಂದನಾಃ ।**
**ಸ್ವಧರ್ಮಮನುತಿಷ್ಠಂತೋ ಭಗವತ್ಯರ್ಪಿತಾಶಯಾಃ ।।೭೦।।**

ಹೇ ನೃಪನಂದನಾಃ=ರಾಜಕುಮಾರರೇ ! ಸ್ವಧರ್ಮಂ=ನಿಮಗೆ ವಿಹಿತವಾದ ಧರ್ಮವನ್ನು ಅನುತಿಷ್ಠಂತಃ=ಆಚರಿಸುತ್ತ ಭಗವತಿ=ಪರಮಾತ್ಮನಲ್ಲಿ ಅರ್ಪಿತಾಶಯಾಃ= ಮನಸ್ಸನ್ನು ಸಮರ್ಪಿಸಿದವರಾಗಿ ವಿಸ್ರಭ್ಯ=ವಿಶ್ವಾಸ ಮಾಡಿ ಇದಂ=ಸರ್ವಸ್ಮೈ ಆತ್ಮನೇ ಎಂದಾರಂಭಿಸಿ ವಾಚೋ ವಿಭೂತಯೇ ಎನ್ನುವವರೆಗೆ ಹೇಳಿದ್ದನ್ನು ಜಪತ=ಜಪಿಸಿರಿ. ವಃ=ನಿಮಗೆ ಭದ್ರಂ ಅಸ್ತು=ಕಲ್ಯಾಣವಾಗಲಿ. ।।೭೦।।

**ತಮೇವಾತ್ಮಾನಮಾತ್ಮಸ್ಥಂ ಸರ್ವಭೂತೇಷ್ವವಸ್ಥಿತಮ್ ।**
**ಪೂಜಯಧ್ವಂ ಗೃಣಂತಶ್ಚ ಧ್ಯಾಯಂತಶ್ಚಾಸಕೃದ್ಧರಿಮ್ ॥೭೦॥**

ತಂ ಏವ=ಸ್ತೋತ್ರಪ್ರತಿಪಾದ್ಯನಾದ, ಆತ್ಮಸ್ಥಂ=ನಿಮ್ಮಲ್ಲಿರುವ, ಸರ್ವಭೂತೇಷು ಅವಸ್ಥಿತಂ=ಎಲ್ಲ ಪ್ರಾಣಿಗಳಲ್ಲಿರುವ, ಆತ್ಮಾನಂ=ಸ್ವಾಮಿಯಾದ, ಹರಿಂ=ಶ್ರೀಹರಿಯನ್ನು ಅಸಕೃತ್=ಪುನಃ ಪುನಃ ಧ್ಯಾಯಂತಃ=ಧ್ಯಾನ ಮಾಡುವವರಾಗಿ ಚ=ಮತ್ತು ಗೃಣಂತಃ=ಸ್ತೋತ್ರ ಮಾಡುತ್ತ ಪೂಜಯಧ್ವಂ=ಪೂಜಿಸಿರಿ. ॥೭೦॥

**ಯೋಗಾದೇಶಮುಪಾಸಾದ್ಯ ಧಾರಯಂತೋ ಮುನಿವ್ರತಾಃ ।**
**ಸಮಾಹಿತಧಿಯಃ ಸರ್ವೇ ಏತದಭ್ಯಸನಾಹತಾಃ ॥೭೨॥**

ಯೋಗಾದೇಶಂ=ಯೋಗೋಪದೇಶವೆಂಬ ಈ ಸ್ತೋತ್ರವನ್ನು ಉಪಾಸಾದ್ಯ=ಪಡೆದು ಧಾರಯಂತಃ=ಜಪಿಸುವವರಾಗಿ ಮುನಿವ್ರತಾಃ=ಋಷಿಗಳ ವ್ರತಗಳಾದ ಗೆಡ್ಡೆ-ಗೆಣಸುಗಳೇ ಫಲಾಹಾರವುಳ್ಳವರಾಗಿ ಸಮಾಹಿತಧಿಯಃ ಸರ್ವೇ=ಎಲ್ಲರೂ ಏಕಾಗ್ರಮನಸ್ಸಿನವರಾಗಿ ಏತದಭ್ಯಸನಾಹತಾಃ=ಈ ಮಂತ್ರದ ಆವೃತ್ತಿಯನ್ನು ಮಾಡಿರಿ. ಎಷ್ಟೇ ಕಷ್ಟವಾದರೂ ಮಂತ್ರಾವೃತ್ತಿ ಮಾಡಿರಿ ಎಂದು ಭಾವ. ॥೭೨॥

ಶ್ರದ್ಧೆ ಹುಟ್ಟಿಸಲು ಹೇಳುವರು -

**ಇದಮಾಹ ಪುರಾಸ್ಮಾಕಂ ಭಗವಾನ್ ವಿಶ್ವಸೃಕ್ಪತಿಃ ।**
**ಭೃಗ್ವಾದೀನಾಮಾತ್ಮಜಾನಾಂ ಸಿಸೃಕ್ಷುಃ ಸಂಸಿಸೃಕ್ಷತಾಮ್ ॥೭೩॥**

ಸಿಸೃಕ್ಷುಃ=ಸೃಷ್ಟಿಸಲಿಚ್ಛಿಸುವ ಭಗವಾನ್=ಐಶ್ವರ್ಯಶಾಲಿಯಾದ ವಿಶ್ವಸೃಕ್ಪತಿಃ=ಬ್ರಹ್ಮದೇವರು ಸಂಸಿಸೃಕ್ಷತಾಂ=ಚೆನ್ನಾಗಿ ಸೃಷ್ಟಿಸಲಿಚ್ಛಿಸುವ ಆತ್ಮಜಾನಾಂ=ಮಕ್ಕಳಾದ ಭೃಗ್ವಾಧೀನಾಂ=ಭೃಗು ಮೊದಲಾದ ಅಸ್ಮಾಕಂ=ನಮಗೆ ಇದಂ ಆಹ=ನಿಮಗೆ ನಾನು ಹೇಳಿದ್ದನ್ನೇ ಹೇಳಿದರು.

**ತೇ ವಯಂ ಚೋದಿತಾಃ ಸರ್ವೇ ಪ್ರಜಾಸರ್ಗೇ ಪ್ರಜೇಶ್ವರಾಃ ।**
**ಅನೇನ ಧ್ವಸ್ತತಮಸಃ ಸಿಸೃಕ್ಷ್ಮ ವಿವಿಧಾಃ ಪ್ರಜಾಃ ॥೭೪॥**

ಪ್ರಜಾಸರ್ಗೇ=ಪ್ರಜೆಗಳನ್ನು ಸೃಷ್ಟಿಸಲು ಚೋದಿತಾಃ=ಪ್ರೇರಿತರಾದ ವಯಂ ತೇ ಸರ್ವೇ ಪ್ರಜೇಶ್ವರಾಃ=ನಾವೆಲ್ಲ ಪ್ರಜಾಪತಿಗಳು ಅನೇನ=ಈ ಸ್ತೋತ್ರದಿಂದ ಧ್ವಸ್ತತಮಸಃ=ಅಜ್ಞಾನವನ್ನು ಕಳೆದುಕೊಂಡು ವಿವಿಧಾಃ ಪ್ರಜಾಃ ಸಿಸೃಕ್ಷ್ಮ=ಅನೇಕ ರೀತಿಯ ಪ್ರಜೆಗಳನ್ನು ಸೃಷ್ಟಿಸಿದೆವು.

**ಅಥೇದಂ ನಿತ್ಯದಾ ಯುಕ್ತೋ ಜಪನ್ನವಹಿತಃ ಪುಮಾನ್ ।**
**ಅಚಿರಾಚ್ಛ್ರೇಯ ಆಪ್ನೋತಿ ವಾಸುದೇವಪರಾಯಣಃ ॥೭೫॥**

ಅಥ=ಆದ್ದರಿಂದ ಇದಂ=ಈ ಸ್ತೋತ್ರವನ್ನು ನಿತ್ಯದಾ=ಪ್ರತಿದಿನವೂ ಯುಕ್ತಃ= ಮನೋಯೋಗವುಳ್ಳವನಾಗಿ ಅವಹಿತಃ=ಸಮಾಧಾನಯುತನಾಗಿ ಜಪನ್=ಜಪಿಸುವ ಪುಮಾನ್=ಅಧಿಕಾರಿಯು ವಾಸುದೇವಪರಾಯಣಃ=ಶ್ರೀಹರಿಯೇ ಮುಖ್ಯಾಶ್ರಯನೆಂದು ಭಾವಿಸಿ ಅಚಿರಾತ್=ಶೀಘ್ರದಲ್ಲಿಯೇ ಶ್ರೇಯಃ ಆಪ್ನೋತಿ=ಶ್ರೇಯಸ್ಸನ್ನು ಹೊಂದುವನು.

**ಶ್ರೇಯಸಾಮಿಹ ಸರ್ವೇಷಾಂ ಜ್ಞಾನಂ ನಿಃಶ್ರೇಯಸಂ ಸ್ಮೃತಮ್ ।**
**ಸುಖಂ ತರತಿ ದುಷ್ಪಾರಂ ಜ್ಞಾನನೌರ್ವ್ಯಸನಾರ್ಣವಮ್ ॥೨೬॥**

ಸರ್ವೇಷಾಂ ಶ್ರೇಯಸಾಂ=ಎಲ್ಲ ಶ್ರೇಯಃಸಾಧನಗಳಲ್ಲಿ ಜ್ಞಾನಂ=ಅಪರೋಕ್ಷಜ್ಞಾನವು ನಿಃಶ್ರೇಯಸಂ ಸ್ಮೃತಂ=ಮೋಕ್ಷಸಾಧನವೆಂದೇ ಹೇಳಲ್ಪಟ್ಟಿದೆ. ಜ್ಞಾನನೌಃ=ಜ್ಞಾನವೆಂಬ ನೌಕೆಯುಳ್ಳವನು ದುಷ್ಪಾರಂ=ಇತರರಿಂದ ದಾಟಲಾಗದ ವ್ಯಸನಾರ್ಣವಂ ಸುಖಂ ತರತಿ=ದುಃಖಸಮುದ್ರವನ್ನು ಸುಖವಾಗಿ ದಾಟುವನು. ॥೨೬॥

**ಯ ಇದಂ ಶ್ರದ್ಧಯಾ ಯುಕ್ತೋ ಮದ್ಗೀತಂ ಭಗವತ್ಸ್ತವಮ್ ।**
**ಅಧೀಯಾನೋ ದುರಾರಾಧ್ಯಂ ಹರಿಮಾರಾಧಯತ್ಯಸೌ ॥೨೭॥**

ಯಃ=ಯಾವನು ಶ್ರದ್ಧಯಾ ಯುಕ್ತ=ಶ್ರದ್ಧೆಯಿಂದ ಕೂಡಿದವನಾಗಿ ಮದ್ಗೀತಂ=ನಾನು ಹೇಳಿದ ಭಗವತ್ಸ್ತವಂ=ಶ್ರೀಹರಿಯ ಸ್ತೋತ್ರವನ್ನು ಅಧೀಯಾನಃ=ಅಧ್ಯಯನ ಮಾಡಿದವನೋ ಅಸೌ=ಅವನು ದುರಾರಾಧ್ಯಂ=ಆರಾಧಿಸಲು ಅಸಾಧ್ಯನಾದ ಹರಿಂ=ಶ್ರೀಹರಿಯನ್ನು ಆರಾಧಯತಿ=ಆರಾಧಿಸುವನು. ॥೨೭॥

**ವಿಂದತೇ ಪುರುಷೋಽಮುಷ್ಮಾದ್ ಯದ್ ಯದಿಚ್ಛತಿ ಸತ್ವರಮ್ ।**
**ಮದ್ಗೀತಗೀತಾತ್ ಸುಪ್ರೀತಾಚ್ಛ್ರೇಯಸಾಮೇಕವಲ್ಲಭಾತ್ ॥೨೮॥**

ಪುರುಷಃ=ಅಧಿಕಾರಿಯು ಮದ್ಗೀತಾತ್=ನಾನು ಹೇಳಿದ ಅಮುಷ್ಮಾತ್=ಈ ಮಂತ್ರದಿಂದ ಸುಪ್ರೀತಾತ್=ಅತ್ಯಂತ ಪ್ರಸನ್ನನಾದ, ಶ್ರೇಯಸಾಂ ಏಕವಲ್ಲಭಾತ್=ಶ್ರೇಯಸ್ಸುಗಳಿಗೆ ಮುಖ್ಯಸ್ವಾಮಿಯಾದ ಶ್ರೀಹರಿಯಿಂದ ಯತ್ ಯತ್ ಇಚ್ಛತಿ=ಏನೇನು ಇಚ್ಛಿಸುವನೋ ತತ್ ತತ್=ಅದೆಲ್ಲವನ್ನೂ ಸತ್ವರಂ ವಿಂದತೇ=ಶೀಘ್ರದಲ್ಲಿ ಪಡೆಯುವನು. ॥೨೮॥

**ಯ ಇದಂ ಕಲ್ಯ ಉತ್ಥಾಯ ಪ್ರಾಂಜಲಿಃ ಶ್ರದ್ಧಯಾಽನ್ವಿತಃ ।**
**ಶೃಣುಯಾಚ್ಛ್ರಾವಯೇನ್ಮರ್ತ್ಯೋ ಮುಚ್ಯತೇ ಕರ್ಮಬಂಧನೈಃ ॥೨೯॥**

ಯಃ=ಯಾವನು ಕಲ್ಯೇ=ಉಷಃಕಾಲದಲ್ಲಿ ಉತ್ಥಾಯ=ಎದ್ದು ಪ್ರಾಂಜಲಿಃ=ಕೈಜೋಡಿಸಿ ಶ್ರದ್ಧಯಾ ಅನ್ವಿತಃ=ಶ್ರದ್ಧೆಯಿಂದ ಕೂಡಿದವನಾಗಿ ಶೃಣುಯಾತ್=ಕೇಳುವನೋ

ಶ್ರಾವಯೇತ್=ಕೇಳಿಸುವವನೋ ಸಃ ಮರ್ತ್ಯಃ=ಆ ಮನುಷ್ಯನು ಕರ್ಮಬಂಧನೈಃ ಮುಚ್ಯತೇ=ಕರ್ಮಬಂಧದಿಂದ ಮುಕ್ತನಾಗುವನು. ।।೭೯।।

**ಗೀತಂ ಮಯೇದಂ ನರದೇವನಂದನಾಃ**
**ಪರಸ್ಯ ಪುಂಸಃ ಪರಮಾತ್ಮನಃ ಸ್ತವಮ್ ।**
**ಜಪಂತ ಏಕಾಗ್ರಧಿಯಸ್ತಪೋ ಮಹ-**
**ಚ್ಚರಧ್ವಮಂತೇ ತತ ಆಪ್ಸ್ಯಥೇಪ್ಸಿತಮ್ ।।೮೦।।**

।। ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ ಚತುರ್ವಿಂಶೋಽಧ್ಯಾಯಃ ।।

ಹೇ ನರದೇವನಂದನಾಃ=ರಾಜಕುವರರೇ ! ಮಯಾ ಗೀತಂ=ನನ್ನಿಂದ ಹೇಳಲ್ಪಟ್ಟ ಇದಂ=ಈ ಪರಸ್ಯ ಪುಂಸಃ=ಸರ್ವೋತ್ತಮನಾದ ಪರಮಾತ್ಮನಃ=ಶ್ರೀಹರಿಯ ಸ್ತವಂ=ಸ್ತೋತ್ರವನ್ನು ಜಪಂತಃ=ಜಪಿಸುತ್ತ ಏಕಾಗ್ರಧಿಯಃ=ಏಕಾಗ್ರಚಿತ್ತರಾಗಿ ಮಹತ್ ತಪಃ=ಮಹಾತಪಸ್ಸನ್ನು ಚರಧ್ವಂ=ಮಾಡಿರಿ. ತತಃ ಅಂತೇ=ತಪಸ್ಸು ಮುಗಿದ ಮೇಲೆ ಈಪ್ಸಿತಂ=ಇಷ್ಟವಾದ ಪ್ರಜಾಸರ್ಜನಾದಿಗಳನ್ನು ಆಪ್ಸ್ಯಥ=ಹೊಂದಿರಿ. ।।೮೦।।

।। ಇಲ್ಲಿಗೆ ಇಪ್ಪತ್ನಾಲ್ಕನೇ ಅಧ್ಯಾಯವು ಮುಗಿಯಿತು ।।

## ಅಥ ಪಂಚವಿಂಶೋಽಧ್ಯಾಯಃ

ದುರಾಗ್ರಹವೆಂಬ ಗ್ರಾಹ (ಮೊಸಳೆ) ಇರುವುದರಿಂದ ಇಳಿಯಲಾಗದ ಸಂಸಾರ ಸಾಗರದಲ್ಲಿ ಮುಳುಗುವ, ಸಜ್ಜನರ ಸಂಗವನ್ನು ದೂರ ಮಾಡಿದ, ಶ್ರೀಹರಿಯ ಚರಣಾರವಿಂದಮಕರಂದಪಾನವನ್ನು ಅರಿಯದ, ನಾನಾವ್ಯಸನದ ಭಾರವನ್ನು ಹೊತ್ತ, ಮಕ್ಕಳ ತೊದಲುನುಡಿಗಳಿಂದಾಗಿ ದೂರವಾದ ಶ್ರೀಹರಿಶ್ರವಣವುಳ್ಳ ಕುಟುಂಬಭರಣ-ದಲ್ಲಿಯೇ ದಿನಗಳನು ಕಳೆಯುವ ಜನರಿಗೆ ವೈರಾಗ್ಯರಸದಿಂದ ಪುಷ್ಟೀಕರಿಸಿದ, ಭಕ್ತಿದೀಪದಿಂದ ಅನುಗೃಹೀತವಾದ, ಮೋಕ್ಷರೂಪ ಪುರುಷಾರ್ಥಸಾಧನವಾದ ಅಪರೋಕ್ಷಜ್ಞಾನವೆಂಬ ಲಲನಾಕಟಾಕ್ಷದಿಂದ ಪ್ರಸನ್ನನಾದ ಶ್ರೀಕೃಷ್ಣನ ಪ್ರಸಾದವೆಂಬ ಕೊಡಲಿ ಇಲ್ಲದೇ ಸಂಸಾರವೃಕ್ಷಚ್ಛೇದವಾಗಲಾರದು. ಕಾರಣ ಆ ವಿಧ ಸಾಧನಗಳನ್ನು ಐದು ಅಧ್ಯಾಯಗಳಲ್ಲಿ ಹೇಳುವರು. ಅದಕ್ಕೆ ಉಪೋದ್ಘಾತವನ್ನು ರಚಿಸುವರು -

**ಮೈತ್ರೇಯ ಉವಾಚ -**

**ಇತಿ ಸಂದಿಶ್ಯ ಭಗವಾನ್ ಬಾರ್ಹಿಷದೈರಭಿಪೂಜಿತಃ ।**
**ಪಶ್ಯತಾಂ ರಾಜಪುತ್ರಾಣಾಂ ತತ್ರೈವಾಂತರ್ದಧೇ ಹರಃ ॥೧॥**

ಇತಿ=ಈ ರೀತಿಯಾಗಿ ಸಂದಿಶ್ಯ=ಆಜ್ಞೆ ಮಾಡಿ ಬಾರ್ಹಿಷದೈಃ=ಪ್ರಾಚೀನಬರ್ಹಿಯ ಮಕ್ಕಳಾದ ಪ್ರಚೇತಸರಿಂದ ಅಭಿಪೂಜಿತಃ=ಚೆನ್ನಾಗಿ ಪೂಜಿತನಾಗಿ ಭಗವಾನ್ ಹರಃ=ಐಶ್ವರ್ಯವಂತನಾದ ರುದ್ರದೇವನು ರಾಜಪುತ್ರಾಣಾಂ ಪಶ್ಯತಾಂ ಸತಾಂ= ರಾಜಕುಮಾರರು ನೋಡುತ್ತಿರುವಾಗಲೇ ತತ್ರೈವ=ನಿಂತಸ್ಥಳದಲ್ಲಿಯೇ ಅಂತರ್ದಧೇ= ಅದೃಶ್ಯದನು. ॥೧॥

**ರುದ್ರಗೀತಂ ಭಗವತಃ ಸ್ತೋತ್ರಂ ಸರ್ವೇ ಪ್ರಚೇತಸಃ ।**
**ಜಪಂತಸ್ತೇ ತಪಸ್ತೇಪುರ್ವರ್ಷಾಣಾಮಯುತಂ ಜಲೇ ॥೨॥**

ಸರ್ವೇ ಪ್ರಚೇತಸಃ=ಎಲ್ಲ ಪ್ರಚೇತಸರು ರುದ್ರಗೀತಂ=ರುದ್ರದೇವರು ಹೇಳಿದ ಭಗವತಃ ಸ್ತೋತ್ರಂ=ಶ್ರೀಹರಿಯ ಸ್ತೋತ್ರವನ್ನು ಜಪಂತಃ=ಜಪಿಸುವವರಾಗಿ ಜಲೇ=ನೀರಿನಲ್ಲಿ ಮುಳುಗಿ ತೇ=ಅವರು ವರ್ಷಾಣಾಂ ಅಯುತಂ=ಹತ್ತು ಸಾವಿರ ವರ್ಷಗಳವರೆಗೆ ತಪಃ ತೇಪುಃ=ತಪಸ್ಸು ಮಾಡಿದರು. ||೨||

ಪ್ರಚೇತಸರು ತಪಸ್ಸಿಗೆ ಹೋದ ನಂತರದಲ್ಲಿ ಇತ್ತ ಅವರ ತಂದೆಯ ವೃತ್ತಾಂತ ಹೇಳುವರು -

**ಪ್ರಾಚೀನಬರ್ಹಿಷಂ ಕ್ಷತ್ತಃ ಕರ್ಮಸ್ವಾಸಕ್ತಮಾನಸಮ್ ।**
**ನಾರದೋಽಧ್ಯಾತ್ಮತತ್ವಜ್ಞಃ ಕೃಪಾಲುಃ ಪ್ರತ್ಯಬೋಧಯತ್ ||೩||**

ಹೇ ಕ್ಷತ್ತಃ=ವಿದುರನೇ ! ಕರ್ಮಸು ಆಸಕ್ತಮಾನಸಂ=ಯಜ್ಞದಲ್ಲಿಯೇ ಆಸಕ್ತವಾದ ಮನಸ್ಸುಳ್ಳ ಪ್ರಾಚೀನಬರ್ಹಿಷಂ=ಪ್ರಾಚೀನಬರ್ಹಿಯನ್ನು ಕುರಿತು ಅಧ್ಯಾತ್ಮತತ್ವಜ್ಞಃ=ಶ್ರೀಹರಿಯ ಸರಿಯಾದ ಸ್ವರೂಪವನ್ನರಿತ ಕೃಪಾಲುಃ=ದಯಾಳುಗಳಾದ ನಾರದಃ=ನಾರದರು ಪ್ರತ್ಯಬೋಧಯತ್=ತಿಳಿಹೇಳಿದರು. ||೩||

**ನಾರದ ಉವಾಚ -**

**ಶ್ರೇಯಸ್ತ್ವಂ ಕೃತಮದ್ ರಾಜನ್ ಕರ್ಮಣಾಽತ್ಮನ ಈಹಸೇ ॥**
**ದುಃಖಹಾನಿಃ ಸುಖಾವಾಪ್ತಿಃ ಶ್ರೇಯಸ್ತನ್ನೇಹಯೇಷ್ಯತೇ ||೪||**

ರಾಜನ್=ರಾಜನೇ ! ಆತ್ಮನಃ=ತನಗೆ ಕರ್ಮಣಾ=ಕರ್ಮಗಳಿಂದ ಯತ್=ಯಾವ ಶ್ರೇಯಃ=ಫಲವನ್ನು ಈಹಸೇ=ಇಚ್ಛಿಸುವಿಯೋ ತತ್=ಅದು ಕೃತಮತ್=ಸ್ವರ್ಗಾದಿ-ರೂಪವಾದರೆ ತುಚ್ಛವಾದುದು. ಇನ್ನು ದುಃಖಹಾನಿಃ ಸುಖಾಪಾಪ್ತಿಃ=ಸಂಸಾರನಿವೃತ್ತಿರೂಪ ಸುಖಪ್ರಾಪ್ತಿರೂಪ ಮೋಕ್ಷವೆಂದಾದರೆ ಶ್ರೇಯಃ=ಈ ವಿಧವಾದ ಫಲವು ಈಹಯಾ=ಸ್ವರ್ಗಕಾಮನೆಯಿಂದ ಕಾಮವುಳ್ಳವನಿಗೆ ನ ಇಷ್ಯತೇ=ಆಗುವದೆಂದು ಪ್ರಾಮಾಣಿಕರು ಅಂಗೀಕರಿಸುವುದಿಲ್ಲ.

''ತತ್ರೇಹಯೇಷ್ಯತೇ'' ಎಂಬ ಪಾಠವಿದ್ದಾಗ ತತ್ರ=ಮೋಕ್ಷರೂಪ ಶ್ರೇಯಸ್ಸಿನಲ್ಲಿ ಈಹಯಾ=ಇಚ್ಛೆಯಿಂದ ಇಷ್ಯತೇ=ಆಗುವುದು. ಆದರೆ ಅದು ನಿನಗಿಲ್ಲ. ಪರಮಾತ್ಮನ ಜ್ಞಾನವಿಲ್ಲದ್ದರಿಂದ ಎಂದರ್ಥ.

ಪುರುಷನು ಅಪೇಕ್ಷಿಸುವ ಫಲಗಳು ಅನೇಕವಾಗಿವೆ. ಅವುಗಳಲ್ಲಿ ಏನನ್ನು ಇಚ್ಛಿಸುವಿ ? ದುಃಖಹಾನಿಯನ್ನೋ ? ಸುಖಪ್ರಾಪ್ತಿಯನ್ನೋ ? ಎರಡನ್ನೋ ? ಅಥವಾ ಬೇರೆ ಒಳ್ಳೆಯ

ಪುತ್ರಾದಿಗಳನ್ನೋ ? ಯಾವುದೂ ಕರ್ಮದಿಂದ ಬರುವುದಿಲ್ಲ ಎಂದು ವಿಜಯಧ್ವಜರ ಅಭಿಪ್ರಾಯ. ಸಕಾಮಕರ್ಮದಿಂದ ಸ್ವರ್ಗಾದಿಗಳು ದೊರಕಿದರೂ ಅವು ಶ್ರೇಷ್ಠವಲ್ಲ, ನಿಷ್ಕಾಮಕರ್ಮವನ್ನು ನೀನು ಮಾಡುತ್ತಿಲ್ಲ, ಕಾರಣ ಮೋಕ್ಷ ದೊರೆಯದು ಎಂದು ಯಾದವಾರ್ಯರ ಭಾವ. ।।೪।।

ಎಲ್ಲ ಶ್ರೇಯಸ್ಸಿಗೂ ಜ್ಞಾನವೇ ಮುಖ್ಯಸಾಧನ ಎಂಬ ನಾರದರ ಹಾರ್ದವನ್ನರಿತ ರಾಜನು ಜ್ಞಾನವನ್ನೇ ಉಪದೇಶಿಸಿರಿ ಎಂದು ಕೇಳುವನು -

**ಪ್ರಾಚೀನಬರ್ಹಿರುವಾಚ -**

**ನ ಜಾನಾಮಿ ಮಹಾಭಾಗ ಪರಂ ಕರ್ಮಾಪವಿದ್ಧಧೀಃ ।**
**ಬ್ರೂಹಿ ಮೇ ವಿಮಲಂ ಜ್ಞಾನಂ ಯೇನ ಮುಚ್ಯೇ ಸಕರ್ಮಭಿಃ ।।೫।।**

ಮಹಾಭಾಗ=ಭಾಗ್ಯವಂತರಾದ ನಾರದರೇ ! ಕರ್ಮಾಪವಿದ್ಧಧೀಃ=ಕರ್ಮಾಸಕ್ತ-ಮನಸ್ಕನಾದ ನಾನು ಪರಂ=ಪರಮಾತ್ಮನನ್ನು ನ ಜಾನಾಮಿ=ತಿಳಿದಿಲ್ಲ, ಯೇನ=ಯಾವ ಜ್ಞಾನದಿಂದ ಸಕರ್ಮಭಿಃ=ಕಾಮ್ಯವಾದ ನಿಷಿದ್ಧವಾದ ಕರ್ಮಗಳಿಂದ ಮುಚ್ಯೇ=ಮುಕ್ತನಾಗುವೆನೋ ತಂ ವಿಮಲಂ ಜ್ಞಾನಂ ಮೇ ಬ್ರೂಹಿ=ಅಂತಹ ನಿರ್ಮಲವಾದ ಜ್ಞಾನಸಾಧನವನ್ನು ನನಗೆ ಉಪದೇಶಿಸಿರಿ. ।।೫।।

ಮೋಕ್ಷಕ್ಕೆ ವೈರಾಗ್ಯ ಅವಶ್ಯವೆಂದು ಹೇಳುವರು -

**ನಾರದ ಉವಾಚ -**

**ಗೃಹೇಷು ಕೂಟಧರ್ಮೇಷು ಪುತ್ರದಾರಧನಾರ್ಥಧೀಃ ।**
**ನ ಪರಂ ವಿಂದತೇ ಮೂಢೋ ಭ್ರಾಮ್ಯನ್ ಸಂಸಾರವರ್ತ್ಮಸು ।।೬।।**

ಪುತ್ರದಾರಧನಾರ್ಥಧೀಃ=ಮಕ್ಕಳು, ಮಡದಿ, ಹಣಗಳೇ ಪುರುಷಾರ್ಥವೆಂದು ತಿಳಿದವನಾದ, ಅಂತೆಯೇ ಮೂಢಃ=ಮೂರ್ಖನಾದವನು ಕೂಟಧರ್ಮೇಷು=ಡಾಂಭಿಕಧರ್ಮಗಳಲ್ಲಿ ಗೃಹೇಷು=ಮನೆ ಮುಂತಾದವುಗಳಲ್ಲಿ ಸಂಸಾರವರ್ತ್ಮಸು=ಸಂಸಾರದ ಹಾದಿಯಲ್ಲಿಯೇ ಭ್ರಾಮ್ಯನ್=ತಿರುಗುವವನಾಗಿ ಪರಂ=ಪರಮಾತ್ಮನನ್ನು ನ ವಿಂದತೇ=ತಿಳಿಯಲಾರನು. ಮೋಕ್ಷವನ್ನು ಹೊಂದಲಾರನು. ಆದ್ದರಿಂದ ಮುಮುಕ್ಷುವಿಗೆ ವೈರಾಗ್ಯ ಅವಶ್ಯವೆಂದು ಭಾವ. ।।೬।।

ಕರ್ಮಫಲದಲ್ಲಿ ವೈರಾಗ್ಯವನ್ನು ಹುಟ್ಟಿಸಿ, ಬ್ರಹ್ಮವಿದ್ಯೆಯನ್ನು ಉಪದೇಶಿಸಲು ತಮ್ಮ ಯೋಗಸಾಮರ್ಥ್ಯದಿಂದ ಮೃತವಾದ ಯಜ್ಞಪಶುಗಳನ್ನು ಪ್ರತ್ಯಕ್ಷವಾಗಿ ತೋರಿಸುತ್ತ ಹೇಳುವರು -

**ಭೋ ಭೋ ಪ್ರಜಾಪತೇ ರಾಜನ್ ಪಶೂನ್ ಪಶ್ಯ ತ್ವಯಾಽಧ್ವರೇ ।**
**ಸಂಜ್ಞಾಪಿತಾನ್ ಜೀವಸಂಘಾನ್ ನಿರ್ಘೃಣೇನ ಸಹಸ್ರಶಃ ॥೭॥**

ಭೋ ಭೋ ಪ್ರಜಾಪತೇ ರಾಜನ್=ಎಲೋ ಪ್ರಜಾಪಾಲಕನಾದ ರಾಜನೇ ! ನಿರ್ಘೃಣೇನ=ದಯೆಯಿಲ್ಲದ ತ್ವಯಾ=ನಿನ್ನಿಂದ ಅಧ್ವರೇ=ಯಜ್ಞದಲ್ಲಿ ಸಹಸ್ರಶಃ=ಸಾವಿರ ಸಾವಿರಸಂಖ್ಯೆಯಲ್ಲಿ ಸಂಜ್ಞಾಪಿತಾನ್=ಹಿಂಸಿಸಲ್ಪಟ್ಟ ಪಶೂನ್ ಜೀವಸಂಘಾನ್=ಪಶುಜೀವಗಳ ಸಮೂಹಗಳನ್ನು ಪಶ್ಯ=ನೋಡು. ॥೭॥

ಈಗ ಅವುಗಳು ಏನೂ ಮಾಡದಿದ್ದರೂ ಪರಲೋಕದಲ್ಲಿ ತೊಂದರೆ ಕೊಡುವುದು ಎಂದು ಹೇಳುವರು -

**ಏತೇ ತ್ವಾಂ ಸಂಪ್ರತೀಕ್ಷಂತೇ ಸ್ಮರಂತೋ ವೈಶಸಂ ತವ ।**
**ಸಂಪರೇತಮಯಃಕೂಟೈಶ್ಛಿಂದಂತ್ಯುತ್ಥಿತಮನ್ಯವಃ ॥೮॥**

ತವ ವೈಶಸಂ=ನೀನು ಮಾಡಿದ ಹಿಂಸೆಯನ್ನು ಸ್ಮರಂತಃ=ನೆನೆಸುವ ಏತೇ=ಈ ಪ್ರಾಣಿಗಳು ತ್ವಾಂ=ನಿನ್ನನ್ನು ಸಂಪ್ರತೀಕ್ಷಂತೇ=ದಾರಿ ಕಾಯುತ್ತಿವೆ. ಹಾಗಾಗಿ ಉತ್ಥಿತಮನ್ಯವಃ=ಕುಪಿತವಾದ ಅವುಗಳು ಸಂಪರೇತಂ ತ್ವಾಂ=ಮೃತನಾದ ನಿನ್ನನ್ನು ಅಯಃಕೂಟೈಃ=ಕಬ್ಬಿಣದ ಆಯುಧಗಳಿಂದ ಛಿಂದಂತಿ=ಕತ್ತರಿಸುವವು.

**ಭಾಗವತತಾತ್ಪರ್ಯ -**

ಕರ್ಮವನ್ನು ವೇದದಲ್ಲಿ ವಿಧಾನ ಮಾಡಿದೆ. ಆದರೆ ಇಲ್ಲಿ ನಾರದರು ಕರ್ಮವನ್ನು ನಿಂದಿಸುತ್ತಿರುವರು. ಹಾಗಾಗಿ ಏನಿದರ ಅಭಿಪ್ರಾಯ ? ಎಂಬುದನ್ನು ಪ್ರಮಾಣದಿಂದಲೇ ತಿಳಿಸುವರು -

**''ಯಥಾವತ್ ಕರ್ಮಕರ್ತುಸ್ತು ಜ್ಞಾನಸಾಹಾಯ್ಯಕಾರಕಮ್ ।**
**ಅನ್ಯಥಾ ಕುರ್ವತಃ ಕರ್ಮ ನಿರಯಾಯ ಭವಿಷ್ಯತಿ ॥**
**ತಥಾಪಿ ಕರ್ಮ ನಿಂದಂತಿ ನ ಯತಃ ಕರ್ತುಮಂಜಸಾ ।**
**ಶಕ್ಯಂ ಜ್ಞಾನಫಲಸ್ಯಾಪಿ ಬಹುತ್ವಾನ್ಮೋಹನಾಯ ಚ'' ಇತಿ ಬ್ರಹ್ಮಾಂಡೇ ॥**

ವಿಧಿಯಲ್ಲಿ ಹೇಳಿದ ಪ್ರಕಾರ ಕರ್ಮ ಮಾಡಿದರೆ ಅದು ಅವನಿಗೆ ಜ್ಞಾನ ಹುಟ್ಟಲು ಬೇಕಾದ ಶ್ರವಣಾದಿಗಳಿಗೆ ಸಹಕಾರಿಕಾರಣವಾಗುವುದು. ಹೊರತು ಸ್ವತಂತ್ರವಾಗಿ ಅಲ್ಲ. ಇದರಂತೆ ಜ್ಞಾನದಿಂದ ಆನಂದಾಭಿವೃದ್ಧಿಯಾಗಲು ಜ್ಞಾನಕ್ಕೆ ಜ್ಞಾನೋತ್ತರಮಾಡಿದ ಕರ್ಮ ಸಹಕಾರಿಯಾಗುವುದು. ಸ್ವತಂತ್ರವಾಗಿ ಅಲ್ಲ. ಅನ್ಯಥಾ=ಅಂಗವೈಕಲ್ಯದಿಂದ ಮಾಡಿದ ಕರ್ಮವು ನರಕಕ್ಕೆ ಕಾರಣವಾಗುವುದು. ಆದ್ದರಿಂದ ಯದ್ಯಪಿ ಕರ್ಮವು ನಿಂದ್ಯವಲ್ಲ ಆದರೂ

ಮುನಿಗಳು ಯಾವ ಕಾರಣ ಸಾಂಗವಾಗಿ ಕರ್ಮ ಮಾಡಲಾಗದ್ದರಿಂದಲೂ ಮತ್ತು ಜ್ಞಾನಫಲವಾದ ಮೋಕ್ಷವು ಹೆಚ್ಚಿನದಾದ್ದರಿಂದ ಕರ್ಮಫಲ ಅಲ್ಪ, ಅಸ್ಥಿರ ಎಂಬ ಭಾವದಿಂದಲೂ ಮತ್ತು ಅಸುರರಿಗೆ ಸರ್ವಥಾ ಕರ್ಮ ಮಾಡಬಾರದೆಂಬ ಭ್ರಾಂತಿ ಹುಟ್ಟಲೆಂದೂ ನಿಂದಿಸುವರು ಎಂದು ಬ್ರಹ್ಮಾಂಡಪುರಾಣದಲ್ಲಿದೆ. ||೮||

ಸಂಸಾರದಲ್ಲಿ ಆಸಕ್ತನಾದವನಿಗೆ ತನ್ನ ಜ್ಞಾನವಾಗಲೀ, ಪರಮಾತ್ಮನ ಜ್ಞಾನವಾಗಲೀ ಆಗಲಾರದು ಎಂಬ ವಿಷಯದಲ್ಲಿ ಇತಿಹಾಸವನ್ನು ಹೇಳುವೆನು ಎಂದು ಹೇಳುವರು-

**ಅತ್ರ ತೇ ಕಥಯಿಷ್ಯೇಽಹಮಿತಿಹಾಸಂ ಪುರಾತನಮ್ ।**
**ಪುರಂಜನಸ್ಯ ಚರಿತಂ ನಿಬೋಧ ಗದತೋ ಮಮ ||೯||**

ಅತ್ರ=ನಾನು ಹೇಳಿದ ವಿಷಯದಲ್ಲಿ ಪುರಾತನಂ=ಅಧ್ಯಾತ್ಮವಿಷಯಕವಾದ (ಪುರಿ ಶರೀರೇ ಅತತಿ ಸತತಂ ವಿಷಯೀಕೃತ್ಯ ವರ್ತತೇ ಇತಿ ಪುರಾತನಂ) ಇತಿಹಾಸಂ=ಹಿಂದಿನ ವೃತ್ತಾಂತವನ್ನು ತೇ=ನಿನಗೆ ಕಥೆಯಿಷ್ಯೇ=ಹೇಳುವೆನು. ಗದತಃ=ಹೇಳುತ್ತಿರುವ ಮಮ=ನನ್ನಿಂದ ಪುರಂಜನಸ್ಯ ಚರಿತಂ ನಿಬೋಧ=ಆ ಇತಿಹಾಸದಲ್ಲಿ ಬರುವ ಪುರಂಜನನ ಚರಿತ್ರೆಯನ್ನು ಕೇಳು (ತಿಳಿದುಕೋ). ಇಲ್ಲಿ ಜೀವನ ಸಂಸಾರದ ಸ್ಥಿತಿಯನ್ನೇ ಪರೋಕ್ಷವಾಗಿ ಹೇಳುವರೆಂದು ತಾವೇ ಮುಂದೆ ಹೇಳುವರು. ಕಾರಣ ಇಲ್ಲಿ ವಿವರಿಸಬೇಕಿಲ್ಲ.

**ಆಸೀತ್ ಪುರಂಜನೋ ನಾಮ ರಾಜಾ ರಾಜನ್ ಬೃಹಚ್ಛ್ರವಾಃ ।**
**ತಸ್ಯಾವಿಜ್ಞಾತನಾಮಾಽಽಸೀತ್ ಸಖಾಽವಿಜ್ಞಾತಚೇಷ್ಟಿತಃ ||೧೦||**

ಬೃಹಚ್ಛ್ರವಾಃ=ಬಹಳಕೀರ್ತಿಯುಳ್ಳ ರಾಜನ್=ಪ್ರಾಚೀನಬರ್ಹಿಯೇ ! ಪುರಂಜನಃ ನಾಮ=ಪುರಂಜನನೆಂಬ ರಾಜಾ=ರಾಜನು ಆಸೀತ್=ಇದ್ದನು. ತಸ್ಯ=ಅವನಿಗೆ ಅವಿಜ್ಞಾತ-ಚೇಷ್ಟಿತಃ=ತಿಳಿಯದ ವ್ಯಾಪಾರವುಳ್ಳ ಆದ್ದರಿಂದಲೇ ಅವಿಜ್ಞಾತನಾಮಾ=ಅವಿಜ್ಞಾತನೆಂಬ ಹೆಸರುಳ್ಳ ಸಖಾ=ಗೆಳೆಯನು ಆಸೀತ್=ಇದ್ದನು. ||೧೦||

**ಸೋಽನ್ವೇಷಮಾಣಃ ಶರಣಂ ಬಭ್ರಾಮ ಪೃಥವೀಂ ಪ್ರಭುಃ ।**
**ನಾನುರೂಪಂ ಯದಾವಿಂದದಭೂತ್ ಸ ವಿಮನಾ ಇವ ||೧೧||**

ಪ್ರಭುಃ=ಈ ಕಾರ್ಯದಲ್ಲಿ ಸಮರ್ಥನಾದ ಸಃ=ಆ ರಾಜನು ಶರಣಂ=ತನಗೆ ಇರಲು ಯೋಗ್ಯವಾದ ಪಟ್ಟಣವನ್ನು ಅನ್ವೇಷಮಾಣಃ=ಹುಡುಕುವವನಾಗಿ ಪೃಥಿವೀಂ=ಭೂಮಂಡಲವನ್ನು ಬಭ್ರಾಮ=ತಿರುಗಿಸಿನು. ಅನುರೂಪಂ=ಯೋಗ್ಯವಾದುದನ್ನು ಯದಾ=ಯಾವಾಗ ನ ಅವಿಂದತ್=ಹೊಂದಲಿಲ್ಲವೋ ತದಾ=ಆಗ ಸಃ=ಅವನು ವಿಮನಾಃ ಇವ ಅಭೂತ್=ದುಃಖಿತನಂತಾದನು.

(ಸಃ=ಸ್ವರ್ಗಾದಿಗಳಿಂದ ಕೆಳಗೆ ಬಂದ ಜೀವನು ಶರಣಂ=ಸುಖದುಃಖಭೋಗ-ಯೋಗ್ಯವಾದ ಶರೀರವನ್ನು ಅನ್ವೇಷಮಾಣಃ=ಹುಡುಕುತ್ತ ಪೃಥಿವೀಂ=ಕರ್ಮಭೂಮಿಯನ್ನು ಬಭ್ರಾಮ=ತಿರುಗಿದನು. ಅನುರೂಪಂ=ದುಃಖಭೋಗವಿಲ್ಲದೇ ಸುಖಭೋಗಯೋಗ್ಯವಾದ ಪಟ್ಟಣ ಎಂಬರ್ಥವಿದ್ದಾಗ ದುರ್ಗಾದಿಗಳುಳ್ಳ ಎಂದರ್ಥ.)॥೧೧॥

**ನ ಸಾಧು ಮೇನೇ ತಾಃ ಸರ್ವಾ ಭೂತಲೇ ಯಾವತೀಃ ಪುರಃ ।**
**ಕಾಮಾನ್ ಕಾಮಯಮಾನೋಽಸೌ ತಸ್ಯ ತಸ್ಯಾಭಿಪತ್ತಯೇ ॥೧೨॥**

ಕಾಮಾನ್=ಅನೇಕವಿಷಯಗಳನ್ನು ಕಾಮಯಮಾನಃ=ಇಚ್ಛಿಸುವ ಅಸೌ=ಈ ರಾಜನು ತಸ್ಯ ತಸ್ಯ=ಆ ಆ ಕಾಮನೆಗಳನ್ನು ಅಭಿಪತ್ತಯೇ=ಹೊಂದಲು ಭೂತಲೇ=ಭೂಮಿಯಲ್ಲಿ ಯಾವತೀಃ ಪುರಃ=ಎಷ್ಟೆಷ್ಟು ಪಟ್ಟಣಗಳಿವೆಯೋ (ಜೀವಪಕ್ಷದಲ್ಲಿ ತಿರ್ಯಗಾದಿ-ನಾನಾಶರೀರಗಳಿವೆಯೋ) ತಾಃ ಸರ್ವಾಃ=ಅವೆಲ್ಲವನ್ನೂ ಸಾಧು ನ ಮೇನೇ=ಯೋಗ್ಯವೆಂದು ತಿಳಿಯಲಿಲ್ಲ. (ರಾಜನ ಪಕ್ಷದಲ್ಲಿ ಶತ್ರುಗಳು ನುಗ್ಗುವುದರಿಂದ ಮನಸ್ಸಿಗೆ ಬರಲಿಲ್ಲವೆಂದರ್ಥ.)॥೧೨॥

**ಸ ಏಕದಾ ಹಿಮವತೋ ದಕ್ಷಿಣೇಷ್ವಥ ಸಾನುಷು ।**
**ದದರ್ಶ ನವಭಿರ್ದ್ವಾರೈಃ ಪುರೀಂ ಲಕ್ಷಿತಲಕ್ಷಣಾಮ್ ॥೧೩॥**

ಸಃ=ರಾಜನಾದ ಆ ಪುರಂಜನನು ಏಕದಾ=ಒಂದು ಸಲ, (ಜೀವನು ತನ್ನ ಕರ್ಮಫಲೋದಯ ಸಮಯದಲ್ಲಿ) ಹಿಮವತಃ=ಹಿಮವತ್ಪರ್ವತದ ದಕ್ಷಿಣೇಷು ಸಾನುಷು=ದಕ್ಷಿಣದ ಭಾರತ ಭೂಪ್ರದೇಶದಲ್ಲಿ ನವಭಿಃ ದ್ವಾರೈಃ=ಒಂಭತ್ತು ಬಾಗಿಲುಗಳಿಂದ ಕೂಡಿದ ಲಕ್ಷಿತಲಕ್ಷಣಾಂ=ಜ್ಞಾತವಾದ ಲಕ್ಷಣವುಳ್ಳ ಪುರೀಂ=ಪಟ್ಟಣವನ್ನು ದದರ್ಶ=ಕಂಡನು. (ಜೀವಪಕ್ಷದಲ್ಲಿ ಜೀವನು ಕಣ್ಣು-ಕಿವಿ-ಮೂಗು-ಬಾಯಿ-ಪಾಯು-ಉಪಸ್ಥ ಹೀಗೆ ಒಂಬತ್ತು ರಂಧ್ರಗಳಿಂದ ಕೂಡಿದ, ಕುಂಟ-ಕಿವುಡ ಮುಂತಾದ ದುರ್ಲಕ್ಷಣವಿಲ್ಲದ ಮನುಷ್ಯಶರೀರವನ್ನು ಕಂಡನು. ಅಲ್ಲಿ ಪ್ರವೇಶಿಸಿದನು ಎಂದು ಇಟ್ಟುಕೊಳ್ಳಬೇಕು. ॥೧೩॥

ಪಟ್ಟಣವನ್ನು ವರ್ಣಿಸುವರು -

**ಪ್ರಾಕಾರೋಪವನಾಟ್ಟಾಲಪರಿಖೈರುಚ್ಚತೋರಣೈಃ ।**
**ಸ್ವರ್ಣರೌಪ್ಯಾಯಸೈಃ ಶೃಂಗೈಃ ಸಂಕುಲಾಂ ಸರ್ವತೋ ಗೃಹೈಃ ॥೧೪॥**

ಪ್ರಾಕಾರ=ಕೋಟೆಯ ಗೋಡೆಗಳು ಉಪವನ=ಕೈದೋಟಗಳು ಅಟ್ಟಾಲ=ಗೋಡೆಯ ಮಧ್ಯದ ಭೂಪ್ರದೇಶ ಪರಿಖೈಃ=ಗೋಡೆಯ ಹೊರಗಿನ ಸುತ್ತಲಿರುವ ಖಾತಗಳಿಂದಲೂ,

ಉಚ್ಚತ್ತೋರಣೈಃ=ಎತ್ತರವಾದ ಹೆಬ್ಬಾಗಿಲಿನಿಂದಲೂ, ಸ್ವರ್ಣ=ಬಂಗಾರ ರೌಪ್ಯ=ಬೆಳ್ಳಿ ಆಯಸೈಃ=ಕಬ್ಬಿಣದ ಶೃಂಗೈಃ=ಶಿಖರಗಳಿಂದಲೂ ಸರ್ವತಃ=ಸುತ್ತಲೂ ಗೃಹೈಃ=ಮನೆಗಳಿಂದ ಸಂಕುಲಾಂ=ಕೂಡಿದ, (ಪಟ್ಟಣವನ್ನು ಎಂದು ಅನ್ವಯ)।।೧೪।।

**ನೀಲಸ್ಫಟಿಕವೈದೂರ್ಯಮುಕ್ತಾಮರಕತಾರುಣೈಃ।**
**ಕ್ಲೃಪ್ತಹರ್ಮ್ಯಸ್ಥಲೀಂ ದೀಪ್ತಾಂ ಶ್ರಿಯಾ ಭೋಗವತೀಮಿವ ।।೧೫।।**

ನೀಲ=ಇಂದ್ರನೀಲಮಣಿ ಸ್ಫಟಿಕ=ಬಿಳಿಯದು ವೈದೂರ್ಯ=ನವರತ್ನಗಳಲ್ಲಿ ಒಂದು ಮುಕ್ತ=ಮುತ್ತು ಮರಕತ=ಆ ಹೆಸರಿನ ಮಣಿ ಅರುಣೈಃ=ಮಾಣಿಕ್ಯಗಳಿಂದ, ಕ್ಲೃಪ್ತ=ನಿರ್ಮಿಸಿದ ಹರ್ಮ್ಯಸ್ಥಲೀಂ=ಧನಿಕರ ಮನೆಗಳುಳ್ಳ ಶ್ರಿಯಾ=ಕಾಂತಿಯಿಂದ ದೀಪ್ತಾಂ=ಪ್ರಕಾಶಮಾನವಾದ ಭೋಗವತೀಂ ಇವ=ಸರ್ಪಗಳ ಪುರದಂತಿರುವ, (ಪಟ್ಟಣವನ್ನು ಎಂದು ಅನ್ವಯ)।।೧೫।।

**ಸಭಾಚತ್ವರರಥ್ಯಾಭಿರಾಕ್ರೀಡಾಯತನಾಪಣೈಃ ।**
**ಚೈತ್ಯಧ್ವಜಪತಾಕಾಭಿರ್ಯುಕ್ತಾಂ ವಿದ್ರುಮವೇದಿಭಿಃ ।।೧೬।।**

ಸಭಾ=ಸಭಾಂಗಣಗಳು ಚತ್ವರ=ನಾಲ್ಕುರಸ್ತೆಗಳು ರಥ್ಯಾಭಿಃ=ರಾಜಮಾರ್ಗಗಳಿಂದ, ಆಕ್ರೀಡಾಯತನ=ಜೂಜಾಡುವ ಸ್ಥಳ ಆಪಣೈಃ=ಮಾರುಕಟ್ಟೆಗಳಿಂದಲೂ, ಚೈತ್ಯ=ಜನರ ವಿಶ್ರಾಂತಿಸ್ಥಾನಗಳಿಂದಲೂ ಧ್ವಜ=ಚತಷ್ಕೋಟಿವುಳ್ಳ ಪತಾಕಾಭಿಃ=ತ್ರಿಕೋಣವುಳ್ಳ ಬಾವುಟಗಳಿಂದ ವಿದ್ರುಮವೇದಿಭಿಃ=ಹವಳದ ಪರಿಷ್ಕೃತ ಭೂಮಿಯಿಂದ ಯುಕ್ತಾಂ= ಕೂಡಿದ, (ಪಟ್ಟಣವನ್ನು ಎಂದು ಅನ್ವಯ)।।೧೬।।

**ಪುರ್ಯಾಸ್ತು ಬಾಹ್ಯೋಪವನೇ ದಿವ್ಯದ್ರುಮಲತಾಕುಲೇ।**
**ನದದ್ವಿಹಂಗಾಲಿಕುಲಕೋಲಾಹಲಜಲಾಶಯೇ ।।೧೭।।**

ಪುರ್ಯಾಃ=ಪಟ್ಟಣದ ದಿವ್ಯದ್ರುಮಲತಾಕುಲೇ=ದೇವಲೋಕದ ಗಿಡಗಳು ಬಳ್ಳಿಗಳಿಂದ ಕೂಡಿದ ನದದ್ವಿಹಂಗ=ಧ್ವನಿ ಮಾಡುವ ಪಕ್ಷಿಗಳು ಮತ್ತು ಅಲಿಕುಲ=ಭ್ರಮರಗಳ ಕುಲ=ಸಮೂಹಗಳ ಕೋಲಾಹಲ=ಕಲರವವುಳ್ಳ ಜಲಾಶಯೇ=ಸರೋವರವುಳ್ಳ ಬಾಹ್ಯೋಪವನೇ=ಹೊರತೋಟದಲ್ಲಿ ಇದ್ದವನಾಗಿ, ಆ ಪಟ್ಟಣವನ್ನು ನೋಡಿದನೆಂದು ನಾಲ್ಕನೇ ಶ್ಲೋಕದಲ್ಲಿ ಅನ್ವಯ. ।।೧೭।।

**ಹಿಮನಿರ್ಝರವಿಪ್ರುಷ್ಮತ್ಕುಸುಮಾಕರವಾಯುನಾ।**
**ಚಲತ್ಪ್ರವಾಲವಿಟಪಿನಲಿನೀತಟಸಂಪದಿ ।।೧೮।।**

ಹಿಮ=ಶೀತಲವಾದ ನಿರ್ಝರ=ಜಲಧಾರೆಗಳ ವಿಪ್ರುಷ್ಮತ್=ಹನಿಗಳುಳ್ಳ ಕುಸುಮಾಕರ= ಹೂವಿನ ಗಿಡಗಳಿಗೆ ಸಂಬದ್ಧವಾದ ವಾಯುನಾ=ಗಾಳಿಯಿಂದ ಚಲತ್=ಚಲಿಸುವ ಪ್ರವಾಲ=ಚಿಗುರೆಲೆಗಳುಳ್ಳ ವಿಟಪಿ=ಗಿಡಗಳುಳ್ಳ ನಲಿನೀತಟಸಂಪದಿ= ಸರೋವರಗಳ ದಂಡೆಗಳೆಂಬ ಸಂಪತ್ತುಳ್ಳ ।।೧೮।।

**ನಾನಾಽರಣ್ಯಮೃಗವ್ರಾತೈರನಾಬಾಧೇ ಮುನಿವ್ರತೈಃ ।**
**ಆಹೂತಂ ಮನ್ಯತೇ ಪಾಂಥೋ ಯತ್ರ ಕೋಕಿಲಕೂಜಿತೈಃ ।।೧೯।।**

ಮುನಿವ್ರತೈಃ=ಮುನಿಗಳಂತೆ ಹಿಂಸೆ ಮಾಡದಿರುವ ನಾನಾರಣ್ಯಮೃಗವ್ರಾತೈಃ=ಅನೇಕ ಅರಣ್ಯದಲ್ಲಿರುವ ಮೃಗಗಳ ಸಮೂಹಗಳಿಂದ ಅನಾಬಾಧೇ=ಉಪದ್ರವವಿಲ್ಲದ, ಯತ್ರ= ಯಾವ ವನದಲ್ಲಿ ಕೋಕಿಲಕೂಜಿತೈಃ=ಕೋಕಿಲದ ಧ್ವನಿಯಿಂದ ಪಾಂಥಃ=ಹಾದಿಹೋಕ್ಕರು ಆಹೂತಂ ಮನ್ಯಂತೇ=ಬಾ ಒಳಗೆ ಪ್ರವೇಶಿಸು ಎಂದು ಕರೆಯುವಂತೆ ಕಲ್ಪಿಸುಕೊಳ್ಳುವರೋ ಅಂಥ ವನದಲ್ಲಿ ಎಂದನ್ವಯ.

**ದೇಹವೆಂದರ್ಥವಿದ್ದಾಗ :-**

ಪ್ರಾಕಾರ=ದೇಹದ ಚರ್ಮ ಉಪವನ=ಕೂದಲು ಮುಂತಾದವು ಅಟ್ಟಾಲ=ಮೇದಸ್ಸು ವಸ ಪರಿಖಾ=ಮಾಂಸದ ಹೊರಗಿನ ಚರ್ಮ ತೋರಣ=ಬಾಹುಗಳು ಪತಾಕಾ=ಬೆರಳುಗಳು ಶೃಂಗ=ಕಿವಿಗಳು ಗುಹ=ಹೊಟ್ಟೆ ಮುಂತಾದವು, ಅಲಂಕರಿಸಲ್ಪಟ್ಟ ಚರ್ಮಾದಿಗಳೇ ಹರ್ಮ್ಯ, ಭೋಗಸಾಧನವಾದ್ದರಿಂದ ಭೋಗವತೀ, ಸಭಾ=ಹೃದಯ ಚತ್ವರ=ಎಲ್ಲ ದೇವತೆಗಳ ನಿವಾಸಸ್ಥಾನವಾದ ನಾಡೀಸಂಧಿಯು ರಥ್ಯಾ=ಬ್ರಹ್ಮನಾಡಿಯು ಆಕ್ರಿಡಾ=ಹಸ್ತಗಳು ಆಯತನ=ಇಂದ್ರಿಯಗೋಲಕಗಳು ಆಪಣ=ವಾಕ್ಯವು ಚೈತ್ಯ=ಮಸ್ತಕ (ತಲೆ) ಧ್ವಜ=ಕೇಶಪಾಶಗಳು ವಿದ್ರುಮವೇದಿ=ಅಲಂಕೃತ ಕಟಿಪ್ರದೇಶ ಬಾಹ್ಯೋಪವನ=ಬಾಹ್ಯ ವಿಷಯಧ್ಯಾನ ಹೀಗೆ ಅರ್ಥ ತಿಳಿಯಬೇಕು. ।।೧೯।।

**ಯದೃಚ್ಛಯಾಽಽಗತಾಂ ತತ್ರ ದದರ್ಶ ಪ್ರಮದೋತ್ತಮಾಮ್ ।**
**ಭೃತ್ಯೈರ್ದಶಭಿರಾಯಂತೀಮೇಕೈಕಶತನಾಯಕೈಃ ।।೨೦।।**

ತತ್ರ=ಆ ಉಪವನದಲ್ಲಿ ಯದೃಚ್ಛಯಾ=ಶ್ರೀಹರಿಯ ಇಚ್ಛೆಯಿಂದ ಆಗತಾಂ= ಬಂದಿರುವ ಏಕೈಕಶತನಾಯಕೈಃ=ಒಬ್ಬೊಬ್ಬರಿಗೂ ನೂರು ನೂರು (ಬಹುಸಂಖ್ಯಾಕರಾದ) ನಾಯಿಕಿಯರುಳ್ಳ ದಶಭಿಃ ಭೃತ್ಯೈಃ=ಹತ್ತುಜನ ದಾಸರಿಂದ ಕೂಡಿಕೊಂಡು ಆಯಾಂತೀಂ= ಬರುತ್ತಿರುವ ಪ್ರಮದೋತ್ತಮಾಂ=ಉತ್ತಮಸ್ತ್ರೀಯನ್ನು ದದರ್ಶ=ನೋಡಿದನು. (ಪ್ರಮದೋತ್ತಮಾ ಎಂದರೆ ವೈಷಯಿಕ ಬುದ್ಧಿಯು)।।೨೦।।

**ತೇಷಾಂ ಪರಿವೃಢೋ ರಾಜನ್ ಸರ್ವೇಷಾಂ ಬಲಿಮುದ್ವಹನ್ ।**
**ಸಸ್ತ್ರೀಕಾಣಾಂ ಸಖಾ ತಸ್ಯಾ ಬಹುರೂಪೋಽಗ್ರಣೀಃ ಸ್ತ್ರಿಯಃ ॥೨೧॥**

ರಾಜನ್=ರಾಜನೇ ! ಸಸ್ತ್ರೀಕಾಣಾಂ=ಹೆಂಡಂದಿರಿಂದ ಸಹಿತರಾದ ತೇಷಾಂ ಸರ್ವೇಷಾಂ=ಎಲ್ಲ ಆ ಭೃತ್ಯರಿಗೆ ಪರಿವೃಢಃ=ಪತಿಯಾದ, ಬಹುರೂಪಃ=ಅನೇಕರೂಪವುಳ್ಳ ಅಗ್ರಣೀಃ=ಮುಂದಾಳಾದ, ತಸ್ಯಾಃ ಸ್ತ್ರಿಯಃ ಸಖಾ=ಆ ಸ್ತ್ರೀಯ ಗೆಳೆಯನು ಬಲಿಂ ಉದ್ವಹನ್=ಆಹಾರವನ್ನು ನೀಡುತ್ತ,

(ಮನಸ್ಸು ಜೀವಪತಿ) ವಿಷಯಗಳು ಬಹಳ ಇರುವುದರಿಂದ ಮನಸ್ಸು ಬಹುರೂಪವಾದುದು. ಯೋನಿಗಳು ವಿಚಿತ್ರವಾದುದರಿಂದ ಜೀವನಿಗೆ ಬಹುರೂಪತ್ವ ತಿಳಿಯಬೇಕು. ॥೨೧॥

**ಪಂಚಶೀರ್ಷಾಹಿನಾ ಗುಪ್ತಾಂ ಪ್ರತೀಹಾರೇಣ ಸರ್ವತಃ ।**
**ಅನ್ವೇಷಮಾಣಾಮೃಷಭಮಪ್ರೌಢಾಂ ಕಾಮರೂಪಿಣೀಮ್ ॥೨೨॥**

ಸರ್ವತಃ=ಸುತ್ತಲೂ ಪ್ರತೀಹಾರೇಣ=ದ್ವಾರಪಾಲಕನ ಸ್ಥಾನದಲ್ಲಿರುವ ಪಂಚಶೀರ್ಷಾಹಿನಾ =ಪ್ರಾಣಾಪಾನಾದಿ ಐದು ತಲೆಗಳುಳ್ಳ ಮುಖ್ಯಪ್ರಾಣನೆಂಬ ಸರ್ಪದಿಂದ ಗುಪ್ತಾಂ= ರಕ್ಷಿತಳಾದ, ಅಪ್ರೌಢಾಂ=ಮದುವೆಯಾಗದಿರುವ, ಕಾಮರೂಪೀಣೀಂ=ಅನೇಕರೂಪವುಳ್ಳ ಋಷಭಂ=ಪತಿಯನ್ನು ಅನ್ವೇಕ್ಷಮಾಣಾಂ=ಹುಡುಕುತ್ತಿರುವ,॥೨೨॥

**ಸುನಾಸಾಂ ಸುದತೀಂ ಬಾಲಾಂ ಸುಕಪೋಲಾಂ ವರಾನನಾಮ್ ।**
**ಸಮವಿನ್ಯಸ್ತಕರ್ಣಾಭ್ಯಾಂ ಬಿಭ್ರತೀಂ ಕುಂಡಲಶ್ರಿಯಮ್ ॥೨೩॥**

ಸುನಾಸಾಂ=ಎತ್ತರವಾದ ಮೂಗುಳ್ಳ (ನಾಸಾ=ಅಭಿಮಾನ) ಸುದತೀಂ=ಸುಂದರ ಹಲ್ಲುಗಳುಳ್ಳ (ವಿಷಯವೃತ್ತಿಗಳೇ ಹಲ್ಲು) ಬಾಲಾಂ=ಸುಕುಮಾರಳಾದ ಸುಕಪೋಲಾಂ= ಒಳ್ಳೆಯ ಕೆನ್ನೆಗಳುಳ್ಳ ವರಾನನಾಂ=ಶ್ರೇಷ್ಠವಾದ ಮುಖವುಳ್ಳ (ವರಣೀಯವಾದ ಆ ಅನನ=ಚೇಷ್ಟೆಯುಳ್ಳ) ಸಮವಿನ್ಯಸ್ತಕರ್ಣಾಭ್ಯಾಂ=ಒಂದೇರೀತಿಯಾಗಿ ರಚಿಸಲ್ಪಟ್ಟ ಕಿವಿಗಳಿಂದ ಕುಂಡಲಶ್ರಿಯಂ ಬಿಭ್ರತೀಂ=ಕುಂಡಲಗಳ ಶೋಭೆಯನ್ನು ಧರಿಸಿರುವ, (ಸಂಕಲ್ಪವಿಕಲ್ಪಗಳ ಎರಡು ವೃತ್ತಿಗಳೇ ಕಿವಿ)॥೨೩॥

**ಪಿಶಂಗನೀವೀಂ ಸುಶ್ರೋಣೀಂ ಶ್ಯಾಮಾಂ ಕನಕಮೇಖಲಾಮ್ ।**
**ಪದ್ಭ್ಯಾಂ ಕ್ವಣದ್ಭ್ಯಾಂ ಚಲತೀಂ ನೂಪುರೈರ್ದೇವತಾಮಿವ ॥೨೪॥**

ಪಿಶಂಗನೀವೀಂ=ಹಳದಿಯ ಸೀರೆಯನ್ನುಟ್ಟ (ವಿಷಯೋಪರಕ್ತವಾದ) ಸುಶ್ರೋಣೀಂ= ಪುಷ್ಟವಾದ ನಿತಂಬವುಳ್ಳ ಶ್ಯಾಮಾಂ=ನೀಲಿಬಣ್ಣ ಉಳ್ಳ (ತಮೋಗುಣ ಪ್ರಚುರವಾದ) ಕನಕಮೇಖಲಾಂ=ಚಿನ್ನದ ವಡ್ಯಾಣ ಧರಿಸಿದ (ರಜೋಗುಣವೆಂಬ ಉಡದಾರ) ನೂಪುರೈಃ=ಕಾಲ್ಗೆಜ್ಜೆಗಳಿಂದ ಕ್ವಣದ್ಭ್ಯಾಂ=ಮಂಜುಲಧ್ವನಿ ಮಾಡುವ ಪದ್ಭ್ಯಾಂ=ಪಾದಗಳಿಂದ ದೇವತಾಮಿವ=ದೇವತೆಯಂತೆ ಚಲತೀಂ=ಹೆಜ್ಜೆಯಿಡುತ್ತಿರುವ, ಶಿಶುವಿನ ಕಲಭಾಷಣವೇ ನೂಪುರ, ರಜಸ್ತಮೋವೃತ್ತಿಗಳು ಪಾದಗಳು, ಕೆಲವುಕಡೆ ಲಕ್ಷಣಾವೃತ್ತಿ, ಕೆಲವುಕಡೆ ವಚನವೃತ್ತಿಯಿಂದ ಊಹನೀಯವಾದ ಮಾತೇ ಕ್ವಣನ)॥೨೪॥

**ಸ್ತನೌ ವ್ಯಂಜಿತಕೈಶೋರೌ ಸಮವೃತ್ತೌ ನಿರಂತರೌ ।**
**ವಸ್ತ್ರಾಂತೇನ ನಿಗೂಹಂತೀಂ ವ್ರೀಡಯಾ ಗಜಗಾಮಿನೀಮ್ ॥೨೫॥**

ನಿರಂತರೌ=ವ್ಯವಧಾನವಿಲ್ಲದ ಸಮವೃತ್ತೌ=ಸಮಾನವಾದ ದುಂಡಾದ ವ್ಯಂಜಿತಕೈಶೋರೌ=ಯೌವನೋಪಕ್ರಮವನ್ನು ವ್ಯಕ್ತಗೊಳಿಸುವ ಸ್ತನೌ=ಕುಚಗಳನ್ನು ವ್ರೀಡಯಾ=ಲಜ್ಜೆಯಿಂದ ನಿಗೂಹಂತೀಂ=ಮುಚ್ಚಿಕೊಳ್ಳುವ ಗಜಗಾಮಿನೀಂ=ಆನೆಯಂತೆ ಗಂಭೀರವಾಗಿ ನಡೆಯುವ (ವ್ಯಕ್ತಗೊಳಿಸಿದ ಮಧ್ಯಮಾವಸ್ಥೆಯುಳ್ಳ ಶಬ್ದಗಳುಳ್ಳ (ಸ್ತನ) ಒಂದೇ ವೃತ್ತದಲ್ಲಿರುವ ಗುರುಲಘು ಎಂಬ ಭೇದವಿಲ್ಲದ ವೃತ್ತಿವಿಶೇಷದಿಂದ ಅನಭಿವ್ಯಕ್ತಿಯನ್ನು ಮಾಡುವ ಗಜದಂತೆ ಉರ್ಧ್ವಮೂಲಾಧಾರದಿಂದ ಬಂದ ಬುದ್ಧಿಯನ್ನು)॥೨೫॥

**ತಾಮಾಹ ಲಲಿತಾಂ ವೀರಃ ಸವ್ರೀಡಸ್ಮಿತಶೋಭಿನೀಮ್ ।**
**ಸ್ನಿಗ್ಧೇನಾಪಾಂಗಪುಂಖೇನ ಸ್ಪೃಷ್ಟಃ ಪ್ರೇಮಭ್ರಮದ್‌ಭ್ರುವಾ ॥೨೬॥**

ಪ್ರೇಮಭ್ರಮದ್‌ಭ್ರುವಾ=ಪ್ರೀತಿಯಿಂದ ಚಲಿಸುವ ಹುಬ್ಬುಗಳಿಂದ ಸ್ನಿಗ್ಧೇನ= ಸ್ನೇಹಪೂರಿತವಾದ ಅಪಾಂಗಪುಂಖೇನ=ಕಡೆಗಣ್ಣು ನೋಟದಿಂದ ಸ್ಪೃಷ್ಟಃ=ಸ್ಪರ್ಶಿಸಲ್ಪಟ್ಟ ವೀರಃ=ಪುರಂಜನನು ಸವ್ರೀಡಸ್ಮಿತಶೋಭಿನೀಂ=ಲಜ್ಜಾಯುತವಾದ ಮಂದಹಾಸದಿಂದ ಶೋಭಿಸುವ ತಾಂ ಲಲಿತಾಂ=ಆ ಹೆಣ್ಣನ್ನು ಕುರಿತು ಆಹ=ಹೇಳಿದನು. (ಮಾತನಾಡಿದನು.) ತನ್ನ ಕಾರ್ಯಾಭಿಮುಖಿಯಾದವಳನ್ನು ತನ್ನ ಕಾರ್ಯದಲ್ಲಿ ಪ್ರವರ್ತಿಸಲು ಅಭಿಮುಖ ಮಾಡಿಕೊಂಡನು. ಅಪಾಂಗ ಪ್ರೇಮ ಮುಂತಾದ ಶಬ್ದಗಳಿಂದ ಬುದ್ಧಿಯ ವೃತ್ತಿವಿಶೇಷಗಳನ್ನೇ ಸ್ವೀಕರಿಸಬೇಕು. ॥೨೬॥

**ಕಾ ತ್ವಂ ಕಂಜಪಲಾಶಾಕ್ಷಿ ಕಸ್ಯಾಸೀಹ ಕುತಃ ಸತಿ ।**
**ಇಮಾಮುಪಪುರೀಂ ಭೀರು ಕಿಂ ಚಿಕೀರ್ಷಸಿ ಶಂಸ ಮೇ ॥೨೭॥**

ಹೇ ಸತಿ=ಎಲೈ ಸಾಧ್ವಿಯೇ ! ಕಂಜಪಲಾಶಾಕ್ಷಿ=ಕಮಲಪತ್ರದಂತೆ ವಿಶಾಲ ಕಣ್ಣುಳ್ಳವಳೇ ! ಭೀರು=ಭಯಸ್ವಭಾವದವಳೇ ! ಕಾ ತ್ವಂ=ನೀನಾರು ? (ನಿನ್ನ ಹೆಸರೇನು ?) ಕಸ್ಯಾಸಿ=ಯಾರ ಮಗಳು ? ಇಹ ಕುತಃ=ಇಲ್ಲಿಗೆ ಏಕೆ ಬಂದಿ ? (ಎಲ್ಲಿಂದ ಬಂದಿ ?) ಇಮಾಂ ಪುರೀಂ ಉಪ=ಈ ಪಟ್ಟಣದ ಸಮೀಪದಲ್ಲಿ (ದೇಹದ ಸಮೀಪದಲ್ಲಿ) ಕಿಂ ಚಿಕೀರ್ಷಸಿ=ಏನು ಮಾಡಲಿಚ್ಚಿಸುವಿ ?।।೨೭।।

ನೀನಾರು ? ಇತ್ಯಾದಿಗಳು ಲೋಕಾನುಕಾರ ವಚನ. ಅಥವಾ ಇಲ್ಲಿ ಉಪಪುರೀಂ ಎಂದದ್ದರಿಂದ ಭ್ರಾಂತಿಯಿಂದ ಪ್ರಲಾಪ ಮಾಡುವುದು ಎಂದು ತಿಳಿಯುವುದು. ಇಲ್ಲವಾದರೆ ಉಪಪುರಿ ಎಂದಾಗಬೇಕು. ।।೨೭।।

**ಕ ಏತೇಽನುಪಥಾ ಏತ ಏಕಾದಶಮಹಾಭಟಾಃ ।**
**ಏತಾ ವಾ ಲಲನಾ ಸುಭ್ರು ಕೋಽಯಂ ತೇಽಹಿಃ ಪುರಃಸರಃ ।।೨೮।।**

ಹೇ ಸುಭ್ರು=ಎಲೈ ಒಳ್ಳೆಯ ಹುಬ್ಬುಳ್ಳವಳೇ ! ಏಕಾದಶಮಹಾಭಟಾಃ=ಹನ್ನೊಂದುಜನ ಭಟರುಳ್ಳ ತೇ=ನಿನ್ನ ಅನುಪಥಾ=ಅನುವರ್ತಿಗಳಾದ ಏತೇ ಕೇ=ಇವರೆಲ್ಲ ಯಾರು ? ಏತಾಃ ಲಲನಾಃ ಕಾಃ=ಈ ಸ್ತ್ರೀಯರು ಯಾರು ? ತೇ ಪುರಃಸರಃ=ನಿನ್ನ ಮುಂದೆ ಹೋಗುವ ಅಹಿಃ=ಈ ಸರ್ಪವು ಕಃ=ಯಾರು ? ಎಂದು ಕೇಳಿದನು. (ಮನಸ್ಸಿನಿಂದ ಸಹಿತವಾದ ದಶೇಂದ್ರಿಯಗಳು ಲಲನಾವಿಲಾಸೋಪೇತವೃತ್ತಿವಿಶೇಷಗಳು, ಅಹಿ ಜೊತೆಗೆ ಇರುವ ಶ್ವಾಸ. ಹಿ ಗತೌ ಧಾತು ಅಹಿ=ಅಗತ ಪುರಃಸರಃ ನಾಸಿಕಾರಂಧ್ರದಲ್ಲಿ ಸಂಚರಿಸುವುದು,)।।೨೮।।

**ತ್ವಂ ಹ್ರೀರ್ಭವಾನ್ಯಸ್ಯಥ ವಾಗ್ ರಮಾ ಪತಿಂ**
**ವಿಚಿನ್ವತೀ ಕಿಂ ಮುನಿವದ್ ರಹೋ ವನೇ ।**
**ತ್ವದಂಘ್ರಿಸಾಮ್ಯಾಪ್ತಸಮಸ್ತಕಾಮಃ**
**ಕ್ವ ಪದ್ಮಕೋಶಃ ಪತಿತಃ ಕರಾಗ್ರಾತ್ ।।೨೯।।**

ತ್ವಂ=ನೀನು ಹ್ರೀಃ=ಲಜ್ಜಾಭಿಮಾನಿಯೋ (ಲಕ್ಷ್ಮೀರೂಪ) ಭವಾನೀ=ಪಾರ್ವತಿಯೋ ಅಥ ವಾಕ್=ಸರಸ್ವತಿಯೋ ರಮಾ=ಲಕ್ಷ್ಮೀದೇವಿಯೋ ಅಸಿ=ಆಗಿರುವಿ. ವನೇ=ವನದಲ್ಲಿರುವ ರಹಃ=ಏಕಾಂತದಲ್ಲಿ ಮುನಿವತ್=ಋಷಿಗಳಂತೆ ಪತಿಂ=ಗಂಡನನ್ನು ವಿಚಿನ್ವತೀ ಕಿಂ=ಹುಡುಕುತ್ತಿರುವಿ ಏನು ? ತ್ವದಂಘ್ರಿಸಾಮ್ಯಾಪ್ತಸಮಸ್ತಕಾಮಃ=ನಿನ್ನ ಪಾದಗಳ ಸಾಮ್ಯದಿಂದ ಹೊಂದಲ್ಪಟ್ಟ ಎಲ್ಲ ಕಾಮಗಳುಳ್ಳ ಪದ್ಮಕೋಶಃ=ಕಮಲವು ಕರಾಗ್ರಾತ್ ಕ್ವ ಪತಿತಃ=ಕೈಯಿಂದ ಜಾರಿ ಎಲ್ಲಿ ಬಿದ್ದಿದೆ ?

ರಮೆಯಾದರೆ ಕೈಯಲ್ಲಿ ಕಮಲ ಬೇಕಲ್ಲವೇ. ಲಜ್ಜಾವೃತ್ತಿಯಿಂದ ಹ್ರೀ, ಸಂಕಲ್ಪವೃತ್ತಿಯಿಂದ ಭವಾನೀ, ವಚನವೃತ್ತಿಯಿಂದ ವಾಕ್, ರಮಣವೃತ್ತಿಯಿಂದ ರಮಾ, ಪತಿಂ=ದೇಹಸ್ವಾಮಿಯನ್ನು ವನೇ=ದೇಹದಲ್ಲಿ ವಾಸನಾವನದಲ್ಲಿ ಮುನಿವತ್=ಮನಸ್ಸಿನಂತೆ, ಅಂಘ್ರಿಗಳಿಗಿದ್ದಂತೆ ಮನಸಿಗೂ ಗತಿಸಾಧನತ್ವವಿದೆ. ಮನಸ್ಸಿನಿಂದ ಸಂಕಲ್ಪಿಸಿ ಪುರುಷನು ವಿಷಯಗಳನ್ನು ಕುರಿತು ಹೋಗುವುದರಿಂದ. ಪದ್ಮಕೋಶ ಚಂಡಿನಂತಿರುವ ಮನಸ್ಸು ಕ್ವ ಪತಿತಃ=ಯಾವ ವೃತ್ತಿಯನ್ನು ಹೊಂದಿದೆ ? ಎಂದು ಭಾವ. ।।೨೯।।

**ನಾಸಾಂ ವರೋರ್ವನ್ಯತಮಾ ಭುವಿಸ್ಪೃಕ್**
**ಪುರೀಮಿಮಾಂ ವೀರವರೇಣ ಸಾಕಮ್ ।**
**ಅರ್ಹಸ್ಯಲಂಕರ್ತುಮದಭ್ರಕರ್ಮಣಾ**
**ಲೋಕಂ ಪರಂ ಶ್ರೀರಿವ ಯಜ್ಞಪುಂಸಾ ।।೩೦।।**

ಹೇ ವರೋರು=ಎಲೈ ಪ್ರಮದೋತ್ತಮೆಯೇ ! ಯತಃ=ಯಾವ ಕಾರಣ ಭುವಿಸ್ಪೃಕ್=ಭೂಸ್ಪರ್ಶವುಳ್ಳವಳಾಗಿದ್ದಿಯೋ ಅತಃ=ಆದ್ದರಿಂದ ಆಸಾಂ ಅನ್ಯತಮಾ ನ=ಹಿಂದೆ ಹೇಳಿದ ಹ್ರೀ-ಶ್ರೀ-ಭವಾನಿ ಮುಂತಾದ ದೇವತೆಗಳಲ್ಲೊಬ್ಬಳಲ್ಲ (ದೇವತೆಗಳಿಗೆ ಭೂಸ್ಪರ್ಶವಿಲ್ಲವಾದ್ದರಿಂದ.) ಯಜ್ಞಪುಂಸಾ=ಶ್ರೀನಾರಾಯಣನಿಂದ ಸಹಿತಳಾಗಿ ಶ್ರೀಃ=ಲಕ್ಷ್ಮೀದೇವಿಯು ಪರಂ ಲೋಕಂ ಇವ=ವೈಕುಂಠಲೋಕದಲ್ಲಿ ವಾಸಿಸುವಂತೆ, ಅದಭ್ರಕರ್ಮಣಾ=ಬಹುಪುಣ್ಯವುಳ್ಳ ವೀರವರೇಣ=ವೀರಶ್ರೇಷ್ಠನಾದ ನನ್ನಿಂದ ಸಾಕಂ=ಸಹಿತವಾಗಿ ಇಮಾಂ ಪುರೀಂ=ಈ ಪಟ್ಟಣವನ್ನು ಅಲಂಕರ್ತುಂ ಅರ್ಹಸಿ= ಅಲಂಕರಿಸಲು ಯೋಗ್ಯಳಾಗಿರುವಿ.

ಹ್ರೀ ಮುಂತಾದ ವೃತ್ತಿವಿಶೇಷಗಳಲ್ಲಿ ಒಂದಲ್ಲ. ಸ್ಥಿರವೃತ್ತಿವಿಶಿಷ್ಟಳಾಗಿರುವಿ. ಭುವಿಸ್ಪೃಕ್=ಸತ್ಕರ್ಮದಲ್ಲಿ ಆಶಾವುಳ್ಳವಳು ಎಂದು ಬುದ್ಧಿಪರ ಅರ್ಥ. ।।೩೦।।

**ಯದೇಷ ಮಾಽಪಾಂಗವಿಖಂಡಿತೇಂದ್ರಿಯಂ**
**ಸವ್ರೀಡಹಾಸೇಕ್ಷಣವಿಭ್ರಮದ್‌ಭ್ರುವಃ ।**
**ತವೋಪಸೃಷ್ಟೋ ಭಗವಾನ್ ಮನೋಭವಃ**
**ಪ್ರಬಾಧತೇಽಥಾನುಗೃಹಾಣ ಶೋಭನೇ ।।೩೧।।**

ಹೇ ಶೋಭನೇ=ಎಲೈ ಮಂಗಲಕರಳೇ ! ಯತ್=ಯಾವ ಕಾರಣ ತವ=ನಿನ್ನ ಅಂಪಾಂಗವಿಖಂಡಿತೇಂದ್ರಿಯಂ=ನೋಟದಿಂದ ವಿಚಲಿತವಾದ ಮನಸ್ಸುಳ್ಳ ಮಾ=ನನ್ನನ್ನು ಸವ್ರೀಡ=ಲಜ್ಜೆಯಿಂದ ಸಹಿತವಾದ ಹಾಸ=ನಗುವಿನಂತೆ ಕೂಡಿದ ಈಕ್ಷಣ=ನೋಟದಿಂದ

ವಿಭ್ರಮದ್=ಚಲಿಸುವ ಭ್ರುವಃ=ಹುಬ್ಬುಗಳುಳ್ಳ ತವ=ನಿನ್ನ ದೆಸೆಯಿಂದ ಉಪಸೃಷ್ಟಃ= ಪ್ರಾಪ್ತನಾದ, ಭಗವಾನ್=ಪೂಜ್ಯನಾದ, ಏಷಃ ಮನೋಭವಃ=ಈ ಕಾಮನು ಬಾಧತೇ= ಪೀಡಿಸುವನು. ಅಥ=ಆದ್ದರಿಂದ ಅನುಗೃಹಾಣ=ಅನುಗ್ರಹಿಸು.

(ಮನೋಭವಃ=ರಾಗವೆಂಬ ವೃತ್ತಿಯು ಅಪಾಂಗೇನ=ಶರೀರವಿಲ್ಲದ್ದರಿಂದ ವೃತ್ತಿ ವಿಶೇಷದಿಂದ ಖಂಡಿತ ಇಂದ್ರಿಯವುಳ್ಳ)॥೩೧॥

**ತ್ವದಾನನಂ ಸುಭ್ರು ಸುತಾರಲೋಚನಂ**
**ವ್ಯಾಲಂಬಿನೀಲಾಲಕವೃಂದಸಂವೃತಮ್ ।**
**ಉನ್ನೀಯ ಮೇ ದರ್ಶಯ ವಲ್ಗುವಾಚಕಂ**
**ಯದ್ ವ್ರೀಡಯಾ ನಾಭಿಮುಖಂ ಶುಚಿಸ್ಮಿತೇ ॥೩೨॥**

ಹೇ ಶುಚಿಸ್ಮಿತೇ=ಶುಭ್ರ ಮಂದಹಾಸವುಳ್ಳವಳೇ ! ಯತ್=ಯಾವ ವ್ರೀಡಯಾ= ಲಜ್ಜೆಯಿಂದ ನ ಅಭಿಮುಖಂ=ಸಮ್ಮುಖವಾಗುವುದಿಲ್ಲವೋ ಮತ್ತು ಸುಭ್ರು=ಒಳ್ಳೆಯ ಹುಬ್ಬುಳ್ಳ ಸುತಾರಲೋಚನಂ=ಒಳ್ಳೆಯ ಕಪ್ಪುಗುಡ್ಡೆಗಳುಳ್ಳ ಕಣ್ಣುಳ್ಳ ವ್ಯಾಲಂಬಿ=ನೀಳವಾದ ನೀಲ=ಕಪ್ಪಾದ ಅಲಕವೃಂದಸಂವೃತಂ=ಕೂದಲುಗಳ ಸಮೂಹದಿಂದ ಕೂಡಿದ ವಲ್ಗುವಾಚಕಂ= ಸುಂದರವಾದ ವಾಕ್ಯವುಳ್ಳ ತ್ವದಾನನಂ=ನಿನ್ನ ಮುಖವನ್ನು ಉನ್ನೀಯ ದರ್ಶಯ=ಮೇಲೆತ್ತಿ ತೋರಿಸು.

(ಹೇ ಶುಚಿಸ್ಮಿತೇ=ನಿರ್ಮಲವಿಲಾಸೇ ತ್ವದಾನನಂ=ನಿನ್ನ ಚೇಷ್ಟಾವಿಶೇಷವನ್ನು ದರ್ಶಯ= ತೋರಿಸು. ಸುಭ್ರು=ಭ್ರೂವಿಷಯದಲ್ಲಿ ಭ್ರಮಣಶೀಲವಾದ ಸುತಾರಲೋಚನಂ= ಶೋಭನವಾದ ಆಲೋಚನ (ಯುಕ್ತಿಸಿದ್ಧ) ಜ್ಞಾನವುಳ್ಳ ವ್ಯಾಲಂಬಿ=ಚಂಚಲವಾದ ನೀಲಾಲಕ=ಕಪ್ಪು ಕೂದಲಿಗೆ ಸದೃಶವಾದ ತಾಮಸವಾದ ವೃತ್ತಿವಿಶೇಷಗಳಿಂದ ಸಂವೃತಂ=ಗೂಢವಾದ್ದರಿಂದ ಪ್ರಕಾಶಿಸದಿರುವ ಉನ್ನೀಯ ದರ್ಶಯ=ತಾಮಸವೃತ್ತಿಗಳನ್ನು ಬೇರ್ಪಡಿಸಿ ತೋರಿಸು. ವಲ್ಗುವಾಚಕಂ=ಸುಂದರ ವಾಕ್ಯಗಳುಳ್ಳ ಮುಖವನ್ನು ತೋರಿಸು.)॥೩೨॥

**ಇತ್ಥಂ ಪುರಂಜನಂ ನಾರೀ ಯಾಚಮಾನಮಧೀರವತ್ ।**
**ಅಭ್ಯಭಾಷತ ತಂ ವೀರಂ ಹಸಂತೀ ವೀರಮೋಹಿನೀ ॥೩೩॥**

ಇತ್ಥಂ=ಈ ರೀತಿಯಾಗಿ ಅಧೀರವತ್=ಧೈರ್ಯಗೆಟ್ಟವನಂತೆ ಯಾಚಮಾನಂ= ಬೇಡುತ್ತಿರುವ ಪುರಂಜನಂ ತಂ ವೀರಂ=ಆ ವೀರನಾದ ಪುರಂಜನನನ್ನು ಕುರಿತು

ಹಸಂತೀ=ನಗುತ್ತಿರುವ ವೀರಮೋಹಿನೀ=ವೀರರಿಗೂ ಮೋಹಗೊಳಿಸುವ ನಾರೀ=ಆ ಸ್ತ್ರೀಯು ಅಭ್ಯಭಾಷತ=ಮಾತನಾಡಿದಳು.

(ವೀರಮೋಹಿನೀ ವಿ=ವಿಶಿಷ್ಟವಾದ ಈರ=ಜ್ಞಾನವುಳ್ಳವನಿಗೂ ಮೋಹಗೊಳಿಸುವ ಸ್ವಭಾವವುಳ್ಳ ನಾರೀ=ಪುರುಷಸಂಬಂಧಿಯಾದ ವೈಷಯಿಕಬುದ್ಧಿಯು)।।೩೩।।

ಕಸ್ಯಾಸಿ ? ಎಂಬ ಪ್ರಶ್ನೆಗೆ ಉತ್ತರಿಸುವಳು -

**ನ ವಿದಾಮ ವಯಂ ಸಮ್ಯಕ್ ಕರ್ತಾರಂ ಪುರುಷರ್ಷಭ ।**
**ಆತ್ಮನಶ್ಚ ಪರಸ್ಯಾಪಿ ಗೋತ್ರಂ ನಾಮ ಚ ಯತ್ ಕೃತಮ್ ।।೩೪।।**

ಹೇ ಪುರುಷರ್ಷಭ=ಪುರುಷಶ್ರೇಷ್ಠನೇ ! ಆತ್ಮನಃ=ನನಗಾಗಲಿ ಪರಸ್ಯಾಪಿ=ನನ್ನ ತಂದೆ ಮುಂತಾದವರಿಗಾಗಲಿ ಕರ್ತಾರಂ=ಕರ್ತೃವನ್ನು ವಯಂ=ನಾವು ಸಮ್ಯಕ್ ನ ವಿದಾಮ=ಚೆನ್ನಾಗಿ ತಿಳಿದಿಲ್ಲ. ಅತಃ=ಆದ್ದರಿಂದ ಗೋತ್ರಂ=ಗೋತ್ರವನ್ನು ಚ=ಮತ್ತು ಕೃತಂ ನಾಮ=ಹೆಸರನ್ನೂ ನ ವಿದ್ಮಃ=ತಿಳಿದಿಲ್ಲ ।।೩೪।।

ಏನೂ ಗೊತ್ತಿಲ್ಲವೆಂದರೆ ಚೇತನನೇ ಅಲ್ಲವೇ ಎಂದರೆ, ಹೇಳುವರು -

**ಇಹಾದ್ಯ ಸಂತಮಾತ್ಮಾನಂ ವಿದಾಮ ನ ತತಃ ಪರಮ್ ।**
**ಯೇನೇಯಂ ನಿರ್ಮಿತಾ ವೀರ ಪುರೀ ಶರಣಮಾತ್ಮನಃ ।।೩೫।।**

ಇಹ=ಈ ದೇಶ, ಈ ಕಾಲಗಳಲ್ಲಿ ಸಂತಂ=ಇರುವ ಪದಾರ್ಥವನ್ನು ಮಾತ್ರ ವಿದಾಮ=ತಿಳಿದಿರುವೆನು. ಆತ್ಮಾನಂ=ನನ್ನನ್ನು ಅದ್ಯ=ಈಗಷ್ಟೇ ಜಾನೀಮಹೇ=ತಿಳಿದಿರುವೆ. ತತಃ ಪರಂ=ಸಮೀಪದಲ್ಲಿಲ್ಲದ (ಈ ಕಾಲದಲ್ಲಿಲ್ಲದ್ದನ್ನು) ನ ವಿದ್ಮಃ=ತಿಳಿದಿಲ್ಲ. ಆತ್ಮನಃ ಶರಣಂ ಇಯಂ ಪುರೀ ಯೇನ ನಿರ್ಮಿತಾ ತಂ ಚ ನ ವಿದ್ಮಃ=ನನಗೆ ಆಶ್ರಯವಾದ ಈ ದೇಹವನ್ನು ನಿರ್ಮಿಸಿದವನಾರೆಂದೂ ತಿಳಿಯೆನು. ।।೩೫।।

ನಿನ್ನನ್ನು ಅನುಸರಿಸಿರುವರು ಯಾರು ? ಎಂಬುದಕ್ಕೆ ಉತ್ತರಿಸುವಳು -

**ಏತೇ ಸಖಾಯಃ ಸಖ್ಯೋ ಮೇ ನರಾ ನಾರ್ಯಶ್ಚ ಮಾನದ ।**
**ಸುಪ್ತಾಯಾಂ ಮಯಿ ಜಾಗರ್ತಿ ನಾಗೋಽಯಂ ಪಾಲಯನ್ ಪುರೀಮ್ ।।**

ಏತೇ ನರಾಃ=ಈ ಪುರುಷರು ಮೇ ಸಖಾಯಃ=ನನ್ನ ಸ್ನೇಹಿತರು. ನಾರ್ಯಶ್ಚ=ಸ್ತ್ರೀಯರಾದರೂ ಸಖ್ಯಃ=ಗೆಳತಿಯರು. ಹೇ ಮಾನದ=ಗೌರವವೀವ ರಾಜನೇ ! ಮಯಿ ಸುಪ್ತಾಯಾಂ=ನಾನು ಮಲಗಿದಾಗ ಪುರೀಂ ಪಾಲಯನ್= ದೇಹವನ್ನು ರಕ್ಷಿಸುತ್ತ ಅಯಂ ನಾಗಃ ಜಾಗರ್ತಿ=ಈ ಸರ್ಪವು ಎಚ್ಚರವಾಗಿರುವುದು. ।।೩೬।।

**ದಿಷ್ಟ್ಯಾಽಽಗತೋಽಸಿ ಭದ್ರಂ ತೇ ಗ್ರಾಮ್ಯಾನ್ ಭೋಗಾನಭೀಪ್ಸಸೇ ।**
**ಉದ್ವಹಿಷ್ಯಾಮಿ ತ್ವಾಂ ಸ್ನೇಹಂ ಸ್ವಬಂಧುಭಿರರಿಂದಮ ॥೩೭॥**

ದಿಷ್ಟ್ಯಾ=ದೈವದಿಂದಾಗಿ ಆಗತಃ ಆಸಿ=ಬಂದಿರುವಿ. ತೇ ಭದ್ರಂ ಅಸ್ತು=ನಿನಗೆ ಕಲ್ಯಾಣವಾಗಲಿ. ಗ್ರಾಮ್ಯಾನ್ ಭೋಗಾನ್=ವೈಷಯಿಕ ಸುಖವನ್ನು ಅಭೀಪ್ಸಸೇ=ನನ್ನೊಡನೆ ಅನುಭವಿಸಲಿಚ್ಛಿಸುವಿ. ತಾನ್=ಆ ಕಾಮನೆಗಳನ್ನು ಸ್ವಬಂಧುಭಿಃ=ಸಖಿಯರೊಡನೆ (ಇಂದ್ರಿಯಗಳಿಂದ) ತೇ=ನಿನಗೆ ಉದ್ವಹಿಷ್ಯಾಮಿ=ಸಂಪಾದಿಸುವೆನು. ತ್ವಾ=ನಿನ್ನನ್ನು ಉದ್ವಹಿಷ್ಯಾಮಿ=ಮದುವೆಯಾಗುವೆನು. ॥೩೭॥

**ಇಮಾಂ ತ್ವಮಧಿತಿಷ್ಠಸ್ವ ಪುರೀಂ ನವಮುಖೀಂ ವಿಭೋ ।**
**ಮಯೋಪನೀತಾನ್ ಗೃಹ್ಣಾನಃ ಕಾಮಭೋಗಾಞ್ಛತಂ ಸಮಾಃ ॥೩೮॥**

ವಿಭೋ=ಸಮರ್ಥನೇ ! ನವಮುಖೀಂ=ಒಂಭತ್ತುದ್ವಾರವುಳ್ಳ ಇಮಾಂ ಪುರೀಂ=ಈ ಊರಲ್ಲಿ (ಶರೀರದಲ್ಲಿ) ಶತಂ ಸಮಾಃ=ನೂರುವರ್ಷಪರ್ಯಂತವಾಗಿ ಮಯಾ ಉಪನೀತಾನ್=ನನ್ನಿಂದ ಸಂಪಾದಿತವಾದ ಕಾಮಭೋಗಾನ್ ಗೃಹ್ಣಾನಃ=ವಿಷಯಾನುಭವ ಮಾಡುತ್ತ ಅಧಿತಿಷ್ಠಸ್ವ=ವಾಸಮಾಡು. ॥೩೮॥

**ಕಾ ನು ತ್ವದನ್ಯಂ ರಮಯೇದರತಿಜ್ಞಮಕೋವಿದಮ್ ।**
**ಅಸಾಂಪರಾಯಾಭಿಮುಖಮಶ್ವಸ್ತನವಿದಂ ಪಶುಮ್ ॥೩೯॥**

ಪಶುಂ=ಪಶುತುಲ್ಯನಾದ, ಅಶ್ವಸ್ತನವಿದಂ=ನಾಳಿನ(ಮುಂದಿನ)ದೇನು ಎಂದು ತಿಳಿಯದ, ಅಸಾಂಪರಾಯಾಭಿಮುಖಂ=ಮೋಕ್ಷಾಭಿಮುಖನಲ್ಲದ, ಅಕೋವಿದಂ= ಶಾಸ್ತ್ರದಿಂದುಂಟಾದ ಜ್ಞಾನಶೂನ್ಯನಾದ, ಅರತಿಜ್ಞಂ=ಶಬ್ದಾದಿವಿಷಯಗಳನ್ನರಿಯದ, ತ್ವದನ್ಯಂ=ನಿನ್ನಿಂದ ಭಿನ್ನನಾದವನನ್ನು ಕಾ ನು ರಮಯೇತ್=ಯಾವಳು ಸಂತೋಷ-ಪಡಿಸಿಯಾಳು ?

(ಕಾ ನು=ಯಾವ ಬುದ್ಧಿಯು ತ್ವದನ್ಯಂ=ಮನುಷ್ಯಶರೀರದಲ್ಲಿ ಪ್ರವೇಶಿಸಿದ ಚೇತನನನ್ನು ಬಿಟ್ಟು ಪಶ್ವಾದಿಗಳಲ್ಲಿರುವವನನ್ನು ರಮಯೇತ್=ಸುಖಿಯನ್ನಾಗಿಸಬಹುದು ? ಇಲ್ಲ ಏಕೆಂದರೆ ಅರತಿಜ್ಞಂ=ಪರಮಾತ್ಮರತಿ ಜ್ಞಾನರಹಿತನು, ಅಕೋವಿದಂ=ಅಪಂಡಿತನು. ಬೇರೆಯಲ್ಲ ಹಿಂದಿನಂತೆ.)॥೩೯॥

**ಧರ್ಮೋ ಹ್ಯತ್ರಾರ್ಥಕಾಮೌ ಚ ಪ್ರಜಾನಂದೋಽಮೃತಂ ಯಶಃ ।**
**ಲೋಕಾ ವಿಶೋಕಾ ವಿರಜಾ ಯಾನ್ ನ ಕೇವಲಿನೋ ವಿದುಃ ॥೪೦॥**

ಅತ್ರ=ಗೃಹಸ್ಥಾಶ್ರಮದಲ್ಲಿ ಧರ್ಮಃ=ಧರ್ಮವು ಅರ್ಥಕಾಮೌ ಚ=ಅರ್ಥಕಾಮಗಳೂ ಪ್ರಜಾನಂದಃ=ಪುತ್ರಸುಖವು ಅಮೃತಂ=ಮೋಕ್ಷವೂ ಯಶಃ=ಕೀರ್ತಿಯು ವಿಶೋಕಾಃ= ದುಃಖರಹಿತವಾದ ವಿರಜಾಃ=ದೋಷರಹಿತವಾದ ಲೋಕಾಃ=ಲೋಕಗಳು ಸಂತಿ=ಇವೆ. ಯಾನ್=ಯಾವ ಇವುಗಳನ್ನು (ಗೃಹಸ್ಥಾಶ್ರಮಪ್ರಾಪ್ಯವಾದವನ್ನು) ಕೇವಲಿನಃ ವಿದುಃ= ಬ್ರಹ್ಮಚಾರಿಗಳೋ ಯತಿಗಳೋ ನ ವಿದುಃ=ತಿಳಿಯಲಾರರು. ।।೪೦।।

ಎಲ್ಲ ವರ್ಣಾಶ್ರಮದವರಿಗೆ ಆಧಾರವಾಗಿದೆ ಗೃಹಸ್ಥಾಶ್ರಮ ಎಂದು ಹೇಳುವರು -

**ಪಿತೃದೇವರ್ಷಿಮರ್ತ್ಯಾನಾಂ ಭೂತಾನಾಮಾತ್ಮನಶ್ಚ ಹ ।**
**ಕ್ಷೇಮ್ಯಂ ವದಂತಿ ಶರಣಂ ಭವೇಽಸ್ಮಿನ್ ಯದ್ ಗೃಹಾಶ್ರಮಮ್ ।।೪೧।।**

ಪಿತೃದೇವರ್ಷಿಮರ್ತ್ಯಾನಾಂ=ಪಿತೃಗಳು ದೇವತೆಗಳು ಋಷಿಗಳು ಮನುಷ್ಯರುಗಳಿಗೂ ಭೂತಾನಾಂ=ಎಲ್ಲ ಪ್ರಾಣಿಗಳಿಗೂ ಆತ್ಮನಃ=ದೇಹಕ್ಕೂ ಕ್ಷೇಮ್ಯಂ=ಕ್ಷೇಮಕ್ಕಾಗಿ ಯೋಗ್ಯವಾದ ಶರಣಂ=ಆಶ್ರಯವು ಅಸ್ಮಿನ್ ಭವೇ=ಈ ಜನ್ಮದಲ್ಲಿ (ಸಂಸಾರದಲ್ಲಿ) ಯತ್=ಯಾವ ಕಾರಣ ಗೃಹಾಶ್ರಮಂ ವದಂತಿ=ಗೃಹಸ್ಥಾಶ್ರಮವೆಂದು ಹೇಳುವರು. ।।೪೧।।

**ಕಾ ನಾಮ ವೀರ ವಿಖ್ಯಾತ ವದಾನ್ಯಂ ಪ್ರಿಯದರ್ಶನಮ್ ।**
**ನ ವೃಣೀತ ಪತಿಂ ಪ್ರಾಪ್ತಂ ಮಾದೃಶೀ ತ್ವಾದೃಶಂ ಸ್ವಯಮ್ ।।೪೨।।**

ವೀರ=ವೀರನೇ! ವಿಖ್ಯಾತ=ಪ್ರಸಿದ್ಧನೇ! ವದಾನ್ಯಂ=ದಾನಶೂರನಾದ ಪ್ರಿಯದರ್ಶನಂ= ಸುಂದರನಾದ ಸ್ವಯಂ ಪ್ರಾಪ್ತಂ=ತಾನಾಗಿ ದೊರೆತ ತ್ವಾದೃಶಂ=ನಿನ್ನಂತಹ ಪತಿಂ=ಗಂಡನನ್ನು ಮಾದೃಶೀ=ನನ್ನಂತವಳು ಕಾ ನಾಮ ನ ವೃಣೀತ=ಯಾವಳು ತಾನೇ ಸ್ವೀಕರಿಸಲಾರಳು ?

**ಕಸ್ಯಾ ಮನಸ್ತೇ ಭುಜಗೇಂದ್ರಭೋಗಯೋಃ**
**ಸ್ತ್ರಿಯೋ ನ ಸಜ್ಜೇದ್ ಭುಜಯೋರ್ಮಹಾಭುಜ ।**
**ಯೋಽನಾಥವರ್ಗಾಧಿಮಲಂ ಘೃಣೋದ್ಧತ-**
**ಸ್ಮಿತಾವಲೋಕೇನ ಚರಸ್ಯಪೋಹಿತುಮ್ ।।೪೩।।**

ಹೇ ಮಹಾಭುಜ=ಬಾಹುಶಾಲಿಯೇ ! ಯಃ=ಯಾವನು ಅನಾಥವರ್ಗಾಧಿಂ= ಅನಾಥಸಮೂಹದವರಾದ ನಮ್ಮ ಮನೋವ್ಯಥೆಯನ್ನು ಘೃಣೋದ್ಧತಸ್ಮಿತಾವಲೋಕೇನ= ದಯಾಪೂರ್ಣವಾದ ಮಂದಹಾಸಯುತವಾದ ನೋಟದಿಂದ ಅಲಂ=ಚೆನ್ನಾಗಿ ಅಪೋಹಿತುಂ =ಕಳೆಯಲು ಚರಸಿ=ಸಂಚರಿಸುವಿಯೋ ತೇ=ಆ ನಿನ್ನ ಭುಜಗೇಂದ್ರಭೋಗಯೋಃ ಭುಜಯೋಃ=ಸರ್ಪದ ಶರೀರದಂತೆ ನೀಳಾದ ಬಾಹುಗಳಲ್ಲಿ ಕಸ್ಯಾಃ ಸ್ತ್ರಿಯಃ ಮನಃ ನ

ಸಜ್ಜೇತ್=ಯಾವ ಸ್ತ್ರೀಯ ಮನಸ್ಸು ಆಸಕ್ತವಾಗಲಿಕ್ಕಿಲ್ಲ ? ಎಲ್ಲರ ಮನವೂ ಆಸಕ್ತವಾಗುವುದು ಎಂದು ಭಾವ. ॥೪೩॥

**ನಾರದ ಉವಾಚ -**

**ಇತಿ ತೌ ದಂಪತೀ ತತ್ರ ಸಮುಹ್ಯ ಸಮಯಂ ಮಿಥಃ ।**
**ತಾಂ ಪ್ರವಿಶ್ಯ ಪುರೀಂ ರಾಜನ್ ಮುಮುದಾತೇ ಶತಂ ಸಮಾಃ ॥೪೪॥**

ರಾಜನ್=ಬರ್ಹಿಯೇ ! ಇತಿ=ಈ ರೀತಿಯಾಗಿ ತೌ ದಂಪತೀ=ಆ ಪತಿ-ಪತ್ನಿಯರು ಮಿಥಃ=ಪರಸ್ಪರವಾಗಿ ಸಮಯಂ ಸಮೂಹ್ಯ=ಸಂಕೇತ (ನಿಯಮ) ಮಾಡಿಕೊಂಡು ತಾಂ ಪ್ರವಿಶ್ಯ= ಆ ಪುರದಲ್ಲಿ (ಶರೀರದಲ್ಲಿ) ಪ್ರವೇಶ ಮಾಡಿ ಶತಂ ಸಮಾಃ=ನೂರು ವರ್ಷಗಳವರೆಗೆ ತತ್ರ =ಅಲ್ಲಿ ಮುಮುದಾತೇ=ಸಂತೋಷಪಟ್ಟರು. ॥೪೪॥

**ಉಪಗೀಯಮಾನೋ ಲಲಿತಂ ತತ್ರ ತತ್ರ ಚ ಗಾಯಕೈಃ ।**
**ಕ್ರೀಡನ್ ಪರಿವೃತಃ ಸ್ತ್ರೀಭಿರ್ಹ್ರದಿನೀಮಾವಿಶಚ್ಛುಚೌ ॥೪೫॥**

ತತ್ರ ತತ್ರ=ಅಲ್ಲಲ್ಲಿ ಗಾಯಕೈಃ=ಗಾನ ಮಾಡುವವರಿಂದ ಲಲಿತಂ=ಸುಂದರವಾಗಿ ಉಪಗೀಯಮಾನಃ=ಸ್ತುತಿಸಲ್ಪಟ್ಟು ಕ್ರೀಡನ್=ಕ್ರೀಡಿಸುತ್ತ ಶುಚೌ=ಗ್ರೀಷ್ಮ ಋತುವಿನಲ್ಲಿ ಸ್ತ್ರೀಭಿಃ ಪರಿವೃತಃ=ಸ್ತ್ರೀಯರಿಂದ ಕೂಡಿಕೊಂಡು ಹ್ರದಿನೀಂ ಆವಿಶತ್=ಸರೋವರದಲ್ಲಿ ಪ್ರವೇಶಿಸಿದನು.

ತತ್ರ ತತ್ರ=ಜಾಗ್ರದಾದ್ಯವಸ್ಥಾಗಳಲ್ಲಿ ಗಾಯಕೈಃ=ಗಾಯಕರಂತಿರುವ ಇಂದ್ರಿಯಗಳಿಂದ ಉಪಗೀಯಮಾನಃ=ಶಬ್ದಾದಿವಿಷಯಗಳನ್ನು ಸೇವಿಸುತ್ತ (ಜಾಗ್ರದವಸ್ಥೆಯಲ್ಲಿ) ಸ್ವಪ್ನಾವಸ್ಥೆಯಲ್ಲಿ ಸ್ತ್ರೀಭಿಃ=ಕೇವಲ ಮನೋವೃತ್ತಿಯಿಂದ ಪರಿವೃತಃ ಕೂಡಿಕೊಂಡು ಶುಚೌ=ತನ್ನಿಮಿತ್ತ ಶೋಕ ಪ್ರಾಪ್ತವಾದಾಗ ಹ್ರದಿನೀಂ=ಶೀತಲವಾದ ಅಗಾಧವಾದ ನೀರಿನ ಮಡುವಿನಂತಿರುವ ಸ್ವಚ್ಛಬ್ದವಾಚ್ಯನಾದ ಬ್ರಹ್ಮನನ್ನು ಹೊಂದಿದನು, ಸುಷುಪ್ತಿಯಲ್ಲಿ ಗಾಢನಿದ್ರೆ ಪಡೆದನು. ಗ್ರೀಷ್ಮ ಋತುವಿನಲ್ಲಿ ಸತ್ಪುರುಷನು ಸ್ತ್ರೀಶಬ್ದವಾಚ್ಯ ಭಕ್ತಾದಿಗಳಿಂದ ಕೂಡಿ ಕ್ರೀಡನ್=ಕಾಲ ಕಳೆಯುತ್ತ ಹ್ರದಿನೀಂ=ಬ್ರಹ್ಮನಾಡಿಯನ್ನು ಹೃದಯಸ್ಥಾನದಲ್ಲಿರುವ ಶ್ರೀನಾರಾಯಣನನ್ನು ಪ್ರವೇಶಿಸಿದನು. ॥೪೫॥

**ಸಪ್ತೋಪರಿ ಕೃತಾ ದ್ವಾರಃ ಪುರಸ್ತಸ್ಯಾಸ್ತು ದ್ವೇ ಅಧಃ ।**
**ಪೃಥಗ್ ವಿಷಯಗತ್ಯರ್ಥಂ ತಸ್ಯಾಂ ಯಃ ಕಶ್ಚನೇಶ್ವರಃ ॥೪೬॥**

ತಸ್ಯಾಃ ಪುರಃ=ಆ ಪಟ್ಟಣಕ್ಕೆ (ದೇಹಕ್ಕೆ) ವಿಷಯಗತ್ಯರ್ಥಂ=ದೇಶಗಳಿಗೆ ಹೋಗಲು (ಶಬ್ದಾದಿವಿಷಯಗಳನ್ನು ತಿಳಿಯಲು) ಪೃಥಕ್=ಪ್ರತ್ಯೇಕವಾಗಿ ಸಪ್ತ=ಏಳು ದ್ವಾರಃ= ಮಾರ್ಗಗಳು ಉಪರಿ ಕೃತಾಃ=ಮೇಲೆ ಮಾಡಲ್ಪಟ್ಟಿವೆ. (ಎರಡು ಕಣ್ಣು ಎರಡು ಕಿವಿ, ಎರಡು ಮೂಗಿನ ಹೊರಳಿ, ಒಂದು ಬಾಯಿ.) ಅಧಃ=ಕೆಳಗೆ ದ್ವೇ=ಎರಡು ಮಾರ್ಗ. (ಪಾಯು-ಉಪಸ್ಥ) ತಸ್ಯಾಂ=ಈ ದೇಹದಲ್ಲಿ (ಪುರದಲ್ಲಿ) ಯಃ ಕಶ್ಚನ=ಯಾವನೊಬ್ಬನು ಈಶ್ವರಃ = (ಪ್ರಾಕೃತನಾಮರೂಪರಹಿತನಾದ ಲೋಕವಿಲಕ್ಷಣನಾದ ಶ್ರೀನಾರಾಯಣನು ಇರುವನು.) ದೇಹಸ್ವಾಮಿಯಾದ ಜೀವನು ಇರುವನು. (ಪ್ರಭುರ್ಹಿ ಜಡಮಪೇಕ್ಷ್ಯ ಜೀವಃ । ಜಡಜಗತ್ತಿಗಿಂತ ಸಮರ್ಥನಾದ್ದರಿಂದ ಜೀವನಿಗೂ ಈಶ್ವರ ಎಂಬ ನಾಮವಿದೆ.)॥೪೬॥

**ಪಂಚದ್ವಾರಸ್ತು ಪೌರಸ್ತ್ಯಾ ದಕ್ಷಿಣೈಕಾ ತಥೋತ್ತರಾ ।**
**ಪಶ್ಚಿಮೇ ದ್ವೇ ಅಮೂಷಾಂ ತೇ ನಾಮಾನಿ ನೃಪ ವರ್ಣಯೇ ॥೪೭॥**

ಹೇ ನೃಪ=ರಾಜನೇ ! ಏಳರಲ್ಲಿ ಪಂಚದ್ವಾರಃ=ಐದು ದ್ವಾರಗಳು ಪೌರಸ್ತ್ಯಾಃ=ಎದುರಿಗೆ ಇದ್ದವುಗಳು, ಪೂರ್ವಾಭಿಮುಖವಾದುವು. ಏಕಾ ದಕ್ಷಿಣಾ=ಒಂದು ದಕ್ಷಿಣಾಭಿಮುಖ-ವಾದುದು. ತಥಾ=ಹಾಗೂ ಉತ್ತರಾ=ಉತ್ತರಾಭಿಮುಖವಾದುದೊಂದು. ಪಶ್ಚಿಮೇ ದ್ವೇ= ಅದೋಭಾಗದಲ್ಲಿ ಎರಡು ಅಮೂಷಾಂ=ನವದ್ವಾರಗಳ ನಾಮಾನಿ=ಹೆಸರುಗಳನ್ನು ವರ್ಣಯೇ=ಹೇಳುವೆನು. ॥೪೭॥

**ಖದ್ಯೋತಾವಿರ್ಮುಖೀ ಚ ಪ್ರಾಕ್ ದ್ವಾರಾವೇಕತ್ರ ನಿರ್ಮಿತೇ ।**
**ವಿಭ್ರಾಜಿತಂ ಜನಪದಂ ಯಾತಿ ತಾಭ್ಯಾಂ ದ್ಯುಮತ್ಸಖಃ ॥೪೮॥**

ಖದ್ಯೋತಾವಿರ್ಮುಖೀ=ಖದ್ಯೋತ ಆವಿರ್ಮುಖಿ ಎಂಬ ಪ್ರಾಕ್ ದ್ವಾರೌ ಏಕತ್ರ ನಿರ್ಮಿತೇ=ಮುಂದಿನ ಎರಡು ದ್ವಾರಗಳು ಒಂದು ವಿಷಯದಲ್ಲಿ ನಿಯತವಾಗಿವೆ.

(ಖೇ=ಆಕಾಶವಿದ್ದಾಗ ದ್ಯೋತತೇ=ತೋರುವುದು, ರೂಪವನ್ನು ಗ್ರಹಣ ಮಾಡುವುದು ಕಾರಣ ಖದ್ಯೋತ ಅಥವಾ ದೀಪದ ಹುಳದಂತೆ(ಖದ್ಯೋತವತ್) ಹೊಳೆಯುವುದರಿಂದಲೂ ಬಲಗಣ್ಣು ಆವಿರ್ಮುಖಿ=ಪ್ರಕಾಶವಿದ್ದರೆ ಅಭಿಮುಖವಾಗುವುದು. ಪ್ರಕಾಶಮುಖಿ-ಯಾದುದು, ತಮೋಮುಖಿಯಲ್ಲ ಕತ್ತಲಲ್ಲಿ ರೂಪ ಕಾಣುವುದಿಲ್ಲ, ಕಾರಣ ಆವಿರ್ಮುಖಿ ಎಡಗಣ್ಣು) ತಾಭ್ಯಾಂ=ಇವರಿಂದ ದ್ಯುಮತ್ಸಖಃ=ಆ ಹೆಸರಿನ ಗೆಳೆಯನುಳ್ಳವನು. ವಿಭ್ರಾಜಿತಂ=ಪ್ರಕಾಶಮಾನವಾದ ಜನಪದಂ=ದೇಶಕ್ಕೆ ಯಾತಿ=ಹೋಗುವನು. ರೂಪವನ್ನು ವಿಷಯೀಕರಿಸುವನು ಎಂಧರ್ಥ. ದ್ಯುಮಾನ್ ಎಂದರೆ ಸೂರ್ಯ, ಅವನೇ ಸಖನಾಗಿವುಳ್ಳ ಆದಿತ್ಯನ ಆವಾಸವಾದ್ದರಿಂದ ಚಕ್ಷುವಿಗೂ ದ್ಯುಮಾನ್ ಎಂದು ಹೆಸರು. ಸೂರ್ಯನ

ಅನುಗ್ರಹದಿಂದ ಚಕ್ಷುರಿಂದ್ರಿಯದಿಂದ ರೂಪವನ್ನು ತಿಳಿಯುವನೆಂದರ್ಥ. ''ಆದಿತ್ಯಃ ಚಕ್ಷುರ್ಭೂತ್ವಾಕ್ಷಿಣೀ ಪ್ರಾವಿಶತ್'' ''ಆದಿತ್ಯೋ ಹ ವೈ ಚಕ್ಷುಷ್ಟೇನಾನುಗೃಹೀತಂ ರೂಪಂ ಗೃಹ್ಣಾತಿ'' ಎಂದು ಶ್ರುತಿ ಇದೆ. ॥೪೮॥

**ನಲಿನೀ ನಾಲಿನೀ ಚ ಪ್ರಾಗ್ ದ್ವಾರಾವೇಕತ್ರ ನಿರ್ಮಿತೇ ।**
**ಅವಧೂತಸಖಸ್ತಾಭ್ಯಾಂ ವಿಷಯಂ ಯಾತಿ ಸೌರಭಮ್ ॥೪೯॥**

ನಲಿನೀ ನಾಲಿನೀ ಚ ಪ್ರಾಗ್ ದ್ವಾರೌ=ನಲಿನೀ ನಾಲಿನೀ ಎಂಬ ಎರಡು ದ್ವಾರಗಳು ಏಕತ್ರ ನಿರ್ಮಿತೇ=ಒಂದು ವಿಷಯದಲ್ಲಿ ನಿರ್ಮಿಸಲ್ಪಟ್ಟಿವೆ. ಅವಧೂತಸಖಃ=ಅವಧೂತನೆಂಬ ಗೆಳೆಯನೊಡನೆ ಸೌರಭಂ ಯಾತಿ=ಸೌರಭದೇಶಕ್ಕೆ ಹೋಗುವನು.

(ನಲವೆಂಬ ಶ್ವಾಸವುಳ್ಳ ನಾಲವೆಂಬ ಉಚ್ಛ್ವಾಸ ಉಳ್ಳ ಎರಡು ಮೂಗಿನ ರಂಧ್ರಗಳು ಅಭಿಮಾನಿಯಾದ ವಾಯುವಿನಿಂದ ಪ್ರೇರಿತವಾಗಿ ಘ್ರಾಣೇಂದ್ರಿಯವು ಗಂಧವನ್ನು ಗ್ರಹಿಸುವುದು.)

**ಮುಖ್ಯಾ ನಾಮ ಪುರಸ್ತಾದ್ ದ್ವಾಸ್ತಯಾಽಽಪಣಬಹೂದನೌ ।**
**ವಿಷಯೌ ಯಾತಿ ಪುರರಾಟ್ ರಸಜ್ಞವಿಪಣಾನ್ವಿತಃ ॥೫೦॥**

ಪುರಸ್ತಾತ್=ಎದುರಿಗೆ ಮುಖ್ಯಾನಾಮ ದ್ವಾಃ=ಮುಖವೆಂಬ ದ್ವಾರವಿದೆ. ಪುರರಾಟ್=ಪುರಂಜನನು ರಸಜ್ಞವಿಪಣಾನ್ವಿತಃ=ರಸಜ್ಞ-ವಿಪಣರೆಂಬ ಗೆಳೆಯರಿಂದ ಕೂಡಿಕೊಂಡು ಆಪಣಬಹೂದನೌ ವಿಷಯೌ ಯಾತಿ=ಈ ಹೆಸರಿನ ಪಟ್ಟಣಗಳಿಗೆ ಹೋಗುವನು. ಅಂದರೆ ಜಿಹ್ವೇಂದ್ರಿಯ-ವಾಗಿಂದ್ರಿಯಗಳಿಂದ ನಾನಾವಿಧ ರಸಾಸ್ವಾದನ ಮಾಡುವನು, ಮಾತನಾಡುವನು ಎಂದು ಭಾವ. (ವರುಣ-ಅಗ್ನಿಗಳು ಅಭಿಮಾನಿಗಳು, ಅವರ ಅನುಗ್ರಹದಿಂದ ಎಂದು ತಿಳಿಯಬೇಕು.)॥೫೦॥

**ಪಿತೃಭೂರ್ನೃಪ ಪುರ್ಯಾ ದ್ವಾ ದಕ್ಷಿಣೇನ ಪುರಂಜನಃ ।**
**ರಾಷ್ಟ್ರಂ ದಕ್ಷಿಣಪಾಂಚಾಲಂ ಯಾತಿ ಶ್ರುತಧರಾನ್ವಿತಃ ॥೫೧॥**

ನೃಪ=ರಾಜನೇ ! ಪುರ್ಯಾಃ=ಪಟ್ಟಣದ ಪಿತೃಭೂಃ ದ್ವಾಃ=ಪಾತ್ರಗಳಾದ್ದರಿಂದ ಪಿತೃಗಳೆನಿಸಿದ ದೇವತೆಗಳು, ಪ್ರಿಯರಾಗುವುದರಿಂದ ಪಿತೃಭೂ ಎನಿಸಿದ ದ್ವಾರವು ದಕ್ಷಿಣೇನ=ಬಲಗಿವಿಯಿಂದ ಹೊರಹೊರಟ ಪುರಂಜನಃ=ಪುರಂಜನನು ಶ್ರುತಧರಾನ್ವಿತಃ= ಶ್ರೋತೇಂದ್ರಿಯ ಸಹಿತನಾಗಿ ದಕ್ಷಿಣಪಾಂಚಾಲಂ ರಾಷ್ಟ್ರಂ ಯಾತಿ=ದಕ್ಷಿಣ ಪಾಂಚಾಲದೇಶಕ್ಕೆ ತೆರಳುವನು.

ದಕ್ಷಿಣರು ಎಂದರೆ ದೇವತೆಗಳ ಲೋಕಕ್ಕೆ ಹೋಗುವವನು. (ಬಲಗಿವಿಯಿಂದ ಉತ್ಕ್ರಾಂತನಾದವನು) (ಅಥವಾ ಪಂಚೇಂದ್ರಿಯಗಳಿಗೆ ಭೂಷಣನಾದ ಅಥವಾ ಅಲಂಬುದ್ಧಿಜನಕನಾದ) ಪುರಂ ಬ್ರಹ್ಮನನ್ನು ಜನಯತಿ ಪ್ರಾದುರ್ಭಾವಯತಿ ಪ್ರಕಾಶಯತಿ ಇತಿ ಪುರಂಜನಃ=ತತ್ವಜ್ಞಾನಿಯು ನಿವೃತ್ತಶಾಸ್ತ್ರವನ್ನು ತಿಳಿಯುವನು. (ದಕ್ಷಿಣಃ ತತ್ವಜ್ಞಾನ ಸಮರ್ಥವಾದುದು, ಇತಿಹಾಸ ಸಹಿತವಾದ್ದರಿಂದ ಪಂಚಸಂಖ್ಯಾಕವಾದ ವೇದವೇ ಅಲಂ=ತತ್ವಜ್ಞಾನಕ್ಕೆ ಸಾಕು ಬೇರೆ ಬೇಕಿಲ್ಲವೆಂದು ತತ್ವಜ್ಞಾನಿಯು ವೇದಾಸಕ್ತನಾಗುವನು. ಮಧ್ಯಮ ಜೀವನು ಇಂದು ವಿಷಯಗಳೇ ರಮಿಸಲು ಸಾಕು ಎಂದು ಪಾಂಚಾಲಂ ರಾಷ್ಟ್ರಂ=ಶಬ್ದಾದಿವಿಷಯಗಳ ಸಮೂಹಕ್ಕೆ ತೆರಳುವನು. ದಿಗ್ದೇವತೆಗಳ ಅನುಗ್ರಹದಿಂದ ಶ್ರೋತ್ರೇಂದ್ರಿಯದಿಂದ ವೇದಾದಿಶಾಸ್ತ್ರಗಳನ್ನು ತಿಳಿಯುವೆನೆಂದರ್ಥ. ।।೫೧।।

**ದೇವಭೂರ್ನಾಮ ಪುರ್ಯಾ ದ್ವಾ ಉತ್ತರೇಣ ಪುರಂಜನಃ ।**
**ರಾಷ್ಟ್ರಮುತ್ತರಪಾಂಚಾಲಂ ಯಾತಿ ಶ್ರುತಧರಾನ್ವಿತಃ ।।೫೨।।**

ಪುರ್ಯಾಃ=ಪಟ್ಟಣದ (ದೇಹದ) ಉತ್ತರೇಣ=ಉತ್ತರದಿಕ್ಕಿಗಿರುವ ದ್ವಾಃ=ಬಾಗಿಲವು ದೇವಭೂಃ ನಾಮ=(ಎಡಗಿವಿಯು) ಪ್ರಜಾದಿರೂಪದಿಂದ ಕ್ರೀಡಾದಿಗುಣೋಪೇತ-ರಾದ್ದರಿಂದ ದೇವತೆಗಳೆಂದರೆ ಪಿತೃಗಳು ಪ್ರಿಯರಾಗುವರು ಶ್ರಾದ್ಧಾದಿಗಳನ್ನು ಮಾಡುವವನಿಗೆ. ಆದ್ದರಿಂದ ದೇವಭೂ ಎನಿಸಿದ ಎಡದಕಿವಿಯಿಂದ ಉತ್ಕ್ರಾಂತನಾದವನು ಉತ್ತರಪಾಂಚಾಲಂ ರಾಷ್ಟ್ರಂ=ಊರ್ಧ್ವಲೋಕಪ್ರಾಪ್ತಿಗೆ ಕಾರಣವಾದ್ದರಿಂದ ಉತ್ತರರೆನಿಸಿದ ಪಿತೃಗಳ ಲೋಕಕ್ಕೆ ಹೋಗುವನು.

"ದಕ್ಷಿಣಶ್ರೋತ್ರಮಾರ್ಗೇಣ ದೇವಲೋಕಂ ವ್ರಜತ್ಯಸೌ ।
ವಾಮಶ್ರೋತ್ರೇಣ ಪಿತೃಣಾಂ ..... "

ಎಂದು ವೇದವಿದೆ. ಕಾರಣ ಹೀಗೆ ಹೇಳಿದೆ. ।।೫೨।।

**ಆಸುರೀ ನಾಮ ಪಶ್ಚಾದ್ ದ್ವಾಸ್ತಯಾ ಯಾತಿ ಪುರಂಜನಃ ।**
**ಗ್ರಾಮ್ಯಕಂ ನಾಮ ವಿಷಯಂ ದುರ್ಮದೇನ ಸಮನ್ವಿತಃ ।।೫೩।।**

ಪಶ್ಚಾತ್=ಕೆಳಗೆ ಇರುವ ದ್ವಾಃ=ದ್ವಾರವು ಆಸುರೀ ನಾಮ=ಇಂದ್ರಿಯಗಳಿಗೆ ಗತಿಕಾರಣವಾದುದರಿಂದ, ಸುಖಜನಕವಾದ್ದರಿಂದ, ಆಸುರಿ ಎಂಬ ನಾಮವುಳ್ಳದ್ದು ಶಿಶ್ನವು, ತಯಾ=ಅದರಿಂದ ಪುರಂಜನಃ=ಜೀವನು (ರಾಜ) ದುರ್ಮದೇನ ಸಮನ್ವಿತಃ= ದುಷ್ಟಮದವುಳ್ಳ ಉಪಸ್ಥೇಂದ್ರಿಯದಿಂದ ಗ್ರಾಮ್ಯಕಂ ನಾಮ ವಿಷಯಂ=ಗ್ರಾಮ್ಯಕದೇಶಕ್ಕೆ ಹೋಗುವನು. (ಮೈಥುನಸುಖವನ್ನು ಯಾತಿ=ಪಡೆಯುವನು.)।।೫೩।।

**ನಿರ್ಋತಿರ್ನಾಮ ಪಶ್ಚಾದ್ ದ್ವಾಸ್ತಯಾ ಯಾತಿ ಪುರಂಜನಃ ।**
**ವೈಶಸಂ ನಾಮ ವಿಷಯಂ ಲುಬ್ಧಕೇನ ಸಮನ್ವಿತಃ ॥೫೪॥**

ಪಶ್ಚಾತ್=ಕೆಳಗಿನ ದ್ವಾಃ=ಇನ್ನೊಂದು ಮಾರ್ಗವು ನಿರ್ಋತಿಃ ನಾಮ=ಮಲನಿರ್ಗಮನಕ್ಕೆ ಸಾಧನವಾದ್ದರಿಂದ ಈ ಹೆಸರಿನದು, ಗುದ ಎಂಬ ಛಿದ್ರವು ತಯಾ=ಅದರಿಂದ ಪುರಂಜನಃ=ಜೀವನು ಲುಬ್ಧಕೇನ ಸಮನ್ವಿತಃ=ಪಾಯು ಎಂಬ ಇಂದ್ರಿಯದಿಂದ ಸಹಿತನಾಗಿ ವೈಶಸಂ ವಿಷಯಂ ಯಾತಿ=ಮಲವಿಸರ್ಜನ ಮಾಡುವನು. ಹಿಂಸಾರೂಪನರಕ ಹೊಂದುವನು. (ಕಷ್ಟದಿಂದ ಮಲಮೋಚನ ಮಾಡುವುದರಿಂದ ಲುಬ್ಧಕವೆಂದು ಹೆಸರು.)॥೫೪॥

**ಅಂಧಾವಮೀಷಾಂ ಪೌರಾಣಾಂ ನಿರ್ವಾಕ್ಪೇಶಸ್ಕರಾವುಭೌ ।**
**ಅಕ್ಷಣ್ವತಾಮಧಿಪತಿಸ್ತಾಭ್ಯಾಂ ಯಾತಿ ಕರೋತಿ ಚ ॥೫೫॥**

ಅಮೀಷಾಂ=ಈ ದ್ವಾರಗಳ ಮಧ್ಯದಲ್ಲಿ ಪೌರಾಣಾಂ=ದೇಹಸಂಬಂಧಿಯಾದ ನಿರ್ವಾಕ್ಪೇಪಸ್ಕರೌ=ವಾಕ್ಯರಹಿತವಾದ ನಿರ್ವಾಕ್ಯವೆನಿಸಿದ ಪಾದವು, ಕರ್ತೃಪುರುಷನಿಗೆ ಉಪರಣವಾದುದರಿಂದ ಉಪಸ್ಕರವೆನಿಸುವ ಹಸ್ತವು ಉಭೌ=ಎರಡೂ ಅಂಧೌ= ಛಿದ್ರವಿಲ್ಲದವು ಅಕ್ಷಣ್ವತಾಂ ಅಧಿಪತಿಃ=ಇಂದ್ರಿಯಗಳುಳ್ಳ ಜೀವರಿಗೆ ನಿಯಾಮಕನಾದ ಪುರಂಜನನು ತಾಭ್ಯಾಂ=ಪಾದ ಹಸ್ತಗಳಿಂದ ಯಾತಿ ಕರೋತಿ=ನಡೆಯುವನು, ಕಾರ್ಯ ಮಾಡುವನು. ॥೫೫॥

**ಸ್ವಯಂ ತ್ವಂತಃಪುರಗತೋ ವಿಷೂಚಿನಾ ಸಮನ್ವಿತಃ ।**
**ಮೋಹಂ ಪ್ರಸಾದಂ ಹರ್ಷಂ ವಾ ಯಾತಿ ಜಾಯಾತ್ಮಜೋದ್ಭವಮ್ ॥೫೬॥**

ಸ್ವಯಂ ತು=ಪುರಂಜನನಾದರೂ ವಿಷೂಚಿನಾ ಸಮನ್ವಿತಃ=ಎಲ್ಲ ಕಡೆಗೂ ಸಂಚರಿಸುವುದರಿಂದ ವಿಷೂತಿ ಎನಿಸಿದ (ವಿಷ್ವಕ್ ಅಂಚತೀತಿ) ಮನಸ್ಸಿನಿಂದ ಕೂಡಿಕೊಂಡು ಜಾಯಾತ್ಮಜೋದ್ಭವಂ=ಹೆಂಡತಿ ಮಕ್ಕಳಿಂದುಂಟಾಗುವ ಮೋಹಂ=ನರಕವನ್ನು ಪ್ರಸಾದಂ=ಪರಮಾನಂದವನ್ನು ಹರ್ಷಂ=ಸ್ವರ್ಗವನ್ನು ಯಾತಿ=ಹೊಂದುವನು. (ಮುಹ್ಯತಿ ಅನಯಾ ಇತಿ ಮೋಹಃ=ನಿರಯಃ । ಪ್ರಸೀದತಿ ಅನೇನ ಇತಿ ಪ್ರಸಾದಃ ಪರಮಾನಂದಃ, ಹೃಷ್ಯತ್ಯನೇನೇತಿ ಹರ್ಷಃ ಸ್ವರ್ಗಃ ।) (ಜಾಯಾ=ಭಕ್ತಿ, ಆತ್ಮಜ=ಜ್ಞಾನ, ಇವುಗಳಿಂದ ಉತ್ಪನ್ನವಾದ ಸಂತೋಷ ಹೊಂದುವನು.)॥೫೬॥

**ಏವಂ ಕರ್ಮಸು ಸಂಸಕ್ತಃ ಕಾಮಾತ್ಮಾ ವಂಚಿತೋಽಬುಧಃ ।**
**ಮಹಿಷೀ ಯದ್ ಯದೀಹೇತ ತತ್ ತದೇವಾನ್ವವರ್ತತ ॥೫೭॥**

ಏವಂ=ಈ ರೀತಿಯಾಗಿ ಕರ್ಮಸು=ಗ್ರಾಮ್ಯಕರ್ಮಗಳಲ್ಲಿ ಸಂಸಕ್ತಃ=ಅತ್ಯಂತ ಆಸಕ್ತನಾಗಿ ಕಾಮಾತ್ಮಾ=ವಿಷಯಗಳಲ್ಲಿ ಮನಸ್ಸುಳ್ಳ ಅಬುಧಃ=ವಿವೇಕಜ್ಞಾನಶೂನ್ಯನಾದ ವಂಚಿತಃ= ದೈವದಿಂದ ವಂಚಿತನಾಗಿ ಮಹಿಷೀ=ಹೆಂಡತಿಯು (ಬುದ್ಧಿಯು, ಮತಂ ಹಿನಸ್ತೀತಿ ಮಹಿಷೀ ಮಹಿತಂ ದದಾತೀತಿ ಮಹಿಷೀ) ಯದ್ ಯದ್ ಈಹೇತ=ಏನೇನು ಮಾಡಬೇಕೆಂದು ಇಚ್ಛಿಸುವಳೋ ತತ್ ತತ್ ಏವ ಅನ್ವವರ್ತತ=ಅದದನ್ನೇ ಮಾಡುತ್ತಿದ್ದನು. ।।೫೭।।

**ಕ್ವಚಿತ್ ಪಿಬಂತ್ಯಾಂ ಪಿಬತಿ ಮದಿರಾಂ ಮದವಿಹ್ವಲಃ ।**
**ಅಶ್ನಂತ್ಯಾಂ ಕ್ವಚಿದಶ್ನಾತಿ ಜಕ್ಷತ್ಯಾಂ ಸಹ ಜಕ್ಷತಿ ।।೫೮।।**

ಕ್ವಚಿತ್=ಕೆಲವು ಸಲ ಪಿಬಂತ್ಯಾಂ=ಕುಡಿಯಲು ಇಚ್ಛಿಸಿದರೆ ಮದಿರಾಂ=ಮದ್ಯವನ್ನು ಪಿಬತಿ=ಪಾನ ಮಾಡುವನು. ಮದವಿಹ್ವಲಃ=ಮದದಿಂದ ಚಂಚಲನಾಗುವನು. ಕ್ವಚಿತ್= ಕೆಲವೊಮ್ಮೆ ಅಶ್ನಂತ್ಯಾಂ=ಉಣ್ಣಲಿಚ್ಛಿಸಿದರೆ ಅಶ್ನಾತಿ=ಉಣ್ಣುವನು. ಜಕ್ಷತ್ಯಾಂ ಸಹ ಜಕ್ಷತಿ= ತಿನ್ನಲಿಚ್ಛಿಸಿದರೆ ತಿನ್ನುವನು. ।।೫೮।।

**ಕ್ವಚಿದ್ ಗಾಯತಿ ಗಾಯಂತ್ಯಾಂ ರುದಂತ್ಯಾಂ ರುದತಿ ಕ್ವಚಿತ್ ।**
**ಕ್ವಚಿದ್ಧಸಂತ್ಯಾಂ ಹಸತಿ ಜಲ್ಪಂತ್ಯಾಮನುಜಲ್ಪತಿ ।।೫೯।।**

ಕ್ವಚಿತ್=ಕೆಲವೊಮ್ಮೆ ಗಾಯಂತ್ಯಾಂ ಗಾಯತಿ=ಹಾಡಲು ಹಾಡುವನು. ರುದಂತ್ಯಾಂ ರುದತಿ=ಅತ್ತರೆ ಅಳುವನು. ಹಸಂತ್ಯಾಂ ಹಸತಿ=ನಕ್ಕರೆ ನಗುವನು. ಜಲ್ಪಂತ್ಯಾಂ ಅನು ಜಲ್ಪತಿ=ಮಾತಾಡಿದರೆ ಅನುಸರಿಸಿ ಮಾತಾಡುವನು. ।।೫೯।।

**ಕ್ವಚಿದ್ಧಾವತಿ ಧಾವಂತ್ಯಾಂ ತಿಷ್ಠತ್ಯಾಮನುತಿಷ್ಠತಿ ।**
**ಅನುಶೇತೇ ಶಯಾನಾಯಾಮನ್ವಾಸ್ತೇ ಕ್ವಚದಾಸತೀಮ್ ।।೬೦।।**

ಕ್ವಚಿತ್=ಕೆಲವೊಮ್ಮೆ ಧಾವಂತ್ಯಾಂ ಧಾವತಿ=ಅವಳು ಓಡಿದರೆ ಓಡುವನು. ತಿಷ್ಠತ್ಯಾಂ ಅನುತಿಷ್ಠತಿ=ನಿಂತರೇ ತಾನೂ ನಿಲ್ಲುವನು. ಶಯಾನಾಯಾಂ ಅನುಶೇತೇ=ಮಲಗಿದರೇ ಮಲಗುವನು. ಆಸತೀಂ ಅನು ಆಸ್ತೇ=ಕುಳಿತರೆ ಕೂಡುವನು. ।।೬೦।।

**ಕ್ವಚಿಚ್ಛೃಣೋತಿ ಶೃಣ್ವಂತ್ಯಾಂ ಪಶ್ಯಂತ್ಯಾಮನುಪಶ್ಯತಿ ।**
**ಕ್ವಚಿಜ್ಜಿಘ್ರತಿ ಜಿಘ್ರಂತ್ಯಾಂ ಸ್ಪೃಶಂತ್ಯಾಂ ಸ್ಪೃಶತಿ ಕ್ವಚಿತ್ ।।೬೧।।**

ಕ್ವಚಿತ್=ಕೆಲವು ಸಲ ಶೃಣ್ವಂತ್ಯಾಂ ಶೃಣ್ವತಿ=ಕೇಳಿದರೆ ಕೇಳುವನು. ಪಶ್ಯಂತ್ಯಾಂ ಅನು ಪಶ್ಯತಿ=ನೋಡಿದರೆ ನೋಡುವನು. ಜಿಘ್ರಂತ್ಯಾಂ ಜಿಘ್ರತಿ=ಮೂಸಿದರೆ ಮೂಸುವನು. (ಆಘ್ರಾಣಿಸುವನು.) ಸ್ಪೃಶಂತ್ಯಾಂ ಸ್ಪೃಶತಿ=ಮುಟ್ಟಿದರೆ ಮುಟ್ಟುವನು. ।।೬೧।।

**ಕ್ವಚಿಚ್ಚ ಶೋಚತೀಂ ಜಾಯಾಮನುಶೋಚತಿ ದೀನವತ್ ।**
**ಅನುಘೃಷ್ಯತಿ ಸಂಘೃಷ್ಟಾಂ ಮುದಿತಾಮನುಮೋದತೇ ॥೬೨॥**

ಕ್ವಚಿತ್=ಮತ್ತೊಮ್ಮೆ ಶೋಚತೀಂ ಜಾಯಾಂ ಅನು ದೀನವತ್ ಶೋಚತಿ=ಅಳುವ ಹೆಂಡತಿಯನ್ನು ಅನುಸರಿಸಿ ದುಃಖಿತನಂತೆ ದುಃಖಿಸುವನು. ಸಂಘೃಷ್ಟಾಂ ಅನುಘೃಷ್ಯತಿ= ಘರ್ಷಿಸಲು ಘರ್ಷಿಸುವನು. (ಘಟ್ಟಿಸುವನು.) ಮುದಿತಾಂ ಅನು ಮೋದತಿ= ಸಂತೋಷಿಸಲು ಸಂತಸಪಡುವನು. ॥೬೨॥

**ವಿಪ್ರಲಬ್ಧೋ ಮಹಿಷ್ಯೈವಂ ಸರ್ವಪ್ರಕೃತಿವಂಚಿತಃ ।**
**ನೇಚ್ಛನ್ನನುಕರೋತ್ಯಜ್ಞಃ ಕ್ಲೈಬ್ಯಾತ್ ಕ್ರೀಡಾಮೃಗೋ ಯಥಾ ॥೬೩॥**

॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ ಪಂಚವಿಂಶೋಽಧ್ಯಾಯಃ ॥

ಏವಂ=ಈ ರೀತಿಯಾಗಿ ಮಹಿಷ್ಯಾ=ಹೆಂಡತಿಯಿಂದ ವಿಪ್ರಲಬ್ಧಃ=ವಂಚಿತನಾಗಿ ಸರ್ವಪ್ರಕೃತಿವಂಚಿತಃ=ಎಲ್ಲ ಸ್ವಭಾವದಿಂದ ವಂಚಿತನಾಗಿ (ಮಂತ್ರಿ ಮುಂತಾದವರಿಂದ ವಂಚಿತನಾಗಿ) ನೇಚ್ಛನ್=ಇಚ್ಛೆ ಇಲ್ಲದಿದ್ದರೂ ಕ್ಲೈಬ್ಯಾತ್=ಪರವಶನಾಗಿ ಅಜ್ಞಃ=ದಡ್ಡನು ಯಥಾ ಕ್ರೀಡಾಮೃಗಃ=ಆಟದ ಮೃಗದಂತೆ ಅನುಕರೋತಿ=ಮಾಡಿದಂತೆ ಮಾಡುವನು.

(ಮಹಃ ಅಸ್ಯ ಅಸ್ತೀತಿ ಮಹೀ ಎಂದರೆ ಬ್ರಹ್ಮನು. ನಿತ್ಯೋತ್ಸವಸಮುದ್ರನಾದ ಶ್ರೀಹರಿಯಲ್ಲಿ ಸೀದತಿ ವಿಷಯೀಕರಿಸಿರುವುದರಿಂದ ಮಹಿಷೀ=ಸದ್ಬುದ್ಧಿಯು, ಅದರಿಂದ ವಿಪ್ರಲಬ್ಧಃ=ವಿಶೇಷವಾಗಿ ಇಷ್ಟಕಾರ್ಯಗಳನ್ನು ಪಡೆದ ಸರ್ವಪ್ರಕೃತಿವಂಚಿತಃ=ಎಲ್ಲ ಸ್ತ್ರೀಜನರ ಸ್ವಭಾವವನ್ನು ವಂಚಿಸಿದ ಅಜ್ಞಃ=ವಿಷ್ಣುವನ್ನು ತಿಳಿದ ಬುದ್ಧಿಗೆ ಅಧೀನನಾಗುವುದು ಕ್ರೀಡಾಮೃಗತ್ವ ಯುಕ್ತವೇ.

**ಭಾಗವತ ತಾತ್ಪರ್ಯ –**

ಇಲ್ಲಿ ಪುರಂಜನನೆಂಬ ರಾಜನನ್ನು ಕಲ್ಪಿಸಿ ಇಲ್ಲದಿರುವ ಅವನ ಕಥೆಯನ್ನು ಜೀವನ ಸಂಸಾರ ಹೀಗಿದೆ ಎಂದು ತಿಳಿಸಲು ಪರೋಕ್ಷವಾಗಿ ಹೇಳುವರು ಎಂಬ ಶಂಕೆಯನ್ನು ಪ್ರಮಾಣದಿಂದ ಪರಿಹರಿಸುವರು –

> 'ದೇವಜೀವಾಭಿಮಾನೀ ತು ಬ್ರಹ್ಮೈವ ತು ಚತುರ್ಮುಖಃ ।
> ಮಾನುಷಾಣಾಂ ತು ಜೀವಾನಾಮಭಿಮಾನೀ ಪುರಂಜನಃ ।
> ಸ ತು ರಾಜಾ ಹರೇಃ ಪುತ್ರಸ್ತ್ವಾ ಸುರಾಣಾಂ ಕಲಿಃ ಸ್ವಯಮ್ ।
> ಜೀವಸಂಸೃತಿವತ್ತಸ್ಮಾತ್ ಪುರಂಜನಕಥಾಪಿ ತು ।

ತಸ್ಮಾಜ್ಜೀವಸ್ಯತಿಜ್ಞಪ್ತ್ಯೈ ಪುರಂಜನಕಥಾಂ ಮುನಿಃ ।
ನಾರದೋಽಶ್ರಾವಯದ್ವಿದ್ವಾನ್ನೃಪಂ ಪ್ರಾಚೀನಬರ್ಹಿಷಮ್ ।
ಪ್ರಾಯಸ್ತು ತತ್ಕಥಾ ಜೀವೇ ಸ್ಥಿತಾ ಪ್ರತ್ಯೇಕಶೋಽಪಿ ತು ।
ಪ್ರತ್ಯೇಕಂ ಯತ್ತು ಯುಜ್ಯೇತ ತದುನ್ನೇಯಂ ಯಥಾ ತಥಾ ।
ಉಕ್ತಂ ಭಾಗವತೇಽಪ್ಯೇತತ್ ಪುರಾಣೇ ಯಾವದಿಷ್ಯತೇ ।
ಪ್ರತ್ಯೇಕಶಸ್ತು ಜೀವಾನಾಂ ತದನ್ಯತ್ತಸ್ಯ ಕೇವಲಮ್' ಇತಿ ತಂತ್ರಭಾಗವತೇ ॥

ಯೇ ಪುರಂಜನಭೃತ್ಯಾದ್ಯಾ ಭಾರ್ಯಾದ್ಯಾಃ ಸರ್ವ ಏವ ಚ ।
ತೇಽಪಿ ಮಾನುಷಬುದ್ಧ್ಯಾದೇರ್ವಿಜ್ಞೇಯಾ ಅಭಿಮಾನಿನಃ ॥
'ಗಾಯತ್ರ್ಯಾದ್ಯಾಸ್ತು ದೇವಾನಾಂ ತೇಽಪಿ ಚೈತೇಷು ಸಂಸ್ಥಿತಾಃ ।
ಅಲಕ್ಷ್ಮೀದ್ವಾಪರಾದ್ಯಾಸ್ತು ಆಸುರಾಸ್ತೇಽಪಿ ಮಾನುಷಾ' ಇತಿ ಚ ॥

'ದಕ್ಷಿಣಶ್ರೋತ್ರಮಾರ್ಗೇಣ ದೇವಲೋಕಂ ವ್ರಜತ್ಯಸೌ ।
ವಾಮಶ್ರೋತ್ರೇಣ ಪಿತೃಣಾಮಿತಿ ವೇದವಿದೋ ವಿದುರಿ'ತಿ ಪ್ರವೃತ್ತಿತಂತ್ರೇ ॥

ದೇವತಾಜೀವರಿಗೆ ವಿಶೇಷವಾಗಿ ಬ್ರಹ್ಮದೇವರೇ ಮುಖ್ಯ ಅಭಿಮಾನಿಗಳು. (ಪುರಂಜನ ಕಲಿ ಅಲ್ಲ) ಮನುಷ್ಯಜೀವರಿಗೆ ಮಾತ್ರ ಪುರಂಜನನು ಅಭಿಮಾನಿಯು. ಆ ಪುರಂಜನನು ರಾಜನು, ಶ್ರೀಹರಿಯ ಪುತ್ರನು, ಅಸುರಜೀವರಿಗೆ ಕಲಿಯೇ ಅಭಿಮಾನಿಯು, (ಪುರಂಜನನಲ್ಲ) ಮನುಷ್ಯಜೀವರಿಗೆ ಅಭಿಮಾನಿಯಾದುದರಿಂದ ಪುರಂಜನರಾಜನ ಕಥೆಯೂ ಕೂಡ ಜೀವಸಂಸಾರದ ಕಥೆಯಂತೆ ಹೇಳಿದೆ.

ಕಥಾಸಾಮ್ಯವಿದ್ದುದರಿಂದ ಪರೋಕ್ಷವಾಗಿ ಜೀವರ ಸಂಸಾರವನ್ನು ತಿಳಿಸಲು ನಾರದಮುನಿಗಳು ಪುರಂಜನ ರಾಜರ ಕಥೆಯನ್ನು ಪ್ರಾಚೀನಬರ್ಹಿರಾಜನಿಗೆ ಹೇಳಿದರು. ಪ್ರಾಯಶಃ ಪುರಂಜನನ ಕಥೆಯು ಜೀವರನ್ನು ಪ್ರತಿಪಾದಿಸುವುದು. ಯಾವ ಕಥೆಯು ಪುರಂಜನ ರಾಜನಲ್ಲಿಯೂ ಜೀವನಲ್ಲಿಯೂ ಕೂಡುವದೋ ಅದನ್ನು ಹಾಗೆ ತಿಳಿಯಬೇಕು. ಭಾಗವತದಲ್ಲಿಯೂ ಈ ಪುರಂಜನ ಚರಿತೆಯು ಹೇಳಿದೆ. ಜೀವರಿಗೆ ಪ್ರತ್ಯೇಕವಾಗಿ ಪುರಂಜನ ಕಥೆಯು ಎಷ್ಟು ಹೊಂದುವದೋ ಅಷ್ಟೇ ಜೀವನಲ್ಲಿ ಇದೆ ಎಂದು ತಿಳಿಯುವುದು. ಹೊಂದದಿರುವುದು ಪುರಂಜನನಿಗೆ ಮಾತ್ರವೆಂದು ತಿಳಿಯಬೇಕು. (ಪುರಂಜನನು ಮನುಷ್ಯಜೀವರಿಗೆ ಅಭಿಮಾನಿಯಾದ್ದರಿಂದ ಜೀವರ ಸಂಸಾರ ತಿಳಿಸಲು ಉಪಯೋಗವಾದರೂ ಅವನ ಹೆಂಡತಿ ಭೃತ್ಯರ ಕಥೆಯು ಹೇಗೆ ಸಂಸಾರಜ್ಞಾಪಕವೆಂಬ ಶಂಕೆಯನ್ನು ಪರಿಹರಿಸುವರು. (ತಂತ್ರಭಾಗವತ)

ಪುರಂಜನನ ಭೃತ್ಯರು (ಮಕ್ಕಳು) ಸಖಿಯರು ಹೆಂಡತಿ ಮುಂತಾದವರು ಮಾನುಷಬುದ್ಧಿ ಇಂದ್ರಿಯಾದಿಗಳಿಗೆ ಅಭಿಮಾನಿಗಳೆಂದು ತಿಳಿಯಬೇಕು. ಗಾಯತ್ರೀ ಭಾರತೀ ಮೊದಲಾದವರು ದೇವತೆಗಳ ಬುದ್ಧ್ಯಾದಿಗಳಿಗೆ ಅಭಿಮಾನಿಗಳು. ಅವರು ಮನುಷ್ಯಬುದ್ಧ್ಯಾದಿಗಳಿಗೂ ಅಭಿಮಾನಿಗಳು. ಕಲಿಯ ಹೆಂಡತಿಯು (ಅಲಕ್ಷ್ಮೀ) ದ್ವಾಪರ ಕಾಲನೇಮಿ ಮೊದಲಾದ ಅಸುರರ ಬುದ್ಧ್ಯಾದಿಗಳಿಗೆ ಅಭಿಮಾನಿಗಳು, ಮನುಷ್ಯರ ಬುದ್ಧ್ಯಾದಿಗಳಿಗೂ ಅಭಿಮಾನಿಗಳು.

ಬಲಕಿವಿಯಿಂದ ಹೊರಟ ಜೀವನು ದೇವಲೋಕಕ್ಕೆ ಎಡಕಿವಿಯಿಂದ ಹೊರಟವನು ಪಿತೃಲೋಕಕ್ಕೆ ಹೋಗುತ್ತಾನೆ ಎಂದು ಅಭಿಜ್ಞರು ಹೇಳುತ್ತಾರೆ ಎಂದು ಪ್ರವೃತ್ತದಲ್ಲಿದೆ.

ಇದರಿಂದ ಮೂಲದಲ್ಲಿ ಬಲಗಿವಿ ಪಿತೃಯಾನಸಾಧನವೆಂದು, ಎಡಗಿವಿ ದೇವಯಾನ-ಸಾಧನವೆಂದು ತೋರುವುದು. ಅದು ಸರಿಯಲ್ಲ. ಬಲಗಿವಿಯಲ್ಲಿ ದೇವಲೋಕಸಾಧನ-ಮಂತ್ರ ಉಪದೇಶವು ಸಂಪ್ರದಾಯಸಿದ್ಧವಾಗಿದೆ. ಕಾರಣ ಯಥಾಶ್ರುತ ಕ್ರಮದಲ್ಲಿ ಯಥಾ ಯೋಗ್ಯಕ್ರಮವೆಂದು ತಿಳಿಯಬೇಕು.

॥ ಇಲ್ಲಿಗೆ ಇಪ್ಪತ್ತೆದನೇ ಅಧ್ಯಾಯವು ಮುಗಿಯಿತು ॥

# ಅಥ ಷಡ್ವಿಂಶೋಽಧ್ಯಾಯಃ

ಜಾಗ್ರದವಸ್ಥೆಯ ರೀತಿಯನ್ನು ಹೇಳುತ್ತ ಸಂಸಾರಪ್ರಾಪ್ತಿಯನ್ನು ಹೇಳುವವರಾಗಿ ಜಾಗ್ರದವಸ್ಥಾಪ್ರವೇಶವನ್ನು ಮೊದಲಿಗೆ ಹೇಳುವರು. ಪ್ರಕೃತ ಪುರಂಜನನ ಬೇಟೆಯನ್ನು ವಿವರಿಸುವರು -

**ನಾರದ ಉವಾಚ**

**ಸ ಏಕದಾ ಮಹೇಷ್ವಾಸೋ ರಥಂ ಪಂಚಾಶ್ವಮಾಶುಗಮ್ ।**
**[೧]ದ್ವೀಷಂ ದ್ವಿಚಕ್ರಮೇಕಾಕ್ಷಂ ತ್ರಿವೇಣುಂ ಪಂಚಬಂಧುರಮ್ ॥೧॥**

[೧]ದ್ವಿಕರ್ಮಚಕ್ರಮೇಕಾಕ್ಷಂ ಎಂದು ಪಾಠಾಂತರ.

ಸಃ=ಪುರಂಜನನು ಏಕದಾ=ಒಂದುಸಲ ಮಹೇಷ್ವಾಸಃ=ದೊಡ್ಡ ಧನುಸ್ಸನ್ನು ಸ್ವೀಕರಿಸಿ (ಓಂಕಾರವೆಂಬ ಧನುಸ್ಸುಳ್ಳವನಾಗಿ) ಪಂಚಾಶ್ವಂ=ಐದು ಇಂದ್ರಿಯಗಳೆಂಬ ಕುದುರೆಗಳುಳ್ಳ ಆಶುಗಂ=ಶೀಘ್ರಗಾಮಿಯಾದ (ಅಸ್ತಿ ಜಾಯತೇ ಮುಂತಾದ ವಿಕಾರ ಪಡೆಯುವ) ದ್ವಿಕರ್ಮಚಕ್ರಂ=ಪುಣ್ಯಪಾಪಗಳೆಂಬ ಎರಡು ಚಕ್ರಗಳುಳ್ಳ (ದ್ವೀಷಂ=ಎಂಬ ಪಾಠದಲ್ಲಿ ಎರಡು ಬಾಣವುಳ್ಳ ಎಂದರ್ಥ) ಏಕಾಕ್ಷಂ=ವಾಯುದೇವರೆಂಬ ಒಂದು ಅಚ್ಚು (ಆಕ್ಸಿಲ್)ಳ್ಳ ತ್ರಿವೇಣುಂ=ಸತ್ವಾದಿಮೂರುಗುಣಗಳೆಂಬ ಮೂರುಧ್ವಜಗಳುಳ್ಳ ಪಂಚಬಂಧುರಂ=ಪಂಚಪ್ರಾಣಗಳೆಂಬ ಬಂಧನಗಳುಳ್ಳ (ನೀಚೋಚ್ಚಸ್ಥಾನಗಳುಳ್ಳ) ರಥಂ=ರಥವನ್ನು ಹತ್ತಿ ,॥೧॥

**ಏಕರಶ್ಮ್ಯೇಕದಮನಮೇಕನೀಡಂ ದ್ವಿಕೂಬರಮ್ ।**
**ಪಂಚಪ್ರಹರಣಂ ಸಪ್ತವರೂಥಂ ಪಂಚವಿಕ್ರಮಮ್ ॥೨॥**

ಏಕರಶ್ಮಿ=ಮನಸೆಂಬ ಒಂದು ಲಗಾಮವುಳ್ಳ ಏಕದಮನಂ=ಬುದ್ಧಿ ಎಂಬ ಒಬ್ಬ ಸಾರಥಿಯುಳ್ಳ ಏಕನೀಡಂ=ಹೃದಯವೆಂಬ ಒಂದು ಕೂಡುವ ಸ್ಥಳವುಳ್ಳ ದ್ವಿಕೂಬರಂ= ಶೀತೋಷ್ಣಗಳೆಂಬ ಎರಡು (ಉದ್ದಿಗೆ) ಯುಗಂಧರಗಳುಳ್ಳ ಪಂಚಪ್ರಹರಣಂ= ಪಂಚೇಂದ್ರಿಯಗಳಿಗೆ ಪಂಚವಿಷಯಸನ್ನಿಕರ್ಷಗಳೆಂಬ ಐದು ಆಯುಧಗಳುಳ್ಳ ಸಪ್ತವರೂಥಂ=ಚರ್ಮ ಮುಂತಾದ ಏಳು ಆವರಕವುಳ್ಳ ಪಂಚವಿಕ್ರಮಂ=ಪಂಚಮಹಾ- ಭೂತಗಳ ಪ್ರಭಾವವುಳ್ಳ ಐದು ಗತಿ ಪ್ರಕಾರವುಳ್ಳ||೨||

**ಹೇಮೋಪಸ್ಕರಮಾರುಹ್ಯ ಸ್ವರ್ಣವರ್ಮಾಕ್ಷಯೇಷುಧಿಃ ।**
**ಏಕಾದಶಚಮೂನಾಥಃ ಪಂಚಪ್ರಸ್ಥಮಗಾದ್ ವನಮ್ ॥೩॥**

ಹೇಮೋಪಸ್ಕರಂ=ಚಿನ್ನದ ಆಭರಣಸಹಿತವಾದ ರಥಂ=ರಥವನ್ನು ಜ್ಞಾನವೆಂಬ ಗತಿಸಾಧನದೇಹವನ್ನು ಆರುಹ್ಯ=ಹತ್ತಿ ಸ್ವರ್ಣವರ್ಮಾ=ಚಿನ್ನದ ಕವಚ ಧರಿಸಿ ಅಕ್ಷಯೇಷುಧಿಃ=ಅಕ್ಷಯವಾದ ಬತ್ತಳಿಕೆಯುಳ್ಳವನಾಗಿ (ಇಷೂನ್=ರಾಗಾದಿಗಳೆಂಬ ಬಾಣಗಳನ್ನು ಅಸ್ಯತಿ=ನಿರಾಕರಿಸುವುದರಿಂದ ಜ್ಞಾನವೆಂಬ ಇಷ್ವಾಸವುಳ್ಳವನು ಎಂದು ಮೊದಲನೇ ಶ್ಲೋಕದ ಮಹೇಷ್ವಾಸಶಬ್ದಾರ್ಥ.) ಏಕಾದಶಚಮೂನಾಥಃ=ಹನ್ನೊಂದು ಸೈನ್ಯಕ್ಕೆ ಒಡೆಯನು ಪಂಚಪ್ರಸ್ಥಂ ವನಂ ಅಗಾತ್=ಐದು ವಿಭಾಗವುಳ್ಳ ವನಕ್ಕೆ ಹೋದನು. ||೩||

**ಚಚಾರ ಮೃಗಯಾಂ ತತ್ರ ದೃಪ್ತ ಆತ್ತೇಷು ಕಾರ್ಮುಕಃ ।**
**ವಿಹಾಯ ಜಾಯಾಮತದರ್ಹಾಂ ಮೃಗವ್ಯಸನಲಾಲಾಸಃ ॥೪॥**

ತತ್ರ=ಆ ಜಾಗ್ರತ್ ಕಾಲದಲ್ಲಿ ವಿಷಯಗಳೆಂಬ ಅಡವಿಯಲ್ಲಿ ಅತದರ್ಹಾಂ=ಬಿಡಲು ಯೋಗ್ಯಳಲ್ಲದ ಜಾಯಾಂ=ಸದ್ಬುದ್ಧಿ ಎಂಬ ಹೆಂಡತಿಯನ್ನು ವಿಹಾಯ=ಬಿಟ್ಟು ಮೃಗವ್ಯಸನ- ಲಾಲಾಸಃ=ಜಿಂಕೆ ಮೊದಲಾದ ಪ್ರಾಣಿಗಳನ್ನು ಹಿಂಸಿಸಲು ಉತ್ಕಟ ಇಚ್ಛೆಯುಳ್ಳವನಾಗಿ (ವಿಷಯಭೋಗ ಮಾಡುವ ಅಪೇಕ್ಷೆಯುಳ್ಳವನಾಗಿ) ಆತ್ತೇಷು ಕಾರ್ಮುಕಃ= ಬಾಣಬಿಲ್ಲುಗಳನ್ನು ಸ್ವೀಕರಿಸಿ (ರಾಗಾದಿಗಳೆಂಬ ಬಾಣ, ಅವಿವೇಕವೆಂಬ ಬಿಲ್ಲು, ವಿವೇಕಕಾರ್ಯವಾದ ಸ್ವಕೃತ್ಯಂ ಮುಂಚತಿ ಎಂಬ ನಿರುಕ್ತಿಯಿಂದ) ದೃಪ್ತಃ=ಗರ್ವದಿಂದ ಮೃಗಯಾಂ ಚಚಾರ=ಬೇಟೆಯಾಡಿದನು. ವಿಷಯಭೋಗ ಮಾಡಿದನು ಎಂದರ್ಥ||೪||

**ಆಸುರೀಂ ವೃತ್ತಿಮಾಶ್ರಿತ್ಯ ಘೋರಾತ್ಮಾ ನಿರನುಗ್ರಹಃ ।**
**ನ್ಯಹನನ್ನಿಶಿತೈರ್ಬಾಣೈರ್ವನೇಷು ವನಗೋಚರಾನ್ ॥೫॥**

ಘೋರಾತ್ಮಾ=ಕ್ರೂರವಾದ ಮನಸ್ಸುಳ್ಳ (ವಿಷಯಸಂಗದಿಂದ ಸಂಸಾರ ಬರುವದೆಂಬ ಭಯರಹಿತನಾದವನು) ನಿರನುಗ್ರಹಃ=ದಯೆ ಇಲ್ಲದೇ ಆಸುರೀಂ ವೃತ್ತಿಂ ಆಶ್ರಿತ್ಯ=ಅಸುರ

ಸಂಬಂಧಿಯಾದ ಹಿಂಸಾವೃತ್ತಿಯನ್ನು ಅವಲಂಬಿಸಿ ನಿಶಿತೈಃ ಬಾಣೈಃ=ಚೂಪಾದ ಬಾಣಗಳಿಂದ (ಕಪಟಮನೋವೃತ್ತಿಯಿಂದ) ವನೇಷು=ವಿಷಯಗಳೆಂಬ ಆಡವಿಗಳಲ್ಲಿ ವನಗೋಚರಾನ್=ಮೃಗಗಳನ್ನು (ವಿಷಯಗಳನ್ನು) ನ್ಯಹನತ್=ಹೊಡೆದನು. ।।೫।।

''ರಾಜಾ ಮೃಗಾರ್ಥೀ ಮೃಗಯಾ ಚರನ್ ದೋಷೈರ್ನ ಲಿಪ್ಯತೇ'' ''ಅಗ್ನೀಷೋಮೀಯಂ ಪಶುಮಾಲಭೇತ'' ಇತ್ಯಾದಿಗಳಲ್ಲಿ ಹೇಳಿದಂತೆ ರಾಜರಿಗೆ ಬೇಟೆಯು ವಿಹಿತವಾದ್ದರಿಂದ ಆಸುರೀವೃತ್ತಿ ಎಂದು ಅದನ್ನು ನಿಂದಿಸಿದ್ದೇಕೆ ? ಎಂದರೆ ಹೇಳುವರು -

**ತೀರ್ಥೇಷು ಶ್ರುತಿದೃಷ್ಟೇಷು ರಾಜಾ ಮೇಧ್ಯಪಶೂನ್ವನೇ ।**
**ಯಾವದರ್ಥಮಲಂ ಲುಬ್ಧೋ ಹನ್ಯಾದಿತಿ ನಿಯಮ್ಯತೇ ।।೬।।**

ರಾಜನಿಗೂ ಸಹ ರಾಗಪ್ರಾಪ್ತವಾದುದರಿಂದ ಬೇಟೆಯನ್ನು ಮಾಡಬೇಕೆಂದು ವಿಧಾನ ಮಾಡುವುದಿಲ್ಲ, ಕಿಂತು ಮಾಡುವುದಾದರೆ ಇಷ್ಟೇ ಮಾಡಬೇಕೆಂದು ನಿಯಮ ಮಾಡುವುದು. ಅದೇನೆಂದರೆ ರಾಜಾ=ರಾಜನು ಅಲಂ ಲುಬ್ಧಃ=ಬಹಳ ರಾಗವುಳ್ಳವನಾಗಿ ಪಶುವನ್ನು ಕೊಲ್ಲುವುದಾದರೆ ತೀರ್ಥೇಷು ಶ್ರುತಿದೃಷ್ಟೇಷು=ಶ್ರಾದ್ಧಾದಿಗಳಲ್ಲಿಯೇ ಶ್ರುತಿಯಲ್ಲಿ ಹೇಳಿದ್ದನ್ನೇ ಮೇಧ್ಯಾನ್=ಶುದ್ಧವಾದವನ್ನೇ ಪಶೂನ್=ಪಶುಗಳನ್ನು ವನೇ ಹನ್ಯಾತ್=ವನದಲ್ಲಿ ಸಂಹರಿಸಬೇಕು. ಯಾವದರ್ಥಂ=ಎಷ್ಟು ಉಪಯೋಗವೋ ಅಷ್ಟೇನ್ನೇ ಎಂದು ನಿಯಮ. ಅಥವಾ ಶ್ರುತಿದೃಷ್ಟೇಷು=ಶ್ರುತಿಸ್ಮೃತಿವಿಹಿತವಾದ ತೀರ್ಥೇಷು=ಆ ಆ ಸ್ಥಾನಗಳಲ್ಲಿ ರಾಜಾ=ತನಗೆ ವಿಹಿತವಾದ ಆಚಾರನಿಷ್ಠೆಯಿಂದ ಶೋಭಿಸುವಾನಾಗಿ ಯಾನ್ ಮೇಧ್ಯಾನ್ ಪಶೂನ್=ಹೋಮಾರ್ಹವಾದ (ತಿನ್ನಲು ಯೋಗ್ಯವಾದ) ಆಡು, ಜಿಂಕೆ, ಮೊಲ ಮುಂತಾದವನ್ನು ಯಾವದರ್ಥಂ=ಪ್ರಯೋಜನವಿದ್ದಷ್ಟು ಮಾತ್ರ ಲುಬ್ಧಃ=ಫಲಾರ್ಥಿಯಾಗಿ ಹನ್ಯಾತ್=ಕೊಲ್ಲಬೇಕು ಎಂದು ಅಲಂ ನಿಯಮ್ಯತೇ=ವಿಧಿವಾಕ್ಯಗಳಿಂದ ನಿಯಮಿಸಲ್ಪಡುವುದು.

**ಭಾಗವತ ತಾತ್ಪರ್ಯ -**

ಇಲ್ಲಿರುವ ಲುಬ್ಧಪದದಿಂದ ವ್ಯಾವರ್ತ್ಯವನ್ನು ತಿಳಿಸುವರು -

**ಅಲುಬ್ಧೋ ಲೋಕೋಪಕಾರಾರ್ಥಂ ಘ್ನನ್ನಾತ್ಮಾರ್ಥಾದಧಿಕಮಪಿ ಹನ್ಯಾತ್ ।**

ಈ ವಿಷಯದಲ್ಲಿ ಪ್ರಮಾಣ ಹೇಳುವರು -

**''ಉಪಕಾರಃ ಸತಾಂ ಯೇನ ತತ್ಕೃತ್ವಾ ನೈವ ದುಷ್ಯತಿ ।**
**ಅತೀವ ನಿಂದಿತಮಪಿ ಬಹುಹಿಂಸಾಯುಗೇವ ವಾ ।**
**ಅಥವಾ ಜ್ಞಾನಿನಃ ಕರ್ಮ ನ ದುಷ್ಟಮಪಿ ಲಿಪ್ಯತೇ'' ಇತ್ಯಧ್ಯಾತ್ಮೇ ।।**

(ಲೋಭದಿಂದ ಅಂದರೆ ಫಲಾಪೇಕ್ಷೆಯಿಂದ ಹಿಂಸೆಯಲ್ಲಿ ಪ್ರವೃತ್ತನಾದವನು ಎಷ್ಟು ಕೊಂದರೆ ತನಗೆ ಪ್ರಯೋಜನವಿದೆಯೋ ಅಷ್ಟನ್ನೇ ಕೊಲ್ಲಬೇಕು.

ಅಲುಬ್ಧಃ=ತನ್ನ ಫಲಾಪೇಕ್ಷೆಯಿಲ್ಲದವನು (ಜಿಜ್ಞಾಸುವು) ಲೋಕೋಪಕಾರಕ್ಕಾಗಿ ಕೊಲ್ಲಲು ಪ್ರವೃತ್ತನಾದವನು ತನ್ನ ಪ್ರಯೋಜನಕ್ಕಿಂತ ಹೆಚ್ಚು ಕೊಲ್ಲಬಹುದು. ಹಿಂಸಾದಿರೂಪಕರ್ಮವು ಅತ್ಯಂತ ನಿಂದಿತವಾದರೂ ಬಹಳ ಪ್ರಾಣಿಗಳ ಹಿಂಸೆಯಿಂದ ಕೂಡಿದ್ದರೂ ದುಷ್ಟಮೃಗಗಳನ್ನು ಕೊಲ್ಲುವುದರಿಂದ ಸಜ್ಜನರಿಗೆ ಉಪಕಾರವಾಗುವುದಾದರೇನೇ ಅಂತಹ ಕರ್ಮ ಮಾಡಿದವನು ದೋಷವನ್ನು ಹೊಂದುವುದಿಲ್ಲ. ಅಥವಾ ಅಪರೋಕ್ಷ ಜ್ಞಾನಿಯು ಲುಬ್ಧನು, ದುಷ್ಟಕರ್ಮಗಳನ್ನು ಮಾಡಿದರೂ ಪಾಪಲೇಪವಿಲ್ಲ. ಅಂದಮೇಲೆ ಅಲುಬ್ಧನಿಗಿಲ್ಲವೆಂದೇನು ಹೇಳುವುದು ? ಎಂದು ಅಧ್ಯಾತ್ಮದಲ್ಲಿದೆ.

ಅಧ್ಯಾತ್ಮಾರ್ಥಃ-ಶ್ರುತಿದೃಷ್ಟಾನ್=ಶ್ರುತಿಗಳಲ್ಲಿ ಹೇಳಿದ ಮೇಧ್ಯಾನ್=ಜ್ಞಾನಯೋಗ್ಯವಾದ ಪಶೂನ್=ರಮಣೀಯ ವಿಷಯಗಳನ್ನು ವನೇ=ವಿಷಯವ್ಯವಹಾರದಲ್ಲಿರುವವನು ಲುಬ್ಧಃ=ಅಪೇಕ್ಷಾವುಳ್ಳವನು ಯಾವದರ್ಥಂ=ಎಷ್ಟರಿಂದ ದೇಹಯಾತ್ರಾ ನಡೆಯುವುದೋ ಅಷ್ಟನ್ನು ಹನ್ಯಾತ್=ಗಚ್ಛೇತ್=ಸೇವಿಸಲು ಹೋಗಬೇಕು ಎಂದರ್ಥ. ॥೬॥

ನಿಯತಕರ್ಮ ಮಾಡದಿದ್ದರೆ ಜ್ಞಾನಿಗೂ ದುಷ್ಕರ್ಮಲೇಪವಿದೆಯೇ ? ಎಂದರೆ ಹೇಳುವರು- ಅಥವಾ ನಿಯಮ್ಯತೇ ಎಂದು ಹೇಳಿದ ನಿಯಮವು ಅಪರೋಕ್ಷಜ್ಞಾನಿಗೆ ಅಲ್ಲವೆಂದು ಹೇಳುವರು-

**ಯ ಏವಂ ಕರ್ಮ ನಿಯತಂ ವಿದ್ವಾನ್ ಕುರ್ವೀತ ವಾ ನ ವಾ ।**
**ಕರ್ಮಣಾ ತೇನ ರಾಜೇಂದ್ರ ಜ್ಞಾನೇನ ಸ ನ ಲಿಪ್ಯತೇ ॥೭॥**

ಏವಂವಿಧಂ=ಪಾಪಕರ್ಮಪುಣ್ಯಕರ್ಮವನ್ನಾಗಲೀ ವಿದ್ವಾನ್=ಜ್ಞಾನಿಯು ನಿಯತಂ ಕರ್ಮ=ಹಿಂಸಾರೂಪ ನಿಯತಕರ್ಮವನ್ನು ಕುರ್ವೀತ=ಮಾಡಲಿ ನ ವಾ=ಮಾಡದಿರಲಿ. ತೇನ=ಎರಡರಿಂದಲೂ ಸಃ=ಜ್ಞಾನಿಯು ಜ್ಞಾನೇನ=ಜ್ಞಾನವಿದೆ ಎಂಬ ಕಾರಣದಿಂದ ನ ಲಿಪ್ಯತೇ=ಲೇಪ ಹೊಂದುವುದಿಲ್ಲ. ಕರ್ಮಲೇಪವಾಗದಿರಲು ಜ್ಞಾನವು ಕಾರಣವೆಂದರ್ಥ.

''ತದ್ಯಥಾ ಪುಷ್ಕರಪಲಾಶ ಆಪೋ ನ ಶ್ಲಿಷ್ಯಂತೇ ಏವಂ ವಿದಿ ಪಾಪಂಕರ್ಮ ನ ಶ್ಲಿಷ್ಯತೇ'' ಎಂದು ಶ್ರುತಿ ಇದೆ. ಕಮಲದೆಲೆಗೆ ನೀರು ಅಂಟದಂತೆಯೇ ಜ್ಞಾನಿಗೆ ಕರ್ಮಲೇಪವಿಲ್ಲವೆಂದು ಶ್ರುತಿಯ ಭಾವ. ॥೭॥

ಲುಬ್ಧನು ಹೇಳಿದ ನಿಯಮ ಉಲ್ಲಂಘಿಸಿದರೆ ಬಾಧಕ ಹೇಳುವರು -

**ಅನ್ಯಥಾ ಕರ್ಮ ಕುರ್ವಾಣಃ ಕಾಮರೂಢೋ ನಿಬದ್ಧ್ಯತೇ ।**
**ಗುಣಪ್ರವಾಹಪತಿತೋ ನಷ್ಟಪ್ರಜ್ಞೋ ವ್ರಜತ್ಯಧಃ ॥೮॥**

ಅನ್ಯಥಾ=ಅಪರೋಕ್ಷಜ್ಞಾನಿಯಾಗದೇ ಮತ್ತು ಹೇಳಿದ್ದನ್ನು ಬಿಟ್ಟು ಕರ್ಮ ಕುವಾಣಃ=ಹಿಂಸಾತ್ಮಕಕರ್ಮ ಮಾಡುವವನು ಕಾಮರೂಢಃ=ಕಾಮಿಯು ನಿಬದ್ಧ್ಯತೇ=ಬಂಧಿತನಾಗುವನು. ಅಂದರೆ ಗುಣಪ್ರವಾಹಪತಿತಃ=ಗುಣತ್ರಯಗಳ ಪ್ರವಾಹದಲ್ಲಿ ಬದ್ಧನಾಗಿ ನಷ್ಟಪ್ರಜ್ಞಃ=ಜ್ಞಾನವಿಲ್ಲದೇ ಅಧಃ ವ್ರಜತಿ=ನರಕಾದಿಗಳನ್ನು ಹೊಂದುವನು. ॥೮॥

ಪ್ರಾಸಂಗಿಕವಿಷಯವನ್ನು ಹೇಳಿ ಪ್ರಕೃತವನ್ನು ಹೇಳುವರು -

**ತತ್ರ ನಿರ್ಭಿಣ್ಣಗಾತ್ರಾಣಾಂ ಚಿತ್ರವಾಜೈಃ ಶಿಲೀಮುಖೈಃ ।**
**ವಿಪ್ಲವೋಽಭೂದ್ ದುಃಖಿತಾನಾಂ ದುಸ್ಸಹಃ ಕರುಣಾತ್ಮನಾಮ್ ॥೯॥**

ತತ್ರ=ವನದಲ್ಲಿ ಚಿತ್ರವಾಜೈಃ=ವಿಚಿತ್ರವಾದ ರೆಕ್ಕೆಗಳುಳ್ಳ ಶಿಲೀಮುಖೈಃ=ಬಾಣಗಳಿಂದ ನಿರ್ಭಿಣ್ಣಗಾತ್ರಾಣಾಂ=ಭೇದಿಸಲ್ಪಟ್ಟ ಅವಯವವುಳ್ಳ ಪ್ರಾಣಿಗಳ ದುಃಖಿತಾನಾಂ=ದುಃಖವುಳ್ಳ ವಿಪ್ಲವಃ=ನಾಶವು ಅಭೂತ್=ಆಯಿತು. ಅದು ಕರುಣಾತ್ಮನಾಂ ದುಸ್ಸಹಃ=ದಯಾಳುಗಳಿಗೆ ಸಹಿಸಲಾಗದಂತಹುದು. ॥೯॥

**ಶಶಾನ್ ವರಾಹಾನ್ ಮಹಿಷಾನ್ ಗವಯಾನ್ ರುರುಶಲ್ಯಕಾನ್ ।**
**ಮೇಧ್ಯಾನನ್ಯಾಂಶ್ಚ ವಿವಿಧಾನ್ ವಿನಿಘ್ನನ್ ಶ್ರಮಮಧ್ಯಗಾತ್ ॥೧೦॥**

ಶಶಾನ್=ಮೊಲಗಳನ್ನು ವರಾಹಾನ್=ಹಂದಿಗಳನ್ನು ಮಹಿಷಾನ್=ಎಮ್ಮೆಗಳನ್ನು ರುರುಶಲ್ಯಕಾನ್=ಹಾವಿಗಿಂತ ಕ್ರೂರವಾದ ಪ್ರಾಣಿ ರುರು ಅಥವಾ ಜಿಂಕೆ ಶಲ್ಯಕ=ಮುಳ್ಳುಹಂದಿಯನ್ನು ಮೇಧ್ಯಾನ್=ಯಾಗಾರ್ಹವಾದವನ್ನು ಚ=ಮತ್ತು ಅನ್ಯಾನ್=ಬೇರೆಯವುಗಳನ್ನು ವಿವಿಧಾನ್=ಅನೇಕರೀತಿಯವನ್ನು ವಿನಿಘ್ನನ್=ಸಂಹರಿಸಿ ಶ್ರಮಂ ಅಧ್ಯಗಾತ್=ಶ್ರಮ ಹೊಂದಿದನು. (ಇವುಗಳಲ್ಲಿ ಶಶ ವರಾಹಗಳು ಮೇಧ್ಯ, ಮಹಿಷಾದಿಗಳು ಅಮೇಧ್ಯಗಳು.)

ಗವಯಾನ್=ಕಾಡಾಕಳನ್ನು ಶಶಾನ್=ಅತಿಶಯ ಆನಂದರೂಪವಾದ ವರಾಹಾನ್=ವರಣೀಯವಾದ್ದರಿಂದ ಅಹೇಯಗಳಾದ ಮಹಿಷಾನ್=ಶ್ಲಾಘ್ಯವಾದುದನ್ನು ಕೂಡುವ (ಮಹಿತಂ ಸನೋತಿ=ದದಾತಿ ಇತಿ ಮಹಿಷಃ । ಸನ ದಾನೇ ಇತಿ ಧಾತು)

ಗವಯಾನ್=ಗತವಯಸ್ಕರನ ಮುಪ್ಪು ಹೊಂದಿದ ಎಂದರ್ಥ. ರುರೂನ್=ರೋದನಹೇತುಗಳಾದ ಶಲ್ಯಕಾನ್=ಶಂ=ಸುಖವನ್ನು ಲಾಪಯತಿ ನಾಶಗೊಳಿಸುವ ವಿಷಯಗಳನ್ನು ನಿಘ್ನನ್=ಅನುಭವಿಸುತ್ತ ಶ್ರಮ ಹೊಂದಿನು. ॥೧೦॥

**ತತಃ ಕ್ಷುತ್ತೃಟ್‌ಪರಿಶ್ರಾಂತೋ ನಿವೃತ್ತೋ ಗೃಹಮೇಯಿವಾನ್ ।**
**ಕೃತಸ್ನಾನೋಚಿತಾಹಾರಃ ಸಂವಿವೇಶ ಗತಕ್ಲಮಃ ॥೧೧॥**

ಕ್ಷುತ್=ಹಸಿವೆ ತೃಟ್=ನೀರಡಿಕೆಗಳಿಂದ ಪರಿಶ್ರಾಂತಃ=ಬಳಲಿದವನಾಗಿ ತತಃ=ವನದಿಂದ ನಿವೃತ್ತಃ=ತಿರುಗಿ ಹೊರಟು ಗೃಹಂ ಏಯಿವಾನ್=ಮನೆಯನ್ನು ತಲುಪಿದನು. ಕೃತಸ್ನಾನೋಚಿತಾಹಾರಃ=ಸ್ನಾನ ಮಾಡಿದವನಾಗಿ ಯೋಗ್ಯ ಆಹಾರ ಸ್ವೀಕರಿಸಿ ಗತಕ್ಲಮಃ=ಶ್ರಮಪರಿಹರಿಸಿಕೊಂಡವನಾಗಿ ಸಂವಿವೇಶ=ಹಾಸಿಗೆಯಲ್ಲಿ ಮಲಗಿದನು.

(ಜಾಗ್ರದ್ವಿಷಯಗಳನ್ನು ಅನುಭವಿಸಿ ನಿದ್ರೆಯನ್ನು ಹೊಂದುವ ರೀತಿಯನ್ನು ಹೇಳುವರು. ಜಾಗರದಿಂದ ನಿವೃತ್ತನಾಗಿ ಕ್ಷುತ್ ತೃಟ್ ಎಂಬ ಮನೋವೃತ್ತಿಯಿಂದ ಶ್ರಾಂತನಾಗಿ ಹೃತ್ ಎಂಬ ನಾಡಿಯನ್ನು ಹೊಂದಿ ಹಗಲು ಜಾಗ್ರತ್ಕಾಲದಲ್ಲಿ ಮಾಡಿದ ವಿಷಯಭೋಗವೆಂಬ ಕೊಳೆಯನ್ನು ತೊಳೆಯುವುದೆಂಬ ಸ್ನಾನ ಮಾಡಿ ಸ್ವರೂಪಸುಖ ಹೊಂದಿದನು ಎಂದರ್ಥ.)

**ಆತ್ಮಾನಮರ್ಹಯಾಂಚಕ್ರೇ ಧೂಪಲೇಪಸ್ರಗಾದಿಭಿಃ ।**
**ಸಾಧ್ವಲಂಕೃತಸರ್ವಾಂಗೋ ಮಹಿಷ್ಯಾಮಾದಧೇ ಮನಃ ॥೧೨॥**

ಮಲಗುವ ಮೊದಲು ಆತ್ಮಾನಂ=ತನ್ನನ್ನು ಧೂಪಲೇಪಸ್ರಗಾದಿಭಿಃ=ಲೋಭಾನದ ಹೊಗೆಯಿಂದಲೂ ಗಂಧಾದಿಲೇಪನಗಳಿಂದಲೂ ಮಾಲೆಗಳಿಂದಲೂ ಅರ್ಹಯಾಂಚಕ್ರೇ= ಅಲಂಕರಿಸಿಕೊಂಡನು. ಸಾಧ್ವಲಂಕೃತಸರ್ವಾಂಗಃ=ದೇಹವನ್ನು ಚೆನ್ನಾಗಿ ಅಲಂಕರಿಸಿಕೊಂಡು, ಮಹಿಷ್ಯಾಂ ಮನಃ ಆದಧೇ=ಹೆಂಡತಿಯನ್ನು ಅಪೇಕ್ಷಿಸಿದನು.

ಮಹಿಷ್ಯಾಂ=ಬುದ್ಧಿಯಲ್ಲಿ ಧೂಪಾದಿಗಳಿಂದ ವೃತ್ತಿಗಳಿಂದ ಆತ್ಮಾನಂ=ಅಂತರ್ಯಾಮಿ-ಯನ್ನು ಅರ್ಹಯಾಂಚಕ್ರೇ ಪೂಜಿಸಿದನು ಹೊಂದಿದನು ಎಂದರ್ಥ. ॥೧೨॥

**ತೃಪ್ತೋ ಹೃಷ್ಟಃ ಸುದೃಪ್ತಶ್ಚ ಕಂದರ್ಪಾಕೃಷ್ಟಮಾನಸಃ ।**
**ನ ವ್ಯಚಷ್ಟ ವರಾರೋಹಾಂ ಗೃಹಿಣೀಂ ಗೃಹಮೇಧಿನೀಮ್ ॥೧೩॥**

ತೃಪ್ತಃ=ತೃಪ್ತನಾದ ಹೃಷ್ಟಃ=ಸಂತುಷ್ಟನಾದ ಸುದೃಪ್ತಃ=ಅಹಂಕಾರಯುತನಾಗಿ ಕಂದರ್ಪಾಕೃಷ್ಟಮಾನಸಃ=ಕಾಮಪೀಡಿತವಾದ ಮನಸ್ಸುಳ್ಳವನಾಗಿ ಗೃಹಮೇಧಿನೀಂ= ಗೃಹಸ್ಥಾಶ್ರಮೋಚಿತಧರ್ಮಕ್ಕೆ ಅನೂಕೂಲಳಾದ ವರಾರೋಹಾಂ=ಸುಂದರಳಾದ ಗೃಹಿಣೀಂ=ಹೆಂಡತಿಯನ್ನು ನ ವ್ಯಚಷ್ಟ=ಕಾಣಲಿಲ್ಲ.

(ಸ್ವಪ್ನಾವಸ್ಥೆಯನ್ನು ಇಲ್ಲಿ ಹೇಳುವರು. ಕಂ ಸ್ವರೂಪಸುಖವನ್ನು ತಿಳಿಸುವುದು, ಕಂದರ್ಪ ಎಂದರೆ ಸ್ವಾಪ. ಅದರಿಂದ ಎಂದರ್ಥ. ಸ್ವಪ್ನದಲ್ಲಿಯೂ ನಿದ್ರೆಯಿರುವುದು. ಗೃಹಮೇಧೀನೀಂ

=ಜ್ಞಾನ ಪಡೆದ ಗೃಹಿಣೀಂ=ನಾನಾವಾಸನಾಕರ ಮನೋವೃತ್ತಿವುಳ್ಳ ವರಾರೋಹಾಂ= ಹರಿವಿಷಯಕ ಶಾಸ್ತ್ರೀಯಬುದ್ಧಿಯನ್ನು ನ ವ್ಯಚಷ್ಟ=ಪಡೆಯಲಿಲ್ಲ ನಿಶ್ಚಯಜ್ಞಾನ ಪಡೆಯಲಿಲ್ಲ ಸ್ವಪ್ನ ವಾಸನಾಮಯವಾದ್ದರಿಂದ ನಿರ್ಣಯಜ್ಞಾನವಿಲ್ಲ. ।।೧೩।।

**ಅಂತಃಪುರಸ್ತ್ರಿಯೋಽಪೃಚ್ಛದ್ ವಿಮನಾ ಇವ ವೇದಿಷನ್ ।**
**ಅಪಿ ವಃ ಕುಶಲಂ ರಾಮಾಃ ಸೇಶ್ವರೀಣಾಂ ಯಥಾ ಪುರಾ ।।೧೪।।**

ವೇದಿಷನ್=ಪ್ರಾಚೀನಬರ್ಹಿಯೇ ! ವಿಮನಾ ಇವ=ದುಃಖಿತನು ಕೇಳುವಂತೆ ಅಂತಃಪುರಸ್ತ್ರಿಯಃ=ಅಂತಪುರದ (ರಾಣಿವಾಸದ) ಸ್ತ್ರೀಯರನ್ನು ಹೇ ರಾಮಾಃ=ಎಲೈ ಸ್ತ್ರೀಯರೇ ! ಸೇಶ್ವರೀಣಾಂ ವಃ=ಒಡತಿಯಿಂದ ಸಹಿತರಾದ ನಿಮಗೆ ಯಥಾಪೂರ್ವಂ= ಮೊದಲಿನಂತೆ ಅಪಿ ಕುಶಲಂ=ಕ್ಷೇಮವಿದೆಯಷ್ಟೇ ? ಎಂದು ಅಪೃಚ್ಛತ್=ಕೇಳಿದನು. (ರಾಮಾಃ ಎಂದರೆ ವೃತ್ತಿಗಳು ಈಶ್ವರೀಬುದ್ಧಿ)।।೧೪।।

**ನ ತಥೈತರ್ಹಿ ರೋಚಂತೇ ಗೃಹೇಷು ಗೃಹಸಂಪದಃ ।**
**ಯದಿ ನ ಸ್ಯಾದ್ ಗೃಹೇ ಮಾತಾ ಪತ್ನೀ ವಾ ಪತಿದೇವತಾ ।।೧೫।।**

ಎತರ್ಹಿ=ಈಗ ಗೃಹೇಷು=ಮನೆಯಲ್ಲಿ ಗೃಹಸಂಪದಃ=ಗೃಹಸಂಪತ್ತು ಗೃಹೇ=ಮನೆಯಲ್ಲಿ ಮಾತಾ=ತಾಯಿಯಾಗಲೀ ಪತಿದೇವತಾ=ಗಂಡನಲ್ಲಿಯೇ ಪರಮಾತ್ಮನನ್ನು ಕಾಣುವ ಪತ್ನೀ ವಾ=ಹೆಂಡತಿಯಾಗಲೀ ಯದಿ ನ ಸ್ಯಾತ್=ಯಾವಾಗ ಇರುವುದಿಲ್ಲವೋ ತಥಾ ನ ರೋಚತೇ=ಅವರು ಇದ್ದಾಗಿನಂತೆ ಶೋಭಿಸುವುದಿಲ್ಲ. (ಹಿಡಿಸುವುದಿಲ್ಲ)

(ಗೃಹಸಂಪದಃ ಶರೀರೇಂದ್ರಿಯಗಳ ಶೋಭೆ ಬುದ್ಧಿ ಇದ್ದಾಗ ಮಾತ್ರ, ಇಲ್ಲದಾಗ ಇಲ್ಲ) ।।೧೫।।

**ವ್ಯಂಗೇ ರಥ ಇವ ಪ್ರಾಜ್ಞಃ ಕೋ ನಾಮಾಸೀತ ದೀನವತ್ ।**
**ಕ್ವ ವರ್ತತೇ ಸಾ ಲಲನಾ ಮಜ್ಜಂತಂ ವ್ಯಸನಾರ್ಣವೇ ।**
**ಯಾ ಮಾಮುದ್ಧರತಿ ಪ್ರಜ್ಞಾಂ ದೀಪಯಂತೀ ಪದೇ ಪದೇ ।।೧೬।।**

ರಥೇ ವ್ಯಂಗೇ=ರಥವು ಚಕ್ರ-ಕುದುರೆ ಮುಂತಾದವುಗಳಿಲ್ಲದೇ ಇರುವಾಗ ದೀನವತ್= ದುಃಖಿತನಂತೆ ಕಃ ನಾಮ ಆಸೀತ್=ಯಾವನು ಇರಲು ಸಾಧ್ಯ ? ವ್ಯಸನಾರ್ಣವೇ= ದುಃಖಸಮುದ್ರದಲ್ಲಿ ಮಜ್ಜಂತಂ=ಮುಳುಗುವ ಮಾಂ=ನನ್ನನ್ನು ಪದೇ ಪದೇ=ಕ್ಷಣ ಕ್ಷಣಕ್ಕೂ ಪ್ರಜ್ಞಾಂ=ಬುದ್ಧಿಯನ್ನು ದೀಪಯಂತೀ=ಜಾಗ್ರತಗೊಳಿಸುತ್ತ ಯಾವಳು ಉದ್ಧರತಿ=ಉದ್ಧಾರ ಮಾಡುವಳೋ ಸಾ ಲಲನಾ=ಆ ಲಲನೆಯು ಕ್ವವರ್ತತೇ=ಎಲ್ಲಿರುವಳು ? (ವ್ಯಂಗೇ

ರಥೇ=ಪ್ರಾಣಹೀನವಾದ ದೇಹದಲ್ಲಿ ಪ್ರಾಜ್ಞಃ=ಸುಷುಪ್ತಿಪ್ರವರ್ತಕ ಪರಮಾತ್ಮನು ಪ್ರಜ್ಞಾಂ ದೀಪಯತೀ=ಭಗವದ್ವಿಷಯಕಜ್ಞಾನವನ್ನು ಉದ್ಬೋಧಿಸುವ, ಸಂಸಾರದಿಂದ ಉದ್ಧರಿಸುವ ಸಾ ಲಲನಾ=ಸದ್ಬುದ್ಧಿಯು ಕ್ವ=ಎಲ್ಲಿ ?।।೧೬।।

**ರಾಮಾ ಊಚುಃ -**

**ನರನಾಥ ನ ಜಾನೀಮಸ್ತ ತ್ವತ್ಪ್ರಿಯಾ ಯದ್ ವ್ಯವಸ್ಯತಿ ।**
**ಭೂತಲೇ ನಿರವಸ್ತಾರೇ ಶಯಾನಾಂ ಪಶ್ಯ ಶತ್ರುಹನ್ ।।೧೭।।**

ನರನಾಥ=ರಾಜನೇ ! ತ್ವತ್ಪ್ರಿಯಾ=ನಿನ್ನ ಹೆಂಡತಿಯು ಯದ್ ವ್ಯವಸ್ಯತಿ=ಏನು ನಿಶ್ಚಯಿಸಿರುವಳೋ ತನ್ನ ಜಾನೀಮಃ=ಅದನ್ನು ತಿಳಿದಿಲ್ಲ. ಶತ್ರುಹನ್=ಶತ್ರುಸಂಹಾರಕನೇ ! ನಿರವಸ್ತಾರೇ ಭೂತಲೇ=ಹಾಸಿಗೆಯಿಲ್ಲದ ನೆಲದ ಮೇಲೆ ಶಯಾನಾಂ ಪಶ್ಯ=ಮಲಗಿರುವವಳನ್ನು ನೋಡು.

(ನಿರವಸ್ತಾರೇ ಭೂತಲೇ=ಪೂರ್ಣವಾದ ಭಗವತ್ಪಾದವನ್ನು ವಿಷಯೀಕರಿಸುವ)

**ನಾರದ ಉವಾಚ -**

**ಪುರಂಜನಃ ಸ್ವಮಹಿಷೀಂ ನಿರೀಕ್ಷ್ಯಾವಧುತಾಂ ಭುವಿ ।**
**ತತ್ಸಂಗೋನ್ಮಥಿತಜ್ಞಾನೋ ವೈಕ್ಲವ್ಯಂ ಪರಮಂ ಯಯೌ ।।೧೮।।**

ಪುರಂಜನಃ=ಪುರಂಜನನು ಭುವಿ=ನೆಲದಲ್ಲಿ ಅವಧುತಾಂ=ದೇಹದ ಮೇಲಿನ ಆದರವನ್ನು ತೊರೆದ ಸ್ವಮಹಿಷೀಂ=ತನ್ನ ಹೆಂಡತಿಯನ್ನು ನಿರೀಕ್ಷ್ಯ=ನೋಡಿ ತತ್ಸಂಗೋನ್ಮಥಿತಜ್ಞಾನಃ=ಅವಳ ಸಂಗದಿಂದ ನಷ್ಟವಾದ ಜ್ಞಾನವುಳ್ಳವನಾಗಿ ಪರಮಂ ವೈಕ್ಲವ್ಯಂ ಯಯೌ=ಅತ್ಯಂತ ಪರವಶವಾದನು.

(ವೈಷಯಿಕಬುದ್ಧಿಯ ಸ್ವೀಕಾರದಿಂದ ನಷ್ಟವಾದ ಯಥಾರ್ಥಜ್ಞಾನವುಳ್ಳವ.) ।।೧೮।।

**ಸಾಂತ್ವಯನ್ ಶ್ಲಕ್ಷ್ಣಯಾ ವಾಚಾ ಹೃದಯೇನ ವಿದೂಯತಾ ।**
**ಪ್ರೇಯಸ್ಯಾಃ ಪ್ರೇಮಸಂರಂಭಲಿಂಗಮಾತ್ಮನಿ ನಾಧ್ಯಗಾತ್ ।।೧೯।।**

ವಿದೂಯತಾ=ದುಃಖಿತವಾದ ಹೃದಯೇನ=ಮನಸ್ಸಿನಿಂದ ಶ್ಲಕ್ಷ್ಣಯಾ ವಾಚಾ=ಮಧುರ ಮಾತುಗಳಿಂದ ಸಾಂತ್ವಯನ್=ಸಮಾಧಾನಗೊಳಿಸುತ್ತ ಪ್ರೇಯಸ್ಯಾಃ=ಪ್ರೇಮಿಯ ಪ್ರೇಮಸಂರಂಭಲಿಂಗಂ=ಪ್ರಣಯಕೋಪದ ಚಿಹ್ನವಾದ ಕುಟಿಲದೃಷ್ಟಿಯನ್ನು ಆತ್ಮನಿ=ತನ್ನಲ್ಲಿ ನ ಅಧ್ಯಗಾತ್=ಪಡೆಯಲಿಲ್ಲ.

(ಬುದ್ಧಿಯ ನಾಶಕ್ಕೆ ಕಾರಣವನ್ನು ತಿಳಿಯಲಿಲ್ಲ ಎಂದು ಭಾವ.) ।।೧೯।।

**ಅನುನಿನ್ಯೇಽಥ ಶನಕೈರ್ವೀರೋಽನುನಯಕೋವಿದಃ ।**
**ಪಸ್ಪರ್ಶ ಪಾದಯುಗಲಮಾಹ ಚೋತ್ಸಂಗಲಾಲಿತಾಮ್ ॥೨೦॥**

ಅನುನಯಕೋವಿದಃ ವೀರಃ=ಮನ ಒಲಿಸುವುದರಲ್ಲಿ ಕುಶಲನಾದ ಪುರಂಜನನು ಶನಕೈಃ=ಮೆಲ್ಲಗೆ ಉತ್ಸಂಗಲಾಲಿತಾಂ=ತೊಡೆಯ ಮೇಲೆ ಕೂಡಿಸಿಕೊಂಡು ರಮಿಸಿದವಳ ಪಾದಯುಗಲಂ ಪಸ್ಪರ್ಶ=ಕಾಲುಗಳನ್ನು ಹಿಡಿದನು ಅಥ ಅನುನಿನ್ಯೇ=ಮನ ಒಲಿಸಿದನು. ಆಹ ಚ=ಹೇಳಿದನೂ ಸಹ. ॥೨೦॥

**ನೂನಂ ತ್ವಕೃತಪುಣ್ಯಾಸ್ತೇ ಭೃತ್ಯಾಯೇಷ್ವೀಶ್ವರಾ ಶುಭೇ ।**
**ಕೃತಾಗಃಸ್ವಾತ್ಮಸಾತ್ ಕೃತ್ವಾ ಶಿಕ್ಷಾದಂಡಂ ನ ಯುಂಜತೇ ॥೨೧॥**

ಹೇ ಶುಭೇ=ಎಲೈ ಶೋಭನೆಯೇ ! ಈಶ್ವರಾಃ=ಯಜಮಾನರು ಕೃತಾಗಃಸು=ಅಪರಾಧ ಮಾಡಿದ ಯೇಷು=ಯಾವ ಭೃತ್ಯರಲ್ಲಿ ಆತ್ಮಸಾತ್ ಕೃತ್ವಾ=ಸ್ವಾಧೀನರನ್ನಾಗಿಸಿ ಶಿಕ್ಷಾದಂಡಂ ನ ಯುಂಜತೇ=ಶಿಕ್ಷಾರೂಪ ದಂಡ ಮಾಡುವುದಿಲ್ಲವೋ ತೇ ಭೃತ್ಯಾಃ=ಆ ಭೃತ್ಯರು ನೂನಂ=ನಿಶ್ಚಯವಾಗಿ ಅಕೃತಪುಣ್ಯಾಃ=ಮಂದಭಾಗ್ಯರು ಎಂದರ್ಥ. ॥೨೧॥

**ಪರಮಾನುಗ್ರಹೋ ದಂಡೋ ಭೃತ್ಯೇಷು ಪ್ರಭುಣಾಽರ್ಪಿತಃ ।**
**ಬಾಲೋ ನ ವೇದ ತತ್ ತನ್ವಿ ಬಂಧುಕೃತ್ಯಮಮರ್ಷಣಃ ॥೨೨॥**

ಪ್ರಭುಣಾ=ಯಜಮಾನನಿಂದ ಭೃತ್ಯೇಷು ಅರ್ಪಿತಃ ದಂಡಃ=ಸೇವಕರಿಗೆ ಮಾಡಲ್ಪಟ್ಟ ಶಿಕ್ಷೆಯು ಪರಮಾನುಗ್ರಹಃ=ಶ್ರೇಷ್ಠ ಅನುಗ್ರಹವು. ಹೇ ತನ್ವಿ=ಕೋಮಲಳೆ ! ಅಮರ್ಷಣಃ= ಕ್ರೋಧಾಧೀನನಾಗಿ ಬಂಧುಕೃತ್ಯಂ=ಶಿಕ್ಷೆ ಮಾಡುವುದನ್ನು ನ ವೇದ=ಅನುಗ್ರಹವೆಂದು ತಿಳಿಯದವನು ಬಾಲಃ=ಮೂರ್ಖನು. ನಾನು ಅಪರಾಧಿಯು, ನಿನ್ನ ಭೃತ್ಯನು. ಕಾರಣ ನನಗೆ ದಂಡವನ್ನು ವಿಧಿಸು ಎಂದು ಭಾವ. ॥೨೨॥

**ಸಾ ತ್ವಂ ಮುಖಂ ಸುದತಿ ಸುಭ್ರ್ವನುರಾಗಭಾರ-**
**ವ್ರೀಡಾವಿಲಂಬವಿಲಸದ್ಧಸಿತಾವಲೋಕಮ್ ।**
**ನೀಲಾಲಕಾಲಿಭಿರುಪಸ್ಕೃತಮುನ್ನಸಂ ನಃ**
**ಸ್ವಾನಾಂ ಪ್ರದರ್ಶಯ ಮನಸ್ವಿನಿ ವಲ್ಗುವಾಕ್ಯಮ್ ॥೨೩॥**

ಹೇ ಸುಭ್ರು=ಸುಂದರವಾದ ಹುಬ್ಬುಗಳುಳ್ಳವಳೇ ಸುದತಿ=ಸುಂದರವಾದ ಹಲ್ಲುಗಳುಳ್ಳವಳೇ ಮನಸ್ವಿನಿ=ಒಳ್ಳೆಯ ಮನಸ್ಸಿನವಳೇ ! ಅನುರಾಗಭಾರ=ಪ್ರೇಮದ ಭಾರದಿಂದ ವ್ರೀಡಾ=ಲಜ್ಜೆಯಿಂದ ವಿಲಂಬ ಮಧುರತೆಯಿಂದ ವಿಲಸತ್=ಪ್ರಕಾಶಿಸುವ

ಹಸಿತ=ಮಂದಹಾಸಯುತವಾದ ಅವಲೋಕಂ=ನೋಟವುಳ್ಳ ನೀಲಾಲಕಾಲಿಭಿಃ=ಕಪ್ಪಾದ ಕೂದಲಗಳೆಂಬ ಭ್ರಮರಗಳಿಂದ ಉಪಸ್ಕೃತಂ=ಅಲಂಕೃತವಾದ, ಉನ್ನಸಂ=ಎತ್ತರವಾದ ಮೂಗುಳ್ಳ ವಲ್ಗುವಾಕ್ಯಂ=ಮಂಜಲಮಾತುಗಳುಳ್ಳ ಮುಖಂ=ವದನವನ್ನು ಸಾ ತ್ವಂ=ಆ ನೀನು ಸ್ವಾನಾಂ ನಃ ಪ್ರದರ್ಶಯ=ನಿನ್ನವರೇ ಆದ ನಮಗೆ ತೋರಿಸು. ।।೨೩।।

**ತಸ್ಮಿನ್ ದಧೇ ದಮಮಹಂ ತವ ವೀರಪತ್ನಿ**
**ಯೋಽನ್ಯತ್ರ ಭೂಸುರಕುಲಾತ್ ಕೃತಕಿಲ್ಬಿಷಸ್ತಮ್ ।**
**ಪಶ್ಯೇ ನ ವೀತಭಯಮುನ್ಮುದಿತಂ ತ್ರಿಲೋಕ್ಯಾಂ**
**ಕ್ರುದ್ಧಸ್ಯ ವೈ ಮುರರಿಪೋರಿತರತ್ರ ದಾಸಾತ್ ।।೨೪।।**

ಹೇ ವೀರಪತ್ನಿ=ಎಲೈ ವೀರನಾದವನ ಹೆಂಡತಿಯೇ ಯಃ=ಯಾವನು ತವ ಕೃತಕಿಲ್ಬಿಷಃ=ನಿನಗೆ ಅಪರಾಧ ಮಾಡಿರುವನೋ ತಸ್ಮಿನ್=ಅವನಲ್ಲಿ ಅಹಂ=ನಾನು ಭೂಸುರಕುಲಾತ್ ಅನ್ಯತ್ರ=ಬ್ರಾಹ್ಮಣರನ್ನು ಬಿಟ್ಟು ಮತ್ತು ಮುರರಿಪೋಃ ದಾಸಾತ್ ಇತರತ್ರ= ಶ್ರೀಹರಿಯ ದಾಸರನ್ನು ಹೊರತುಪಡಿಸಿ ದಮಂ ದಧೇ=ಶಿಕ್ಷೆ ಮಾಡುವೆನು. ಮತ್ತು ನಿನ್ನ ಅಪರಾಧಿಯನ್ನು ತ್ರಿಲೋಕ್ಯಾಂ=ಮೂರು ಲೋಕಗಳಲ್ಲಿ ಆಗಲೀ ಅನ್ಯತ್ರ=ಮೂರುಲೋಕದ ಹೊರಗಾಗಲೀ ಕ್ರುದ್ಧಸ್ಯ=ಕುಪಿತನಾದ ನನ್ನ ವೀತಭಯಂ=ಭಯರಹಿತನನ್ನಾಗಿ ಉನ್ಮುದಿತಂ=ಬಹುಸಂತೋಷದಿಂದ ಇರುವವನನ್ನಾಗಲೀ ನ ಪಶ್ಯೇ=ನೋಡಲಾರೆನು. ಅಂದರೆ ನಿನ್ನ ಅಪರಾಧಿ ಎಲ್ಲಿಯೇ ಇರಲಿ ನನ್ನ ಭಯದಿಂದಲೇ ಇರುವನು ಎಂದು ಭಾವ.

**ವಕ್ತ್ರಂ ನ ತೇ ವಿತಿಲಕಂ ಮಲಿನಂ ವಿಹರ್ಷಂ**
**ಸಂರಂಭಭೀಮಮವಿಮೃಷ್ಟಮಪೇತರಾಗಮ್ ।**
**ಪಶ್ಯೇ ಸ್ತನಾವಪಿ ಶುಚೋಪಹತೌ ಸುಜಾತೌ**
**ಬಿಂಬಾಧರಂ ವಿಗತಕುಂಕುಮಪಂಕರಾಗೌ ।।೨೫।।**

ವಿತಿಲಕಂ=ತಿಲಕವಿಲ್ಲದ ಮಲಿನಂ=ಕೊಳೆಯಾದ ವಿಹರ್ಷಂ=ನಗುವಿಲ್ಲದ ಸಂರಂಭಭೀಮಂ=ಕೋಪದಿಂದ ಭಯಂಕರವಾದ ಅವಿಮೃಷ್ಟಂ=ತೊಳೆಯದಿರುವ ಅಪೇತರಾಗಂ=ಸ್ನೇಹಶೂನ್ಯವಾದ ವಕ್ತ್ರಂ=ಮುಖವನ್ನು ಸುಜಾತೌ=ಶೋಭನಗಳಾದ ಶುಚೋಪಹತೌ=ಶೋಕಾಶ್ರುಗಳಿಂದ ತೊಳೆಯಲ್ಪಟ್ಟ ಆದ್ದರಿಂದಲೇ ವಿಗತಕುಂಕುಮ- ಪಂಕರಾಗೌ=ಕುಂಕುಮಕೇಶರದ ಕೆಂಪನ್ನು ಕಳೆದುಕೊಂಡ ಸ್ತನೌ=ಕುಚಗಳನ್ನು ಬಿಂಬಾಧರಂ=ದಾಳಿಂಬೆಯಂತೆ ಕೆಂಪಾದ ತುಟಿಯನ್ನು ನ ಪಶ್ಯೇ=ನೋಡಲಾರೆ. ನೋಡಿ ಸುಖಿಸಲಾರೆ. ।।೨೫।।

**ತನ್ಮೇ ಪ್ರಸೀದ ಸುಹೃದಃ ಕೃತಕಿಲ್ಬಿಷಸ್ಯ**
**ಸ್ವೈರಂ ಗತಸ್ಯ ಮೃಗಯಾಂ ವ್ಯಸನಾತುರಸ್ಯ ।**
**ಕಾ ದೇವರಂ ವಶಗತಂ ಕುಸುಮಾಸ್ತ್ರವೇಗ-**
**ವಿಸ್ರಸ್ತಪೌಂಸ್ಯಮುಶತೀ ನ ಭಜೇತ ಕೃತ್ಯೇ ॥೨೬॥**

॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ ಷಡ್ವಿಂಶೋಽಧ್ಯಾಯಃ ॥

ತತ್=ಆದ್ದರಿಂದ ವ್ಯಸನಾತುರಸ್ಯ=ವ್ಯಸನಪೀಡಿತನಾದ ಸ್ವೈರಂ=ಸ್ವತಂತ್ರವಾಗಿ, ನಿನ್ನನ್ನು ಕೇಳದೇ ಮೃಗಯಾಂ ಗತಸ್ಯ=ಬೇಟೆಗೆ ಹೋದದ್ದೆಂಬ ಕೃತಕಿಲ್ಬಿಷಸ್ಯ=ಅಪರಾಧ ಮಾಡಿದ ಮೇ ಪ್ರಸೀದ=ನನ್ನ ಮೇಲೆ ಪ್ರಸನ್ನಳಾಗು. ಕುಸುಮಾಸ್ತ್ರವೇಗವಿಸ್ರಸ್ತಪೌಂಸ್ಯಂ= ಕಾಮವೇಗದಿಂದ ಸಡಿಲಾದ ಪುರುಷತ್ವವುಳ್ಳ ವಶಗತಂ=ಕೈಗೆ ಸಿಕ್ಕಿರುವ ದೇವರಂ=ಪತಿಯನ್ನು (ಕ್ರೀಡೆಯನ್ನು ನೀಡುವ, ದೇವಃ ದೇವನಂ ರಾತೀತಿ ದೇವರಃ) ಉಶತೀ=ಕಾಮಿಸುವಳು ಕೃತ್ಯೇ=ಕಾರ್ಯವಿದ್ದಾಗ ಕಾ ನ ಭಜೇತ=ಯಾವಳು ಸೇವಿಸಲಾರಳು ? ಎಲ್ಲರೂ ಸೇವಿಸುವರು. ಆದ್ದರಿಂದ ನನ್ನ ಮೇಲೆ ಕೃಪೆ ಮಾಡು ಎಂದು ಭಾವ. ॥೨೬॥

॥ ಇಲ್ಲಿಗೆ ಇಪ್ಪತ್ತಾರನೇ ಅಧ್ಯಾಯವು ಮುಗಿಯಿತು ॥

# ಅಥ ಸಪ್ತವಿಂಶೋಽಧ್ಯಾಯಃ

**ನಾರದ ಉವಾಚ -**

**ಇತ್ಥಂ ಪುರಂಜನಂ ಸಧ್ರ್ಯಗ್ ವಶಮಾನೀಯ ವಿಭ್ರಮೈಃ ।**
**ಪುರಂಜನೀ ಮಹಾರಾಜ ರೇಮೇ ರಮಯತೀ ಪತಿಮ್ ॥೧॥**

ಮಹಾರಾಜ=ಪ್ರಾಚೀನ ಬರ್ಹಿಯೇ ! ಇತ್ಥಂ=ಈ ರೀತಿಯಾಗಿ ಪುರಂಜನೀ=ಪುರಂಜನನ ಪತ್ನಿಯು ಪುರಂಜನಂ=ಪುರಂಜನನನ್ನು ವಿಭ್ರಮೈಃ=ವಿಲಾಸಗಳಿಂದ ಸಧ್ರ್ಯಕ್=ಚೆನ್ನಾಗಿ ವಶಂ ಆನೀಯ=ಸ್ವಾಧೀನ ಮಾಡಿಕೊಂಡು ಪತಿಂ=ಗಂಡನನ್ನು ರಮಯತೀ=ಸಂತೋಷಪಡಿಸುತ್ತ ರೇಮೇ=ಕ್ರೀಡಿಸಿದಳು. ॥೧॥

**ಸ ರಾಜಾ ಮಹಿಷೀಂ ರಾಜನ್ ರುಚಿರಾಂಬರಸಂವೃತಾಮ್ ।**
**ಕೃತಸ್ವಸ್ತ್ಯಯನಾಂ ತೃಪ್ತಾಮಭ್ಯನಂದದುಪಾಗತಾಮ್ ॥೨॥**

ರಾಜನ್=ಬರ್ಹಿಷದನೇ ! ಸಃ ರಾಜಾ=ಆ ಪುರಂಜನನು ರುಚಿರಾಂಬರಸಂವೃತಾಂ=ಸುಂದರವಾದ ವಸ್ತ್ರವನ್ನು ಧರಿಸಿದ ಕೃತಸ್ವಸ್ತ್ಯಯನಾಂ=ಮಂಗಲಾಶೀರ್ವಾದ ಪಡೆದ, ಕುಂಕುಮಾದಿಮಂಗಲದ್ರವ್ಯಗಳಿಂದ ಅಲಂಕೃತಳಾದ ಉಪಾಗತಾಂ=ಸಮೀಪಿಸಿದ ತೃಪ್ತಾಂ=ಸಂತುಷ್ಟಳಾದ ಮಹಿಷೀಂ=ಪತ್ನಿಯನ್ನು ಅಭ್ಯನಂದತ್=ಸಂತೋಷಪಡಿಸಿದನು.

**ತಯೋಪಗೂಢಃ ಪರಿರಬ್ಧಕಂಧರೋ**
**ರಹೋಽನುಮಂತ್ರೈರಪಕೃಷ್ಟಚೇತನಃ ।**
**ನ ಕಾಲರಂಹೋ ಬುಬುಧೇ ದುರತ್ಯಯಂ**
**ದಿವಾ ನಿಶೇತಿ ಪ್ರಮದಾಪರಿಗ್ರಹಃ ॥೩॥**

ತಯಾ=ಪತ್ನಿಯಿಂದ ಉಪಗೂಢಃ=ಆಲಿಂಗಿತನಾಗಿ ಪರಿರಬ್ಧಕಂಧರಃ=ಅವಳ ಕುತ್ತಿಗೆಯನ್ನು ಆಲಂಗಿಸಿದವನಾಗಿ, ರಹಃ=ರಹಸ್ಯದಲ್ಲಿ ಅನುಮಂತ್ರ್ಯ=ಸಲ್ಲಾಪಗಳಿಂದ ಅಪಕೃಷ್ಟಚೇತನಃ=ಸೆಳೆಯಲ್ಪಟ್ಟ ಸ್ವರೂಪಜ್ಞಾನವುಳ್ಳವನಾಗಿ ಪ್ರಮದಾಪರಿಗ್ರಹಃ= ವೈಷಯಿಕಬುದ್ಧಿಯೇ ಪತ್ನಿಯಾಗಿವುಳ್ಳವನು ದಿವಾ ನಿಶಾ ಇತಿ=ಹಗಲು ರಾತ್ರಿ (ಜ್ಞಾನ ಅಜ್ಞಾನ) ಎಂಬ ಕಾಲರಂಹಃ=ಕಾಲದ ವೇಗವನ್ನು ನ ಬುಬುಧೇ=ತಿಳಿಯಲಿಲ್ಲ. ಆಯುಷ್ಯದ ವ್ಯಯವನ್ನು ಅರಿಯಲಿಲ್ಲವೆಂದು ಭಾವ. ।।೩।।

**ಶಯಾನಮುನ್ನದ್ಧಮದೋ ಮಹಾಮನಾ**
**ಮಹಾರ್ಹತಲ್ಪೇ ಮಹಿಷೀಭುಜೋಪಧೇ ।**
**ತಾಮೇವ ವೀರೋಽಮನುತ ವ್ಯವಾಯತ-**
**ಸ್ತಮೋಽಭಿಭೂತೋ ನ ನಿಜಂ ಪರಂ ಹಿ ತತ್ ।।೪।।**

ಮಹಿಷೀಭುಜೋಪಧೇ=ಹೆಂಡತಿಯ ತೋಳಿನ ತಲೆದಿಂಬಿನಲ್ಲಿ ಮಹಾರ್ಹತಲ್ಪೇ= ಬೆಲೆ ಬಾಳುವ ಹಾಸಿಗೆಯಲ್ಲಿ (ಜ್ಞಾನನಾಶಕರವಾದ ವೃತ್ತಿವಿಶೇಷದಲ್ಲಿ) ಶಯಾನಃ=ಮಲಗಿದ (ತತ್ವ ತಿಳಿಯದ) ಉನ್ನದ್ಧಮದಃ=ಬಹಳ ಸಂತೋಷವುಳ್ಳವನು ವ್ಯವಾಯತಃ=ಮೈಥುನದಿಂದ ತಮಃ ಅಭಿಭೂತಃ=ಅಜ್ಞಾನಾವೃತನಾಗಿ ತಾಂ ಏವ=ಪತ್ನಿಯನ್ನೇ ಪರಂ ಅಮನುತ= ಪುರುಷಾರ್ಥವೆಂದು ತಿಳಿದನು. ನಿಜಂ=ನಿಜವಾಗಿ ಆತ್ಮೀಯನಾದ ತತ್=ಪ್ರಸಿದ್ಧವಾದ ಪರಂ=ಪರಬ್ರಹ್ಮನನ್ನು ನ ಅಮನುತ=ತಿಳಿಯಲಿಲ್ಲ. ।।೪।।

**ತಸ್ಯೈವಂ ರಮಮಾಣಸ್ಯ ಕಾಮಕಶ್ಮಲಚೇತಸಃ ।**
**ಕ್ಷಣಾರ್ಧಮಿವ ರಾಜೇಂದ್ರ ವ್ಯತಿಕ್ರಾಂತಂ ನವಂ ವಯಃ ।।೫।।**

ರಾಜೇಂದ್ರ=ರಾಜಶ್ರೇಷ್ಠನೇ ! ಏವಂ=ಈ ರೀತಿ ರಮಮಾಣಸ್ಯ=ಕ್ರೀಡಿಸುತ್ತಿರುವ ಕಾಮಕಶ್ಮಲಚೇತಸಃ=ಕಾಮದಿಂದ ಕಲುಷಿತವಾದ ಮನಸ್ಸುಳ್ಳ ತಸ್ಯ=ಪುರಂಜನನ ನವಂ ವಯಃ=ತಾರುಣ್ಯವು ಕ್ಷಣಾರ್ಧಂ ಇವ=ಅರ್ಧಕ್ಷಣದಂತೆ ವ್ಯತಿಕ್ರಾಂತ=ಕಳೆಯಿತು. ।।೫।।

**ತಸ್ಯಾಮಜನಯತ್ ಪುತ್ರಾನ್ ಪುರಂಜನ್ಯಾಂ ಪುರಂಜನಃ ।**
**ಶತಾನ್ಯೇಕಾದಶ ವಿರಾಡಾಯುಷೋಽರ್ಧಮಥಾತ್ಯಗಾತ್ ।।೬।।**

ವಿರಾಟ್=ಸಾಮ್ರಾಟನಾದ (ವಿಷಯದಲ್ಲೇ ರಾರಾಜಿಸುವ) ಪುರಂಜನಃ=ಪುರಂಜನನು ತಸ್ಯಾಂ ಪುರಂಜನ್ಯಾಂ=ಆ ಹೆಂಡತಿಯಲ್ಲಿ ಏಕಾದಶ ಶತಾನಿ=ಹನ್ನೊಂದು ನೂರು ಪುತ್ರಾನ್=ಮಕ್ಕಳನ್ನು ಅಜನಯತ್=ಹುಟ್ಟಿಸಿದನು. ಅಥ=ಅದರಿಂದ ಆಯುಷಃ ಅರ್ಧಂ ಅತ್ಯಗಾತ್=ಆಯುಷ್ಯದ ಅರ್ಧಭಾಗ ಕಳೆಯಿತು.

(ಅಭಿಭೂತವಾದ ಸ್ವರೂಪಜ್ಞಾನವುಳ್ಳ ವೈಷಯಿಕಬುದ್ಧಿಗೆ ಹನ್ನೊಂದು ಇಂದ್ರಿಯಗಳಿಂದ ಅನಂತ ವೃತ್ತಿಗಳು ಜನಿಸುವವು. ಅವೇ ಮಕ್ಕಳುಗಳು. ಬಾಲ್ಯಾವಸ್ಥೆಯಲ್ಲಿ ಬುದ್ಧಿವಿಸ್ತಾರವಿರುವುದಿಲ್ಲ, ಯೌವನದಲ್ಲಿ ಬುದ್ಧಿವಿಸ್ತಾರ ಸಂಭಾವನೆಯಿಂದ ಆಯುಷಾರ್ಧ ಕಳೆಯಿತು ಎಂದು ಹೇಳಿದೆ.)॥೬॥

**ದುಹಿತೃರ್ದಶೋತ್ತರಶತಂ ಪಿತೃಭ್ರಾತೃಯಶಸ್ಕರೀಃ ।**
**ಶೀಲೌದಾರ್ಯಗುಣೋಪೇತಾಃ ಪೌರಂಜನ್ಯಃ ಪ್ರಜಾಪತೇ ॥೭॥**

ಪ್ರಜಾಪತೇ=ರಾಜನೇ! ಪೌರಂಜನ್ಯಃ=ಪುರಂಜನನ ಪುತ್ರಿಯರು ಪಿತೃಭ್ರಾತೃಯಶಸ್ಕರೀಃ =ತಂದೆಗೂ ಅಣ್ಣತಮ್ಮಂದಿರಿಗೂ ಕೀರ್ತಿಯನ್ನು ತರುವ, ಶೀಲೌದಾರ್ಯಗುಣೋಪೇತಾಃ= ಒಳ್ಳೆಯ ಸ್ವಭಾವ, ಉದಾರತೆ ಮುಂತಾದ ಗುಣವುಳ್ಳ ದಶೋತ್ತರಶತಂ=ನೂರಾಹತ್ತು ಸಂಖ್ಯಾಕರಾದ, ದುಹಿತೃಃ=ಹೆಣ್ಣುಮಕ್ಕಳು. ॥೭॥

**ಸ ಪಾಂಚಾಲಪತಿಃ ಪುತ್ರಾನ್ ಪಿತೃವಂಶವಿವರ್ಧನಾನ್ ।**
**ದಾರೈಃ ಸಂಯೋಜಯಾಮಾಸ ದುಹಿತೄಃ ಸದೃಶೈರ್ವರೈಃ ॥೮॥**

ಸಃ ಪಾಂಚಾಲಪತಿಃ=ಆ ಪಾಂಚಾಲದೊಡೆಯನು ಪಿತೃವಂಶವರ್ಧನಾನ್=ತಂದೆಯ ಕುಲವನ್ನು ಬೆಳೆಸುವ ಪುತ್ರಾನ್=ಮಕ್ಕಳನ್ನು ದಾರೈಃ ಸಂಯೋಜಯಮಾಸ=ಮದುವೆ ಮಾಡಿದನು. ಸದೃಶೈಃ ವರೈಃ=ಯೋಗ್ಯರಾದ (ಅನುರೂಪರಾದ) ವರಗಳಿಂದ ದುಹಿತೄಃ ಸಂಯೋಜಯಾಮಾಸ=ಹೆಣ್ಣುಮಕ್ಕಳನ್ನು ಕೂಡಿಸಿದನು, ಮದುವೆ ಮಾಡಿದನೆಂದರ್ಥ.

**ಪುತ್ರಾಣಾಂ ಚಾಭವನ್ ಪುತ್ರಾ ಏಕೈಕಸ್ಯ ಶತಂ ಶತಮ್ ।**
**ಯೈರ್ವೈ ಪೌರಂಜನೋ ವಂಶಃ ಪಾಂಚಾಲೇಷು ಸಮೇಧಿತಃ ॥೯॥**

ಪುತ್ರಾಣಾಂ=ಮಕ್ಕಳಿಗೆ ಏಕಕಸ್ಯ=ಒಬ್ಬೊಬ್ಬರಿಗೆ ಶತಂ ಶತಂ=ನೂರು ನೂರು ಪುತ್ರಾಃ=ಮಕ್ಕಳು ಅಭವನ್=ಆದರು. ಯೈಃ=ಯಾರಿಂದ ಪೌರಂಜನಃ ವಂಶಃ=ಪುರಂಜನನ ಕುಲವು ಪಾಂಚಾಲೇಷು=ಪಂಚಾಲದೇಶದಲ್ಲಿ ಸಮೇಧಿತಃ=ಚೆನ್ನಾಗಿ ಅಭಿವೃದ್ಧವಾಯಿತೋ, ಅಂತಹ ನೂರು ನೂರು ಮಕ್ಕಳಾದರು ಎಂದನ್ವಯ. ॥೯॥

**ತೇಷು ತದ್ರಿಕ್ಥಹಾರೇಷು ಗೃಹಕೋಶಾನುಜೀವಿಷು ।**
**ನಿಗೂಢೇನ ಮಮತ್ವೇನ ವಿಷಯೇಷ್ವನ್ವಬಧ್ಯತ ॥೧೦॥**

ತದ್ರಿಕ್ಥಹಾರೇಷು=ಹಣವನ್ನೇ ಸ್ವೀಕರಿಸುವ ಗೃಹಕೋಶಾನುಜೀವಿಷು=ಮನೆ ಕೋಶಗಳನ್ನು ಅನುಭವಿಸುವ ತೇಷು=ಮಕ್ಕಳಲ್ಲಿ ನಿಗೂಢೇನ=ಗಾಢವಾದ ಮಮತ್ವೇನ= ನನ್ನವರೆಂಬ ಭಾವನೆಯಿಂದ ವಿಷಯೇಷು ಅನ್ವಬಧ್ಯತ=ವಿಷಯಗಳಲ್ಲಿ ಬಂಧಿತನಾದನು.

(ರಿಕ್ಥ=ವಿಷಯಗಳು ವಾಸಾನಾಗ್ರಾಹಕವಾದ ಕೋಶ ಮನಸ್ಸುಗಳಲ್ಲಿ ಪ್ರವಿಷ್ಟವಾದುದು)

**ಈಜೇ ಚ ಕ್ರತುಭಿರ್ವಿಪ್ರೈರ್ದೀಕ್ಷಿತಃ ಪಶುಮಾರಕೈಃ ।**
**ದೇವಾನ್ ಪಿತೄನ್ ಭೂತಪತೀನ್ ನಾನಾಕಾಮೋ ಯಥಾ ಭವಾನ್॥೧೧॥**

ವಿಪ್ರೈಃ=ಬ್ರಾಹ್ಮಣರಿಂದ ದೀಕ್ಷಿತಃ=ದೀಕ್ಷೆಯನ್ನು ಪಡೆದು ಪಶುಮಾರಕೈಃ=ಪಶುಸಂಹಾರ-ವುಳ್ಳ ಕ್ರತುಭಿಃ=ಯಜ್ಞಗಳಿಂದ ನಾನಾಕಾಮಃ=ಅನೇಕ ಕಾಮನೆಗಳುಳ್ಳವನಾಗಿ ಭವಾನ್ ಯಥಾ=ನಿನ್ನಂತೆಯೇ ದೇವಾನ್=ಕಾಮ್ಯಫಲ ಕೊಡುವ ದೇವತೆಗಳನ್ನು ಪಿತೄನ್=ಪಿತೃಗಳನ್ನು ಭೂತಪತೀನ್=ಭೈರವಾದಿಗಳನ್ನು ಈಜೇ=ಪೂಜಿಸಿದನು. ॥೧೧॥

**ಯುಕ್ತೇಷ್ವೇವಂ ಪ್ರಮತ್ತಸ್ಯ ಕುಟುಂಬಾಸಕ್ತಚೇತಸಃ ।**
**ಆಸಸಾದ ಸ ವೈ ಕಾಲೋ ಯೋಽಪ್ರಿಯಃ ಪ್ರಿಯಯೋಷಿತಾಮ್ ॥೧೨॥**

ಏವಂ ಯುಕ್ತೇಷು=ಈ ರೀತಿ ಕ್ರಿಯೆಗಳಿಂದ ಸಹಿತವಾದ ಕಾಮ್ಯಕರ್ಮಗಳಲ್ಲಿ ಆಸಕ್ತನಾಗುತ್ತಿರಲು ಯುಕ್ತೇಷು ಪ್ರಮತ್ತಸ್ಯ=ಯೋಗ್ಯವಾದ ತನಗೆ ಹಿತವಾದ ಭಕ್ತಿ ಮುಂತಾದವುಗಳಲ್ಲಿ ಅವಧಾನವಿಲ್ಲದಿರಲು ಕುಟುಂಬಾಸಕ್ತಚೇತಸಃ=ಸಂಸಾರದಲ್ಲಿ ಆಸಕ್ತವಾದ ಮನಸ್ಸುಳ್ಳ ಪುರಂಜನನಿಗೆ ಯಃ=ಯಾವದು ಪ್ರಿಯಯೋಷಿತಾಂ= ಸ್ತ್ರೀಪ್ರಿಯರಾದವರಿಗೆ ಅಥವಾ ಸ್ತ್ರೀಯರಿಗೆ ಅಥವಾ ಪ್ರಿಯರಿಗೆ ಸ್ತ್ರೀಯರಿಗೆ ಅಪ್ರಿಯಃ= ಪ್ರಿಯವಲ್ಲದ ಕಾಲವೋ ಸಃ ಕಾಲಃ ವೈ=ಅಂತಹ ಪ್ರಸಿದ್ಧವಾದ ವೃದ್ಧಾಪ್ಯಕಾಲವು (ಮುಪ್ಪು) ಆಸಸಾದ=ಪ್ರಾಪ್ತವಾಯಿತು. ॥೧೨॥

**ಚಂಡವೇಗ ಇತಿ ಖ್ಯಾತೋ ಗಂಧರ್ವಾಧಿಪತಿರ್ನೃಪ ।**
**ಗಂಧರ್ವಾಸ್ತಸ್ಯ ಬಲಿನಃ ಷಷ್ಟ್ಯುತ್ತರಶತತ್ರಯಮ್ ॥೧೩॥**

ಹೇ ನೃಪ=ರಾಜನೇ ! ಚಂಡವೇಗಃ ಇತಿ ಖ್ಯಾತಃ=ಬಹಳ ವೇಗವುಳ್ಳದ್ದೆಂದು ಪ್ರಸಿದ್ಧವಾದ ಸಂವತ್ಸರ ಎಂಬುದು ಗಂಧರ್ವಾಧಿಪತಿಃ=ಕಲಾಕಾಷ್ಠಾ ಮುಂತಾದ ತನ್ನ ಅವಯವಗಳಿಗೆ ಅಧಿಪತಿಯಾದದ್ದು. ತಸ್ಯ=ಆ ಸಂವತ್ಸರಕ್ಕೆ ಬಲಿನಃ=ಆಯುಷಹರಣ ಮಾಡುವ ಚಂಡವೇಗನಿಗೆ ಷಷ್ಟ್ಯುತ್ತರಶತತ್ರಯಮ್=ಮೂನ್ನೂರಾ ಅರವತ್ತು ದಿವಸಾತ್ಮಕ ಗಂಧರ್ವಾಃ=ಗಂಧರ್ವರು ಭೃತ್ಯರು. ॥೧೩॥

**ಗಂಧರ್ವ್ಯಸ್ತಾವತೀರಸ್ಯ ಮೈಥುನ್ಯಶ್ಚ ಸಿತಾಸಿತಾಃ ।**
**ಪರಿವೃತ್ಯಾ ವಿಲುಂಪಂತಿ ಸರ್ವಕಾಮಾನ್ ವಿನಿರ್ಮಿತಾನ್ ॥೧೪॥**

ಮೈಥುನ್ಯಃ=ಹಗಲಿನ ಜೊತೆಯಾಗಿಯೇ ಇರುವ ತಾವತೀಃ=ಅಷ್ಟೇ (೩೬೦ ಸಂಖ್ಯಾಕವಾದ) ಗಂಧರ್ವ್ಯಃ=ರಾತ್ರಿಗಳು ಸಿತಾ ಅಸಿತಾಃ=ಕೆಲವು (ಹಗಲು) ಬಿಳಿಯವು ಕೆಲವು (ರಾತ್ರಿಗಳು) ಕಪ್ಪು ಆದವು. ಪರಿವೃತ್ಯಾ=ತಿರುಗುವುದರಿಂದ (ಪುನರಾವರ್ತನದಿಂದ,) ವಿನಿರ್ಮಿತಾನ್=ಸಂಪಾದಿಸಿದ ಸರ್ವಕಾಮಾನ್ ವಿಲುಂಪಂತಿ=ಎಲ್ಲ ವಿಷಯಗಳನ್ನು ನಾಶಗೊಳಿಸುವ,

ಸರ್ವಕಾಮವಿನಿರ್ಮಿತಾಂ ವಿಲುಂಪಂತಿ=ಎಂದು ಪಾಠಾಂತರ. ಈ ಪಾಠದಲ್ಲಿ ಎಲ್ಲ ವಿಷಯಗಳಿಂದ ನಿರ್ಮಿತವಾದ ದೇಹವನ್ನು ನಾಶಗೊಳಿಸುವ ಎಂದರ್ಥ. ಆಯುಷ್ಯ ಅಪಹಾರಕಗಳೆಂದದರ್ಥ. ।।೧೪।।

**ತೇ ಚಂಡವೇಗಾನುಚರಾಃ ಪುರಂಜನಪುರೀಂ ಯದಾ ।**
**ಹರ್ತುಮಾರೇಭಿರೇ ತತ್ರ ಪ್ರತ್ಯಷೇಧತ್ ಪ್ರಜಾಗರಃ ।।೧೫।।**

ತೇ ಚಂಡವೇಗಾನುಚರಾಃ=ಆ ಚಂಡವೇಗದ ಸೇವಕರು ಯದಾ=ಯಾವಾಗ ಪುರಂಜನಪುರೀಂ=ಪುರಂಜನನ ಪಟ್ಟಣವನ್ನು (ದೇಹವನ್ನು) ಹರ್ತುಂ ಆರೇಭಿರೇ=ಅಪಹಾರ ಮಾಡಲು ಆರಂಭಿಸಿದರೋ ತತ್ರ=ಪುರಂಜನ ಪುರಿಯಲ್ಲಿ ಪ್ರಜಾಗರಃ=ಯಾವಾಗಲೂ ಎಚ್ಚತ್ತಿರುವ (ಪ್ರಹರೆಗಾರನು) ಪ್ರಾಣದೇವರು ಪತ್ಯಷೇಧತ್=ತಡೆದರು. (ನಿಷೇಧಿಸಿದರು. ಪ್ರಾಣವ್ಯಾಪಾರ ಇರುವವರೆಗೆ ದೇಹ ಇರುವುದೆಂದು ಭಾವ.)।।೧೫।।

**ಸ ಸಪ್ತಭಿಃ ಶತೈರೇಕೋ ವಿಂಶಕೇನ ಶತಂ ಸಮಾಃ ।**
**ಪುರಂಜನಪುರಾಧ್ಯಕ್ಷೋ ಗಂಧರ್ವೈರ್ಯುಯುಧೇ ಬಲೀ ।।೧೬।।**

ಬಲೀ=ಸಮರ್ಥನಾದ ಪುರಂಜನಪುರಾಧ್ಯಕ್ಷಃ=ಪುರಂಜನಪಟ್ಟಣದ ಒಡೆಯನು (ದೇಹಾಭಿಮಾನಿಯಾದ ಜೀವನು) ಏಕಃ=ಒಬ್ಬನೇ ವಿಂಶಕೇನ ಸಹಿತೈಃ ಸಪ್ತಭಿಃ ಶತೈಃ ಗಂಧರ್ವೈಃ=ಏಳನೂರಾ ಇಪ್ಪತ್ತು ಗಂಧರ್ವರೊಡನೆ ಶತಂ ಸಮಾಃ=ನೂರು ವರ್ಷ ಯುಯುಧೇ=ಯುದ್ಧ ಮಾಡಿದನು. ।।೧೬।।

**ಕ್ಷೀಯಮಾಣೇ ಸ್ವಸಾಮರ್ಥ್ಯೇ ಏಕಸ್ಯ ಬಹುಭಿರ್ಯುಧಿ ।**
**ಚಿಂತಾಂ ಪರಾಂ ಜಗಾಮಾರ್ತಃ ಸರಾಷ್ಟ್ರಪುರಬಾಂಧವಃ ।।೧೭।।**

ಬಹುಭಿಃ=ಬಹಳ ಜನರೊಡನೆ ಯುಧಿ=ಯುದ್ಧದಲ್ಲಿ ಏಕಸ್ಯ=ಒಬ್ಬನಿಗೆ ಸ್ವಸಾಮರ್ಥ್ಯೇ ಕ್ಷೀಯಮಾಣೇ=ತನ್ನ ಸಾಮರ್ಥ್ಯವು ಕಡಿಮೆಯಾಗುತ್ತಿರಲು ಸರಾಷ್ಟ್ರಪುರಬಾಂಧವಃ=ದೇಶ ಪಟ್ಟಣ ಬಾಂಧವರಿಂದ ಸಹಿತನಾಗಿ ಆರ್ತಃ=ದುಃಖಿತನಾಗಿ ಪರಾಂ ಚಿಂತಾಂ ಜಗಾಮ=ಬಹಳ ಚಿಂತೆಗೊಳಗಾದನು. ।।೧೭।।

**ಸ ಏವ ಪುರ್ಯಾಂ ಮಧುಭುಕ್ ಪಾಂಚಾಲೇಷು ಸ್ವಪಾರ್ಷದೈಃ ।**
**ಉಪನೀತಂ ಬಲಿಂ ಗೃಹ್ಣನ್ ಸ್ತ್ರೀಜಿತೋ ನಾವಿದದ್ ಭಯಮ್ ॥೧೮॥**

ಸಃ=ಪುರಂಜನನು ಪುರ್ಯಾಂ ಏವ=ಪಟ್ಟಣದಲ್ಲೇ (ದೇಹದಲ್ಲಿಯೇ) ಸ್ವಪಾರ್ಷದೈಃ= ತನ್ನ ಸೇವಕರಿಂದ (ಇಂದ್ರಿಯಗಳಿಂದ) ಪಾಂಚಾಲೇಷು=ಪಾಂಚಾಲದೇಶದಲ್ಲಿ (ಐದು ವಿಷಯಗಳಲ್ಲಿ) ಉಪನೀತಂ=ತಂದ ಬಲಿಂ=ಆಹಾರವನ್ನು ಸ್ವೀಕರಿಸುತ್ತ (ರೂಪಾದಿ ವಿಷಯಗಳನ್ನು ಅನುಭವಿಸುತ್ತ) ಸ್ತ್ರೀಜಿತಃ=ಬುದ್ಧಿಯಿಂದ ವಶೀಕೃತನಾಗಿ ಭಯಂ ನ ಅವಿದತ್=ಮೃತ್ಯುಭಯವನ್ನು ತಿಳಿಯಲಿಲ್ಲ, ವೈರಿಪರಾಭವವನ್ನು ಅರಿಯಲಿಲ್ಲ ॥೧೮॥

**ಕಾಲಸ್ಯ ದುಹಿತಾ ಕಾಚಿತ್ ತ್ರಿಲೋಕೀಂ ವರಮಿಚ್ಛತೀ ।**
**ಪರ್ಯಟಂತೀ ನ ಬರ್ಹಿಷ್ಮನ್ ಪ್ರತ್ಯನಂದತ ಕಶ್ಚನ ॥೧೯॥**

ಕಾಲಸ್ಯ ದುಹಿತಾ ಕಾಚಿತ್=ಕಾಲನ ಮಗಳಾದವಳೊಬ್ಬಳು (ಜರಾವು) ವರಂ ಇಚ್ಛತೀ= ಪತಿಯನ್ನು ಅಪೇಕ್ಷಿಸಿ ತ್ರಿಲೋಕೀಂ=ಮೂರು ಲೋಕದಲ್ಲಿ ಪರ್ಯಟಂತೀ=ಸುತ್ತಾಡಿದಳು. ಬರ್ಹಿಷ್ಮನ್=ರಾಜನೇ ! ಕಶ್ಚನ=ಯಾರೂ ನ ಪ್ರತ್ಯನಂದತ=ಸ್ವೀಕರಿಸಲಿಲ್ಲ ॥೧೯॥

**ದೌರ್ಭಾಗ್ಯೇನಾತ್ಮನೋ ಲೋಕೇ ವಿಶ್ರುತಾ ದುರ್ಭಗೇತಿ ಸಾ ।**
**ಯಾಂ ತುಷ್ಟೋ ರಾಜಋಷಯೇ ಪಿತಾದಾತ್ ಪೂರವೇ ವರಮ್ ॥೨೦॥**

ಯಾ=ಯಾವಳು ಆತ್ಮನಃ=ದೇಹಕ್ಕೆ ದೌರ್ಭಾಗ್ಯೇನ=ಸೌಂದರ್ಯನಾಶಕಳಾದ್ದರಿಂದ ಲೋಕೇ=ಜಗತ್ತಿನಲ್ಲಿ ದುರ್ಭಗಾ ಇತಿ=ದುರ್ಭಾಗ್ಯಳೆಂದೇ ವಿಶ್ರುತಾ=ಪ್ರಸಿದ್ಧಳಾದವಳು ಯಾಂ=ಯಾವಳನ್ನು ಪಿತಾ=ಯಯಾತಿಯು ರಾಜಋಷಯೇ ಪೂರವೇ=ರಾಜಋಷಿಯಾದ ಪೂರುವಿಗೆ ಅದಾತ್=ಕೊಟ್ಟನೋ ಮತ್ತು ತುಷ್ಟಃ=ಸಂತುಷ್ಟನಾಗಿ ವರಂ ಅದಾತ್= ರಾಜಸಿಂಹಾಸನವನ್ನಿತ್ತನೋ ಸಾ=ಅವಳು ಜರಾ.

ಶರ್ಮಿಷ್ಠಾಸಂಗ ಮಾಡಿದ್ದರಿಂದ ಶುಕ್ರಾಚಾರ್ಯರ ಶಾಪದಿಂದ ಬಂದ ಮುಪ್ಪನ್ನು ಮಕ್ಕಳು ಹಿರಿಯರು ಸ್ವೀಕರಿಸದಿರುವಾಗ ಚಿಕ್ಕವನಾದ ಪುರುವು ಸ್ವೀಕರಿಸಿದನು. ಆಗ ಯಯಾತಿಯು ಸಂತುಷ್ಟನಾಗಿ ಅವನಿಗೆ ರಾಜ್ಯವನ್ನು ನೀಡಿದನೆಂದು ಕಥೆ ಇದೆ. ॥೨೦॥

**ಕದಾಚಿದಟಮಾನಾ ಸಾ ಬ್ರಹ್ಮಲೋಕಾನ್ಮಹೀಂ ಗತಮ್ ।**
**ವವ್ರೇ ಬೃಹದ್ವ್ರತಂ ಮಾಂ ತು ಜಾನಂತೀ ಕಾಮಮೋಹಿತಾ ॥೨೧॥**

ಅಟಮಾನಾ=ಸಂಚರಿಸುವ ಸಾ=ಅವಳು ಕಾಮಮೋಹಿತಾ=ಕಾಮಪೀಡಿತಳಾಗಿ ಬ್ರಹ್ಮಲೋಕಾತ್=ಸತ್ಯಲೋಕದಿಂದ ಮಹೀಂ ಗತಂ=ಭೂಮಿಗೆ ಬಂದ ಮಾಂ ತು=ನನ್ನನ್ನು ಬೃಹದ್ವ್ರತಂ=ಬ್ರಹ್ಮಚಾರಿಯೇ ಎಂದು ತಿಳಿದಿದ್ದರೂ ವವ್ರೇ=ಸ್ವೀಕರಿಸಿದಳು. ಅಪೇಕ್ಷಿಸಿದಳು.

**ಮಯಿ ಸಂರಭ್ಯ ವಿಪುಲಮದಾಚ್ಛಾಪಂ ಸುದುಃಸಹಮ್ ।**
**ಸ್ಥಾತುಮರ್ಹಸಿ ನೈಕತ್ರ ಮದ್ಯಾಂಚಾವಿಮುಖೋ ಮುನೇ ॥೨೨॥**

ರಾಜನೇ ! ನಾನು ಅವಳನ್ನು ನಿಕಾಕರಿಸಿದೆನು. ಆಗ ಮಯಿ ಸಂರಭ್ಯ=ನನ್ನಲ್ಲಿ ಕೋಪಗೊಂಡು, ಮುನೇ=ಮುನಿಯೇ ! ಮದ್ಯಾಂಚಾವಿಮುಖಃ=ನನ್ನ ಅಪೇಕ್ಷೆಯನ್ನು ಸ್ವೀಕರಿಸದ ನೀನು ಏಕತ್ರ ಸ್ಥಾತುಂ ನ ಅರ್ಹಸಿ=ಒಂದು ಸ್ಥಳದಲ್ಲಿ ನಿಲ್ಲಲಾರೆ ಎಂದು ಸುದುಃಸಹಂ=ಸಹಿಸಲಾಗದ ವಿಪುಲಂ ಶಾಪಂ ಅದಾತ್=ಭಾರಿ ಶಾಪವನ್ನಿತ್ತಳು. ॥೨೨॥

**ತತೋ ವಿಹತಸಂಕಲ್ಪಾ ಕನ್ಯಕಾ ಯವನೇಶ್ವರಮ್ ।**
**ಮಯೋಪದಿಷ್ಟಮಾಸಾದ್ಯ ವವ್ರೇ ನಾಮ್ನಾ ಭಯಂ ಪತಿಮ್ ॥೨೩॥**

ತತಃ=ನಂತರ ವಿಹತಸಂಕಲ್ಪಾ=ತನ್ನ ಇಚ್ಛೆ ಈಡೇರದ ಕನ್ಯಕಾ=ಆ ಕನ್ಯೆಯು ಮಯಾ=ನನ್ನಿಂದ ಉಪದಿಷ್ಟಂ=ತಿಳಿಸಲ್ಪಟ್ಟ ಯವನೇಶ್ವರಂ=ಆಧಿವ್ಯಾಧಿಗಳಿಗೆ ಒಡೆಯನಾದ ನಾಮ್ನಾ ಭಯಂ ಪತಿಂ=ಭಯನೆಂಬ ಪತಿಯನ್ನು ವವ್ರೇ=ಸ್ವೀಕರಿಸೆಂದು ಕೇಳಿದಳು. ॥೨೩॥

**ಋಷಭಂ ಯವನಾನಾಂ ತ್ವಾಂ ವೃಣೇ ವೀರೇಪ್ಸಿತಂ ಪತಿಮ್ ।**
**ಸಂಕಲ್ಪಸ್ತ್ವಯಿ ಭೂತಾನಾಂ ಕೃತಃ ಕಿಲ ನ ರಿಷ್ಯತಿ ॥೨೪॥**

ಹೇ ವೀರ=ಎಲೋ ವೀರನೇ ! ಈಪ್ಸಿತಂ=ನನಗಿಷ್ಟವಾದ ಯವನಾನಾಂ ಋಷಭಂ=ಆಧಿವ್ಯಾಧ್ಯಾದಿಗಳಿಗೆ ಒಡೆಯನಾದ ತ್ವಾಂ=ನಿನ್ನನ್ನು ಪತಿಂ ವೃಣೇ=ಗಂಡನನ್ನಾಗಿ ಸ್ವೀಕರಿಸುವೆನು. ತ್ವಯಿ=ನಿನ್ನಲ್ಲಿ ಭೂತಾನಾಂ ಕೃತಃ ಸಂಕಲ್ಪಃ ನ ರಿಷ್ಯತಿ=ಜನರು ಮಾಡಿದ ಇಚ್ಛೆಯು ನಾಶವಾಗುವುದಿಲ್ಲ. ॥೨೪॥

**ದ್ವಾವಿಮಾವನುಶೋಚಂತಿ ಬಾಲಾವಸದವಗ್ರಹೌ ।**
**ಯಲ್ಲೋಕಶಾಸ್ತ್ರೋಪನತಂ ನ ರಾತಿ ನ ತದಿಚ್ಛತಿ ॥೨೫॥**

ಯತ್=ಯಾವುದು ಲೋಕಶಾಸ್ತ್ರೋಪನತಂ=ಲೋಕರೀತಿಯಿಂದಲೂ ಶಾಸ್ತ್ರದೃಷ್ಟಿಯಿಂದಲೂ ಅನಿಷಿದ್ಧವಾಗಿ ಪ್ರಾಪ್ತವಾಗಿದೆಯೋ ತತ್=ಅದನ್ನು ಯಃ=ಯಾವನು ನ ರಾತಿ=ಬೇಡಿದರೆ ಕೊಡುವುದಿಲ್ಲವೋ ನ ಇಚ್ಛತಿ=ಕೊಟ್ಟದ್ದನ್ನು ಸ್ವೀಕರಿಸುವುದಿಲ್ಲವೋ ಇಮೌ ದ್ವೌ=ಇವರೀರ್ವರು ಬಾಲೌ=ಅಜ್ಞಾನಿಗಳು, ಅಸದವಗ್ರಹೌ=ದುರಾಗ್ರಹವುಳ್ಳವರು. ಸಂತಃ=ಸಜ್ಜನರು ಇವರನ್ನು ಅನುಶೋಚಂತಿ=ದುಃಖಿಸುವರು.

**ಭಾಗವತ ತಾತ್ಪರ್ಯ -**

ಈ ಶ್ಲೋಕದಲ್ಲಿ ಲೌಕಿಕವಾಗಿ, ಶಾಸ್ತ್ರದಿಂದಲೂ ಪ್ರಾಪ್ತವಾದದ್ದನ್ನು ಪರಿತ್ಯಾಗ ಮಾಡುವುದನ್ನು ನಿಂದಿಸಿರುವರು. ಆದರೆ ಅದು ಸರಿಯಲ್ಲ. ಶಾಸ್ತ್ರೀಯ ಕರ್ತವ್ಯಸಂರಕ್ಷಣೆಗಾಗಿ ಲೌಕಿಕಕರ್ತವ್ಯಪರಿತ್ಯಾಗವು ಅನಿಂದಿತವೇ ಆಗಿದೆ. ಆ ಕಾರಣ ವಿವಕ್ಷಿತವಾದ ತಾತ್ಪರ್ಯ ಹೇಳುವರು -

**''ಅಲೌಕಿಕಂ ಚ ಶಾಸ್ತ್ರೀಯಂ ಕರ್ತವ್ಯಂ ಲೌಕಿಕಂ ಕುತಃ ।**
**ಲೋಕಾರ್ಥಂ ಶಾಸ್ತ್ರಹಾ ಯಾತಿ ನಿರಯಂ ತ್ವಿತರಃ ಸುರಾನ್'' ಇತಿ ಪಾದ್ಮೇ ॥**

ಅಲೌಕಿಕವಾದರೂ (ಲೌಕಿಕಕಾರ್ಯವಲ್ಲದಿದ್ದರೂ) ಶಾಸ್ತ್ರೀಯವಾದ (ಶಾಸ್ತ್ರಸಿದ್ಧವಾದ) ಕಾರ್ಯವಾಗಿದ್ದರೆ ಅದನ್ನು ಮಾಡಲೇಬೇಕು. ಇನ್ನು ಲೌಕಿಕವೂ ಆಗಿ ಶಾಸ್ತ್ರಸಿದ್ಧವೂ ಆಗಿದ್ದರೆ ಮಾಡಬೇಕೆಂದು ಏನು ಹೇಳುವುದು ? ಸುತರಾಂ ಸಿದ್ಧವೆಂದು ಭಾವ.

ಲೌಕಿಕಕಾರ್ಯಕ್ಕಾಗಿ ಶಾಸ್ತ್ರದಲ್ಲಿ ಹೇಳಿದ್ದನ್ನು ಬಿಡುವವನು ನರಕಕ್ಕೆ ಹೋಗುವನು. ಶಾಸ್ತ್ರದಲ್ಲಿ ಹೇಳಿದ್ದನ್ನು ಸಂರಕ್ಷಿಸಲು ಲೌಕಿಕ ಬಿಡುವವನು ದೇವತೆಗಳನ್ನು (ದೇವಲೋಕವನ್ನು) ಹೊಂದುವನು ಎಂದು ಪಾದ್ಮಪುರಾಣದಲ್ಲಿದೆ.

ಅಂತೂ ಮೂಲದಲ್ಲಿ ಲೋಕಸಿದ್ಧ ಶಾಸ್ತ್ರಸಿದ್ಧ ಎರಡನ್ನೂ ಮಾಡದವನು, ಒಂದನ್ನೇ ಮಾಡುವುದಾದರೂ ಲೋಕಕ್ಕಾಗಿ ಶಾಸ್ತ್ರಪರಿತ್ಯಾಗ ಮಾಡುವವನು ನಿಂದ್ಯನೆಂದು ಭಾವ. ಹೊರತು ಶಾಸ್ತ್ರಕ್ಕಾಗಿ ಲೌಕಿಕ ಬಿಟ್ಟವನು ನಿಂದ್ಯನಲ್ಲ. ।।೨೫।।

**ಅಥೋ ಭಜಸ್ವ ಮಾಂ ಭದ್ರ ಭಜತೀಂ ಮೇ ದಯಾಂ ಕುರು ।**
**ಏತಾವಾನ್ ಪೌರುಷೋ ಧರ್ಮೋ ಯದಾರ್ತಾನನುಕಂಪತೇ ।।೨೬।।**

ಭದ್ರ=ಮಂಗಲಕರನೇ ! ಅಥೋ=ಶಾಸ್ತ್ರೀಯವಾದುದರಿಂದ ಭಜತೀಂ=ಸ್ವೀಕರಿಸಿದ ನನ್ನನ್ನು ಸ್ವೀಕರಿಸು. ಮೇ ದಯಾಂ ಕುರು=ನನ್ನಲ್ಲಿ ದಯೆ ಮಾಡು. ಯತ್ ಆರ್ತಾನ್ ಅನುಕಂಪತೇ=ದುಃಖಿತರ ಮೇಲೆ ದಯೆ ಮಾಡುವುದೇನಿದೆಯೋ ಅದು ಏತಾವಾನ್= ಇಷ್ಟೇ ಪೌರುಷೋ ಧರ್ಮಃ=ಪುರುಷನು ಮಾಡಬೇಕಾದ ಧರ್ಮವು. ।।೨೬।।

**ಕಾಲಕನ್ಯೋದಿತಾಂ ವಾಚಂ ನಿಶಮ್ಯ ಯವನೇಶ್ವರಃ ।**
**ಚಿಕೀರ್ಷುರ್ದೇವಗುಹ್ಯಂ ಸ ಸಸ್ಮಿತಂ ತಾಮಭಾಷತ ।।೨೭।।**

ಕಾಲಕನ್ಯೋದಿತಾಂ=ಕಾಲಕನ್ಯೆಯಾದ ಜರಾಭಿಮಾನಿಯು ಹೇಳಿದ ವಾಚಂ=ಮಾತನ್ನು ನಿಶಮ್ಯ=ಕೇಳಿ ಯವನೇಶ್ವರಃ=ಭಯನಾಮಕಮೃತ್ಯುವು ದೇವಗುಹ್ಯಂ=ದೇವತೆಗಳ

ರಹಸ್ಯವಾದ ಮರಣವನ್ನು ಚಿಕೀರ್ಷುಃ=ಮಾಡಲಿಚ್ಛಿಸಿ (ಪ್ರಾಣಿಗಳಿಗೆ ವೈರಾಗ್ಯ ಬರಲು ದೇವತೆಗಳು ಮರಣವನ್ನು ಗೌಪ್ಯವಾಗಿಡುವರು) ಅಥವಾ=ವಿಧಾತೃವಿನ ರಹಸ್ಯವನ್ನು (ಮುಂದೆ ಹೇಳುವುದನ್ನು) ಸಸ್ಮಿತಂ=ನಗುತ್ತ ತಾಂ ಅಭಾಕ್ಷತ=ಅವಳನ್ನು ಕುರಿತು ಹೇಳಿದನು.

**ಮಯಾ ನಿರೂಪಿತಸ್ತುಭ್ಯಂ ಪತಿರಾತ್ಮಸಮಾಧಿನಾ ।**
**ನಾಭಿನಂದತಿ ಲೋಕೋಽಯಂ ತ್ವಾಮಭದ್ರಾಮಸಮ್ಮತಾಮ್ ॥೨೮॥**

ಅಭದ್ರಾಂ=ಅಮಂಗಲಳಾದ ಅಸಂಮ್ಮತಾಂ=ಸಮ್ಮತಳಲ್ಲದ ತ್ವಾಂ=ನಿನ್ನನ್ನು ಅಯಂ ಲೋಕಃ=ಈ ಜನರು ನ ಅಭಿನಂದತಿ ಸ್ವೀಕರಿಸುವುದಿಲ್ಲ. ಕಾರಣ ಆತ್ಮಸಮಾಧಿನಾ=ಜ್ಞಾನದೃಷ್ಟಿಯಿಂದ ತುಭ್ಯಂ=ನಿನಗೆ ಮಯಾ=ನನ್ನಿಂದ ಪತಿಃ ನಿರೂಪಿತಃ=ಇಡೀ ಲೋಕವೇ ನಿನ್ನ ಪತಿಯೆಂದು ತಿಳಿಸಿರುವೆನು. ॥೨೮॥

***ತ್ವಮಜ್ಞಾತಗತಿರ್ಭುಂಕ್ಷ್ವ ಲೋಕಂ ಕರ್ಮವಿನಿರ್ಮಿತಮ್ ।**
**ಯಾಹಿ ಮೇ ಪೃತನಾಯುಕ್ತಾ ಪ್ರಜ್ವರಸ್ತ್ವಾಂ ಪ್ರಣೇಷ್ಯತಿ ॥೨೯॥**

*ತ್ವಮಜ್ಞಾತಮತಿಃ ಎಂದು ಪಾಠಾಂತರ.

ತ್ವಂ=ನೀನು ಅಜ್ಞಾತಗತಿಃ=ಎಲ್ಲಿಂದ ಬಂದಳು ಎಂದು ತಿಳಿಯದಂತೆ ಲೋಕಂ ಭುಂಕ್ಷ್ವ=ಸಮಸ್ತಲೋಕವನ್ನೇ ಅನುಭವಿಸು. ಎಲ್ಲ ಲೋಕವು ನಿನಗೆ ಭೋಗ್ಯವಾಗುವುದು. ಕರ್ಮವಿನಿರ್ಮಿತಂ=ಪೂರ್ವಕರ್ಮದಿಂದ ಬಂದ ಎಲ್ಲ ಶರೀರವನ್ನು ವ್ಯಾಪಿಸು ಎಂದರ್ಥ.

ನಿನಗೇನು ಮಾಡುವರೆಂಬ ಭಯ ಬೇಡ. ಕಾರಣ - ಮೇ=ನನ್ನ ಪೃತನಾಯುಕ್ತಾ ಯಾಹಿ=ನನ್ನ ಸೈನ್ಯವನ್ನು ತೆಗೆದುಕೊಂಡು ಹೋಗು. ಆದರೂ ಗಂಡ ಬೇಕಲ್ಲ ಎಂದರೆ, ಪ್ರಜ್ವರಃ ತ್ವಾಂ ಪ್ರಣೇಷ್ಯತಿ=ಮಾರಕವಾದ ವೈಷ್ಣವಜ್ವರವು ನಿನ್ನನ್ನು ಮದುವೆಯಾಗುವನು.

**ಪ್ರಜ್ವರೋಽಯಂ ಮಮ ಭ್ರಾತಾ ತ್ವಂ ಚ ಮೇ ಭಗಿನೀ ಭವ ।**
**ಚರಾಮ್ಯುಭಾಭ್ಯಾಂ ಲೋಕೇಽಸ್ಮಿನ್ನವ್ಯಕ್ತೋ ಭೀಮಸೈನಿಕಃ ॥೩೦॥**

॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ ಸಪ್ತವಿಂಶೋಽಧ್ಯಾಯಃ ॥

ಅಯಂ ಪ್ರಜ್ವರಃ=ಈ ಪ್ರಜ್ವರನು ಮಮ ಭ್ರಾತಾ=ನನ್ನ ತಮ್ಮನು. ತ್ವಂ ಚ=ನೀನಾದರೂ ಮೇ ಭಗಿನೀ ಭವ=ನನ್ನ ತಂಗಿಯಾಗು. ಭೀಮಸೈನಿಕಃ=ಭಯಂಕರ ಸೇನಾಪತಿಗಳುಳ್ಳ ನಾನು ಉಭಾಭ್ಯಾಂ=ನಿಮ್ಮಿಬ್ಬರೊಡನೆ ಅಸ್ಮಿನ್ ಲೋಕೇ=ಈ ಪ್ರಪಂಚದಲ್ಲಿ ಅವ್ಯಕ್ತಃ=ಯಾರಿಗೂ ತಿಳಿಯದೇ ಚರಾಮಿ=ಸಂಚರಿಸುವೆನು. ॥೩೦॥

॥ ಇಲ್ಲಿಗೆ ಇಪ್ಪತ್ತೇಳನೇ ಅಧ್ಯಾಯವು ಮುಗಿಯಿತು ॥

## ಅಥ ಅಷ್ಟಾವಿಂಶೋಽಧ್ಯಾಯಃ

ಈಗ ಪುರಂಜನನು ಪುರುಷದೇಹತ್ಯಾಗ ಮಾಡುವ ರೀತಿಯನ್ನು ಹೇಳುತ್ತ ಸ್ತ್ರೀಜನ್ಮ ಪಡೆದ ರೀತಿಯನ್ನು ಹೇಳುವರು -

**ನಾರದ ಉವಾಚ -**

**ಸೈನಿಕಾ ಭಯನಾಮ್ನೋ ಯೇ ಬರ್ಹಿಷ್ಮನ್ ದಿಷ್ಟಕಾರಿಣಃ ।**
**ಪ್ರಜ್ವಾರಕಾಲಕನ್ಯಾಭ್ಯಾಂ ವಿಚೇರುರವನೀಮಿಮಾಮ್ ॥೧॥**

ಹೇ ಬರ್ಹಿಷ್ಮನ್=ಪ್ರಾಚೀನಬರ್ಹಿಯೇ ! ಯೇ=ಯಾರು ಭಯನಾಮ್ನಃ=ಭಯನೆಂಬ ಮೃತ್ಯುವಿನ ದಿಷ್ಟಕಾರಿಣಃ=ಆಜ್ಞಾಪಾಲಕರಾದ ಸೈನಿಕಾಃ=ವಾತ ಮುಂತಾದ ವ್ಯಾಧಿಗಳೆಂಬ ಸೈನಿಕರು ಪ್ರಜ್ವಾರಕಾಲಕನ್ಯಾಭ್ಯಾಂ=ಜ್ವರ ಮತ್ತು ಮುಪ್ಪುಗಳಿಂದ ಸಹಿತರಾಗಿ ಇಮಾಂ ಅವನೀಂ ವಿಚೇರುಃ=ಈ ಭೂಮಿಯಲ್ಲಿ ಸಂಚರಿಸಿದರು. ॥೧॥

**ತ ಏಕದಾ ತು ರಭಸಾ ಪುರಂಜನಪುರೀಂ ನೃಪ ।**
**ರುರುಧುರ್ಭೌಮಭೋಗಾಢ್ಯಾಂ ಜರತ್ಪನ್ನಗಪಾಲಿತಾಮ್ ॥೨॥**

ಹೇ ನೃಪ=ರಾಜನೇ ! ಏಕದಾ=ಒಂದು ಸಲ (ದೇಹಾರಂಭಕಪ್ರಾರಬ್ಧ ಮುಗಿದಾಗ) ತೇ=ಸೈನಿಕರು ಜರತ್ಪನ್ನಗಪಾಲಿತಾಂ=ಜೀರ್ಣನಾದ ಪ್ರಾಣನಿಂದ ರಕ್ಷಿತವಾದ (ಅಂದರೆ ಪ್ರಾಣಬಲದಿಂದ ಅಲ್ಪಚೇಷ್ಟೆಯುಳ್ಳ ಎಂದರ್ಥ ಹೊರತು ಪ್ರಾಣನೇ ಜೀರ್ಣನಲ್ಲ ಅವನ ಬಲ ನಿಸ್ಸೀಮವಾದುದು.) ಭೌಮಭೋಗಾಢ್ಯಾಂ=ಭೂಮಿಯಲ್ಲಿರುವ ಅಶನ-ವಸನ-ಪಾನ ಮುಂತಾದ ಭೋಗಗಳಿಂದ ಕೂಡಿದ ಪುರಂಜನಪುರೀಂ=ಪುರಂಜನನ ಪಟ್ಟಣವನ್ನು ರಭಸಾ=ವೇಗದಿಂದ ರುರುಧುಃ=ಮುತ್ತಿಗೆ ಹಾಕಿದರು. (ವ್ಯಾಧಿಗಳು ಉಂಟಾದವು ಎಂದರ್ಥ.) ॥೨॥

**ಕಾಲಕನ್ಯಾಽಪಿ ಬುಭುಜೇ ಪುರಂಜನಪುರೀಂ ಬಲಾತ್ ।**
**ಯಯಾಽಭಿಭೂತಃ ಪುರುಷಃ ಸದ್ಯೋ ನಿಸ್ಸಾರತಾಮಿಯಾತ್ ॥೩॥**

ಕಾಲಕನ್ಯಾ ಅಪಿ=ಕಾಲಕನ್ಯೆಯೂ ಸಹ (ಮುಪ್ಪು-ಜರಾ) ಬಲಾತ್=ಬಲಾತ್ಕಾರದಿಂದ ಪುರಂಜನಪುರೀಂ=ಪುರಂಜನನ ಪಟ್ಟಣವನ್ನು (ದೇಹವನ್ನು) ಬುಭುಜೇ=ಪ್ರವೇಶಿಸಿದಳು. ಯಯಾ ಅಭಿಭೂತಃ=ಯಾವ ಮುಪ್ಪಿನಿಂದ ಆವರಿಸಲ್ಪಟ್ಟ ಪುರುಷಃ=ಮನುಷ್ಯನು ಸದ್ಯಃ=ತಕ್ಷಣವೇ ನಿಸ್ಸಾರತಾಂ ಇಯಾತ್=ಬಲಹೀನತೆ ಪಡೆಯುವನು. ॥೩॥

**ತಯೋಪಭುಜ್ಯಮಾನಾಂ ವೈ ಯವನಾಃ ಸರ್ವತೋ ದಿಶಮ್ ।**
**ದ್ವಾರ್ಭಿಃ ಪ್ರವಿಶ್ಯ ಸುಭೃಶಂ ಪ್ರಾರ್ದಯನ್ ಸಕಲಾಂ ಪುರೀಮ್ ॥೪॥**

ತಯಾ=ಜರೆಯಿಂದ ಉಪಭುಜ್ಯಮಾನಾಂ=ಸೇವಿಸಲ್ಪಟ್ಟ ಸಕಲಾಂ ಪುರೀಂ=ಎಲ್ಲ ಪುರಂಜನಪುರಿಯನ್ನು (ದೇಹವನ್ನು) ಯವನಾಃ=ಯವನರು ಸರ್ವತೋ ದಿಶಂ=ಎಲ್ಲ ದಿಕ್ಕುಗಳಿಂದಲೂ ದ್ವಾರ್ಭಿಃ=ನವದ್ವಾರಗಳಿಂದ ಚಕ್ಷುರಾದಿ ಇಂದ್ರಿಯಗಳಲ್ಲಿ ಪ್ರವಿಶ್ಯ=ರೋಗರೂಪದಿಂದ ಪ್ರವೇಶ ಮಾಡಿ ಸುಭೃಶಂ ಪ್ರಾರ್ದಯನ್=ಅತಿಯಾಗಿ ಪೀಡಿಸಿದರು.

ಮುಪ್ಪು ಬಂದವನಿಗೆ ಕಣ್ಣು ಮಂದ ಆಗುವವು, ಕಿವಿ ಕೇಳಿಸವು, ಹಲ್ಲು ಬೀಳುವವು, ಅಗ್ನಿ ಮಂದವಾಗುವುದು, ಗಂಟಲು ಘರುಘರು ಮಾಡುವುದು ಮುಂತಾದ ಅನೇಕ ರೋಗಗಳಿಂದ ಪ್ರವೇಶ ಮಾಡಿ ಪೀಡಿಸಿದರು ಎಂದರ್ಥ. ॥೪॥

**ತಸ್ಯಾಂ ಪ್ರಪೀಡ್ಯಮಾನಾಯಾಮಭಿಮಾನೀ ಪುರಂಜನಃ ।**
**ಅವಾಪೋರುವಿಧಾಂಸ್ತಾಪಾನ್ ಕುಟುಂಬೀ ಮಮತಾಕುಲಃ ॥೫॥**

ತಸ್ಯಾಂ=ಆ ಪುರಂಜನಪುರಿಯು (ದೇಹವು) ಪ್ರಪೀಡ್ಯಮಾನಾಯಾಂ ಸತ್ಯಾಂ= ಅತಿಯಾಗಿ ಪೀಡೆಗೊಳಗಾಗುತ್ತಿರಲು ಅಭಿಮಾನೀ=ನನ್ನದು ಈ ಪುರ (ದೇಹ) ಎಂದು ಅಭಿಮಾನವುಳ್ಳ ಪುರಂಜನಃ=ರಾಜನು (ಜೀವನು) ಕುಟುಂಬೀ=ಕುಟುಂಬಸಹಿತನಾಗಿ ಮಮತಾಕುಲಃ=ದೇಹೇಂದ್ರಿಯಾದಿಗಳಲ್ಲಿ ನನ್ನವೆಂಬ ಮಮತೆಯಿಂದ ಆಕ್ಷಿಪ್ತವಾದ ಮನಸ್ಸುಳ್ಳವನಾಗಿ ಉರುವಿಧಾನ್ ತಾಪಾನ್ ಅವಾಪ=ಬಹುರೀತಿಯ ಸಂತಾಪಗಳನ್ನು ಹೊಂದಿದನು. ॥೫॥

**ಕನ್ಯೋಪಗೂಢೋ ನಷ್ಟಶ್ರೀಃ ಕೃಪಣೋ ವಿಷಯಾತ್ಮಕಃ ।**
**ನಷ್ಟಪ್ರಜ್ಞೋ ಹತೈಶ್ವರ್ಯೋ ಗಂಧರ್ವಯವನೈರ್ಬಲಾತ್ ॥೬॥**

ಕನ್ಯೋಪಗೂಢಃ=ಪ್ರಮದೆಯಿಂದ (ಬುದ್ಧಿ) ಆಲಿಂಗಿತನಾಗಿ ನಷ್ಟಶ್ರೀಃ=ಜ್ಞಾನವನ್ನು ಕಳೆದುಕೊಂಡು ಕೃಪಣಃ=ದೀನನಾದ ವಿಷಯಾತ್ಮಕಃ=ವಿಷಯಗಳಲ್ಲೇ ಮನಸ್ಸಿಟ್ಟ ನಷ್ಟಪ್ರಜ್ಞಃ=ವಿವೇಕ ಕಳೆದುಕೊಂಡ ಗಂಧರ್ವಯವನೈಃ=ಗಂಧರ್ವರು ಯವನರಿಂದ ಬಲಾತ್=ಬಲಾತ್ಕಾರವಾಗಿ ಹೃತೈಶ್ವರ್ಯಃ=ಐಶ್ವರ್ಯವನ್ನು ಅಪಹರಿಸಲ್ಪಟ್ಟವನಾಗಿ, (ಅದಕ್ಕೆ ಪ್ರತಿಕಾರ ಅರಿಯದಾದನು ಎಂದು ಮುಂದೆ ಅನ್ವಯ.)॥೬॥

**ವಿಶೀರ್ಣಾಂ ಸ್ವಪುರೀಂ ವೀಕ್ಷ್ಯ ಪ್ರತಿಕೂಲಾನನಾದೃತಾನ್ ।**
**ಪುತ್ರಪೌತ್ರಾನುಗಾಮಾತ್ಯಾನ್ ಜಾಯಾಂ ಚ ಗತಸೌಹೃದಾಮ್ ॥೭॥**

ವಿಶೀರ್ಣಾಂ=ಶಿಥಿಲವಾದ ಸ್ವಪುರೀಂ=ತನ್ನ ಪುರವನ್ನು (ದೇಹವನ್ನು) ವೀಕ್ಷ್ಯ=ನೋಡಿ ಪ್ರತಿಕೂಲಾನ್=ವಿರುದ್ಧವಾದ ಅನಾದೃತಾನ್=ಆದರವಿಲ್ಲದ ಪುತ್ರಪೌತ್ರಾನುಗಾಮಾತ್ಯಾನ್=ಮಕ್ಕಳು ಮೊಮ್ಮಕ್ಕಳು ಭೃತ್ಯರು ಮಂತ್ರಿಗಳನ್ನು, ಗತಸೌಹೃದಾಂ=ಸ್ನೇಹವಿಲ್ಲದ ಜಾಯಾಂ ಚ=ಪತ್ನಿಯನ್ನೂ ವೀಕ್ಷ್ಯ=ನೋಡಿ (ಗೋಲಕಗಳು ಮಕ್ಕಳು, ಇಂದ್ರಿಯಗಳು ಮೊಮ್ಮಕ್ಕಳು, ಇಂದ್ರಿಯಾಭಿಮಾನಿಗಳು ಅಮಾತ್ಯರು ಎಲ್ಲರೂ ಸರಿಯಾಗಿ ಕೆಲಸ ಮಾಡಲಾರರು. ಬುದ್ಧಿಯು ಹೆಂಡತಿ ಅದು ಮೊದಲಿನಂತೆ ಸ್ವಾಧೀನವಿಲ್ಲವೆಂದು ಭಾವ) (ವಿವೇಕಜ್ಞಾನ ಪುತ್ರ, ಧೈರ್ಯಾದಿಗಳು ಪೌತ್ರ, ಇಂದ್ರಿಯಗಳು ಅನುಗರು, ಅಭಿಮಾನಿಗಳು ಅಮಾತ್ಯರು, ಬುದ್ಧಿಯು ಜಾಯಾ ನಿಶ್ಚಯಾತ್ಮಕವಾಗಿಲ್ಲ) ಅನ್ವಯ ಮುಂದುವರೆಯುವುದು .....

**ಆತ್ಮಾನಂ ಕನ್ಯಯಾ ಗ್ರಸ್ತಂ ಪಾಂಚಾಲಾನರಿದೂಷಿತಾನ್ ।**
**ದುರಂತಚಿಂತಾಮಾಪನ್ನೋ ನ ಲೇಭೇ ತತ್ಪ್ರತಿಕ್ರಿಯಾಮ್ ॥೮॥**

ಆತ್ಮಾನಂ=ತನ್ನನ್ನು ಕನ್ಯಯಾ ಗ್ರಸ್ತಂ=ಜರೆಯಿಂದ ಆವರಿಸಿದವನನ್ನಾಗಿ ಪಾಂಚಾಲಾನ್=ವಿಷಯಗಳನ್ನು ಅರಿದೂಷಿತಾನ್=ವಿಘ್ನಗಳಿಂದ ತಡೆಯಲ್ಪಟ್ಟವುಗಳನ್ನೂ ವೀಕ್ಷ್ಯ=ನೋಡಿ ದುರಂತಚಿಂತಾಂ ಆಪನ್ನಃ=ಕೊನೆಯಿಲ್ಲದ ಚಿಂತೆಗೊಳಗಾದವನಾಗಿ ತತ್ಪ್ರತಿಕ್ರಿಯಾಂ=ಅದಕ್ಕೆ ಪ್ರತೀಕಾರವನ್ನು (ಪರಿಹಾರೋಪಾಯವನ್ನು) ನ ಲೇಭೇ=ಹೊಂದಲಿಲ್ಲ, ಮಂತ್ರ-ಔಷಧಿಗಳಿಂದ ಪರಿಹಾರವಾಗಲಿಲ್ಲವೆಂದು ಭಾವ. ॥೮॥

**ಕಾಮಾನಭಿಲಷನ್ ದೀನೋ ಯಾತಯಾಮಾಂಶ್ಚ ಕನ್ಯಯಾ ।**
***ಮತಾತ್ಮಸಂವಿನ್ನಿಸ್ನೇಹಃ ಪುತ್ರದಾರಾಂಶ್ಚ ಲಾಲಯನ್ ॥೯॥**

*ವಿಗತಾತ್ಮಗತಿಸ್ನೇಹಃ ಎಂದು ಯಾದವಾರ್ಯರ ಪಾಠ.

ಕನ್ಯಯಾ=ಕಾಲಕನ್ಯೆಯಿಂದಾಗಿ ವೃದ್ಧಾಪ್ಯನಿಮಿತ್ತವಾಗಿ ದೀನಃ=ದುಃಖಿತನಾಗಿ ಯಾತಯಾಮಾನ್=ರಸವಿಲ್ಲದ ಶ್ರೇಷ್ಠವಲ್ಲದ ಕಾಮಾನ್ ಅಭಿಲಷನ್=ವಿಷಯಗಳನ್ನು ಅಪೇಕ್ಷಿಸುತ್ತ ವಿಗತಾತ್ಮಗತಿಸ್ನೇಹಃ=ಪರಮಾತ್ಮನ ಜ್ಞಾನವಿಲ್ಲದೇ ಭಕ್ತಿಯೂ ಇಲ್ಲದೇ ಪುತ್ರದಾರಾಂಶ್ಚ ಲಾಲಯನ್=ಮಕ್ಕಳು ಮಡದಿಯನ್ನು ಪೋಷಿಸುತ್ತ,॥೯॥

**ಗಂಧರ್ವಯವನಾಕ್ರಾಂತಾಂ ಕಾಲಕನ್ಯೋಪಮರ್ದಿತಾಮ್ ।**
**ಹಾತುಂ ಪ್ರಚಕ್ರಮೇ ರಾಜಾ ತಾಂ ಪುರೀಮನಿಕಾಮತಃ ॥೧೦॥**

ರಾಜಾ=ಪುರಂಜನನು (ಜೀವನು) ಗಂಧರ್ವಯವನಾಕ್ರಾಂತಾಂ=ಹಗಲು ರಾತ್ರಿಗಳಿಂದ ಆಧಿವ್ಯಾಧಿಗಳಿಂದಲೂ ಆಕ್ರಮಿಸಲ್ಪಟ್ಟ ಕಾಲಕನ್ಯೋಪಮರ್ದಿತಾಂ= ಮುಪ್ಪಿನಿಂದ ಪೀಡಿತವಾದ ತಾಂ ಪುರೀಂ=ಆ ಪುರವನ್ನು (ದೇಹವನ್ನು) ಅನಿಕಾಮತಃ= ಇಚ್ಛೆಯಿಲ್ಲದಿದ್ದರೂ ಹಾತುಂ ಪ್ರಚಕ್ರಮೇ=ಬಿಡಲಾರಂಭಿಸಿದನು. ॥೧೦॥

**ಭಯನಾಮ್ನೋಽಗ್ರಜೋ ಭ್ರಾತಾ ಪ್ರಜ್ವಾರಃ ಪ್ರತ್ಯುಪಸ್ಥಿತಃ ।**
**ದದಾಹ ತಾಂ ಪುರೀಂ ಕೃತ್ಸ್ನಾಂ ಭ್ರಾತುಃ ಪ್ರಿಯಚಿಕೀರ್ಷಯಾ ॥೧೧॥**

ಭಯನಾಮ್ನಃ=ಮೃತ್ಯುವಿನ ಅಗ್ರಜಃ=ಅಣ್ಣನಾದ ಪ್ರಜ್ವಾರಃ=ಜ್ವರವು ಪ್ರತ್ಯುಪಸ್ಥಿತಃ= ಪುರಂಜನಪುರಿಗೆ ಬಂದಿತು. (ಬಂದನು.) ಭ್ರಾತುಃ=ಭಯನಾಮಕಮೃತ್ಯುವಿಗೆ ಪ್ರಿಯಚಿಕೀರ್ಷಯಾ ಹಿತ ಮಾಡಲು ತಾಂ ಕೃತ್ಸ್ನಾಂ ಪುರೀಂ ದದಾಹ=ಆ ಎಲ್ಲ ಪಟ್ಟಣವನ್ನು ಸುಟ್ಟನು. ಜ್ವರವು ಶರೀರ ಪ್ರವೇಶಿಸಿ ಕಾಯಿಸಿತು ಎಂದರ್ಥ. ॥೧೧॥

**ತಸ್ಯಾಂ ಸಂದಹ್ಯಮಾನಾಯಾಂ ಸಪೌರಃ ಸಪರಿಚ್ಛದಃ ।**
**ಕೌಟುಂಬಿಕಃ ಕುಟುಂಬಿನ್ಯಾ ಉಪಾತಪ್ಯತ ಸಾನ್ವಯಃ ॥೧೨॥**

ತಸ್ಯಾಂ=ಆ ಪುರಿಯು ಸಂದಹ್ಯಮಾನಾಯಾಂ=ಸುಡಲ್ಪಡುತ್ತಿರಲು ಸಪೌರಃ= ಪಟ್ಟಣಿಗರಿಂದ ಸಹಿತನಾಗಿ ಸಪರಿಚ್ಛದಃ=ಭೃತ್ಯವರ್ಗಸಹಿತನಾಗಿ ಕೌಟುಂಬಿಕಃ= ಕುಟುಂಬದೊಡನೆ ಕ್ರೀಡಿಸುವ ಸಾನ್ವಯಃ=ಮಕ್ಕಳಿಂದ ಸಹಿತನಾಗಿ ಕುಟುಂಬಿನ್ಯಾ= ಹೆಂಡತಿಯೊಡನೆ ಉಪಾತಪ್ಯತ=ಸಂತಾಪಗೊಂಡನು. ॥೧೨॥

**ಯವನೋಪರುದ್ಧಾಯತನೋ ಗ್ರಸ್ತಾಯಾಂ ಕಾಲಕನ್ಯಯಾ ।**
**ಪುರ್ಯಾಂ ಪ್ರಜ್ವಾರಸಂಸೃಷ್ಟಃ ಪುರಪಾಲೋಽನ್ವತಪ್ಯತ ॥೧೩॥**

ಪುರ್ಯಾಂ=ದೇಹವು ಕಾಲಕನ್ಯಯಾ ಗ್ರಸ್ತಾಯಾಂ=ಮುಪ್ಪಿನಿಂದ ಆವರಿಸಲ್ಪಡುತ್ತಿರಲು ಪುರಪಾಲಃ=ಪುರಂಜನನು ಪ್ರಜ್ವಾರಸಂಸೃಷ್ಟಃ=ಜ್ವರದಿಂದ ಕೂಡಿದವನಾಗಿ

ಯವನೋಪರುದ್ಧಾಯತನಃ=ಯವನರಿಂದ ತಡೆಯಲ್ಪಟ್ಟ ಮನೆಗಳುಳ್ಳವನಾಗಿ ಅನ್ವತಪ್ಯತ=ಪರಿತಪಿಸಿದನು.

ಇಲ್ಲಿ ಅನುತಾಪ ಒಬ್ಬನಿಗೆ ಮಾತ್ರ. ಹಿಂದೆ ಕುಟುಂಬಸಹಿತನಾದವನಿಗೆ ಹೇಳಿದ್ದು. ಆದ್ದರಿಂದ ಪುನರುಕ್ತಿಯಿಲ್ಲ ಎಂದು ತಿಳಯಬೇಕು. ।।೧೩।।

**ನ ಶೇಕೇ ಸೇವಿತುಂ ತತ್ರ ಪುರುಕೃಚ್ಛ್ರೋರುವೇಪಥುಃ ।**
**ಗಂತುಮೈಚ್ಛತ್ ತತೋ ವೃಕ್ಷಕೋಟರಾದಿವ ಸಾನಲಾತ್ ।।೧೪।।**

ಪುರುಕೃಚ್ಛ್ರೋರುವೇಪಥುಃ=ಬಹಳ ಕಷ್ಟಗಳಿಂದ ಬಹುನಡಕವುಳ್ಳವನಾಗಿ ತತ್ರ=ಅಲ್ಲಿ ಸೇವಿತುಂ ನ ಶೇಕೇ=ಇರಲು ಸಮರ್ಥನಾಗಲಿಲ್ಲ. ಸಾನಲಾತ್=ಬೆಂಕಿಬಿದ್ದ ವೃಕ್ಷಕೋಟರಾತ್ ಸರ್ಪ ಇವ=ಗಿಡದ ಬಿಲದಿಂದ ಹಾವು ಹೊರ ಹೊರಡುವಂತೆ ತತಃ=ದೇಹದಿಂದ (ಪುರದಿಂದ) ಗಂತುಂ ಇಚ್ಛತ=ಹೊರಡಲು ಇಚ್ಛಿಸಿದನು. ।।೧೪।।

**ಶಿಥಿಲಾವಯವೋ ಯರ್ಹಿ ಗಂಧರ್ವೈರ್ಹೃತಪೌರುಷಃ ।**
**ಯವನೈರರಿಭೀ ರಾಜನ್ನುಪರುದ್ಧೋ ರುರೋದ ಹ ।।೧೫।।**

ಯರ್ಹಿ=ಯಾವಾಗ ಗಂಧರ್ವೈಃ=ಹಗಲು ರಾತ್ರಿಗಳಿಂದ ಹೃತಪೌರುಷಃ=ಸಾಮರ್ಥ್ಯ ಕಳೆದುಕೊಂಡವನಾಗಿ ಶಿಥಿಲಾವಯವಃ=ಜೀರ್ಣವಾದ ಅಂಗಾಂಗಗಳುಳ್ಳವನಾಗಿ ಅರಿಭಿಃ=ಶತ್ರುಗಳಾದ ಯವನೈಃ=ರೋಗಾದಿಗಳಿಂದ ಉಪರುದ್ಧಃ=ಪೀಡಿತನಾದನೋ ಆಗ ರುರೋದ=ಅತ್ತನು. ದುಃಖಪಟ್ಟನು. ।।೧೫।।

**ದುಹಿತೄಃ ಪುತ್ರಪೌತ್ರಾಂಶ್ಚ ಜಾಮಿಜಾಮಾತೃಪಾರ್ಷದಾನ್ ।**
**ಸ್ಮೃತ್ವಾವಶಿಷ್ಟಂ ಯತ್ಕಿಂಚಿದ್ ಗೃಹಕೋಶಪರಿಚ್ಛದಮ್ ।।೧೬।।**

**ಅಹಂ ಮಮೇತಿ ಸ್ವೀಕೃತ್ಯ ಗೃಹೇಷು ಕುಮತಿರ್ಗೃಹೀ ।**
**ದಧ್ಯೌ ಪ್ರಮದಯಾ ದೀನೋ ವಿಪ್ರಯೋಗ ಉಪಸ್ಥಿತೇ ।।೧೭।।**

ವಿಪ್ರಯೋಗೇ ಉಪಸ್ಥಿತೇ=ಮರಣವು ಸಮೀಪಿಸಿದಾಗ ಅವಶಿಷ್ಟಂ=ಉಳಿದಿರುವ ಯತ್ಕಿಂಚಿತ್=ಕೆಲವು ಗೃಹಕೋಶಪರಿಚ್ಛದಂ=ಮನೆ ಹಣ ಉಪಕರಣಗಳನ್ನು ಸ್ಮೃತ್ವಾ=ನೆನಿಸುತ್ತ ಗೃಹೇಷು=ಹೆಂಡತಿಯಲ್ಲಿ ಕುಮತಿಃ=ಆಸಕ್ತಬುದ್ಧಿಯುಳ್ಳ ಗೃಹೀ=ಪುರಂಜನನು ಅಹಂ ಮಮ ಇತಿ ಸ್ವೀಕೃತ್ಯ=ನಾನು ನನ್ನವರು ಎಂದು ತಿಳಿದು ದುಹಿತೄಃ=ಹೆಣ್ಣುಮಕ್ಕಳನ್ನು ಪುತ್ರಪೌತ್ರಾನ್=ಮಕ್ಕಳು ಮೊಮ್ಮಕ್ಕಳನ್ನು ಜಾಮಿಜಾಮಾತೃಪಾರ್ಷದಾನ್=ಸೊಸೆ ಅಳಿಯ ಭೃತ್ಯರನ್ನು ದಧ್ಯೌ=ಧ್ಯಾನಿಸಿದನು. ।।೧೬,೧೭।।

ಚಿಂತೆಯನ್ನೇ ವಿವರಿಸುವರು -

**ಲೋಕಾಂತರಂ ಗತವತಿ ಮಯ್ಯನಾಥಾ ಕುಟುಂಬಿನೀ ।**
**ವರ್ತಿಷ್ಯತೇ ಕಥಂ ತ್ವೇಷಾ ಬಾಲಕಾನನುಶೋಚತೀ ॥೧೮॥**

ಮಯಿ=ನಾನು ಲೋಕಾಂತರಂ ಗತವತಿ=ಬೇರೆ ಲೋಕಕ್ಕೆ ಹೋಗುತ್ತಿರಲು ಅನಾಥಾ= ರಕ್ಷಕರಹಿತಳಾದ ಕುಟುಂಬಿನೀ ಏಷಾ=ಈ ಹೆಂಡತಿಯು ಬಾಲಕಾನ್=ಮಕ್ಕಳನ್ನು ಅನುಶೋಚತೀ=ಚಿಂತಿಸುತ್ತ ಕಥಂ ವರ್ತಿಷ್ಯತೇ=ಹೇಗೆ ಇರುವಳು ?॥೧೮॥

**ನ ಮಯ್ಯನಶಿತೇ ಭುಂಕ್ತೇ ನಾಸ್ನಾತೇ ಸ್ನಾತಿ ಮತ್ಪರಾ ।**
**ಮಯಿ ತುಷ್ಟೇ ಸುಸಂತುಷ್ಟಾ ಭರ್ತ್ಸಿತೇ ಯತವಾಗ್ ಭಯಾತ್ ॥೧೯॥**

ಮತ್ಪರಾ=ನನ್ನಲ್ಲಿ ಆಸಕ್ತಳಾದ ಇವಳು ಮಯಿ=ನಾನು ಅನಶಿತೇ=ಉಣ್ಣದಿದ್ದರೆ ನ ಭುಂಕ್ತೇ=ಉಣ್ಣಲಾರಳು, ಅಸ್ನಾತೇ ನ ಸ್ನಾತಿ=ಸ್ನಾನ ಮಾಡದಿದ್ದರೆ ಸ್ನಾನ ಮಾಡಳು, ಮಯಿ ತುಷ್ಟೇ=ನಾನು ಸಂತೋಷದಿಂದ ಇದ್ದರೆ ಸುಸಂತುಷ್ಟಾ=ಅವಳೂ ಬಹಳ ಸಂತೋಷಿಸುವಳು, ಭರ್ತ್ಸಿತೇ=ಬೈದರೆ ಭಯಾತ್=ಭಯದಿಂದ ಯತವಾಗ್ ಭವತಿ=ಸುಮ್ಮನಿರುವಳು. ॥೧೯॥

**ಪ್ರಬೋಧಯತಿ ಮಾಽವಿಜ್ಞಂ ವ್ಯುಷಿತೇ ಶೋಕಕರ್ಷಿತಾ ।**
**ವರ್ತ್ಮೈತದ್ ಗೃಹಮೇಧೀಯಂ ವೀರಸೂರಪಿ ನೇಷ್ಯತಿ ॥೨೦॥**

ಅವಿಜ್ಞಂ=ಅವಿವೇಕಿಯಾದ ಮಾ=ನನ್ನನ್ನು ಪ್ರಬೋಧಯತಿ=ಎಚ್ಚರಿಸುವಳು. ವ್ಯುಷಿತೇ=ನಾನು ದೇಶಾಂತರಕ್ಕೆ ಹೋದರೆ ಶೋಕಕರ್ಷಿತಾ=ದುಃಖಪೀಡಿತಳಾಗಿ ವೀರಸೂಃ ಅಪಿ=ಪುತ್ರವತಿಯಾಗಿದ್ದರೂ ಏತತ್ ಗೃಹಮೇಧೀಯಂ ವರ್ತ್ಮ ನೇಷ್ಯತಿ=ಗೃಹಧರ್ಮವನ್ನು ಅನುವರ್ತಿಸುವುದಿಲ್ಲ, ನನ್ನ ವಿರಹ ತಡೆಯಲಾರದೇ ಸಾಯುವಳೆಂದರ್ಥ. ಮಕ್ಕಳಿದ್ದವರು ಸಾಯುವುದು ನಿಷಿದ್ಧವೆಂದು ಸೂಚಿಸಲು 'ವೀರಸೂರಪಿ' ಎಂದಿರುವರು. ॥೨೦॥

**ಕಥಂ ನು ದಾರಿಕಾ ದೀನಾ ದಾರಕಾ *ಮತ್ಪರಾಯಣಾಃ ।**
**ವರ್ತಿಷ್ಯಂತೇ ಮಯಿ ಗತೇ ಭಿನ್ನನಾವ ಇವೋದಧೌ ॥೨೧॥**

*"ದಾರಕಾ ವಾಽಪರಾಯಣಾಃ" ಎಂದು ಯಾದವಾರ್ಯ ಪಾಠಾಂತರ.

ಮಯಿ ಗತೇ=ನಾನು ಹೊರಟುಹೋದರೆ ಉದಧೌ=ಸಮುದ್ರದಲ್ಲಿ ಭಿನ್ನನಾವ ಇವ=ಒಡೆದುಹೋದ ದೋಣಿಯುಳ್ಳವನಂತೆ ಮತ್ಪರಾಯಣಾಃ=ನಾನೇ ಮುಖ್ಯ ಆಶ್ರಯವಾಗಿವುಳ್ಳ (ಅಪರಾಯಣಾಃ ಎಂಬ ಪಾಠದಲ್ಲಿ ಆಶ್ರಯರಹಿತರಾದ ಎಂದರ್ಥ) ದಾರಕಾಃ=ಪುತ್ರರು ದೀನಾಃ=ದುಃಖಿತರಾದ ದಾರಿಕಾಃ=ಪುತ್ರಿಯರು ಕಥಂ ವರ್ತಿಷ್ಯಂತೇ= ಹೇಗೆ ಬದುಕಿಯಾರು ?॥೨೧॥

**ಏವಂ ಕೃಪಣಯಾ ಬುದ್ಧ್ಯಾ ಶೋಚಂತಮತದರ್ಹಣಮ್ ।**
**ಗ್ರಹೀತುಂ ಕೃತಧೀರೇನಂ ಭಯನಾಮಾऽಭ್ಯಪದ್ಯತ ॥೨೨॥**

ಏವಂ=ಈ ರೀತಿ ಕೃಪಣಯಾ ಬುದ್ಧ್ಯಾ=ವಿವೇಕಶೂನ್ಯವಾದ ಬುದ್ಧಿಯಿಂದ ಶೋಚಂತಂ=ದುಃಖಿಸುತ್ತಿರುವ ಅತದರ್ಹಣಂ=ಶೋಕಿಸಲು ಯೋಗ್ಯನಲ್ಲದ (ಮರಣಯೋಗ್ಯನಾದ) ಏನಂ=ಇವನನ್ನು ಗ್ರಹೀತುಂ=ಹಿಡಿಯಲು ಕೃತಧೀಃ=ನಿಶ್ಚಯಿಸಿದ ಭಯನಾಮಾ=ಭಯವೆಂಬ ಮೃತ್ಯುವು ಅಭ್ಯಪದ್ಯತ=ಪ್ರಾಪ್ತವಾಯಿತು. ॥೨೨॥

**ಪಶುವದ್ ಯವನೇನೈಷ ನೀಯಮಾನಃ ಸ್ವಕಂ ಕ್ಷಯಮ್ ।**
**ಅನ್ವದ್ರುವನ್ನನುಪಥಾಃ ಶೋಚಂತೋ ಭೃಶಮಾತುರಾಃ ॥೨೩॥**

ಯವನೇನ=ಯವನನಿಂದ ಪಶುವತ್=ಪಶುವಿನಂತೆ ಏಷಃ=ಈ ಪುರಂಜನನು ಸ್ವಕಂ ಕ್ಷಯಂ ನೀಯಮಾನಃ=ತನ್ನ ಸ್ಥಾನಕ್ಕೆ ಎಳೆದೊಯ್ಯಲ್ಪಡುತ್ತಿರಲು ಭೃಶಂ ಆತುರಾಃ=ಬಹಳ ಆರ್ತರಾಗಿ ಶೋಚಂತಃ=ದುಃಖಿಸುತ್ತ ಅನಪಥಾಃ=ಪತ್ನೀ-ಪುತ್ರರು ಅನ್ವದ್ರವನ್=ಹಿಂಬಾಲಿಸಿದರು. ॥೨೩॥

**ಪುರೀಂ ವಿಹಾಯೋಪಗತ ಉಪರುದ್ಧೋ ಭುಜಂಗಮಃ । (ವಿಹಂಗಮಃ)**
**ತದಾ ತಮೇವಾನುಪುರೀ ವಿಶೀರ್ಣಾ ಪ್ರಕೃತಿಂ ಗತಾ ॥೨೪॥**

ಉಪರುದ್ಧಃ=ಮುತ್ತಿಗೆ ಹಾಕಲ್ಪಟ್ಟ ಪಟ್ಟಣವುಳ್ಳ (ಸ್ಥೂಲದೇಹ) ಭುಜಂಗಮಃ= ಪುರಂಜನನು (ಜೀವನು) ಸುಡುವ ಗಿಡದಿಂದ ಹಾವು ಹೊರಟಂತೆ ಯದಾ=ಯಾವಾಗ ಪುರೀಂ=ಪುರವನ್ನು (ದೇಹವನ್ನು) ವಿಹಾಯ=ತೊರೆದು ಉಪಗತಃ=ಹೊರಟನೋ ತದಾ=ಆಗಲೇ ತಮನು=ಅವನ ಹಿಂದೆಯೇ ಪುರೀ ವಿಶೀರ್ಣಾ=ದೇಹವು ಶಿಥಿಲವಾಯಿತು. ಪ್ರಕೃತಿಂ ಗತಾ=ಪಂಚಮಹಾಭೂತಾತ್ಮಕವಾಯಿತು. (ಅವುಗಳಿಂದಲೇ ಜನಿಸಿ, ರಾಜ ಬಿಟ್ಟ ಮೇಲೆ ಪುರ ಹಾಳಾಯಿತು ಎಂದು ಭಾವ. ಅವುಗಳಾಗಿಯೇ ಉಳಿಯಿತು.)॥೨೪॥

**ವಿಕೃಷ್ಯಮಾಣಃ ಪ್ರಸಭಂ ಯವನೇನ ಬಲೀಯಸಾ ।**
**ನಾವಿಂದತ್ ತಮಸಾऽऽವಿಷ್ಟಃ ಸಖಾಯಂ ಸುಹೃದಂ ಪರಮ್ ॥೨೫॥**

ಬಲೀಯಸಾ=ಬಲಿಷ್ಠನಾದ ಯವನೇನ=ಯವನನಿಂದ ಪ್ರಸಭಂ=ಬಲಾತ್ಕಾರದಿಂದ ವಿಕೃಷ್ಯಮಾಣಃ=ದೇಹದಿಂದ (ಪುರದಿಂದ) ಹೊರಗೆಳೆಯಲ್ಪಡುವ ಪುರಂಜನನು ತಪಸಾ ಆವಿಷ್ಟಃ=ಅಜ್ಞಾನಮೋಹಿತನಾಗಿ ಸಖಾಯಂ=ಅವಿಜ್ಞಾತನೆಂಬ ಗೆಳೆಯನಾದ ಸುಹೃದಂ= ಅನಿಮಿತ್ತ ಉಪಕಾರಕನಾದ ಪರಂ=ಪರಮಾತ್ಮನನ್ನು ನ ಅವಿಂದತ್=ಸ್ಮರಿಸಲಿಲ್ಲ. ॥೨೫॥

ಚಿಂತೆಯನ್ನೇ ವಿವರಿಸುವರು -

**ಲೋಕಾಂತರಂ ಗತವತಿ ಮಯ್ಯನಾಥಾ ಕುಟುಂಬಿನೀ ।**
**ವರ್ತಿಷ್ಯತೇ ಕಥಂ ತ್ವೇಷಾ ಬಾಲಕಾನನುಶೋಚತೀ ॥೧೮॥**

ಮಯಿ=ನಾನು ಲೋಕಾಂತರಂ ಗತವತಿ=ಬೇರೆ ಲೋಕಕ್ಕೆ ಹೋಗುತ್ತಿರಲು ಅನಾಥಾ=ರಕ್ಷಕರಹಿತಳಾದ ಕುಟುಂಬಿನೀ ಏಷಾ=ಈ ಹೆಂಡತಿಯು ಬಾಲಕಾನ್=ಮಕ್ಕಳನ್ನು ಅನುಶೋಚತೀ=ಚಿಂತಿಸುತ್ತ ಕಥಂ ವರ್ತಿಷ್ಯತೇ=ಹೇಗೆ ಇರುವಳು ?॥೧೮॥

**ನ ಮಯ್ಯನಶಿತೇ ಭುಂಕ್ತೇ ನಾಸ್ನಾತೇ ಸ್ನಾತಿ ಮತ್ಪರಾ ।**
**ಮಯಿ ತುಷ್ಟೇ ಸುಸಂತುಷ್ಟಾ ಭರ್ತ್ಸಿತೇ ಯತವಾಗ್ ಭಯಾತ್ ॥೧೯॥**

ಮತ್ಪರಾ=ನನ್ನಲ್ಲಿ ಆಸಕ್ತಳಾದ ಇವಳು ಮಯಿ=ನಾನು ಅನಶಿತೇ=ಉಣ್ಣದಿದ್ದರೆ ನ ಭುಂಕ್ತೇ=ಉಣ್ಣಲಾರಳು, ಅಸ್ನಾತೇ ನ ಸ್ನಾತಿ=ಸ್ನಾನ ಮಾಡದಿದ್ದರೆ ಸ್ನಾನ ಮಾಡಳು, ಮಯಿ ತುಷ್ಟೇ=ನಾನು ಸಂತೋಷದಿಂದ ಇದ್ದರೆ ಸುಸಂತುಷ್ಟಾ=ಅವಳೂ ಬಹಳ ಸಂತೋಷಿಸುವಳು, ಭರ್ತ್ಸಿತೇ=ಬೈದರೆ ಭಯಾತ್=ಭಯದಿಂದ ಯತವಾಗ್ ಭವತಿ=ಸುಮ್ಮನಿರುವಳು. ॥೧೯॥

**ಪ್ರಬೋಧಯತಿ ಮಾಽವಿಜ್ಞಂ ವ್ಯುಷಿತೇ ಶೋಕಕರ್ಷಿತಾ ।**
**ವರ್ತ್ಮೈತದ್ ಗೃಹಮೇಧೀಯಂ ವೀರಸೂರಪಿ ನೇಷ್ಯತಿ ॥೨೦॥**

ಅವಿಜ್ಞಂ=ಅವಿವೇಕಿಯಾದ ಮಾ=ನನ್ನನ್ನು ಪ್ರಬೋಧಯತಿ=ಎಚ್ಚರಿಸುವಳು. ವ್ಯುಷಿತೇ=ನಾನು ದೇಶಾಂತರಕ್ಕೆ ಹೋದರೆ ಶೋಕಕರ್ಷಿತಾ=ದುಃಖಪೀಡಿತಳಾಗಿ ವೀರಸೂಃ ಅಪಿ=ಪುತ್ರವತಿಯಾಗಿದ್ದರೂ ಏತತ್ ಗೃಹಮೇಧೀಯಂ ವರ್ತ್ಮ ನೇಷ್ಯತಿ=ಗೃಹಧರ್ಮವನ್ನು ಅನುವರ್ತಿಸುವುದಿಲ್ಲ, ನನ್ನ ವಿರಹ ತಡೆಯಲಾರದೇ ಸಾಯುವಳೆಂದರ್ಥ. ಮಕ್ಕಳಿದ್ದವರು ಸಾಯುವುದು ನಿಷಿದ್ಧವೆಂದು ಸೂಚಿಸಲು 'ವೀರಸೂರಪಿ' ಎಂದಿರುವರು. ॥೨೦॥

**ಕಥಂ ನು ದಾರಿಕಾ ದೀನಾ ದಾರಕಾ ★ಮತ್ಪರಾಯಣಾಃ ।**
**ವರ್ತಿಷ್ಯಂತೇ ಮಯಿ ಗತೇ ಭಿನ್ನನಾವ ಇವೋದಧೌ ॥೨೧॥**

★"ದಾರಕಾ ವಾಽಪರಾಯಣಾಃ" ಎಂದು ಯಾದವಾರ್ಯ ಪಾಠಾಂತರ.

ಮಯಿ ಗತೇ=ನಾನು ಹೊರಟುಹೋದರೆ ಉದಧೌ=ಸಮುದ್ರದಲ್ಲಿ ಭಿನ್ನನಾವ ಇವ=ಒಡೆದುಹೋದ ದೋಣಿಯುಳ್ಳವನಂತೆ ಮತ್ಪರಾಯಣಾಃ=ನಾನೇ ಮುಖ್ಯ ಆಶ್ರಯವಾಗಿವುಳ್ಳ (ಅಪರಾಯಣಾಃ ಎಂಬ ಪಾಠದಲ್ಲಿ ಆಶ್ರಯರಹಿತರಾದ ಎಂದರ್ಥ) ದಾರಕಾಃ=ಪುತ್ರರು ದೀನಾಃ=ದುಃಖಿತರಾದ ದಾರಿಕಾಃ=ಪುತ್ರಿಯರು ಕಥಂ ವರ್ತಿಷ್ಯಂತೇ=ಹೇಗೆ ಬದುಕಿಯಾರು ?॥೨೧॥

**ಏವಂ ಕೃಪಣಯಾ ಬುದ್ಧ್ಯಾ ಶೋಚಂತಮತದರ್ಹಣಮ್ ।**
**ಗ್ರಹೀತುಂ ಕೃತಧೀರೇನಂ ಭಯನಾಮಾಽಭ್ಯಪದ್ಯತ ॥೨೨॥**

ಏವಂ=ಈ ರೀತಿ ಕೃಪಣಯಾ ಬುದ್ಧ್ಯಾ=ವಿವೇಕಶೂನ್ಯವಾದ ಬುದ್ಧಿಯಿಂದ ಶೋಚಂತಂ=ದುಃಖಿಸುತ್ತಿರುವ ಅತದರ್ಹಣಂ=ಶೋಕಿಸಲು ಯೋಗ್ಯನಲ್ಲದ (ಮರಣಯೋಗ್ಯನಾದ) ಏನಂ=ಇವನನ್ನು ಗ್ರಹೀತುಂ=ಹಿಡಿಯಲು ಕೃತಧೀಃ=ನಿಶ್ಚಯಿಸಿದ ಭಯನಾಮಾ=ಭಯವೆಂಬ ಮೃತ್ಯುವು ಅಭ್ಯಪದ್ಯತ=ಪ್ರಾಪ್ತವಾಯಿತು. ॥೨೨॥

**ಪಶುವದ್ ಯವನೇನೈಷ ನೀಯಮಾನಃ ಸ್ವಕಂ ಕ್ಷಯಮ್ ।**
**ಅನ್ವದ್ರವನ್ನನುಪಥಾಃ ಶೋಚಂತೋ ಭೃಶಮಾತುರಾಃ ॥೨೩॥**

ಯವನೇನ=ಯವನನಿಂದ ಪಶುವತ್=ಪಶುವಿನಂತೆ ಏಷಃ=ಈ ಪುರಂಜನನು ಸ್ವಕಂ ಕ್ಷಯಂ ನೀಯಮಾನಃ=ತನ್ನ ಸ್ಥಾನಕ್ಕೆ ಎಳೆದೊಯ್ಯಲ್ಪಡುತ್ತಿರಲು ಭೃಶಂ ಆತುರಾಃ=ಬಹಳ ಆರ್ತರಾಗಿ ಶೋಚಂತಃ=ದುಃಖಿಸುತ್ತ ಅನಪಥಾಃ=ಪತ್ನೀ-ಪುತ್ರರು ಅನ್ವದ್ರವನ್=ಹಿಂಬಾಲಿಸಿದರು. ॥೨೩॥

**ಪುರೀಂ ವಿಹಾಯೋಪಗತ ಉಪರುದ್ಧೋ ಭುಜಂಗಮಃ । (ವಿಹಂಗಮಃ)**
**ತದಾ ತಮೇವಾನುಪುರೀ ವಿಶೀರ್ಣಾ ಪ್ರಕೃತಿಂ ಗತಾ ॥೨೪॥**

ಉಪರುದ್ಧಃ=ಮುತ್ತಿಗೆ ಹಾಕಲ್ಪಟ್ಟ ಪಟ್ಟಣವುಳ್ಳ (ಸ್ಥೂಲದೇಹ) ಭುಜಂಗಮಃ=ಪುರಂಜನನು (ಜೀವನು) ಸುಡುವ ಗಿಡದಿಂದ ಹಾವು ಹೊರಟಂತೆ ಯದಾ=ಯಾವಾಗ ಪುರೀಂ=ಪುರವನ್ನು (ದೇಹವನ್ನು) ವಿಹಾಯ=ತೊರೆದು ಉಪಗತಃ=ಹೊರಟನೋ ತದಾ=ಆಗಲೇ ತಮನು=ಅವನ ಹಿಂದೆಯೇ ಪುರೀ ವಿಶೀರ್ಣಾ=ದೇಹವು ಶಿಥಿಲವಾಯಿತು. ಪ್ರಕೃತಿಂ ಗತಾ=ಪಂಚಮಹಾಭೂತಾತ್ಮಕವಾಯಿತು. (ಅವುಗಳಿಂದಲೇ ಜನಿಸಿ, ರಾಜ ಬಿಟ್ಟ ಮೇಲೆ ಪುರ ಹಾಳಾಯಿತು ಎಂದು ಭಾವ. ಅವುಗಳಾಗಿಯೇ ಉಳಿಯಿತು.)॥೨೪॥

**ವಿಕೃಷ್ಯಮಾಣಃ ಪ್ರಸಭಂ ಯವನೇನ ಬಲೀಯಸಾ ।**
**ನಾವಿಂದತ್ ತಮಸಾಽಽವಿಷ್ಟಃ ಸಖಾಯಂ ಸುಹೃದಂ ಪರಮ್ ॥೨೫॥**

ಬಲೀಯಸಾ=ಬಲಿಷ್ಠನಾದ ಯವನೇನ=ಯವನನಿಂದ ಪ್ರಸಭಂ=ಬಲಾತ್ಕಾರದಿಂದ ವಿಕೃಷ್ಯಮಾಣಃ=ದೇಹದಿಂದ (ಪುರದಿಂದ) ಹೊರಗೆಳೆಯಲ್ಪಡುವ ಪುರಂಜನನು ತಪಸಾ ಆವಿಷ್ಟಃ=ಅಜ್ಞಾನಮೋಹಿತನಾಗಿ ಸಖಾಯಂ=ಅವಿಜ್ಞಾತನೆಂಬ ಗೆಳೆಯನಾದ ಸುಹೃದಂ=ಅನಿಮಿತ್ತ ಉಪಕಾರಕನಾದ ಪರಂ=ಪರಮಾತ್ಮನನ್ನು ನ ಅವಿಂದತ್=ಸ್ಮರಿಸಲಿಲ್ಲ. ॥೨೫॥

**ತಂ ಯಜ್ಞಪಶವೋऽನೇನ ಸಂಜ್ಞಪ್ತಾ ಯೇऽದಯಾಲುನಾ ।**
**ಕುಠಾರೈಶ್ಚಿಚ್ಛಿದುಃ ಕ್ರುದ್ಧಾಃ ಸ್ಮರಂತೋಽ ವೈಶಸಂ ತು ತತ್ ॥೨೬॥**

ಯೇ=ಯಾವ ಯಜ್ಞಪಶವಃ=ಯಜ್ಞಪಶುಗಳು ಅದಯಾಲುನಾ=ಕ್ರೂರನಾದ ಅನೇನ= ಇವನಿಂದ ಸಂಜ್ಞಪ್ತಾಃ=ಹಿಂಸಿಸಲ್ಪಟ್ಟವೋ ತೇ=ಅವುಗಳು ತತ್ ವೈಶಸಂ ಸ್ಮರಂತಃ=ಆ ಹಿಂಸೆಯನ್ನು ನೆನೆದು ಕ್ರುದ್ಧಾಃ=ಸಿಟ್ಟಾಗಿ ತಂ=ರಾಜನನ್ನು (ಪುರಂಜನನನ್ನು ಜೀವನನ್ನು) ಕುಠಾರೈಃ=ಕೊಡಲಿಯಂತಿರುವ ಕೋಡಿನಿಂದ ಚಿಚ್ಛಿದುಃ=ಕತ್ತರಿಸಿದವು. ತುಶಬ್ದದಿಂದ ಹರಿಸ್ಮರಣಾದಿ ಅಂಗವೈಕಲ್ಯವನ್ನು ಸೂಚಿಸುವರು. ॥೨೬॥

**ಅನಂತಪಾರೇ ತಮಸಿ ಮಗ್ನೋ ನಷ್ಟಸ್ಮೃತಿಃ ಸಮಾಃ ।**
**ಶಾಶ್ವತೀರನುಭೂಯಾರ್ತೀಃ ಪ್ರಮದಾಸಂಗದೂಷಿತಃ ॥೨೭॥**

ಅನಂತಪಾರೇ=ಬಹುಕಾಲೀನವಾದ (ಅವಸಾನವಿಲ್ಲದ) ತಮಸಿ=ನರಕದಲ್ಲಿ ಮಗ್ನಃ=ಮುಳುಗಿ ನಷ್ಟಸ್ಮೃತಿಃ=ಎಚ್ಚರ ತಪ್ಪಿದ ಪ್ರಮದಾಸಂಗದೂಷಿತಃ=ಸ್ತ್ರೀಸಂಗದೂಷಿತನಾದ ಇವನು ಶಾಶ್ವತೀಃ ಸಮಾಃ=ಬಹಳ ಸಂವತ್ಸರಪರ್ಯಂತ ಆರ್ತೀಃ ಅನುಭೂಯ=ದುಃಖವನ್ನು ಅನುಭವಿಸಿ, (ಅನ್ವಯ ಮುಂದುವರೆಯುವುದು)

**ತಾಮೇವ ಮನಸಾ ಗೃಹ್ಣನ್ ಬಭೂವ ಪ್ರಮದೋತ್ತಮಾ ।**
**ಅನಂತರಂ ವಿದರ್ಭಸ್ಯ ರಾಜಸಿಂಹಸ್ಯ ವೇಶ್ಮನಿ ॥೨೮॥**

ತಾಮೇವ=ಸ್ತ್ರೀಯನ್ನೇ ಮನಸಾ ಗೃಹ್ಣನ್=ಮರಣಕಾಲದಲ್ಲಿ ಸ್ಮರಿಸುತ್ತ ಅನಂತರಂ= ನರಭೋಗವಾದ ಮೇಲೆ ವಿದರ್ಭಸ್ಯ=ವಿದರ್ಭದೇಶದ ರಾಜಸಿಂಹಸ್ಯ=ರಾಜಶ್ರೇಷ್ಠನ ವೇಶ್ಮನಿ=ಮನೆಯಲ್ಲಿ ಪ್ರಮದೋತ್ತಮಾ ಬಭೂವ=ಸುಂದರಸ್ತ್ರೀ ಜನ್ಮ ಪಡೆದನು ಎಂದರ್ಥ.

ವಿದರ್ಭಸ್ಯ ಎಂದರೆ ದರ್ಭೋಪಲಕ್ಷಿತ ಕರ್ಮಠನಾದ, ಧರ್ಮದಿಂದ ಪ್ರಜಾಪಾಲನ ಮಾಡುವುದರಿಂದ ಯಜ್ಞಾದಿಗಳಿಂದ ಶ್ರೇಷ್ಠನಾದ ಎಂದರ್ಥ. ॥೨೮॥

**ಉಪಯೇಮೇ ವೀರ್ಯಪಣಾಂ ವೈದರ್ಭೀಂ ಮಲಯಧ್ವಜಃ ।**
**ಯುಧಿ ನಿರ್ಜಿತ್ಯ ರಾಜನ್ಯಾನ್ ಪಾಂಡ್ಯಃ ಪರಪುರಂಜಯಃ ॥೨೯॥**

ವೀರ್ಯಪಣಾಂ=ಸಾಮರ್ಥ್ಯವೇ ಮೌಲ್ಯವಾಗಿವುಳ್ಳ ವೈದರ್ಭೀಂ=ವಿದರ್ಭಕುವರಿಯನ್ನು ಪರಪುರಂಜಯಃ=ಶತ್ರುಪುರಗಳನ್ನು ಜಯಿಸುವ ಮಲಯಧ್ವಜಃ=ಮಲಯೋಪಲಕ್ಷಿತ ದಕ್ಷಿಣದೇಶದಲ್ಲಿ ಧ್ವಜದಂತೆ ದರ್ಶನೀಯನಾದ ಪಾಂಡ್ಯಃ=ನಿಶ್ಚಯಬುದ್ಧಿಯುಳ್ಳವನು (ಪಾಂಡ್ಯದೇಶದ ಮಲಯಧ್ವಜನು) ಯುಧಿ=ಯುದ್ಧದಲ್ಲಿ ರಾಜನ್ಯಾನ್=ಕ್ಷತ್ರಿಯರನ್ನು ನಿರ್ಜಿತ್ಯ=ಗೆದ್ದು ಉಪಯೇಮೇ=ವಿವಾಹವಾದನು.

(ಭಗವದ್ಭಕ್ತಿ ಯೋಗಾನುಷ್ಠಾನ ಸಾಮರ್ಥ್ಯವೇ ಶುಲ್ಕವಾಗಿ ಉಳ್ಳ ಅಂದರೆ ಭಾಗವತನನ್ನೇ ವರಿಸುವೆನೆಂಬ ಸಂಕಲ್ಪವುಳ್ಳ, ಯುಧಿ=ಇಂದ್ರಿಯಜಯ ಯುದ್ಧದಲ್ಲಿ ರಾಜನ್ಯಾನ್=ಜೀತೇಂದ್ರಿಯರನ್ನೂ ಗೆದ್ದ ಅಂದರೆ ಅವರಲ್ಲಿ ಶ್ರೇಷ್ಠನಾದ ಎಂದರ್ಥ.)

**ತಸ್ಯಾಂ ಸಂಜನಯಾಂಚಕ್ರೇ ಆತ್ಮಜಾಮಸಿತೇಕ್ಷಣಾಮ್ ।**
**ಯವೀಯಸಃ ಸಪ್ತಸುತಾನ್ ಸಪ್ತದ್ರವಿಡಭೂಭೃತಃ ॥೩೦॥**

ಸಃ=ಮಲಯಧ್ವಜನು ತಸ್ಯಾಂ=ವೈದರ್ಭಿಯಲ್ಲಿ ಅಸಿತೇಕ್ಷಣಾಂ=ಕಪ್ಪಾದ ಕಣ್ಣುಳ್ಳ (ಅಸಿತೇ=ಶ್ರೀಕೃಷ್ಣನಲ್ಲಿ ಈಕ್ಷಣಾಂ=ದೃಷ್ಟಿಯುಳ್ಳ) ಆತ್ಮಜಾಂ=ಮಗಳನ್ನು (ಶ್ರೀಕೃಷ್ಣಾಸೇವಾರುಚಿ ಎಂಬ) ಜನಯಾಂಚಕ್ರೇ=ಹುಟ್ಟಿಸಿದನು. ಯವೀಯಸಃ=ಹೆಣ್ಣುಮಗುವಿಗಿಂತ ಚಿಕ್ಕವರಾದ ಸಪ್ತದ್ರವಿಡಭೂಭೃತಃ=ಏಳು ದ್ರವಿಡದೇಶಕ್ಕೆ ರಾಜನಾದ ಸಪ್ತ ಸುತಾನ್=ಏಳು ಜನ ಮಕ್ಕಳನ್ನು ಜನಯಾಂಚಕ್ರೇ= ಹುಟ್ಟಿಸಿದನು. (ಭಗವದ್ಧರ್ಮದಲ್ಲಿ ರುಚಿಯಿಂದ ಶ್ರವಣ, ಕೀರ್ತನ, ಸ್ಮರಣ, ಪಾದಸೇವನ ಅರ್ಚನ, ವಂದನ, ದಾಸ್ಯ, ಭಾವನಗಳು ಉತ್ಪನ್ನ ವಾದವು.) ದ್ರವಿಡದೇಶವು ಶ್ರವಣಾದಿಗಳಿಂದ ಸುರಕ್ಷಿತವೆಂದು ಪ್ರಸಿದ್ಧ. ॥೩೦॥

**ಏಕೈಕಸ್ಯಾಭವತ್ ತೇಷಾಂ ರಾಜನ್ನರ್ಬುದಮರ್ಬುದಮ್ ।**
**ಭೋಕ್ಷ್ಯತೇ ಯದ್ವಂಶಧರೈರ್ಮಹೀ ಮನ್ವಂತರಂ ಪರಮ್ ॥೩೧॥**

ತೇಷಾಂ=ಆ ರಾಜಕುಮಾರರಿಗೆ ಏಕೈಕಸ್ಯ=ಒಬ್ಬೊಬ್ಬರಿಗೆ ಅರ್ಬುದಂ ಅರ್ಬುದಂ=ಹತ್ತು ಹತ್ತು ಕೋಟಿ ಮಕ್ಕಳು ಅಭವತ್=ಆದರು. ರಾಜನ್=ರಾಜನೇ ! ಯದ್ವಂಶಧರೈಃ=ಯಾರ ವಂಶದಲ್ಲಿರುವವರಿಂದ ಮನ್ವಂತರಂ ಪರಂ ಮಹೀ ಭೋಕ್ಷ್ಯತೇ=ಮನ್ವಂತರದ ಮುಂದೆಯೂ ಭೂಮಿಯು ಅನುಭವಿಸಲ್ಪಡುವುದು. ॥೩೧॥

**ಅಗಸ್ತ್ಯಃ ಪ್ರಾಗ್ದುಹಿತರಮುಪಯೇಮೇ ಧೃತವ್ರತಾಮ್ ।**
**ಯಸ್ಯಾಂ ಧೃಡಚ್ಯುತೋ ಜಾತ ಇಧ್ಮವಾಹಾತ್ಮಜೋ ಮುನಿಃ ॥೩೨॥**

ಅಗಸ್ತ್ಯಃ=ಅಗಸ್ತ್ಯ ಋಷಿಯು ಯಸ್ಯಾಂ=ಯಾವಳಲ್ಲಿ ಇಧ್ಮವಾಹಾತ್ಮಜಃ=ಪೂರ್ವದಲ್ಲಿ ಇಧ್ಮವಾಹನ ಮಗನಾದ ದೃಢಚ್ಯುತಃ ಮುನಿಃ ಜಾತಃ=ದೃಢಚ್ಯುತನೆಂಬ ಮುನಿಯು ಜನಿಸಿದನೋ, ಅಂತಹ ಪ್ರಾಕ್ ದುಹಿತರಂ=ಮೊದಲು ಜನಿಸಿದ ಮಗಳನ್ನು ಧೃತವ್ರತಾಂ= ವ್ರತವನ್ನು ಧಾರಣ ಮಾಡಿದವಳನ್ನೇ ಉಪಯೇಮೇ=ಮದುವೆಯಾದನು.

**ವಿಭಜ್ಯ ತನಯೇಭ್ಯಃ ಕ್ಷ್ಮಾಂ ರಾಜರ್ಷಿರ್ಮಲಯಧ್ವಜಃ ।**
**ಆರಿರಾಧಯಿಷುಃ ಕೃಷ್ಣಂ ಸ ಜಗಾಮ ಕುಲಾಚಲಮ್ ॥೩೩॥**

ಸಃ ರಾಜರ್ಷಿಃ ಮಲಯಧ್ವಜಃ=ಆ ರಾಜ ಋಷಿಯಾದ ಮಲಯಧ್ವಜನು ತನಯೇಭ್ಯಃ =ಮಕ್ಕಳಿಗೆ ಕ್ಷ್ಮಾಂ=ಭೂಮಿಯನ್ನು ವಿಭಜ್ಯ=ಭಾಗ ಮಾಡಿ ಇತ್ತು ಕೃಷ್ಣಂ=ಶ್ರೀಕೃಷ್ಣನನ್ನು ಆರಿರಾಧಯಿಷುಃ=ಆರಾಧಿಸುವ ಇಚ್ಛೆಯಿಂದ (ಅಪರೋಕ್ಷೀಕರಿಸಕೊಳ್ಳಲು) ಕುಲಾಚಲಂ ಜಗಾಮ=ಕುಲಪರ್ವತಕ್ಕೆ ಹೋದನು. ।।೩೩।।

**ಹಿತ್ವಾ ಗೃಹಾನ್ ಸುತಾನ್ ಭೋಗಾನ್ ವೈದರ್ಭೀ ಮದಿರೇಕ್ಷಣಾ ।**
**ಅನ್ವಧಾವತ ಪಾಂಡ್ಯೇಶಂ ಜ್ಯೋತ್ಸ್ನೇವ ರಜನೀಕರಮ್ ।।೩೪।।**

ಮದಿರೇಕ್ಷಣಾ=ಸುಖಜನಕವಾದ ಜ್ಞಾನವುಳ್ಳ ವೈದರ್ಭೀ=ವಿದರ್ಭರಾಜಕುವರಿಯು ಗೃಹಾನ್=ಮನೆಯನ್ನು ಸುತಾನ್=ಮಕ್ಕಳನ್ನು ಭೋಗಾನ್=ವಿಷಯಾನುಭವಗಳನ್ನು ಹಿತ್ವಾ=ಬಿಟ್ಟು ರಜನೀಕರಂ=ಚಂದ್ರನನ್ನು ಜ್ಯೋತ್ಸ್ನಾ ಇವ=ಬೆಳದಿಂಗಳು ಹಿಂಬಾಲಿಸುವಂತೆ ಪಾಂಡ್ಯೇಶಂ=ಮಲಯಧ್ವಜನನ್ನು ಅನ್ವಧಾವತ=ಹಿಂಬಾಲಿಸಿದಳು. ।।೩೪।।

**ತತ್ರ ಚಂದ್ರವಟಾ ನಾಮ ತಾಮ್ರಪರ್ಣೀ ಪರೋದಕಾ ।**
**ತತ್ಪುಣ್ಯಸಲಿಲೈರ್ನಿತ್ಯಮುಭಯತ್ರಾತ್ಮನೋ ಮೃಜನ್ ।।೩೫।।**

ತತ್ರ=ಕುಲಾಚಲದಲ್ಲಿ ಚಂದ್ರವಟಾ ನಾಮ=ಚಂದ್ರವಟಾ ಎಂದು ಪ್ರಸಿದ್ಧವಾದ ತಾರ್ಮಪರ್ಣೀ=ತಾರ್ಮೇಪರ್ಣಿಯೆಂಬ ಪರೋದಕಾ=ಎಂಬ ನದಿಗಳು ಇರುವವು. ತತ್ಪುಣ್ಯಸಲಿಲೈಃ=ಅವುಗಳ ಪುಣ್ಯಕರನೀರಿನಿಂದ ನಿತ್ಯಂ=ಪ್ರತಿದಿನ ಆತ್ಮನಃ=ಅಂತಃಕರಣದ ಉಭಯತ್ರ=ಹೊರಗೂ ಒಳಗೂ ಇರುವ ಮಲಂ=ಕೊಳೆಯನ್ನು ಮೃಜನ್= ತೊಳೆಯುತ್ತ,

**ಕಂದಾದಿರ್ಭಿಮೂರ್ಲಫಲೈಃ ಪುಷ್ಪಪರ್ಣೈಸ್ತೃಣೋದಕೈಃ ।**
**ವರ್ತಮಾನಃ ಶನೈರ್ಗಾತ್ರಕರ್ಷಣಂ ತಪ ಆಸ್ಥಿತಃ ।।೩೬।।**

ಕಂದಾದಿಭಿಃ=ಗಡ್ಡೆ ಮೊದಲಾದ ಮೂಲಫಲೈಃ=ಗೆಣಸು ಹಣ್ಣುಗಳಿಂದಲೂ ಪುಷ್ಪಪರ್ಣೈಃ=ಹೂ,ಎಲೆಗಳಿಂದಲೂ ತೃಣೋದಕೈಃ=ಹುಲ್ಲುನೀರುಗಳಿಂದಲೂ ವರ್ತಮಾನಃ= ಇರುವವನಾಗಿ (ಅವುಗಳಿಂದ ಶರೀರಯಾತ್ರಾ ನಡೆಸುವವನಾಗಿ) ಶನೈಃ=ಮೆಲ್ಲನೆ ಗಾತ್ರಕರ್ಷಣಂ=ದೇಹವನ್ನು ಕುಗ್ಗಿಸುವ ತಪಃ=ತಪಸ್ಸನ್ನು ಆಸ್ಥಿತಃ=ಮಾಡಿದನು. ।।೩೬।।

**ಶೀತೋಷ್ಣವಾತವರ್ಷಾಣಿ ಕ್ಷುತ್ಪಿಪಾಸೇ ಪ್ರಿಯಾಪ್ರಿಯೇ ।**
**ಸುಖದುಃಖೇ ಇತಿ ದ್ವಂದ್ವಾನ್ಯಜಯತ್ ಸಮದರ್ಶನಃ ।।೩೭।।**

ಸಮದರ್ಶನಃ=ದ್ವಂದ್ವಗಳಲ್ಲಿ ವಿಕಾರರಹಿತನಾದವನು. ಶೀತೋಷ್ಣವಾತವರ್ಷಾಣಿ= ಚಳಿ,ಮಳೆ,ಗಾಳಿ,ಬಿಸಿಲುಗಳನ್ನು ಕ್ಷುತ್ ಪಿಪಾಸೇ=ಹಸಿವೆ ನೀರಡಿಕೆಗಳನ್ನು ಪ್ರಿಯಾಪ್ರಿಯೇ=

ಬೇಕಾದುದು ಬೇಡವಾದುದನ್ನೂ ಸುಖದುಃಖೇ=ಸುಖದುಃಖಗಳನ್ನು ಇತಿ=ಈ ರೀತಿ ದ್ವಂದ್ವಾನಿ=ದ್ವಂದ್ವಗಳನ್ನು ಅಜಯತ್=ಸಹಿಸಿದನು ಎಂದರ್ಥ. ॥೩೭॥

**ತಪಸಾ ವಿದ್ಯಯಾ ಪಕ್ವಕಷಾಯೋ ನಿಯಮೈರ್ಯಮೈಃ ।**
**ಯುಯುಜೇ ಬ್ರಹ್ಮಣಾಽತ್ಮಾನಂ ವಿಜಿತಾಕ್ಷಾನಿಲಾಶಯಃ ॥೩೮॥**

ತಪಸಾ=ತಪಸ್ಸಿನಿಂದ ವಿದ್ಯಯಾ=ಜ್ಞಾನದಿಂದ ನಿಯಮೈಃ ಯಮೈಃ=ಯಮ ನಿಯಮಗಳಿಂದ ಪಕ್ವಕಷಾಯಃ=ಪಾಪವನ್ನು ಕಳೆದುಕೊಂಡವನಾಗಿ ವಿಜಿತಾಕ್ಷಾನಿಲಾಶಯಃ= ಗೆಲ್ಲಲ್ಪಟ್ಟ ಇಂದ್ರಿಯ ವಾಯು ಅಂತಃಕರಣವುಳ್ಳವನಾಗಿ ಆತ್ಮಾನಂ=ಮನಸ್ಸನ್ನು ಬ್ರಹ್ಮಣಾ ಯುಯುಜೇ=ಬ್ರಹ್ಮನಿಂದ ಜೋಡಿಸಿದನು. ಬ್ರಹ್ಮಜ್ಞಾನ ಮಾಡಿಕೊಂಡನೆಂದರ್ಥ. ॥೩೮॥

**ಆಸ್ತೇ ಸ್ಥಾಣುರಿವೈಕತ್ರ ದಿವ್ಯಂ ವರ್ಷಶತಂ ಸ್ಥಿತಃ ।**
**ವಾಸುದೇವೇ ಭಗವತಿ ನಾನ್ಯದ್ವೇದೋದ್ವಹನ್ ರತಿಮ್ ॥೩೯॥**

ದಿವ್ಯಂ ವರ್ಷಶತಂ=ದೇವಮಾನದಿಂದ ನೂರು ವರ್ಷ ಪರ್ಯಂತ ಸ್ಥಾಣುರಿವ= ಮೋಟ ಮರದಂತೆ ಏಕತ್ರ ಸ್ಥಿತಃ ಆಸ್ತೇ=ಒಂದೇ ಸ್ಥಳದಲ್ಲಿ ನಿಂತಿರುವನು. ವಾಸುದೇವೇ ಭಗವತಿ=ಪರಮಾತ್ಮನಲ್ಲಿ ರತಿಂ ಉದ್ವಹನ್=ಆಸಕ್ತನಾಗಿ ಅನ್ಯತ್ ನ ವೇದ=ಬೇರಾವುದನ್ನೂ ತಿಳಿಯಲಿಲ್ಲ. ॥೩೯॥

**ಸ ವ್ಯಾಪಕತಯಾಽತ್ಮಾನಂ ವ್ಯತಿರಿಕ್ತತಯಾಽತ್ಮನಿ ।**
**ವಿದ್ವಾನ್ ಸ್ವಪ್ನ ಇವಾಮೃಶ್ಯ ಸಾಕ್ಷಿಣಂ ವಿರರಾಮ ಹ ॥೪೦॥**

ಸಃ=ಮಲಯಧ್ವಜನು ಆತ್ಮನಿ=ಮನಸ್ಸಿನಲ್ಲಿ (ಜೀವನಲ್ಲಿ) ಇರುವ ಸಾಕ್ಷಿಣಂ=ಸಾಕ್ಷಾತ್ತಾಗಿ ನೋಡುವ ಆತ್ಮಾನಂ=ಪರಮಾತ್ಮನನ್ನು ವ್ಯಾಪಕತಯಾ=ಸರ್ವತ್ರ ವ್ಯಾಪ್ತನು, ಸ್ವತಂತ್ರನು ಆದ್ದರಿಂದಲೇ ವ್ಯತಿರಿಕ್ತತಯಾ=ಸಮಸ್ತಜಗತ್ತಿನಿಂದ ಭಿನ್ನನೆಂದು ಸ್ವಪ್ನೇ ಇವ ಆವಮೃಶ್ಯ=ಕನಸಿನಲ್ಲಿ ಹೇಗೆ ಜೀವಭಿನ್ನನಾದ ಸ್ವಪ್ನಾವಸ್ಥಾಪ್ರೇರಕನಾದವನು ಇದ್ದಾನೆ ಎಂದು ತಿಳಯಬೇಕೋ ಹಾಗೆಯೇ ಜಾಗ್ರದವಸ್ಥೆಯಲ್ಲಿಯೂ ಪ್ರೇರಕನೆಂದು ವಿದ್ವಾನ್= ತಿಳಿದವನಾಗಿ ದೃಢೀಕರಿಸಿ ವಿರರಾಮ=ಸಂಸಾರದಿಂದ ವಿರಕ್ತನಾದನು. ಜೀವನ್ಮುಕ್ತಾವಸ್ಥೆಯನ್ನು ಪಡೆದನು ಎಂದರ್ಥ.

**ಭಾಗವತ ತಾತ್ಪರ್ಯ -**

ಈ ಶ್ಲೋಕದಲ್ಲಿ ಸ್ವಪ್ನೇ ಇವ ಎಂದು ದೃಷ್ಟಾಂತ ಕೊಟ್ಟಿದ್ದರಿಂದ ಸ್ವಪ್ನದಲ್ಲಿ ಜೀವಭಿನ್ನನಾದ ಈಶ್ವರ ಇದ್ದಾನೆ ಎಂಬುದು ಸಿದ್ಧ ಎಂದು ಸೂಚಿಸಿರುವರು. ಅದು ಹೇಗೆಂದರೆ 'ಹ' ಎಂಬುವುದರಿಂದ ಸೂಚಿತವಾದ ಪ್ರಮಾಣವನ್ನು ತೋರಿಸುತ್ತ ಉಪಪಾದಿಸುವರು -

**ಸ್ವಪ್ನೇನ ಶಾರೀರಮಭಿಪ್ರಹತ್ಯಅಸುಪ್ತಃ ಸುಪ್ತಾನಭಿಚಾಕಶೀತಿ ಇತಿ ಶ್ರುತಿಪ್ರಸಿದ್ಧಃ।**

ಜೀವಭಿನ್ನನಾದ ಈಶ್ವರನು ಶರೀರದಲ್ಲಿರುವ ಜೀವನಿಗೆ ಸ್ವಪ್ನಾವಸ್ಥೆಯನ್ನು ಕೊಟ್ಟು ತಾನು ಮಲಗದೇ, ಮಲಗಿದ ಜೀವನನ್ನು ನೋಡುತ್ತಿರುತ್ತಾನೆ ಎಂದು ಶ್ರುತಿಯಲ್ಲಿ ಪ್ರಸಿದ್ಧವಾಗಿದೆ.

ಅನುಮಾನದಿಂದ ಸ್ವಪ್ನಾವಸ್ಥೆಯಲ್ಲಿ ಜೀವಭಿನ್ನ ಈಶ್ವರನ ಸಿದ್ಧಿಯಾಗುವುದು ಎಂದು ಹೇಳಲು ಹೇಳುವರು -

**ಸ್ವಪ್ನ ಇವೇತಿ ದೃಷ್ಟಾಂತತ್ವೇನೋಚ್ಯತೇ । ಸ್ವಪ್ನೇ ಹಿ ಜೀವಸ್ಯಾಸ್ವಾತಂತ್ರ್ಯಂ ಪ್ರಸಿದ್ಧಮ್ । ಅತಸ್ತತ್ರ ಪರಮೇಶ್ವರಾಧೀನತ್ವಂ ಪ್ರಸಿದ್ಧಮೇವ । ಅತೋ ಜೀವವ್ಯತಿರಿಕ್ತ ಈಶ್ವರಃ ಸಿದ್ಧಃ।**

'ಸ್ವಪ್ನೇ ಇವ' ಎಂದು ದೃಷ್ಟಾಂತವಾಗಿ ಹೇಳಿದ್ದು. ಸ್ವಪ್ನದಲ್ಲಂತೂ ಜೀವರಿಗೆ ಸ್ವಾತಂತ್ರ್ಯವಿಲ್ಲವೆಂಬುದು ಪ್ರಸಿದ್ಧವಾಗಿದೆ. ಆದಕಾರಣ ಸ್ವಪ್ನದಲ್ಲಿ ಜೀವರು ಪರಮೇಶ್ವರನ ಅಧೀನರೆಂಬುವುದು ಸಿದ್ಧವೇ ಆಯಿತು. ಆದ್ದರಿಂದ ಜೀವಭಿನ್ನ ಈಶ್ವರ ಸಿದ್ಧನಾಗುವನು. ಅಂದರೆ ಸ್ವಪ್ನವನ್ನು ತೋರಿಸುವವನಾದ್ದರಿಂದ ಈಶ್ವರನು ನೋಡುವ ಜೀವನಿಂದ ಭಿನ್ನನು ಎಂದು ಸಿದ್ಧವಾಗುವುದು. (ತನ್ನಷ್ಟಕ್ಕೆ ತಾನೇ ಸ್ವತಂತ್ರವಾಗಿ ನೋಡಲು ಸಾಧ್ಯವಿಲ್ಲ, ಮತ್ತು ಬೇರೆಯವರು ಇಲ್ಲ, ಹಾಗಾಗಿ ಈಶ್ವರನೇ ಸ್ವಪ್ನದರ್ಶಕನೆಂದು ಭಾವ.)

ಈ ವಿಷಯದಲ್ಲಿ ಪ್ರಮಾಣ ಹೇಳುವರು -

**'ಸ್ವಪ್ನೋ ಯತೋ ನ ಸ್ವತಂತ್ರಸ್ತತ್ರ ತದ್ದರ್ಶಕಃ ಪರಃ ।**
**ಜೀವಾದನ್ಯಸ್ತು ವಿಜ್ಞೇಯಃ ಸ ವಿಷ್ಣುರವಧಾರ್ಯತಾಮ್' ಇತಿ ವಾರಾಹೇ ॥**

ಸ್ವಪ್ನವು ಯಾವ ಕಾರಣ ಜೀವರ ಅಧೀನವಲ್ಲವೋ ಆ ಕಾರಣ ಅದನ್ನು ತೋರಿಸುವವನು ಪರಮಾತ್ಮನೇ. ಮತ್ತೊಬ್ಬರಿಗೆ ಆಗದು. ಕಾರಣ ಆ ವಿಷ್ಣುವು ಜೀವಭಿನ್ನನೆಂದು ನಿಶ್ಚಯಿಸಿರಿ ಎಂದು ವರಾಹಪುರಾಣದಲ್ಲಿದೆ. ॥೪೦॥

**ಸಾಕ್ಷಾದ್ ಭಗವತೋಕ್ತೇನ ಗುರುಣಾ ಹರಿಣಾ ನೃಪಃ ।**
**ವಿಶುದ್ಧಜ್ಞಾನದೀಪೇನ ಸ್ಫುರತಾ ವಿಶ್ವತೋ ಮುಖಮ್ ॥೪೧॥**

ಗುರುಣಾ=ಗುರುವಾದ ಸಾಕ್ಷಾತ್ ಭಗವತಾ ಹರಿಣಾ=ಮುಖ್ಯ ಭಗವಂತನಾದ ಶ್ರೀಹರಿಯಿಂದ ಉಕ್ತೇನ=ಉಪದೇಶಿಸಲ್ಪಟ್ಟ ವಿಶುದ್ಧಜ್ಞಾನದೀಪೇನ ವಿಶ್ವತೋ ಮುಖಂ ಸ್ಫುರತಾ=ಎಲ್ಲ ಕಡೆಗೂ ಪ್ರಕಾಶಿಸುವ ಬಹುವಿಷಯಕವಾದ ನಿರ್ಮಲಜ್ಞಾನದೀಪದಿಂದ, ॥೪೧॥

**ಪರೇ ಬ್ರಹ್ಮಣಿ ಚಾತ್ಮಾನಂ ಪರಂ ಬ್ರಹ್ಮ ತಥಾಽತ್ಮನಿ ।**
**ವೀಕ್ಷಮಾಣೋ ವಿಹಾಯೇಕ್ಷಾಮಸ್ಮಾದುಪರರಾಮ ಹ ॥೪೨॥**

ಪರೇ ಬ್ರಹ್ಮಣಿ=ಪರಮಾತ್ಮನಲ್ಲಿ ಆತ್ಮಾನಂ=ತನ್ನನ್ನು, ಆತ್ಮನಿ=ತನ್ನಲ್ಲಿ ಪರಂ ಬ್ರಹ್ಮ=ಪರಮಾತ್ಮನನ್ನು ವೀಕ್ಷಮಾಣಃ=ನೋಡುವವನಾಗಿ ಈಕ್ಷಾಂ ವಿಹಾಯ=ವೃತ್ತಿಜ್ಞಾನವನ್ನು ತೊರೆದು ಅಸ್ಮಾದುಪರರಾಮ=ಈ ಶರೀರದಿಂದ ಸಂಸಾರದಿಂದ ವಿರಮಿಸಿದನು. ॥೪೨॥

**ಪತಿಂ ಪರಮಧರ್ಮಜ್ಞಂ ವೈದರ್ಭೀ ಮಲಯಧ್ವಜಮ್ ।**
**ಪ್ರೇಮ್ಣಾ ಪರ್ಯಚರದ್ಧಿತ್ವಾ ಭೋಗಾನ್ ಸಾ ಪತಿದೇವತಾ ॥೪೩॥**

ಪತಿದೇವತಾ=ಪತಿಯಲ್ಲಿಯೇ ಪರಮಾತ್ಮನನ್ನು ಕಾಣುವ ಸಾ ವೈದರ್ಭೀ=ಆ ವಿದರ್ಭರಾಜಕುಮಾರಿಯು ಭೋಗಾನ್ ಹಿತ್ವಾ=ಭೋಗಗಳನ್ನು ತ್ಯಜಿಸಿ ಪ್ರೇಮ್ಣಾ=ಪ್ರೀತಿಯಿಂದ ಪರಮಧರ್ಮಜ್ಞಂ=ಶ್ರೇಷ್ಠಧರ್ಮಜ್ಞನಾದ ಪತಿಂ=ಗಂಡನಾದ ಮಲಯಧ್ವಜಂ=ಮಲಯಧ್ವಜನನ್ನು ಪರ್ಯಚರತ್=ಸೇವಿಸಿದಳು. ॥೪೩॥

**ಚೀರವಾಸಾ ವ್ರತಕ್ಷಾಮಾ ವೇಣೀಭೂತಶಿರೋರುಹಾ ।**
**ಬಭಾವುಪಪತಿಂ ಶಾಂತಾ ಶಿಖಾಶಾಂತಮಿವಾನಲಮ್ ॥೪೪॥**

ಚೀರವಾಸಾ=ಹರಕುಬಟ್ಟೆ ಉಟ್ಟು ವ್ರತಕ್ಷಾಮಾ=ವ್ರತದಿಂದ ಕೃಶಳಾಗಿ ವೇಣಿಭೂತಶಿರೋರುಹಾ=ಜಡೆಗಟ್ಟಿದ ಕೂದಲುಳ್ಳ ಶಿಖಾಶಾಂತಂ=ಶಾಂತವಾದ ಜ್ವಾಲೆಗಳುಳ್ಳ ನಿರ್ಧೂಮವಾದ ಅನಲಂ ಇವ=ಅಗ್ನಿಯಂತೆ ಶಾಂತಾ=ಶಾಂತಳಾಗಿ ಪತಿಂ ಉಪ=ಗಂಡನ ಸಮೀಪದಲ್ಲಿ ಬಭೌ=ಶೋಭಿಸಿದಳು. ॥೪೪॥

**ಅಜಾನತೀ ಪ್ರಿಯತಮಂ ಯದೋಪರತಮಂಗನಾ ।**
**ಸುಸ್ಥಿರಾಸನಮಾಸಾದ್ಯ ಯಥಾ ಪೂರ್ವಮುಪಾಚರತ್ ॥೪೫॥**

ಅಂಗನಾ=ವೈದರ್ಭಿಯು ಸುಸ್ಥಿರಂ ಆಸನಂ ಆಸಾದ್ಯ=ಅತ್ಯಂತ ಸ್ಥಿರವಾದ ಆಸನ ಹಾಕಿಕೊಂಡು ಇರುವ ಪ್ರಿಯತಮಂ=ಪತಿಯನ್ನು ಉಪರತಂ ಅಜಾನತೀ=ಮೃತನಾದುದನ್ನು ತಿಳಿಯದೇ ಯಥಾ ಪೂರ್ವಂ ಉಪಾಚರತ್=ಮೊದಲಿನಂತೆ ಸೇವಿಸಿದಳು. ॥೪೫॥

**ಯದಾ ನೋಪಲಭೇತಾಂಘ್ರಾವೂಷ್ಮಾಣಂ ಪತ್ಯುರರ್ಚತೀ ।**
**ಆಸೀತ್ ಸಂವಿಗ್ನಹೃದಯಾ ಯೂಥಭ್ರಷ್ಟಾ ಮೃಗೀ ಯಥಾ ॥೪೬॥**

ಯದಾ=ಯಾವಾಗ ಪತ್ಯುಃ=ಗಂಡನ ಅಂಘ್ರಿಂ ಅರ್ಚತೀ=ಪಾದಗಳನ್ನು ಪೂಜಿಸುತ್ತ ಅಂಘ್ರೌ=ಪಾದಗಳಲ್ಲಿ ಊಷ್ಮಾಣಂ=ಉಷ್ಣತೆಯನ್ನು ನ ಉಪಲಭೇತ=ಕಾಣಲಿಲ್ಲವೋ

ಯೂಥಭ್ರಷ್ಟಾ=ಹಿಂಡಿನಿಂದ ತಪ್ಪಿಸಿಕೊಂಡ ಮೃಗೀ ಯಥಾ=ಜಿಂಕೆಯಂತೆ ಸಂವಿಗ್ನಹೃದಯಾ ಆಸೀತ್=ಭಯಗೊಂಡ ಮನಸ್ಸುಳ್ಳವಳಾದಳು. ।।೪೬।।

**ಆತ್ಮಾನಂ ಶೋಚತೀ ದೀನಮಬಂಧುರ್ವಿಕ್ಲವಾಽಶ್ರುಭಿಃ ।**
**ಸ್ತನಾವಾಸಿಚ್ಯ ವಿಪಿನೇ ಸುಸ್ವರಂ ಪ್ರರುರೋದ ಸಾ ।।೪೭।।**

ಅಬಂಧುಃ=ಬಂಧುರಹಿತಳಾದ ವಿಕ್ಲವಾ=ಕಷ್ಟಕ್ಕೀಡಾದ ಸಾ=ವೈದರ್ಭಿಯು ದೀನಂ=ದುಃಖಿತಳಾದ ಆತ್ಮಾನಂ=ತನ್ನನ್ನು ಕುರಿತು ಶೋಚತೀ=ಆಲೋಚಿಸುತ್ತ ಪರಿತಪಿಸುತ್ತ ಅಶ್ರುಭಿಃ=ಕಣ್ಣೀರಿನಿಂದ ಸ್ತನೌ ಆಶಿಚ್ಯ=ಕುಚಗಳನ್ನು ತೊಳೆದು ವಿಪಿನೇ=ಅಡವಿಯಲ್ಲಿ ಸುಸ್ವರಂ ರುರೋದ=ಸರಾಗವಾಗಿ (ಅತ್ತಳು) ರೋದನ ಮಾಡಿದಳು. ।।೪೭।।

**ಉತ್ತಿಷ್ಠೋತ್ತಿಷ್ಠ ರಾಜರ್ಷೇ ಇಮಾಮುದಧಿಮೇಖಲಾಮ್ ।**
**ದಸ್ಯುಭ್ಯಃ ಕ್ಷತ್ರಬಂಧುಭ್ಯೋ ಬಿಭ್ಯತೀಂ ಪಾತುಮರ್ಹಸಿ ।।೪೮।।**

ರಾಜರ್ಷೇ=ರಾಜ ಋಷಿಯೇ ! ಉತ್ತಿಷ್ಠ ಉತ್ತಿಷ್ಠ=ಎದ್ದೇಳು ಎದ್ದೇಳು. ದಸ್ಯುಭ್ಯಃ= ಕಳ್ಳರಾದ ಕ್ಷತ್ರಬಂಧುಭ್ಯಃ=ಕ್ಷತ್ರಿಯಾಭಾಸರಿಂದ ಬಿಭ್ಯತೀಂ=ಹೆದರುವ ಉದಧಿಮೇಖಲಾಂ= ಸಮುದ್ರವೇ ವಡ್ಯಾಣವಾಗಿವುಳ್ಳ ಇಮಾಂ=ಪೃಥಿವಿಯನ್ನು ಪಾತುಂ ಅರ್ಹಸಿ=ರಕ್ಷಿಸಲು ಯೋಗ್ಯನಾಗಿರುವಿ. ।।೪೮।।

**ಏವಂ ವಿಲಪತೀ ಬಾಲಾ ವಿಪಿನೇಽನುಗತಾ ಪತಿಮ್ ।**
**ಪತಿತಾ ಪಾದಯೋರ್ಭರ್ತುರ್ಾ ರುದಂತ್ಯಶ್ರೂಣ್ಯವರ್ತಯತ್ ।।೪೯।।**

ಏವಂ=ಈ ರೀತಿ ವಿಲಪತೀ=ಪ್ರಲಾಪ ಮಾಡುತ್ತ ವಿಪಿನೇ=ಅಡವಿಯಲ್ಲಿ ಪತಿಂ ಅನುಗತಾ=ಗಂಡನನ್ನು ಅನುಸರಿಸಿರುವ ಬಾಲಾ=ವೈದರ್ಭಿಯು ಭರ್ತುಃ=ಗಂಡನ ಪಾದಯೋಃ=ಕಾಲುಗಳಿಗೆ ಪತಿತಾ=ಬಿದ್ದವಳಾಗಿ ರುದಂತೀ=ಅಳುತ್ತ ಅಶ್ರೂಣಿ ಅವರ್ತಯತ್=ಕಣ್ಣೀರು ಸುರಸಿದಳು. ।।೪೯।।

**ಚಿತಿಂ ದಾರುಮಯೀಂ ಕೃತ್ವಾ ತಸ್ಯಾಂ ಪತ್ಯುಃ ಕಲೇವರಮ್ ।**
**ಆದೀಪ್ಯ ಚಾನುಮರಣೇ ವಿಲಪಂತೀ ಮನೋ ದಧೇ ।।೫೦।।**

ದಾರುಮಯೀಂ ಚಿತಿಂ ಕೃತ್ವಾ=ಕಟ್ಟಿಗೆಯ ಚಿತೆಯನ್ನು ನಿರ್ಮಿಸಿ ತಸ್ಯಾಂ=ಆ ಚಿತೆಯಲ್ಲಿ ಪತ್ಯುಃ=ಗಂಡನ ಕಲೇವರಂ=ದೇಹವನ್ನು ಆದೀಪ್ಯ=ಸುಟ್ಟು ವಿಲಂಪಂತೀ=ವಿಲಾಪ ಮಾಡುತ್ತ ಅನುಮರಣೇ=ತಾನೂ ಪತಿಯನ್ನು ಅನುಸರಿಸಿ ಸಾಯಲು ಮನಃ ದಧೇ=ಮನಸ್ಸು ಮಾಡಿದಳು. (ಸಹಗಮನಕ್ಕೆ ಮನಸ್ಸು ಮಾಡಿದಳು.)।।೫೦।।

**ತತ್ರ ಪೂರ್ವತರಃ ಕಶ್ಚಿತ್ ಸಖಾ ಬ್ರಾಹ್ಮಣ ಆತ್ಮವಾನ್ ।**
**ಸಾಂತ್ವಯನ್ ವಲ್ಗುನಾ ಸಾಮ್ನಾ ತಾಮಾಹ ರುದತೀಂ ಪ್ರಭೋ॥೫೦॥**

ಪ್ರಭೋ=ರಾಜನೇ ! ತತ್ರ=ಆ ಕಾಲದಲ್ಲಿ (ಸಹಗಮನವಿಷಯದಲ್ಲಿ) ಆತ್ಮವಾನ್=ಮನಸ್ವಿಯಾದ ಬ್ರಾಹ್ಮಣಃ=ಬ್ರಾಹ್ಮಣರೂಪಿಯಾದ ಪೂರ್ವತರಃ=ಅನಾದಿಕಾಲದವನಾದ ಕಶ್ಚಿತ್ ಸಖಾ=ಅಜ್ಞಾತನಾದ ಗೆಳೆಯ ಶ್ರೀಹರಿಯು ರುದತೀಂ=ಅಳುತ್ತಿರುವ ತಾಂ=ವೈದರ್ಭಿಯನ್ನು ಕುರಿತು ವಲ್ಗುನಾ=ಮಂಜುಳವಾದ ಸಾಮ್ನಾ=ಪ್ರಿಯವಾಕ್ಯಗಳಿಂದ ಸಾಂತ್ವಯನ್=ಸಮಾಧಾನಪಡಿಸುತ್ತ ಆಹ=ಹೇಳಿದನು. ॥೫೦॥

**ಕಾ ತ್ವಂ ಕಸ್ಯಾಸಿ ಕೋ ವಾಽಯಂ ಶಯಾನೋ ಯಸ್ಯ ಶೋಚಸಿ ।**
**ಜಾನಾಸಿ ಕಿಂ ಸಖಾಯಂ ಮಾಂ ಯೇನಾಗ್ರೇ ವಿಚಚರ್ಥ ಹ ॥೫೨॥**

ಕಾ ತ್ವಂ=ನೀನು ಯಾವ ಜಾತಿಯವಳು ? ಕಸ್ಯಾಸಿ=ಯಾವ ಪುರುಷನನ್ನು ಆಶ್ರಯಿಸಿರುವಿ ? ಯಸ್ಯ ಶೋಚಸಿ=ಯಾವನ ವಿಷಯದಲ್ಲಿ ದುಃಖಿಸುತ್ತಿರುವಿ ? ಅಯಂ ಶಯಾನಃ=ಮಲಗಿದ ಇವನು ಕಃ=ಯಾರು ? ಅಗ್ರೇ=ಪೂರ್ವಜನ್ಮದಲ್ಲಿ ಯೇನ=ಯಾವ ನನ್ನಿಂದ ವಿಚಚರ್ಥ=ಸಖ್ಯವನ್ನು ಅನುಭವಿಸಿರುವಿಯೋ ತಂ ಮಾಂ ಸಖಾಯಂ ಜಾನಾಸಿ ಕಿಂ=ಆ ಗೆಳೆಯನಾದ ನನ್ನನ್ನು ತಿಳಿದಿರುವೆಯಾ ?॥೫೨॥

**ಅಪಿ ಸ್ಮರಸಿ ಚಾತ್ಮಾನಮವಿಜ್ಞಾತಸಖಂ ಸಖೇ ।**
**ಹಿತ್ವಾ ಮಾಂ ಪದಮನ್ವಿಚ್ಛನ್ ಭೌಮಭೋಗರತೋ ಗತಃ ॥೫೩॥**

ಅಪಿ=ಯದ್ಯಪಿ ನನ್ನನ್ನು ತಿಳಿದಿಲ್ಲ ತಥಾಪಿ=ಆದರೂ ಆತ್ಮಾನಂ=ನಿನ್ನನ್ನು ಅವಿಜ್ಞಾತಸಖಂ=ಅವಿಜ್ಞಾತನೆಂಬ ಗೆಳೆಯನೊಬ್ಬ ನನಗಿದ್ದನು ಎಂದು ಸ್ಮರಸಿ ಕಿಂ=ನೆನಿಸುವಿಯಾ ? (ಜ್ಞಾಪಕವಿದೆಯೇ ?) ಸಖೇ=ಗೆಳೆಯನೇ ! (ಪುಲ್ಲಿಂಗ ಸಂಬೋಧನ ಮಾಡಿದ್ದು ಹಿಂದೆ ಪುರುಷನಾಗಿದ್ದಿ ಎಂಬುದನ್ನು ಜ್ಞಾಪಿಸಲು) ಮಾಂ=ನನ್ನನ್ನು ಹಿತ್ವಾ=ಬಿಟ್ಟು ಭೌಮಭೋಗರತಃ=ವಿಷಯಭೋಗಾಸಕ್ತನಾಗಿ ಪದಂ ಅನ್ವಿಚ್ಛನ್=ಸ್ಥಾನವನ್ನು ಹುಡುಕುತ್ತ ಗತಃ=ಬೇಟೆಗಾಗಿ ವನಕ್ಕೆ ಹೋದಿ. ॥೫೩॥

**ಹಂಸಾವಹಂ ಚ ತ್ವಂ ಚಾರ್ಯ ಸಖಾಯೌ ಮಾನಸಾಯನೌ ।**
**ಅವಾತ್ಸ್ವ ರಮಣೌ ಚೋಭೌ ಸಹಸ್ರಪರಿವತ್ಸರಾನ್ ॥೫೪॥**

ಹೇ ಆರ್ಯ=ಪ್ರಾಜ್ಞನೇ ! ಅಹಂ=ನಾನು ತ್ವಂ ಚ=ನೀನೂ ಸಹ ಹಂಸೌ=ಶುದ್ಧರು. ಸಖಾಯೌ=ಸ್ನೇಹಿತರು. ಮಾನಸಾಯನೌ=ಮಾನಸಸರೋವರದಲ್ಲಿ ಇರುವವರು.

(ಮಾನಸ=ಹೃದಯ.) ಸಹಸ್ರಪರಿವತ್ಸರಾನ್=ಬಹುಕಾಲ ಉಭೌ=ಇಬ್ಬರೂ ರಮಣೌ= ಕ್ರೀಡಿಸುತ್ತ (ಸುಖಿಸುತ್ತ) ಅವಾತ್ಸ್ವ=ವಾಸಿಸಿದೆವು. ।।೫೪।।

**ಸ ತ್ವಂ ವಿಹಾಯ ಮಾಂ ಬಂಧೋ ಗತೋ ಗ್ರಾಮ್ಯಮತಿರ್ಮಹೀಮ್ ।**
**ವಿಚರನ್ ಪದಮದ್ರಾಕ್ಷೀಃ ಕಯಾಚಿನ್ನಿರ್ಮಿತಂ ಸ್ತ್ರಿಯಾ ।।೫೫।।**

ಹೇ ಬಂಧೋ=ಬಂಧುವೇ ! ಸಃ ತ್ವಂ=ಆ ನೀನು ಗ್ರಾಮ್ಯಮತಿಃ=ವಿಷಯಸುಖಪಡುವ ಬುದ್ಧಿವುಳ್ಳವನಾಗಿ ಮಾಂ ವಿಹಾಯ=ನನ್ನನ್ನು ಬಿಟ್ಟು ಮಹೀಂ ವಿಚರನ್=ಭೂಮಂಡಲವನ್ನು ಸಂಚರಿಸುತ್ತ ಕಯಾಚಿತ್ ಸ್ತ್ರಿಯಾ ನಿರ್ಮಿತಂ=ಯಾವಳೋ ಒಬ್ಬ ಸ್ತ್ರೀಯಿಂದ ನಿರ್ಮಿತವಾದ (ಪ್ರಕೃತಿ) ಪದಂ=ಸ್ಥಾನವನ್ನು ಅದ್ರಾಕ್ಷೀಃ=ನೋಡಿದಿ. ।।೫೫ ।।

**ಪಂಚಾರಾಮಂ ನವದ್ವಾರಮೇಕಪಾಲಂ ತ್ರಿಕೋಷ್ಠಕಮ್ ।**
**ಷಟ್‌ಕಲಂ ಪಂಚವಿಪಣಂ ಪಂಚಪ್ರಕೃತಿ ಸ್ತ್ರೀಧವಮ್ ।।೫೬।।**

ಪಂಚಾರಾಮಂ=ಐದು ಉಪವನಗಳುಳ್ಳ ನವದ್ವಾರಂ=ಒಂಭತ್ತು ದ್ವಾರಗಳುಳ್ಳ ಏಕಪಾಲಂ=ಒಬ್ಬ ಪಾಲಕನುಳ್ಳ ತ್ರಿಕೋಷ್ಠಕಂ=ಮೂರು ಕೊಠಡಿಗಳುಳ್ಳ ಷಟ್‌ಕಲಂ=ಆರು ಕಲಾಗಳುಳ್ಳ ಪಂಚವಿಪಣಂ=ಐದು ಅಂಗಡಿಗಳುಳ್ಳ ಪಂಚಪ್ರಕೃತಿ=ಐದು ಪ್ರಕೃತಿಗಳುಳ್ಳ ಸ್ತ್ರೀಧವಂ=ಸ್ತ್ರೀಯೇ ಪತಿಯಾಗಿವುಳ್ಳ (ಯಜಮಾನಿ)।।೫೬।।

ಈ (೫೬) ಶ್ಲೋಕವನ್ನು ತಾವೇ ಅಧ್ಯಾತ್ಮಪಕ್ಷದಲ್ಲಿ ವ್ಯಾಖ್ಯಾನಿಸುವರು ಮೂಲಕಾರರು -

**ಪಂಚೇಂದ್ರಿಯಾರ್ಥಾ ಆರಾಮಾ ದ್ವಾರೋ ಘ್ರಾಣಾದಯಃ ಪ್ರಭೋ ।**
**ತೇಜೋಬನ್ನಾನಿ ಕೋಷ್ಠಾನಿ ಗೋಲಕೇಂದ್ರಿಯಸಂಗ್ರಹಃ ।।೫೭।।**

ಪಂಚೇಂದ್ರಿಯಾರ್ಥಾಃ=ಐದು ಇಂದ್ರಿಯಗಳ ವಿಷಯಗಳು (ಶ್ರೋತ್ರ ತ್ವಕ್ ಚಕ್ಷು ಜಿಹ್ವಾ ಘ್ರಾಣ) (ಶಬ್ದ ಸ್ಪರ್ಶ ರೂಪ ರಸ ಗಂಧ) ಆರಾಮಾಃ=ಉಪವನಗಳು (ಭೋಗಕ್ಕಾಗಿ ಇರುವುದು ಎಂಬ ಸಾಮ್ಯವಿರುವುದರಿಂದ) ಘ್ರಾಣಾದಯಃ ದ್ವಾರಃ=ಇಂದ್ರಿಯಛಿದ್ರಗಳು ಒಂಭತ್ತು ದ್ವಾರಗಳು ( ಎರಡು ಕಣ್ಣು ಎರಡು ಮೂಗಿನ ಹೊರಳಿ, ಎರಡು ಕಿವಿ, ಒಂದು ಬಾಯಿ, ಗುದ, ಉಪಸ್ಥ) ತೇಜೋಬನ್ನಾನಿ=ಪೃಥಿವೀ ಅಪ್ ತೇಜ ಎಂಬ ಭೂತಗಳು ಕೋಷ್ಠಾನಿ=ಕೋಷ್ಠಗಳು (ಶರೀರದ ಭಾಗಗಳು) ಗೋಲಕೇಂದ್ರಿಯಸಂಗ್ರಹಃ= ಇಂದ್ರಿಯಸಂಗ್ರಾಹಕಗಳಾದ ಗೋಲಕಗಳೇ ಷಟ್ ಕಲೆಗಳು.

**ಭಾಗವತ ತಾತ್ಪರ್ಯ -**

ಮೂಲದ ಗೋಲಕೇಂದ್ರಿಯಸಂಗ್ರಹ ಎಂಬ ಶಬ್ದದಿಂದ ಇಂದ್ರಿಯಸಂಗ್ರಹ ಸ್ವೀಕರಿಸಬೇಕೆಂದು ತೋರುವುದಿಲ್ಲ. ಆ ಕಾರಣ ಅರ್ಥ ಹೇಳುವರು -

**ಇಂದ್ರಿಯಾಣಿ ಯತ್ರ ಸಂಗೃಹ್ಯಂತೇ ಸ ಗೋಲಕೇಂದ್ರಿಯಸಂಗ್ರಹಃ ॥**

ಜ್ಞಾನೇಂದ್ರಿಯಗಳು ಎಲ್ಲಿ ಸಂಗ್ರಹಿಸಲ್ಪಡುವವೋ ಆ ಗೋಲಕವು ಇಂದ್ರಿಯಸಂಗ್ರಹ ಶಬ್ದದಿಂದ ವಿವಕ್ಷಿತವು ಎಂದು ಭಾವ. (ಸಮಸ್ತಪದವಿದ್ದಾಗ ಗೋಲಕಶ್ಚಾಸೌ ಇಂದ್ರಿಯಸಂಗ್ರಹಶ್ಚ ಎಂದು ಕರ್ಮಧಾರಯ.)॥೫೭॥

**ವಿಪಣಸ್ತು ಕ್ರಿಯಾಶಕ್ತಿರ್ಭೂತಪ್ರಕೃತಿರವ್ಯಯಾ ।**
**ಶಕ್ತ್ಯಧೀಶಃ ಪುಮಾನತ್ರ ಪ್ರವಿಷ್ಟೋ ನಾವಬುಧ್ಯತೇ ॥೫೮॥**

ಕ್ರಿಯಾಶಕ್ತಿಃ=ಕಾರ್ಯ ಮಾಡುವ ಶಕ್ತಿಯುಳ್ಳ ಕರ್ಮೇಂದ್ರಿಯಸಮೂಹವು ವಿಪಣಃ=ಅಂಗಡಿಯು (ಮಾರಾಟವು) ಭೂತಪ್ರಕೃತಿಃ=ಭೂತಗಳಿಗೆ ಉಪಾದನವಾದುದು. ಅವ್ಯಯಾ=ನಾಶರಹಿತವಾದುದು. ಶಕ್ತ್ಯಧೀಶಃ=ಬುದ್ಧಿಯೇ ನಿಯಾಮಕನಾಗಿವುಳ್ಳವನು ಪುಮಾನ್=ಪುರುಷನು ಅತ್ರ=ಶರೀರವೆಂಬ ಪುರದಲ್ಲಿ ಪ್ರವಿಷ್ಟಃ ಅಪಿ=ಪ್ರವೇಶ ಮಾಡಿದ್ದರೂ ನ ಅವಬುಧ್ಯತೇ=ತಾನು ಪತಿಯೆಂದು ತಿಳಿಯಲಾರನು. ಬುದ್ಧಿಯ ಅಧೀನನಾದ್ದರಿಂದ ಬುದ್ಧಿಯೇ ಪತಿಯೆಂದು ತಿಳಿಯುವುದು. ಕಾರಣ ಸ್ತ್ರೀಧವಂ ಎಂದಿದ್ದಾರೆ. ಏಕಪಾಲಃ ಎಂಬುದಕ್ಕೆ ಪ್ರಾಣನೇ ಪಾಲಕನಾಗಿವುಳ್ಳ ಎಂಬುದು ಸ್ಪಷ್ಟವಾದ್ದರಿಂದ ಹೇಳಲಿಲ್ಲ. (ಯದ್ಯಪಿ ಇದನ್ನು ಮುಂದಿನ ಅಧ್ಯಾಯದಲ್ಲಿ ಹೇಳಬೇಕು.) ಇದರ ಜ್ಞಾನ ವೈರಾಗ್ಯ ಜನಕವಾದ್ದರಿಂದ ಪ್ರಾಸಂಗಿಕವಾಗಿ ಇಲ್ಲಿಯೇ ಹೇಳಿರುವರು. ॥೫೮॥

**ತಸ್ಮಿಂಸ್ತ್ವಂ ರಾಮಯಾ ಸ್ಪೃಷ್ಟೋ ರಮಮಾಣೋ ಹತಸ್ಮೃತಿಃ ।**
**ತತ್ಸಂಗಾದೀದೃಶೀಂ ಪ್ರಾಪ್ತೋ ದಶಾಂ ಪಾಪೀಯಸೀಂ ವಿಭೋ ॥೫೯॥**

ವಿಭೋ=ರಾಜನೇ ! ತಸ್ಮಿನ್=ಆ ಪುರದಲ್ಲಿ ರಾಮಯಾ=ಸುಂದರಸ್ತ್ರೀಯಿಂದ ಸ್ಪೃಷ್ಟಃ=ಸ್ಪರ್ಶಿಸಲ್ಪಟ್ಟು (ಬುದ್ಧಿಯಿಂದ ಅಭಿಭೂತನಾಗಿ) ರಮಮಾಣಃ=ಕ್ರೀಡಿಸುತ್ತ ಹತಸ್ಮೃತಿಃ=ಶಾಸ್ತ್ರಜ್ಞಾನರಹಿತನಾಗಿ ತತ್ಸಂಗಾತ್=ಸ್ತ್ರೀಸಂಗದಿಂದ ಈದೃಶೀಂ=ಇಂತಹ ಪಾಪೀಯಸೀಂ=ಪಾಪಿಷ್ಠವಾದ ದಶಾಂ ಪ್ರಾಪ್ತಃ=ಅವಸ್ಥೆಯನ್ನು ಪಡೆದಿರುವಿ.

ಸ್ವಾಭಾವಿಕಸ್ಥಿತಿಯನ್ನು ಹೇಳಲು ಹೇಳುವರು -

**ನ ತ್ವಂ ವಿದರ್ಭದುಹಿತಾ ನಾಯಂ ವೀರ ಸುಹೃತ್ ತವ ।**
**ನ ಪತಿಸ್ತ್ವಂ ಪುರಂಜನ್ಯಾ ರುದ್ಧೋ ನವಮುಖೇ ಯಯಾ ॥೬೦॥**

(ಮಾನಸ=ಹೃದಯ.) ಸಹಸ್ರಪರಿವತ್ಸರಾನ್=ಬಹುಕಾಲ ಉಭೌ=ಇಬ್ಬರೂ ರಮಣೌ= ಕ್ರೀಡಿಸುತ್ತ (ಸುಖಿಸುತ್ತ) ಅವಾತ್ಸ್ವ=ವಾಸಿಸಿದೆವು. ।।೫೪।।

**ಸ ತ್ವಂ ವಿಹಾಯ ಮಾಂ ಬಂಧೋ ಗತೋ ಗ್ರಾಮ್ಯಮತಿರ್ಮಹೀಮ್ ।**
**ವಿಚರನ್ ಪದಮದ್ರಾಕ್ಷೀಃ ಕಯಾಚಿನ್ನಿರ್ಮಿತಂ ಸ್ತ್ರಿಯಾ ।।೫೫।।**

ಹೇ ಬಂಧೋ=ಬಂಧುವೇ ! ಸಃ ತ್ವಂ=ಆ ನೀನು ಗ್ರಾಮ್ಯಮತಿಃ=ವಿಷಯಸುಖಪಡುವ ಬುದ್ಧಿವುಳ್ಳವನಾಗಿ ಮಾಂ ವಿಹಾಯ=ನನ್ನನ್ನು ಬಿಟ್ಟು ಮಹೀಂ ವಿಚರನ್=ಭೂಮಂಡಲವನ್ನು ಸಂಚರಿಸುತ್ತ ಕಯಾಚಿತ್ ಸ್ತ್ರಿಯಾ ನಿರ್ಮಿತಂ=ಯಾವಳೋ ಒಬ್ಬ ಸ್ತ್ರೀಯಿಂದ ನಿರ್ಮಿತವಾದ (ಪ್ರಕೃತಿ) ಪದಂ=ಸ್ಥಾನವನ್ನು ಅದ್ರಾಕ್ಷೀಃ=ನೋಡಿದಿ. ।।೫೫ ।।

**ಪಂಚಾರಾಮಂ ನವದ್ವಾರಮೇಕಪಾಲಂ ತ್ರಿಕೋಷ್ಠಕಮ್ ।**
**ಷಟ್‌ಕಲಂ ಪಂಚವಿಪಣಂ ಪಂಚಪ್ರಕೃತಿ ಸ್ತ್ರೀಧವಮ್ ।।೫೬।।**

ಪಂಚಾರಾಮಂ=ಐದು ಉಪವನಗಳುಳ್ಳ ನವದ್ವಾರಂ=ಒಂಭತ್ತು ದ್ವಾರಗಳುಳ್ಳ ಏಕಪಾಲಂ=ಒಬ್ಬ ಪಾಲಕನುಳ್ಳ ತ್ರಿಕೋಷ್ಠಕಂ=ಮೂರು ಕೊಠಡಿಗಳುಳ್ಳ ಷಟ್‌ಕಲಂ=ಆರು ಕಲಾಗಳುಳ್ಳ ಪಂಚವಿಪಣಂ=ಐದು ಅಂಗಡಿಗಳುಳ್ಳ ಪಂಚಪ್ರಕೃತಿ=ಐದು ಪ್ರಕೃತಿಗಳುಳ್ಳ ಸ್ತ್ರೀಧವಂ=ಸ್ತ್ರೀಯೇ ಪತಿಯಾಗಿವುಳ್ಳ (ಯಜಮಾನಿ)।।೫೬।।

ಈ (೫೬) ಶ್ಲೋಕವನ್ನು ತಾವೇ ಅಧ್ಯಾತ್ಮಪಕ್ಷದಲ್ಲಿ ವ್ಯಾಖ್ಯಾನಿಸುವರು ಮೂಲಕಾರರು -

**ಪಂಚೇಂದ್ರಿಯಾರ್ಥಾ ಆರಾಮಾ ದ್ವಾರೋ ಘ್ರಾಣಾದಯಃ ಪ್ರಭೋ ।**
**ತೇಜೋಬನ್ನಾನಿ ಕೋಷ್ಠಾನಿ ಗೋಲಕೇಂದ್ರಿಯಸಂಗ್ರಹಃ ।।೫೭।।**

ಪಂಚೇಂದ್ರಿಯಾರ್ಥಾಃ=ಐದು ಇಂದ್ರಿಯಗಳ ವಿಷಯಗಳು (ಶ್ರೋತ್ರ ತ್ವಕ್ ಚಕ್ಷು ಜಿಹ್ವಾ ಘ್ರಾಣ) (ಶಬ್ದ ಸ್ಪರ್ಶ ರೂಪ ರಸ ಗಂಧ) ಆರಾಮಾಃ=ಉಪವನಗಳು (ಭೋಗಕ್ಕಾಗಿ ಇರುವುದು ಎಂಬ ಸಾಮ್ಯವಿರುವುದರಿಂದ) ಘ್ರಾಣಾದಯಃ ದ್ವಾರಃ=ಇಂದ್ರಿಯಛಿದ್ರಗಳು ಒಂಭತ್ತು ದ್ವಾರಗಳು ( ಎರಡು ಕಣ್ಣು ಎರಡು ಮೂಗಿನ ಹೊರಳಿ, ಎರಡು ಕಿವಿ, ಒಂದು ಬಾಯಿ, ಗುದ, ಉಪಸ್ಥ) ತೇಜೋಬನ್ನಾನಿ=ಪೃಥಿವೀ ಅಪ್ ತೇಜ ಎಂಬ ಭೂತಗಳು ಕೋಷ್ಠಾನಿ=ಕೋಷ್ಠಗಳು (ಶರೀರದ ಭಾಗಗಳು) ಗೋಲಕೇಂದ್ರಿಯಸಂಗ್ರಹಃ= ಇಂದ್ರಿಯಸಂಗ್ರಾಹಕಗಳಾದ ಗೋಲಕಗಳೇ ಷಟ್ ಕಲೆಗಳು.

**ಭಾಗವತ ತಾತ್ಪರ್ಯ -**

ಮೂಲದ ಗೋಲಕೇಂದ್ರಿಯಸಂಗ್ರಹ ಎಂಬ ಶಬ್ದದಿಂದ ಇಂದ್ರಿಯಸಂಗ್ರಹ ಸ್ವೀಕರಿಸಬೇಕೆಂದು ತೋರುವುದಿಲ್ಲ. ಆ ಕಾರಣ ಅರ್ಥ ಹೇಳುವರು -

**ಇಂದ್ರಿಯಾಣಿ ಯತ್ರ ಸಂಗೃಹ್ಯಂತೇ ಸ ಗೋಲಕೇಂದ್ರಿಯಸಂಗ್ರಹಃ ||**

ಜ್ಞಾನೇಂದ್ರಿಯಗಳು ಎಲ್ಲಿ ಸಂಗ್ರಹಿಸಲ್ಪಡುವವೋ ಆ ಗೋಲಕವು ಇಂದ್ರಿಯಸಂಗ್ರಹ ಶಬ್ದದಿಂದ ವಿವಕ್ಷಿತವು ಎಂದು ಭಾವ. (ಸಮಸ್ತಪದವಿದ್ದಾಗ ಗೋಲಕಶ್ಚಾಸೌ ಇಂದ್ರಿಯಸಂಗ್ರಹಶ್ಚ ಎಂದು ಕರ್ಮಧಾರಯ.)||೫೭||

**ವಿಪಣಸ್ತು ಕ್ರಿಯಾಶಕ್ತಿರ್ಭೂತಪ್ರಕೃತಿರವ್ಯಯಾ |**
**ಶಕ್ತ್ಯಧೀಶಃ ಪುಮಾನತ್ರ ಪ್ರವಿಷ್ಟೋ ನಾವಬುದ್ಧ್ಯತೇ ||೫೮||**

ಕ್ರಿಯಾಶಕ್ತಿಃ=ಕಾರ್ಯ ಮಾಡುವ ಶಕ್ತಿಯುಳ್ಳ ಕರ್ಮೇಂದ್ರಿಯಸಮೂಹವು ವಿಪಣಃ=ಅಂಗಡಿಯು (ಮಾರಾಟವು) ಭೂತಪ್ರಕೃತಿಃ=ಭೂತಗಳಿಗೆ ಉಪಾದನವಾದುದು. ಅವ್ಯಯಾ=ನಾಶರಹಿತವಾದುದು. ಶಕ್ತ್ಯಧೀಶಃ=ಬುದ್ಧಿಯೇ ನಿಯಾಮಕನಾಗಿವುಳ್ಳವನು ಪುಮಾನ್=ಪುರುಷನು ಅತ್ರ=ಶರೀರವೆಂಬ ಪುರದಲ್ಲಿ ಪ್ರವಿಷ್ಟಃ ಅಪಿ=ಪ್ರವೇಶ ಮಾಡಿದ್ದರೂ ನ ಅವಬುಧ್ಯತೇ=ತಾನು ಪತಿಯೆಂದು ತಿಳಿಯಲಾರನು. ಬುದ್ಧಿಯ ಅಧೀನನಾದ್ದರಿಂದ ಬುದ್ಧಿಯೇ ಪತಿಯೆಂದು ತಿಳಿಯುವುದು. ಕಾರಣ ಸ್ತ್ರೀಧವಂ ಎಂದಿದ್ದಾರೆ. ಏಕಪಾಲಃ ಎಂಬುದಕ್ಕೆ ಪ್ರಾಣನೇ ಪಾಲಕನಾಗಿವುಳ್ಳ ಎಂಬುದು ಸ್ಪಷ್ಟವಾದ್ದರಿಂದ ಹೇಳಲಿಲ್ಲ. (ಯದ್ಯಪಿ ಇದನ್ನು ಮುಂದಿನ ಅಧ್ಯಾಯದಲ್ಲಿ ಹೇಳಬೇಕು.) ಇದರ ಜ್ಞಾನ ವೈರಾಗ್ಯ ಜನಕವಾದ್ದರಿಂದ ಪ್ರಾಸಂಗಿಕವಾಗಿ ಇಲ್ಲಿಯೇ ಹೇಳಿರುವರು. ||೫೮||

**ತಸ್ಮಿಂಸ್ತ್ವಂ ರಾಮಯಾ ಸ್ಪೃಷ್ಟೋ ರಮಮಾಣೋ ಹತಸ್ಮೃತಿಃ |**
**ತತ್ಸಂಗಾದೀದೃಶೀಂ ಪ್ರಾಪ್ತೋ ದಶಾಂ ಪಾಪೀಯಸೀಂ ವಿಭೋ ||೫೯||**

ವಿಭೋ=ರಾಜನೇ ! ತಸ್ಮಿನ್=ಆ ಪುರದಲ್ಲಿ ರಾಮಯಾ=ಸುಂದರಸ್ತ್ರೀಯಿಂದ ಸ್ಪೃಷ್ಟಃ=ಸ್ಪರ್ಶಿಸಲ್ಪಟ್ಟು (ಬುದ್ಧಿಯಿಂದ ಅಭಿಭೂತನಾಗಿ) ರಮಮಾಣಃ=ಕ್ರೀಡಿಸುತ್ತ ಹತಸ್ಮೃತಿಃ=ಶಾಸ್ತ್ರಜ್ಞಾನರಹಿತನಾಗಿ ತತ್ಸಂಗಾತ್=ಸ್ತ್ರೀಸಂಗದಿಂದ ಈದೃಶೀಂ=ಇಂತಹ ಪಾಪೀಯಸೀಂ=ಪಾಪಿಷ್ಠವಾದ ದಶಾಂ ಪ್ರಾಪ್ತಃ=ಅವಸ್ಥೆಯನ್ನು ಪಡೆದಿರುವಿ.

ಸ್ವಾಭಾವಿಕಸ್ಥಿತಿಯನ್ನು ಹೇಳಲು ಹೇಳುವರು -

**ನ ತ್ವಂ ವಿದರ್ಭದುಹಿತಾ ನಾಯಂ ವೀರ ಸುಹೃತ್ ತವ |**
**ನ ಪತಿಸ್ತ್ವಂ ಪುರಂಜನ್ಯಾ ರುದ್ಧೋ ನವಮುಖೇ ಯಯಾ ||೬೦||**

ತ್ವಂ=ನೀನು ವಿದರ್ಭದುಹಿತಾ ನ=ವಿದರ್ಭರಾಜನ ಮಗಳಲ್ಲ ಅಯಂ ವೀರಃ=ಈ ಮಲಯಧ್ವಜನು ತವ ಸುಹೃತ್ ನ=ನಿನ್ನ ಸ್ನೇಹಿತನಲ್ಲ ತ್ವಂ=ನೀನು ಪುರಂಜನ್ಯಾಃ= ಪುರಂಜನಿಯ ಪತಿಃ=ಗಂಡನೂ ನ=ಅಲ್ಲ ಯಯಾ=ಯಾವಳಿಂದ ನವಮುಖೇ= ನವದ್ವಾರವುಳ್ಳ ಪುರದಲ್ಲಿ ರುದ್ಧಃ=ಬಂಧಿಸಲ್ಪಟ್ಟಿಯೋ ಅವಳ ಪತಿಯಲ್ಲ ಎಂದು ಅನ್ವಯ.

**ಮಾಯಾ ಹ್ಯೇಷಾ ಮಯಾ ಸೃಷ್ಟಾ ಯತ್ ಪುಮಾಂಸಂ ಸ್ತ್ರಿಯಂ ಪತಿಮ್ ।**
**ಮನ್ಯಸೇ ನೋಭಯಂ ಯದ್ ವೈ ಹಂಸಂ ಪಶ್ಯಾತ್ಮನೋ ಗತಿಮ್ ॥೬೧॥**

ಯತ್=ಯಾವುದನ್ನು ಪುಮಾಂಸಂ=ಪೂರ್ವಜನ್ಮದಲ್ಲಿ ಪುರುಷನೆಂದು ಸ್ತ್ರಿಯಂ=ಈಗ ಸ್ತ್ರೀದೇಹ ಬಂದಿದೆಯೆಂದು ಮನ್ಯಸೇ=ತಿಳಿಯುವಿಯೋ ಅದು ಮಾಯಾ=ಪ್ರಕೃತಿಯು (ಮಯಾ ಬಂಧಕತಯಾ ಸೃಷ್ಟತ್ವಾತ್, ನನ್ನಿಂದ ಬಂಧಕವಾಗಿ ಸೃಷ್ಟಿಸಿದ್ದರಿಂದ ಮಾಯಾ ಎಂದು ಕರೆಸಿಕೊಳ್ಳುವದು.) ಏಷಾ=ಇದು ಮಯಾ ಸೃಷ್ಟಾ ಮಾಯಾ, ಉಭಯಂ ನ=ಮೊದಲಿನ ಪುಂದೇಹವಾಗಲಿ ಈಗಿನ ಸ್ತ್ರೀದೇಹವಾಗಲಿ ಎರಡೂ ಸ್ವಾಭಾವಿಕವಲ್ಲ ಪ್ರಕೃತಿಬಂಧನಿಮಿತ್ತವಾದುದು ಎಂದರ್ಥ. ಏಕೆಂದರೆ ಹಂಸಂ ಪಶ್ಯ=ನಿರ್ಮಲವಾದ ಸ್ವರೂಪವನ್ನು ನೋಡು. ಆತ್ಮನಃ=ಪರಮಾತ್ಮನ ಗತಿಂ=ಸ್ಥಿತಿಯನ್ನು ಪಶ್ಯ=ನೋಡು॥೬೧॥

ಪರಮಾತ್ಮನ ಸ್ಥಿತಿಯನ್ನು ಹೇಳುವರು -

**ಅಹಂ ಭವಾನ್ನ ಚಾನ್ಯಸ್ತ್ವಂ ತ್ವಮೇವಾಹಂ ವಿಚಕ್ಷ್ವ ಭೋ ॥**
**ನ ನೌ ಪಶ್ಯಂತಿ ಕವಯಶ್ಛಿದ್ರಂ ಜಾತು ಮನಾಗಪಿ ॥೬೨॥**

ಭೋ=ಎಲೋ ಜೀವನೇ ! ಭವಾನ್=ನೀನು ಅಹಂ=ನಿನ್ನಿಂದ ಅನ್ಯಃ ನ=ಭಿನ್ನನಲ್ಲ ಅಂದರೆ ನನ್ನ ಅಧೀನನೇ. (ನನ್ನನ್ನು ಬಿಟ್ಟಿಲ್ಲ) ತ್ವಂ=ನೀನು ಅಹಂ ಚ=ನನ್ನ ಸದೃಶನಾಗಿರುವಿ ಎಂದು ವಿಚಕ್ಷ್ವ= ತಿಳಿ. ಕವಯಃ=ಜ್ಞಾನಿಗಳು ನೌ=ನಮ್ಮಲ್ಲಿ ಜಾತು=ಯಾವಕಾಲದಲ್ಲಿಯೂ ಮನಾಗ್‌ಪಿ=ಸ್ವಲ್ಪವೂ ಛಿದ್ರಂ=ಅವಕಾಶವನ್ನು ನಿಯಮ್ಯನಿಯಾಮಕಶೂನ್ಯತೆಯನ್ನು ನ ಪಶ್ಯಂತಿ=ತಿಳಿಯಲಾರರು. ಸರ್ವದಾ ಜೀವಸತ್ತಾಪ್ರದನೆಂದು ತಿಳಿಯುವರು ಎಂದರ್ಥ.

**ಭಾಗವತ ತಾತ್ಪರ್ಯ -**

ಈ ಶ್ಲೋಕದಲ್ಲಿ ಅಭೇದ ಹೇಳಿದ್ದಕ್ಕೆ ಗತಿ ಹೇಳುವರು -

ಜೀವಸತ್ತಾಪ್ರದತ್ವಾಚ್ಚ ಸದೃಶತ್ವಾಚ್ಚ ಕೇಶವಃ ।
ಕಥ್ಯತೇ ತದಭೇದೇನ ನ ತು ಜೀವಸ್ವರೂಪತಃ ॥ ಇತಿ ಚ ॥

ಜೀವರ ಸತ್ತೆಗೆ ಕಾರಣನಾದ್ದರಿಂದ ಜೀವನಂತಿರುವುದರಿಂದ ಜೀವಾಭಿನ್ನನೆನ್ನುವರು. ಹೊರತು ಜೀವನೇ ಆದುದರಿಂದಲ್ಲ ಎಂದು ಪ್ರಮಾಣ ಅರ್ಥ. ||೬೨||

ಹಿಂದಿನ ಶ್ಲೋಕದಲ್ಲಿ ತದಧಿನತ್ವೇ ಸತಿ ತತ್ಸದೃಶತ್ವರೂಪ ಪ್ರತಿಬಿಂಬತ್ವ ಹೇಳಿದಂತಾಯಿತು. ಆದರ ಮೇಲೆ ಶಂಕಾ ಇದು -

ಜೀವನು ಭಗವಂತನ ಪ್ರತಿಬಿಂಬ ಎಂದಾದ ಮೇಲೆ ಬಿಂಬದಲ್ಲಿ ಇಲ್ಲದ ದುಃಖಾದಿಗಳು ಪ್ರತಿಬಿಂಬನಲ್ಲಿ ಹೇಗೆ ಬರುವವು ? ಮತ್ತು ಒಬ್ಬ ಪರಮಾತ್ಮನ ಪ್ರತಿಬಿಂಬರಾದ ಜೀವರಲ್ಲಿ ಪರಸ್ಪರ ವೈಚಿತ್ರ್ಯ ಹೇಗೆ ? ಎಂಬ ಎರಡು ಶಂಕೆಗಳನ್ನು ದೃಷ್ಟಾಂತ ಕೊಡುವ ಮೂಲಕ ಪರಿಹರಿಸುವರು -

**ಯಥಾ ಪುರುಷ ಆತ್ಮಾನಮೇಕಮಾದರ್ಶಚಕ್ಷುಷೋಃ ।**
**ದ್ವಿಧಾಭೂತಮೀವೇಕ್ಷೇತ ತಥೈವಾಂತರಮಾವಯೋಃ ||೬೩||**

ಯಥಾ=ಹೇಗೆ ಏಕಂ=ಒಂದೇ ವಿಧನಾದ ಆತ್ಮಾನಂ=ತನ್ನನ್ನು ಪುರುಷಃ=ಮನುಷ್ಯನು ಆದರ್ಶಚಕ್ಷುಷೋಃ=ಕನ್ನಡಿ ಮತ್ತು ಕಣ್ಣುಗಳಲ್ಲಿ ದ್ವಿಧಾ ಭೂತಂ=ವಿಶದೃಶವಾಗಿ ಮಾಲಿನ್ಯದಿಂದ ಕೂಡಿದವನನ್ನಾಗಿ ಈಕ್ಷೇತ=ನೋಡುವನೋ ತಥೈವ=ಹಾಗೆಯೇ ಆವಯೋಃ=ನಮ್ಮಿಬ್ಬರಿಗೆ ಅಂತರಂ=ವೈಸಾದೃಶ್ಯವನ್ನು ಈಕ್ಷೇತ=ನೋಡುವನು. ಅಂದರೆ ಈಶ್ವರಪ್ರತಿಬಿಂಬನಾದ ಜೀವನಿಗೆ ದುಃಖಾದಿಗಳು ದೇಹಾದಿ ಉಪಾಧಿನಿಮಿತ್ತಕವಾದುದು ಎಂದು ಮೊದಲನೇ ಪ್ರಶ್ನೆಗೆ ಉತ್ತರ. ಪುರುಷಃ=ಬಿಂಬನಾದ ಜೀವನು ಆದರ್ಶೇ=ಕನ್ನಡಿಯಲ್ಲಿ ಚಕ್ಷುಷಿ=ಇನ್ನೊಬ್ಬರ ಕಣ್ಣಲ್ಲಿ ಪ್ರತಿಬಿಂಬಿತನಾದ ಆತ್ಮಾನಂ=ತನ್ನನ್ನು ದ್ವಿಧಾ ಭೂತಂ ಈಕ್ಷತೇ=ಪರಸ್ಪರ ವಿಲಕ್ಷಣವಾಗಿ ಕಾಣುವನು. ಅಂದರೆ ಒಂದೇ ಜೀವನ ಪ್ರತಿಬಿಂಬ ಕಣ್ಣಲ್ಲಿ ಕನ್ನಡಿಯಲ್ಲಿ ಬೇರೆ ಕಂಡಂತೆ ಉಪಾಧಿಬೇಧದಿಂದ ಪರಮಾತ್ಮನ ಪ್ರತಿಬಿಂಬರಾದ ಜೀವರಲ್ಲಿ ಪರಸ್ಪರ ವೈಚಿತ್ರ ಯುಕ್ತವಾದುದು ಎಂದು ಭಾವ. ||೬೩||

**ಏವಂ ಸ ಮಾನಸೋ ಹಂಸೌ ಹಂಸೇನ ಪ್ರತಿಬೋಧಿತಃ ।**
**ಸ್ವಸ್ಥಸ್ತದ್ವ್ಯಭಿಚಾರೇಣ ನಷ್ಟಾಮಾಪ ಪುನಃ ಸ್ಮೃತಿಮ್ ||೬೪||**

ಏವಂ=ಈ ರೀತಿಯಾಗಿ ಮಾನಸಃ ಹಂಸಃ=ಮಾನಸಹಂಸಸದೃಶನಾದ ಪುರಂಜನನು ಹಂಸೇನ=ನಿರ್ಮಲನಾದ ಶ್ರೀಹರಿಯಿಂದ ಪ್ರತಿಬೋಧಿತಃ=ಉಪದೇಶಿಸಲ್ಪಟ್ಟು ಸ್ವಸ್ಥಃ=ಸಮಾಧಾನಗೊಂಡು ತದ್ವ್ಯಭಿಚಾರೇಣ=ಪರಮಾತ್ಮನ ವಿಯೋಗದಿಂದ ನಷ್ಟಾಂ=ತಿರೋಹಿತವಾದ ಸ್ಮೃತಿಂ=ಸ್ಮರಣವನ್ನು ಪುನಃ ಆಪ=ಮತ್ತೆ ಪಡೆದನು. ||೬೪||

**ಬರ್ಹಿಷ್ಮನ್ನೇತದಧ್ಯಾತ್ಮಂ ಪಾರೋಕ್ಷ್ಯೇಣ ಪ್ರದರ್ಶಿತಮ್ ।**
**ಯತ್ ಪರೋಕ್ಷಪ್ರಿಯೋ ದೇವೋ ಭಗವಾನ್ ವಿಶ್ವಭಾವನಃ ॥೬೫॥**

॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ ಅಷ್ಟಾವಿಂಶೋಽಧ್ಯಾಯಃ ॥

ಯತ್=ಯಾವ ಕಾರಣ ವಿಶ್ವಭಾವನಃ=ಜಗದುತ್ಪಾದಕನಾದ ಭಗವಾನ್ ದೇವಃ=ಐಶ್ವರ್ಯಶಾಲಿಯಾದ ಕ್ರೀಡಾದಿಗುಣವಿಶಿಷ್ಟನಾದ ಶ್ರೀಹರಿಯು ಪರೋಕ್ಷಪ್ರಿಯಃ=ಪರೋಕ್ಷವಾಗಿ ಉಪದೇಶ ಮಾಡುವುದಲ್ಲಿ ಪ್ರಿಯನು. (ಪ್ರತ್ಯಕ್ಷವಾಗಿ ಹೇಳಿದರೆ ಅಸುರರಿಗೂ ಜ್ಞಾನ ಬರುವ ಪ್ರಸಂಗವಿರುವುದರಿಂದ ಭಗವಂತನಿಗೆ ಪ್ರಿಯವಲ್ಲ.)

ಆದ್ದರಿಂದ ಬರ್ಹಿಷ್ಮನ್=ಪ್ರಾಚೀನಬರ್ಹಿಯೇ ! ಅಧ್ಯಾತ್ಮಂ=ಜೀವವಿಷಯಕವಾದ ಸಂಸಾರದ ಸ್ವರೂಪವು ಪಾರೋಕ್ಷ್ಯೇಣ=ರಾಜನ ಕಥೆ ಹೇಳುವ ನೆಪದಿಂದ ಪ್ರದರ್ಶಿತಂ=ತಿಳಿಸಲ್ಪಟ್ಟಿತು. ॥೬೫॥

॥ ಇಲ್ಲಿಗೆ ಇಪ್ಪತ್ತೆಂಟನೇ ಅಧ್ಯಾಯವು ಮುಗಿಯಿತು ॥



## ಅಥ ಏಕೋನತ್ರಿಂಶೋऽಧ್ಯಾಯಃ

ಶ್ರೀಹರಿಭಕ್ತಿಯಿಂದುಂಟಾದ ಜ್ಞಾನವೇ ಪ್ರಸಾದಜನಕವು ಕರ್ಮಾದಿಗಳಲ್ಲ. ಅವು ಜ್ಞಾನಸಾಧನವಾಗಿವೆ ಎಂದು ಈ ಅಧ್ಯಾಯದಲ್ಲಿ ತಿಳಿಸುವರು. ಮೊದಲಿಗೆ ಪ್ರಾಚೀನಬರ್ಹಿಯು ಸ್ವಯಂ ಜ್ಞಾನಿಯಾಗಿದ್ದರೂ, ಲೋಕೋಪಕಾರಕ್ಕಾಗಿ ಇದುವರೆಗೆ ಹೇಳಿದ ರಾಜನ ಕಥೆ ಅಧ್ಯಾತ್ಮಪರ ಹೇಗೆ ? (ಜೀವಸಂಸಾರಪರ ಹೇಗೆ ?) ಎಂದು ಪ್ರಶ್ನಿಸುವನು.

**ಪ್ರಾಚೀನಬರ್ಹಿರುವಾಚ -**

**ಭಗವಂಸ್ತೇ ವಚೋऽಸ್ಮಾಭಿರ್ನ ಸಮ್ಯಗವಗಮ್ಯತೇ ।**
**ಕವಯಸ್ತದ್ವಿಜಾನಂತಿ ನ ವಯಂ ಕರ್ಮಮೋಹಿತಾಃ ॥೧॥**

ಭಗವನ್=ಪೂಜ್ಯರಾದ ನಾರದರೇ ! ತೇ=ನಿಮ್ಮ ವಚಃ=ರಾಜನ ಕಥಾರೂಪವಾದ ಮಾತು ಅಸ್ಮಾಭಿಃ=ನಮ್ಮಂಥವರಿಂದ ಸಮ್ಯಕ್ ನ ಅವಗಮ್ಯತೇ=ಚೆನ್ನಾಗಿ ತಿಳಿಯಲ್ಪಡುವುದಿಲ್ಲ. ಕವಯಃ=ಅಧ್ಯಾತ್ಮಜ್ಞಾನಿಗಳು ತತ್ ವಿಜಾನಂತಿ=ಅಧ್ಯಾತ್ಮಪರತ್ವವನ್ನು ತಿಳಿಯುವರು. ಕರ್ಮಮೋಹಿತಾಃ=ಕರ್ಮವೇ ಪುರುಷಾರ್ಥಸಾಧನವೆಂದು ಭ್ರಮವುಳ್ಳ ವಯಂ=ನಾವು ನ ಜಾನೀಮಃ=ತಿಳಿಯಲಾರೆವು. ॥೧॥

**ನಾರದ ಉವಾಚ -**

**ಪುರುಷಂ ಪುರಂಜನಂ ವಿದ್ಯಾದ್ ಯದ್ ವ್ಯನಕ್ತ್ಯಾತ್ಮನಃ ಪುರಮ್ ।**
**ಏಕದ್ವಿತ್ರಿಚತುಷ್ಪಾದಂ ಬಹುಪಾದಮಪಾದಕಮ್ ॥೨॥**

ಯತ್=ಯಾವ ಕಾರಣ ಆತ್ಮನಃ=ತನ್ನ ಪುರಂ=ಸೂಕ್ಷ್ಮದೇಹವನ್ನು ವ್ಯನಕ್ತಿ=ಕರ್ಮವಶಾತ್ ಸ್ಥೂಲವಾಗಿ ಮಾಡುವನೋ ತತ್=ಆದ್ದರಿಂದ ಪುರುಷಂ=ಮಾನುಷಜೀವನನ್ನು ಪುರಂಜನಂ ವಿದ್ಯಾತ್=ಪುರಂಜನನೆಂದು ತಿಳಿಯಬೇಕು.

ಪುರಂ ಜನಯತೀತಿ ಪುರಂಜನಃ ಎಂದು ಯೋಗ ಹೇಳಿದಂತಾಯಿತು. ಪುರಸ್ಯ ಅಂಜನಂ ಯಸ್ಮಾತ್ ಸಃ ಪುರಂಜನಃ ಹೀಗೂ ಮಾಡಬಹುದು. ಅಂಜೂ ವ್ಯಕ್ತೀಕರಣೇ ಎಂಬ ಧಾತು ಇದೆ. ಅಂತೂ ಹಿಂದೆ ಹೇಳಿದ ಪುರಂಜನನ ಗುಣ-ಕರ್ಮಾದಿಗಳು ಜೀವನಿಗೆ ಸಂಬಂಧಿಸಿದ್ದು ಎಂದು ಅಭಿಪ್ರಾಯ.

ಕರ್ಮಾಧೀನವಾಗಿ ಬರುವ ದೇಹ ಒಂದೇ ವಿಧವಲ್ಲ. ಏಕದ್ವಿತ್ರಿಚತುಷ್ಪಾದಂ=ಒಂದು ಕಾಲಿನ, ಎರಡು ಕಾಲು, ಮೂರು ಕಾಲು, ನಾಲ್ಕು ಕಾಲಿನ ಶರೀರಗಳನ್ನು ಬಹುಪಾದಂ= ಬಹಳ ಕಾಲಿನ ಶರೀರಗಳನ್ನು ಅಪಾದಕಂ=ಕಾಲೇ ಇಲ್ಲದ ಶರೀರಗಳನ್ನು ಪಡೆಯುವನು.

ಒಂದೇ ಕಾಲಿರುವ ಕೆಲವು ಪ್ರಾಣಿಗಳಿವೆ. ಅಥವಾ ಪಿಶಾಚಿಶರೀರಕ್ಕೆ ಒಂದೇ ಕಾಲು. ಮನುಷ್ಯನಿಗೆ ಎರಡು ಕಾಲು. ಮೂರು ಕಾಲು ಜ್ವರಕ್ಕೆ, ನಾಲ್ಕುಕಾಲು ಪಶುಗಳಿಗೆ. ಅನೇಕ ಕಾಲು ಬೆಟೆಬೇನಕಕ್ಕೆ ಇರುವವು. ।।೨।।

**ಯೋಽವಿಜ್ಞಾತಾಹ್ವಯಸ್ತಸ್ಯ ಪುರುಷಸ್ಯ ಸಖೇಶ್ವರಃ ।**
**ಯನ್ನ ವಿಜ್ಞಾಯತೇ ರೂಪೈರ್ನಾಮಭಿರ್ವಾ ಕ್ರಿಯಾಗುಣೈಃ ।।೩।।**

ತಸ್ಯ=ಪುರಂಜನನಿಗೆ ಯಃ=ಯಾವನು ಅವಿಜ್ಞಾತಃ ಸಖಃ=ತಿಳಿಯಲಾರದ ಗೆಳೆಯನಿದ್ದನೆಂದು ಹೇಳಿತ್ತೋ ಸಃ=ಅವನು ಈಶ್ವರಃ=ಶ್ರೀಹರಿಯು. ಅವಿಜ್ಞಾತನೆಂಬ ಗೆಳೆಯನಿಗೆ ಹೇಳಿದ ಎಲ್ಲ ವ್ಯಾಪಾರಗಳು ಶ್ರೀಹರಿಯವು ಎಂದು ತಿಳಿಯಬೇಕು. ಯತ್=ಯಾವ ಕಾರಣ ರೂಪೈಃ=ರೂಪಗಳಿಂದ ನಾಮಭಿಃ=ನಾಮಗಳಿಂದ ಕ್ರಿಯಾಗುಣೈಃ= ಕ್ರಿಯೆಗಳಿಂದ ಗುಣಗಳಿಂದ ನ ವಿಜ್ಞಾಯತೇ=ತಿಳಿಯಲಾರನು. (ಯಾರಿಂದಲೂ ವಿಶೇಷವಾಗಿ ತಿಳಿಯದಿರುವುದರಿಂದ ಅವಿಜ್ಞಾತನೆಂಬ ಹೆಸರು ಪರಮಾತ್ಮನಿಗೆ ಎಂದಂತಾಯಿತು.) ।।೩।।

''ಸೋಽನ್ವೇಷಮಾಣಃ ಶರಣಂ'' ಮುಂತಾದ ಮೂರು ಶ್ಲೋಕಗಳ ಅಭಿಪ್ರಾಯ ಹೇಳುವರು -

**ಯದಾ ಜಿಘೃಕ್ಷನ್ ಪುರುಷಃ ಕಾರ್ತ್ಸ್ನ್ಯೇನ ಪ್ರಕೃತೇರ್ಗುಣಾನ್ ।**
**ನವದ್ವಾರಂ ದ್ವಿಹಸ್ತಾಂಘ್ರಿ ಪುರಂ ಮನುತ ಸಾಧ್ವಿತಿ ।।೪।।**

ಪುರುಷಃ=ಜೀವನು ಯದಾ=ಯಾವಾಗ ಪ್ರಕೃತೇಃ ಗುಣಾನ್=ಪ್ರಕೃತಿವಿಕಾರಗಳಾದ ವಿಷಯಗಳನ್ನು ಕಾರ್ತ್ಸ್ನ್ಯೇನ=ಸಂಪೂರ್ಣವಾಗಿ ಜಿಘೃಕ್ಷನ್=ಸ್ವೀಕರಿಸಲಿಚ್ಛಿಸಿದನೋ ತದಾ=ಆಗ ನವದ್ವಾರಂ=ಒಂಭತ್ತು ದ್ವಾರವುಳ್ಳ ದ್ವಿಹಸ್ತಾಂಘ್ರಿ=ಎರಡು ಕೈ, ಎರಡು ಕಾಲುಗಳುಳ್ಳ ಪುರಂ=ಮನುಷ್ಯದೇಹವನ್ನು ಸಾಧು ಇತಿ ಮನುತೇ=ಒಳ್ಳೆಯದೆಂದು ತಿಳಿಯುವನು.

ಎಲ್ಲ ಶರೀರಗಳ ಮಧ್ಯದಲ್ಲಿ ಪಶು ಮುಂತಾದವುಗಳ ಶರೀರಗಳು ಎಲ್ಲ ವಿಷಯಭೋಗಕ್ಕೆ ಸಾಧನವಾಗಲಾರವು. ಮನುಷ್ಯಶರೀರ ಮಾತ್ರ ಎಲ್ಲ ವಿಷಯಭೋಗ-ಸಾಧನವೆಂದು ತಿಳಿದನು ಎಂದು ಜೀವಪರವಾಗಿ ಮೂರು ಶ್ಲೋಕದ ಅರ್ಥ ತಿಳಿಯಬೇಕು. ಅಂದಮೇಲೆ ನವದ್ವಾರಪುರಸಂಬಂಧವಾಗಿ ಏನು ಕಾಲಕನ್ಯಾಭಿಭೂತತ್ವಾದಿಗಳನ್ನು ಹೇಳಿತ್ತೋ ಅದು ಮನುಷ್ಯಶರೀರಕ್ಕೆ ಹೇಳಿದ್ದೆಂದು ತಿಳಿಯಬೇಕು. ।।೪।।

''ಪ್ರಾಕಾರೋಪವನಾಟ್ಟಾಲ.....'' ಮುಂತಾದ ಆರು ಶ್ಲೋಕಗಳಲ್ಲಿ ಹೇಳಿದ ಪುರವರ್ಣನೆ ಜೀವಪಕ್ಷಕ್ಕೆ ಸಂಬಂಧಿಸಿದ್ದಲ್ಲ. ಆದ್ದರಿಂದಲೇ 'ತದನ್ಯತ್ತಸ್ಯಕೇವಲಂ' ಎಂದು ಹಿಂದೆ ಹೇಳಿದೆ. ಕಾರಣ ಅವನ್ನು ಬಿಟ್ಟು ''ಯದೃಚ್ಛಯಾऽಗತಾಂ ತತ್ರ'' ಎಂಬುದರ ತಾತ್ಪರ್ಯ ಹೇಳುವರು -

**ಬುದ್ಧಿಂ ತು ಪ್ರಮದಾಂ ವಿದ್ಯಾನ್ಮಮಾಹಮಿತಿ ಯತ್ಕೃತಮ್ ।**
**ಯಾಮಧಿಷ್ಠಾಯ ದೇಹೇऽಸ್ಮಿನ್ ಪುಮಾನ್ ಭುಂಕ್ತೇऽಕ್ಷಿಭಿರ್ಗುಣಾನ್ ।।೫।।**

ಮಮ=ನನ್ನದು ಅಹಂ=ನಾನು ಎಂಬ ಜ್ಞಾನವು ಯತ್ಕೃತಂ=ಯಾವ ಬುದ್ಧಿಯಿಂದ ಉಂಟಾಯಿತೋ, ಯಾಂ ಅಧಿಷ್ಠಾಯ=ಯಾವ ಬುದ್ಧಿಯನ್ನು ಆಶ್ರಯಿಸಿ ಅಕ್ಷಿಭಿಃ= ಇಂದ್ರಿಯಗಳಿಂದ ಗುಣಾನ್=ವಿಷಯಗಳನ್ನು ಅಸ್ಮಿನ್ ದೇಹೇ ಭುಂಕ್ತೇ=ಈ ದೇಹದಲ್ಲಿ ಅನುಭವಿಸುವನೋ ತಾಂ ಬುದ್ಧಿಂ ತು=ಆ ಬುದ್ಧಿವಿಶೇಷವನ್ನು ಪ್ರಮದಾಂ ವಿದ್ಯಾತ್=ಸ್ತ್ರೀಯೆಂದು ತಿಳಿಯಬೇಕು.

ಸ್ತ್ರೀಯು ಭೋಗಸಾಧನವಾದಂತೆ ಬುದ್ಧಿಯೂ ಭೋಗಸಾಧನವಾದ್ದರಿಂದ ಸಾಮ್ಯ ತಿಳಿಯಬೇಕು. ಪ್ರಕರ್ಷೇಣ ಮದಯತೀತಿ ಪ್ರಮದಾ ಎಂದು ನಿರ್ವಚನ ಸೂಚಿತವಾಯಿತು. ಚೆನ್ನಾಗಿ ಸುಖ ಕೊಡುವುದು ಎಂದರ್ಥ. ।।೫।।

''ಭೃತ್ಯೈರ್ದಶಭಿಃ'' ಎಂಬುದರ ತಾತ್ಪರ್ಯ ಹೇಳುವರು -

**ಸಖಾಯ ಇಂದ್ರಿಯಗಣೋ ಜ್ಞಾನಂ ಕರ್ಮ ಚ ಯತ್ಕೃತಮ್ ।**
**ಸಖ್ಯಸ್ತದ್ವೃತ್ತಯಃ ಪ್ರಾಣಃ ಪಂಚವೃತ್ತಿರ್ಯಥೋರಗಃ ।।೬।।**

ಜ್ಞಾನಂ ಕರ್ಮ ಚ=ಜ್ಞಾನ ಮತ್ತು ಕ್ರಿಯೆಗಳು ಯತ್ಕೃತಂ=ಯಾವ ಇಂದ್ರಿಯಗಣದಿಂದ ಮಾಡಲ್ಪಟ್ಟಿತೋ ಸಃ=ಅಂಥ ಇಂದ್ರಿಯಗಣಃ ಸಖಾಯಃ=ಇಂದ್ರಿಯಸಮೂಹವೇ ಗೆಳೆಯರು. (ಇದರಿಂದ ಹಿಂದೆ ಭೃತ್ಯಶಬ್ದ ಸಖಿಪರ ಎಂದಂತಾಯಿತು.)

ಒಬ್ಬರಿಗೆ ನೂರು ನೂರು ನಾಯಕರೆಂದು ಹೇಳಿದ ನಾಯಕರು ಯಾರೆಂದು ಹೇಳುವರು - ತದ್ವೃತ್ತಯಃ=ಇಂದ್ರಿಯವೃತ್ತಿಗಳು ಸಖ್ಯಃ=ಸಖಿಯರು. (ನಾಯಕಶಬ್ದ ಸಖೀಪರವೆಂದಾಯಿತು.) ವೃತ್ತಿಯೆಂದರೆ ಜ್ಞಾನಕರ್ಮರೂಪವಾದ ಇಂದ್ರಿಯಕಾರ್ಯಗಳು. ಹಿಂದೆ ಐದು ಹೆಡೆಯ ಹಾವಿನಿಂದ ರಕ್ಷಿತ ಎಂದು ಹೇಳಿದೆ. ಇಲ್ಲಿ ಯಾವುದು ಅಹಿ ? ಎಂದರೆ, ಪಂಚವೃತ್ತಿಃ ಪ್ರಾಣಃ ಉರಗಃ ಯಥಾ=ಐದು ವೃತ್ತಿಗಳುಳ್ಳ ಮುಖ್ಯಪ್ರಾಣನೇ ಐದು ತಲೆ ಹಾವಿದ್ದಂತೆ. ಉರಸ್ತು ವಕ್ಷಸಿ ಶ್ರೇಷ್ಠೇ ಎಂದು ಅಭಿಧಾನವಿರುವುದರಿಂದ ಉರ=ಶ್ರೇಷ್ಠನಾದ ಗ=ಗಮಕ ಬ್ರಹ್ಮಪ್ರಾಪಕನಾದ್ದರಿಂದ ಮುಖ್ಯಪ್ರಾಣನಿಗೆ ಉರಕ ಎಂಬ ನಾಮ, 'ಸ ಏವಾನ್ ಬ್ರಹ್ಮ ಗಮಯತಿ' ಎಂದು ಶ್ರುತಿ ಇದೆ.

ಉರಸಾ ಗಚ್ಛತೀತಿ ಉರಗಃ=ವಕ್ಷಸ್ಥಲದಿಂದ ನಡೆಯುವ ಹಾವು ಅದು ಪಂಚವೃತ್ತಿ ಎಂದರೆ ವಿಸ್ತೃತ ವ್ಯಾಪಾರ ಉಳ್ಳದ್ದು ಐದು ರೀತಿ ಇರುವುದು ಎಂದಾಗಲೀ ಅರ್ಥ. ।।೬।।

**ಬೃಹದ್ಬಲಂ ಮನೋ ವಿದ್ಯಾದುಭಯೇಂದ್ರಿಯನಾಯಕಮ್ ।**
**ಪಂಚಾಲಾಃ ಪಂಚವಿಷಯಾಃ ಯನ್ಮಧ್ಯೇ ನವಖಂ ಪುರಮ್ ।।೭।।**

ಉಭಯೇಂದ್ರಿಯನಾಯಕಂ=ಕರ್ಮೇಂದ್ರಿಯ ಜ್ಞಾನೇಂದ್ರಿಯಗಳನ್ನು ವಿಷಯಗಳ ಕಡೆಗೆ ಕಳಿಸುವುದರಿಂದ ಅವುಗಳಿಗೆ ರಾಜನಂತಿರುವ ಬೃಹದ್ಬಲಂ=ಯಾವುದರಿಂದ ಬಹಳ ಬಲ ಬರುವುದೋ ಅಂಥ ಮನಸ್ಸೇ ಬೃಹದ್ಬಲ ಎಂದು ತಿಳಿಯಬೇಕು. ('ತೇಷಾಂ ಪರಿವೃಢಃ' ಎನ್ನುವಲ್ಲಿ ಪರಿವೃಢ ಯಾರೆಂದು ಹೇಳಿದಂತಾಯಿತು. ಮತ್ತು ಸರ್ವೇಷಾಂ ಬಲಮುದ್ವಹನ್ ಎಂಬುದನ್ನು ಅನುವಾದಿಸಿದಂತಾಯಿತು.)

ದಕ್ಷಿಣಪಾಂಚಾಲ ಉತ್ತರಪಾಂಚಾಲ ಎಂಬುವಲ್ಲಿ ಪಾಂಚಾಲ ಶಬ್ದಾರ್ಥ ಹೇಳುವರು :- ಪಾಂಚಾಲಾಃ=ಪಾಂಚಾಲಗಳೆಂದರೆ ಪಂಚವಿಷಯಾಃ=ಐದು ವಿಷಯಗಳು. ಯನ್ಮಧ್ಯೇ= ಯಾವ ವಿಷಯಗಳ ಮಧ್ಯದಲ್ಲಿ ನವಖಂ ಪುರಂ=ಒಂಭತ್ತು ದ್ವಾರವುಳ್ಳ ಶರೀರವಿರುವುದು.

''ಅನ್ವೇಷಮಾಣಾಮೃಷಭಂ'' ಎಂದಾರಂಭಿಸಿ ''ಹೃದಿನೀಮಾವಿಶಚ್ಛುಚೌ'' ಎಂಬ ಪರ್ಯಂತ ರಾಜನಿಗೆ ಮಾತ್ರ ಸಂಬಂಧಿಸಿದ್ದು. ''ಸುಪ್ತಾಯಾಂ ಮಯಿ ಜಾಗರ್ತಿ ನಾಗೋಽಯಂ ಪಾಲಯನ್ ಪುರೀಂ'' ಎಂಬಲ್ಲಿವರೆಗೆ ಸುಪ್ತ್ಯವಸ್ಥೆಯಲ್ಲಿ ಬುದ್ಧ್ಯಾದಿಗಳು ಉಪರಮವಾದರೂ ಪ್ರಾಣನು ಜಾಗರೂಕನಾಗಿರುವನು ಎಂದು ಸೂಚಿಸುವರು. ''ಸಪ್ತೋಪರಿ ಕೃತಾ ದ್ವಾರಃ'' ಮುಂತಾದವುಗಳಿಗೆ ಶರೀರಪಕ್ಷದಲ್ಲಿ ಯೋಜನೆ ಸ್ಪಷ್ಟವಾಗಿದೆ. ।।೭।।

''ಖದ್ಯೋತಾವಿರ್ಮುಖೀ'' ಮುಂತಾದವುಗಳಿಗೆ ಸಂಕ್ಷೇಪವಾಗಿ ಅರ್ಥ ಹೇಳುವರು-

**ಅಕ್ಷಿಣೀ ನಾಸಿಕೇ ಕರ್ಣೌ ಮುಖಂ ಶಿಶ್ನಗುದಾವಿತಿ ।**
**ದ್ವೇ ದ್ವೇ ದ್ವಾರೌ ಬಹಿರ್ಯಾತಿ ತತ್ತದಿಂದ್ರಿಯಸಂಯುತಃ ॥೮॥**

ಅಕ್ಷಿಣೀ=ಕಣ್ಣುಗಳು ನಾಸಿಕೇ=ಮೂಗಿನ ಹೊರಳಿಗಳು ಕರ್ಣೌ=ಕಿವಿಗಳು ಮುಖಂ=ವದನವು ಶಿಶ್ನಗುದೌ ಇತಿ=ಜನನೇಂದ್ರಿಯ ಮಲದ್ವಾರ ಹೀಗೆ ದ್ವೇ ದ್ವೇ ದ್ವಾರೌ=ಎರಡೆರಡು ದ್ವಾರಗಳು ಖದ್ಯೋತಾವಿರ್ಮುಖೀ ಮುಂತಾದ ಶಬ್ದವಾಚ್ಯವಾಗಿವೆ. ಅವುಗಳಿಂದ ತತ್ತದಿಂದ್ರಿಯಸಂಯುತಃ=ಆ ಆ ಇಂದ್ರಿಯಗಳ ಅಭಿಮಾನಿದೇವತೆಗಳಿಂದ ಕೂಡಿಕೊಂಡು ಬಹಿಃ ಯಾತಿ=ಹೊರಗಿನ ವಿಷಯಗಳನ್ನು ತಿಳಿಯುವನು. ಇದರಿಂದ ದ್ಯುಮತ್ಸಖ, ಅವಧೂತಸಖ ಎಂಬುದರ ತಾತ್ಪರ್ಯ ಹೇಳಿದಂತಾಯಿತು. ॥೮॥

''ಪಂಚದ್ವಾರಸ್ತು ಪೌರಸ್ತ್ಯಾ'' ಎಂಬಲ್ಲಿ ಹೇಳಿದ ಐದು ದ್ವಾರಗಳನ್ನು ಪ್ರಕೃತದಲ್ಲಿ ತಿಳಿಸುವರು -

**ಅಕ್ಷಿಣೀ ನಾಸಿಕೇ ಆಸ್ಯಮಿತಿ ಪಂಚ ಪುರಸ್ಕೃತಾಃ ।**
**ದಕ್ಷಿಣಾ ದಕ್ಷಿಣಃ ಕರ್ಣ ಉತ್ತರಾ ಚೋತ್ತರಃ ಸ್ಮೃತಃ ॥೯॥**

ಅಕ್ಷಿಣೀ=ಎರಡು ಕಣ್ಣುಗಳು ನಾಸಿಕೇ=ಎರಡು ಮೂಗಿನ ಹೊರಳಿಗಳು ಆಸ್ಯಂ=ಬಾಯಿ ಇತಿ ಪಂಚ=ಹೀಗೆ ಐದು ಪುರಃ ಕೃತಾಃ=ಪೂರ್ವಭಾಗಕ್ಕೆ ಮಾಡಲ್ಪಟ್ಟಿವೆ.

''ದಕ್ಷಿಣೈಕಾ ತಥೋತ್ತರಾ'' ಎಂಬುದನ್ನು ವ್ಯಾಖ್ಯಾನಿಸುವರು - ದಕ್ಷಿಣಾ= ದಕ್ಷಿಣದ್ವಾರವು ಪ್ರಕೃತದಲ್ಲಿ ದಕ್ಷಿಣಃ ಕರ್ಣಃ=ಬಲಗಿವಿಯು. ಉತ್ತರಾ ಚ=ಉತ್ತರದ್ವಾರವು ಉತ್ತರಃ ಕರ್ಣಃ=ಎಡಗಿವಿಯು. ॥೯॥

**ಪಶ್ಚಿಮೇ ಇತ್ಯಧೋದ್ವಾರೌ ಗುದಶಿಶ್ನಾವಿಹೋದಿತೇ ।**
**ಖದ್ಯೋತಾವಿರ್ಮುಖೀ ಚಾತ್ರ ನೇತ್ರೇ ಏಕತ್ರ ನಿರ್ಮಿತೇ ॥೧೦॥**

ಇಹ=ಜೀವಪಕ್ಷದಲ್ಲಿ ಪಶ್ಚಿಮೇ ಇತಿ=ಪಶ್ಚಿಮದ್ವಾರಗಳೆಂದು ಅಧೋದ್ವಾರೌ= ಕೆಳಭಾಗಕ್ಕಿರುವ ಗುದಶಿಶ್ನೌ=ಮಲಮೂತ್ರದ್ವಾರಗಳು ಉದಿತೇ=ಹೇಳಲ್ಪಟ್ಟಿವೆ. ಅತ್ರ=ಜೀವಪಕ್ಷದಲ್ಲಿ ಖದ್ಯೋತಾವಿರ್ಮುಖೀ ಚ ಏಕತ್ರ ನಿರ್ಮಿತೇ ನೇತ್ರೇ=ಒಂದೇ ಕಡೆಗೆ ನಿರ್ಮಿಸಿದ ಖದ್ಯೋತ ಆವಿರ್ಮುಖಿ ಎಂಬುವು ಕಣ್ಣುಗಳು. ॥೧೦॥

**ರೂಪಂ ವಿಭ್ರಾಜಿತಂ ತಾಭ್ಯಾಂ ವಿಚಷ್ಟೇ ಚಕ್ಷುಷೇಶ್ವರಃ ।**
**ನಲಿನೀ ನಾಲಿನೀ ನಾಸೇ ಗಂಧಃ ಸೌರಭ ಉಚ್ಯತೇ ॥೧೧॥**

ತಾಭ್ಯಾಂ ವಿಭ್ರಾಜಿತಂ ಎಂದು ಅನುವಾದ ಮಾಡಿ ರೂಪಂ ಎಂದು ವ್ಯಾಖ್ಯಾನ ಮಾಡಿರುವರು. ಬಹಿರ್ಯಾತಿ ಎಂಬುದರ ತಾತ್ಪರ್ಯ - ಚಕ್ಷುಷಾ ವಿಚಷ್ಟೇ ಎಂಬುವುದು.

ಜೀವನು ರೂಪ ನೋಡಲು ಸ್ವತಂತ್ರನಲ್ಲ ಎಂದು ತಿಳಿಸಲು ಈಶ್ವರಃ ಎಂದಿರುವರು. ತಾಭ್ಯಾಂ ಚಕ್ಷುಷಾ=ಕಣ್ಣುಗಳಿಂದ ಈಶ್ವರಃ=ಶ್ರೀಹರಿಯು ವಿಭ್ರಾಜಿತಂ ರೂಪಂ=ರೂಪವನ್ನು ಯಾತಿ=ವಿಚಷ್ಟೇ ನೋಡುವನು ಎಂದರ್ಥ. ನಲಿನೀ ನಾಲಿನೀ ನಾಸೇ=ನಲಿನೀ ನಾಲಿನೀ ಶಬ್ದಗಳಿಂದ ನಾಸೇ=ಮೂಗು ಪ್ರಕೃತದಲ್ಲಿ ವಿವಕ್ಷಿತವಾಗಿದೆ. ಸಾರಭಃ=ಸೌರಭಶಬ್ದದಿಂದ ಗಂಧಃ=ಉಚ್ಯತೇ ಇಲ್ಲಿ ಗಂಧವು ಹೇಳಲ್ಪಡುವುದು. ॥೧೧॥

**ಘ್ರಾಣೋಽವಧೂತೋ ಮುಖ್ಯಾಽಸ್ಯಂ ವಿಪಣೋ ರಸವಿದ್ ರಸಃ ।**
**ಆಪಣೋ ವ್ಯವಹಾರೋಽತ್ರ ಚಿತ್ರಮಂಧೋ ಬಹೂದನಮ್ ॥೧೨॥**

ಅವಧೂತಃ=ಘ್ರೂಣಃ=ಮೂಗು, ಮುಖ್ಯಾ=ಆಸ್ಯಂ=ಬಾಯಿ, ವಿಪಣಃ=ವಾಗಿಂದ್ರಿಯವು (ರಸಜ್ಞವಿಪಣಾನ್ವಿತಃ ಎಂಬುವಲ್ಲಿ ವಿಪಣ ಎಂದರೆ ವಾಗಿಂದ್ರಿಯ ವಿವಕ್ಷಿತ), ರಸವಿತ್=ರಸಜ್ಞಶಬ್ದವಾಚ್ಯವಾದುದು ರಸಃ=ರಸನೇಂದ್ರಿಯವು. ಅತ್ರ=ಜೀವಪಕ್ಷದಲ್ಲಿ ಆಪಣಃ=ಎಂದರೆ ವ್ಯವಹಾರಃ=ಮಾತಾಡುವುದು ಬಹೂದನಂ=ಎಂದರೆ ಚಿತ್ರಂ ಅಂಧಃ=ಚಿತ್ರಾನ್ನವು. ॥೧೨॥

**ಪಿತೃಭೂರ್ದಕ್ಷಿಣಃ ಕರ್ಣ ಉತ್ತರೋ ದೇವಭೂಃ ಸ್ಮೃತಃ ।**
**ಪ್ರವೃತ್ತಂ ಚ ನಿವೃತ್ತಂ ಚ ಶಾಸ್ತ್ರಂ ಪಾಂಚಾಲಸಂಜ್ಞಿತಮ್ ॥೧೩॥**

ದೇವಭೂಃ ಎಂದರೆ ದಕ್ಷಿಣಃ ಕರ್ಣಃ=ಬಲಗಿವಿಯು, ಪಿತೃಭೂಃ ಎಂದರೆ ಉತ್ತರಃ ಸ್ಮೃತಃ=ಎಡಗಿವಿಯು ಹೇಳಲ್ಪಟ್ಟಿದೆ. ಪ್ರವೃತ್ತಂ=ಪ್ರವೃತ್ತಕರ್ಮಾಭಿಧಾಯಕವಾದ ನಿವೃತ್ತಂ=ನಿವೃತ್ತಕರ್ಮಾಧಾಯಕವಾದ ಶಾಸ್ತ್ರಂ=ಶಾಸ್ತ್ರವು ಪಾಂಚಾಲಸಂಜ್ಞಿತಂ=ದಕ್ಷಿಣ ಪಾಂಚಾಲ ಉತ್ತರಪಾಂಚಾಲಶಬ್ದಗಳಿಂದ ಹೇಳಲ್ಪಟ್ಟಿದೆ. ॥೧೩॥

ಪ್ರವೃತ್ತ-ನಿವೃತ್ತಕರ್ಮಾಭಿದಾಯಕ ಗ್ರಂಥಾಂತರವಿರೋಧ ಪರಿಹರಿಸಲು ಹೇಳುವರು-

**ಪಿತೃಯಾನಂ ದೇವಯಾನಂ ಶ್ರೋತ್ರಾತ್ ಶ್ರುತಧರೋ ವ್ರಜೇತ್ ।**
**ಆಸುರೀ *ಮೇಢ್ರಮರ್ವಾಗ್ ದ್ವಾರ್ವ್ಯವಾಯೋ ಗ್ರಾಮಿಣಾಂ ರತಿಃ॥೧೪॥**

*ಮೇಹನಾರ್ಥಾ ಎಂದು ವಿಜ.ಪಾಠ. ಅದಕ್ಕೆ ಮಲವಿಸರ್ಜನಕ್ಕಾಗಿರುವ ದ್ವಾರ ಎಂದರ್ಥ.

ಪಿತೃಯಾನಂ ದೇವಯಾನಂ ಇತಿ=ನಿವೃತ್ತಕರ್ಮಾಭಿಧಾಯಕಶಾಸ್ತ್ರವು ದೇವಯಾನ-ಸಾಧನವಾದ್ದರಿಂದ ದೇವಯಾನ ಶಬ್ದದಿಂದ ಕರೆಯಲ್ಪಡುವುದು. ಅದರಂತೆ ಪ್ರವೃತ್ತಕರ್ಮಾಭಿದಾಯಕಶಾಸ್ತ್ರವು ಪಿತೃಯಾನಸಾಧನವಾದ್ದರಿಂದ ಪಿತೃಯಾನವೆನಿಸುವುದು. ಆದ್ದರಿಂದ ಪಿತೃಯಾನಾದಿಕಂ ವ್ರಜೇತ್ ಎಂದು ಗ್ರಂಥಾಂತರದಲ್ಲಿ ಹೇಳಿದರೂ ವಿರೋಧವಿಲ್ಲ. ಶ್ರುತಧರಃ ಶ್ರೋತ್ರಾತ್ ವ್ರಜೇತ್ ವ್ರಜತಿ=ಕಿವಿಯಿಂದ ಉತ್ಕ್ರಾಂತನಾದವನು ದೇವಯಾನ ಪಿತೃಯಾನಗಳಿಂದ ಹೋಗುವನು ಎಂದರ್ಥ. ಆಸುರೀ ಎಂದರೆ ಮೇಢ್ರಂ ಆರ್ವಾಕ್ ದ್ವಾಃ=ಕೆಳಗಿನ ದ್ವಾರವೆಂದು ಹೇಳಲ್ಪಟ್ಟ ಗುಹ್ಯೇಂದ್ರಿಯಸ್ಥಾನವು ಗ್ರಾಮ್ಯಕಂ ನಾಮ ವಿಷಯಂ ಎಂಬುದರ ಅರ್ಥ. ಗ್ರಾಮಿಣಾಂ ರತಿಃ=ಗ್ರಾಮದಲ್ಲಿರುವವರ ಸುಖವು ಅಂದರೆ ವ್ಯವಾಯಃ=ಮೈಥುನವೆಂದರ್ಥ. ಗ್ರಾಮಶಬ್ದ ಗ್ರಾಮಿಪರ, ಕಶಬ್ದ ರತಿಪರವೆಂದಂತಾಯಿತು.

**ಉಪಸ್ಥೋ ದುರ್ಮದಃ ಪ್ರೋಕ್ತೋ ನಿರ್ಋತಿರ್ಗುದ ಉಚ್ಯತೇ ।**
**ವೈಶಸಂ ನರಕಂ ಪಾಯುರ್ಲುಬ್ಧಕೋಽನ್ಧೌ ತು ಮೇ ಶ್ರುಣು ॥೧೫॥**

ಉಪಸ್ಥಃ=ಜನನೇಂದ್ರಿಯವು ದುರ್ಮದಃ ಪ್ರೋಕ್ತಃ=ದುರ್ಮದ ಎಂದು ಹೇಳಲ್ಪಟ್ಟಿದೆ. ನಿರ್ಋತಿಃ ಗುದ ಉಚ್ಯತೇ=ನಿಋತಿ ಶಬ್ದದಿಂದ ಗುದವು ಹೇಳಲ್ಪಡುವುದು. ವೈಶಸಂ ನರಕಂ=ನರಕದಲ್ಲಿಯ ದುಃಖ. ಲುಬ್ಧಕಃ ಪಾಯುಃ=ಮಲವಿಸರ್ಜನೇಂದ್ರಿಯ. ಅಂಧೌ ತು ಮೇ ಶ್ರುಣು=ಅಂಧಶಬ್ದಾರ್ಥವನ್ನು ನನ್ನಿಂದ ಕೇಳು. ॥೧೫॥

**ಹಸ್ತಪಾದೌ ಪುಮಾಂಸ್ತಾಭ್ಯಾಂ ಯುಕ್ತೋ ಯಾತಿ ಕರೋತಿ ಚ ।**
**ಅಂತಃಪುರಂ ಚ ಹೃದಯಂ ವಿಷೂಚಿರ್ಮನ ಉಚ್ಯತೇ ॥೧೬॥**

ಅಂಧೌ ಎಂದರೆ ಹಸ್ತಪಾದೌ=ಕೈಕಾಲುಗಳು. ತಾಭ್ಯಾಂ ಯುಕ್ತಃ ಪುಮಾನ್=ಅವುಗಳಿಂದ ಕೂಡಿದವನಾಗಿ ಯಾತಿ ಕರೋತಿ ಚ=ಕಾಲುಗಳಿಂದ ನಡೆಯುವನು. ಕೈಗಳಿಂದ ಕೆಲಸ ಮಾಡುವನು. ಅಂತಃಪುರಂ ಎಂದರೆ ಹೃದಯಂ=ಹೃದಯವು. 'ವಿಷೂಚಿನಾ' ಪದದ ಅರ್ಥಾನುವಾದ ವಿಷೂಚಿಃ=ಎಂಬುದು. ಅದರ ಅರ್ಥ ಮನಃ ಉಚ್ಯತೇ=ವಿಷೂಚೀನ ಪದದಿಂದ ಮನಸ್ಸು ಹೇಳಲ್ಪಡುವುದು. ॥೧೬॥

**ತತ್ರ ಮೋಹಂ ಪ್ರಸಾದಂ ವಾ ಹರ್ಷಂ ಪ್ರಾಪ್ನೋತಿ ತದ್ಗುಣೈಃ ।**
**ಯಥಾ ಯಥಾ ವಿಕ್ರಿಯತೇ ಗುಣಾಕ್ತೋ ವಿಕರೋತಿ ವಾ ॥೧೭॥**

ತತ್ರ=ಹೃದಯದಲ್ಲಿ ತದ್ಗುಣೈಃ=ಮನಸ್ಸಿನ ಗುಣಗಳಾದ ಸತ್ವರಜಸ್ತಮೋಗುಣಗಳಿಂದ ಪ್ರಸಾದಂ ಹರ್ಷಂ ಮೋಹಂ ವಾ ಪ್ರಾಪ್ನೋತಿ=ಪ್ರಸನ್ನತೆ ಸಂತೋಷ ಮೋಹವನ್ನಾಗಲೀ ಹೊಂದುವನು.

''ಮಹಿಷೀ ಯದ್ ಯದೀಹೇತ'' ಮುಂತಾದುರ ಅರ್ಥ ಹೇಳುವರು - ಯಥಾ ಯಥಾ ವಿಕ್ರಿಯತೇ=ಬುದ್ಧಿಯು ಹೇಗೆ ಹೇಗೆ ವಿಕಾರ ಹೊಂದುವುದೋ ಅಂದರೆ ಶ್ರೋತ್ರಾದಿ ಇಂದ್ರಿಯಗಳಿಗೆ ಅನುಗ್ರಾಹಕವಾಗಿ ಶ್ರವಣಾದಿ ರೂಪದಿಂದ ವಿಕಾರ ಹೊಂದುವರು. ಗುಣಾತ್ತಃ=ಗುಣಬದ್ಧನಾದ ಜೀವನು ವಾ=ಕೆಲವು ಸಲ ವಾಗಾದಿ ಇಂದ್ರಿಯಗಳಿಗೆ ಅನುಗ್ರಾಹಕವಾಗಿ ವಿಕರೋತಿ=ವಿವಿಧ ಕರ್ಮ ಮಾಡುವನು. ।।೧೭।।

**ತಥಾ ತಥೋಪದ್ರಷ್ಟಾತ್ಮಾ ತದ್ವೃತ್ತಿರಿತಿ ಕೀರ್ತ್ಯತೇ ।**
**ದೇಹೋ ರಥಸ್ತ್ವಿಂದ್ರಿಯಾಶ್ವಃ ಸಂವತ್ಸರವಯೋಗತಿಃ ।।೧೮।।**

ಆತ್ಮಾ=ಜೀವನು ತಥಾ ತಥಾ=ಬುದ್ಧಿಯು ವಿಕಾರವಾದಂತೆ ಉಪದ್ರಷ್ಟಾ= ಬುದ್ಧ್ಯಾದಿಕರಣಗಳ ಸಮೀಪದಲ್ಲಿ ಇದ್ದು ನೋಡುವನು. ಆದ್ದರಿಂದ ತದ್ವೃತ್ತಿಃ ಇತಿ ಕೀರ್ತ್ಯತೇ (ಇಲ್ಲಿ ವೃತ್ತಿಶಬ್ದವು ಉಭಯೇಂದ್ರಿಯ ಕಾರ್ಯಪರವಾಗಿದೆ.) ಇಂದ್ರಿಯವೃತ್ತಿಯುಳ್ಳವನು ಎನಿಸುವನು. ಇದರಿಂದ (''ಕ್ವಚಿತ್ ಶೃಣೋತಿ ಶೃಣ್ವಂತ್ಯಾಂ'' ''ಕ್ವಚಿದ್ಗಾಯತಿ ಗಾಯಂತ್ಯಾಂ'' ಮುಂತಾದ ಎಲ್ಲವನ್ನೂ ಸಂಗ್ರಹಿಸಿದಂತಾಯಿತು. (ಪ್ರಮದೆಯು ಕೇಳಿದರೆ ಕೇಳುವನು ಎಂದರೆ ಮನಸ್ಸು ಬುದ್ಧಿ ಶ್ರೋತ್ರಸಂಬದ್ಧವಾದರೆ ಕೇಳುವನು. ಕರ್ಮೇಂದ್ರಿಯಸಂಬದ್ಧವಾದರೆ ಕೆಲಸ ಮಾಡುವೆನು ಎಂದರ್ಥ.) ''ರಥಂ ಪಂಚಾಶ್ವಮಾಶುಗಂ'' ಮುಂತಾದುದರ ಅರ್ಥ ಹೇಳುವರು - ದೇಹಃ ರಥಃ=ದೇಹವೇ ರಥವು. ಇಂದ್ರಿಯಾಶ್ವಃ=ಐದು ಇಂದ್ರಿಯಗಳೇ ಕುದುರೆಗಳಾಗಿವುಳ್ಳ ಸಂವತ್ಸರವಯೋಗತಿಃ= ಸಂವತ್ಸರರೂಪ ಬಯಸಿ ವಯಸ್ಸಿನಿಂದ ಗತಿಯುಳ್ಳ।।೧೮।।

'ದ್ವೀಷಂ' ಎಂಬ ಶಬ್ದಕ್ಕೆ=ಅಹಂಕಾರ ಮಮಕಾರಗಳೆಂಬ ಎರಡು ಈಶುಗಳು ಎಂಬರ್ಥ ಸ್ಪಷ್ಟವಾದ್ದರಿಂದ ಅದಕ್ಕೆ ವ್ಯಾಖ್ಯಾನ ಮಾಡದೇ 'ದ್ವಿಚಕ್ರಂ' ಎಂಬುದರ ಅರ್ಥ ಹೇಳುವರು -

**ದ್ವಿಕರ್ಮಚಕ್ರಸ್ತ್ರಿಗುಣಧ್ವಜಃ ಪಂಚಾಸುಬಂಧುರಃ ।**
**ಮನೋರಶ್ಮಿರ್ಬುದ್ಧಿಸೂತೋ ಹೃನ್ನೀಡೋ ದ್ವಂದ್ವಕೂಬರಃ ।।೧೯।।**

ದ್ವಿಕರ್ಮಚಕ್ರಃ=ಪುಣ್ಯಪಾಪಗಳೆಂಬ ಎರಡು ಚಕ್ರವುಳ್ಳ ತ್ರಿಗುಣಧ್ವಜಃ=ಸತ್ವಾದಿಗುಣಗಳೇ ಧ್ವಜವಾಗಿವುಳ್ಳ ಪಂಚಾಸುಬಂಧುರಃ=ಐದು ಪ್ರಾಣಗಳೇ ಬಂಧನಸ್ಥಾನಿಯವಾಗಿವುಳ್ಳ ('ಪಂಚಬಂಧುರಂ' ಎಂಬುದರ ಅರ್ಥ.) 'ಏಕರಶ್ಮಿ' ಎಂಬುದರ ಅರ್ಥ - ಮನೋರಶ್ಮಿಃ= ಮನಸ್ಸೇ ಹಗ್ಗ (ಲಗಾಮು) ವಾಗಿವುಳ್ಳ ('ಏಕದಮನಂ' ಎಂಬುದರ ಅರ್ಥ.) ಬುದ್ಧಿಸೂತಃ=ಬುದ್ಧಿಯೇ ಸಾರಥಿಯಾಗಿವುಳ್ಳ ('ಏಕನೀಡಂ' ಎಂಬುದರ ಅರ್ಥ.) ಹೃನ್ನೀಡಃ=ಹೃದಯವೇ ರಥಿಕ ಕೊಡುವ ಸ್ಥಳವಾಗಿವುಳ್ಳ ದ್ವಂದ್ವಕೂಬರಃ=ಶೀತೋಷ್ಣಗಳೇ

ಕೂಬರವಾಗಿವುಳ್ಳ (ಏಕಾಕ್ಷಃ ಎಂಬುದಕ್ಕೆ ಸೂತ್ರನಾಮಕವಾಯುವೇ ಅಕ್ಷ ಎಂದು ಸ್ಪಷ್ಟವಾದ್ದರಿಂದ ಅರ್ಥ ಹೇಳಿಲ್ಲ)

**ಪಂಚೇಂದ್ರಿಯಾರ್ಥಪ್ರಕ್ಷೇಪಃ ಸಪ್ತಧಾತುವರೂಥಕಃ ।**
**ಆಕೂತಿರ್ವಿಕ್ರಮೋ ಬಾಹ್ಯೋ ಮೃಗತೃಷ್ಣಾಂ ಪ್ರಧಾವತಿ ॥೨೦॥**

'ಪಂಚಪ್ರಹರಣಂ' ಎಂಬುದರ ಅರ್ಥ ಹೇಳುವರು - ಪಂಚೇಂದ್ರಿಯಾರ್ಥಪ್ರಕ್ಷೇಪಃ ಎಂದು. ಅಂದರೆ ಐದು ಇಂದ್ರಿಯಗಳನ್ನು ತಮ್ಮ ವಿಷಯಗಳಲ್ಲಿ ಪ್ರಹರಣ=ಪ್ರಕ್ಷೇಪ= ಸನ್ನಿಕರ್ಷ ಮಾಡುವುದೇ ಆಯುಧವಿದ್ದಂತೆ ಎಂದರ್ಥ. 'ಸಪ್ತವರೂಥಂ' ಎಂಬುದರ ಅರ್ಥ- ಸಪ್ತಧಾತುವರೂಥಕಃ=ಏಳು ಧಾತುಗಳೇ ವರೂಥವಾಗಿವುಳ್ಳ (ರಥವನ್ನು ರಕ್ಷಿಸುವ ಹೊದಿಕೆ ವರೂಥ)

'ಪಂಚವಿಕ್ರಮಂ' ಎಂಬಲ್ಲಿ ವಿಕ್ರಮಶಬ್ದಾರ್ಥ ಹೇಳುವರು - ಆಕೂತಿಃ ವಿಕ್ರಮಃ= ವಿಕ್ರಮ ಎಂದರೆ ಅಭಿಪ್ರಾಯ, ಅಂದಮೇಲೆ ಐದು ವಿಷಯಗಳಲ್ಲಿ ಅಭಿಪ್ರಾಯ ಉಳ್ಳ ಎಂದರ್ಥ ಪಂಚವಿಕ್ರಮಂ ಎಂಬುದಕ್ಕೆ. (ಆಕೃತಿಃ ಎಂಬ ಪಾಠವಿದ್ದಾಗ ಐದು ಕರ್ಮೇಂದ್ರಿಯಗಳಿಂದ ಚೆನ್ನಾಗಿ ಕೆಲಸ ಮಾಡುವುದು ವಿಕ್ರಮ ಎಂದರ್ಥ ತಿಳಿಯಬೇಕು.) ('ಹೇಮೋಪಸ್ಕರಮಾರುಹ್ಯ ಸ್ವರ್ಣವರ್ಮಾಕ್ಷಯೇಷುಧಿಃ' ಎಂಬುದು ತದನ್ಯತ್ತಸ್ಯ ಕೇವಲಂ ಎಂದು ಹೇಳಿದಂತೆ ಕೇವಲ ರಾಜನಿಗೆ ಮಾತ್ರ ಸಂಬಂಧಿಸಿದ್ದು) ''ಪಂಚಪ್ರಸ್ಥಮಗಾದ್ವನಂ'' ಎಂಬುದರ ಅರ್ಥ - 'ಬಾಹ್ಯೋ ಮೃಗತೃಷ್ಣಾಂ ಪ್ರಧಾವತಿ' ಎಂಬುದು. ಹೊರಗಿರುವ ಐದು ವಿಷಯಭೋಗಕ್ಕಾಗಿ ಮರುಮರೀಚಿಕೆಗೆ ಹೋದಂತೆ ಧಾವಿಸುವನು. ಬಾಹ್ಯಃ ಎಂಬುದರಿಂದ ಪಂಚಪ್ರಸ್ಥ ಎಂಬುದರ, ಮೃಗತೃಷ್ಣಾ ಎಂಬುದರಿಂದ ವನಂ ಎಂಬುದರ ಅರ್ಥ ಹೇಳಿದೆ. ಲುಪ್ತೋಪಮಾ ।

**ಭಾಗವತ ತಾತ್ಪರ್ಯ -**

ಮೃಗತೃಷ್ಣಾ ದೃಷ್ಟಾಂತ ಹೇಳಿದ್ದರಿಂದ ವೈಷಯಿಕಭೋಗ ಮಿಥ್ಯಾ ಎಂದು ಹೇಳಿದಂತೆ ತೋರುವುದು. ಕಾರಣ ಅದರ ಅಭಿಪ್ರಾಯ ಹೇಳುವರು -

**'ಸುಖವದ್ದೂರತೋ ದೃಶ್ಯಂ ತತ್ಕಾಲೇ ದುಃಖಮೇವ ಯತ್ ।**
**ಮೃಗತೃಷ್ಣೇತ್ಯತಃ ಪ್ರಾಹುರ್ಭೋಗಂ ವೈಕ್ಷಯಿಕಂ ಬುಧಾ' ಇತಿ ಶಬ್ದನಿರ್ಣಯೇ ।**

ದೂರದಿಂದ ಸುಖಸಾಧನವೆಂದು ತೋರಿ ತತ್ಕಾಲೇ ಅದು ದೊರೆತಾಗ ದುಃಖಸಾಧನವಾಗುವುದು. ಆದ್ದರಿಂದ ಸಾದೃಶ್ಯವಿರುವುದರಿಂದ ವೈಷಯಿಕಭೋಗವನ್ನು ಮೃಗತೃಷ್ಣೇ ಎಂದಿರುವರು. ಹೊರತು ಮಿಥ್ಯಾ ಆದ್ದರಿಂದ ಅಲ್ಲ ॥೨೦॥

'ಏಕಾದಶಚಮೂನಾಥಃ' ಎಂಬುದರ ಅರ್ಥ ಹೇಳುವರು -

**ಏಕಾದಶೇಂದ್ರಿಯಚಮೂಃ ಪಂಚಸೂನಾವಿನೋದಕೃತ್ ।**
**ಸಂವತ್ಸರಶ್ಚಂಡವೇಗಃ ಕಾಲೋ ಯೇನೋಪಲಕ್ಷಿತಃ ॥೨೦॥**

ಏಕಾದಶೇಂದ್ರಿಯಚಮೂಃ=ಹನ್ನೊಂದು ಇಂದ್ರಿಯಗಳೇ ಸೈನ್ಯವಾಗಿವುಳ್ಳ ಎಂದರ್ಥ. 'ಚಚಾರ ಮೃಗಯಾಂ ತತ್ರ' ಮುಂತಾದರ ತಾತ್ಪರ್ಯ - ಪಂಚಸೂನಾವಿನೋದಕೃತ್= ವಿಷಯಭೋಗಕ್ಕಾಗಿ ಛೇದ-ಭೇದಾದಿರೂಪ ಐದು ಹಿಂಸೆ ವಿನೋದ ಮಾಡುವ ಅಂದರೆ ಐದು ಹಿಂಸೆ ಮಾಡುವ ಕಾಲದಲ್ಲಿ ಪಾಪಶಂಕೆ ಇರುವುದಿಲ್ಲವೆಂದು ಸೂಚಿಸಲು ವಿನೋದಕೃತ್ ಎಂದಿದ್ದಾರೆ. (ಒಲೆ, ಒರಳು ಅರ್ಥಾತ್ ಅರೆಯುವ ಕಲ್ಲು, ಗೃಹಕೃತ್ಯಕ್ಕೆ ಬೇಕಾದ ವಸ್ತುಗಳು, ನೀರಿನ ಕಲಶ ಇವುಗಳನ್ನು ಉಪಯೋಗಿಸುವಾಗ ಪ್ರಾಣಿವಧೆಯು ಪಾಪಹೇತುವಾಗುವುದು) ಅದಕ್ಕಾಗಿಯೇ ವೈಶ್ವದೇವ ಹೇಳಿರುವರು. ಚಂಡವೇಗಃ ಸಂವತ್ಸರಃ=ಚಂಡವೇಗವೆಂದರೆ ಒಂದು ವರ್ಷಕಾಲ. ಯೇನ ಉಪಲಕ್ಷಿತಃ=ಯಾವ ಸಂವತ್ಸರದಿಂದ ದ್ವಿಪರಾರ್ಧ ಆಯುಷ್ಯ ಎಂಬ ಕಾಲವು ಉಪಲಕ್ಷಿತವಾಗಿದೆ. ''ತತಃ ಕ್ಷುತ್ತೃಟ್‌ಪರಿಶ್ರಾಂತಃ'' ಎಂದಾರಂಭಿಸಿ ''ಕುಟುಂಬಾಸಕ್ತಚೇತಸಃ'' ಎನ್ನುವವರೆಗೆ ಜೀವನ ಸಂಸಾರಾಸಕ್ತಿ ತೋರಿಸಲು ಹೊರಟದ್ದು ರಾಜಪಕ್ಷದಲ್ಲೇ ಯೋಜಿಸಬೇಕು ಎಂಬ ಅಭಿಪ್ರಾಯದಿಂದ ಅಷ್ಟನ್ನು ಬಿಟ್ಟು ''ಆಸಸಾದ ಸ ವೈ ಕಾಲಃ'' ಎಂಬುದರ ತಾತ್ಪರ್ಯ 'ಸಂವತ್ಸರಃ' ಎನ್ನುವಲ್ಲಿ ಹೇಳಿದೆ. ॥೨೦॥

**ತಸ್ಯಾಹಾನೀಹ ಗಂಧರ್ವಾ ಗಂಧರ್ವ್ಯೋ ರಾತ್ರಯಃ ಸ್ಮೃತಾಃ ।**
**ಹರಂತ್ಯಾಯುಃ ಪರಿಕ್ರಾಂತ್ಯಾ ಷಷ್ಟ್ಯುತ್ತರಶತತ್ರಯಮ್ ॥೨೨॥**

ತಸ್ಯ=ಸಂವತ್ಸರದ ಅಹಾನಿ=ಹಗಲುಗಳು ಇಹ=ಜೀವಪಕ್ಷದಲ್ಲಿ ಗಂಧರ್ವಾಃ= ಗಂಧರ್ವರೆಂದೂ, ರಾತ್ರಯಃ=ರಾತ್ರಿಗಳು ಗಂಧರ್ವ್ಯಃ=ಗಂಧರ್ವ ಸ್ತ್ರೀಯರೆಂದು ಸ್ಮೃತಾಃ=ಹೇಳಲ್ಪಟ್ಟಿವೆ. ಷಷ್ಟ್ಯುತ್ತರಶತತ್ರಯಂ=ಮುನ್ನೂರ ಅರವತ್ತು ದಿನಗಳ ಪರಿಕ್ರಾಂತ್ಯಾ=ಪರಿಭ್ರಮಣದಿಂದ (ತಿರುಗುವುದರಿಂದ) ಆಯುಃ ಹರಂತಿ=ಆಯುಷ್ಯಹರಣ ಮಾಡುವದು. ॥೨೨॥

ಕಾಲಕ್ಕೆ ಕರ್ಮಾನುಸಾರಿತ್ವ ತಿಳಿಸಲು ಹೊರಟ ''ತೇ ಚಂಡವೇಗಾನುಚರಾಃ'' ಎಂದಾರಂಭಿಸಿ ''ನಾವಿದದ್ ಭಯಂ'' ಎನ್ನುವವರೆಗೆ ರಾಜಪಕ್ಷದಲ್ಲಿಯೇ ಯೋಜಿಸಬೇಕೆಂಬ ಅಭಿಪ್ರಾಯದಿಂದ ಅದನ್ನು ಬಿಟ್ಟು ''ಕಾಲಸ್ಯ ದುಹಿತಾ'' ಮುಂತಾದುದರ ಅರ್ಥವನ್ನು ಇಲ್ಲಿ ಹೇಳುವರು -

**ಕಾಲಕನ್ಯಾ ಜರಾ ಸಾಕ್ಷಾಲ್ಲೋಕಸ್ತಾಂ ನಾಭಿನಂದತಿ ।**
**ಸ್ವಸಾರಂ ಜಗೃಹೇ ಮೃತ್ಯುಃ ಕ್ಷಯಾಯ ಯವನೇಶ್ವರಃ ॥೨೩॥**

ಕಾಲಕನ್ಯಾ ಸಾಕ್ಷಾತ್ ಜರಾ=ಹಿಂದೆ ಹೇಳಿದ ಕಾಲಕನ್ಯಾ ಎಂದರೆ ಮುಪ್ಪು, ತಾಂ=ಜರಾವನ್ನು ಲೋಕಃ=ಜನರು ನ ಅಭಿನಂದಂತಿ=ಸ್ವೀಕರಿಸಲು ಸಂತೋಷಿಸುವುದಿಲ್ಲ, ಸಾಕ್ಷಾತ್ ಎಂದದ್ದರಿಂದ ದಿವಸಗಳು ಗಂಧರ್ವಸ್ಥಾನೀಯವಾದ್ದರಿಂದ ಭೇದವಿದ್ದಂತೆ, ಭೇದವಿಲ್ಲ, ಜರಾನೇ ಕಾಲಕನ್ಯೆ ಎಂದು ಸೂಚಿಸಿರುವರು. ಜರಾಶಬ್ದದಿಂದ ಅದರ ಅಭಿಮಾನಿನಿಯೂ ವಿವಕ್ಷಿತವಾಗಿದೆ. ಯವನೇಶ್ವರಃ ಎಂದರೆ ಮೃತ್ಯುಃ=ಮೃತ್ಯುವು ಕ್ಷಯಾಯ=ಜಗತ್ತಿನ ನಾಶಕ್ಕಾಗಿ ಸ್ವಸಾರಂ ಜಗೃಹೇ=ಜರಾಳನ್ನು ತಂಗಿಯಾಗಿ ಸ್ವೀಕರಿಸಿದನು. ಹೊರತು ಹೆಂಡತಿಯಾಗಿ ಅಲ್ಲ, ಮರಣ, ಮುಪ್ಪು ಎರಡು ಕಾಲಜನ್ಯವೇ ತಾನೇ !॥೨೩॥

'ಲೋಕಾನಾಂ ಕ್ಷಯಾಯ ಯವನೇಶ್ವರಃ' ಎಂದು ಹೇಳಿದ ಯವನರನ್ನು ಹೇಳುವರು-

**ಆಧಯೋ ವ್ಯಾಧಯಸ್ತಸ್ಯ ಸೈನಿಕಾಃ ಯವನಾಃ ಖಲಾಃ (ಚರಾಃ) ।**
**ಭೂತೋಪಸರ್ಗಾ ಅರಯಃ ಪ್ರಜ್ವಾರೋ ವಿವಿಧೋ ಜ್ವರಃ ॥೨೪॥**

ತಸ್ಯ=ಆ ಮೃತ್ಯುವಿನ ಸೈನಿಕಾಃ=ಸೈನಿಕರಾದ ಖಲಾಃ=ದುಷ್ಟರಾದ (ಚರಾಃ=ಎಂಬ ಪಾಠದಲ್ಲಿ ವನಸಂಚಾರಿಗಳಾದ) ಯವನಾಃ=ಯವನರೆಂದರೆ ಆಧಯಃ=ಮನೋರೋಗಗಳು, ವ್ಯಾಧಯಃ=ಶಾರೀರೀಕ ರೋಗಗಳು. 'ಯವನೇ ಅರಿಭಿಃ' ಎಂಬಲ್ಲಿ ಅರಯಃ=ಶತ್ರುಗಳು ಎಂದರೆ ಭೂತೋಪಸರ್ಗಾಃ=ಗ್ರಹಗಳೇ ಉಪದ್ರವಗಳು, ಪ್ರಜ್ವಾರಃ ಎಂದರೆ ವಿವಿಧಃ ಜ್ವರಃ=ಚಳಿಜ್ವರ, ಉಷ್ಣಜ್ವರ ಮುಂತಾದ ಜ್ವರಗಳು. ॥೨೪॥

ಇಲ್ಲಿಯವರೆಗೆ ಪರೋಕ್ಷವಾಗಿ ಹೇಳಿದ್ದನ್ನು ವ್ಯಾಖ್ಯಾನಿಸಿ ಸಜ್ಜನರ ಅನುಗ್ರಹಕ್ಕಾಗಿ ಸ್ಪಷ್ಟವಾಗಿ ಹೇಳುವರು - 'ಏವಂ' ಎಂದಾರಂಭಿಸಿ 'ವಿರಮ ಕ್ರಮೇಣ' ಎನ್ನುವವರೆಗೆ -

**ಏವಂ ಬಹುವಿಧೈರ್ದುಃಖೈರ್ದೈವಭೂತಾತ್ಮಸಂಭವೈಃ ।**
**ಕ್ಲಿಶ್ಯಮಾನಃ ಶತಂ ವರ್ಷಂ ದೇಹೇ ದೇಹೀ ತಮೋವೃತಃ ॥೨೫॥**

ಏವಂ=ಈರೀತಿ ಬಹುವಿಧೈಃ=ಅನೇಕರೀತಿಯಾದ ದೈವಭೂತಾತ್ಮಸಂಭವೈಃ=ಅಧಿದೈವ ಅಧಿಭೂತ ಅಧ್ಯಾತ್ಮಗಳಿಂದುಂಟಾಗುವ ದುಃಖೈಃ=ದುಃಖಗಳಿಂದ ಕ್ಲಿಶ್ಯಮಾನಃ=ಕಷ್ಟಪಡುತ್ತ ಶತಂ ವರ್ಷಂ=ನೂರುವರ್ಷ ತಮೋವೃತಃ=ಪರಿಹಾರೋಪಾಯ ತಿಳಿಯದೇ ದೇಹೀ=ಜೀವನು ದೇಹೇ=ಶರೀರದಲ್ಲಿ (ಶೇತೇ ಎಂದು ಮುಂದಿನ ಶ್ಲೋಕದಲ್ಲಿ ಅನ್ವಯ.) ॥೨೫॥

**ಪ್ರಾಣೇಂದ್ರಿಯಮನೋಧರ್ಮಾನಾತ್ಮನ್ಯಧ್ಯಸ್ಯ ನಿರ್ಗುಣಃ ।**
**ಶೇತೇ ಕಾಮಲವಂ ಧ್ಯಾಯನ್ ಮಮಾಹಮಿತಿ ಕರ್ಮಕೃತ್ ॥೨೬॥**

ಪ್ರಾಣಧರ್ಮಾಃ=ಶ್ವಾಸಾದಿಗಳು ಇಂದ್ರಿಯಧರ್ಮಾಃ=ಜ್ಞಾನಗಳು, ಕರ್ಮಗಳು ಮನೋಧರ್ಮಾಃ=ಸುಖ ದುಃಖ ಮೊದಲಾದವು, ಇವುಗಳನ್ನು ಆತ್ಮನಿ ಮಮಾಹಂ ಇತಿ ಅಧ್ಯಸ್ಯ=ತನ್ನಲ್ಲಿ ಆರೋಪಿಸಿ ಅಂದರೆ ಪ್ರಾಣೇಂದ್ರಿಯಮನಸ್ಸುಗಳು ನನ್ನವು, ನಾನೇ ಅವುಗಳ ಧರ್ಮಗಳಿಗೆ ಕರ್ತಾ ಎಂದು ತಿಳಿದು ನಿರ್ಗುಣಃ=ಸ್ವತಂತ್ರವಾಗಿ ಮೇಲೆ ಹೇಳಿದ ಕಾರ್ಯಗಳಿಲ್ಲದ ಜೀವನು ಕಾಮಲವಂ ಧ್ಯಾಯನ್=ವಿಷಯ ಸುಖಲೇಶವನ್ನು ಧ್ಯಾಯನ್ =ಧ್ಯಾನಿಸುತ್ತ ಕರ್ಮಕೃತ್=ಅದಕ್ಕನುಗುಣ ಕಾರ್ಯ ಮಾಡುತ್ತ ಶೇತೇ=ದೇಹದಲ್ಲಿ ಇರುವನು ಎಂದರ್ಥ. ॥೨೬॥

ಇದನ್ನೇ ವಿವರಿಸುವರು -

**ಯದಾಽತ್ಮಾನಮವಿಜ್ಞಾಯ ಭಗವಂತಂ ಪರಂ ಗುರುಮ್ ।**
**ಪುರುಷಸ್ತು ವಿಷಜ್ಜೇತ ಗುಣೇಷು ಪ್ರಾಕೃತೇಷ್ವದೃಕ್ ॥೨೭॥**

ಯದಾ=ಯಾವಾಗ ಪರಂ ಗುರುಂ=ಸರ್ವೋತ್ತಮ ಗುರುವಾದ ಭಗವಂತಂ= ಐಶ್ವರ್ಯಶಾಲಿಯಾದ ಆತ್ಮಾನಂ=ತನ್ನ ಅಂತರ್ನಿಯಾಮಕನಾದ ಶ್ರೀಹರಿಯನ್ನು ಅವಿಜ್ಞಾಯ =ತಿಳಿಯದೇ ಅದೃಕ್ ಪುರುಷಃ=ಅಜ್ಞಾನಿಯಾದ ಮನುಷ್ಯನು ಪ್ರಾಕೃತೇಷು= ಪ್ರಕೃತಿನಿರ್ಮಿತಗಳಾದ ಗುಣೇಷು=ಇಂದ್ರಿಯಾದಿ ಕಾರ್ಯಗಳಲ್ಲಿ ವಿಷಜ್ಜೇತ=ನಾನು ನನ್ನದು ಎಂಬ ಆರೋಪವುಳ್ಳವನಾಗುವನು. ॥೨೭॥

**ಗುಣಾಭಿಮಾನೀ ಸ ತದಾ ಕರ್ಮಾಣಿ ಕುರುತೇಽವಶಃ ।**
**ಶುಕ್ಲಂ ಕೃಷ್ಣಂ ಲೋಹಿತಂ ವಾ ಯಥಾಕರ್ಮಾಭಿಜಾಯತೇ ॥೨೮॥**

ತದಾ=ಆಗ ಸಃ=ಜೀವನು ಅವಶಃ=ಪರಮಾತ್ಮನ ಅಧೀನನಾಗಿ ಗುಣಾಭಿಮಾನೀ= ದೇಹೇಂದ್ರಿಯಾಭಿಮಾನಿಯಾದವನು ಶುಕ್ಲಂ=ಸಾತ್ತ್ವಿಕವಾದ ಕೃಷ್ಣಂ=ತಾಮಸವಾದ ಲೋಹಿತಂ ವಾ=ರಾಜಸವಾದ ಕರ್ಮಾಣಿ ಕುರುತೇ=ಕರ್ಮಗಳನ್ನು ಮಾಡುವನು. ಯಥಾ ಕರ್ಮ ಅಭಿಜಾಯತೇ=ಕರ್ಮಾನುಸಾರವಾಗಿ ಸಾತ್ವಿಕಾದಿಜನ್ಮ ಪಡೆಯುವನು. ॥೨೮॥

**ಶುಕ್ಲಾತ್ ಪ್ರಕಾಶಭೂಯಿಷ್ಠಾನ್ ಲೋಕಾನಾಪ್ನೋತಿ ಕರ್ಹಿಚಿತ್ ।**
**ದುಃಖೋದರ್ಕಾನ್ ಕ್ರಿಯಾಯಾಸಾನ್ ತಮಶ್ಶೋಕೋತ್ಕಟಾನ್ ಕ್ವಚಿತ್ ॥**

ಶುಕ್ಲಾತ್=ಸಾತ್ವಿಕ ಕರ್ಮದಿಂದ ಪ್ರಕಾಶಭೂಯಿಷ್ಠಾನ್=ಬಹಳ ಪ್ರಕಾಶವುಳ್ಳ ತೇಜೋಮಯಗಳಾದ ಲೋಕಾನ್=ದೇವತಾದೇಹಗಳನ್ನು ಕರ್ಹಿಚಿತ್=ಕೆಲವು ಸಲ ಆಪ್ನೋತಿ=ಹೊಂದುವನು. ದುಃಖೋದರ್ಕಾನ್=ಸುಖದಕ್ಕಿಂತ ಹೆಚ್ಚು ದುಃಖವುಳ್ಳ ಕ್ರಿಯಾಯಾಸಾನ್=ಕ್ರಿಯೆಗಳಿಂದ ಆಯಾಸವಾಗುವ ಮನುಷ್ಯದೇಹಗಳನ್ನು (ಲೋಹಿತಾತ್) ರಾಜಸಕರ್ಮದಿಂದ ಪಡೆಯುವನು. ತಮಃ ಶೋಕೋತ್ಕಟಾನ್ ಕ್ವಚಿತ್=ಅಜ್ಞಾನ-ಶೋಕಗಳೇ ಹೆಚ್ಚಾಗಿ ಉಳ್ಳ ಪಶ್ವಾದಿದೇಹಗಳನ್ನು ಕೃಷ್ಣಾತ್ ಆಪ್ನೋತಿ=ತಾಮಸಕರ್ಮದಿಂದ ಪಡೆಯುವನು. ।।೨೯।।

**ಕ್ವಚಿತ್ ಪುಮಾನ್ ಕ್ವಚಿಚ್ಚ ಸ್ತ್ರೀ ಕ್ವಚಿನ್ನೋಭಯಮಂಧಧೀಃ ।**
**ದೇವೋ ಮನುಷ್ಯಸ್ತಿರ್ಯಗ್ ವಾ ಯಥಾ ಕರ್ಮಗುಣಂ ಭವಃ ।।೩೦।।**

ಕ್ವಚಿತ್=ಕೆಲವು ಸಲ ಪುಮಾನ್=ಪುರುಷನಾಗಿ ಕ್ವಚಿತ್=ಕೆಲವು ಸಲ ಸ್ತ್ರೀ=ಹೆಣ್ಣಾಗಿ ಕ್ವಚಿತ್=ಕೆಲವು ಸಲ ನೋಭಯಂ=ನಪುಂಸಕನಾಗಿ ಹುಟ್ಟುವನು. ಅಂಧದೀಃ=ಅಜ್ಞಾನಿಯು, ಯಥಾ ಕರ್ಮಗುಣಂ=ಕರ್ಮಾನುಸಾರವಾಗಿ ದೇವಃ ಭವಃ=ದೇವತಾ ಜನ್ಮವೋ, ಮನುಷ್ಯಃ ಭವಃ=ಮನುಷ್ಯ ಜನ್ಮವೋ, ತಿರ್ಯಗ್ ವಾ ಭವಃ=ಪಶುಜನ್ಮವೋ ಬರುವುದು. ।।೩೦।।

ಆ ಜನ್ಮಗಳಲ್ಲಿ ದೈವವಶವಾಗಿ ಸುಖದುಃಖಗಳು ಆಗುವವು ಎಂದು ಸದೃಷ್ಟಾಂತ ಹೇಳುವರು -

**ಕ್ಷುತ್ಪರೀತೋ ಯಥಾ ದೀನಃ ಸಾರಮೇಯೋ ಗೃಹಂ ಗೃಹಮ್ ।**
**ಚರನ್ ವಿಂದತಿ ಯದ್ ದಿಷ್ಟಂ ದಂಡಮೋದನಮೇವ ವಾ ।।೩೧।।**

ಯಥಾ=ಹೇಗೆ ಕ್ಷುತ್ಪರೀತಃ=ಹಸಿವೆಯಿಂದ ಬಳಲಿದ ದೀನಃ=ದುಃಖಿತವಾದ ಸಾರಮೇಯಃ=ನಾಯಿಯು ಗೃಹಂ ಗೃಹಂ ಚರನ್=ಮನೆ ಮನೆ ತಿರುಗಿ ಯತ್‌ದಿಷ್ಟಂ= ಯಾವುದು ದೈವಪ್ರಾಪ್ತವೋ ಆ ದಂಡಂ=ಹೊಡೆತವನ್ನೋ ಓದನಂ ವಾ=ಅನ್ನವನ್ನೋ ವಿಂದತಿ=ಹೊಂದುವುದೋ,।।೩೧।।

**ತಥಾ ಕಾಮಾಶಯೋ ಜೀವ ಉಚ್ಚಾವಚಪಥಾ ಭ್ರಮನ್ ।**
**ಉಪರ್ಯಧೋ ವಾ ಮಧ್ಯೇ ವಾ ಯಾತಿ ದಿಷ್ಟಂ ಪ್ರಿಯಾಪ್ರಿಯಮ್ ।।೩೨।।**

ತಥಾ=ಹಾಗೆ ಕಾಮಾಶಯಃ=ವಿಷಯಾಸಕ್ತ ಮನಸ್ಸುಳ್ಳ ಜೀವಃ=ಜೀವನು ಉಚ್ಚಾವಚಪಥಾ=ಉತ್ಕೃಷ್ಟವಾದ ನೀಚವಾದ ಮಾರ್ಗದಿಂದ ಭ್ರಮನ್=ಸಂಚರಿಸುತ್ತ ಉಪರಿ=ಮೇಲಿನ ಲೋಕಗಳಲ್ಲಿ ಅಧಃ=ಕೆಳಗಿನ ಲೋಕಗಳಲ್ಲಿ ಮಧ್ಯೇ=ಮಧ್ಯಲೋಕಗಳಲ್ಲಿ

ದಿಷ್ಟಂ=ದೈವಾತ್ (ಅದೃಷ್ಟವಶಾತ್) ಪ್ರಾಪ್ತವಾದ ಪ್ರಿಯಾಪ್ರಿಯಂ=ಸುಖದುಃಖಗಳನ್ನು ಯಾತಿ=ಹೊಂದುವನು. ।।೩೨।।

ಸಂಸಾರದಲ್ಲಿ ಸುಖವಂತೂ ಇದೆ. ಯಾವಾಗಲಾದರೂ ದುಃಖ ಬಂದರೆ ಅದಕ್ಕೆ ಪ್ರತಿಕ್ರಿಯೆ ಮಾಡಬಹುದು. ಆದ್ದರಿಂದ ಸಮತೆ ಏಕೆ ? ಎಂದರೆ ಹೇಳುವರು -

**ದುಃಖೇಷ್ವೇಕತರೇಣಾಪಿ ದೈವಭೂತಾತ್ಮಹೇತುಷು ।**
**ಜೀವಸ್ಯ ನ ವ್ಯವಚ್ಛೇದಃ ಸ್ಯಾಚ್ಚೇತ್ ತತ್ತತ್ಪ್ರತಿಕ್ರಿಯಾ ।।೩೩।।**

ಜೀವಸ್ಯ=ಜೀವನಿಗೆ, ದುಃಖಕ್ಕೆ ಪ್ರತೀಕಾರವೇ ಇಲ್ಲ. ಸ್ಯಾಚ್ಚೇತ್=ಪ್ರತಿಕ್ರಿಯಾ ಇದೆ ಎಂದಾದರೂ ದೈವಭೂತಾತ್ಮಹೇತುಷು=ಆಧಿದೈವಿಕ ಆಧಿಭೌತಿಕ ಆಧ್ಯಾತ್ಮಿಕ ಕಾರಣಗಳಿಂದ ಬರುವ ಮೂರು ದುಃಖೇಷು=ದುಃಖಗಳಲ್ಲಿ ಏಕತರೇಣ=ಯಾವುದೋ ಒಂದರಿಂದ ವ್ಯವಚ್ಛೇದಃ=ವಿಯೋಗವು ನ=ಇಲ್ಲ.

**ಭಾಗವತ ತಾತ್ಪರ್ಯ -**

ದುಃಖಪ್ರತಿಕ್ರಿಯೆಯಲ್ಲಿಯೂ ದುಃಖದ ವಿಯೋಗವಿಲ್ಲ ಎಂಬುದು ವಿರುದ್ಧವಲ್ಲ ಎಂದರೆ ಅಭಿಪ್ರಾಯ ಹೇಳುವರು -

**ತತ್ಪ್ರತಿಕ್ರಿಯಾಽಪಿ ದುಃಖಮೇವ ।।**

ದುಃಖದ ಪರಿಹಾರವೂ ದುಃಖವೇ, ಅಂದರೆ ದುಃಖದಿಂದ ಕೂಡಿದ್ದು ಎಂದು ಭಾವ. (ದುಃಖಾವಿನಾಭೂತವೆಂದು ಭಾವ.)।।೩೩।।

ಈ ವಿಷಯದಲ್ಲಿ ದೃಷ್ಟಾಂತ ಹೇಳುವರು -

**ಯಥಾ ಹಿ ಪುರುಷೋ ಭಾರಂ ಶಿರಸಾ ಗುರುಮುದ್ವಹನ್ ।**
**ತಂ ಸ್ಕಂಧೇನ ಸ ಆಧತ್ತೇ ತಥಾ ಸರ್ವಾಃ ಪ್ರತಿಕ್ರಿಯಾಃ ।।೩೪।।**

ಯಥಾ=ಹೇಗೆ ಪುರುಷಃ=ಪುರುಷನು ಶಿರಸಾ=ತಲೆಯ ಮೇಲೆ ಗುರುಂ ಭಾರಂ ಉದ್ವಹನ್=ಬಹಳ ಭಾರ ಹೊತ್ತವನಾಗಿ ತಂ=ಆ ಭಾರವನ್ನು ಸಃ=ಅವನು ಸ್ಕಂಧೇನ ಆಧತ್ತೇ=ಹೆಗಲ ಮೇಲೆ ಹೊರುವನೋ ತಥಾ=ಹಾಗೆ ಸರ್ವಾಃ ಪ್ರತಿಕ್ರಿಯಾಃ=ಎಲ್ಲ ಪರಿಹಾರಗಳು ತಲೆಭಾರ ತಪ್ಪಿಸಿದರೆ ಹೆಗಲಿಗೆ ಭಾರಬಿದ್ದಂತೆ. ಒಂದು ದುಃಖ ಪರಿಹರಿಸಿದರೆ, ಮತ್ತೊಂದು ದುಃಖವಿರುವುದು ಎಂದು ಭಾವ. ।।೩೪।।

ದುಃಖಕ್ಕೆ ಮೂಲಕಾರಣವಾದ ಕರ್ಮಗಳಿಗೆ ಪ್ರಾಯಶ್ಚಿತ್ತ ಮಾಡಿ ಕರ್ಮಗಳನ್ನೇ ಕಳೆದುಕೊಂಡರೆ ಸಂಪೂರ್ಣ ದುಃಖ ಹೋಗಬಹುದಲ್ಲ ? ಎಂದರೆ ಹೇಳುವರು -

**ನೈಕಾಂತತಃ ಪ್ರತೀಕಾರಃ ಕರ್ಮಣಾಂ ಕರ್ಮ ಕೇವಲಮ್ ।**
**ದ್ವಯಂ ಹ್ಯವಿದ್ಯೋಪಸೃತಂ ಸ್ವಪ್ನೇ ಸ್ವಪ್ನ ಇವಾನಘ ॥೩೪॥**

ಕರ್ಮಣಾಂ=ದುಃಖಕಾರಣವಾದ ಕರ್ಮಗಳಿಗೆ ಕೇವಲಂ ಕರ್ಮ=ಶ್ರೀಹರಿಗೆ ಸಮರ್ಪಿಸದಿರುವ ಪ್ರಾಯಶ್ಚಿತ್ತಕರ್ಮವು ಏಕಾಂತತಃ ಪ್ರತೀಕಾರೋ ನ=ಸರ್ವಥಾ ನಿವರ್ತಕವಲ್ಲ. ಹಿ=ಯಾವ ಕಾರಣ ದ್ವಯಂ=ನಿವರ್ತ್ಯವಾದ ನಿವರ್ತಕವಾದ ಕರ್ಮಗಳೆರಡೂ ಅವಿದ್ಯೋಪಸೃತಂ=ಅಜ್ಞಾನದಿಂದ ಬಂದವು. ಅದಕ್ಕೆ ದೃಷ್ಟಾಂತ- ಸ್ವಪ್ನೇ ಸ್ವಪ್ನ ಇವ=ಕನಸಿನಲ್ಲಿ ಕಂಡ ಆನೆ ಕುದುರೆಗಳನ್ನು ಓಡಿಸಲು ಕನಸಿನಲ್ಲಿ ಮಾಡುವ ಪ್ರಯತ್ನದಂತೆ ಸರ್ವಥಾ ನಿವರ್ತಕವಲ್ಲ. ಅದಕ್ಕೆ ಕಾರಣ ಅಜ್ಞಾನ ನಿವರ್ತಕವಾಗದ್ದರಿಂದ ಎಂದು ಭಾವ. ಸ್ವಪ್ನ ತೋರಿಸುವವನು ಶ್ರೀಹರಿಯು. ಮರೆ ಮಾಡುವವನೂ ಶ್ರೀಹರಿಯೇ. ಹಾಗೆ ಸಂಸಾರ ನೀಡುವವನು, ತೊಲಗಿಸುವವನೂ ಶ್ರೀಹರಿಯೇ ಎಂದು ಭಾವ. ॥೩೪॥

ಅಹಂಕಾರ-ಮಮಕಾರರೂಪ ಸ್ವಾತಂತ್ರ್ಯ(ಸ್ವಾಮಿತ್ವ)ಭ್ರಮನಿಮಿತ್ತಕವಾದುದು ಈ ಭ್ರಮ, ಹಾಗಾಗಿ ಭ್ರಮ ಹೋದರೆ ಸ್ವಪ್ನದಂತೆ ಸಂಸಾರವೂ ತಾನೇ ನಿವೃತ್ತವಾಗುವುದು ಎಂದರೆ ಹೇಳುವರು -

**ಅರ್ಥೇ ಹ್ಯವಿದ್ಯಮಾನೇಽಪಿ ಸಂಸೃತಿರ್ನ ನಿವರ್ತತೇ ।**
**ಮನಸಾ ಲಿಂಗರೂಪೇಣ ಸ್ವಪ್ನೇ ವಿಚರತೋ ಯಥಾ ॥೩೬॥**

ಅರ್ಥೇ=ಜ್ಞೇಯವಾದ ಅಹಂ-ಮಮತೆಗಳಾಗಲೀ, ದೇಹಾತ್ಮತತ್ವವಾಗಲೀ, ಅವಿದ್ಯಮಾನೇಽಪಿ=ಇಲ್ಲದಿದ್ದರೂ ಅಂದರೆ ಆ ಜ್ಞಾನವು ಭ್ರಮವಾದರೂ ಸಂಸೃತಿಃ= ಭ್ರಮಮೂಲಕವಾದ ದುಃಖಾದಿರೂಪ ಸಂಸಾರವು ನ ನಿವರ್ತತೇ=ನಿವೃತ್ತವಾಗುವುದಿಲ್ಲ. ಸಂಸಾರಕಾರಣವಾದ ದೇಹಾತ್ಮರುಗಳಿಗೆ ಸ್ಪಷ್ಟವಿವೇಕ ಇಲ್ಲದಿರುವುದು ಸ್ವಾತಂತ್ರ್ಯಭ್ರಮ. ತಾನಾಗಿ ಹೋಗಲಾರದು ಎಂದು ಭಾವ.

ಏಕೆಂದರೆ, ಯಥಾ=ಹೇಗೆ ಲಿಂಗರೂಪೇಣ ಮನಸಾ=(ಲೀನಂ ಗಮಯತೀತಿ ಲಿಂಗಂ ವಾಸನಾ) ವಾಸನಾರೂಪವಾದ ಮನಸ್ಸಿನಿಂದ ಸ್ವಪ್ನೇ ವಿಚರತಃ=ಜಾಗ್ರತ್ಕಾಲದಲ್ಲಿ ಕಂಡ ಪದಾರ್ಥಗಳೇ ಇವು ಎಂದು ಸ್ವಪ್ನ ಪದಾರ್ಥಗಳನ್ನು ತಿಳಿಯುವವನಿಗೆ ಸ್ವಪ್ನವೂ ಸಂಪೂರ್ಣವಾಗಿ ಹೋಗಲಾರದು. ವಾಸನಾಯುತ ಮನಸ್ಸಿರುವುದರಿಂದ ಪ್ರತಿನಿತ್ಯ ಕನಸು ಕಾಣುವನು. ಹಾಗೆಯೇ ಲಿಂಗರೂಪೇಣ ಮನಸಾ=ಲಿಂಗಶರೀರಾಂತರ್ಗತ ಮನಸ್ಸಿನ ನಿಮಿತ್ತವಾಗಿ ಸಂಸಾರವು ಅನುವೃತ್ತವಾಗುವುದು.

**ಭಾಗವತ ತಾತ್ಪರ್ಯ -**

ಹಿಂದಿನ ಶ್ಲೋಕದಲ್ಲಿ ''ಅವಿದ್ಯೋಪಸೃತಂ ದ್ವಯಂ'' ಎಂದು ಹೇಳಿದ್ದರಿಂದ ಅನಿರ್ವಚನೀಯ, ಅವಿದ್ಯಾಕಲ್ಪಿತವಾದ್ದರಿಂದ ಸ್ವಪ್ನಸಾಮ್ಯ ಸಂಸಾರಕ್ಕೆ ಹೇಳಿದಂತೆ ತೋರುವುದು. ಈ ಶ್ಲೋಕದಲ್ಲಿಯೂ ''ಅರ್ಥೇ ಅವಿದ್ಯಮಾನೇ'' ಎಂದು ಅಸತ್ವ ಹೇಳಿದಂತೆ ತೋರುವುದು. ಕಾರಣ ಎರಡೂ ಶ್ಲೋಕದ ತಾತ್ಪರ್ಯವನ್ನು ಕ್ರಮವಾಗಿ ಪ್ರಮಾಣದಿಂದಲೇ ಹೇಳುವರು -

**'ಸಂಸೃತೇಃ ಸ್ವಪ್ನಸಾಮ್ಯಂ ತು ಯಥಾರ್ಥಜ್ಞಾನವರ್ಜನಮ್' ಇತಿ ಚ ।**

**''ಜಾಗ್ರತ್ಯವಿದ್ಯಮಾನಂ ತು ದೇಹಾತ್ಮತ್ವಾದಿ ಕೇವಲಮ್ ।**
**ಅವಿದ್ಯಮಾನಂ ಸ್ವಪ್ನೇ ತು ಜಾಗ್ರತ್ವಜ್ಞಾನಮೇವ ಚ'' ಇತಿ ಪಾಡ್ಗುಣ್ಯೇ ॥**

ವಸ್ತುಗಳು ಇದ್ದಂತೆ ಅವುಗಳ ಜ್ಞಾನವಿಲ್ಲದಿರುವುದರಿಂದ ಸಂಸಾರಕ್ಕೆ ಸ್ವಪ್ನಸಾಮ್ಯ ಹೇಳಿದ್ದು. ಹೊರತು ಮಿಥ್ಯಾ ಎಂಬ ಅಭಿಪ್ರಾಯದಿಂದಲ್ಲ. ಸ್ವಾಪ್ನಪದಾರ್ಥಗಳಲ್ಲಿ ಇಲ್ಲದಿರುವ ಜಾಗ್ರತ್‌ಪದಾರ್ಥದ ಅಭೇದವು ತೋರುವಂತೆ ಮತ್ತು ಬಾಹ್ಯಮೃದಾದ್ಯು-ಪಾದಾನಕತ್ವವು ತೋರುವಂತೆ, ದೇಹಕ್ಕೆ ಜೀವನಿಂದ ಅಭೇದವಿಲ್ಲದಿದ್ದರೂ ದೇಹವೇ ಆತ್ಮಾ ಎಂದು ಜಾಗ್ರದವಸ್ಥೆಯಲ್ಲಿ ತೋರುವುದು ದೇಹಾತ್ಮರಿಗೆ ಸ್ಫುಟತರ ವಿವೇಕವಿಲ್ಲದ್ದರಿಂದ. ಹೊರತು ಸುಖದುಃಖಾದಿಗಳೆಲ್ಲ ಅವಿದ್ಯಮಾನವಲ್ಲ. ಆದಿಪದದಿಂದ ಅಹಂ ಮಮತಾದಿ ಸ್ವಾತಂತ್ರ್ಯ ಸ್ವೀಕರಿಸಬೇಕು. ॥೩೬॥

ಇದುವರೆಗೆ ಸಂಸಾರ ಬರುವ ರೀತಿಯನ್ನು ತಿಳಿಸಿ, ಈಗ ಅದು ಹೋಗುವ ರೀತಿ ತಿಳಿಸುವರು -

**ಅಥಾತ್ಮನೋಽರ್ಥಭೂತಸ್ಯ ಯತೋಽನರ್ಥಪರಂಪರಾ ।**
**ಸಂಸೃತಿಸ್ತದ್ವ್ಯವಚ್ಛೇದೋ ಭಕ್ತ್ಯಾ ಪರಮಯಾ ಹರೌ ॥೩೭॥**

ಅಥ=ಯಾವ ಕಾರಣ ಕೇವಲ ಕರ್ಮವು ದುಃಖಕಾರಣವು. ಸಂಸಾರವು ಭಗವಂತನ ಜ್ಞಾನವಾದರೆ ಹೋಗುವುದೋ, ಆದ್ದರಿಂದ ಲಿಂಗರೂಪ ಮನಸು ಸಂಸಾರಕ್ಕೆ ಮೂಲಕಾರಣವಾದ್ದರಿಂದ ಅರ್ಥಭೂತಸ್ಯ=ಸ್ವಾಭಾವಿಕವಾಗಿ ನಿರ್ದುಃಖಾನಂದಾತ್ಮಕನಾದ ಪುರುಷಾರ್ಥಯೋಗ್ಯನಾದ ಆತ್ಮನಃ=ಜೀವನಿಗೆ ಯತಃ=ಲಿಂಗಮನಸ್ಸಿನಿಂದ ಶ್ರೀಹರಿಯ ಅಜ್ಞಾನದಿಂದಲೋ ಅನರ್ಥಪರಂಪರಾ ಸಂಸೃತಿಃ=ದುಃಖಪರಂಪರಾರೂಪ ಸಂಸಾರವು ಬರುವುದೋ ತದ್ ವ್ಯವಚ್ಛೇದಃ=ಆ ಲಿಂಗಮನಸ್ಸಿನ ವಿಯೋಗವು ಹರೌ=ಶ್ರೀಹರಿಯಲ್ಲಿ ಪರಮಯಾ ಭಕ್ತ್ಯಾ= ಸರ್ವೋತ್ತಮ ಭಕ್ತಿಯಿಂದಲೇ ಆಗುವುದು. ॥೩೭॥

ಸಂಸಾರನಿವರ್ತಕಗಳು ವೈರಾಗ್ಯ-ಜ್ಞಾನಗಳೆಂದು ಬೇರೆ ಕಡೆ ಹೇಳಿರುವಾಗ ಭಕ್ತಿಯಿಂದಲೇ ಎಂದು ಹೇಗೆ ಹೇಳುವುದು ? ಎಂದರೆ, ಹೇಳುವರು -

**ವಾಸುದೇವೇ ಭಗವತಿ ಭಕ್ತಿಯೋಗಃ ಸಮಾಹಿತಃ ।**
**ಸಧ್ರೀಚೀನೇನ ವೈರಾಗ್ಯಂ ಜ್ಞಾನಂ ಚ ಜನಯಿಷ್ಯತಿ ॥೩೮॥**

ಭಗವತಿ ವಾಸುದೇವೇ=ಭಗವಂತನಾದ ಶ್ರೀಕೃಷ್ಣನಲ್ಲಿ ಸಮಾಹಿತಃ=ಮಾಡಿದ ಭಕ್ತಿಯೋಗಃ=ಭಕ್ತಿರೂಪ ಉಪಾಯವು ಸಧ್ರೀಚೀನೇನ ವೈರಾಗ್ಯಂ ಜ್ಞಾನಂ ಚ ಜನಯತಿ=ವೈರಾಗ್ಯ ಜ್ಞಾನಗಳನ್ನು ಹುಟ್ಟಿಸುವುದು. ಭಕ್ತಿಯಿಂದ ಎಂದು ಹೇಳಿದ್ದು ವೈರಾಗ್ಯಗಳನ್ನು ಹುಟ್ಟಿಸುವ ಮೂಲಕವೇ ಹೊರತು ಸಾಕ್ಷಾತ್ ಅಲ್ಲ ಕಾರಣ ವಿರೋಧವಿಲ್ಲ

ವೈರಾಗ್ಯ-ಜ್ಞಾನಗಳು ಭಕ್ತಿಗಿಂತ ಪೂರ್ವದಲ್ಲಿ ಇರುವವು, ಭಕ್ತಿಯಿಂದ ಬರುವವು ಎಂದು ಹೇಗೆ ಹೇಳುವಿರಿ ? ಎಂದರೆ ಹೇಳುವರು - ಸಧ್ರೀಚೀನೇನ ಸಮಾಹಿತಃ ಎಂದು. ಸಮೀಚೀನಪ್ರಕಾರದಿಂದ ಎಂದರ್ಥ. ಅಂದರೆ ಪ್ರಾಣಾಯಾಮಾದಿ ವಹ್ನಿಯಿಂದ ನಿರ್ದಗ್ಧ-ಮಲವುಳ್ಳ ಅಂತಃಕರಣದಿಂದ ಚೆನ್ನಾಗಿ ಸ್ಥಾಪಿತವಾದ ಅಥವಾ ನಿಷ್ಕಾಮಪುರುಷನಿಂದ ಮಾಡಿದ ಭಕ್ತಿಯಿಂದ ಅರ್ಥ. ಅಂದರೆ ಸಾಮಾನ್ಯಜ್ಞಾನ, ವೈರಾಗ್ಯ ಮೊದಲಿದ್ದರೂ ಸಮೀಚಿನಜ್ಞಾನ, ದೃಢವೈರಾಗ್ಯಗಳು ಭಕ್ತಿಯಿಂದ ಬರುವವು ಎಂದು ಭಾವ. ॥೩೮॥

ಇಂಥ ಭಕ್ತಿಯೋಗ ಬರುವುದಾದರೂ ಹೇಗೆ ? ಎಂದರೆ ಹೇಳುವರು -

**ಸೋಽಚಿರಾದಿವ ರಾಜರ್ಷೇ ಸ್ಯಾದಚ್ಯುತಕಥಾಶ್ರಯಃ ।**
**ಶೃಣ್ವತಃ ಶ್ರದ್ದಧಾನಸ್ಯ ನಿತ್ಯದಾ ಸ್ಯಾದಧೀಯತಃ ॥೩೯॥**

ಶದ್ದಧಾನಸ್ಯ=ಆಸ್ತಿಕ್ಯಬುದ್ಧಿಯುಳ್ಳವನಿಗೆ ನಿತ್ಯದಾ=ಯಾವಾಗಲೂ ಶೃಣ್ವತಃ=ಹರಿಕಥಾವನ್ನು ಕೇಳುವವನಿಗೆ ಅಧೀಯತಃ=ಅಧ್ಯಯನ ಮಾಡುವವನಿಗೆ ಅಚ್ಯುತಕಥಾಶ್ರಯಃ= ಶ್ರೀಹರಿಕಥೆಯೇ ಉತ್ಪಾದಕವಾಗಿವುಳ್ಳ ಸಃ=ಭಕ್ತಿಯೋಗವು ಅಚಿರಾದಿವ ಸ್ಯಾತ್= ಶ್ರೀಘ್ರದಲ್ಲಿಯೇ ಉಂಟಾಗುವುದು. ॥೩೯॥

ಹರಿಕಥಾ ಎಲ್ಲಿ ಕೇಳಸಿಗುವುದು ಎಂದು ಹೇಳುವರು -

**ಯತ್ರ ಭಾಗವತಾ ರಾಜನ್ ಸಾಧವೋ ವಿಶದಾಶಯಾಃ ।**
**ಭಗವದ್ಗುಣಾನುಕಥನಶ್ರವಣಾವ್ಯಗ್ರಚೇತಸಃ ॥೪೦॥**

ರಾಜನ್=ರಾಜನೇ ! ಯತ್ರ=ಎಲ್ಲಿ ವಿಶದಾಶಯಾಃ=ವಿಶಾಲ ಅಂತಃಕರಣವುಳ್ಳ ಭಗವದ್ಗುಣಾನುಕಥನಶ್ರವಣಾವ್ಯಗ್ರಚೇತಸಃ=ಭಗವಂತನ ಗುಣಗಳನ್ನು ಹೇಳುವುದು,

ಕೇಳುವುದರಲ್ಲೇ ಏಕಾಗ್ರ ಮನಸ್ಸುಳ್ಳ ಸಾಧವಃ=ಸಜ್ಜನರು ಇರುವರೋ ಅಲ್ಲಿ ಹರಿಕಥಾ ಶ್ರವಣವಾಗುವುದು. ||೪೦||

**ತಸ್ಮಿನ್ ಮಹನ್ಮುಖರಿತಾ ಮಧುಭಿಚ್ಚರಿತ್ರ-**
**ಪೀಯೂಷತೋಯಸರಿತಃ ಪರಿತಃ ಸ್ರವಂತಿ ।**
**ತಾ ಯೇ ಪಿಬಂತ್ಯನುಸವಂ ನೃಪ ಗಾಢಕರ್ಣೈಃ**
**ತಾನ್ ನ ಸ್ಪೃಶಂತ್ಯಶನತೃಡ್‌ಭಯಶೋಕಮೋಹಾಃ ||೪೧||**

ತಸ್ಮಿನ್=ಯಾವ ದೇಶದಲ್ಲಿ ಸಜ್ಜನರ ಸಮಾಜವಿದೆಯೋ ಅಲ್ಲಿ ಮಹನ್ಮುಖರಿತಾಃ= ಮಹಾತ್ಮರಿಂದ ಕೀರ್ತಿತವಾದ ಮಧುಭಿಚ್ಚರಿತ್ರಪೀಯೂಷತೋಯಸರಿತಃ=ಶ್ರೀಹರಿಯ ಚರಿತ್ರೆಯೆಂಬ ಅಮೃತರೂಪವಾದ ನೀರುಳ್ಳ ನದಿಗಳು ಪರಿತಃ=ಸುತ್ತಲು ಸ್ರವಂತಿ= ಹರಿಯುವವೋ ತಾಃ=ಅವುಗಳನ್ನು ಯೇ=ಯಾರು ಅನುಸವಂ=ಪ್ರತಿಯೊಂದು ಕಾಲದಲ್ಲಿಯೂ ಗಾಢಕರ್ಣೈಃ=ಸಾವಧಾನ ಕಿವಿಗಳಿಂದ ಪಿಬಂತಿ=ಆದರದಿಂದ ಪಾನ ಮಾಡುವರೋ ತಾನ್=ಅವರನ್ನು ಅಶನತೃಡ್‌ಭಯಶೋಕಮೋಹಾಃ=ಹಸಿವೆ, (ಲಕ್ಷಣಯಾ) ನೀರಡಿಕೆ, ಹೆದರಿಕೆ, ದುಃಖ, ಮೂರ್ಛಾದಿಗಳು ನ ಸ್ಪೃಶಂತಿ=ಬಾಧಿ ಸಲಾರವು. ||೪೧||

ಹಾಗಾದರೆ ಹರಿಕಥಾಶ್ರವಣ ಮಾಡಿ ಎಲ್ಲರೂ ಏಕೆ ಮುಕ್ತರಾಗುವುದಿಲ್ಲ ? ಎಂದರೆ ಹೇಳುವರು -

**ಏತೈರುಪದ್ರುತೋ ನಿತ್ಯಂ ಜೀವಲೋಕಃ ಸ್ವಭಾವಜೈಃ ।**
**ನ ಕರೋತಿ ಹರೇರ್ನೂನಂ ಕಥಾಮೃತನಿಧೌ ರತಿಮ್ ||೪೨||**

ಜೀವಲೋಕಃ=ಜನರ ಸಮೂಹವು ಸ್ವಭಾವಜೈಃ=ಶರೀರಸ್ವಭಾವದಿಂದುಂಟಾದ ಏತೈಃ=ಹಸಿವೆ ನೀರಡಿಕೆಗಳಿಂದ ನಿತ್ಯಂ=ಯಾವಾಗಲೂ ಉಪದ್ರುತಃ=ಪೀಡಿತರಾಗಿ ಹರೇಃ=ಶ್ರೀಹರಿಯ ಕಥಾಮೃತನಿಧೌ=ಕಥಾಮೃತಸಮುದ್ರದಲ್ಲಿ ರತಿಂ=ಮನಸ್ಸನ್ನು ನೂನಂ=ನಿಶ್ಚಯವಾಗಿ ನ ಕರೋತಿ ಮಾಡಲಾರದು. ||೪೨||

ಭಕ್ತಿಯೋಗದಿಂದಲೂ ಭಗವಂತನು ಸಂಪೂರ್ಣವಾಗಿ ಯಾರಿಂದಲೂ ತಿಳಿಯಲಶಕ್ಯನೆಂದು ಹೇಳುವರು -

**ಪ್ರಜಾಪತಿಪತಿಃ ಸಾಕ್ಷಾದ್ಭಗವಾನ್ ಗಿರಿಶೋ ಮನುಃ ।**
**ದಕ್ಷಾದಯಃ ಪ್ರಜಾಧ್ಯಕ್ಷಾ ನೈಷ್ಠಿಕಾಃ ಸನಕಾದಯಃ ||೪೩||**

ಸಾಕ್ಷಾತ್ ಪ್ರಜಾಪತಿಪತಿಃ=ಮುಖ್ಯ ಬ್ರಹ್ಮದೇವರು ಭಗವಾನ್=ಪೂಜ್ಯನಾದ ಗಿರಿಶಃ=ರುದ್ರದೇವನು ಮನುಃ=ಮನುವು ಪ್ರಜಾಧ್ಯಕ್ಷಾಃ=ಪ್ರಜಾಪತಿಗಳಾದ ದಕ್ಷಾದಯಃ=ದಕ್ಷ ಮೊದಲಾದವರು ನೈಷ್ಠಿಕಾಃ=ಬ್ರಹ್ಮಚಾರಿಗಳಾದ ಸನಕಾದಯಃ=ಸನಕಾದಿಗಳು, (ಅನ್ವಯ ಮುಂದುವರೆಯುವುದು)

**ಭಾಗವತ ತಾತ್ಪರ್ಯ -**

**'ಪ್ರಜಾಪತಿಪತಿರ್ಬ್ರಹ್ಮಾ ವಿರಿಂಚಶ್ಚೇತಿ ಕಥ್ಯತೇ' ಇತಿ ಶಬ್ದನಿರ್ಣಯೇ ॥**

ಪ್ರಜಾಪತಿಪತಿ, ವಿರಿಂಚ ಎಂದು ಬ್ರಹ್ಮದೇವರು ಕರೆಸಿಕೊಳ್ಳುವರು ಎಂದು ಶಬ್ದನಿರ್ಣಯದಲ್ಲಿದೆ. ॥೪೩॥

**ಮರೀಚಿರತ್ರ್ಯಂಗಿರಿಸೌ ಪುರಸ್ತ್ಯಃ ಪುಲಹಃ ಕ್ರತುಃ ।**
**ಭೃಗುರ್ವಸಿಷ್ಠ ಇತ್ಯೇತೇ ಮದಂತಾ ಬ್ರಹ್ಮವಾದಿನಃ ॥೪೪॥**

ಮರೀಚಿಃ=ಮರೀಚಿಯು, ಅತ್ರ್ಯಂಗಿರಸೌ=ಅತ್ರಿ ಮತ್ತು ಅಂಗಿರಸ ಋಷಿಗಳು, ಪುರಸ್ತ್ಯಃ ಪುಲಹಃ ಕ್ರತುಃ ಭೃಗುಃ ವಸಿಷ್ಠ ಇತ್ಯೇತೇ= ಪುರಸ್ತ್ಯ ಪುಲಹ, ಕೃತು, ಭೃಗು, ವಸಿಷ್ಠ ಇವರೇ ಮದಂತಾಃ=ನನ್ನವರೆಗೆ (ನಾರದ) ಬ್ರಹ್ಮವಾದಿನಃ=ಪರಮಾತ್ಮನನ್ನು ಹೇಳುವವರು. ॥೪೪॥

**ಅದ್ಯಾಪಿ ವಾಚಸ್ಪತಯಸ್ತಪೋವಿದ್ಯಾಸಮಾಧಿಭಿಃ ।**
**ಪಶ್ಯಂತೋಽಪಿ ನ ಪಶ್ಯಂತಿ ತದ್ ವಿಷ್ಣೋಃ ಪರಮಂ ಪದಮ್ ॥೪೫॥**

ಅದ್ಯಾಪಿ=ಈವರೆಗೂ ತಪೋವಿಧ್ಯಾಸಮಾಧಿಭಿಃ=ತಪಸ್ಸು ಜ್ಞಾನ ಭಕ್ತಿ ಸಮಾಧಿಗಳಿಂದ ವಾಚಸ್ಪತಯಃ=ಬೃಹಸ್ಪತಿಗಳು ಯತ್=ಯಾವುದನ್ನು ಪಶ್ಯಂತಃ ಅಪಿ=ತಿಳಿದರೂ ನ ಪಶ್ಯಂತಿ=ಸಂಪೂರ್ಣ ತಿಳಿಯಲಾರರೋ ತತ್=ಅದು ವಿಷ್ಣೋಃ ಪರಮಂ ಪದಂ= ಶ್ರೀಹರಿಯೇ ಸರ್ವೋತ್ತಮ ಸ್ವರೂಪವು. ॥೪೫॥

**ಶಬ್ದಬ್ರಹ್ಮಣಿ ದುಷ್ಪಾರೇ ಚರಂತ ಉರುವಿಸ್ತರೇ ।**
**ಮಂತ್ರಲಿಂಗೈರ್ವ್ಯವಚ್ಛಿನ್ನಂ ಭಜಂತೋ ನ ವಿದುಃ ಪರಮ್ ॥೪೬॥**

ಉರುವಿಸ್ತರೇ=ಬಹಳ ವಿಸ್ತಾರವಾದ ಆದ್ದರಿಂದಲೇ ದುಷ್ಪಾರೇ=ದಾಟಲಾಗದ ಶಬ್ದಬ್ರಹ್ಮಣಿ=ಆಗಮಗಳಲ್ಲಿ ಚರಂತಃ=ವಿಚಾರ ಮಾಡುವವರು ಮಂತ್ರಲಿಂಗೈಃ=ಮಂತ್ರಗಳಲ್ಲಿ ಹೇಳಿದ ಶ್ರೀಪತಿತ್ವ ಮೊದಲಾದ ಅಸಾಧರಣಧರ್ಮಗಳಿಂದ ವ್ಯವಚ್ಛಿನ್ನಂ=ಇತರ ವ್ಯಾವೃತ್ತನಾಗಿ ಜ್ಞಾತನಾದ ಪರಮಾತ್ಮನನ್ನು ಭಜಂತಃ ಅಪಿ=ಉಪಾಸನೆ ಮಾಡಿದರೂ ಪರಂ=ಪರಮಾತ್ಮನನ್ನು ನ ವಿದುಃ=ತಿಳಿಯಲಾರರು.

**ಭಾಗವತ ತಾತ್ಪರ್ಯ -**

ಇಲ್ಲಿ ಜ್ಞಾತಂ ನ ವಿದುಃ ಎಂಬುದು ವಿರುದ್ಧವಾಗಿ ತೋರುವುದು. ಕಾರಣ ವಿವಕ್ಷಿತ ತಾತ್ಪರ್ಯವನ್ನು ಪ್ರಮಾಣದಿಂದಲೇ ಹೇಳುವರು -

**ಮಂತ್ರಲಿಂಗೈರ್ವ್ಯವಚ್ಛಿನ್ನಂ ವೇದಶಬ್ದೋಕ್ತಮಾತ್ರಕಮ್ ।**
**ವೇದೋ ವದನ್ನಪಿ ಹರಿಂ ನ ಸಮ್ಯಗ್ವಕ್ತಿ ಕುತ್ರಚಿತ್ ।**
**ನಾರೋಹಯತ್ಯನುಭವಮಪ್ರಸಿದ್ಧಸ್ವರೂಪತಃ ।**
**ಅಥಾಪ್ಯನುಭವಾರೋಹಃ ಪ್ರಸನ್ನೇ ಕೇಶವೇ ಭವೇತ್ ।**
**ಕಿಂಚಿದೇವ ಸುಸಮ್ಯಕ್ ಚ ಸ್ವಯಂ ತ್ವನುಭವತ್ಯಮುಮ್ । ಇತಿ ವಾರಾಹೇ ॥**

ಮಂತ್ರಲಿಂಗೈರ್ವ್ಯವಚ್ಛಿನ್ನಂ ಎಂದರೆ ವೇದದಲ್ಲಿರುವ ನಾಮಗಳಿಂದ ಹೇಳಿದ್ದು ಮಾತ್ರ. (ಚೆನ್ನಾಗಿ ಹೇಳಿಲ್ಲ) ವೇದವು ಶ್ರೀಹರಿಯನ್ನು ಹೇಳಿದರೂ ಎಲ್ಲಿಯೂ ಚೆನ್ನಾಗಿ ಹೇಳುವುದಿಲ್ಲ ಪರಮಾತ್ಮನು ಅಪ್ರಸಿದ್ಧಸ್ವರೂಪನಾದುದರಿಂದ ಏಕಕಾಲದಲ್ಲಿ ಅಣುತ್ವ ಮಹತ್ವಾದಿಗಳನ್ನು ವೇದದಲ್ಲಿ ಹೇಳಿದರೂ ಅವುಗಳು ಅನುಭವಕ್ಕೆ ಬರಲಾರವು. ಶ್ರೀಹರಿಯು ಪ್ರಸನ್ನನಾದರೆ ಅವುಗಳೆಲ್ಲ ಅನುಭವಕ್ಕೆ ಬರುತ್ತವೆ. ಶ್ರೀಹರಿಯು ತಾನೊಬ್ಬನೇ ಚೆನ್ನಾಗಿ ತನ್ನನ್ನು ತಿಳಿದವನು ಎಂದು ವಾರಾಹದಲ್ಲಿದೆ. ।।೪೬।।

ಸಂಪೂರ್ಣವಾಗಿ ಅನುಭವಕ್ಕೆ ಬರುವುದಿಲ್ಲವೆಂದಾದರೆ ಪರಮಾತ್ಮನ ಅಂಥ ಜ್ಞಾನದಿಂದೇನು ಪ್ರಯೋಜನ ? ಲೌಕಿಕ ಜ್ಞಾನವೇ ಸಾಕು ಎಂಬ ಶಂಕಾಪರಿಹಾರಕ್ಕಾಗಿ, ಕೇವಲ ಲೌಕಿಕಜ್ಞಾನದ ನಿಂದಾ ಮಾಡುತ್ತ ಯೋಗ್ಯತಾನುಸಾರವಾಗಿ ಈಶ್ವರಜ್ಞಾನಿಯನ್ನು ಸ್ತುತಿಸುವರು ಎರಡು ಶ್ಲೋಕಗಳಿಂದ -

**ಸರ್ವೇಷಾಮಪಿ ಜಂತೂನಾಂ ಸತತಂ ದೇಹಪೋಷಣೇ ।**
**ಅಸ್ತಿ ಪ್ರಜ್ಞಾ ಸಮಾಯತ್ತಾ ಕೋ ವಿಶೇಷಸ್ತಯಾ ನೃಣಾಮ್ ।।೪೭।।**

ಇಹ=ಭಾರತವರ್ಷದಲ್ಲಿ ಸರ್ವೇಷಾಂ ಜಂತೂನಾಂ=ಎಲ್ಲ ಪ್ರಾಣಿಗಳಿಗೂ ಸತತಂ=ಯಾವಾಗಲೂ ದೇಹಪೋಷಣೇ=ತನ್ನ ದೇಹವನ್ನು ರಕ್ಷಿಸಿಕೊಳ್ಳುವ ವಿಷಯದಲ್ಲಿ ಪ್ರಜ್ಞಾ=ಬುದ್ಧಿಯು ಸಮಾಯತ್ತಾ=ಸಂತತವಾಗಿದೆ. ನೃಣಾಂ=ಮನುಷ್ಯರಿಗೆ ತಯಾ ಪ್ರಜ್ಞಯಾ ಕೋ ವಿಶೇಷಃ=ಅಂಥ ಪ್ರಜ್ಞೆಯಿಂದ ಪಶು ಮುಂತಾದುವುಗಳಿಂದ ಏನು ವೈಲಕ್ಷಣ್ಯ ?

**ಲಬ್ಧ್ವೇಹಾಂತೇ ಮನುಷ್ಯತ್ವಂ ಹಿತ್ವಾ ದೇಹಾದ್ಯಸದ್ಗ್ರಹಮ್ ।**
**ಆತ್ಮಸೃತ್ಯಾ ವಿಹಾಯೇದಂ ಜೀವಾತ್ಮಾ ಸ ವಿಶಿಷ್ಯತೇ ।।೪೮।।**

ಇಹ=ಕರ್ಮಭೂಮಿಯಲ್ಲಿ ಅಂತೇ=ಬಹುಜನ್ಮಗಳ ಕೊನೆಗೆ ಮನುಷ್ಯತ್ವಂ ಲಬ್ಧ್ವಾ= ಭಗವಂತನಿಂದ ಪ್ರೇರಿತ ಪೂರ್ವಾದೃಷ್ಟದಿಂದ ಮನುಷ್ಯಜನ್ಮ ಪಡೆದು ದೇಹಾದ್ಯಸದ್‌ಗ್ರಹಂ ಹಿತ್ವಾ=ನಾನೇ ಕರ್ತಾ, ನನ್ನ ದೇಹ ಎಂಬ ಭ್ರಮವನ್ನು ಬಿಟ್ಟು ಆತ್ಮಸೃತ್ಯಾ=ಪರಮಾತ್ಮ-ಜ್ಞಾನದಿಂದ ಇದಂ=ಶರೀರವನ್ನು ವಿಹಾಯ=ತ್ಯಜಿಸಿ ಯಃ=ಜೀವಾತ್ಮಾ ವರ್ತತೇ=ಯಾವ ಜೀವನಿರುವನೋ ಸಃ ವಿಶಿಷ್ಯತೇ=ಅವನು ಪಶುವಿಲಕ್ಷಣನಾಗುವನು. ಕಾರಣ ತನಗೆ ಯೋಗ್ಯವಾದ ಈಶ್ವರಜ್ಞಾನ ಮಾಡಿಕೊಳ್ಳಲು ಪ್ರಯತ್ನಿಸಬೇಕು. ।।೪೮।।

ಕೆಲವು ಅಧಿಕಾರಿಗಳಿಗೆ ಅನುಭಾವರೂಢವಾಗುವುದು ತಮ್ಮ ಪ್ರಯತ್ನದಿಂದಲ್ಲ ಎಂದು ಹೇಳುವರು -

**ಯದಾ ಯಸ್ಯಾನುಗೃಹ್ಣಾತಿ ಭಗವಾನಾತ್ಮಭಾವಿತಃ ।**
**ಸ ಜಹಾತಿ ಮತಿಂ ಲೋಕೇ ವೇದೇ ಚ ಪರಿನಿಷ್ಠಿತಾಮ್ ।।೪೯।।**

ಯದಾ=ಯಾವಾಗ ಆತ್ಮನಾ=ಮನಸ್ಸಿನಿಂದ ಭಾವಿತಃ=ಧ್ಯಾನ ಮಾಡಲ್ಪಟ್ಟ ಭಗವಾನ್= ಶ್ರೀಹರಿಯು ಯಸ್ಯ=ಯಾವ ಉಪಾಸಕರಿಗೆ ಅನುಗೃಹ್ಣಾತಿ=ಪ್ರಸನ್ನನಾಗಿ ಸ್ವಭಾವಸಿದ್ಧವಾದ ಪ್ರತಿಭೆಯಿಂದ ಅನುಭವಾರೂಢನಾಗುವನೋ ಸಃ=ಆ ಅಧಿಕಾರಿಯು ಲೋಕೇ= ಪೌರುಷೇಯಗಳಾದ ಭಾರತಾದಿಗಳಲ್ಲಿ ವೇದೇ ಚ ಪರಿನಿಷ್ಠಿತಾಂ ಮತಿಂ ಜಹಾತಿ= ವೇದಗಳಲ್ಲಿಯೂ ಇರುವ ಲಿಂಗ-ಶಬ್ದಗಳಿಗೆ ಅನುಸರಿಸಿಯೇ ಅನುಭವಾರೋಹವನ್ನು ಬಿಡುವನು.

**ಭಾಗವತ ತಾತ್ಪರ್ಯ -**

ಈ ಶ್ಲೋಕದಲ್ಲಿ ವೇದೇ ಚ ಮತಿಂ ಜಹಾತಿ ಎಂದು ವೇದಪರಿತ್ಯಾಗ ಹೇಳುವುದು, ಅದು ಪ್ರಮಾಣವಿರುದ್ಧ. ಕಾರಣ ಇಲ್ಲಿ ವಿವಕ್ಷಿತ ವೇದಪರಿತ್ಯಾಗವನ್ನು ಪ್ರಮಾಣದಿಂದ ತಿಳಿಸುವರು-

''ಯದಾ ತ್ವನುಭವೀ ಭೂಯಾಚ್ಛಬ್ದಮಾತ್ರಾನುರೋಧನಮ್ ।
ತ್ಯಕ್ತ್ವಾಽಥ ತಂ ವಿದುಃ ಪ್ರಾಜ್ಞಾಸ್ತ್ಯಕ್ತವೇದ ಇತಿ ಸ್ಮ ಹ ।
ಯದೈವ ತ್ಯಕ್ತವೇದಃ ಸ್ಯಾದಥಾಸ್ಮಾನ್ಮುಚ್ಯತೇ ಭಯಾತ್ ।
ಪ್ರಾಯಸ್ತು ವೈದಿಕಾ ಏವ ರುದ್ರಾದ್ಯಾ ಅಪಿ ವೈ ಪುರಾ ।।
ವೈದಿಕಸ್ತ್ಯಕ್ತವೇದಶ್ಚ ಬ್ರಹ್ಮೈವೈಕಃ ಪ್ರಜಾಪತಿಃ ।
ತತಸ್ತು ಕೇಶವಂ ಭಕ್ತ್ಯಾ ಸಂಪೂಜ್ಯ ಬಹುಜನ್ಮಸು ।
ತ್ಯಕ್ತವೇದತ್ವಮಾಪನ್ನಾಃ ಪ್ರಸಾದಾತ್ ಪರಮೇಷ್ಠಿನಃ'' ಇತಿ ಮಹಾಸಂಹಿತಾಯಾಮ್ ।

"ಕೇವಲಂ ವೇದಶಬ್ದೇನ ಜಾನನ್ ವೈದಿಕ ಉಚ್ಯತೇ ।
ವೇದಂ ವಿನಾಪ್ಯನುಭವಾಜ್ಞಾನಂಸ್ತು ತ್ಯಕ್ತವೈದಿಕಃ" ಇತ್ಯಧ್ಯಾತ್ಮೇ ।

"ತತ್ವಂ ವೇದಾನುಸಾರೇಣ ಚಿಂತಯನ್ ವೈದಿಕೋ ಭವೇತ್ ।
ವೇದ ಊಹಾಮನುಸರೇದ್ಯಸ್ಯ ಸ ತ್ಯಕ್ತವೈದಿಕಃ" ಇತಿ ಷಾಡ್ಗುಣ್ಯೇ ॥

ವೈದಿಕಶಬ್ದವನ್ನು ಮಾತ್ರ ಅನುಸರಿಸಿಯೇ ಶ್ರೀಹರಿಯನ್ನು ತಿಳಿಯುವುದನ್ನು ಬಿಟ್ಟು ಯಾವಾಗ ಶ್ರೀಹರಿಯ ಅನುಗ್ರಹದಿಂದ ಉಂಟಾದ ಸ್ವಾಭಾವಿಕ ಪ್ರತಿಭೆಯಿಂದಲೇ ಶ್ರೀಹರಿಯನ್ನು ತಿಳಿದುಕೊಳ್ಳುತ್ತಾನೋ ಅಂತಹವನನ್ನು ಜ್ಞಾನಿಗಳು ತ್ಯಕ್ತವೇದನೆಂದು ತಿಳಿಯುವರು. (ಹೇಳುವರು.) ಯಾವಾಗ ತ್ಯಕ್ತವೇದನಾಗುತ್ತಾನೋ ಆಗಲೇ ಸಂಸಾರಭಯದಿಂದ ಮುಕ್ತನಾಗುತ್ತಾನೆ. ರುದ್ರಾದಿದೇವತೆಗಳೂ ಕೂಡ ಪ್ರಾಯಶಃ ವೈದಿಕರೇ (ವೇದಗಳಿಂದ ಶ್ರೀಹರಿಯನ್ನು ತಿಳಿಯುವವರೇ.) ಮೊದಲು ವೇದದಿಂದಲೇ ಶ್ರೀಪರಮಾತ್ಮನನ್ನು ಚೆನ್ನಾಗಿ ತಿಳಿದು ಆಮೇಲೆ ಶ್ರೀಹರಿಯ ಅನುಗ್ರಹವಿಶೇಷದಿಂದ ಉಂಟಾದ ಪ್ರತಿಭೆಯಿಂದ ಚೆನ್ನಾಗಿ ಶ್ರೀಹರಿಯನ್ನು ತಿಳಿದ ಚತುರ್ಮುಖ ಬ್ರಹ್ಮನೊಬ್ಬನೇ ವೈದಿಕನೂ ತ್ಯಕ್ತವೇದನೂ ಎನಿಸುತ್ತಾನೆ. ಆಮೇಲೆ ರುದ್ರಾದಿಗಳೂ ಕೂಡ ಬಹುಜನ್ಮಗಳಲ್ಲಿ ಭಕ್ತಿಯಿಂದ ವೈದಿಕತ್ವಾನಂತರ ಭಗವಂತನನ್ನು ಚೆನ್ನಾಗಿ ಪೂಜಿಸಿ ಅವನ ಅನುಗ್ರಹದಿಂದ ಪ್ರತಿಭಾವಿಶೇಷ ಪಡೆದು ತ್ಯಕ್ತವೇದರೆನಿಸುವರು (ಬ್ರಹ್ಮದೇವರಂತೆ ಅನಾದಿಕಾಲದಿಂದಲ್ಲ ಎಂಬ ಅಭಿಪ್ರಾಯದಿಂದ ಬ್ರಹ್ಮೈಕಃ ಎಂದಿರುವರು) ಎಂದು ಮಹಾಸಂಹಿತೆಯಲ್ಲಿ ಹೇಳಿದೆ.

ಕೇವಲ ವೇದಶಬ್ದವನ್ನು ಅನುಸರಿಸಿಯೇ ಶ್ರೀಹರಿಯನ್ನು ತಿಳಿಯುವವನು ವೈದಿಕನೆನಿಸುತ್ತಾನೆ. ವೇದಗಳನ್ನು ಅನುಸರಿಸದೇ ಸ್ವಭಾವಸಿದ್ಧ ಪ್ರತಿಭಾಬಲದಿಂದಲೇ ಶ್ರೀಹರಿಯನ್ನು ತಿಳಿದವನು ತ್ಯಕ್ತವೈದಿಕನೆನಿಸುತ್ತಾನೆ ಎಂದು ಅಧ್ಯಾತ್ಮದಲ್ಲಿ ಹೇಳಿದೆ.

ವೇದಾನುಸಾರವಾಗಿ ಶ್ರೀಹರಿಯ ತತ್ವವನ್ನು ಧ್ಯಾನಿಸುವವನು ವೈದಿಕನೆಂದೂ, ಶ್ರೀಹರಿಯ ಅನುಗ್ರಹದಿಂದಲೇ ಯಾರ ಪ್ರತಿಭೆಯನ್ನು ವೇದವೇ ಅನುಸರಿಸುವುದೋ ಆತನು ತ್ಯಕ್ತವೈದಿಕನೆನಿಸುತ್ತಾನೆ ಎಂದು ಷಾಡ್ಗುಣ್ಯದಲ್ಲಿ ಹೇಳಿದೆ.

ಮೊದಲು ವೇದಗಳನ್ನು ಅನುಸರಿಸುವುದರಿಂದ ತ್ಯಕ್ತವೈದಿಕರು ವೇದಬಾಹ್ಯರಂತೆ ಅಲ್ಲ. ಬ್ರಹ್ಮದೇವರು ಅನಾದಿಕಾಲದಿಂದ ಸ್ವಪ್ರತಿಭೆಯಿಂದ ಶ್ರೀಹರಿಯನ್ನು ತಿಳಿಯುವರು. ಕಾರಣ ಮುಖ್ಯತ್ಯಕ್ತವೈದಿಕರು. ರುದ್ರಾದಿಗಳು ಮೊದಲು ವೈದಿಕರಾಗಿದ್ದು ನಂತರ ತ್ಯಕ್ತವೇದರಾಗುವರು ತಾರತಮ್ಯಾನುಸಾರವಾಗಿ. ಹೀಗಾಗಿ ಕಾಲಭೇದದಿಂದ ವೈದಿಕ-ತ್ಯಕ್ತವೈದಿಕರು ರುದ್ರಾದಿಗಳು. (ಬ್ರಹ್ಮದೇವರು ಸರ್ವದಾ ವೇದವಿಲ್ಲದೆಯೇ ವೇದಾನುಸಾರ ತತ್ವ ತಿಳಿಯುವುದರಿಂದ

ತ್ಯಕ್ತವೇದರು. ಬ್ರಹ್ಮದೇವರು ಚಿಂತಿಸುವುದನ್ನೇ ವೇದ ಅನುಸರಿಸುವುದು. ಈ ವಿಧ ತ್ಯಕ್ತವೈದಿಕತ್ವ ಬ್ರಹ್ಮದೇವರನ್ನು ಬಿಟ್ಟು ಬೇರೆಯವರಿಗೆ ಇಲ್ಲ ಕಾರಣ ಯಾವ ವಿರೋಧವಿಲ್ಲ

ಈವರೆಗೆ ಮೋಕ್ಷಸಾಧನ ಪರಮಾತ್ಮವಿದ್ಯಾವನ್ನು ಸ್ಪಷ್ಟವಾಗಿ ಉಪದೇಶಿಸಿ ಈಗ ಅದರಲ್ಲಿ ರುಚಿಯುಂಟಾಗಲು ಕಾಮ್ಯಕರ್ಮದಲ್ಲಿ ಆಸಕ್ತಿಯನ್ನು ಬಿಡಬೇಕೆಂದು ಉಪದೇಶಿಸುವರು -

**ತಸ್ಮಾತ್ ಕರ್ಮಸು ಬರ್ಹಿಷ್ಮನ್ನಜ್ಞಾನಾದರ್ಥಕಾಶಿಷು ।**
**ಮಾಽರ್ಥದೃಷ್ಟಿಂ ಕೃಥಾಃ ಶ್ರೋತ್ರಸ್ಪರ್ಶಿಷ್ವಸ್ಪೃಷ್ಟವಸ್ತುಷು ॥೫೦॥**

ಬರ್ಹಿಷ್ಮನ್=ಪ್ರಾಚೀನಬರ್ಹಿಯೇ ! ತಸ್ಮಾತ್=ಜ್ಞಾನವೇ ಮೋಕ್ಷಸಾಧನವಾದುದರಿಂದ ಅಜ್ಞಾನಾತ್=ಭಗವಂತನನ್ನು ತಿಳಿಯದೇ ಪರಮಪುರುಷಾರ್ಥವನ್ನು ತಿಳಿಯದೇ ಅರ್ಥಕಾಶಿಷು=ಪ್ರಯೋಜನಸಾಧನವೆಂದು ಪ್ರಕಾಶಮಾನಗಳಾದ ಶ್ರೋತ್ರಸ್ಪರ್ಶಿಷು= 'ಅಪಾಮ ಸೋಮಂ ಅಮೃತಾ ಅಭೂಮ' ಎಂದು ಕೇಳಿದೊಡನೇ ಕಿವಿಗೆ ಸುಖವೀವ ಆದರೆ ಅಸ್ಪೃಷ್ಟವಸ್ತುಷು=ಪರಮಾತ್ಮನ ಸಂಬಂಧವಿಲ್ಲದ ಕರ್ಮಸು=ಜ್ಯೋತಿಷ್ಟೋಮಾದಿ-ಗಳಲ್ಲಿ ಅರ್ಥದೃಷ್ಟಿಂ ಮಾ ಕೃಥಾಃ=ಪುರುಷಾರ್ಥಸಾಧನವೆಂದು ತಿಳಿಯಬೇಡಿರಿ. ॥೫೦॥

ಹಾಗಾದರೆ ಪ್ರೇಕ್ಷಾವಂತರು ಕರ್ಮಗಳಲ್ಲಿ ಪ್ರವೃತ್ತರಾಗುವರಲ್ಲ ? ಎಂದರೆ, ಅವರು ಪ್ರೇಕ್ಷಾವಂತರೇ ಅಲ್ಲವೆಂದು ಹೇಳುವರು -

**ಸ್ವಲೋಕಂ ನ ವಿದುಸ್ತೇ ವೈ ಯತ್ರ ದೇವೋ ಜನಾರ್ದನಃ ।**
**ಆಹುರ್ಧೂಮ್ರಧಿಯೋ ವೇದಂ ಸಕರ್ಮಕಮತದ್ವಿದಃ ॥೫೧॥**

ಯೇ=ಯಾರು ಕರ್ಮನಿಷ್ಠರೋ ತೇ=ಅವರು ಯತ್ರ=ಯಾವ ಲೋಕದಲ್ಲಿ ಜನಾರ್ದನಃ=ಶ್ರೀಹರಿ ಇದ್ದಾನೋ ತಂ ಸ್ವಲೋಕಂ=ಆ ತಮ್ಮಿಂದ ಗಮ್ಯವಾದ ಲೋಕವನ್ನು (ವೈಕುಂಠಾದಿ ಸ್ಥಾನವನ್ನು) ನ ವಿದುಃ=ಕರ್ಮಸಾಧ್ಯವಲ್ಲವೆಂದು ತಿಳಿದಿಲ್ಲ. ಧೂಮ್ರಧಿಯಃ= ಧೂಮಮಾರ್ಗದಲ್ಲಿ ಬುದ್ಧಿಯುಳ್ಳವರು. ವೇದಂ=ವೇದವನ್ನು ಅತದ್ವಿದಃ= ವೇದತಾತ್ಪರ್ಯಜ್ಞಾನವಿಲ್ಲದವರು ಸಕರ್ಮಕಂ ಆಹುಃ=ಕರ್ಮದಲ್ಲೇ ತಾತ್ಪರ್ಯವುಳ್ಳವು ಎಂದು ಹೇಳುವರು. ॥೫೧॥

ಅಂಥವರಲ್ಲಿಯೇ ನೀನೂ ಒಬ್ಬನೆಂದು ಹೇಳುವರು -

**ಆಸ್ತೀರ್ಯ ದರ್ಭೈಃ ಪ್ರಾಗಗ್ರೈಃ ಕಾರ್ತ್ಸ್ನ್ಯೇನ ಕ್ಷಿತಿಮಂಡಲಮ್ ।**
**ತತೋ ಬೃಹದ್ವಧಾನ್ಮಾನೀ ಕರ್ಮ ನಾವೈಷಿ ಯತ್ ಪರಮ್ ॥೫೨॥**

ಕಾರ್ತ್ಸ್ನ್ಯೇನ=ಸಂಪೂರ್ಣವಾದ ಕ್ಷಿತಿಮಂಡಲಂ=ಭೂಮಂಡಲವನ್ನು ಪ್ರಾಗಗ್ರೈಃ= ಪೂರ್ವಾಭಿಮುಖವಾದ ದರ್ಭೈಃ=ದರ್ಭೆಗಳಿಂದ ಆಸ್ತೀರ್ಯ=ಆಚ್ಛಾದಿಸಿ ತತಃ=ಅದರಿಂದ ಬೃಹದ್ವಧಾತ್=ಬಹುಪಶುಸಂಜ್ಞಪನರೂಪವಾದ ವಧದಿಂದ ಮಾನೀ=ಯಜ್ಞ ಮಾಡುವವ ನಾನು ಎಂಬ ಅಭಿಮಾನವುಳ್ಳ ನೀನು ಯತ್ ಪರಂ ಕರ್ಮ=ಯಾವುದು ಮೋಕ್ಷಜನಕವಾದ ಭಗವತ್ಪ್ರೀತಿಗಾಗಿ ಮಾಡುವ ಕರ್ಮವನ್ನು ನ ಅವೈಷಿ=ತಿಳಿಯಲಾರಿ. ದರ್ಭ ಹಾಕಿ ಪಶುವಧವನ್ನು ತಿಳಿದಿರುವಿಯೇ ಹೊರತು ಕರ್ಮಸ್ವರೂಪ ತಿಳಿದಿಲ್ಲವೆಂದು ಭಾವ. ।।೫೨।।

ಕರ್ಮವಿದ್ಯೆಯಲ್ಲಿ ಹೇಳಿದ ಕರ್ಮ ಮಾಡುವ ನಾನು ಅಜ್ಞಾನಿ ಹೇಗಾದೇನು ? ಎಂದರೆ, ಹೇಳುವರು -

**ತತ್ ಕರ್ಮ ಹರಿತೋಷಂ ಯತ್ ಸಾ ವಿದ್ಯಾ ತನ್ಮತಿರ್ಯಯಾ ।**
**ಹರಿರ್ದೇಹಭೃತಾಮಾತ್ಮಾ ಸ್ವಯಂ ಪ್ರಕೃತಿರೀಶ್ವರಃ ।।೫೩।।**

ಯತ್ ಹರಿತೋಷಂ=ಯಾವುದು ಶ್ರೀಹರಿ ಸಂತೋಷಜನಕವೋ ತತ್=ಅದೇ ಕರ್ಮವು ಬೇರೆಯದಲ್ಲ. ಯಯಾ ತನ್ಮತಿಃ=ಯಾವುದರಿಂದ ಭಗವಂತನ ಜ್ಞಾನವಾಗುವುದೋ ಸಾ ವಿದ್ಯಾ=ಅದೇ ವಿದ್ಯೆಯು. ಕರ್ಮಮಾತಪರವಾದುದಲ್ಲ, ಅಂದರೆ ಕರ್ಮಕಾಂಡವೂ ಸಹ ಹರಿಪರವಾದರೆ ಸಾ ವಿದ್ಯಾ ಎನಿಸುವುದು. ಅದರಲ್ಲಿ ಹೇಳಿದ ಕರ್ಮಗಳು ಶ್ರೀಹರಿತೋಷಜನಕವಾದರೆ ಕರ್ಮಪರವೆನಿಸುವುದು ಎಂದು ಭಾವ.

ಹರಿಸ್ವರೂಪ ಹೇಳುವರು- ಯಃ=ಯಾವನು ಹರಿಃ=ಪಾಪಹರಣ ಸ್ವಭಾವವುಳ್ಳವನಾದ್ದರಿಂದ ಹರಿಯೆನಿಸುವನೋ, ದೇಹಭೃತಾಂ=ಜೀವರುಗಳ ಆತ್ಮಾ= ಅಂತರ್ಯಾಮಿಯು ಸ್ವಯಂ=ತಾನೇ ಆಗಿರುವನೋ, ಅಂದರೆ ಮತ್ತೊಬ್ಬರ ಅಧೀನನಾಗದೇ ಪ್ರಕೃತಿಃ=ಪ್ರಕೃಷ್ಟಕೃತಿಯುಳ್ಳವನೋ, ಈಶ್ವರಃ=ಅಣಿಮಾದಿ ಅಷ್ಟೈಶ್ವರ್ಯರೂಪನೋ ಅಂತಹ ಗುಣವುಳ್ಳವನೇ ಹರಿಯು ಎಂದು ಭಾವ. ।।೫೩।।

**ತತ್ಪಾದಮೂಲಂ ಶರಣಂ ಯತಃ ಕ್ಷೇಮೋ ನೃಣಾಮಿಹ ।**
**ಸ ವೈ ಪ್ರಿಯತಮೋ ಹ್ಯಸ್ಯ ಯತೋ ನ ಭಯಮಣ್ವಪಿ ।**
**ಇತಿ ವೇದ ಸ ವೈ ವಿದ್ವಾನ್ ಯೋ ವಿದ್ವಾನ್ ಸ್ವಗುರುರ್ಹರಿಃ ।।೫೪।।**

ಯತಃ=ಯಾವನಿಂದ ನೃಣಾಂ=ಜನರಿಗೆ ಕ್ಷೇಮಃ=ಕಲ್ಯಾಣವಾಗುವುದೋ ತತ್ಪಾದಮಾಲಂ ಶರಣಂ=ಆ ಭಗವಂತನ ಪಾದಮೂಲವೇ ರಕ್ಷಕವು. ಅಸ್ಯ=ಅಧಿಕಾರಿಗೆ ಯೋ ವೈ ಪ್ರಿಯತಮಃ=ತನ್ನ ದೇಹಾದಿಗಳಿಗಿಂತ ಅತಿಶಯಪ್ರಿಯನೋ ಯತಃ=ಯಾವನಿಂದ (ಯಾವನನ್ನು ಶರಣು ಹೋದವಗೆ) ಅಣ್ವಪಿ ಭಯಂ ನಾಸ್ತಿ=ಸ್ವಲ್ಪವೂ ಭಯವಿಲ್ಲವೋ

ಸಃ=ಅವನೇ ಹರಿಃ=ಶ್ರೀಹರಿಯು. ಯಃ=ಯಾವನು ವಿದ್ವಾನ್=ಸರ್ವಜ್ಞನೋ ಆದ್ದರಿಂದಲೇ ಸ್ವಗುರುಃ=ವ್ಯಾಸಾದಿರೂಪದಿಂದ ತನಗೆ ಹಿತೋಪದೇಶಕನೋ ಅವನು ಹರಿಃ=ಶ್ರೀಹರಿ ಎಂದು ಯಃ ವೇದ=ಯಾವನು ತಿಳಿಯುವನೋ ಸ ಏವ ವಿದ್ವಾನ್=ಅವನೇ ತಿಳುವಳಿಕೆಯುಳ್ಳವನು. ।।೫೪।।

**ನಾರದ ಉವಾಚ**

**ಪ್ರಶ್ನ ಏವಂ ಹಿ ಸಂಛಿನ್ನೋ ಭವತಃ ಪುರುಷರ್ಷಭ ।**
**ಅತ್ರ ಮೇ ವದತೋ ಗುಹ್ಯಂ ನಿಶಾಮಯ ಸುನಿಶ್ಚಿತಮ್ ।।೫೫।।**

ಹೇಪುರುಷರ್ಷಭ=ಪುರುಷಶ್ರೇಷ್ಠನೇ ! ಭವತಃ=ನಿಮ್ಮ ಪ್ರಶ್ನಃ=ಪ್ರಶ್ನವು ಏವಂ=ಈ ರೀತಿ ಸಂಛಿನ್ನಃ=ಪರಿಹೃತವಾಯಿತು. ಅತ್ರ=ಈ ವಿಷಯದಲ್ಲಿ ವದತಃ=ಹೇಳುವ ಮೇ=ನನ್ನಿಂದ ಸುನಿಶ್ಚಿತಂ=ದೃಡವಾಗಿ ನಿಶ್ಚಯಿಸಿದ ಗುಹ್ಯಂ=ರಹಸ್ಯವನ್ನು ನಿಶಾಮಯ=ಕೇಳು।।೫೫।।

ವೈರಾಗ್ಯಪೂರ್ವಕವಾಗಿ ಶ್ರೀಹರಿಯ ಭಜನ ಮಾಡಲು, ಮೃಗಸಾಮ್ಯವನ್ನು ನಿನಗೆ ತಿಳಿದುಕೋ ಎಂದು ಹೇಳುವರು -

**ಕ್ಷುದ್ರಂಚರಂ ಸುಮನಸಾಂ ಶರಣೇ ಮಥಿತ್ವಾ**
**ರಕ್ತಂ ಷಡಂಘ್ರಿಗಣಸಾಮಸುಲುಬ್ಧಕರ್ಮಣಮ್ ।**
**ಅಗ್ರೇ ವೃಕಾನಸುಹೃದೋಽವಿಗಣಯ್ಯ ಯಾಂತಂ**
**ಪೃಷ್ಠೇ ಮೃಗಂ ಮೃಗಯುಲುಬ್ಧಕಬಾಣಭಿನ್ನಮ್ ।।೫೬।।**

ಶ್ಲೋಕಾರ್ಥವನ್ನು ಮೂಲಕಾರರೇ ವಿವರಿಸುವರು -

ಅಸ್ಯ ಅರ್ಥಃ ಃ- ಸುಮನಸಾಂ ಸಧರ್ಮಾಣಾಂ ಸ್ತ್ರೀಣಾಂ ಶರಣೇ ಆಶ್ರಮೇ= ಪುಷ್ಪಗಳಂತೆ ಕೋಮಲಶರೀರವುಳ್ಳ ಸ್ತ್ರೀಯರ ಆಶ್ರಮದಲ್ಲಿ ಪುಷ್ಪಮಧುಗಂಧವತ್=ಹೂವಿನ ಮಕರಂದ ಮತ್ತು ಗಂಧಗಳಂತೆ ಕ್ಷುದ್ರತಮಂ=ಅತ್ಯಲ್ಪವಾದ ಕಾಮ್ಯಕರ್ಮವಿಪಾಕಜಂ= ಪ್ರವೃತ್ತಕರ್ಮಫಲವಾದ ವಿಷಯಸುಖಲೇಶವನ್ನು ಕಾಮಸುಖಲವಂ ಜೈಹ್ವ್ಯೋಪಸ್ಥ್ಯಾದಿ= ರಸನೇಂದ್ರಿಯಗುಹ್ಯೇಂದ್ರಿಯಾದಿವಿಷಯಗಳನ್ನು ಚರಂ ವಿಚಿನ್ವಂತಂ=ಅನುಭವಿಸಲಿಚ್ಛಿಸುವ ಆದಕ್ಕಾಗಿ ಮಿಥುನೀ ಭೂಯ=ಜೊತೆಯಾಗಿ ತದಭಿನಿವೇಶಿತಮನಸಂ=ಅದರಲ್ಲಿ ಆಸಕ್ತಮನಸ್ಸುಳ್ಳ ಷಡಂಘ್ರಿಗಣಸಾಮಗೀತವತ್=ಭ್ರಮರ ಸಮೂಹದ ಸುಂದರಗಾನದಂತೆ ಅತಿಮನೋಹರವನಿತಾದಿಜನಾಲಾಪೇಷು=ಅತ್ಯಂತ ಮನೋಹಾರಿಯಾದ ಸ್ತ್ರೀಜನರ ಸಲ್ಲಾಪದಲ್ಲಿ ಅತಿತರಾಂ=ಅತ್ಯಂತವಾಗಿ ಪ್ರಲೋಭಿತಕರ್ಣಂ=ತದೇಕಮಗ್ನವಾದ ಕಿವಿಗಳುಳ್ಳ ಅಗ್ರೇ=ಮುಂದೆ ವೃಕಯೂಥವತ್=ತೋಳಗಳ ಸಮೂಹದಂತೆ ಆತ್ಮನಃ=ತನ್ನ ಆಯುಃ

ಹರತಃ=ಆಯುಷ್ಯವನ್ನು ಅಪಹರಣ ಮಾಡುವ ಅಹೋರಾತ್ರಾಂತಾನ್ ಕಾಲವಿಶೇಷಾನ್= ಹಗಲು ರಾತ್ರಿ ಕಾಲವಿಶೇಷಗಳನ್ನು ಅವಿಗಣಯ್ಯ=ಲೆಕ್ಕಿಸದೇ ಗೃಹೇಷು ವಿಹರಂತಂ= ಮನೆಯಲ್ಲಿ ವಿಹಾರ ಮಾಡುವ ಪೃಷ್ಠತ ಏವ=ಹಿಂದೆಯೇ ಪರೋಕ್ಷಮನುಪ್ರವೃತ್ತಃ= ಕಾಣದಂತೆ ಹಿಂಬಾಲಿಸಿದ ಲುಬ್ಧಕಃ ಕೃತಾಂತಃ=ಬೇಡನಂತಿರುವ ಯಮನು ಶರೇಣ= ಬಾಣದಿಂದ ಯಂ=ಯಾವನನ್ನು ಪರವಿಧ್ಯತಿ=ಹೊಡೆಯುವನೋ ತಂ ಇಮಂ ಆತ್ಮಾನಂ=ಆ ಜೀವನನ್ನು ಭಿನ್ನಹೃದಯಂ ದ್ರಷ್ಟುಂ ಅರ್ಹಸಿ ಇತಿ=ಎದೆಸೀಳಿದವನನ್ನು ನೋಡಲು ಯೋಗ್ಯನಾಗಿರುವಿ.

ಜೀವಪಕ್ಷದಲ್ಲಿ ಶ್ಲೋಕಾರ್ಥ ಮೇಲಿನಂತೆ. ಮೃಗ (ದೃಷ್ಟಾಂತ) ಪಕ್ಷದಲ್ಲಿ ಕ್ಷುದ್ರಂ ಚರಂತಂ=ಅಲ್ಪವಾಗಿ ಹುಲ್ಲು ತಿನ್ನುವ ಸುಮನಸಾಂ ಶರಣೇ=ಹೂಗಳ ತೋಟದಲ್ಲಿ ಮಥಿತ್ವಾ (ಮಿಲಿತ್ವಾ) ಹೆಣ್ಣುಜಿಂಕೆಯೊಡನೆ ಸೇರಿ ರಕ್ತಂ=ಅಲ್ಲೇ ಆಸಕ್ತವಾದ ಷಡಂಘ್ರಿಗಣಸಾಮ-ಸುಲುಬ್ಧಕರ್ಣಂ=ಸಂಗೀತದ ಏಕಾಗ್ರಕಿವಿಯುಳ್ಳ ಅಗ್ರೇ=ಮುಂದಿರುವ ಅಸುಹೃದಃ= ವೈರಿಗಳಾದ ವೃಕಾನ್=ತೋಳಗಳನ್ನು ಅವಿಗಣಯ್ಯ ಯಾಂತಂ=ಲೆಕ್ಕಿಸದೇ ಹೋಗುತ್ತಿರುವ ಮೃಗಯುಲುಬ್ಧಕಬಾಣಭಿನ್ನಂ=ಬೇಟೆಯಾಡುವ ಬೇಡರ ಬಾಣದಿಂದ ನಾಶ ಹೊಂದಿದ ಮೃಗಂ ಪಶ್ಯ=ವಿಚಾರ ಮಾಡಿನೋಡು.

ಜಿಂಕೆಗಳಿಗೆ ಸಂಗೀತ ಬಹಳ ಪ್ರಿಯವಾದುದು. ಕಾರಣ ಸಂಗೀತ ಕೇಳುತ್ತ ಹುಲ್ಲು ಕಚ್ಚಿ ಹೆಣ್ಣು ಜಿಂಕೆಯೊಡನೆ ಮುಂದಿರುವ ತೋಳವನ್ನೂ ಗಮನಿಸಿದೇ ಇರುವಾಗ ಹಿಂದಿನಿಂದ ಬೇಡನ ಬಾಣದಿಂದ ಹೊಡೆಯುವಂತೆ, ವಿಷಯಾಸಕ್ತನಾದ ಜೀವನನ್ನು ಅರಿವಾಗದೇ ಯಮನು ಸೆಳೆದೊಯ್ಯುವನು ಎಂದು ಭಾವ. ।।೫೬।।

ಮುಂದೇನು ? ಎಂದರೆ ಹೇಳುವರು -

**ಸ ತ್ವಂ ವಿಚಕ್ಷ್ವ ಮೃಗಚೇಷ್ಟಿತಮಾತ್ಮನೋಽಂತ-**
**ಶ್ಚಿತ್ತಂ ನಿಯಚ್ಛ ಹೃದಿ ಕರ್ಣಧುನೀಂ ಚ ಚಿತ್ತೇ ।**
**ಜಹ್ಯಂಗನಾಶ್ರಮಮಸತ್ತಮಯೂಥಗಾಥಂ**
**ಪ್ರೀಣೀಹಿ ಹಂಸಶರಣಂ ವಿರಮ ಕ್ರಮೇಣ ।।೫೭।।**

ಸಃ ತ್ವಂ=ಕಾಮ್ಯಕರ್ಮಾಸಕ್ತನಾದ ಆ ನೀನು ಆತ್ಮನಃ=ನಿನ್ನಲ್ಲಿರುವ ಮೃಗಚೇಷ್ಟಿತಂ= ಜಿಂಕೆಗೆ ಸಮಾನವಾದ ವ್ಯಾಪಾರವನ್ನು ವಿಚಕ್ಷ್ವ=ತಿಳಿ. ಏಕೆಂದರೆ ನೀನೂ ಸಹ ಪರಿಣಾಮದಲ್ಲಿ ವಿರಸವಾದ್ದರಿಂದ ಹೂಗಳಿಗೆ ಸಮಾನರಾದ ಸ್ತ್ರೀಯರೊಡನೆ ಇರುವಿ. ಅವರಲ್ಲಿ ಆಸಕ್ತನಾಗಿ ಅವರ ಮನೋಹರಮಾತುಗಳಿಗೆ ಕಿವಿಕೊಟ್ಟು ಮುಂದಿರುವ

ಆಯುಷ್ಯಹರಣ ಮಾಡುವ ಕಾಲವನ್ನು ಲೆಕ್ಕಿಸದೇ ಹಿಂದೆ ಯಮನ ದಂಡದಿಂದ ಭೇದಿಸಲ್ಪಟ್ಟಿರುವಿ. ಇದನ್ನು ವಿಚಾರ ಮಾಡಿ,

ಆತ್ಮನಃ=ನಿನ್ನ ಚಿತ್ತಂ=ಮನಸ್ಸನ್ನು ಹೃದಿ ಅಂತಃ=ಹೃದಯದಲ್ಲಿರುವ ಸರ್ವಪಾಪಹಾರಕನಾದ ಹೃನ್ನಾಮಕ ಭಗವಂತನಲ್ಲಿ ನಿಯಚ್ಛ=ಸ್ಥಾಪಿಸು. ಕರ್ಣಧುನೀಂ ಚ=ಕಿವಿ ಮೊದಲಾದ ಇಂದ್ರಿಯಗಳನ್ನು ಸೆಳೆಯುವ ಚಿತ್ತಂ=ಮನಸ್ಸನ್ನು ನಿಯಚ್ಛ=ನಿಯಮಿಸು. ಅಸತ್ತಮಯೂಥಗಾಥಂ=ಅತಿಶಯದುಷ್ಟವಾದ ವಿಷಯಸಮೂಹಗಳ ವಾರ್ತೆಯುಳ್ಳ ಅಂಗನಾಶ್ರಮಂ=ಗೃಹಾಶ್ರಮವನ್ನು ಜಹಿ=ಬಿಡು. ಅಂಗನಾಭ್ರಮಂ ಎಂಬ ಪಾಠದಲ್ಲಿಯೂ ಅಂಗನೆಯರ ಭ್ರಮವುಳ್ಳ ಗೃಹಾಶ್ರಮವನ್ನು ಎಂದೇ ಅರ್ಥ. ಹಂಸಶರಣಂ ಪ್ರೀಣೀಹಿ= ನಿರ್ದೋಷನಾದ ಹರಿಯೇ ಗತಿಯೆಂದು ತೃಪ್ತನಾಗು. ಅಥವಾ ಸನ್ಯಾಸಿಗಳಿಗೆ ಶರಣನಾದ ಪರಮಾತ್ಮನನ್ನು ಪ್ರೀತಿಗೊಳಿಸು ಕ್ರಮೇಣ. ವಿರಮ=ಸಾಧನ ಮಾಡುತ್ತ ಸಂಸಾರದಿಂದ ವಿರಾಮ ಹೊಂದು.

**ಭಾಗವತ ತಾತ್ಪರ್ಯ -**

ಇಲ್ಲಿ ಚಿತ್ತ-ಚಿತ್ತಿಶಬ್ದಗಳಿಗೆ ಪೌನರುಕ್ತ್ಯ ಕಾಣುವುದರಿಂದ ಅರ್ಥಭೇದ ಹೇಳುವರು -

**'ಚಿತ್ತಿರ್ಬುದ್ಧಿರಿತಿ ಜ್ಞೇಯಾ ಚಿತ್ತಂ ತು ಸ್ಮೃತಿಕಾರಣಮ್' ಇತಿ ಶಬ್ದನಿರ್ಣಯೇ ।**

ನಿಶ್ಚಯಜ್ಞಾನಕ್ಕೆ ಕಾರಣವಾದುದು ಚಿತ್ತಿಯು. ಸ್ಮೃತಿಗೆ ಕಾರಣವಾದುದು ಚಿತ್ತವು ಎಂದು ಶಬ್ದನಿರ್ಣಯದಲ್ಲಿದೆ. ಅಂತೂ ಸ್ಮೃತಿಕಾರಣವಾದ ಚಿತ್ತವನ್ನು ''ಬುದ್ಧಿರಧ್ಯವಸಾನಾಯ'' ಎಂದಿರುವುದರಿಂದ ಅಧ್ಯವಸಾನ (ನಿಶ್ಚಯ) ಕಾರಣವಾದ ಚಿತ್ತಿಯನ್ನು ಕೇಶವನಲ್ಲಿ ಸ್ಥಾಪಿಸು ಎಂದರ್ಥ. ।।೫೭।।

ರಾಜನು ಪ್ರಮೇಯಾಂತರವನ್ನು ಕೇಳಲು, ಇಲ್ಲಿಯವರೆಗೆ ತಾವು ಹೇಳಿದ್ದನ್ನು ಚೆನ್ನಾಗಿ ತಿಳಿದೆನೆಂದು ಹೇಳುವನು -

**ರಾಜೋವಾಚ**

**ಶ್ರುತಮನ್ವೀಕ್ಷಿತಂ ಬ್ರಹ್ಮನ್ ಭಗವಾನ್ ಯದಭಾಷತ ।**
**ನೈತಜ್ಜಾನಾತ್ಯುಪಾಧ್ಯಾಯಾಃ ಕಿನ್ನ ಬ್ರೂಯುರ್ವಿದುರ್ಯದಿ ।।೫೮।।**

ಬ್ರಹ್ಮನ್=ನಾರದರೇ ! ಶ್ರುತಂ=ಶ್ರುತಿಪ್ರಸಿದ್ಧವಾದ ಅನ್ವೀಕ್ಷಿತಂ=ವಿಚಾರಿತವಾದ ಆತ್ಮಯೋಗ್ಯಜ್ಞಾನವನ್ನು ಯದ್ ಭಗವಾನ್ ಅಭಾಷತ=ಏನು ನೀವು ಹೇಳಿದಿರೋ ಏತತ್=ಇದನ್ನು ಉಪಾಧ್ಯಾಯಾಃ=ಗುರುಗಳು (ಕರ್ಮೋಪದೇಶ ಮಾಡಿದವರು) ನ

ಜಾನಂತಿ=ತಿಳಿದಿಲ್ಲ, ಯದಿ ವಿದುಃ=ಒಂದು ವೇಳೆ ತಿಳಿದಿದ್ದರೆ ಕಿಂ ನ ಬ್ರೂಯುಃ=ಏಕೆ ಹೇಳದಿರುವರು ? ।।೫೮।।

**ಸಂಶಯೋಽತ್ರ ನ ಮೇ ವಿಪ್ರ ಸಂಛಿನ್ನಸ್ತತ್ಕೃತೇ (ತೋ) ಮಹಾನ್ ।**
**ಋಷಯೋಽಪಿ ಹಿ ಮುಹ್ಯಂತಿ ಯತ್ರ ನೇಂದ್ರಿಯವೃತ್ತಯಃ ।।೫೯।।**

ಅತಃ=ಆದ್ದರಿಂದ ಅತ್ರ=ಕೇಳಬೇಕಾದ ಪ್ರಮೇಯವಿಷಯದಲ್ಲಿ ಮೇ=ನನ್ನ ಸಂಶಯಃ= ಸಂಶಯವು ತತ್ಕೃತಃ=ಉಪಾಧ್ಯಾಯ ಅಜ್ಞಾನನಿಮಿತ್ತವಾಗಿ ನ ಭಿನ್ನಃ=ಪರಿಹಾರವಾಗಿಲ್ಲ. ಹೇ ವಿಪ್ರ=ನಾರದರೇ ! ಯತ್ರ=ಯಾವ ವಿಷಯದಲ್ಲಿ ಇಂದ್ರಿಯವೃತ್ತಯಃ ನ=ಇಂದ್ರಿಯಗಳು ಪ್ರವೃತ್ತವಾಗುವುದಿಲ್ಲವೋ ಮತ್ತು ಋಷಯಃ ಅಪಿ=ಮುನಿಗಳೂ ಸಹ ಮುಹ್ಯಂತಿ= ಮೋಹಿತರಾಗುವರು. ಆದ್ದರಿಂದ ನಿಮ್ಮನ್ನು ಪ್ರಶ್ನಿಸುವೆನು ಎಂದು ಭಾವ. ।।೫೯।।

ಸಂಶಯವಿಷಯವಾದ ಪ್ರಷ್ಟವ್ಯಾರ್ಥವನ್ನು ಎರಡು ಶ್ಲೋಕದಿಂದ ತಿಳಿಸುವರು -

**ಕರ್ಮಾಣ್ಯಾರಭತೇ ಯೇನ ಪುಮಾನಿಹ ವಿಹಾಯ ತಮ್ ।**
**ಅಮುತ್ರಾನ್ಯೇನ ದೇಹೇನ ಜುಷ್ಟಾನ್ಯಸಕೃದಶ್ನುತೇ ।।೬೦।।**

**ಇತಿ ವೇದವಿದಾಂ ವಾಚಃ ಶ್ರೂಯಂತೇ ತತ್ರ ತತ್ರ ಹ ।**
**ಕರ್ಮ ಚ ಕ್ರಿಯತೇ ಪ್ರೋಕ್ತಂ ಪರೋಕ್ಷಂ ನ ಪ್ರಕಾಶತೇ ।।೬೧।।**

ಪುಮಾನ್=ಮನುಷ್ಯನು ಕರ್ಮಾಣಿ=ಕರ್ಮಗಳನ್ನು ಯೇನ=ಯಾವ ದೇಹದಿಂದ ಆರಭತೇ=ಮಾಡುವನೋ ಅದರ ಪ್ರಾರಬ್ಧಕರ್ಮನಾಶವಾದ ಮೇಲೆ ತಂ=ಆ ದೇಹವನ್ನು ಇಹ=ಇಲ್ಲಿಯೇ ವಿಹಾಯ=ಬಿಟ್ಟು ಅಮುತ್ರ=ಪರಲೋಕದಲ್ಲಿ ಅನ್ಯೇನ ದೇಹೇನ=ಬೇರೆ ದೇಹದಿಂದ ಜುಷ್ಟಾನಿ=ಮಾಡಿದ ಕರ್ಮಫಲಗಳನ್ನು ಅಸಕೃದಶ್ನುತೇ=ಪುನಃ ಪುನಃ ಅನುಭವಿಸುವನು ಇತಿ=ಎಂದು ವೇದವಿದಾಂ ವಾಚಃ=ವೇದವನ್ನು ತಿಳಿದವರ ಮಾತು ತತ್ರ ತತ್ರ=ಅಲ್ಲಲ್ಲಿ ಶ್ರೂಯಂತೇ=ಕೇಳಿಬರುವವು. ತತ್ ಕಥಂ=ಅದು ಹೇಗೆ ? ಅಂದರೆ ಜೀವನೊಬ್ಬನಾದರೂ ಅವನಿಗೆ ಕರ್ತೃತ್ವ-ಭೋಕ್ತೃತ್ವ ಸಂಪಾದಕವಾದ ದೇಹಗಳು ಬೇರೆಯಾಗಿವೆಯಲ್ಲ ? ಎರಡರಲ್ಲೂ ಅನುಸ್ಯುತದೇಹ ಬಂದಿಲ್ಲವಲ್ಲ ? ಪ್ರೋಕ್ತಂ ಕರ್ಮ ಕ್ರಿಯತೇ=ವೇದೋಕ್ತಕರ್ಮವು ಜನರಿಂದ ಮಾಡಲ್ಪಡುವದು, ಪರೋಕ್ಷಂ ನ ಪ್ರಕಾಶತೇ=ತಕ್ಷಣವೇ ನಾಶವಾಗುವುದು. ಕರ್ಮವೂ ನಾಶವಾದ್ದರಿಂದ ಲೋಕಾಂತರದಲ್ಲಿ ಭೋಗ ಹೇಗೆ ? ಎಂದು ಭಾವ।।೬೦-೬೧।।

ಸ್ಥೂಲದೇಹ ಬೇರೆಯಾದರೂ ಕರ್ತೃತ್ವ-ಭೋಕ್ತೃತ್ವಾಪಾದಕಮನಃಪ್ರಧಾನಕವಾದ ಲಿಂಗದೇಹವು ಎರಡೂ ಕಡೆಗೆ ಒಂದೇ ಇರುವುದರಿಂದ ಶಂಕಿಸಿದ (ಅಕೃತಾಭ್ಯಾಗಮಕೃತ ವಿಪ್ರಣಾಶ) ದೋಷವಿಲ್ಲ ಎಂದು ಮೊದಲನೇ ಶಂಕೆಗೆ ಉತ್ತರಿಸುವರು ಈ ಶ್ಲೋಕದಲ್ಲಿ -

**ನಾರದ ಉವಾಚ -**

**ಯೇನೈವಾರಭತೇ ಕರ್ಮ ತೇನೈವಾಮುತ್ರ ತತ್ ಪುಮಾನ್ ।**
**ಭುಂಕ್ತೇ ಹ್ಯವ್ಯವಧಾನೇನ ಲಿಂಗೇನ ಮನಸಾ ಸ್ವಕಮ್ ॥೬೨॥**

ಯೇನ=ಯಾವ ಮನಃಪ್ರಧಾನಕವಾದ ಅವ್ಯವಧಾನೇನ=ಉಭಯತ್ರ ಅನೂಸ್ಯೂತವಾದ ಲಿಂಗೇನ ಮನಸಾ=ಮನಃಪ್ರಧಾನಕ ಲಿಂಗದೇಹದಿಂದ ಕರ್ಮ ಆರಭತೇ=ಕರ್ಮ ಮಾಡುವನೋ ತೇನೈವ=ಅದರಿಂದಲೇ ಅಮುತ್ರ=ಸ್ವರ್ಗಾದಿಗಳಲ್ಲಿ ಪೂಮಾನ್=ಅಧಿಕಾರಿಯು ತತ್=ಕರ್ಮವನ್ನು ಅಂದರೆ ಅದರ ಫಲವಾದ ಸುಖದುಃಖಗಳನ್ನೂ ಭುಂಕ್ತೇ=ಅನುಭವಿಸುವನು. ಸ್ಥೂಲದೇಹವೂ ಸಹ ಮನೋದ್ವಾರಾನೇ ಕರ್ತೃತ್ವಭೋಕ್ತೃತ್ವಾಪಾದಕವಾದ್ದರಿಂದ 'ಯೇನೈವ ತೇನೈವ' ಎಂದಿರುವರು. ॥೬೨॥

ಸ್ಥೂಲದೇಹ ಬೇರೆಯಾದರೂ ಮನಸು ಒಂದೇ ಆದ್ದರಿಂದ ಭೋಕ್ತೃತ್ವವನ್ನು ಸ್ವಪ್ನದೃಷ್ಟಾಂತದಿಂದ ಉಪಪಾದಿಸುವರು -

**ಶಯಾನಮಿಮಮುತ್ಸೃಜ್ಯ ಶ್ವಸಂತಂ ಪುರುಷೋ ಯಥಾ ।**
**ಕರ್ಮಾತ್ಮನ್ಯಾಹಿತಂ ಭುಂಕ್ತೇ ತಾದೃಶೇನೇತರೇಣ ವಾ ॥೬೩॥**

ಪುರಷಃ=ಜೀವನು ಇಮಂ=ಜಾಗ್ರದವಸ್ಥೆಯಲ್ಲಿರುವ ಶ್ವಸಂತಂ=ಜೀವಿಸಿರುವ ಶಯಾನಂ=ಮಲಗಿರುವ ದೇಹವನ್ನು ಉತ್ಸೃಜ್ಯ=ಅಭಿಮಾನ ಪರಿತ್ಯಾಗ ಮಾಡಿ ಆತ್ಮನಿ=ಮನಸ್ಸಿನಲ್ಲಿ ಆಹಿತಂ=ಸಂಸ್ಕಾರರೂಪದಿಂದಿರುವ ಕರ್ಮ=ಕರ್ಮಫಲವಾದ ಸ್ವಾಪ್ನ ಸುಖದುಃಖಾದಿಗಳನ್ನು ತಾದೃಶೇನ=ಮಲಗಿದ ದೇಹಸದೃಶವಾದ ಇತರೇಣ ವಾ=ವಿಲಕ್ಷಣವಾದ ಪಶ್ವಾದಿ ದೇಹಗಳಿಂದಾಗಲೀ ಭುಂಕ್ತೇ=ಅನುಭವಿಸುವನು. ಯಥಾ=ಹೇಗೋ ಹಾಗೆಯೇ ಲೋಕಾಂತರದಲ್ಲಿಯೂ ಅನುಭವಿಸುವನು ಎಂಧರ್ಥ.

ಅಹಂ ಮಮ ಎಂಬ ಅಭಿಮಾನವೇ ಕರ್ತೃತ್ವಭೋಕ್ತೃತ್ವಾಪಾದಕವೆಂಬ ಶಂಕಾಪರಿಹಾರಕ್ಕೆ ಮನಸಿಗೇನೇ ಕರ್ತೃತ್ವಭೋಕ್ತೃತ್ವಾಪಾದಕತ್ವವನ್ನು ವಿಶದಪಡಿಸುವರು -

**ಮಮೇತಿ ಮನಸಾ ಯದ್ ಯದಸಾವಹಮಿತಿ ಬ್ರುವನ್ ।**
**ಗೃಹ್ಣೀಯಾತ್ ತತ್ ಪುಮಾನ್ ರಾದ್ಧಂ ಕರ್ಮ ಯೇನ ಪುನರ್ಭವಃ ॥೬೪॥**

ಮನಸಾ=ಮನಸ್ಸಿನಿಂದ ಮಮ ಇತಿ=ಇವರು ನನ್ನ ಮಕ್ಕಳೇ ಮೊದಲಾದವರು ಅಹಂ ಇತಿ=ನಾನೇ ಕರ್ತಾ ಎಂದು ಬ್ರುವನ್=ಅಭಿಮಾನ ಮಾಡುವವನಾಗಿ ಯಾವನು ಪುಮಾನ್=ಮನುಷ್ಯನು ಯದ್ ಯದ್ ಗೃಹ್ಣೀಯಾತ್=ಯಾವ ಯಾವ ಕರ್ಮ ಮಾಡುವನೋ ತತ್ ರಾದ್ಧಂ=ಆ ಸಂಪಾದಿಸಿದ ಕರ್ಮವನ್ನು ಸಃ ಭುಂಕ್ತೇ=ಅನುಭವಿಸುವನು. ಯೇನ=ಅನುಭವಿಸಿ ಉಳಿದ ಕರ್ಮದಿಂದ ಪುನರ್ಭವಃ=ಮತ್ತೆ ಮನುಷ್ಯಲೋಕದಲ್ಲಿ ಉತ್ಪತ್ತಿಯಾಗುವುದು ಅಂದರೆ ಕರ್ಮಗಳು ಪುಣ್ಯ-ಪಾಪಗಳನ್ನು ಹುಟ್ಟಿಸಿ ನಾಶವಾಗುವವು. ಆದ್ದರಿಂದ ಅದಕ್ಕನುಗುಣವಾಗಿ ಜನ್ಮಾಂತರ ಬರುವುದು ಎಂದು ಎರಡನೇ ಶಂಕೆಗೆ ಉತ್ತರಿಸಿದಂತಾಯಿತು. ।।೬೪।।

ಕರ್ಮವು ಅದೃಷ್ಟವನ್ನು ಉತ್ಪಾದಿಸಿ ನಾಶವಾಗುವುದು ಎಂದು ಸೂಚಿಸಿದ್ದನ್ನು ದೃಷ್ಟಾಂತದಿಂದ ಉಪಪಾದಿಸುವರು -

**ಯಥಾಽನುಮೀಯತೇ ಚಿತ್ತಮುಭಯೈರಿಂದ್ರಿಯೇಹಿತೈಃ ।**
**ಏವಂ ಪ್ರಾಗ್ದೇಹಜಂ ಕರ್ಮ ಲಕ್ಷ್ಯತೇ ಚಿತ್ತವೃತ್ತಿಭಿಃ ।।೬೫।।**

ಯಥಾ=ಹೇಗೆ ಉಭಯೈಃ=ಎರಡು ವಿಧಗಳಾದ ಇಂದ್ರಿಯೇಹಿತೈಃ=ಜ್ಞಾನೇಂದ್ರಿಯ, ಕರ್ಮೇಂದ್ರಿಯಗಳಿಂದಾಗುವ ಸಾತ್ವಿಕಾದಿ ಭೇದಗಳುಳ್ಳ ವ್ಯಾಪಾರಗಳಿಂದ ಚಿತ್ತಂ=ಸಾತ್ವಿಕಾದಿ ಮನಸ್ಸನ್ನು ಅನುಮೀಯತೇ=ಊಹಿಸಲ್ಪಡುವುದೋ ಏವಂ=ಅದರಂತೆ ಚಿತ್ತವೃತ್ತಿಭಿಃ= ಸಾತ್ವಿಕಾದಿಭೇದವುಳ್ಳ ಮನೋವೃತ್ತಿಗಳಿಂದ ಪ್ರಾಗ್ದೇಹಜಂ ಕರ್ಮ=ಪೂರ್ವಜನ್ಮದಲ್ಲಿ ಮಾಡಿದ ಕರ್ಮ ಲಕ್ಷ್ಯತೇ=ತಿಳಿಯಲ್ಪಡುವುದು.

ಸಾತ್ವಿಕ ರಾಜಸ ತಾಮಸ ಜ್ಞಾನ ಕರ್ಮಗಳಿಂದ ಅವುಗಳಿಗೆ ಜನಕವಾದ ಸಾತ್ವಿಕರಾಜಸ ತಾಮಸ ಮನಸ್ಸನ್ನು ತಿಳಿಯುವಂತೆ ಮನೋವೃತ್ತಿಗಳಿಂದ ಜನ್ಮಾಂತರಕರ್ಮವನ್ನು ತಿಳಿಯಬಹುದು. ಇಲ್ಲವಾದರೆ ಕೆಲವರ ಚಿತ್ತವೃತ್ತಿ ಸಾತ್ವಿಕಿ, ಕೆಲವು ರಾಜಸಿ, ಕೆಲವು ತಾಮಸಿ ಎಂಬ ವಿಭಾಗವಾದೀತು ಎಂದು ಭಾವ. ।।೬೫।।

ಪೂರ್ವೋತ್ತರದೇಹಗಳಲ್ಲಿ ಮನಸ್ಸು ಒಂದೇ ಎಂದು ಉಪಪಾದಿಸುವರು -

**ನಾನುಭೂತಂ ಕ್ವ ಚಾನೇನ ದೇಹೇನಾದೃಷ್ಟಮಶ್ರುತಮ್ ।**
**ಕದಾಚಿದುಪಲಭ್ಯೇತ ಯದ್ರೂಪಂ ಯಾದೃಗಾತ್ಮನಿ ।।೬೬।।**

ಕ್ವಚ=ಎಲ್ಲಿಯೂ ಯತ್=ಯಾವನು ನ ಅನುಭೂತಂ=ಅನುಭವಿಸಿಲ್ಲವೋ ಅದೃಷ್ಟಂ= ನೋಡಿಲ್ಲವೋ ಅಶ್ರುತಂ=ಕೇಳಿಲ್ಲವೋ ಯದ್ರೂಪಂ=ಯದಾತ್ಮಕವೋ ಯಾದೃಕ್=ಯಾವ

ಪ್ರಕಾರದ್ದೋ ತತ್=ಅದು ಕದಾಚಿತ್=ಎಂದೂ ನಮಗೆ ಸ್ವಪ್ನಾವಸ್ಥೆಯಲ್ಲಿ ಮಹಾತ್ಮರಿಗೆ ಜಾಗ್ರದವಸ್ಥೆಯಲ್ಲಿಯೂ ನ ಉಪಲಭ್ಯೇತ ಆತ್ಮನಿ=ಮನಸ್ಸಿನಲ್ಲಿ ತೋರಲಾರದು. ಅನೇನ ದೇಹೇನ=ಈಗಿರುವ ದೇಹದಿಂದ. ।।೬೬।।

**ತೇನಾಸ್ಯ ತಾದೃಶೋ ರಾಜನ್ ಲಿಂಗಿನೋ ದೇಹಸಂಭವಃ ।**
**ಶ್ರದ್ಧಾಸ್ವಾನನುಭೂತಾರ್ಥಂ ನ ಮನ ಸ್ಪ್ರಷ್ಟುಮರ್ಹತಿ ।।೬೭।।**

ತೇನ=ಹಿಂದೆ ಹೇಳಿದ ಕಾರಣದಿಂದ ಅಸ್ಯ ಲಿಂಗಿನಃ=ಈ ಮನಃಪ್ರಧಾನಕ ಲಿಂಗಶರೀರವುಳ್ಳ ಜೀವನಿಗೆ ತಾದೃಶಃ=ಆ ವಿಧವಾದ ದೇಹಸಂಭವಃ=ಪೂರ್ವದೇಹವಿತ್ತೆಂದು ಶ್ರದ್ಧಸ್ವ=ನಿಶ್ಚಯವಾಗಿ ತಿಳಿ. ಅನನುಭೂತಾರ್ಥಂ=ಯಾವುದೂ ಹಿಂದೆಂದೂ ಅನುಭವಕ್ಕೆ ಬಂದಿಲ್ಲವೋ ಅದನ್ನು ಮನಃ ಸ್ಪ್ರಷ್ಟುಂ ನ ಅರ್ಹತಿ=ಮುಟ್ಟಲಾರದು, ಮನಸ್ಸಿನಲ್ಲಿ ತೋರಲಾರದು. ಇದರಿಂದ ಪೂರ್ವೋತ್ತರದೇಹದಲ್ಲಿ ಮನಸು ಒಂದೇ ಎಂದು ಅಂಗಿಕರಿಸಬೇಕು. ।।೬೭।।

ಹೇಗೆ ಈಗಿನ ಕಾರ್ಯಬಲದಿಂದ ಅದಕ್ಕನುಕೂಲವಾದ ಮನಸ್ಸು ಪೂರ್ವದೇಹವಿದೆ ಎಂದು ತಿಳಿಯುವುದೋ ಹಾಗೆ ಭೂತ-ಭವಿಷ್ಯತ್ಕಾಲಗಳಲ್ಲಿ ಕರ್ಮವೂ ಇದೇ ತಿಳಿಸುವುದು ಎಂದು ಹೇಳುವರು -

**ಮನ ಏವ ಮನುಷ್ಯಸ್ಯ ಪೂರ್ವರೂಪಾಣಿ ಶಂಸತಿ ।**
**ಭವಿಷ್ಯತಶ್ಚ ಭದ್ರಂ ತೇ ತಥೈವ ನ ಭವಿಷ್ಯತಃ ।।೬೮।।**

ಮನಃ=ಮನಸ್ಸೇ ಮನುಷ್ಯಸ್ಯ=ಮನುಷ್ಯನ ಪೂರ್ವರೂಪಾಣಿ=ಹಿಂದಿನ ಶರೀರಗಳನ್ನು ಶಂಸತಿ=ಹಿಂದೆ ಹೇಳಿದಂತೆ ತಿಳಿಸುವುದು ಯಥಾ=ಹೇಗೋ ತಥೈವ=ಹಾಗೆಯೇ ಭವಿಷ್ಯತಃ=ಮುಂದೆ ಸ್ವರ್ಗಾದಿಗಳನ್ನು ಹೊಂದುವ ನಭವಿಷ್ಯತಃ=ವರ್ತಮಾನದ (ಈಗಿರುವ) ತೇ=ನಿನ್ನ ಭದ್ರಂ=ಪೂರ್ವೋತ್ತರಕಾಲಗಳಲ್ಲಿರುವ ಪುಣ್ಯರೂಪ ಅದೃಷ್ಟವನ್ನು ಮನಃ ಏವ ಶಂಸತಿ=ಮನಸ್ಸೇ ಇದೆ ಎಂದು ತಿಳಿಸುವುದು. ಇಲ್ಲವಾದರೆ ನಿನಗೆ ಈಗ ಸಾಮ್ರಾಜ್ಯಾಧಿ ಪತ್ಯವು ಮುಂದೆ ಸ್ವರ್ಗಪ್ರಾಪ್ತಿಯೂ ಆದೀತು. ಇಲ್ಲಿ ಭದ್ರಂ ಎಂಬ ಪದದಿಂದ ಕರ್ಮನಾಶವಾದರೂ ಅದರಿಂದುಂಟಾದ ಅದೃಷ್ಟನಾಶವಾಗಲಾರದು ಎಂದು ಸೂಚಿಸುವರು. ಅದು ಇವನ ಅನುಭವಾರೂಢವಾಗಲು ತೇ ಎಂದಿರುವರು. ।।೬೮।।

ಇದನ್ನೇ ವಿವರಿಸುವರು -

**ಅದೃಷ್ಟಮಶ್ರುತಂ ಚೇಹ ಕ್ವಚಿನ್ಮನಸಿ ದೃಶ್ಯತೇ ।**
**ಯಥಾ ತಥಾಽನುಮಂತವ್ಯಂ ದೇಶಕಾಲಕ್ರಿಯಾಶ್ರಯಮ್ ।।೬೯।।**

ಯಥಾ=ಹೇಗೆ ಇಹ=ಈ ಜನ್ಮದಲ್ಲಿ ಅದೃಷ್ಟಂ=ನೋಡದ ಅಶ್ರುತಂ=ಕೇಳದ ವಸ್ತುವು ಕ್ವಚಿತ್=ಕೆಲವು ಸಲ ಮನಸಿ=ಮನಸ್ಸಿನಲ್ಲಿ ದೃಶ್ಯತೇ=ಕಾಣುವುದು. ಆದರಿಂದ ತತ್=ಅದು ಪೂರ್ವಜನ್ಮದಲ್ಲಿ ನೋಡಿದ್ದು ಕೇಳಿದ್ದು ಎಂದು ಕಲ್ಪಿಸುವೆವೋ ತಥಾ=ಹಾಗೆ ಇಹ=ಈ ಜನ್ಮದಲ್ಲಿ ಕ್ವಚಿತ್=ಕೆಲವು ದೇಶಕಾಲಗಳಲ್ಲಿ ಶಬ್ದಾದಿವಿಷಯಗಳು (ಭೋಗ್ಯವಸ್ತುಗಳು) ದೊರೆಯುವವೋ ಕ್ರಿಯಾಸಾಧ್ಯವಾಗಿ ಕಾಣುವುದರಿಂದ ಅದಕ್ಕನುಗುಣವಾದ ದೇಶಕಾಲಕ್ರಿಯಾಶ್ರಯಂ=ಕ್ರಮಿಕ ದೇಶಕಾಲವಿಶೇಷದಲ್ಲಿ ಮಾಡಿದ ಕರ್ಮಸಾಧ್ಯ ಅದೃಷ್ಟವನ್ನು ಅನುಮಾನಿಸಬೇಕು.

ವಿಜಯಧ್ವಜರು ಸ್ವಶಿರಚ್ಛೇದಾದಿಗಳು ಕನಸಿನಲ್ಲಿ ಕಂಡಾಗ ದೇಶಾಂತರದಲ್ಲಿ ಶಿರಸ್ಸನ್ನು ಕಾಲಾಂತರದಲ್ಲಿ ಛೇದನಕ್ರಿಯಾವನ್ನು ಕಂಡು ಕನಸಿನಲ್ಲಿ ಒಂದೆಡೆ ಭ್ರಾಂತಿಯಿಂದ ನೋಡುವನು ಎಂದು ಅರ್ಥ ಮಾಡಿರುವರು. ।।೬೯।।

ಪೂರ್ವಾದೃಷ್ಟವಾದುದೇ ಈಗ ಕಾಣುವಾದದರೆ ಅನಂತಜನ್ಮಗಳಲ್ಲಿ ಮಾಡಿದ ಕರ್ಮಫಲಗಳು ಏಕಕಾಲದಲ್ಲಿ ಅನುಭವಕ್ಕೆ ಬರಬೇಕಾಗುವುದಲ್ಲ ? ಎಂದರೆ, ಹೇಳುವರು -

**ಸರ್ವೇ ಕ್ರಮಾನುರೋಧೇನ ಮನಸೀಂದ್ರಿಯಗೋಚರಾಃ ।**
**ಆಯಾಂತಿ ವರ್ಗಶೋ ಯಾಂತಿ ಸರ್ವೇ ಸುಮನಸೋ ಜವಾತ್ ।।೭೦।।**

ತಸ್ಮಾತ್=ಆ ಆ ದೇಶಕಾಲಗಳಲ್ಲಿ ಮಾಡಿದ ಕರ್ಮಗಳು ಕ್ರಮಿಕವಾದುದರಿಂದ ಅವುಗಳಿಂದ ಸಾಧ್ಯವಾದ ಸರ್ವೇಂದ್ರಿಯಗೋಚರಾಃ=ಎಲ್ಲ ಇಂದ್ರಿಯಗಳಿಗೆ ವಿಷಯಗಳಾದ ಶಬ್ದಾದಿಗಳು ಕ್ರಮಾನುರೋಧೇನ=ಕ್ರಮವನ್ನು ಅನುಸರಿಸಿಯೇ ಮನಸಿ ಆಯಾಂತಿ=ಭೋಗ್ಯವಾಗಿ ಮನಸ್ಸಿನಲ್ಲಿ ಬರುವವು. ಇಲ್ಲವಾದರೆ ಒಟ್ಟಿಗೆ ಬರಬೇಕಿತ್ತು. ಹಾಗಾದರೆ ಕ್ರಮಿಕಕರ್ಮಗಳು ಅನಂತವಾದ್ದರಿಂದ ಪುನಃ ಪುನಃ ವಿಷಯಭೋಗವೇ ಆಗುವುದು, ಮುಕ್ತಿಯೇ ಆಗಲಾರದು ಎಂದರೆ ಹೇಳುವರು -

ಸುಮನಸಃ=ಪರಿಪಕ್ವಧ್ಯಾನಯುತಮನಸ್ಸುಳ್ಳವರಿಗೆ ಜವಾತ್=ವೇಗದಿಂದ ಸರ್ವೇ=ಎಲ್ಲ ಫಲಗಳು ವರ್ಗಶಃ=ಗುಂಪಾಗಿ ಆಗುವವು. ಸುಮನಸಃ ಎಂದರೆ ಮನೋವೃತ್ತಿರೂಪ ಅಪರೋಕ್ಷಜ್ಞಾನದಿಂದ ಎಲ್ಲವೂ ಬರಲಾರವು. ಅದಕ್ಕೆ ಮೂಲ ಕರ್ಮನಾಶವಾದ್ದರಿಂದ.

ವಿಜಯಧ್ವಜರು :- ಯೇ ಸರ್ವೇ=ಶಬ್ದಾದಿವಿಷಯಗಳು ಬಹುಜನ್ಮಗಳಲ್ಲಿ ಇಂದ್ರಿಯದ್ವಾರಾ ಮನಸ್ಸಿನಲ್ಲಿ ಪ್ರವಿಷ್ಟವಾಗಿವೆಯೋ ವಾಸನಾರೂಪದಿಂದ ಇವೆಯೋ ತೇ ಸರ್ವೇ ಇಂದ್ರಿಯಗೋಚರಾಃ=ಆ ಎಲ್ಲ ವಿಷಯಗಳು ಸುಮನಸಃ=ದೇವನಾದ ಶ್ರೀಹರಿಯ ಇಚ್ಛೆಯಿಂದ ಕ್ರಮಾನುರೋಧೇನ=ಕ್ರಮವನ್ನು ಅನುಸರಿಸಿ ಮನಸಿ=ಜೀವನಲ್ಲಿ ವರ್ಗಶಃ

ಆಯಾಂತಿ=ಸಮೂಹಗಳಾಗಿ ಬರುವವು. ಜವಾದ್ ಯಾಂತಿ=ನದೀಪ್ರವಾಹದಂತೆ ವೇಗವಾಗಿ ಹೋಗುವವು. ಎಲ್ಲ ಪದಾರ್ಥಗಳು ಈ ಜನ್ಮದಲ್ಲಿಯೋ ಜನ್ಮಾಂತರದಲ್ಲಿಯೋ ಈಗ ನೋಡದೇ ಕೇಳದೇ ಅನುಭವ ಬರುವುದು ಎಂದೋ ಅನುಭೂತವಾದವು. ಇಂದು ಅನುಭವ ಬರುವುದು ಶ್ರೀಹರಿಯ ಅಚಿಂತ್ಯಶಕ್ತಿಯಿಂದ ಎಂದು ತಿಳಿಯಬೇಕು. ।।೭೦।।

ಅಪರೋಕ್ಷಜ್ಞಾನಿಗಳಿಗೂ ವಿಷಯಪ್ರಾಪ್ತಿ ಕಾಣುವುದರಿಂದ ಅವರಿಗೆ ವಿಷಯಪ್ರಾಪ್ತಿ ಇಲ್ಲವೆಂದು ಹೇಳಿದುದು ಹೇಗೆ ಎಂದು ಹೇಳುವರು -

**ಸತ್ತ್ವೈಕನಿಷ್ಠೇ ಮನಸಿ ಭಗವತ್ಪಾರ್ಶ್ವವರ್ತಿನಿ ।**
**ತಮಶ್ಚಂದ್ರಮಸೀವೇದಮುಪರಜ್ಯಾವಭಾಸತೇ ।।೭೧।।**

ಸತ್ತ್ವೈಕನಿಷ್ಠೇ=ಕೇವಲಸತ್ತ್ವಕಾರ್ಯ ಜ್ಞಾನಭಕ್ತ್ಯಾದಿಗಳಿಂದ ಕೂಡಿದ ಆದ್ದರಿಂದಲೇ ಭಗವತ್ಪಾರ್ಶ್ವವರ್ತಿನಿ=ಸರ್ವದಾ ಭಗವದನುಸಂಧಾನವುಳ್ಳ ಮನಸಿ=ಮನಸಿನಲ್ಲಿ ಇದಂ=ಪ್ರಾರಬ್ಧಕರ್ಮಸಾಧ್ಯವಾದ ವಿಷಯಸಮೂಹವು ಉಪರಜ್ಯ ಅವಭಾಸತೇ= ದೂರದಿಂದಲೇ ಸಂಬದ್ಧವಾಗಿ ತೋರುವುದು. ಅಂದರೆ ಪ್ರಾಪ್ತವಾದರೂ ಅದು ಹರಿಯ ಅನುಸಂಧಾನದಿಂದಾದ ಸುಖದಿಂದ ಭಗ್ನವಾಗುವುದು. ಅದನ್ನು ಲೆಕ್ಕಿಸುವುದಿಲ್ಲವೆಂದು ಭಾವ. ಅದಕ್ಕೆ ದೃಷ್ಟಾಂತ ಚಂದ್ರಮಸಿ ತಮಸೀವ=ಚಂದ್ರನಿಗೆ ರಾಹುವಿನಂತೆ.

ವಿಜಯಧ್ವಜಿಯ :- ಮನಃಪ್ರಧಾನಕಲಿಂಗಶರೀರವು ಜೀವಸ್ವರೂಪವಲ್ಲವಾದರೂ ಭಗವಂತನ ಅಪರೋಕ್ಷಜ್ಞಾನವಾಗದೇ ಸ್ಥೂಲದೇಹನಾಶದಿಂದಲೇ ನಾಶವಾಗದಿರುವುದರಿಂದ ಬಹುಕಾಲ ಇರುವುದರಿಂದ ಪೂರ್ವಕರ್ಮನಿಮಿತ್ತ ಸುಖದುಃಖಾನುಭವ ಕೂಡುವುದು. ।।೭೧।।

ಲಿಂಗದೇಹದಲ್ಲಿರುವ ಮನಸ್ಸು ಅಹಂ ಮಮ ಎಂಬ ಅಭಿಮಾನದ್ವಾರಾನೇ ಕರ್ತೃತ್ವಭೋಕ್ತೃತ್ವಗಳಿಗೆ ಕಾರಣವೇ ಹೊರತು ಕೇವಲವಾದದ್ದಲ್ಲ. ಅಂದಮೇಲೆ ಅಭಿಮಾನವು ಕೆಲವೊಮ್ಮೆ ಅಕಸ್ಮಾತ್ ನಾಶವಾದರೆ ಸಂಸಾರ ನಿಂತು ಹೋಗಬಹುದಲ್ಲ ? ಎಂದರೆ ಲಿಂಗದೇಹ ಇರುವಾಗ ಅಭಿಮಾನ ನಾಶವಾಗಲಾರದು ಎಂದು ಹೇಳುವರು -

***ನಾಹಂ ಮಮೇತಿ ಭಾವೋಽಯಂ ಪುರುಷೇ ವ್ಯವಧೀಯತೇ ।**
**ತಾವದ್ ಬುದ್ಧಿಮನೋಽಕ್ಷಾರ್ಥಗುಣವ್ಯೂಹೋ ಹ್ಯನಾದಿಮಾನ್।।೭೨।।**

*'ನಾಹಂ ಮಮೇತಿ ಭಾವೇನ ಪುರುಷೋ ವ್ಯವಧೀಯತೇ' ಎಂದು ಯಾದವಾರ್ಯರ ಪಾಠ.

ಪುರುಷಃ=ಜೀವನು ಅಹಂ ಮಮ ಇತಿ ಭಾವೇನ=ನಾನು ನನ್ನದು ಎಂಬ ಅಭಿಮಾನದಿಂದ ನ ವ್ಯವಧೀಯತೇ=ರಹಿತನಾಗುವುದಿಲ್ಲ. ಅನಾದಿಮಾನ್=ಅನಾದಿಯಾದ ಬುದ್ಧಿಮನೋಽಕ್ಷಾರ್ಥಗುಣವ್ಯೂಹಃ=ಬುದ್ಧಿ,ಮನಸ್ಸು,ಇಂದ್ರಿಯಗಳು,ಭೂತಗಳು ಸತ್ವಾದಿಗಳು ಇವುಗಳ ಸಮೂಹಾತ್ಮಕ ಲಿಂಗದೇಹವು ಯಾವತ್ ತಾವತ್=ಎಲ್ಲಿವರೆಗೆ ಇರುವುದೋ ಅದುವರೆಗೆ.

**ಪಾಠಾಂತರದ ಅರ್ಥ :-** ಪುರುಷನಲ್ಲಿ ಎಲ್ಲಿಯವರೆಗೆ ಲಿಂಗದೇಹನಾಶವಾಗುವುದಿಲ್ಲವೋ ಅಲ್ಲಿಯವರೆಗೆ ಅಭಿಮಾನನಾಶವಾಗದು. ।।೭೨।।

ಲಿಂಗದೇಹವಿದ್ದಾಗಲೂ ಕೆಲವು ಸಲ ಅಭಿಮಾನವಿರುವುದಿಲ್ಲವಲ್ಲ ಎಂದರೆ ಹೇಳುವರು-

**ಸುಪ್ತಿಮೂರ್ಚ್ಛೋಪತಾಪೇಷು ಪ್ರಾಣಾಯನವಿಘಾತತಃ ।**
**ನೇಹತೇಽಹಮಿತಿ ಜ್ಞಾನಂ ಮೃತ್ಯುಪ್ರಜ್ವಾರಯೋರಪಿ ।।೭೩।।**

ಸುಪ್ತಿಮೂರ್ಚ್ಛೋಪತಾಪೇಷು ಸುಪ್ತಿ=ಗಾಢನಿದ್ರೆ ಮೂರ್ಚ್ಛಾ=ಮೋಹಾವಸ್ಥಾ ಉಪತಾಪೇಷು=ಇಷ್ಟರಾದ ಪುತ್ರಾದಿಗಳ ವಿಯೋಗನಿಮಿತ್ತದುಃಖಗಳಲ್ಲಿ ಮೃತ್ಯು-ಪ್ರಜ್ವಾರಯೋಃ=ಮರಣಕಾಲದಲ್ಲಿ ಮತ್ತು ಜ್ವರ ಬಂದ ಕಾಲಗಳಲ್ಲಿ ಪ್ರಾಣಾಯಾನವಿಘಾತತಃ =ಇಂದ್ರಿಯ ಉಪರಮವಾದುದರಿಂದ ಅಹಂ ಮಮೇತಿ ಜ್ಞಾನಂ ನ ಈಹತೇ=ನಾನು ನನ್ನದೆಂಬ ಜ್ಞಾನ ಬರುವುದಿಲ್ಲ.

ಲಿಂಗದೇಹದ ಸ್ಥಿತಿಯೊಂದೇ ಅಭಿಮಾನಕ್ಕೆ ಪ್ರಯೋಜನಕವೆಂದರ್ಥವಲ್ಲ. ಲಿಂಗದೇಹದಿಂದ ಉಂಟಾಗುವ ಸ್ಥೂಲದೇಹ ಉಂಟಾದಾಗ ಇಂದ್ರಿಯಗಳಿಂದ ಆ ಆ ವಿಷಯಗಳ ಜ್ಞಾನವಾದಾಗ ಅಹಂಮಮಾಭಿಮಾನ ಬರುವುದು ಎಂದು ಭಾವ. ಅಂದಮೇಲೆ ಸುಪ್ತ್ಯಾದಿಗಳಲ್ಲಿ ಅಭಿಮಾನ ಬರಲಿ ಎಂದು ಶಂಕಿಸಲು ಅವಕಾಶವಿಲ್ಲ.

ಸರಿ ಹಾಗಾದರೆ, ಗರ್ಭದಲ್ಲಿ ಹಾಗೂ ಬಾಲ್ಯದಲ್ಲಿ ಸ್ಥೂಲದೇಹೇಂದ್ರಿಯಜನ್ಯ-ಜ್ಞಾನದ್ವಾರಾ ಲಿಂಗದೇಹವು ಇರುವುದರಿಂದ ಅಹಂ ಮಮಾಭಿಮಾನ ಏಕೆ ಹುಟ್ಟುವುದಿಲ್ಲ ? ಎಂದರೆ ಹೇಳುವರು -

**ಗರ್ಭೇ ಬಾಲ್ಯೇಽಪ್ಯಪೌಷ್ಕಲ್ಯಾದೇಕಾದಶವಿಧಂ ತದಾ ।**
**ಲಿಂಗಂ ನ ದೃಶ್ಯತೇಽಯೂನಃ ಕುಹ್ವಾಂ ಚಂದ್ರಮಸೋ ಯಥಾ ।।೭೪।।**

ಗರ್ಭೇ=ಗರ್ಭಸ್ಥಾವಸ್ಥೆಯಲ್ಲಿ ಬಾಲ್ಯೇ=ಬಾಲ್ಯಾವಸ್ಥೆಯಲ್ಲಿ ಇರುವವನಿಗೆ ಆಯೂನಃ=ಬಾಲಕನಿಗೆ ಏಕಾದಶವಿಧಂ ಲಿಂಗಂ ಕುಹ್ವಾಂ ಚಂದ್ರಮಸಃ ಯಥಾ=ಹೇಗೆ ಅಮಾವಾಸ್ಯೆಯಂದು ಚಂದ್ರನ ಸ್ವರೂಪ ಕಾಣುವುದಿಲ್ಲವೋ ಹಾಗೆ ಅಪೌಷ್ಕಲ್ಯಾತ್=ಅವಯವೋಪಚಯವಾಗದ್ದರಿಂದ ಏಕಾದಶವಿಧಂ=ಹತ್ತು ಇಂದ್ರಿಯಗಳು, ಮನಸ್ಸು ನ ದೃಶ್ಯತೇ=ಕಾಣುವುದಿಲ್ಲ. ಉಪಚಿತ ಇಂದ್ರಿಯಗಳೇ ವಿಷಯಗ್ರಹಣದ್ವಾರವೆಂದು ವಿವಕ್ಷಿತವೆಂದು ಭಾವ. ।।೭೪।।

ಇಲ್ಲದಿರುವ ಸ್ವಾತಂತ್ರ್ಯಾಭಿಮಾನವು ತಾನೇ ಹೋದಾಗ ಅದರಿಂದ ಬರುವ ದುಃಖರೂಪಸಂಸಾರ ನಿವೃತ್ತವಾಗುವುದು. ಅದಕ್ಕಾಗಿ ಭಗವಂತನನ್ನು ಸಂತೋಷಗೊಳಿಸು ಎಂದು ಏಕೆ ಹೇಳಿದ್ದು ಎಂದರೆ ಹೇಳುವರು -

**ಅರ್ಥೇ ಹ್ಯವಿದ್ಯಮಾನೇಽಪಿ ಸಂಸೃತಿರ್ನ ನಿವರ್ತತೇ ।**
**ಧ್ಯಾಯತೋ ವಿಷಯಾನಸ್ಯ ಸ್ವಪ್ನೇಽನರ್ಥಾಗಮೋ ಯಥಾ ।।೭೫।।**

ವಿಷಯಾನ್ ಧ್ಯಾಯತಃ=ವಿಷಯಗಳನ್ನು ಧ್ಯಾನಿಸುವವನಿಗೆ ಸ್ವಪ್ನೇ ಅರ್ಥೇ ಅವಿದ್ಯಮಾನೇಽಪಿ=ಕನಸಿನಲ್ಲಿ ಕಾಣುವ ಆನೆ ಮುಂತಾದವುಗಳಲ್ಲಿ ಜಾಗ್ರತ್ವವಿಲ್ಲದಿದ್ದರೂ, ಜಾಗ್ರತ್ವಜ್ಞಾನ ಭ್ರಮವಾದರೂ, ಭ್ರಮಕಳೆಯುವ ಎಚ್ಚರವಾಗದಿರುವಾಗ ಅನರ್ಥಾಗಮಃ ಯಥಾ=ಹೇಗೆ ಸ್ವಪ್ನದಲ್ಲಿ ದುಃಖಾದಿಗಳಾಗುವವೋ ಅದರಂತೆ ಅರ್ಥೇ ಅವಿದ್ಯಮಾನೇಽಪಿ =ಅಹಂ ಮಮ ಎಂಬ ಅಭಿಮಾನವಿಷಯವಾದ ಸ್ವಾತಂತ್ರ್ಯವಾಗಲೀ, ಜ್ಞಾನವಾಗಲೀ ಇಲ್ಲದಿದ್ದರೂ ಆ ಅಭಿಮಾನಭ್ರಮವಾದರೂ ಅದು ಉಳ್ಳ ಜೀವನಿಗೆ ಸಂಸೃತಿಃ ನ ನಿವರ್ತತೇ=ಸಂಸಾರ ಹೋಗಲಾರದು. ।।೭೫।।

ಗ್ರಂಥಾಂತರದಲ್ಲಿ ಷೋಡಶಕಲನಾದ ಜೀವನು ಅಹಂ ಮಮ ಎಂಬ ಅಭಿಮಾನದ್ವಾರಾ ಸಂಸಾರಕಾರಣ ಎಂದು ಹೇಳುವರಲ್ಲ? ಅದರ ವಿರೋಧ ಬರುವುದು ಎಂದರೆ ಹೇಳುವರು -

**ಏಕಂ ಪಂಚವಿಧಂ ಲಿಂಗಂ ತ್ರಿವೃತ್ ಷೋಡಶವಿಸ್ತರಮ್ ।**
**ಏಷ ಚೇತನಯಾ ಯುಕ್ತೋ ಜೀವ ಇತ್ಯಭಿಧೀಯತೇ ।।೭೬।।**

ಏಕಂ ಲಿಂಗಂ=ಒಂದೇ ಲಿಂಗಶರೀರವು ಷೋಡಶವಿಸ್ತರಂ=ಹದಿನಾರು ಭಾಗವುಳ್ಳದ್ದು ಹೇಗೆಂದರೆ ತ್ರಿವೃತ್=ಪ್ರಾಣ ಇಂದ್ರಿಯ ಅಂತಃಕರಣಭೇದದಿಂದ ಮೂರುವಿಧವು, ಪಂಚವಿಧಂ=ಮೂರಾಗಿ ವಿಭಾಗಗೊಂಡದ್ದು ಐದುವಿಧ=ಪಂಚಪ್ರಾಣ ಪಂಚಜ್ಞಾನೇಂದ್ರಿಯ ಪಂಚಕರ್ಮೇಂದ್ರಿಯ ಒಂದು ಮನಸ್ಸು (ಅಂತಃಕರಣ) ಹೀಗೆ ಹದಿನಾರಾಗುವುದು.

ಏಷಃ=ಷೋಡಶವಿಸ್ತಾರ ದೇಹವು ಚೇತನಯಾ ಯುಕ್ತಃ=ಚೇತನನಿಂದ ಕೂಡಿದಾಗ ಜೀವ ಇತಿ ಅಭಿಧೀಯತೇ=ಜೀವ ಎಂದು ಕರೆಸಿಕೊಳ್ಳುವುದು. ಜೀವಸಂಬದ್ಧವಾದ ಲಿಂಗಶರೀರವನ್ನೇ ಲಕ್ಷಣಯಾ ಜೀವ ಎಂದು ಕರೆದಿದೆ. ಕಾರಣ ವಿರೋಧವಿಲ್ಲವೆಂದು ಭಾವ.

**ಭಾಗವತ ತಾತ್ಪರ್ಯ -**

ಈ ಶ್ಲೋಕದಲ್ಲಿ ಷೋಡಶತ್ವವನ್ನು ವಿವರಿಸಲು ಏಕಂ ತ್ರಿವೃತ್ ಪಂಚವಿಧಂ ಎಂದಿದ್ದಾರೆ. ಇದರಿಂದ ಒಂಬತ್ತುವಿಧತೆ ತೋರುವುದು. ಕಾರಣ ಅಭಿಪ್ರಾಯವನ್ನು ಪ್ರಮಾಣದಿಂದಲೇ ತಿಳಿಸುವರು -

**''ಪ್ರಾಣೇಂದ್ರಿಯಾಂತಃಕರಣಭೇಧೇನ ತ್ರಿವಿಧಂ ಮತಮ್ ।**
**ಪಂಚ ಪಂಚೈವ ತೇ ಸರ್ವೇ ಪ್ರಾಣಬುದ್ಧೀಂದ್ರಿಯಾಣಿ ಚ ।**
**ಕರ್ಮೇಂದ್ರಿಯಾಣಿ ಚ ತಥಾ ತಸ್ಮಾತ್ ಪಂಚವಿಧಂ ಸ್ಮೃತಮ್ ।**
**ಲಿಂಗಂ ಷೋಡಶಕಂ ಪ್ರಾಹುರ್ಮನಸಾ ಸಹ ತತ್ತ್ವನಃ'' ಇತಿ ಬ್ರಾಹ್ಮೇ ॥**

ಪ್ರಾಣ, ಇಂದ್ರಿಯ, ಅಂತಃಕರಣ ಎಂದು ಮೂರನ್ನಿಟ್ಟುಕೊಂಡು ತ್ರಿವೃತ್ ಎಂದಿದ್ದಾರೆ.

ಐದು ಪ್ರಾಣ, ಐದು ಜ್ಞಾನೇಂದ್ರಿಯ, ಐದು ಕರ್ಮೇಂದ್ರಿಯ ಹೀಗೆ ಎಲ್ಲವೂ ಐದಾದ್ದರಿಂದ ಐದುವಿಧ ಎಂದಿರುವರು. ಮನಸ್ಸು ಸೇರಿ ಹದಿನಾರಾಗುವುದರಿಂದ ಷೋಡಶಕ ಎಂದಿದ್ದಾರೆ ಎಂದು ಬ್ರಾಹ್ಮದಲ್ಲಿದೆ. ।।೭೬।।

ಲಿಂಗಶರೀರವು ಸ್ಥೂಲಶರೀರ ಮತ್ತು ಅಭಿಮಾನದ್ವಾರಾ ಸಂಸಾರಕಾರಣವೆಂದು ಹೇಳಿದ್ದನ್ನು ವಿವರಿಸುವರು -

**ಅನೇನ ಪುರುಷೋ ದೇಹಾನುಪಾದತ್ತೇ ವಿಮುಂಚತಿ ।**
**ಹರ್ಷಂ ಶೋಕಂ ಭಯಂ ದುಃಖಂ ಸುಖಂ ಚಾನೇನ ವಿಂದತಿ ।।೭೭।।**

ಅನೇನ=ಲಿಂಗಶರೀರದಿಂದ ಪುರುಷಃ=ಜೀವನು ದೇಹಾನ್=ಸ್ಥೂಲದೇಹಗಳನ್ನು ಉಪಾದತ್ತೇ=ಸ್ವೀಕರಿಸುವನು. ಮುಂಚತಿ=ಬಿಡುವನು. ಹರ್ಷಂ=ಸಂತೋಷವನ್ನು ಶೋಕಂ=ಐಹಿಕದುಃಖವನ್ನು ಭಯಂ=ಪಾರತ್ರಿಕಭಯವನ್ನು ದುಃಖಂ ಸುಖಂ ಚ=ದುಃಖ-ಸುಖಗಳನ್ನು ವಿಂದತಿ=ಹೊಂದುವನು. ।।೭೭।।

ಸತ್ತಮೇಲೆ ಬೇರೆ ದೇಹ ಬರಲು ಸ್ವಲ್ಪಕಾಲ ವಿಲಂಬ ಕೇಳಿಬರುವುದು. ಕಾರಣ ದೇಹರಹಿತನಾಗಿ ಇರುವುದಿಲ್ಲ ಎಂದು ಹೇಳಿದ್ದು ಹೇಗೆ ? ಎಂದರೆ ಅದನ್ನು ಉಪಪಾದಿಸುವರು -

**ಯಥಾ ತೃಣಜಲೂಕಾ ಚ ನೋಪಯಾತ್ಯಪಯಾತಿ ಚ ।**
**ನ ತ್ಯಜೇನ್ಮ್ರಿಯಮಾಣೋಽಪಿ ಪ್ರಾಗ್ದೇಹಾಭಿಮತಿಂ ಜನಃ ॥೭೮॥**

ಯಥಾ=ಹೇಗೆ ತೃಣಜಲೂಕಾಃ=ಹುಲ್ಲಿನಲ್ಲಿ ಓಡಾಡುವ ಹುಳುವು ನೋಪಯಾತಿ= ಮುಂದೆ ಒಂದು ಹುಲ್ಲು ಸಿಗದ ಹೊರತು ಹಿಂದಿನದನ್ನು ಬಿಡಲಾರದು. ಮುಂದೆ ಸಿಕ್ಕಾಗ ಅಪಯಾತಿ=ಬಿಡುವುದು ತಥಾ=ಹಾಗೆ ಮ್ರಿಯಮಾಣೋಽಪಿ ಜೀವಃ=ಸಾಯುವ ಜೀವನೂ ಸಹ ಯಾವದನ್ಯಂ ನ ವಿಂದೇತ=ತೇಜೋಮಯವೋ ಯಾತನಾರೂಪವೋ ಅಂತೂ ಬೇರೊಂದು ದೇಹ ಸಿಗದೇ ಪ್ರಾಗ್ದೇಹಾಭಿಮತಿಂ=ಹಿಂದಿನದೇ ಅಭಿಮಾನವನ್ನು ನ ತ್ಯಜೇತ್=ಬಿಡಲಾರನು. ವಿಲಂಬ ಹೇಳಿದ್ದು ಮತ್ತೆ ಭೂಮಿಯಲ್ಲಿಯೇ ದೇಹಾಂತರ ಬರುವುದಕ್ಕೆ ಕಾರಣ ವಿರೋಧವಿಲ್ಲ. ನಾವು ಹೇಳಿದ್ದು ಯಾವುದೋ ಒಂದು ದೇಹವಿಲ್ಲದೇ ಇರಲಾರದು ಎಂದು. ॥೭೮॥

**ಯಾವದನ್ಯಂ ನ ವಿಂದೇತ ವ್ಯವಧಾನೇನ ಕರ್ಮಣಾಮ್ ।**
**ಮನ ಏವ ಮನುಷ್ಯೇಂದ್ರ ಭೂತಾನಾಂ ಭವಭಾವನಮ್ ॥೭೯॥**

(ಯಾವದನ್ಯಂ ನ ವಿಂದೇತ ಎಂಬುದು ಪೂರ್ವಶ್ಲೋಕದಿಂದ ಅನ್ವಿತ.) ಕರ್ಮಣಾಂ= ಅಭಿಮಾನಜನಕ ಸ್ಥೂಲದೇಹಾಪಾದಕಕರ್ಮಗಳಿಗೆ ವ್ಯವಧಾನೇನ=ವಿಲಂಬವಾಗಿ ಫಲ ಕೊಡುವ ಕಾರಣ ಮನಃ ಏವ=ಮನಃಪ್ರಧಾನಕ ಲಿಂಗಶರೀರವೇ ಭೂತಾನಾಂ=ಪ್ರಾಣಿಗಳಿಗೆ ಭವಭಾವನಂ=ಸಂಸಾರಜನಕವು. ॥೭೯॥

ಕರ್ಮಗಳಿಗೆ ಸಂಸಾರಕಾರಣತ್ವವನ್ನು ಉಪಪಾದಿಸುವರು -

**ಯದಕ್ಷೈಶ್ಚರಿತಾನ್ ಧ್ಯಾಯನ್ ಕರ್ಮಾಣ್ಯಾಚಿನುತೇಽಸಕೃತ್ ।**
**ಸತಿ ಕರ್ಮಣ್ಯವಿದ್ಯಾಯಾಂ ಬಂಧಃ ಕರ್ಮಣ್ಯ ಆತ್ಮನಃ ॥೮೦॥**

ಯತ್(ಯದಾ)=ಯಾವಾಗ ಅಕ್ಷೈಃ=ಲಿಂಗದೇಹಗತಮನಸ್ಸಿನಿಂದ ಪ್ರಯುಕ್ತ ಇಂದ್ರಿಯಗಳಿಂದ ಚರಿತಾನ್=ಅನುಭವಿಸಿದ ವಿಷಯಗಳನ್ನು ಧ್ಯಾಯನ್=ಧ್ಯಾನ ಮಾಡುತ್ತ ಕರ್ಮಾಣಿ=ವಿಷಯಪ್ರಾಪ್ತಿಗೆ ಅನೂಕೂಲವಾದ ಕರ್ಮಗಳನ್ನು ಅಸಕೃತ್ ಆಚಿನುತೇ=ಪುನಃ ಪುನಃ ಮಾಡುವನೋ ತದಾ=ಆಗ ಕರ್ಮಣಿ ಸತಿ=ಕರ್ಮಗಳಿರುವಾಗ ಅವಿದ್ಯಾಯಾಂ=ಸ್ಥೂಲದೇಹಾತ್ಮಕಪ್ರಕೃತಿಯಲ್ಲಿ ಬಂಧಃ=ಅಹಂ ಮಮಾಭಿಮಾನ-ರೂಪಬಂಧವು ಕರ್ಮಣ್ಯಃ=ಪುನಃ ಕರ್ಮಕಾರಣವಾದುದು ಆತ್ಮನಃ=ಜೀವನಿಗೆ ಭವತಿ=ಆಗುವುದು. ಲಿಂಗರೂಪ ಮನಸ್ಸಿನಿಂದ ಪೂರ್ವಕರ್ಮಾನುಸಾರವಾಗಿ ಸ್ಥೂಲದೇಹಪ್ರಾಪ್ತಿಯು, ಅಲ್ಲಿ ಅಹಂ ಮಮಾಭಿಮಾನದಿಂದ ಇಂದ್ರಿಯವಿಷಯಗಳ ಧ್ಯಾನ,

ಆದರಿಂದ ಪುನಃ ಕರ್ಮಕರಣ, ಆದರಿಂದ ಮತ್ತೆ ದೇಹಾಂತರ. ಹೀಗೆ ಈ ಪ್ರವಾಹ ಸಂಸಾರವು ಅನಾದಿಯಾಗಿದೆ. ॥೮೦॥

**ಅತಸ್ತದಪವಾಧಾರ್ಥಂ ಭಜ ಸರ್ವಾತ್ಮನಾ ಹರಿಮ್ ।**
**ಪಶ್ಯಂಸ್ತದಾತ್ಮಕಂ ವಿಶ್ವಂ ಸ್ಥಿತ್ಯುತ್ಪತ್ತ್ಯಪ್ಯಯಾ ಯತಃ ॥೮೧॥**

ಅತಃ=ಲಿಂಗ ಕರ್ಮಗಳಿಂದ ಉಂಟಾಗುವ ಸಂಸಾರವು ಅನಾದಿಯಾದ್ದರಿಂದ ತದಪವಾಧಾರ್ಥಂ=ಅವುಗಳ ನಾಶಕ್ಕಾಗಿ ಯತಃ=ಯಾವ ಶ್ರೀಹರಿಯಿಂದ ಸ್ಥಿತ್ಯುತ್ಪತ್ತ್ಯಪ್ಯಯಾಃ =ಪಾಲನ ಉತ್ಪತ್ತಿ ಸಂಹಾರಗಳಾಗುವವೋ ವಿಶ್ವಂ=ಪ್ರಪಂಚವನ್ನು ತದಾತ್ಮಕಂ ಪಶ್ಯನ್=ಅವನ ಅಧೀನವೆಂದು ತಿಳಿದು ಸರ್ವಾತ್ಮನಾ ಹರಿಂ ಭಜ=ಸರ್ವಪ್ರಕಾರದಿಂದ ಶ್ರೀಹರಿಯನ್ನು ಭಜಿಸು. ॥೮೧॥

ಸಂಸಾರನಿವೃತ್ತಿರೂಪ ಮುಕ್ತಿಗೆ ಶೀಘ್ರವಾದ ಸಾಧನ ಹೇಳುವರು -

**ಭಕ್ತಿಃ ಕೃಷ್ಣೇ ದಯಾ ಜೀವೇಷ್ವಕುಂಠಜ್ಞಾನಮಾತ್ಮನಿ ।**
**ಯದಿ ಸ್ಯಾದಾತ್ಮನೋ ಭೂಯಾದಪವರ್ಗಸ್ತು ಸಂಸೃತೇಃ ॥೮೨॥**

ಕೃಷ್ಣೇ=ಸಂಸಾರನಿರ್ವತಕನಾದ ಪರಮಾ(ಪೂರ್ಣಾ)ನಂದರೂಪನಾದ ವಿಷ್ಣುವಿನಲ್ಲಿ ಅಪರೋಕ್ಷಜ್ಞಾನಜನಕವಾದ ಭಕ್ತಿಯು ಮತ್ತು ಅಪರೋಕ್ಷಜ್ಞಾನೋತ್ತರಕಾಲೀನವಾದ, ಮಾಹಾತ್ಮ್ಯಜ್ಞಾನಪೂರ್ವಕವಾದ, ಸುದೃಢವಾದ, ಸರ್ವತಃ ಅಧಿಕವಾದ ಪ್ರೇಮಪ್ರವಾಹವು ಉಪಲಕ್ಷಣಯಾ ಸ್ವಗುರುವಮಾರಭ್ಯ ಬ್ರಹ್ಮಾಂತವಾಗಿ ಸ್ವೋತ್ತಮರಲ್ಲಿ ಅವರವರ ಯೋಗ್ಯತಾನುಸಾರ ನಿಷ್ಕಪಟಭಕ್ತಿಯು, ಜೀವೇಷು ದಯಾ=ಸ್ಥಾವರ ಸಜ್ಜೀವರಲ್ಲಿ ದಯಾ, ಸ್ವಸಮರಲ್ಲಿ ಮೈತ್ರಿಯು ಆತ್ಮನಿ=ತನ್ನ ಸ್ವರೂಪವಿಷಯದಲ್ಲಿ ಅಕುಂಠಜ್ಞಾನಂ= ದೇಹಾದ್ಯಭಿಮಾನರಹಿತವಾದ ಜ್ಞಾನಾನಂದರೂಪನು ನಾನು ಎಂಬ ನಿರಂತರಜ್ಞಾನವು ಇವೆಲ್ಲವೂ ಯದಿ ಸ್ಯಾತ್=ಯಾವಾಗ ಆಗುವವೋ ತದಾ=ಆಗ ಆತ್ಮನಃ=ಜೀವನಿಗೆ ಸಂಸೃತೇಃ ಅಪವರ್ಗಃ=ಸಂಸಾರಮೋಚನವು ಶೀಘ್ರವಾಗಿ ಆತ್ಮನಃ=ಪರಮಾತ್ಮನ ಪ್ರಸಾದದಿಂದ ಸ್ಯಾತ್=ಆಗುವುದು.

**ಭಾಗವತ ತಾತ್ಪರ್ಯ -**

ಅರ್ಥೇ ಹ್ಯವಿದ್ಯಮಾನೇಽಪಿ ಎಂಬಲ್ಲಿ ದೇಹಾತ್ಮರಿಗೆ ಸ್ಫುಟತರವಿವೇಕ-ಜ್ಞಾನವಿಲ್ಲದಿರುವುದು ಮತ್ತು ಸ್ವಾತಂತ್ರ್ಯಭ್ರಮ ಸಂಸಾರಕಾರಣವೆಂದು ಹೇಳಿದೆ. ಆದ್ದರಿಂದ ಭಕ್ತಿ-ಜ್ಞಾನವಿಶೇಷಗಳೇ ಅವುಗಳಿಗೆ ನಾಶಕಗಳು. ಸಾಧಾರಣವಾದವುಗಳಲ್ಲ ಎಂಬ ವಿಷಯದಲ್ಲಿ ಪ್ರಮಾಣ ಹೇಳುವರು -

'ದೇಹಾದಿವ್ಯತಿರೇಕೇಣ ಚಿದ್ರೂಪೋಹಮಿತಿ ಸ್ಫುಟಮ್ ।
ಸದೈವಾನುಭವೋ ಭಕ್ತಿರ್ವಿಷ್ಣೌತದ್ದರ್ಶನಾದನು ।
ಯಸ್ಯಾಸೌ ಮುಚ್ಯತೇ ಕ್ಷಿಪ್ರಂ ಸಂಸಾರಾನ್ನಾತ್ರ ಸಂಶಯಃ' ಇತಿ ಹರಿವಂಶೇಷು ।

ಯಾರಿಗೆ ದೇಹೇಂದ್ರಿಯಾದಿಗಳಲ್ಲಿ ಅಭಿಮಾನವನ್ನು ಬಿಟ್ಟು ಅವುಗಳಿಂದ ಭಿನ್ನವಾದ ನಾನು ಚಿದ್ರೂಪನು ಎಂದು ಸ್ಪಷ್ಟವಾಗಿ ಯಾವಾಗಲೂ ಅನುಭವ, ಅಪರೋಕ್ಷಜ್ಞಾನಾನಂತರ ಶ್ರೀಹರಿಯಲ್ಲಿ ಪರಮಭಕ್ತಿಯು ಇದೆಯೋ ಆತನು ಸಂಸಾರದಿಂದ ಶೀಘ್ರದಲ್ಲಿ ಬಿಡುಗಡೆ ಹೊಂದುತ್ತಾನೆ. ಇದರಲ್ಲಿ ಸಂದೇಹವಿಲ್ಲ ಎಂದು ಹರಿವಂಶಗಳಲ್ಲಿದೆ. ।।೮೨।।

ಯಾವಾಗಲೂ ನಿತ್ಯಾನಿತ್ಯವಸ್ತುವಿವೇಕವು ಮುಕ್ತಿಗೆ ಪ್ರಥಮಸಾಧನವೆಂದು ಹೇಳುವರು-

**ಅದೃಷ್ಟಂ ದೃಷ್ಟವನ್ನಂಕ್ಷ್ಯೇದಭೂತಂ ಸ್ವಪ್ನವದನ್ಯಥಾ ।**
**ಭೂತಂ ಭವದ್ ಭವಿಷ್ಯಚ್ಚ ಸುಪ್ತಂ ಸರ್ವರಹೋರಹಃ ।।೮೩।।**

ಅದೃಷ್ಟಂ=ಸ್ವರ್ಗಾದಿಗಳು ದೃಷ್ಟವತ್=ಐಹಿಕ ಐಶ್ವರ್ಯಾದಿಗಳಂತೆ ನಂಕ್ಷ್ಯೇತ್=ನಾಶವಾಗುವುದು ಎಂದು ತಿಳಿಯಬೇಕು. ಭೂತಂ=ಸಂಸಾರದಲ್ಲಿರುವ ಹೆಂಡತಿಮಕ್ಕಳು ಮನೆ-ಮಯ್ಯಿಗಳು ಸ್ವಪ್ನ ವತ್ ಅನ್ಯಥಾ=ಕನಸಿನಲ್ಲಿ ಕಾಣುವ ವಸ್ತುಗಳಂತೆ ಅನಿತ್ಯ ಮತ್ತು ಪುರುಷಾರ್ಥೋಪಯೋಗಿಯಲ್ಲ, ಬಹಳ ಮಾತಿನೆಂದೇನು ? ಭೂತಂ, ಭವತ್, ಭವಿಷ್ಯಚ್ಚ=ಮೂರು ಕಾಲಗಳಲ್ಲಿರುವ ವಸ್ತುಗಳು ಸುಪ್ತಂ=ಸ್ವಪ್ನಗಜಾದಿಗಳಂತೆ ಅನಿತ್ಯ, ವ್ಯರ್ಥ. ಹಾಗಾದರೆ ನಿತ್ಯಪುರುಷಾರ್ಥೋಪಯೋಗಿ ಯಾವುದು ? ಎಂದರೆ ಸರ್ವರಹೋರಹಃ=ಸರ್ವಶಾಸ್ತ್ರರಹಸ್ಯ, ಮಹಾತಾತ್ಪರ್ಯವಿಷಯನಾದ, ಅಯೋಗ್ಯರಿಗೆ ಗೋಪ್ಯನಾದುದರಿಂದ ರಹೋನಾಮಕನಾದ ಶ್ರೀಹರಿಯೇ ಅನ್ಯಥಾ=ಹಿಂದೆ ಹೇಳಿದರ ವಿಪರೀತ ಅಂದರೆ ನಿತ್ಯ ಮತ್ತು ಪುರುಷಾರ್ಥೋಪಯೋಗಿ. ಅಂದಮೇಲೆ ಉಳಿದೆಲ್ಲ ಅನಿತ್ಯ, ವ್ಯರ್ಥ ಎಂದು ತಿಳಿದು ನಿತ್ಯನಾದ ಸರ್ವಪುರುಷಾರ್ಥಪ್ರದ ಶ್ರೀಹರಿಯನ್ನೇ ಭಜಿಸು ಅವನಲ್ಲಿ ನಿಷ್ಠಾ ಮಾಡಬೇಕು.

**ಭಾಗವತ ತಾತ್ಪರ್ಯ -**

ಈ ಶ್ಲೋಕದಲ್ಲಿ ಭೂತಂ ಸ್ವಪ್ನವತ್ ಅನ್ಯಥಾ ಎಂದರೆ ಸಂಸಾರದಲ್ಲಿ ತೋರುವುದು ಸ್ವಪ್ನದಂತೆ ಮಿಥ್ಯಾ ಎಂದು ಹೇಳಿದಂತೆ ತೋರುವುದು. ಕಾರಣ ತಾತ್ಪರ್ಯ ಹೇಳುವರು-

''ಸಂಸಾರಸ್ಥಮಿದಂ ಸರ್ವಮನಿತ್ಯತ್ವಾದ್ವೃಥಾ ಯತಃ ।
ಅತಃ ಪ್ರಾಹುಃ ಸ್ವಪ್ನಸಮಂ ಪ್ರಾಜ್ಞಾ ಜಗದಿದಂ ಮೃಷಾ' ಇತಿ ವಿಷ್ಣುಸಂಹಿತಾಯಾಮ್

**ಸುಷುಪ್ತಿಸ್ವಪ್ನಯೋಶ್ಚೈವ ಸ್ವರ್ಗವ್ಯೋಮ್ನೋಸ್ತಥೈವ ಚ ।**
**ಅನ್ಯೋನ್ಯನಾಮತಾ ಜ್ಞೇಯಾ ಮನೋಬುದ್ಧ್ಯೋಸ್ತಥೈವ ಚೇ'ತಿ ಶಬ್ದನಿರ್ಣಯೇ॥**

**ಅತೋ ಭೂತಂ ಭವದ್ಭವಿಷ್ಯಚ್ಚ ಸ್ವಪ್ನ ಇತ್ಯರ್ಥಃ ।**
**'ರಹೋ ಬ್ರಹ್ಮ ತಥಾ ಯಜ್ಞಃ ಸ್ವಃ ಸತ್ಯಮಿತಿ ಗೀಯತೇ' ಇತಿ ಚ ॥**

ಚೇತನಾಚೇತನಾತ್ಮಕ ಜಗತ್ತಾಗಲೀ, ಸಂಸಾರದಲ್ಲಿರತಕ್ಕ ಐಶ್ವರ್ಯವಾಗಲೀ, ಪತ್ನಿಪುತ್ರಾದಿಗಳಾಗಲೀ ಅನಿತ್ಯಗಳಾದುದರಿಂದ ಮೋಕ್ಷಕ್ಕೆ ಉಪಯುಕ್ತಗಳಲ್ಲ. ಅನಿತ್ಯಗಳಾದುದರಿಂದ ಈ ಜಗತ್ತನ್ನು ಪ್ರಾಜ್ಞರು ಸ್ವಪ್ನಸಮವೆಂದೂ, ಮೋಕ್ಷಕ್ಕೆ ಕಾರಣವಾಗದ್ದರಿಂದ ಮೃಷಾ ಎಂದೂ ಹೇಳುತ್ತಾರೆ (ಮಿಥ್ಯೆ ಎಂಬ ಅಭಿಪ್ರಾಯದಿಂದಲ್ಲ) ಎಂದು ವಿಷ್ಣುಸಂಹಿತೆಯಲ್ಲಿ ಹೇಳಿದೆ.

ಸುಷುಪ್ತಿ ಸ್ವಪ್ನ ಸ್ವರ್ಗ ಆಕಾಶ ಮನಸ್ಸು ಬುದ್ಧಿ ಇವುಗಳು ಪರಸ್ಪರಶಬ್ದಗಳಿಂದ ಹೇಳಲ್ಪಡುವವು ಎಂದು ಶಬ್ದನಿರ್ಣಯದಲ್ಲಿದೆ. ಅನಿತ್ಯವಾದುದರಿಂದಲೇ ಅತೀತ ವರ್ತಮಾನ ಭವಿಷ್ಯತ್ ಕಾಲೀನ ವಸ್ತುಗಳು ಸುಷುಪ್ತಿಯಂತೆ ಎಂದದ್ದು.

ಗೋಪ್ಯನಾದ ಉಪನಿಷತ್ಪ್ರತಿಪಾದ್ಯನಾದ ಪರಬ್ರಹ್ಮನು ಸರ್ವರಿಗೂ ಗೋಪ್ಯನಾದುದರಿಂದ ರಹಃ ಯಜ್ಞ ಸ್ವ ಸತ್ಯ ಮುಂತಾದ ಶಬ್ದಗಳಿಂದ ಹೇಳಲ್ಪಡುತ್ತಾನೆ.

ಇದರಿಂದ ಮೊದಲನೆಯದಾದ ವೈರಾಗ್ಯವಿಲ್ಲದೇ ಭಕ್ತಿಯಿಂದ ಮುಕ್ತಿ ಹೇಗೆ ಎಂಬ ಶಂಕೆಗೆ ಅವಕಾಶವಲ್ಲ. ನಿತ್ಯಾನಿತ್ಯವಸ್ತುವಿವೇಕವೇ ವೈರಾಗ್ಯಜನಕ. ಆದರಿಂದ ಭಕ್ತಿ ಉಪಾಸನಾ ಜ್ಞಾನ ಪ್ರಸಾದ ಮುಕ್ತಿ ಈ ಕ್ರಮವಿದ್ದರೂ, ವೈರಾಗ್ಯ ಸಾರ್ವತ್ರಿಕ ಎಂದು ತಿಳಿಸಲು ಕೊನೆಗೆ ಹೇಳಿದೆ. ॥೮೩॥

**ಮೈತ್ರೇಯ ಉವಾಚ -**

**ಭಾಗವತಮುಖ್ಯೋ ಭಗವಾನ್ ನಾರದೋ ಹಂಸಯೋರ್ಗತಿಮ್ ।**
**ಪ್ರದರ್ಶ್ಯ ಹ್ಯಮುಮಾಮಂತ್ರ್ಯ ಸಿದ್ಧಲೋಕಂ ತತೋಽಗಮತ್ ॥೮೪॥**

ಭಾಗವತಮುಖ್ಯಃ=ಭಗವದ್ಭಕ್ತರಲ್ಲಿ ಪ್ರಧಾನರಾದ ಭಗವಾನ್=ಪೂಜ್ಯರಾದ ನಾರದಃ=ನಾರದರು ಹಂಸಯೋಃ=ಜೀವ,ಪರಮಾತ್ಮರ ಗತಿಂ=ಸಚ್ಚಿದಾನಂದರೂಪನಾದ ಜಗತ್ಕಾರಣವಾದ ಶ್ರೀಹರಿಯ ಅವನ ಅಧೀನತ್ವಾದಿ ಜೀವನ ಸ್ವರೂಪಸ್ಥಿತಿಯನ್ನು ಪ್ರದರ್ಶ್ಯ=ತಿಳಿಸಿ ಅಮುಂ=ಪ್ರಾಚೀನಬರ್ಹಿಯನ್ನು ಆಮಂತ್ರ್ಯ=ಹೋಗಿ ಬರುವೆನೆಂದು ತಿಳಿಸಿ ತತಃ=ಅಲ್ಲಿಂದ ಸಿದ್ಧಲೋಕಂ=ಸಿದ್ಧರು ವಾಸಿಸುವ ಲೋಕಕ್ಕೆ ಅಗಮತ್=ತೆರಳಿದರು. ॥೮೪॥

**ಪ್ರಾಚೀನಬರ್ಹಿೀ ರಾಜರ್ಷಿಃ ಪ್ರಜಾಸರ್ಗಾಭಿರಕ್ಷಣೇ ।**
**ಆದಿಶ್ಯ ಪುತ್ರಾನಗಮತ್ ತಪಸೇ ಕಪಿಲಾಶ್ರಮಮ್ ॥೮೫॥**

ಪ್ರಾಚೀನಬರ್ಹಿಃ ರಾಜರ್ಷಿಃ=ರಾಜಋಷಿಯಾದ ಪ್ರಾಚೀನಬರ್ಹಿಯು ಪ್ರಜಾಸರ್ಗಾಭಿರಕ್ಷಣೇ=ಪ್ರಜೆಗಳ ಸರ್ಗವೆನಿಸುವ ಸ್ವಭಾವ ವಿದ್ಯಾ ಧರ್ಮ ಮುಂತಾದ ಪುರುಷಾರ್ಥಗಳನ್ನು ಅದಕ್ಕೆ ವಿರುದ್ಧವಾದುದನ್ನು ನಿವಾರಿಸಿ ರಕ್ಷಿಸಲು ಪುತ್ರಾನ್ ಆದಿಶ್ಯ=ಮಂತ್ರಿಗಳ ಸಮಕ್ಷಮದಲ್ಲಿ ಮಕ್ಕಳಿಗೆ ಆಜ್ಞೆ ಮಾಡಿ ತಪಸೇ=ತಪಸ್ಸಿಗಾಗಿ ಕಪಿಲಾಶ್ರಮಂ ಅಗಮತ್=ಕಪಿಲಾಶ್ರಮಕ್ಕೆ ತೆರಳಿದನು. ॥೮೫॥

**ತತ್ರೈಕಾಗ್ರಮನಾ ವೀರೋ ಗೋವಿಂದಚರಣಾಂಬುಜಮ್ ।**
**ವಿಮುಕ್ತಸಂಗೋಽನುಭಜನ್ ಭಕ್ತ್ಯಾ ತಸ್ಯಾಮ್ಯತಾಮಗಾತ್ ॥೮೬॥**

ತತ್ರ=ಕಪಿಲಾಶ್ರಮದಲ್ಲಿ ವೀರಃ=ಆರಬ್ಧಾಂತಗಾರ್ಮಿಯಾದ ರಾಜನು ಏಕಾಗ್ರಮನಾಃ=ಶ್ರೀಹರಿಯಲ್ಲಿಯೇ ಮನಸ್ಸಿಟ್ಟು ವಿಮುಕ್ತಸಂಗಃ=ವಿಷಯಸಂಗವನ್ನು ತ್ಯಜಿಸಿ ಗೋವಿಂದಚರಣಾಂಬುಜಂ=ಶ್ರೀಹರಿಯ ಪಾದಾರವಿಂದವನ್ನು ಭಕ್ತ್ಯಾ ಅನುಭಜನ್= ಭಕ್ತಿಯಿಂದ ನಿರಂತರ ಉಪಾಸನೆ ಮಾಡಿ ತಸ್ಸಾಮ್ಯತಾಂ ಅಗಾತ್=ನಿರ್ದುಃಖತ್ವೇನ ಆನಂದರೂಪತ್ವೇನ ರೂಪೇಣ ಭಗವಂತನ ಸಾಮ್ಯವನ್ನು ಹೊಂದಿದನು. ॥೮೬॥

**ಏತದಧ್ಯಾತ್ಮಪಾರೋಕ್ಷ್ಯಂ ಗೀತಂ ದೇವರ್ಷಿಣಾಽನಘ ।**
**ಯಃ ಶ್ರಾವಯೇದ್ ಯಃ ಶೃಣುಯಾತ್ ಸ ಲಿಂಗೇನ ವಿಮುಚ್ಯತೇ ॥೮೭॥**

ಹೇ ಅನಘ=ವಿದುರನೇ (ಪಾಪರಹಿತನೇ) ! ದೇವರ್ಷಿಣಾ=ನಾರದರಿಂದ ಗೀತಂ=ಹೇಳಲ್ಪಟ್ಟ ಅಧ್ಯಾತ್ಮಪಾರೋಕ್ಷ್ಯಂ=ಅಧಿಕನಾದ ಆತ್ಮ ಪರಮಾತ್ಮನ ಅಥವಾ ಅಧಿ ಗತ ಪ್ರತ್ಯಕ್ಷಸಿದ್ಧ ಜೀವನ ಸ್ವರೂಪಪಾರೋಕ್ಷವಾಗಿ ಹೇಳಿದ ಏತತ್=ಇದನ್ನು ಯಃ=ಯಾರು ಶ್ರಾವಯೇತ್=ಕೇಳಿಸುವನೋ ಯಃ=ಯಾರು ಶೃಣುಯಾತ್=ಕೇಳುವನೋ ಸಃ=ಅವನು ಲಿಂಗೇನ ವಿಮುಚ್ಯತೇ=ಲಿಂಗಶರೀರರಹಿತನಾಗುವನು. ಸ್ವರೂಪದೇಹಾವಿರ್ಭಾವ-ವಾಗುವುದು. ॥೮೭॥

**ಏತನ್ಮುಕುಂದಯಶಸಾ ಭುವನಂ ಪುನಾನಂ**
**ದೇವರ್ಷಿವರ್ಯಮುಖನಿಸ್ಸೃತಮಾತ್ಮಶೌಚಮ್ ।**
**ಯಃ ಕೀರ್ತ್ಯಮಾನಮಧಿಗಚ್ಛತಿ ಪಾರಮೇಷ್ಠ್ಯಂ**
**ನಾಸ್ಮಿನ್ ಭವೇ ಭ್ರಮತಿ ಮುಕ್ತಸಮಸ್ತಬಂಧಃ ॥೮೮॥**

ದೇವರ್ಷಿವರ್ಯಮುಖನಿಸ್ಸೃತಂ=ನಾರದರ ಮುಖದಿಂದ ಹೊರಟ ಆತ್ಮಶೌಚಂ= ಮನಸ್ಸಿನ ಶುದ್ಧಿಗೆ ಕಾರಣವಾದ ಭುವನಂ ಪುನಾನಂ=ಜಗತ್ತನ್ನು ಪವಿತ್ರಗೊಳಿಸುವ ಮುಕುಂದಯಶಸಾ ಸಹಿತಂ=ಭಗವಂತನ ಕೀರ್ತಿಯಿಂದ ಕೂಡಿದ ಪಾರಮೇಷ್ಠ್ಯಂ ಪರಮಾತ್ಮಸಂಬಂಧಿಯಾದ ಏತತ್=ಪುರಂಜನೋಪಾಖ್ಯಾನವನ್ನು ಕೀರ್ತ್ಯಮಾನಂ= ಗುರುಗಳು ಹೇಳುವುದನ್ನು ಯಃ ಅಧಿಗಚ್ಛತಿ=ಯಾವನು ತಿಳಿಯುವನೋ ಸಃ=ಅವನು ಮುಕ್ತಸಮಸ್ತಬಂಧಃ=ಎಲ್ಲ ಕರ್ಮಬಂಧಗಳಿಂದ ಮುಕ್ತನಾಗಿ ಅಸ್ಮಿನ್ ಭವೇ=ಈ ಸಂಸಾರದಲ್ಲಿ ಭ್ರಮತಿ=ತಿರುಗಲಾರನು. ।।೮೮।।

**ಅಧ್ಯಾತ್ಮಪಾರೋಕ್ಷ್ಯಮಿದಂ ಮಯಾಽಧಿಗತಮದ್ಭುತಮ್ ।**
**ಏವಂ ತ್ರಯ್ಯಾಶ್ರಯಃ ಪುಂಸಶ್ಛಿನ್ನೋಽಮುತ್ರ ಚ ಸಂಶಯಃ ।।೮೯।।**

।। ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ ಏಕೋನತ್ರಿಂಶೋಽಧ್ಯಾಯಃ ।।

ಮಯಾ=ಮೈತ್ರೇಯನಾಮಕನಾದ ನನ್ನಿಂದ ಅದ್ಭುತಂ=ಗಹನಾರ್ಥವಾದ ಇದಂ= ನಾರದರಿಂದ ಪ್ರಾಚೀನಬರ್ಹಿಗೆ ಉಪದಿಷ್ಟವಾದ ಅಧ್ಯಾತ್ಮಪಾರೋಕ್ಷ್ಯಂ=ಪರೋಕ್ಷವಾಗಿ ಹೇಳಿದ ಶ್ರೀಹರಿ-ಜೀವವಿಷಯಕವಾದುದನ್ನು ಅಧಿಂಗತಂ=ಗುರುಮುಖದಿಂದ ಕಲೆತದ್ದೇ. ಆದ್ದರಿಂದಲೇ ನಿನಗೆ ಉಪದೇಶಿಸಿರುವೆ. ಅತಿಶ್ರದ್ಧೆಯಿಂದ ಕಲೆತು ಅಭ್ಯಸಿಸು. ಪುಂಸಃ=ಜಿಜ್ಞಾಸುವಿಗೆ ತ್ರಯ್ಯಾಶ್ರಯಃ=ವೇದೋಕ್ತಕರ್ಮಾಸ್ಥಿರತ್ವ ವಿಷಯಕಸಂಶಯವು ಅಮುತ್ರ ಚ=ಅಧಿದೈವಸ್ವರೂಪಸಂಶಯ ಅಧ್ಯಾತ್ಮವಿಷಯಕಸಂಶಯ ಏವಂ ಭಿನ್ನಃ=ಕರ್ಮಗಳು ಅದೃಷ್ಟದ್ವಾರಾ ಸ್ಥಿರಗಳೆಂದು ಪ್ರತಿಪಾದಿಸುವುದರಿಂದ, ಮನಸ್ಸಿಗೆ ಲಿಂಗದೇಹೈಕ್ಯ ಹೇಳುವ ಮುಖಾಂತರ ಪರಿಹೃತವಾಯಿತು. ।।೮೯।।

।। ಇಲ್ಲಿಗೆ ಇಪ್ಪತ್ತೊಂಭತ್ತನೇ ಅಧ್ಯಾಯವು ಮುಗಿಯಿತು ।।

## ಅಥ ತ್ರಿಂಶೋಽಧ್ಯಾಯಃ

ಅವ್ಯಕ್ತಸ್ವಭಾವನಾದ ಶ್ರೀಹರಿಯು ತಪಸ್ಸಿನಿಂದ ಪ್ರಸನ್ನನಾಗಿ ವ್ಯಕ್ತನಾಗುವನು ಎಂದು, ರುದ್ರಾದಿಗಳಿಗಿಂತ ಉತ್ತಮನೆಂದೂ ಈ ಅಧ್ಯಾಯದಲ್ಲಿ ಪ್ರತಿಪಾದಿಸುವರು. ಮೊದಲಿಗೆ ಹಿಂದೆ ಹೇಳಿದ ಪ್ರಮೇಯವನ್ನು ವಿಸ್ತಾರವಾಗಿ ಕೇಳುವ ಇಚ್ಛೆಯಿಂದ ವಿದುರನು ಮೈತ್ರೇಯರನ್ನು ಪ್ರಶ್ನಿಸುವನು -

**ವಿದುರ ಉವಾಚ -**

**ಯೇ ತ್ವಯಾಽಭಿಹಿತಾ ಬ್ರಹ್ಮನ್ ಸುತಾಃ ಪ್ರಾಚೀನಬರ್ಹಿಷಃ ।**
**ತೇ ರುದ್ರಗೀತೇನ ಹರಿಂ ಸಿದ್ಧಿಮಾಪುಃ ಪ್ರತೋಷ್ಯ ಕಾಮ್ ॥೧॥**

ಬ್ರಹ್ಮನ್=ಮೈತ್ರೇಯರೇ ! ತ್ವಯಾ=ನಿಮ್ಮಿಂದ ಅಭಿಹಿತಾಃ=ಹೇಳಲ್ಪಟ್ಟ ಯೇ=ಯಾವ ಪ್ರಾಚೀನಬರ್ಹಿಷಃ=ಪ್ರಾಚೀನಬರ್ಹಿಯ ಸುತಾಃ=ಮಕ್ಕಳಿರುವರೋ ತೇ=ಅವರು ರುದ್ರಗೀತೇನ=ರುದ್ರದೇವರು ಹೇಳಿದ ಸ್ತೋತ್ರದಿಂದ ಹರಿಂ=ಶ್ರೀಹರಿಯನ್ನು ಪ್ರತೋಷ್ಯ= ಸಂತೋಷಗೊಳಿಸಿ ಕಾಂ=ಸಿದ್ಧಿಂ ಆಪುಃ=ಯಾವ ಪುರುಷಾರ್ಥವನ್ನು ಹೊಂದಿದರು ?

**ಕಿಂ ಚೇಹ ನಾರ್ಹಂತ್ಯಪರತ್ರ ವಾ ಸುಖಂ**
**ಕೈವಲ್ಯನಾಥಪ್ರಿಯಪಾರ್ಶ್ವವರ್ತಿನಃ ।**
**ಆಸಾದ್ಯ ದೇವಂ ಗಿರಿಶಂ ಯದೃಚ್ಛಯಾ**
**ಪ್ರಾಪುಃ ಪರಂ ನೂನಮಥ ಪ್ರಚೇತಸಃ ॥೨॥**

ಕೈವಲ್ಯನಾಥಪ್ರಿಯಪಾರ್ಶ್ವವರ್ತಿನಃ=ಮುಕ್ತಿಗೆ ಒಡೆಯನೂ ಪ್ರಿಯನೂ ಆದ ಪರಮಾತ್ಮನ ಮತ್ತು ಕೈವಲ್ಯನಾಥನಾದ ಹರಿಗೆ ಪ್ರಿಯರಾದ ಬ್ರಹ್ಮಾದಿಗಳ ಸಮೀಪದಲ್ಲಿರುವವರು ಅಂದರೆ ಭಕ್ತರು ಇಹ=ಈ ಲೋಕದಲ್ಲಿ ಚ=ಮತ್ತು ಅಪರತ್ರ= ಪರಲೋಕದಲ್ಲಿ ಕಿಂ ಸುಖಂ ನ ಅರ್ಹಂತಿ=ಯಾವ ಸುಖವನ್ನು ಹೊಂದಲಾರರು ?

ಎಲ್ಲವನ್ನೂ ಹೊಂದುವರು. ಆದ್ದರಿಂದ ಪ್ರಚೇತಸಃ=ಪ್ರಚೇತಸರು ಗಿರಿಶಂ ದೇವಂ= ರುದ್ರದೇವರನ್ನು ಯದೃಚ್ಛಯಾ ಆಸಾದ್ಯ=ಶ್ರೀಹರಿಯ ಇಚ್ಛೆಯಿಂದ ಪಡೆದು ಪರಂ= ಶ್ರೇಷ್ಠವಾದ ಪುರುಷಾರ್ಥವನ್ನು ನೂನಂ=ನಿಶ್ಚಯವಾಗಿ ಪ್ರಾಪುಃ=ಹೊಂದಿರುವರು. ಅದು ಯಾವುದು ? ಎಂದು ಭಾವ. ।।೨।।

ಎಲ್ಲ ಪುರುಷಾರ್ಥ ಪಡೆದರೆಂದು ಹೇಳಲು ಪ್ರಾರಂಭಿಸುವರು -

**ಮೈತ್ರೇಯ ಉವಾಚ -**

**ಪ್ರಚೇತಸೋಽಂತರುದಧೌ ಪಿತುರಾದೇಶಕಾರಿಣಃ ।**
**ಜಪಯಜ್ಞೇನ ತಪಸಾ ಪುರಂಜನಮತೋಷಯನ್ ।।೩।।**

ಪಿತುಃ=ತಂದೆಯ ಆದೇಶಕಾರಿಣಃ=ಆಜ್ಞೆಯನ್ನು ಪರಿಪಾಲಿಸುವ ಪ್ರಚೇತಸಃ= ಪ್ರಾಚೀನಬರ್ಹಿಪುತ್ರರು ಉದಧೌ ಅಂತಃ=ಸಮುದ್ರ ಮಧ್ಯದಲ್ಲಿ ಜಪಯಜ್ಞೇನ= ರುದ್ರದೇವರು ಹೇಳಿದ ಸ್ತೋತ್ರಗಳ ಜಪರೂಪವಾದ ಯಜ್ಞದಿಂದ ತಪಸಾ ಚ=೧೦ ಸಾವಿರವರ್ಷ ತಪಸ್ಸಿನಿಂದಲೂ ಪುರಂಜನಂ=ಸರ್ವಶರೀರೋತ್ಪಾದಕನಾದ, ಸರ್ವರ ಶರೀರದಲ್ಲಿ ನಿಯಾಮಕನಾಗಿ ವ್ಯಕ್ತನಾದ ಶ್ರೀಹರಿಯನ್ನು ಅತೋಷಯನ್=ಸ ‘ಂತೋಷಪಡಿಸಿದರು. ।।೩।।

**ಭಾಗವತ ತಾತ್ಪರ್ಯ -**

ಇಲ್ಲಿ ಪುರಂಜನನೆಂದರೆ ಹಿಂದೆ ಹೇಳಿದ ರಾಜನನ್ನು ತೆಗೆದುಕೊಳ್ಳುವ ಪ್ರಸಕ್ತಿ ಇದೆ. ಆದರೆ ರಾಜನನ್ನು ತೆಗೆದುಕೊಳ್ಳಬಾರದು ಎಂದು ತಿಳಿಸಲು ಪುರಂಜನಶಬ್ದವನ್ನು ವಿಷ್ಣುಪರವಾಗಿ ಪ್ರಮಾಣದಿಂದಲೇ ನಿರ್ವಚನ ಮಾಡುವರು -

**"ಪುರೇಷು ತ್ವಂಜನಾಜ್ಜೀವಃ ಪುರಂಜನ ಇತೀರಿತಃ ।**
**ಪುರಾಣಾಂ ಜನನಾದ್ವಿಷ್ಣುಃ ವ್ಯಂಜನಕತ್ವಂ ತಯೋರಪಿ" ಇತಿ ತಂತ್ರಭಾಗವತೇ ।।**

ಶರೀರದಲ್ಲಿ ವ್ಯಕ್ತನಾಗುವುದರಿಂದ ಜೀವನು ಪುರಂಜನನು ಎನಿಸುವನು. ಎಲ್ಲರ ಶರೀರಗಳನ್ನು ಸೃಷ್ಟಿಸುವುದರಿಂದಲೂ, ನಿಯಾಮಕನಾಗಿ ವ್ಯಕ್ತವಾಗುವುದರಿಂದಲೂ ಶ್ರೀಹರಿಯು ಪುರಂಜನನೆಸುತ್ತಾನೆ. ಶರೀರದಲ್ಲಿ ವ್ಯಕ್ತಿಭಾವವು ಇಬ್ಬರಿಗೂ ಇರುವುದರಿಂದ ಶ್ರೀಹರಿಯು ಜೀವನೂ ಇಬ್ಬರೂ ಪುರಂಜನರೆನಿಸುತ್ತಾರೆ ಎಂದು ತಂತ್ರಭಾಗವತದಲ್ಲಿದೆ.

**ದಿವ್ಯವರ್ಷಸಹಸ್ರಾಂತೇ ಪುರುಷಸ್ತು ಸನಾತನಃ ।**
**ತೇಷಾಮಾವಿರಭೂತ್ ಕೃಚ್ಛ್ರಂ ಶಾಂತೇನ ಶಮಯನ್ ರುಚಾ ।।೪।।**

ದಿವ್ಯವರ್ಷಸಹಸ್ರಾಂತೇ=ದೇವತಾಮಾನದಿಂದ ಸಾವಿರವರ್ಷಗಳ ಕೊನೆಗೆ ಸನಾತನಃ ಪುರುಷಃ=ಶ್ರೀಹರಿಯು ತೇಷಾಂ=ಪ್ರಚೇತಸರ ಕೃಚ್ಛ್ರಂ=ಕಷ್ಟವನ್ನು ರುಚಾ=ಕಾಂತಿಯಿಂದ ಶಮಯನ್=ಪರಿಹರಿಸುತ್ತ ಶಾಂತೇನ=ಸುಖಕರವಾದ ವಪುಷಾ=ರೂಪದಿಂದ ಆವಿರಭೂತ್=ಪ್ರತ್ಯಕ್ಷನಾದನು. ।।೪।।

**ಸುಪರ್ಣಸ್ಕಂಧಮಾರೂಢೋ ಮೇರುಶೃಂಗಮಿವಾಂಬುದಃ ।**
**ಪೀತವಾಸಾ ಮಣಿಗ್ರೀವಃ ಕುರ್ವನ್ ವಿತಿಮಿರಾ ದಿಶಃ ।।೫।।**

ಅಂಬುದಃ=ಮೋಡಗಳು ಮೇರುಶೃಂಗಮಿವ=ಮೇರುಪರ್ವತದ ಶಿಖರವನ್ನೇರಿದಂತೆ ಸುಪರ್ಣಸ್ಕಂದಂ ಆರೂಢಃ=ಗರುಡನ ಹೆಗಲ ಮೇಲೇರಿಕೊಂಡು ಪೀತವಾಸಾಃ=ಪೀತಾಂಬರ ಧರಿಸಿ ಮಣಿಗ್ರೀವಃ=ಕುತ್ತಿಗೆಯಲ್ಲಿ ಕೌಸ್ತುಭಮಣಿ ಧರಿಸಿ ದಿಶಃ=ದಿಕ್ಕುಗಳನ್ನು ವಿತಿಮಿರಾಃ ಕುರ್ವನ್=ಅಂಧಕಾರವಿಲ್ಲದಂತೆ ಮಾಡುತ್ತ ಆವಿರ್ಭೂತನಾದನು. ।।೫।।

**ಕಾಸಿಷ್ಣುನಾ ಕನಕಕರ್ಣವಿಭೂಷಣೇನ**
**ಭ್ರಾಜತ್ಕಪೋಲವದನೋ ವಿಲಸತ್ಕಿರೀಟಃ ।**
**ಅಷ್ಟಾಯುಧೈಃ ಕರವರೈರ್ಮುನಿಭಿಃ ಸುರೇಂದ್ರೈ-**
**ರಾಸೇವಿತೋ ಗರುಡಕಿನ್ನರಗೀತಕೀರ್ತಿಃ ।।೬।।**

ಕಾಸಿಷ್ಣುನಾ=ಹೊಳೆಯುವ (ಕಾಸೃ ದೀಪ್ತೌ ಇತಿ ಧಾತೋಃ) ಕನಕಕರ್ಣವಿಭೂಷಣೇನ =ಚಿನ್ನದ ಮಕರಕುಂಡಲಗಳಿಂದ ಭ್ರಾಜತ್ಕಪೋಲವದನಃ=ಶೋಭಿಸುವ ಕಪೋಲಗಳಿಂದ ಕೂಡಿದ ಮುಖವುಳ್ಳ ವಿಲಸತ್ಕಿರೀಟಃ=ಪ್ರಕಾಶಮಾನವಾದ ಕಿರೀಟ ಧರಸಿದ ಅಷ್ಟಾಯುಧೈಃ= ಎಂಟು ಆಯುಧಗಳುಳ್ಳ ಕರವರೈಃ=ಶ್ರೇಷ್ಠಕರಗಳಿಂದ ಕೂಡಿದವನಾಗಿ, ಮುನಿಭಿಃ= ಋಷಿಗಳಿಂದ ಸುರೇಂದ್ರೈಃ=ದೇವತಾಶ್ರೇಷ್ಠರಿಂದ ಆಸೇವಿತಃ=ಸೇವಿಸಲ್ಪಡುವ ಗರುಡಕಿನ್ನರಗೀತಕೀರ್ತಿಃ=ಗರುಡ ಮತ್ತು ಕಿನ್ನರರಿಂದ ಗಾನ ಮಾಡಲ್ಪಡುವ ಕೀರ್ತಿಯುಳ್ಳ

**ಪೀನಾಯತಾಷ್ಟಭುಜಮಂಡಲಮಧ್ಯಲಕ್ಷ್ಮ್ಯಾ**
**ಸ್ಪರ್ಧಚ್ಛ್ರಿಯಾ ಪರಿವೃತೋ ವನಮಾಲಯಾಽದ್ಯಃ ।**
**ಬರ್ಹಿಷ್ಮತಃ ಪುರುಷ ಆಹ ಸುತಾನ್ ಪ್ರಪನ್ನಾನ್**
**ಪರ್ಜನ್ಯನಾದರುತಯಾ ಸಘೃಣಾವಲೋಕಃ ।।೭।।**

ಪೀನ=ಪುಷ್ಟವಾದ ಆಯತ=ವಿಶಾಲವಾದ ಅಷ್ಟಭುಜ=ಎಂಟು ಕೈಗಳ ಮಂಡಲಮಧ್ಯೇ =ವಕ್ಷಸ್ಥಳದಲ್ಲಿರುವ ಲಕ್ಷ್ಮ್ಯಾ=ಲಕ್ಷ್ಮೀದೇವಿಯೊಡನೆ ಸ್ಪರ್ಧತ್=ಸ್ಪರ್ಧಿಸುವಂತಿರುವ ಶ್ರಿಯಾ= ಕಾಂತಿಯುಳ್ಳ ವನಮಾಲಯಾ ಪರಿವೃತಃ=ವನಮಾಲೆಯಿಂದ ಸುತ್ತುವರಿದ (ವನಮಾಲೆ

ಧರಿಸಿದ ಎಂದರ್ಥ) ಆದ್ಯಃ ಪುರುಷಃ=ಆದಿಪುರುಷನಾದ ಶ್ರೀಹರಿಯು ಸಘೃಣಾವಲೋಕಃ= ದಯಾಪೂರ್ಣದೃಷ್ಟಿಯುಳ್ಳವನಾಗಿ ಪ್ರಪನ್ನಾನ್=ಶರಣಾಗತರಾದ ಬರ್ಹಿಷ್ಮತಃ ಸುತಾನ್=ಪ್ರಾಚೇತಸರನ್ನು ಕುರಿತು ಪರ್ಜನ್ಯನಾದರುತಯಾ=ಮೇಘದ ನಾದದಂತಿರುವ ನಿನಾದ ಉಳ್ಳ ವಾಚಾ=ಮಾತುಗಳಿಂದ ಆಹ=ಹೇಳಿದನು. ॥೭॥

**ಶ್ರೀಭಗವಾನುವಾಚ –**

**ವರಂ ವೃಣೀಧ್ವಂ ಭದ್ರಂ ವೋ ಯೂಯಂ ಮೇ ನೃಪನಂದನಾಃ ।**
**ಸೌಹಾರ್ದೇನಾಪೃಥಗ್ಧರ್ಮಾಸ್ತುಷ್ಟೋಽಹಂ ಸೌಹೃದೇನ ವಃ ॥೮॥**

ಸೌಹಾರ್ದೇನ=ಪರಸ್ಪರ ಸೌಹಾರ್ದವಿರುವುದರಿಂದ ಅಪೃಥಕ್‌ಧರ್ಮಾಃ= ಮಲುಗುವುದು, ತಿನ್ನುವುದು ಕುಡಿಯುವುದು, ಓಡಾಡುವುದು ಮೊದಲಾದವುಗಳಲ್ಲಿ ಭಿನ್ನತೆ ಇಲ್ಲದಿರುವ ವಃ=ನಿಮ್ಮಗಳ ಸೌಹಾರ್ದೇನ=ಪರಸ್ಪರ ಮಿತ್ರಭಾವದಿಂದ ಮತ್ತು ನನ್ನಲ್ಲಿರುವ ಭಕ್ತಿಯಿಂದ ವಃ=ನಿಮ್ಮ ಮೇಲೆ ಅಹಂ=ನಾನು ತುಷ್ಟೋಽಸ್ಮಿ=ಸಂತುಷ್ಟನಾಗಿರುವೆನು. ಹೇ ನೃಪನಂದನಾಃ=ಎಲೋ ರಾಜಕುವರರೇ ! ವಃ=ನಿಮಗೆ ಭದ್ರಂ ಅಸ್ತು=ಕಲ್ಯಾಣವಿರಲಿ. (ಕಲ್ಯಾಣ ಆಗಲಿ.) ಯೂಯಂ=ನೀವು ಮೇ=ನನ್ನಿಂದ ವರಂ ವೃಣೀಧ್ವಂ=ವರವನ್ನು ಸ್ವೀಕರಿಸಿರಿ. ॥೮॥

**ಯೋಽನುಸ್ಮರತಿ ಸಂಧ್ಯಾಯಾಂ ಯುಷ್ಮಾನನುದಿನಂ ನರಃ ।**
**ತಸ್ಯ ಭ್ರಾತೃಷ್ವಾತ್ಮಸಾಮ್ಯಂ ತಥಾ ಭೂತೇಷು ಸೌಹೃದಮ್ ॥೯॥**

ಯಃ ನರಃ=ಯಾವ ಮನುಷ್ಯನು ಅನುದಿನಂ=ಪ್ರತಿನಿತ್ಯದಲ್ಲಿ ಸಂಧ್ಯಾಯಾಂ= ಸಾಯಂಕಾಲದಲ್ಲಿ ಯುಷ್ಮಾನ್=ನಿಮ್ಮನ್ನು ಅನುಸ್ಮರತಿ=ಸ್ಮರಣ ಮಾಡುವನೋ ತಸ್ಯ=ಅವನಿಗೆ ಭ್ರಾತುಷು=ಅಣ್ಣ ತಮ್ಮಂದಿರಲ್ಲಿ ಆತ್ಮಸಾಮ್ಯಂ=ಜ್ಞಾನಾದಿಗುಣಗಳಿಂದ ತನ್ನ ಸಮಾನತೆಯು ಅಂದರೆ ಉಪಾಸಕನು ತನ್ನ ಸಮಾನಗುಣ-ಕರ್ಮಾದಿಗಳುಳ್ಳ ಭ್ರಾತೃಗಳುಳ್ಳವನು ಭವಿಷ್ಯತಿ=ಆಗುವನು, ತಥಾ=ಮತ್ತು ಭೂತೇಷು ಸೌಹೃದಂ=ಪ್ರಾಣಿಗಳಲ್ಲಿ ಸೌಹಾರ್ದವೂ ಭವಿಷ್ಯತಿ=ಉಂಟಾಗುವುದು. ॥೯॥

**ಯೇ ತು ಮಾಂ ರುದ್ರಗೀತೇನ ಸಾಯಂ ಪ್ರಾತಃ ಸಮಾಹಿತಾಃ ।**
**ಸ್ತುವಂತ್ಯಹಂ ಕಾಮವರಾನ್ ದಾಸ್ಯೇ ಪ್ರಜ್ಞಾಂ ಚ ಶೋಭನಾಮ್ ॥೧೦॥**

ಯೇ=ಯಾರು ಮಾಂ=ನನ್ನನ್ನು ರುದ್ರಗೀತೇನ=ರುದ್ರಗೀತದಿಂದ ಸಮಾಹಿತಃ= ಸಮಾಧಾನಯುತವಾಗಿ (ಏಕಾಗ್ರತೆಯಿಂದ) ಸಾಯಂ ಪ್ರಾತಃ=ಸಾಯಂಕಾಲ ಮತ್ತು ಪ್ರಾತಃಕಾಲದಲ್ಲಿ ಸ್ತುವಂತಿ=ಸ್ತೋತ್ರ ಮಾಡುವರೋ ತೇಷಾಂ=ಅವರಿಗೆ ಅಹಂ=ನಾನು

ಕಾಮವರಾನ್=ಇಷ್ಟವರಗಳನ್ನು ಶೋಭನಾಂ ಪ್ರಜ್ಞಾಂ ಚ=ಒಳ್ಳೆಯ ಬುದ್ಧಿಯನ್ನೂ ದಾಸ್ಯೇ=ಕೊಡುವೆನು. ಅಂದಮೇಲೆ ನಿಮಗೆ ಕೊಡುವೆನೆಂದು ಬೇರೆ ಹೇಳಬೇಕೇ ? ಎಂದು ಭಾವ. ।।೧೦।।

**ಯದ್ ಯೂಯಂ ಪಿತುರಾದೇಶಮಗ್ರಹೀಷ್ಟ ಮುದಾಽನ್ವಿತಾಃ ।**
**ಅತೋ ವ ಉಶತೀ ಕೀರ್ತಿರ್ಲೋಕಾನನುಭವಿಷ್ಯತಿ ।।೧೧।।**

ಯತ್=ಯಾವ ಕಾರಣ ಯೂಯಂ=ನೀವು ಮುದಾಽನ್ವಿತಾಃ=ಸಂತೋಷದಿಂದ ಕೂಡಿದವರಾಗಿ ಪಿತುಃ ಆದೇಶಂ ಅಗ್ರಹೀಷ್ಟ=ತಂದೆಯ ಆಜ್ಞೆಯನ್ನು ಸ್ವೀಕರಿಸಿರುವಿರೋ ಅತಃ=ಆದ್ದರಿಂದ ವಃ=ನಿಮ್ಮ ಉಶತೀ ಕೀರ್ತಿಃ=ನಿರ್ಮಲವಾದ ಕೀರ್ತಿಯು ಲೋಕಾನ್ ಅನುಭವಿಷ್ಯತಿ=ಎಲ್ಲ ಲೋಕಗಳನ್ನು ಹೊಂದುವುದು. ಇದರಿಂದ ನಿರ್ಮಲಕೀರ್ತಿಯ ಅಪೇಕ್ಷೆಯುಳ್ಳವರು ಹಿರಿಯರ ಆದೇಶವನ್ನು ಅವಶ್ಯ ನಡೆಸಬೇಕೆಂದು ತಿಳಿದಂತಾಯಿತು.

**ಭವಿತಾ ವಿಶ್ರುತಃ ಪುತ್ರೋಽನವಮೋ ಬ್ರಹ್ಮಣೋ ಗುಣೈಃ ।**
**ಯ ಏತಾಮಾತ್ಮವೀರ್ಯೇಣ ತ್ರಿಲೋಕೀಂ ಪೂರಯಿಷ್ಯತಿ ।।೧೨।।**

ಬ್ರಹ್ಮಣಃ=ಬ್ರಹ್ಮನಿಗೆ ಗುಣೈಃ=ಗುಣಗಳಿಂದ ಅನವಮಃ=ಕಡಿಮೆಯಿಲ್ಲದ ವಿಶ್ರುತಃ= ಪ್ರಸಿದ್ಧನಾದ ಪುತ್ರಃ=ಮಗನು ಭವಿತಾ=ಜನಿಸುವನು. ಯಃ=ಯಾವನು ಏತಾಂ ತ್ರಿಲೋಕೀಂ=ಈ ಮೂರು ಲೋಕಗಳನ್ನು ಆತ್ಮವೀರ್ಯೇಣ ಪೂರಯಿಷ್ಯತಿ=ತನ್ನ ಸಂತಾನದಿಂದ ಪೂರ್ಣಗೊಳಿಸುವನೋ (ತುಂಬುವನೋ) ಅಂತಹ ಮಗನು ಜನಿಸುವನು ಎಂದು ಅನ್ವಯ. ।।೧೨।।

ಅನುಕೂಲ ಹೆಂಡತಿ ಇಲ್ಲವಾದರೆ ಔರಸಪುತ್ರರಾಗುವುದು ಹೇಗೆ ? ಎಂದರೆ ಹೇಳುವರು -

**ಕಂಡೋಃ ಪ್ರಮ್ಲೋಚಯಾ ಲಬ್ಧಾ ಕನ್ಯಾ ಕಮಲಲೋಚನಾ ।**
**ತಾಂ ಚಾಪವಿದ್ಧಾಂ ಜಗೃಹುರ್ಭೂರುಹಾ ನೃಪನಂದನಾಃ ।।೧೩।।**

ಹೇ ನೃಪನಂದನಾಃ=ಎಲೈ ರಾಜಕುವರರೇ ! ಕಂಡೋಃ=ಕಂಡು ಋಷಿಯಿಂದ ಪ್ರಮ್ಲೋಚಯಾ=ಈ ಹೆಸರಿನ ಅಪ್ಸರೆಯಿಂದ ಕಮಲಲೋಚನಾ=ಕಮಲದಂತೆ ಕಣ್ಣುಳ್ಳ ಕನ್ಯಾ=ಕನ್ಯೆಯು ಲಬ್ಧಾ=ಪ್ರಾಪ್ತವಾಯಿತು. ಅಪವಿದ್ಧಾಂ=ತಂದೆ-ತಾಯಿಗಳಿಂದ ಬಿಡಲ್ಪಟ್ಟ ತಾಂ=ಆ ಕನ್ಯೆಯನ್ನು ಭೂರುಹಾಃ=ವೃಕ್ಷಗಳು ಜಗೃಹುಃ=ಸ್ವೀಕರಿಸಿದರು.

ಕಂಡು ಋಷಿಯು ತಪಸ್ಸು ಮಾಡುತ್ತಿರಲು ಅದನ್ನು ನಾಶ ಮಾಡಲು ಇಂದ್ರನಿಂದ ಕಳುಹಿಸಲ್ಪಟ್ಟ ಪ್ರಮ್ಲೋಚಾ ಎಂಬ ಅಪ್ಸರೆಯಿಂದ ಮೋಹಿತನಾಗಿ ಕಂಡುವು ಅವಳೊಡನೆ ಬಹುಕಾಲ ಕ್ರೀಡಿಸಿದನು. ನಂತರ ಅವಳು ಸ್ವರ್ಗಕ್ಕೆ ತೆರಳುವಾಗ ಕಂಡುವಿನಿಂದ ಜನಿಸಿದ ಗರ್ಭವನ್ನು ಗಿಡಗಳಲ್ಲಿ ಬಿಟ್ಟು ಹೋದಳು. ಆಗ ವೃಕ್ಷಗಳು ಗರ್ಭವನ್ನು ರಕ್ಷಿಸಿದವು ಎಂಬ ಕಥಾ ಸೂಚಿತವಾಗುವುದು. ತಂದೆ-ತಾಯಿಗಳ ಮರಣಕ್ಕೆ ಕಾರಣವಾದ ಯೋಗದಲ್ಲಿ ಜನಿಸಿದ್ದರಿಂದ ಅವಳು ತ್ಯಾಗ ಮಾಡಿದಳೆಂದು ವಿಜಯಧ್ವಜರ ಅಭಿಪ್ರಾಯ. ।।೧೩।।

**ಕ್ಷುತ್‌ಕ್ಷಾಮಾಯಾ ಮುಖೇ ರಾಜಾ ಸೋಮಃ ಪೀಯೂಷವರ್ಷಿಣೀಮ್ ।**
**ದೇಶಿನೀಂ ರೋದಮಾನಾಯಾ ನಿದಧೇ ಸ ದಯಾನ್ವಿತಃ ।।೧೪।।**

ಕ್ಷುತ್‌ಕ್ಷಾಮಾಯಾಃ=ಹಸಿವೆಯಿಂದ ಬಳಲಿದ ರೋದಮಾನಾಯಾಃ=ಅಳುತ್ತಿರುವ ಆ ಕನ್ಯೆಯ ಮುಖೇ=ಬಾಯಿಯಲ್ಲಿ ಸಃ=ಪ್ರಸಿದ್ಧನಾದ ರಾಜಾ=ವನಸ್ಪತಿಗಳಿಗೆ ರಾಜನಾದ ಸೋಮಃ=ಚಂದ್ರನು ದಯಾನ್ವಿತಃ=ಕರುಣೆಯಿಂದ ಕೂಡಿದವನಾಗಿ ಪೀಯೂಷವರ್ಷಿಣೀಂ =ಅಮೃತವನ್ನು ಸುರಿಸುವ ದೇಶಿನೀಂ=ತೋರುಬೆರಳನ್ನು ನಿದಧೇ=ಇರಿಸಿದನು. ।।೧೪।।

**ಪ್ರಜಾವಿಸರ್ಗ ಆದಿಷ್ಟಾಃ ಪಿತ್ರಾ ಮಾಮನುವರ್ತತಾ ।**
**ತತ್ರ ಕನ್ಯಾಂ ವರಾರೋಹಾಂ ತಾಮುದ್ವಹತ ಮಾಚಿರಮ್ ।।೧೫।।**

ಮಾಂ=ನನ್ನನ್ನು ಅನುವರ್ತತಾ=ಅನುಸರಿಸುವ ಪಿತ್ರಾ=ತಂದೆಯಿಂದ ಪ್ರಜಾವಿಸರ್ಗೇ= ವಿವಿಧಪ್ರಜಾಸೃಷ್ಟಿಯಲ್ಲಿ ಆದಿಷ್ಟಾಃ=ಆಜ್ಞಾಪಿಸಲ್ಪಟ್ಟಿರುವಿರಿ. ತತ್ರ=ಆ ಪ್ರಜಾಸೃಷ್ಟಿಯನ್ನು ಮಾಡಲು ವರಾರೋಹಾಂ=ಸುವರಗಳಾದ ತಾಂ ಕನ್ಯಾಂ=ಆ ವೃಕ್ಷಕನ್ಯೆನ್ನು ಮಾಚಿರಂ=ತಡಮಾಡದೇ (ಶೀಘ್ರದಲ್ಲಿ) ಉದ್ವಹತ=ವಿವಾಹವಾಗಿರಿ. ।।೧೫।।

ಬಹುಜನರಾದ ನಮಗೆ ಒಬ್ಬಳೇ ಹೇಗೆ ಹೆಂಡತಿಯಾಗುವಳು ? ಎಂದರೆ ಹೇಳುವನು-

**ಅಪೃಥಗ್‌ಧರ್ಮಶೀಲಾನಾಂ ಸರ್ವೇಷಾಂ ವಃ ಸುಮಧ್ಯಮಾ ।**
**ಅಪೃಥಗ್‌ಧರ್ಮಶೀಲೇಯಂ ಭೂಯಾತ್ ಪ್ರತ್ಯರ್ಪಿತಾಶಯಾ ।।೧೬।।**

ಅಪೃಥಗ್‌ಧರ್ಮಶೀಲಾನಾಂ ವಃ=ಒಂದೇ ನಡೆ-ನುಡಿಯೇ ಸ್ವಭಾವವಾಗಿವುಳ್ಳ ನಿಮಗೆ ಸರ್ವೇಷಾಂ=ಎಲ್ಲರಿಗೂ ಅಪೃಥಗ್‌ಧರ್ಮಶೀಲಾ ಇಯಂ=ಒಂದೇ ನಡೆ-ನುಡಿಸ್ವಭಾವವುಳ್ಳ ಸುಮಧ್ಯಮಾ=ಸಣ್ಣನಡುವುಳ್ಳ ಪ್ರತ್ಯರ್ಪಿತಾಶಯಾ=ನಿಮ್ಮಲ್ಲಿ ಸಮರ್ಪಿತವಾದ ಮನಸ್ಸುಳ್ಳ ಇವಳು ಪತ್ನೀ ಭೂಯಾತ್=ಹೆಂಡತಿಯಾಗುವಳು. ಶೀಲ-ಸ್ವಭಾವ ಒಂದೇ ಇರುವುದರಿಂದಲೂ, ನನ್ನ ಮಾತಿನಿಂದಲೂ ಜಗತ್ತಿನ ದೃಷ್ಟವಿರೋಧವಿಲ್ಲ. ।।೧೬।।

**ದಿವ್ಯವರ್ಷಸಹಸ್ರಾಣಾಂ ಸಹಸ್ರಮಹತೌಜಸಃ ।**
**ಭೌಮಾನ್ ಭೋಕ್ಷ್ಯಥ ಭೋಗಾನ್ ವೈ ದಿವ್ಯಾಂಶ್ಚಾನುಗ್ರಹಾನ್ಮಮ ॥೧೭॥**

ಮಮ=ನನ್ನ ಅನುಗ್ರಹಾತ್=ಅನುಗ್ರಹದಿಂದ ಅಮಿತೌಜಸಃ=ಬಹುಪರಾಕ್ರಮಿಗಳಾದ ನೀವು ದಿವ್ಯವರ್ಷಸಹಸ್ರಾಣಾಂ ಸಹಸ್ರಂ=ಬಹುಕಾಲ ಪರ್ಯಂತ ದಿವ್ಯಾನ್=ಶ್ರೇಷ್ಠವಾದ ಭೌಮಾನ್ ಭೋಗಾನ್=ಭೂಲೋಕದ ಭೋಗಗಳನ್ನು ಭೋಕ್ಷ್ಯಥ=ಅನುಭವಿಸಿರಿ.

**ಭಾಗವತ ತಾತ್ಪರ್ಯ -**

ಇಲ್ಲಿ 'ದಿವ್ಯವರ್ಷಸಹಸ್ರಾಣಾ ಸಹಸ್ರಂ' ಎಂದರೆ ದೇವತೆಗಳ ಹತ್ತು ಲಕ್ಷಾವಿರವರ್ಷ ಪರ್ಯಂತ ಪ್ರಚೇತಸರು ರಾಜ್ಯಪಾಲನ ಮಾಡಿದರೆಂದು ತೋರುವುದು. ಅದು ಪ್ರಮಾಣವಿರುದ್ಧ. ಕಾರಣ ಇಲ್ಲಿ ವಿವಕ್ಷಿತ ಅರ್ಥ ತಿಳಿಸುವರು -

**ದಿವ್ಯವರ್ಷಸಹಸ್ರಾಣಾಂ ಇತಿ ಸಹಸ್ರಶಬ್ದೋ ಬಹುತ್ವವಾಚೀ ।**

**''ಮಾನುಷಾಣಾಂ ವತ್ಸರಾಣಾಂ ಲಕ್ಷದ್ವಾದಶಕಂ ಪುರಾ ।**
**ಪ್ರಚೇತೋಭಿರಿಯಂ ಪೃಥ್ವೀ ಪಾಲಿತಾಽವ್ಯಾಹತೇಂದ್ರಿಯೈಃ'' ಇತಿ ಬ್ರಹ್ಮಾಂಡೇ ॥**

ಹಿಂದೆ ಮಹಾಪರಾಕ್ರಮಿಗಳಾದ ಪ್ರಚೇತಸರು ಹನ್ನೆರಡು ಲಕ್ಷ ಮನುಷ್ಯವರ್ಷ ಪರ್ಯಂತ ಈ ಭೂಮಿಯನ್ನು ಪಾಲನ ಮಾಡಿದರು ಎಂದು ಬ್ರಹ್ಮಾಂಡಪುರಾಣದಲ್ಲಿ ಇರುವುದರಿಂದ, ''ದಿವ್ಯವರ್ಷಸಹಸ್ರಾಣಾಂ'' ಎಂಬ ವಾಕ್ಯದಲ್ಲಿರುವ ಸಹಸ್ರಶಬ್ದಕ್ಕೆ ಬಹಳ ಎಂದರ್ಥ.

ಯಾದುಪತ್ಯ ಃ ಅಂತೂ ದಿವ್ಯವರ್ಷಸಹಸ್ರಾಣಾಂ ಎಂಬುದಕ್ಕೆ ಕಪಿಂಜಲಾನಾಲಭೇತ್ ಎಂಬಲ್ಲಿಯಂತೆ ಮೂರು ಸಾವಿರ ದೇವತಾವರ್ಷಗಳು, ಅದರ ಮೇಲೆ ಸಹಸ್ರ ಎಂದರೆ ತಾತ್ಪರ್ಯದಲ್ಲಿ ಹೇಳಿದಂತೆ ಬಹುಕಾಲ ಅರ್ಥಾತ್ ಮೂರು ನೂರಾ ಮುವತ್ತು ಮೂರು ವರ್ಷಗಳು ಮತ್ತು ನೂರಾ ಇಪ್ಪತ್ತು ನಾಲ್ಕು ಮನುಷ್ಯವರ್ಷ. ಈ ರೀತಿ ಬಹುಕಾಲ ಎಂದು ಮೂಲಾರ್ಥ ಮಾಡಿದಂತಾಯಿತು. ಮನುಷ್ಯರ ಒಂದು ವರ್ಷ ದೇವತೆಗಳ ಒಂದು ದಿವಸ. ಹೀಗಾಗಿ ೩೩೩೩ ದೇವತಾವರ್ಷ ಮೂನ್ನೂರಾ ಅರವತ್ತು ದಿವಸಾತ್ಮಕ ಮನುಷ್ಯವರ್ಷ ಗುಣಾಕಾರ ಮಾಡಿದರೆ ೧೨ ಲಕ್ಷ ವರ್ಷವಾಗುವುದು. ಅದನ್ನೇ ಬ್ರಹ್ಮಾಂಡಪುರಾಣದಲ್ಲಿ ಹೇಳಿದೆ. ॥೧೭॥

**ಅಥ ಮಯ್ಯನಪಾಯಿನ್ಯಾ ಭಕ್ತ್ಯಾ ಪಕ್ವಗುಣಾಶಯಾಃ ।**
**ಉಪಯಾಸ್ಯಥ ಮದ್ಧಾಮ ನಿರ್ವಿದ್ಯ ನಿರಯಾದತಃ ॥೧೮॥**

ಅಥ=ಅನಂತರ ಮಯಿ=ನನ್ನಲ್ಲಿ ಅನಪಾಯಿನ್ಯಾ ಭಕ್ತ್ಯಾ=ನಿಶ್ಚಲವಾದ ಭಕ್ತಿಯಿಂದ ಪಕ್ವಗುಣಾಶಯಾಃ=ಪರಿಪಾಕವನ್ನು ಹೊಂದಿದ ಪ್ರಾಕೃತ ಅಂತಃಕರಣವುಳ್ಳವರಾಗಿ ಅತಃ ನಿರಯಾತ್=ನರಕಸದೃಶವಾದ ಸಂಸಾರದಿಂದ ನಿರ್ವಿದ್ಯ=ವಿರಕ್ತರಾಗಿ ಮದ್ಧಾಮ ಉಪಯಾಸ್ಯಥ=ನನ್ನ ಸ್ಥಾನಕ್ಕೆ ಬನ್ನಿರಿ. ॥೧೮॥

**ಗೃಹೇಷ್ವಾವಿಶತಾಂ ಚಾಪಿ ಪುಂಸಾಂ ಕುಶಲಕರ್ಮಣಾಮ್ ।**
**ಮದ್ವಾರ್ತಾಯಾತಯಾಮಾನಾಂ ನ ಬಂಧಾಯ ಗೃಹಾ ಮತಾಃ ॥೧೯॥**

ಗೃಹೇಷು ಆವಿಶತಾಂ ಅಪಿ=ಗೃಹಸ್ಥಾಶ್ರಮದಲ್ಲಿ ಪ್ರವೇಶ ಮಾಡಿದವರಾದರೂ ಕುಶಲಕರ್ಮಣಾಂ=ನನ್ನಲ್ಲಿ ಸಮರ್ಪಿತವಾದ ಕರ್ಮವುಳ್ಳ ಮದ್ವಾರ್ತಾಯಾತಯಾಮಾನಾಂ ಪುಂಸಾಂ=ನನ್ನ ವಾರ್ತೆಯಿಂದ ಕಾಲ ಕಳೆಯುವ ಜನರಿಗೆ ಗೃಹಾಃ=ಮನೆ ಮುಂತಾದವು ಬಂಧಾಯ ನ ಮತಾಃ=ಬಂಧಕಾರಣವಾಗಿಲ್ಲ. ॥೧೯॥

ಭಗವಂತನ ವಾರ್ತೆ ಸಂಸಾರವಿಚ್ಛೇದಕವಾದ ಮೇಲೆ ಸುಲಭವಾದ್ದರಿಂದ ಎಲ್ಲರೂ ಏಕೆ ಮುಕ್ತರಾಗುವುದಿಲ್ಲ ? ಎಂದರೆ ಹೇಳುವರು -

**ನ ವ್ಯವಹ್ರಿಯತೇ ಯಜ್ಞೋ ಬ್ರಹ್ಮೈತದ್ ಬ್ರಹ್ಮವಾದಿಭಿಃ ।**
**ನ ಮುಹ್ಯಂತಿ ನ ಶೋಚಂತಿ ನ ಹೃಷ್ಯಂತಿ ಯತೋ ಗತಾಃ ॥೨೦॥**

ಯತಃ=ಯಾವನ ವಿಷಯದಲ್ಲಿ ಗತಾಃ=ಯೋಗ್ಯತಾನುಸಾರೇಣ ತಿಳಿದವರು ವಿಪದಿ ನ ಮುಹ್ಯಂತಿ ನ ಶೋಚಂತಿ=ವಿಪತ್ತು ಬಂದಾಗ ಮೋಹಗೊಳ್ಳುವುದಿಲ್ಲವೋ, ದುಃಖಪಡುವುದಿಲ್ಲವೋ ನ ಹೃಷ್ಯಂತಿ=ಸಂಪತ್ತು ಬಂದಾಗ ಸಂತಸಪಡುವುದಿಲ್ಲವೋ ತತ್ ಏತತ್ ಯಜ್ಞಃ ಬ್ರಹ್ಮ=ಆ ವಿಷ್ಣ್ವಾಖ್ಯನಾದ ಬ್ರಹ್ಮನು ಬ್ರಹ್ಮವಾದಿಭಿಃ=ಬ್ರಹ್ಮನನ್ನು ಹೇಳುವವರಿಂದ ಯಥಾನುಭವಂ ನ ವ್ಯವಹ್ರಿಯತೇ=ತಾವು ಅನುಭವಿಸಿದಂತೆ (ತಿಳಿದಂತೆ) ಹೇಳಲ್ಪಡುವುದಿಲ್ಲ. ಆದ್ದರಿಂದ ಮೋಚಕವಾದ ನನ್ನ ವಾರ್ತೆ ಸುಲಭವಲ್ಲ. ಕಾರಣ ಎಲ್ಲರಿಗೆ ಮುಕ್ತಿಯಾಗುವುದಿಲ್ಲ ಎಂದು ಭಾವ.

**ಭಾಗವತ ತಾತ್ಪರ್ಯ -**

ಯಜ್ಞವು ಕ್ರಿಯಾರೂಪವಾದ್ದರಿಂದ ಈ ಶ್ಲೋಕದಲ್ಲಿ ಯಜ್ಞೋ ಬ್ರಹ್ಮ ಎಂದು ಬ್ರಹ್ಮನಿಗೂ ಯಜ್ಞಕ್ಕೂ ಅಭೇದ ಹೇಳಿದ್ದು ಹೇಗೆ ? ಎಂಬ ಶಂಕಾಪರಿಹಾರಕ್ಕಾಗಿ ಅನುವಾದ ಮಾಡಿ ವ್ಯಾಖ್ಯಾನಿಸುವರು ಆಚಾರ್ಯರು -

**ಯಜ್ಞೋ ಬ್ರಹ್ಮ ವಿಷ್ಣ್ವಾಖ್ಯಂ ಬ್ರಹ್ಮ ಯಥಾನುಭವಂ ನ ವ್ಯವಹ್ರಿಯತೇ ।**

**'ಸೂಕ್ಷ್ಮೇಣ ಮನಸಾ ವಿದ್ಮೋ ವಾಚಾ ವಕ್ತುಂ ಶಕ್ನುಮಃ' ಇತಿ ಭಾರತೇ ॥**

ತಾತ್ಪರ್ಯದಲ್ಲಿ ವಿಷ್ಣ್ವಾಖ್ಯಂ ಎಂದದ್ದರಿಂದ ಯಜ್ಞಶಬ್ದವು ವಿಷ್ಣುಪ್ರತಿಪಾದಕವೇ ಹೊರತು ಕ್ರಿಯಾಪರವಲ್ಲವೆಂದು ಸೂಚಿಸುವರು. ''ಬ್ರಹ್ಮವಾದಿಭಿಃ ಬ್ರಹ್ಮ ನ ವ್ಯವಹ್ರಿಯತೇ'' ಎಂಬುದು ವ್ಯಾಹತ. ಆದ್ದರಿಂದ ಅಪೇಕ್ಷಿತ ಅಧ್ಯಾಹಾರ ಮಾಡಿ ಯೋಜಿಸುವರು - ''ಯಥಾನುಭವಂ'' ಎಂದು. ಈ ವಿಷಯದಲ್ಲಿ ಪ್ರಮಾಣ ಭಾರತ. ಸೂಕ್ಷ್ಮವಿಷಯಕ-ಮನಸ್ಸಿನಿಂದ ಯೋಗ್ಯತಾನುಸಾರ ತಿಳಿಯುವೆವು. ಆದರೂ ತಿಳಿದಂತೆ ಹೇಳಲಾರೆವು ಎಂದರ್ಥ. ॥೨೦॥

**ಮೈತ್ರೇಯ ಉವಾಚ -**

**ಏವಂ ಬ್ರುವಾಣಂ ಪುರುಷಾರ್ಥಭಾಜನಂ**
**ಜನಾರ್ದನಂ ಪ್ರಾಂಜಲಯಃ ಪ್ರಚೇತಸಃ ।**
**ತದ್ದರ್ಶನಧ್ವಸ್ತತಮೋರಜೋಮಲಾ**
**ಗಿರಾಽಗೃಣನ್ ಗದ್ಗದಯಾ ಸುಹೃತ್ತಮಮ್ ॥೨೧॥**

ಏವಂ=ಈ ರೀತಿ ಬ್ರುವಾಣಂ=ಹೇಳುತ್ತಿರುವ ಪುರುಷಾರ್ಥಭಾಜನಂ=ಪುರುಷಾರ್ಥ-ಪ್ರಾಪಕನಾದ ಜನಾರ್ದನಂ=ಪರಮಾತ್ಮನನ್ನು ಸುಹೃತ್ತಮಂ=ಅನಿಮಿತ್ತೋಪಕಾರಕನಾದವನನ್ನು ತದ್ದರ್ಶನಧ್ವಸ್ತತಮೋರಜೋಮಲಾಃ=ಅವನ ದರ್ಶನದಿಂದ ತಮೋಗುಣ ರಜೋಗುಣಗಳೆಂಬ ಮಲವನ್ನು ಕಳೆದುಕೊಂಡ ಪ್ರಜೇತಸಃ=ಪ್ರಜೇತಸರು ಪ್ರಾಂಜಲಯಃ= ಕೈ ಜೋಡಿಸಿ ಗದ್ಗದಯಾ ಗಿರಾ ಅಗೃಣನ್=ಕಂಠ ಬಿಗಿದ ಮಾತುಗಳಿಂದ ಸ್ತುತಿಸಿದರು.

**ಪ್ರಚೇತಸ ಊಚುಃ -**

**ನಮೋ ನಮಃ ಕ್ಲೇಶವಿನಾಶನಾಯ**
**ನಿರೂಪಿತೋದಾರಗುಣಾಹ್ವಯಾಯ ।**
**ಮನೋವಚೋವೇಗಪುರೋಜವಾಯ**
**ಸರ್ವಾಕ್ಷಮಾರ್ಗೈರಗತಾಧ್ವನೇ ನಮಃ ॥೨೨॥**

ಕ್ಲೇಶವಿನಾಶನಾಯ=ಕಷ್ಟಪರಿಹಾರಕನಾದ ನಿರೂಪಿತೋದಾರಗುಣಾಹ್ವಯಾಯ= ಪ್ರತಿಪಾದಿಸಲ್ಪಟ್ಟ ಉತ್ಕೃಷ್ಟ ಜ್ಞಾನಾದಿಗುಣಗಳು ಮತ್ತು ನಾಮಗಳುಳ್ಳ ಮನೋವಚೋವೇಗ-ಪುರೋಜವಾಯ=ಮನೋವೇಗ ಮಾತಿನ ವೇಗಗಳಿಗಿಂತ ಮುಂದಿರುವ ವೇಗವುಳ್ಳ (ಮನಸ್ಸು ಮಾತುಗಳಿಗೆ ಗೋಚರನಲ್ಲದ ಎಂದು ಭಾವ) ಸರ್ವಾಕ್ಷಮಾರ್ಗೈಃ ಅಗತಾಧ್ವನೇ=ಎಲ್ಲರ ಎಲ್ಲ ಇಂದ್ರಿಯಗಳಿಗೆ ತಿಳಿಯದ ಮಾರ್ಗವುಳ್ಳ ನಿನಗೆ ನಮಃ ನಮಃ ನಮಃ=ನಮಸ್ಕಾರಗಳು. ॥೨೧॥

**ಶುದ್ಧಾಯ ಶಾಂತಾಯ ನಮಃ ಸ್ವನಿಷ್ಠಮನಸ್ಯಪಾರ್ಥೇ ವಿಲಸದ್ದ್ವಯಾಯ ।**
**ನಮೋ ಜಗತ್ಸ್ಥಾನಲಯೋದಯೇಷು ಗೃಹೀತಮಾಯಾಗುಣವಿಗ್ರಹಾಯ ॥**

ಅಶುದ್ಧ ಬುದ್ಧಿಯುಳ್ಳ ಜನರಿಗೆ ಸು ಅನಿಷ್ಟೇ ಮನಸಿ=(ಸಂಶಯಾತ್ಮಕ) (ಚೆನ್ನಾಗಿ ಶ್ರೀಹರಿಯಲ್ಲಿ ಇಲ್ಲದಿರುವ ಜನರ ಮನಸ್ಸಿನಲ್ಲಿ) ಚೆನ್ನಾಗಿ ಶ್ರೀಹರಿಯಲ್ಲಿ ಬುದ್ಧಿಯನ್ನು ಇಡದವರಿಗೆ ಅಪಾರ್ಥೇ=ಅರ್ಥವಿಲ್ಲದಂತೆ ವಿಲಸದ್‌ದ್ವಯಾಯ=ಯಾವನಿಂದ ಎರಡನೇ ಸ್ವತಂತ್ರವಸ್ತು ತೋರುವುದೋ ಅಂತಹ (ಭ್ರಮವನ್ನುಂಟುಮಾಡುವ) ಜಗತ್‌ಸ್ಥಾನ-ಲಯೋದಯೇಷು=ಜಗತ್ತಿನ ಸ್ಥಿತಿ ಸಂಹಾರ ಉತ್ಪತ್ತಿಗಳಿಗಾಗಿ ಗೃಹೀತಮಾಯಾಗುಣ-ವಿಗ್ರಹಾಯ=ನಿತ್ಯದಲ್ಲಿಯೂ ಸ್ವೀಕೃತವಾಗಿದ್ದರೂ ಕಾರ್ಯೋನ್ಮುಖಗೊಳಿಸಿದ ಪ್ರಕೃತಿಗುಣಗಳು (ಸತ್ವಾದಿಗಳು) ಹಾಗೂ ವಿಷ್ಣು ರುದ್ರ ಬ್ರಹ್ಮ ರೂಪಗಳುಳ್ಳ ಶುದ್ಧಾಯ=ಶುದ್ಧನಾದ ಶಾಂತಾಯ=ಅಕ್ರೂರನಾದ ಸುಖಪೂರ್ಣನಾದ ಶ್ರೀಹರಿಗೆ ನಮಃ=ನಮಸ್ಕಾರವು.

**ಭಾಗವತ ತಾತ್ಪರ್ಯ -**

ಮೇಲಿನ ಶ್ಲೋಕದಲ್ಲಿ ತನ್ನಲ್ಲಿರುವ ಮನಸ್ಸಿನಲ್ಲಿ ಅಪಾಶ್ರಿತಂ ಯಥಾ ಸ್ಯಾತ್ ತಥಾ ವಿಲಸದ್ವಯಾಯ ಎಂಬುದಾಗಿ ಈಶ್ವರನಿಗೆ ಭ್ರಾಂತಿ ಇದೆ ಎಂದು ಹೇಳಿದಂತೆ ತೋರುವುದು. ಕಾರಣ ವಿವಕ್ಷಿತ ಪದಚ್ಛೇದ ತೋರಿಸಿ ವ್ಯಾಖ್ಯಾನಿಸುವರು -

**ಸು ಅನಿಷ್ಠೇ ಮನಸಿ ।**

ಚೆನ್ನಾಗಿ ಶ್ರೀಹರಿಯು ಇಲ್ಲದರುವ ಜನರ ಮನಸ್ಸಿನಲ್ಲಿ ಎಂದರ್ಥ.

**''ಅನವಸ್ಥಿತಬುದ್ಧೀನಾಂ ದ್ವಿತೀಯಂ ದೃಶ್ಯತೇ ಹರೇಃ ।**
**ಸಮ್ಯಕ್ ಸ್ವಸ್ಥಿತಬುದ್ಧೀನಾಮಿದಂ ಸರ್ವಂ ಹರೇರ್ವಶೇ'' ಇತಿ ಚ ॥**

**''ನಿತ್ಯಂ ಗೃಹೀತಾಃ ಸತ್ವಾದ್ಯಾ ವಿಗ್ರಹಾಶ್ಚ ತ್ರಯಃ ಸದಾ ।**
**ಜ್ಞಾನಾನಂದಾತ್ಮಕಾಸ್ತೇ ತು ವಿಗ್ರಹಾ ನಿರ್ಗುಣಾಸ್ತಥಾ ।**
**ದ್ವೌ ತತ್ರ ಬ್ರಹ್ಮರುದ್ರಸ್ಥಾವೇಕೋ ವೈಕುಂಠಧಾಮಗ''ಇತಿ ಪ್ರವೃತ್ತಿಸಂಹಿತಾಯಾಮ್ ।**

ಚೆನ್ನಾಗಿ ಶ್ರೀಹರಿಯಲ್ಲಿ ಬುದ್ಧಿಯನ್ನು ಇಡದವರಿಗೆ ಶ್ರೀಹರಿಗೆ ಸಮಾನವಾದುದು, ಶ್ರೀಹರಿಯಿಂದ ಭಿನ್ನವಾದುದು, ಸ್ವತಂತ್ರವಾದುದು ಇನ್ನೊಂದು ಇದೆ ಎಂದು ತೋರುವುದು. ಚೆನ್ನಾಗಿ ಶ್ರೀಹರಿಯಲ್ಲಿಯೇ ಬುದ್ಧಿಯನ್ನು ಇಟ್ಟವರಿಗೆ ಸಂಪೂರ್ಣ ಜಗತ್ತು ಶ್ರೀಹರಿಯ ಅಧೀನದಲ್ಲಿದೆ, ಸರ್ವತಂತ್ರಸ್ವತಂತ್ರನು ಶ್ರೀಹರಿಯೊಬ್ಬನೇ ಎಂದು ತೋರುತ್ತದೆ.

ಪರಮಾತ್ಮನು ಸೃಷ್ಟಿ-ಸ್ಥಿತಿಸಂಹಾರಗಳಿಗಾಗಿ ಸತ್ವಾದಿ ಮೂರುಗುಣಗಳನ್ನು ಸ್ವೀಕರಿಸಿದವನು. ಸತ್ವಾದಿಗುಣಗಳ ಸಂಪರ್ಕವಿಲ್ಲದ ಜ್ಞಾನಾನಂದಾತ್ಮಕ ಮೂರು ರೂಪಗಳು, ಅವುಗಳಲ್ಲಿ ೨ ರೂಪಗಳು ಬ್ರಹ್ಮ-ರುದ್ರರಲ್ಲಿ ಇರತಕ್ಕವುಗಳು. ಒಂದು ರೂಪವು ವೈಕುಂಠದಲ್ಲಿರುವುದು ಎಂದು ಪ್ರವೃತ್ತಸಂಹಿತೆಯಲ್ಲಿ ಹೇಳಿದೆ. ।।೨೩।।

**ನಮೋ ವಿಶುದ್ಧಸತ್ವಾಯ ಹರಯೇ ಹರಿಮೇಧಸೇ ।**
**ವಾಸುದೇವಾಯ ಕೃಷ್ಣಾಯ ಪ್ರಭವೇ ಸರ್ವಸಾತ್ವತಾಮ್ ।।೨೪।।**

ವಿಶುದ್ಧಸತ್ವಾಯ=ನಿರ್ದೋಷಜ್ಞಾನಬಲರೂಪನಾದ ಅಥವಾ ವಿಶುದ್ಧನೂ ಸರ್ವಗುಣಾತ್ಮಕನೂ ಆದ ("ಹರಿಃ ಸರ್ವಗುಣಾತ್ಮತ್ವಾತ್ ಸತ್ವ ಇತ್ಯಭಿಧೀಯತೇ" ಎಂದು ಪ್ರಮಾಣವಿದೆ.) ಹರಿಮೇಧಸೇ=ಭಕ್ತರ ಪಾಪಹರಣ ಮಾಡುವುದರಿಂದ ಹರಿಯು ಜ್ಞಾನರೂಪನಾದ್ದರಿಂದ ಮೇಧಾಃ ಎನಿಸುವ, ಸರ್ವಸಾತ್ವತಾಂ ಪ್ರಭವೇ=ಎಲ್ಲ ಯಾದವರಿಗೆ ಸ್ವಾಮಿಯಾದ ವಾಸುದೇವಾಯ=ವಸುದೇವಪುತ್ರನಾದ (ಸರ್ವತ್ರ ವಾಸ ಮಾಡುವ) ಕೃಷ್ಣಾಯ=ಶ್ರೀಕೃಷ್ಣನಿಗೆ ನಮಃ=ನಮಸ್ಕಾರವು. ।।೨೪।।

**ಭಾಗವತ ತಾತ್ಪರ್ಯ -**

ಹರಿಮೇಧಸೇ ಎಂಬುದಕ್ಕೆ ವಿವಕ್ಷಿತ ಅರ್ಥ ಹೇಳುವರು -

**"ಹರಣಾತ್ ಜ್ಞಾನರೂಪತ್ವಾತ್ ಹರಿಮೇಧಾ ವಿಭುಃ ಸ್ಮೃತಃ" ಇತಿ ಚ ।**

**ಹರಿಃ ಸರ್ವಗುಣಾತ್ಮತ್ವಾತ್ ಸತ್ವ ಇತ್ಯಭಿಧೀಯತೇ ಇತಿ ಚ ಷಾಡ್ಗುಣ್ಯೇ ।।**

ಪರಮಾತ್ಮನು ಭಕ್ತರ ಪಾಪಹರಣ ಮಾಡುವುದರಿಂದ ಹರಿಯೆಂದೂ, ಜ್ಞಾನರೂಪನಾದ್ದರಿಂದ ಮೇಧಾ ಎಂದೂ ಕರೆಯಲ್ಪಡುವನು. ಸರ್ವಗುಣಾತ್ಮಕನಾದ್ದರಿಂದ ಸತ್ವ ಎಂದೂ ಕರೆಯಲ್ಪಡುವನು ಎಂದು ಷಾಡ್ಗುಣ್ಯದಲ್ಲಿದೆ. ।।೨೪।।

**ನಮಃ ಕಮಲನಾಭಾಯ ನಮಃ ಕಮಲಮಾಲಿನೇ ।**
**ನಮಃ ಕಮಲಪಾದಾಯ ನಮಸ್ತೇ ಕಮಲೇಕ್ಷಣ ।।೨೫।।**

ಹೇ ಕಮಲೇಕ್ಷಣ=ಕಮಲಗಳಂತೆ ಕಣ್ಣುಳ್ಳವನೇ ! ಕಮಲನಾಭಾಯ=ಹೊಕ್ಕಳದಲ್ಲಿ ಕಮಲವುಳ್ಳ ಕಮಲಮಾಲಿನೇ=ಕಮಲದ ಮಾಲೆ ಧರಿಸಿದ ಕಮಲಪಾದಾಯ= ಕಮಲದಂತಿರುವ ಪಾದವುಳ್ಳ ತೇ=ನಿನಗೆ ನಮಃ ನಮಃ ನಮಃ=ನಮಸ್ಕಾರವು. ।।೨೫।।

**ನಮಃ ಕಮಲಕಿಂಜಲ್ಕಪಿಶಂಗಾಮಲವಾಸಸೇ ।**
**ಸರ್ವಭೂತನಿವಾಸಾಯ ನಮೋಽಯುಂಕ್ಷ್ಮಹಿ ಸಾಕ್ಷಿಣೇ ।।೨೬।।**

ಕಮಲಕಿಂಜಲ್ಕಪಿಶಂಗಾಮಲವಾಸಸೇ=ಕಮಲದ ಕೇಸರದಂತೆ ಹಳದಿಬಣ್ಣದ ನಿರ್ಮಲವಸ್ತ್ರ ಧರಿಸಿದ ಸರ್ವಭೂತನಿವಾಸಾಯ=ಎಲ್ಲ ಪ್ರಾಣಿಗಳಿಗೆ ಆಶ್ರಯನಾದ (ಸರ್ವಪಾಣಿಗಳಲ್ಲಿರುವ) ಸಾಕ್ಷಿಣೇ=ಸರ್ವವನ್ನು ನೋಡುವ ನಿನಗೆ ನಮಃ ಅಯುಂಕ್ಷ್ಮಹೇ=ನಮಸ್ಕಾರದ ಸಂಬಂಧ ಮಾಡುವೆವು. ನಮಸ್ಕಾರವೆಂಬ ಯೋಗ ಮಾಡುವೆವು. ॥೨೬॥

ವರವನ್ನು ಕೇಳಿರಿ ಎಂದುದಕ್ಕೆ ಉತ್ತರಿಸುವರು -

**ರೂಪಂ ಭಗವತಾ ತ್ವೇತದಶೇಷಕ್ಲೇಶಸಂಕ್ಷಯಮ್ ।**
**ಆವಿಷ್ಕೃತಂ ನಃ ಕ್ಲಿಷ್ಟಾನಾಂ ಕಿಮನ್ಯದನುಕಂಪಯಾ ॥೨೭॥**

ಕ್ಲಿಷ್ಟಾನಾಂ ನಃ=ಕಷ್ಟಕ್ಕೊಳಗಾದ ನಮಗೆ ಅನುಕಂಪಯಾ=ದಯೆಯಿಂದ ಅಶೇಷಕ್ಲೇಶಸಂಕ್ಷಯಂ=ಎಲ್ಲ ಕಷ್ಟಗಳನ್ನು ಪರಿಹರಿಸುವ ಏತದ್ ರೂಪಂ=ಈ ರೂಪವು ಭಗವತಾ=(ಪೂಜ್ಯರಾದ ತಮ್ಮಿಂದ) ಶ್ರೀಹರಿಯಿಂದ ಆವಿಷ್ಕೃತಂ=ಪ್ರಕಟಗೊಳಿಸಲ್ಪಟ್ಟಿದೆ. ಅತಃ ಅನ್ಯತ್ ಕಿಂ=ಅದಕ್ಕಿಂತ ಬೇರೇನು ಕೇಳುವುದಿದೆ ? ಈ ವಿಧವಾದ ದಯೆಯೇ ನಮ್ಮಿಂದ ಪ್ರಾರ್ಥ್ಯವಾದುದು. ॥೨೭॥

**ಏತಾವತ್ತ್ವಂ ಹಿ ವಿಭುಭಿರ್ಭಾವ್ಯಂ ದೀನೇಷು ವತ್ಸಲೈಃ ।**
**ಯದನುಸ್ಮರ್ಯತೇ ಕಾಲೇ ಸ್ವಬುದ್ಧ್ಯಾಽಭದ್ರರಂಧನ ॥೨೮॥**

ಹೇ ಅಭದ್ರರಂಧನ=ಎಲೈ ಪಾಪದಾಹಕನೇ ! ದೀನೇಷು ವತ್ಸಲೈಃ=ದುಃಖಿತರಲ್ಲಿ ದಯೆಯುಳ್ಳ ವಿಭುಭಿಃ=ಪ್ರಭುಗಳಿಂದ ಕಾಲೇ=ಭಕ್ತರ ಕಷ್ಟಕಾಲದಲ್ಲಿ ಸ್ವಬುದ್ಧ್ಯಾ=ಪ್ರಾರ್ಥನೆ ಮಾಡದಿದ್ದರೂ ಇವನನ್ನು ರಕ್ಷಿಸಬೇಕೆಂಬ ಬುದ್ಧಿಯಿಂದ ಅನುಸ್ಮರ್ಯತೇ ಇತಿ ಯತ್=ಭಕ್ತನು ಸ್ಮರಿಸಿಲ್ಪಡವನೆಂಬುದೇನಿದೆಯೋ ಏತಾವತ್ತ್ವಂ=ಈ ರೀತಿ ಇರುವುದು ಭಾವ್ಯಂ=ಅವರಿಗೆ ಪ್ರಸಿದ್ಧವು. (ಇರಬೇಕಾದುದೇ.)॥೨೮॥

**ಯೇನೋಪಶಾಂತಿರ್ಭೂತಾನಾಂ ಕ್ಷುಲ್ಲಕಾನಾಮಪೀಹಿತಮ್ ।**
**ಅಂತರ್ಹಿತೋಽಂತರ್ಹೃದಯೇ ಕಸ್ಮಾನ್ನೋ ವೇದ ನಾಶಿಷಃ ॥೨೯॥**

ಯೇನ=ಯಾವ ಕಾರಣದಿಂದ ಕ್ಷುಲ್ಲಕಾನಾಂ ಅಪಿ ಭೂತಾನಾಂ=ಸಣ್ಣ ಪ್ರಾಣಿಗಳಿಗೂ ಉಪಶಾಂತಿಃ ಭವತಿ=ಸುಖವು ಆಗುವುದು ತತ್=ಆದ್ದರಿಂದ ಅಂತರ್ಹೃದಯೇ= ಹೃದಯದಲ್ಲಿಯೇ ಅಂತರ್ಹಿತಃ=ಅಪ್ರತ್ಯಕ್ಷನಾಗಿದ್ದು ಈಹಿತಂ=ಅವರ ಇಷ್ಟವನ್ನು ವೇದ=ತಿಳಿದಿರುವ ಅತಃ=ಆದ್ದರಿಂದ ನಃ=ನಮ್ಮ ಆಶಿಷಃ=ಅಪೇಕ್ಷೆಗಳನ್ನು ಕಸ್ಮಾತ್ ನ ವೇದ=ಏಕೆ ತಿಳಿದಿಲ್ಲ ? ತಿಳಿದಿರುವಿ ಎಂದು ಭಾವ. ॥೨೯॥

**ಅಸಾವೇವ ವರೋಽಸ್ಮಾಕಮೀಪ್ಸಿತೋ ಜಗತಾಂ ಪತೇ ।**
**ಪ್ರಸನ್ನೋ ಭಗವಾನೇಷಾಮಪವರ್ಗಗುರುರ್ಗತಿಃ ॥೩೦॥**

ಹೇ ಜಗತಾಂ ಪತೇ=ಎಲೈ ಜಗದೊಡೆಯನೇ ! ಏಷಾಂ ಅಸ್ಮಾಕಂ=ಈ ನಮಗೆ ಭಗವಾನ್ ಪ್ರಸನ್ನಃ=ಶ್ರೀಹರಿಯು ಪ್ರಸನ್ನನಾಗಿರುವನು, ಅಪವರ್ಗಗುರುಃ= ಮೋಕ್ಷಮಾರ್ಗೋಪದೇಶಕನಾಗಿರುವನು, ಗತಿಃ=ಗಮ್ಯನೂ ಆಗಿರುವನು ಹರಿಯು ಎಂದನ್ವಯ. ಅಸೌ ಏವ=ಈ ಭಗವತ್ಪ್ರಸಾದವೇ (ಪ್ರಸನ್ನನಾದ ಭಗವಂತನೇ) ಅಸ್ಮಾಕಂ ಈಪ್ಸಿತೋ ವರಃ=ನಮಗೆ ಇಷ್ಟವಾದ ವರವು (ನು), ಬೇರೇನೂ ಅಲ್ಲ ॥೩೦॥

**ವರಂ ವೃಣೀಮಹೇಽಥಾಪಿ ನಾಥ ತ್ವತ್ ಪರತಃ ಪರಾತ್ ।**
**ನಹ್ಯಂತಸ್ತ್ವದ್ವಿಭೂತೀನಾಂ ಯೋಽನಂತ ಇತಿ ಗೀಯತೇ ॥೩೧॥**

ಅಥಾಪಿ=ಯದ್ಯಪಿ ನಿನ್ನ ಪ್ರಸಾದವೇ ಪ್ರಾರ್ಥನೀಯವಾದುದು. ಆದರೂ ಹೇ ನಾಥ=ಎಲೋ ಸ್ವಾಮಿಯೇ ! ಪರಾತ್ ಪರತಃ=ಉತ್ತಮರಾದ ರಮಾದಿಗಳಿಗಿಂತಲೂ ಉತ್ತಮನಾದ ತ್ವತ್=ನಿನ್ನಿಂದ ವರಂ ವೃಣೀಮಹೇ=ಸಜ್ಜನಸಂಗವೆಂಬ ವರವನ್ನು ಕೇಳುವೆವು. ಹಿ=ಯಾವ ಕಾರಣ ತ್ವದ್ವಿಭೂತೀನಾಂ=ನಿನ್ನ ವಿಶೇಷರೂಪಗಳಿಗೆ ಅಂತಃ ನ=ಕೊನೆಯಿಲ್ಲವೋ ಆದ್ದರಿಂದಲೇ ಯಃ=ಯಾವ ನೀನು ಅನಂತಃ ಇತಿ ಗೀಯತೇ=ಅನಂತನೆಂದು ಕರೆಸಿಕೊಳ್ಳುವಿ. ಇದರಿಂದ ಪರತಃ ಪರತ್ವ ಉಪಪಾದಿಸದಂತಾಯಿತು. ॥೩೧॥

ಮುಂದೆ ಹೇಳುವವರನ್ನು ಬಿಟ್ಟು ಬೇರೆಯವರನ್ನು ಕೇಳುವುದಿಲ್ಲ ಎಂದು ಸದೃಷ್ಟಾಂತವಾಗಿ ಹೇಳುವರು -

**ಪಾರಿಜಾತೇಽಂಜಸಾ ಲಭ್ಯೇ ಸಾರಂಗ್ಯೋಽನ್ಯನ್ನ ಸೇವತೇ ।**
**ತ್ವದಂಘ್ರಿಮೂಲಮಾಸಾದ್ಯ ಸಾಕ್ಷಾತ್ ಕಿಂ ಕಿಂ ವೃಣೀಮಹೇ ॥೩೨॥**

ಪಾರಿಜಾತೇ=ಕಲ್ಪವೃಕ್ಷದ ಹೂವು ಅಂಜಸಾ ಲಭ್ಯೇ=ನಿಜವಾಗಿ ದೊರೆಯುವಾಗ ಸಾರಂಗಃ=ಭ್ರಮರವು ಅನ್ಯತ್=ಬೇರೆ ಹೂಗಳನ್ನು ನ ಸೇವತೇ=ಸೇವಿಸಲಾರದು. ಎಲ್ಲ ಪುಷ್ಪರಸಗಳೂ ಕಲ್ಪವೃಕ್ಷಪುಷ್ಪದಲ್ಲಿಯೇ ದೊರೆಯುವುದು ತಾನೇ ? (ಹಾಗೆಯೇ. ಲುಪ್ತೋಪಮಾ ಇಲ್ಲ) ಸಾಕ್ಷಾತ್ ತ್ವದಂಘ್ರಿಮೂಲಂ ಆಸಾದ್ಯ=(ಖುದ್ದಾಗಿ) ನೇರವಾಗಿ ನಿನ್ನ ಪಾದದಡಿಯನ್ನು ಹೊಂದಿದ ಮೇಲೆ ಕಿಂ=ಯಾವ ಪುರುಷಾರ್ಥವನ್ನು ಕಿಂ=ಯಾವುದಕ್ಕಾಗಿ ವೃಣಿಮಹೇ=ಕೇಳುವೆವು ? ನಿನ್ನ ಪಾದವನ್ನು ಹೊಂದುವುದರಿಂದಲೇ ಎಲ್ಲವೂ ದೊರೆಯುವುದು ಎಂದು ಭಾವ. ॥೩೨॥

**ಯಾವತ್ ತೇ ಮಾಯಯಾ ಸ್ಪೃಷ್ಟಾ ಭ್ರಮಾಮ ಇಹ ಕರ್ಮಭಿಃ ।**
**ತಾವದ್ ಭವತ್ಪ್ರಸಂಗಾನಾಂ ಸಂಗಃ ಸ್ಯಾನ್ನೋ ಭವೇ ಭವೇ ॥೩೩॥**

ಯಾವತ್=ಎಲ್ಲಿಯವರೆಗೆ ತೇ=ನಿನ್ನ ಮಾಯಯಾ=ಬಂಧಕಶಕ್ತಿಯಿಂದ ಸ್ಪೃಷ್ಟಾಃ=ಸಂಬದ್ಧರಾಗಿ ಕರ್ಮಭಿಃ=ಕರ್ಮಾನುಸಾರವಾಗಿ ಇಹ=ಸಂಸಾರದಲ್ಲಿ ಭ್ರಮಾಮಃ=ತಿರುಗುವೆವೋ ತಾವತ್=ಅಲ್ಲಿವರೆಗೆ ಭವತ್ಪ್ರಸಂಗಾನಾಂ=ನಿನ್ನ ಉತ್ತಮ ಸಂಗವುಳ್ಳವರ ಸಂಗಃ=ಸಹವಾಸವು ಭವೇ ಭವೇ=ಜನ್ಮ ಜನ್ಮಕ್ಕೂ ನಃ=ನಮಗೆ ಸ್ಯಾತ್=ಆಗಲಿ.

**ತುಲಯಾಮ ಲವೇನಾಪಿ ನ ಸ್ವರ್ಗಂ ನಾಪುನರ್ಭವಮ್ ।**
**ಭಗವತ್ಸಂಗಿಸಂಗಸ್ಯ ಮರ್ತ್ಯಾನಾಂ ಕಿಮುತಾಶಿಷಃ ॥೩೪॥**

ಭಗವತ್ಸಂಗಿಸಂಗಸ್ಯ ಲವೇನಾಪಿ=ಭಗವದ್‌ಭಕ್ತರ ಸಂಗದ ಲೇಶದಿಂದಲೂ ಸ್ವರ್ಗಂ= ಸ್ವರ್ಗವನ್ನಾಗಲೀ ಅಪುನರ್ಭವಂ=ಮೋಕ್ಷವನ್ನಾಗಲೀ ನ ತುಲಯಾಮ=ಸಮಾನವೆಂದು ತಿಳಿಯಲಾರೆವು. ಕಿಮುತ ಮರ್ತ್ಯಾನಾಂ ಆಶಿಷಃ=ಮನುಷ್ಯರ ಇತರ ಅಭೀಷ್ಟಗಳು ಸಮವಲ್ಲವೆಂದು ಬೇರೆ ಹೇಳಬೇಕಿಲ್ಲವೆಂದು ಭಾವ. ॥೩೪॥

**ಯತ್ರೇಡ್ಯಂತೇ ಕಥಾ ಮೃಷ್ಟಾಸ್ತೃಷ್ಣಾಯಾಃ ಪ್ರಶಮೋ ಯತಃ ।**
**ನಿರ್ವೈರಂ ಯತ್ರ ಭೂತೇಷು ನೋದ್ವೇಗೋ ಯತ್ರ ಕಶ್ಚನ ॥೩೫॥**

ಯತ್ರ=ಯಾವ ಸಜ್ಜನರ ಸಮೂಹದಲ್ಲಿ ಯತಃ=ಯಾವುದರಿಂದ ತೃಷ್ಣಾಯಾಃ= ವಿಷಯಾಭಿಲಾಷೆಯ ಪ್ರಶಮಃ=ವಿರಾಮವಾಗುವುದೋ ಅಂತಹ ಮೃಷ್ಟಾಃ=ಸುಂದರವಾದ ಕಥಾಃ=ಭಗವಂತನ ಕಥೆಗಳು ಈಡ್ಯಂತೇ=ಹೇಳಲ್ಪಡುವವು. ಯತ್ರ=ಯಾವ ಸತ್ಸಂಗದಲ್ಲಿ ಭೂತೇಷು=ಪ್ರಾಣಿಗಳಲ್ಲಿ ನಿರ್ವೈರಂ=ವೈರಭಾವವಿರುವುದಿಲ್ಲವೋ ಯತ್ರ=ಎಲ್ಲಿ ಕಶ್ಚನ ಉದ್ವೇಗಃ ನ=ಯಾವ ಭಯವೂ ಇರುವುದಿಲ್ಲವೋ,॥೩೫॥

**ಯತ್ರ ನಾರಾಯಣಃ ಸಾಕ್ಷಾದ್ ಭಗವಾನ್ ನ್ಯಾಸಿನಾಂ ಗತಿಃ ।**
**ಪ್ರಸ್ತೂಯತೇ ಸತ್ಕಥಾಸು ಮುಕ್ತಸಂಗೈಃ ಪುನಃ ಪುನಃ ॥೩೬॥**

ಯತ್ರ=ಎಲ್ಲಿ ನ್ಯಾಸಿನಾಂ=ಸನ್ಯಾಸಿಗಳಿಗೆ ಗತಿಃ=ಪ್ರಾಪ್ಯನಾದ ಭಗವಾನ್= ಷಡ್ಗುಣಶಾಲಿಯಾದ ಸಾಕ್ಷಾತ್ ನಾರಾಯಣಃ=ಮುಖ್ಯನಾದ ಶ್ರೀಮನ್ನಾರಾಯಣನು ಪುನಃ ಪುನಃ=ಮತ್ತೆ ಮತ್ತೆ ಮುಕ್ತಸಂಗೈಃ=ವಿಷಯಸಂಗವನ್ನು ತೊರೆದವರಿಂದ ಸತ್ಕಥಾಸು= ಉತ್ತಮಕಥಾನಕಗಳಲ್ಲಿ ಪ್ರಸ್ತೂಯತೇ=ಚೆನ್ನಾಗಿ ಸ್ತುತಿಸಲ್ಪಡುವನು. ॥೩೬॥

**ತೇಷಾಂ ವಿಚರತಾಂ ಪದ್ಭ್ಯಾಂ ತೀರ್ಥಾನಾಂ ಪಾವನೇಚ್ಛಯಾ ।**
**ಭೀತಸ್ಯ ಕಿಂ ನ ರೋಚೇತ ತಾವಕಾನಾಂ ಸಮಾಗಮಃ ॥३೭॥**

ತೀರ್ಥಾನಾಂ ಪಾವನೇಚ್ಛಯಾ=ತೀರ್ಥಗಳನ್ನು ಪವಿತ್ರಗೊಳಿಸುವ ಇಚ್ಛೆಯಿಂದ ಪದ್ಭ್ಯಾಂ=ಕಾಲುಗಳಿಂದ ತೀರ್ಥಾನಿ ವಿಚರತಾಂ=ತೀರ್ಥಗಳನ್ನು ಕುರಿತು ಸಂಚರಿಸುವ ತಾವಕಾನಾಂ=ನಿನ್ನ ಭಕ್ತರ ಸಮಾಗಮಃ=ಸಮಾಗಮವು ಭೀತಸ್ಯ=ಸಂಸಾರದಿಂದ ಭಯಗೊಂಡ ಜನರಿಗೆ ನ ರೋಚೇತ ಕಿಂ=ಹಿಡಿಸಲಾರದೇನು ? ರುಚಿಸಿಯೇ ರುಚಿಸುವುದು ಎಂದು ಭಾವ. ॥३೭॥

ಸತ್ಸಂಗದ ಫಲವನ್ನು ನಾವೇ ಅನುಭವಿಸಿದ್ದೇವೆ ಎಂದು ಹೇಳುವರು -

**ವಯಂ ತು ಸಾಕ್ಷಾದ್ಭಗವತ್ಪ್ರಿಯಸ್ಯ**
**ಪ್ರಿಯಸ್ಯ ಸಖ್ಯುಃ ಕ್ಷಣಸಂಗಮೇನ ।**
**ಸುದುಶ್ಚಿಕಿತ್ಸಸ್ಯ ಭವಸ್ಯ ಮೃತ್ಯೋ-**
**ರ್ಭಿಷಕ್ತಮಂ ತ್ವಾದ್ಯಗತಿಂ ಗತಾಃ ಸ್ಮಃ ॥३೮॥**

ವಯಂ ತು=ನಾವಾದರೂ ಸಾಕ್ಷಾತ್ ಭಗವತ್ಪ್ರಿಯಸ್ಯ=ಮುಖ್ಯವಾಗಿ ಭಗವಂತನೇ ಪ್ರಿಯವಾಗಿವುಳ್ಳ ಪ್ರಿಯಸ್ಯ ಸಖ್ಯುಃ ಭವಸ್ಯ=ಸಂಹಾರ ಕಾರ್ಯದಲ್ಲಿ ಸೇವೆ ಸಲ್ಲಿಸಿ ಪ್ರಿಯಸಖನೆನಿಸಿದ ರುದ್ರದೇವರ ಕ್ಷಣಸಂಗಮೇನ=ಅಲ್ಪಕಾಲದ ಸಮಾಗಮದಿಂದ ಸುದುಶ್ಚಿಕಿತ್ಸಸ್ಯ=ಬಹುಕಷ್ಟಕರವಾದ ಚಿಕಿತ್ಸೆಯನ್ನು ಅಪೇಕ್ಷಿಸುವ, ಭವಸ್ಯ ಮೃತ್ಯೋಃ= ಸಂಸಾರವೆಂಬ ಮಾರಕವ್ಯಾಧಿಗೆ ಭಿಷಕ್ತಮಮ್=ಶ್ರೇಷ್ಠವೈದ್ಯನಾದ ಆದ್ಯಗತಿಂ ತ್ವಾ ಗತಾಃ=ಹೊಂದಬೇಕಾದ ನಿನ್ನನ್ನು ಹೊಂದಿದ್ದೇವೆ. ಸ್ಮ=ಸ್ವಾನುಭವಸಿದ್ಧವು. ॥३೮॥

ಬೇರೊಂದು ವರವನ್ನು ಕೇಳುವರು ಎರಡು ಶ್ಲೋಕಗಳಿಂದ -

**ಯನ್ನಃ ಸ್ವಧೀತಂ ಗುರವಃ ಪ್ರಸಾದಿತಾ**
**ವಿಪ್ರಾಶ್ಚ ವೃದ್ಧಾಶ್ಚ ಸದಾನುವೃತ್ತ್ಯಾ ।**
**ಆರ್ಯಾ ಹ್ಯನಾಥಾಃ ಸುಹೃದೋ ಭ್ರಾತರಶ್ಚ**
**ಸರ್ವಾಣಿ ಭೂತಾನ್ಯನಸೂಯಯೈವ ॥३೯॥**

**ಯನ್ನಃ ಸುತಪ್ತಂ ತಪ ಏತದೀಶ**
**ನಿರಂಧಸಾಂ ಕಾಲಮದಭ್ರಮಪ್ಸು ।**
**ಸರ್ವಂ ತದೇತತ್ ಪುರುಷಸ್ಯ ಭೂಮ್ನೋ**
**ವೃಣೀಮಹೇ ತೇ ಪರಿತೋಷಣಾಯ ॥४೦॥**

ಯತ್ ನಃ ಸು ಅಧೀತಂ=ಏನು ನಮ್ಮಿಂದ ಚೆನ್ನಾಗಿ ವೇದಾಧ್ಯಯನ ಮಾಡಲ್ಪಟ್ಟಿದೆಯೋ ಗುರವಃ=ಗುರುಗಳು ವಿಪ್ರಾಃ=ಬ್ರಾಹ್ಮಣರು ಚ=ಮತ್ತು ವೃದ್ಧಾಃ=ಹಿರಿಯರು ಇವರುಗಳನ್ನು ಸದಾನುವೃತ್ಯಾ=ಯಾವಾಗಲೂ ಅನುಸರಿಸುವುದರಿಂದ ಆರ್ಯಾಃ=ಅಧಿಕಭಕ್ತಿಯುಳ್ಳವರು ವೃದ್ಧಾಃ=ಜ್ಞಾನಾಧಿಕರು ಅನಾಥಾಃ=ಗಂಡನನ್ನು ಕಳೆದುಕೊಂಡ ಹಿರಿಯರು ಸುಹೃದಃ=ಸ್ನೇಹಿತರು ಭ್ರಾತರಃ=ಅಣ್ಣತಮ್ಮಂದಿರು ಸರ್ವಾಣಿ ಭೂತಾನಿ=ಈ ಎಲ್ಲ ಜನರನ್ನು ಅನಸೂಯಯಾ ಏವ=ಅಸೂಯೆ ಇಲ್ಲದೇ ಪ್ರಸಾದಿತಾಃ=ಸಂತೋಷಪಡಿಸಿರುವೆವೋ,

ಹೇ ಈಶ=ಎಲೋ ಸ್ವಾಮಿಯೇ ! ನಿರಂಧಸಾಂ=ಅನ್ನವಿಲ್ಲದೇ ಅದಭ್ರಂ ಕಾಲಂ= ಬಹುಕಾಲ ಅಪ್ಸು=ನೀರಲ್ಲಿ ಯತ್ ಸುತಪ್ತಂ=ಏನು ಚೆನ್ನಾಗಿ ತಪಸ್ಸು ಮಾಡಲ್ಪಟ್ಟಿದೆಯೋ ಏತತ್ ಸರ್ವಂ=ಇದೆಲ್ಲವೂ ಭೂಮ್ನಃ=ಪೂರ್ಣನಾದ ಪುರುಷಸ್ಯ=ಪೂರ್ಣಷಡ್ಗುಣನಾದ ತೇ=ನಿನ್ನ ಪರಿತೋಷಣಾಯ=ಸಂತೋಷಜನಕವಾಗಲಿ ಎಂದು ವೃಣೀಮಹೇ=ಬೇಡುವೆವು.

ಅಜ್ಞಾನಿಗಳಾದರೂ ನಾವು ನಿನ್ನನ್ನು ಸ್ತುತಿಸುವುದು ಯುಕ್ತವೆಂದು ಹೇಳುವರು -

**ಮನುಃ ಸ್ವಯಂಭೂರ್ಭಗವಾನ್ ಭವಶ್ಚ**
**ಯೇಽನ್ಯೇ ತಪೋಜ್ಞಾನವಿಶುದ್ಧಸತ್ತ್ವಾಃ ।**
**ಅದೃಷ್ಟಪಾರಾ ಅಪಿ ಯನ್ಮಹಿಮ್ನಃ**
**ಸ್ತುವಂತ್ಯಥೋ ತ್ವಾಽಽತ್ಮಸಮಂ ಗೃಣೀಮಃ ॥೪೧॥**

ಮನುಃ=ಸ್ವಾಯಭುವಮನುವು ಸ್ವಯಂಭೂಃ=ಬ್ರಹ್ಮದೇವರು ಭಗವಾನ್ ಭವಃ= ಪೂಜ್ಯರಾದ ರುದ್ರದೇವರು ಅನ್ಯೇ=ಇತರರಾದ ಯೇ=ಯಾವ ತಪೋಜ್ಞಾನವಿಶುದ್ಧಸತ್ತ್ವಾಃ= ತಪಸ್ಸು ಜ್ಞಾನಗಳಿಂದ ನಿರ್ಮಲವಾದ ಅಂತಃಕರಣವುಳ್ಳವರು ಯನ್ಮಹಿಮ್ನಃ=ಯಾವ ನಿನ್ನ ಮಹಿಮೆಯ ಅದೃಷ್ಟಪಾರಾಃ ಅಪಿ=ಕೊನೆ ತಿಳಿಯದವರಾದರೂ ಸ್ತುವಂತಿ=ಸ್ತುತಿಸುವರು. ಅಥೊ=ಆದ್ದರಿಂದ ನಾವೂ ಸಹ ಆತ್ಮಸಮಂ=ನಮ್ಮ ಯೋಗ್ಯತಾನುಸಾರ ತ್ವಾ ಗೃಣೀಮಃ=ನಿನ್ನನ್ನು ಸ್ತುತಿಸುವೆವು. ॥೪೧॥

ಭಕ್ತಿಯ ಉದ್ರೇಕದಿಂದ ಮತ್ತೆ ನಮಸ್ಕರಿಸುವರು -

**ನಮಃ ಸಮಾಯ ಶುದ್ಧಾಯ ಪುರುಷಾಯ ಪರಾಯ ಚ ।**
**ವಾಸುದೇವಾಯ ಸತ್ತ್ವಾಯ ತುಭ್ಯಂ ಭಗವತೇ ನಮಃ ॥೪೨॥**

ಸಮಾಯ=ಸರ್ವತ್ರ ಏಕಪ್ರಕಾರನಾದ, ವೈಷಮ್ಯ-ನೈರ್ಘೃಣ್ಯರಹಿತನಾದ, ಲಕ್ಷ್ಮೀಸಹಿತನಾದ, ವಾಸುದೇವಾಯ=ಬಲಜ್ಞಾನಾತ್ಮಕ ಮುಖ್ಯಪ್ರಾಣಪ್ರವರ್ತಕನಾದ,

ಎಲ್ಲವನ್ನೂ ಆಚ್ಛಾದಿಸಿ ಅತಿಯಾಗಿ ಪ್ರಕಾಶಿಸುವ, ಸತ್ವಾಯ=ಪರಾಕ್ರಮರೂಪನಾದ ಪುರುಷಾಯ=ಸರ್ವಪಾಪನಾಶಕನಾದ ("ಯದಯಂ ಪಾಪ್ಮನ ಉತ್ಸಸ್ತಸ್ಮಾತ್ ಪುರುಷೋ ನಾಮ" ಎಂದು ಶ್ರುತಿ ಇದೆ.) ಅಥವಾ ಸರ್ವರಲ್ಲಿರುವ ಶುದ್ಧಾಯ=ನಿರ್ದೋಷನಾದ ಪರಾಯ=ಸರ್ವೋತ್ತಮನಾದ ವಾಸುದೇವಾಯ=ವಸುದೇವಪುತ್ರನಾದ ಸತ್ವಾಯ= ಸರ್ವಗುಣಾತ್ಮಕನಾದ ಭಗವತೇ=ಪೂಜ್ಯನಾದ ತುಭ್ಯಂ=ನಿನಗೆ ನಮಃ ನಮಃ=ನಮಸ್ಕಾರವು.

**ಭಾಗವತ ತಾತ್ಪರ್ಯ -**

ಇಲ್ಲಿ ಸತ್ವಾಯ ಎಂಬುದಕ್ಕೆ ವಿವಕ್ಷಿತ ಅರ್ಥವನ್ನು ಪ್ರಮಾಣದಿಂದಲೇ ತಿಳಿಸುವರು -

**"ಹರಿಃ ಸರ್ವಗುಣಾತ್ಮತ್ವಾತ್ ಸತ್ವ ಇತ್ಯಭಿಧೀಯತೇ" ಇತಿ ಷಾಡ್ಗುಣ್ಯೇ ॥**

ಸರ್ವಗುಣಾತ್ಮಕನಾದುದರಿಂದ ಶ್ರೀಹರಿಯು ಸತ್ವ ಎನ್ನಿಸಿಕೊಳ್ಳುವನು ಎಂದು ಷಾಡ್ಗುಣ್ಯದಲ್ಲಿ ಇದೆ. ॥೪೨॥

**ಮೈತ್ರೇಯ ಉವಾಚ -**

**ಇತಿ ಪ್ರಚೇತೋಭಿರಭಿಷ್ಟುತೋ ಹರಿಃ**
**ಪ್ರೀತಸ್ತಥೇತ್ಯಾಹ ಶರಣ್ಯವತ್ಸಲಃ ।**
**ಅನಿಚ್ಛತಾಂ ಯಾನಮತೃಪ್ತಚಕ್ಷುಷಾಂ**
**ಯಯೌ ಸ್ವಧಾಮಾನಪವರ್ಗವಿಕ್ರಮಃ ॥೪೩॥**

ಇತಿ=ಈ ರೀತಿಯಾಗಿ ಪ್ರಚೇತೋಭಿಃ=ಪ್ರಚೇತಸರಿಂದ ಅಭಿಷ್ಟುತಃ=ಸ್ತುತಿಸಲ್ಪಟ್ಟ ಶರಣ್ಯವತ್ಸಲಃ ಹರಿಃ=ಶರಣಾಗತರಲ್ಲಿ ವಾತ್ಸಲ್ಯವುಳ್ಳ ಶ್ರೀಹರಿಯು ಪ್ರೀತಃ=ಸಂತುಷ್ಟನಾಗಿ ತಥಾ ಇತಿ ಆಹ=ಹಾಗೆಯೇ ಆಗಲಿ ಎಂದು ಹೇಳಿದನು. ಅತೃಪ್ತಚಕ್ಷುಷಾಂ=ಶ್ರೀಹರಿಯನ್ನು ನೋಡಿ ತೃಪ್ತಿ ಹೊಂದದ ಯಾನಮನಿಚ್ಛತಾಂ ಸತಾಂ=ಪರಮಾತ್ಮನ ಗಮನ ಇಚ್ಛಿಸದಿರುವಾಗಲೇ ಅನಪವರ್ಗವಿಕ್ರಮಃ=ನಾಶ ಹೊಂದದ ಪರಾಕ್ರಮವುಳ್ಳ ಶ್ರೀಹರಿಯು ಸ್ವಧಾಮ ಯಯೌ=ತನ್ನ ಸ್ಥಾನಕ್ಕೆ ಹೋದನು. ॥೪೩॥

**ಅಥ ನಿರ್ಯಾಯ ಸಲಿಲಾತ್ ಪ್ರಚೇತಸ ಉದನ್ವತಃ ।**
**ವೀಕ್ಷ್ಯಾಕುಪ್ಯನ್ ದ್ರುಮೈಶ್ಛನ್ನಾಂ ಗಾಮಾರೋಢುಮಿವೋತ್ಥಿತೈಃ ॥೪೪॥**

ಅಥ=ಭಗವಂತನು ಅದೃಶ್ಯನಾದ ಮೇಲೆ ಪ್ರಚೇತಸಃ=ಪ್ರಚೇತಸರು ಉದನ್ವತಃ ಸಲಿಲಾತ್=ಸಮುದ್ರದ ನೀರಿನಿಂದ ನಿರ್ಯಾಯ=ಹೊರಬಂದರು. ಗಾಂ=ಸ್ವರ್ಗವನ್ನು ಆರೋಢುಂ ಇವ=ಏರುವುದಕ್ಕೆಂಬಂತೆ ಉತ್ಥಿತೈಃ=ಎತ್ತರವಾಗಿ ಬೆಳೆದ ದ್ರುಮೈಃ=ಗಿಡಗಳಿಂದ

ಭನ್ನಾಂ=ಮುಚ್ಚಲ್ಪಟ್ಟ ಮಹೀಂ=ಭೂಮಿಯನ್ನು ವೀಕ್ಷ್ಯ=ನೋಡಿ ಅಕುಪ್ಯನ್=ಗಿಡಗಳ ಮೇಲೆ ಕೋಪಗೊಂಡರು.

ಆಗ ಪ್ರಾಚೀನಬರ್ಹಿಯು ಸನ್ಯಾಸ ಸ್ವೀಕರಿಸಿ ಊರುಬಿಟ್ಟು ಹೋದದ್ದರಿಂದ ಅರಾಜಕವಾಗಿ ಭೂಮಿಯನ್ನು ಊಳದಿದ್ದ ಕಾರಣ ಗಿಡಗಳು ಬೆಳೆದುಕೊಂಡಿದ್ದವು. ರಾಜ್ಯಭಾರ ಮಾಡೆಂದು ಹರಿಯ ಆಜ್ಞೆ ಪಾಲಿಸಲು ಸ್ಥಳವಿಲ್ಲದಂತೆ ಬೆಳೆದ ಗಿಡದ ಮೇಲೆ ಕೋಪ, ತಮಗೆ ತೊಂದರೆ ಕೊಟ್ಟವೆಂದು ತಿಳಿಯಬೇಕು. ।।೪೪।।

**ತತೋಽಗ್ನಿಮಾರುತೌ ರಾಜನ್ನಮುಂಚನ್ ಮುಖತೋ ರುಷಾ ।**
**ಮಹೀಂ ನಿರ್ವೀರುಧಂ ಕರ್ತುಂ ಸಾಂವರ್ತಕ ಇವಾಪ್ಯಯೇ ।।೪೫।।**

ರಾಜನ್=ಪರೀಕ್ಷಿತನೇ ! ತತಃ=ಅನಂತರ ಅಪ್ಯಯೇ=ಪ್ರಲಯಕಾಲದಲ್ಲಿ ಸಾಂವರ್ತಕಃ ಇವ=ಪ್ರಲಯಕಾಲದ ಅಗ್ನಿಯಂತೆ ಮಹೀಂ=ಭೂಮಿಯನ್ನು ನಿರ್ವೀರುಧಂ ಕರ್ತುಂ=ಗಿಡಮರಗಳಿಲ್ಲದಂತೆ ಮಾಡಲು ರುಷಾ=ಸಿಟ್ಟಿನಿಂದ ಮುಖತಃ ಬಾಯಿಯಿಂದ ಅಗ್ನಿಮಾರುತೌ=ಬೆಂಕಿ-ಗಾಳಿಗಳನ್ನು ಅಮುಂಚನ್=ಬಿಟ್ಟರು. ।।೪೫।।

**ಭಸ್ಮಸಾತ್ ಕ್ರಿಯಮಾಣಾಂಸ್ತಾನ್ ದ್ರುಮಾನ್ ವೀಕ್ಷ್ಯ ಪಿತಾಮಹಃ ।**
**ಆಗತಃ ಶಮಯಾಮಾಸ ಪುತ್ರಾನ್ ಬರ್ಹಿಷ್ಮತೋ ನಯೈಃ ।।೪೬।।**

ತಾನ್ ದ್ರುಮಾನ್=ಆ ಗಿಡಗಳನ್ನು ಭಸ್ಮಸಾತ್ ಕ್ರಿಯಮಾಣಾನ್=ಬೂದಿಯಾಗಿ ಮಾಡುವುದನ್ನು ವೀಕ್ಷ್ಯ=ನೋಡಿ ಪಿತಾಮಹಃ=ಬ್ರಹ್ಮದೇವರು ಆಗತಃ=ಅಲ್ಲಿಗೆ ಬಂದರು. ನಯೈಃ=ಯುಕ್ತಿಗಳಿಂದ ಬರ್ಹಿಷ್ಮತಃ ಪುತ್ರಾನ್=ಪ್ರಚೇತಸರನ್ನು ಶಮಯಾಮಾಸ= ಶಾಂತಗೊಳಿಸಿದರು. ।।೪೬।।

**ತತ್ರಾವಶಿಷ್ಟಾ ಯೇ ವೃಕ್ಷಾ ಭೀತಾ ದುಹಿತರಂ ತದಾ ।**
**ಆಜಹ್ರುಸ್ತೇ ಪ್ರಚೇತೋಭ್ಯ ಉಪದಿಷ್ಟಾಃ ಸ್ವಯಂಭುವಾ ।।೪೭।।**

ತತ್ರ=ಅಲ್ಲಿ ತದಾ=ಆಗ ಯೇ ವೃಕ್ಷಾಃ ಅವಶಿಷ್ಟಾಃ=ಯಾವ ಗಿಡಗಳು ಉಳಿದಿದ್ದವೋ ತೇ=ಅವುಗಳು ಭೀತಾಃ=ಭಯಗೊಂಡು ಸ್ವಯಂಭುವಾ=ಬ್ರಹ್ಮದೇವರಿಂದ ಉಪದಿಷ್ಟಾಃ= ಉಪದೇಶಿಸಲ್ಪಟ್ಟು ಪ್ರಚೇತೋಭ್ಯಃ=ಪ್ರಚೇತಸರಿಗೆ ದುಹಿತರಂ ಆಜಹ್ರುಃ=ಮಗಳನ್ನು ಸಮರ್ಪಿಸಿದರು. ।।೪೭।।

**ತೇ ಚ ಬ್ರಹ್ಮಣ ಆದೇಶಾನ್ಮಾರಿಷಾಮುಪಯೇಮಿರೇ ।**
**ಯಸ್ಯಾಂ ಮಹದವಜ್ಞಾನಾದಜನ್ಯಜನಯೋನಿಜಃ ।।೪೮।।**

ತೇ ಚ=ಆ ಪ್ರಚೇತಸರಾದರೂ ಯಸ್ಯಾಂ=ಯಾವಳಲ್ಲಿ ಮಹದವಜ್ಞಾನಾತ್=ರುದ್ರದೇವರನ್ನು ನಿಂದಿಸಿದ್ದರಿಂದ ಅಜನಯೋನಿಜಃ=ಬ್ರಹ್ಮಪುತ್ರನಾದ ದಕ್ಷನು ಅಜನಿ=ಜನಿಸಿದನೋ ತಾಂ ಮಾರಿಷಾಂ=ಆ ಮಾರಿಷಳೆಂಬ ವೃಕ್ಷಕನ್ಯೆಯನ್ನು ಬ್ರಹ್ಮಣಃ ಆದೇಶಾತ್=ಬ್ರಹ್ಮದೇವರ ಆಜ್ಞೆಯಂತೆ ಉಪಯೇಮಿರೇ=ಮದುವೆಯಾದರು. ।।೪೮।।

**ಚಾಕ್ಷುಷೇ ತ್ವಂತರೇ ಪ್ರಾಪ್ತೇ ಪ್ರಾಕ್‌ಸರ್ಗೇ ಕಾಲವಿಪ್ಲುತೇ ।**
**ಯಃ ಸಸರ್ಜ ಪ್ರಜಾ ಇಷ್ಟಾಃ ಸ ದಕ್ಷೋ ದೈವಚೋದಿತಃ ।।೪೯।।**

ಚಾಕ್ಷುಷೇ ಅಂತರೇ ಪ್ರಾಪ್ತೇ=ಚಾಕ್ಷುಷ ಮನ್ವಂತರ ಪ್ರಾರಂಭವಾದಾಗ ಪ್ರಾಕ್ ಸರ್ಗೇ=ಹಿಂದಿನ ಸೃಷ್ಟಿಯು ಕಾಲವಿಪ್ಲುತೇ=ಕಾಲಬಲದಿಂದ ನಶಿಸುತ್ತಿರಲು ದೈವಚೋದಿತಃ ಸಃ ದಕ್ಷಃ=ಶ್ರೀಹರಿಯಿಂದ ಬ್ರಹ್ಮದೇವರಿಂದ ಪ್ರೇರಿತನಾದ ಮಾರೀಷಪುತ್ರನಾದ ದಕ್ಷನು ಇಷ್ಟಾಃ ಪ್ರಜಾಃ ಸಸರ್ಜ=ಬೇಕಾದ ಪ್ರಜೆಗಳನ್ನು ಸೃಷ್ಟಿಸಿದನು. ।।೪೯।।

**ಯೋ ನ್ಯಕ್‌ಚಕಾರ ಸರ್ವೇಷಾಂ ತೇಜಸ್ತೇಜಸ್ವಿನಾಂ ರುಚಾ ।**
**ಸ್ವಯೋಗ್ಯೋಪಾತ್ತದಾಕ್ಷ್ಯಾಚ್ಚ ಕರ್ಮಣಾ ದಕ್ಷಮಬ್ರುವನ್ ।।೫೦।।**

ಯಃ=ಯಾವನು ಸರ್ವೇಷಾಂ=ಎಲ್ಲ ತೇಜಸ್ವಿನಾಂ ತೇಜಃ=ಕಾಂತಿವಂತರ ಕಾಂತಿಯನ್ನು ರುಚಾ=ತನ್ನ ಕಾಂತಿಯಿಂದ ನ್ಯಕ್‌ಚಕಾರ=ಧಿಕ್ಕರಿಸಿದನೋ ಅಂತಹವನನ್ನು ಸ್ವಯೋಗ್ಯೋಪಾತ್ತದಾಕ್ಷ್ಯಾತ್=ತನ್ನ ಯೋಗ್ಯತಾನುಸಾರವಾದ ಕೌಶಲದಿಂದ ಚ=ಮತ್ತು ಕರ್ಮಣಾ=ಕಾರ್ಯದಿಂದ ದಕ್ಷಂ ಅಬ್ರುವನ್=ಬ್ರಹ್ಮಾದಿಗಳು ದಕ್ಷನೆಂದು ಕರೆದರು. ।।೫೦।।

**ತಂ ಪ್ರಜಾಸರ್ಗರಕ್ಷಾಯಾಮನಾದಿರ್ಭಗವಾನಜಃ ।**
**ಯುಯೋಜ ಯುಯುಜಸ್ತಂ ವೈ ಸರ್ವೇಽನ್ಯೇ ಚ ಪ್ರಜೇಶ್ವರಾಃ ।।೫೧।।**

।। ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ ತ್ರಿಂಶೋಽಧ್ಯಾಯಃ ।।

ಅನಾದಿಃ ಭಗವಾನ್ ಅಜಃ=ಸರ್ವಕಾರಣನಾದ ಬ್ರಹ್ಮದೇವನು ತಂ=ದಕ್ಷನನ್ನು ಪ್ರಜಾಸರ್ಗರಕ್ಷಾಯಾಂ=ಪ್ರಜೆಗಳ ಸೃಷ್ಟಿರಕ್ಷಣೆಗಳಲ್ಲಿ ಯುಯೋಜ=ಯೋಜಿಸಿದನು. ಅನ್ಯೇ ಸರ್ವೇ ಪ್ರಜೇಶ್ವರಾಃ ಚ ಯುಯುಜುಃ=ಮರೀಚಿ ಮೊದಲಾದ ಎಲ್ಲ ಪ್ರಜೇಶ್ವರರೂ ಯಾವನನ್ನು ನಿಯೋಜಿಸಿದರೋ ಅಂಥ ದಕ್ಷನು ಅಜನಿ=ಹುಟ್ಟಿದನು. ।।೫೧।।

।। ಇಲ್ಲಿಗೆ ಮೂವತ್ತನೇ ಅಧ್ಯಾಯವು ಮುಗಿಯಿತು ।।

## ಅಥ ಏಕತ್ರಿಂಶೋಽಧ್ಯಾಯಃ

**ಮೈತ್ರೇಯ ಉವಾಚ -**

**ತತ ಉತ್ಪನ್ನವಿಜ್ಞಾನಾ ಆಶ್ವಧೋಕ್ಷಜಭಾಷಿತಮ್ ।**
**ಸ್ಮರಂತ ಆತ್ಮಜೇ ಭಾರ್ಯಾಂ ವಿಸೃಜ್ಯ ಪ್ರಾವ್ರಜನ್ ಗೃಹಾತ್ ॥೧॥**

ತತಃ=ಮನುಷ್ಯಮಾನದಿಂದ ಹನ್ನೆರಡು ಲಕ್ಷವರ್ಷ ರಾಜ್ಯಭಾರ ಮಾಡಿದ ನಂತರ ಉತ್ಪನ್ನವಿಜ್ಞಾನಾಃ=ವೇದಾಂತವಿಜ್ಞಾನ ಸುನಿಶ್ಚಿತಾರ್ಥರಾಗಿ (ಉಪನಿಷದಾದಿಗಳಿಂದ ಜ್ಞಾನ ಪಡೆದವರಾಗಿ) ಅಧೋಕ್ಷಜಭಾಷಿತಂ ಸ್ಮರಂತಃ=''ಉಪಯಾಸ್ಯಥ ಮದ್ಧಾಮ ನಿರ್ವಿದ್ಯ ನಿರಯಾದತಃ'' ಎಂಬ ಭಗವಂತನ ಮಾತನ್ನು ಸ್ಮರಿಸಿದವರಾಗಿ ಆಶು=ಬೇಗನೇ ಆತ್ಮಜೇ=ಮಗನಲ್ಲಿ ಭಾರ್ಯಾಂ ವಿಸೃಜ್ಯ=ಹೆಂಡತಿಯನ್ನು ಬಿಟ್ಟು ಗೃಹಾತ್ ಪ್ರಾವ್ರಜನ್=ಮನೆಯಿಂದ ಹೊರ ಹೊರಟರು. ॥೧॥

**ದೀಕ್ಷಿತಾ ಬ್ರಹ್ಮಸತ್ರೇಣ ಸರ್ವಭೂತಾತ್ಮಮೇಧಸಾ ।**
**ಪ್ರತೀಚ್ಯಾಂ ದಿಶಿ ವೇಲಾಯಾಂ ಸಿದ್ಧೋಽಭೂದ್ ಯತ್ರ ಜಾಜಲಿಃ ॥೨॥**

ಯತ್ರ=ಯಾವ ಸ್ಥಳದಲ್ಲಿ ಜಾಜಲಿಃ=ಜಾಜಲ ಪುತ್ರನು ಸಿದ್ಧೋಽಭೂತ್=ಮುಕ್ತನಾದನೋ ತಸ್ಯಾಂ ಪ್ರತೀಚ್ಯಾಂ ದಿಶಿ=ಆ ಪಶ್ಚಿಮ ದಿಕ್ಕಿನಲ್ಲಿ ವೇಲಾಯಾಂ=ಸಮುದ್ರತೀರದಲ್ಲಿ ಸರ್ವಭೂತಾತ್ಮಮೇಧಸಾ=ಸಮಸ್ತ ಪ್ರಾಣಿಗಳಿಗೆ ಅಂತರ್ಯಾಮಿಯಾದ, ಸ್ವಾಮಿಯಾದ ಶ್ರೀಹರಿಯಲ್ಲಿ ಜ್ಞಾನವುಂಟಾಗುವುದೋ ಅಂತಹ ಬ್ರಹ್ಮಸತ್ರೇಣ=ಸನ್ಯಾಸಾಶ್ರಮದಿಂದ ದೀಕ್ಷಿತಾಃ=ಆಶ್ರಮೋಚಿತ ಧ್ಯಾನಾನುಷ್ಠಾನಗಳಲ್ಲಿ ಬದ್ಧಸಂಕಲ್ಪರಾದರು.

**ಭಾಗವತ ತಾತ್ಪರ್ಯ -**

ಇಲ್ಲಿ ಬ್ರಹ್ಮಸತ್ರೇಣ ಎಂದರೆ ಯಾವುದೋ ಒಂದು ಯಾಗವೆಂದು ತೋರುವುದು. ಆದರೆ ಸನ್ಯಾಸಿಗಳಿಗೆ ಯಾಗವಿಲ್ಲ. ಕಾರಣ ಯೋಗ್ಯವಾದ ಅರ್ಥವನ್ನು ಪ್ರಮಾಣದಿಂದಲೇ ತಿಳಿಸುವರು -

''ಪರಿವ್ರಾಜ್ಯಂ ಬ್ರಹ್ಮಸತ್ರಂ ನ್ಯಾಸ ಇತ್ಯಭಿಧೀಯತೇ'' ಇತ್ಯಭಿಧಾನಮ್ ।

ಪರಮಹಂಸಾಶ್ರಮವು ಬ್ರಹ್ಮಸತ್ರ-ನ್ಯಾಸ ಎಂಬ ಪದಗಳಿಂದ ಹೇಳಲ್ಪಡುತ್ತದೆ ಎಂದು ಅಭಿಧಾನವಿದೆ.

ಸರ್ವಭೂತಾತ್ಮಮೇಧಸಾ ಎಂಬುದಕ್ಕೆ ಎಲ್ಲರ ಮನಸ್ಸಿನ ಜ್ಞಾನದಿಂದ ಎಂಬ ಅಪಾರ್ಥವಾಗದಿರಲೆಂದು ತಮ್ಮ ಮಾತಿನಿಂದಲೇ ವ್ಯಾಖ್ಯಾನಿಸುವರು -

**ಸರ್ವಭೂತಾತ್ಮನಿ ಹರೌ ಮೇಧಾ ಯತ್ರ ತದ್ ಬ್ರಹ್ಮಸತ್ರಂ ಸರ್ವಭೂತಾತ್ಮಮೇಧಃ ।**

ಯಾವ ಸನ್ಯಾಸಾಶ್ರಮದಿಂದ ಸರ್ವಪ್ರಾಣಿಗಳಿಗೆ ಅಂತರ್ಯಾಮಿಯಾದ ಶ್ರೀಹರಿಯಲ್ಲಿ ಜ್ಞಾನವುಂಟಾಗುವುದೋ ಅಂತಹ ಸನ್ಯಾಸಾಶ್ರಮವು ಸರ್ವಭೂತಾತ್ಮಮೇಧ ಎನಿಸುತ್ತದೆ.

ಈ ವಿಷಯದಲ್ಲಿ ಪ್ರಮಾಣ ಹೇಳುವರು -

**''ಹರಿಮೇಧಾಸ್ತು ಸನ್ಯಾಸೋ ಹರೌ ಮೇಧಾಽತ್ರ ಯದ್ಭವೇತ್'' ಇತಿ ಷಾಡ್ಗುಣ್ಯೇ ।**

ಯಾವ ಕಾರಣ ಸನ್ಯಾಸದಿಂದ ಭಗವಂತನ ಜ್ಞಾನವುಂಟಾಗುವುದೋ ಅಂತಹ ಸನ್ಯಾಸಾಶ್ರಮವು ಹರಿಮೇಧಾ ಎನಿಸುತ್ತದೆ ಎಂದು ಷಾಡ್ಗುಣ್ಯದಲ್ಲಿದೆ. ।।೨।।

**ತಾನ್ ನಿರ್ಜಿತಪ್ರಾಣಮನೋವಚೋದೃಶೋ**
**ಜಿತಾಸನಾಂಚ್ಛಾಂತಸಮಾನವಿಗ್ರಹಾನ್ ।**
**ಪರೇಽಮಲೇ ಬ್ರಹ್ಮಣಿ ಯೋಜಿತಾತ್ಮನಃ**
**ಸುರಾಸುರೇಡ್ಯೋ ದದೃಶೇ ಸ್ಮ ನಾರದಃ ।।೩।।**

ನಿರ್ಜಿತಪ್ರಾಣಮನೋವಚೋದೃಶಃ=ಗೆಲ್ಲಲ್ಪಟ್ಟ ಇಂದ್ರಿಯಗಳು ಮನಸ್ಸು ಮಾತು ಕಣ್ಣುಗಳುಳ್ಳ ಜಿತಾಸನಾನ್=ಆಸನಜಯವುಳ್ಳ ಶಾಂತಸಮಾನವಿಗ್ರಹಾನ್=ವಿಷಾಯಾಸಕ್ತಿ ಇಲ್ಲದ, ಎಲ್ಲ ಅವಸ್ಥೆಗಳಲ್ಲಿ ಏಕಪ್ರಕಾರವಾದ ದೇಹವುಳ್ಳ ಪರೇ=ಸರ್ವೋತ್ತಮನಾದ ಅಮಲೇ=ನಿರ್ದೋಷನಾದ ಬ್ರಹ್ಮಣಿ=ಗುಣಪೂರ್ಣನಾದ ಶ್ರೀಹರಿಯಲ್ಲಿ ಯೋಜಿತಾತ್ಮನಃ= ಮನಸ್ಸನ್ನು ತೊಡಗಿಸಿದ ತಾನ್=ಪ್ರಚೇತಸರನ್ನು ಸುರಾಸುರೇಡ್ಯಃ= ದೇವದಾನವರಿಂದಲೂ ಸ್ತುತ್ಯರಾದ ನಾರದಃ=ನಾರದರು ದದೃಶೇ ಸ್ಮ=ನೋಡಿದರು. ।।೩।।

**ತಮಾಗತಂ ತ ಉತ್ಥಾಯ ಪ್ರಣಿಪತ್ಯಾಭಿನಂದ್ಯ ಚ ।**
**ಪೂಜಯಿತ್ವಾ ಯಥಾದೇಶಂ ಸುಖಾಸೀನಮಥಾಬ್ರುವನ್ ।।೪।।**

ತೇ=ಪ್ರಚೇತಸರು ಆಗತಂ=ಬಂದಿರುವ ತಂ=ನಾರದರನ್ನು ಉತ್ಥಾಯ=ಎದ್ದು ಪ್ರಾಣಪತ್ಯ=ನಮಸ್ಕರಿಸಿ ಅಭಿನಂದ್ಯ=ಪ್ರಶಂಸೆ ಮಾಡಿ ಯಥಾದೇಶಂ=ವಿಧಿಪೂರ್ವಕವಾಗಿ ಪೂಜಯಿತ್ವಾ=ಪೂಜಿಸಿ ಸುಖಾಸೀನಂ=ಆರಾಮವಾಗಿ ಕುಳಿತ ನಂತರ ಅಬ್ರುವನ್= ಹೇಳಿದರು. ।।೪।।

**ಸ್ವಾಗತಂ ತೇ ಸುರರ್ಷೇऽದ್ಯ ದಿಷ್ಟ್ಯಾ ನೋ ದರ್ಶನಂ ಗತಃ ।**
**ತವ ಚಂಕ್ರಮಣಂ ಬ್ರಹ್ಮನ್ನಭಯಾಯ ಯಥಾ ರವೇಃ ।।೫।।**

ಹೇ ಸುರರ್ಷೇ=ಹೇ ದೇವಋಷಿಯೇ ! ತೇ ಸ್ವಾಗತಂ=ನಿಮಗೆ ಸ್ವಾಗತವು. ದಿಷ್ಟ್ಯಾ= ದೈವಾತ್ತಾಗಿ ನಃ ದರ್ಶನಂ ಗತಃ=ನಮಗೆ ಕಾಣಿಸಿರುವಿರಿ. ಹೇ ಬ್ರಹ್ಮನ್=ಬ್ರಹ್ಮಜ್ಞಾನಿಗಳೇ ! ಯಥಾ ರವೇಃ=ಸೂರ್ಯನಂತೆ ತವ=ನಿಮ್ಮ ಚಂಕ್ರಮಣಂ=ಸಂಚಾರವು ಅಭಯಾಯ= ಸಜ್ಜನರ ಭಯಪರಿಹಾರಕ್ಕಾಗಿಯೇ. ।।೫।।

ರುದ್ರದೇವರು ಮತ್ತು ಪರಮಾತ್ಮ ಇಬ್ಬರೂ ಜ್ಞಾನೋಪದೇಶ ಮಾಡಿದ್ದರಿಂದ ನಾನೇನು ಪ್ರತ್ಯೇಕವಾಗಿ ಪ್ರಯತ್ನಿಸಬೇಕಿಲ್ಲವಲ್ಲ ? ಎಂದರೆ ಹೇಳುವರು -

**ಯದಾದಿಷ್ಟಂ ಭಗವತಾ ಶಿವೇನಾಧೋಕ್ಷಜೇನ ಚ ।**
**ತದ್ ಗೃಹೇಷು ಪ್ರಸಕ್ತಾನಾಂ ಪ್ರಾಯಶಃ ಕ್ಷಪಿತಂ ಪ್ರಭೋ ।।೬।।**

ಪ್ರಭೋ=ನಾರದರೇ ! ಭಗವತಾ=ಐಶ್ವರ್ಯಶಾಲಿಯಾದ ಅಧೋಕ್ಷಜೇನ= ಶ್ರೀಹರಿಯಿಂದ ಚ=ಮತ್ತು ಶಿವೇನ=ರುದ್ರದೇವರಿಂದ ಯತ್=ಯಾವುದು ಆದಿಷ್ಟಂ= ಉಪದೇಶಿಸಲ್ಪಟ್ಟಿತ್ತೋ ತತ್=ಅದು (ಭಗವತ್ತತ್ವವು) ಗೃಹೇಷು ಪ್ರಸಕ್ತಾನಾಂ=ಲೌಕಿಕದಲ್ಲಿ (ಗೃಹಸ್ಥಾಶ್ರಮದಲ್ಲಿ) ತೊಡಗಿದ ನಮಗೆ ಪ್ರಾಯಶಃ ಕ್ಷಪಿತಂ=ಬಹುಭಾಗ ವಿಸ್ಮೃತವಾಗಿದೆ.

**ತನ್ನಃ ಪ್ರದ್ಯೋತಯಾಧ್ಯಾತ್ಮಜ್ಞಾನಂ ತತ್ತ್ವಾರ್ಥದರ್ಶನಮ್ ।**
**ಯೇನಾಂಜಸಾ ತರಿಷ್ಯಾಮೋ ದುಸ್ತರಂ ಭವಸಾಗರಮ್ ।।೭।।**

ಯೇನ=ಯಾವ ಆತ್ಮಜ್ಞಾನದಿಂದ ದುಸ್ತರಂ ಭವಸಾಗರಂ=ದಾಟಲಸಾಧ್ಯವಾದ ಸಂಸಾರ ಸಮುದ್ರವನ್ನು ಅಂಜಸಾ=ಚೆನ್ನಾಗಿ ತರಿಷ್ಯಾಮಃ=ದಾಟುವೆವೋ ತತ್=ಅಂತಹ ತತ್ತ್ವಾರ್ಥದರ್ಶನಂ=ಪರಮಾತ್ಮನ ಅಪರೋಕ್ಷಸಾಧನವಾದ ಅಧ್ಯಾತ್ಮಜ್ಞಾನಂ=ಶ್ರೀಹರಿಯ ಜ್ಞಾನವನ್ನು ನಃ=ನಮಗೆ ಪ್ರದ್ಯೋತಯ=ಸ್ಮರಣೆಗೆ ತಂದುಕೊಡಿರಿ.

**ಮೈತ್ರೇಯ ಉವಾಚ -**

**ಇತಿ ಪ್ರಚೇತಸಾ (ಸಾಂ) ಪೃಷ್ಟೋ ಭಗವಾನ್ ನಾರದೋ ಮುನಿಃ ।**
**ಭಗವತ್ಯುತ್ತಮಶ್ಲೋಕ ಆವಿಷ್ಟಾತ್ಮಾऽಬ್ರವೀನ್ನೃಪಾನ್ ।।೮।।**

ಪ್ರಚೇತಸಾ=ಪ್ರಚೇತಸರಿಂದ ಇತಿ=ಈ ರೀತಿ ಪೃಷ್ಟಃ=ಪ್ರಶ್ನಿಸಲ್ಪಟ್ಟ ಭಗವಾನ್=ಪೂಜ್ಯರಾದ ನಾರದಃ ಮುನಿಃ=ನಾರದಮಹರ್ಷಿಗಳು ಉತ್ತಮಶ್ಲೋಕೇ ಭಗವತಿ=ಬ್ರಹ್ಮಾದಿಗಳಿಂದ ಕೀರ್ತ್ಯನಾದ ಶ್ರೀಹರಿಯಲ್ಲಿ ಆವಿಷ್ಟಾತ್ಮಾ=ಪ್ರವಿಷ್ಟವಾದ ಮನಸ್ಸುಳ್ಳವರಾಗಿ ನೃಪಾನ್ ಅಬ್ರವೀತ್=ಪ್ರಚೇತಸರಿಗೆ ಹೇಳಿದರು. ।।೮।।

**ನಾರದ ಉವಾಚ –**

**ತಜ್ಜನ್ಮ ತಾನಿ ಕರ್ಮಾಣಿ ತದಾಯುಸ್ತನ್ಮನೋ ವಚಃ ।**
**ನೃಣಾಂ ಯೇನ ಹಿ ವಿಶ್ವಾತ್ಮಾ ಸೇವ್ಯತೇ ಹರಿರೀಶ್ವರಃ ।।೯।।**

ನೃಣಾಂ=ಜನರ, ಯೇನ=ಯಾವ ಜನ್ಮ-ಕರ್ಮಾದಿಗಳಿಂದ ವಿಶ್ವಾತ್ಮಾ=ಸರ್ವಾಂತರ್ಯಾಮಿಯಾದ ಈಶ್ವರಃ=ಸರ್ವಸ್ವಾಮಿಯಾದ ಹರಿಃ=ಶ್ರೀಹರಿಯು ಸೇವ್ಯತೇ=ಭಜಸಲ್ಪಡುವನೋ ತಜ್ಜನ್ಮ=ಆ ಜನ್ಮವು ತಾನಿ ಕರ್ಮಾಣಿ=ಆ ಕರ್ಮಗಳು ತದಾಯುಃ=ಆ ಆಯುಷ್ಯವು ತನ್ಮನೋ ವಚಃ=ಆ ಮನಸ್ಸು ಮಾತುಗಳು ಸಫಲವಾದವು. ।।೯।।

**ಕಿಂ ಜನ್ಮಭಿಸ್ತ್ರಿಭಿರ್ವೇಹ ಶುಕ್ಲಸಾವಿತ್ರಯಾಜ್ಞಿಕೈಃ ।**
**ಕರ್ಮಭಿರ್ವಾ ತ್ರಯೀಪ್ರೋಕ್ತೈಃ ಪುಂಸೋಽಪಿ ವಿಬುಧಾಯುಷಃ ।।೧೦।।**

ಯತ್ರ=ಯಾವ ಜನ್ಮದಲ್ಲಿ ಹರಿಃ=ಶ್ರೀಹರಿಯು, ಆತ್ಮಪ್ರದೋ ನ=ತನ್ನನ್ನು ಕೊಡುವುದಿಲ್ಲವೋ (ಪ್ರಸನ್ನನಾಗುವುದಿಲ್ಲವೋ) ಅಂತಹ ಜನ್ಮದಿಂದ ಏನು ಪ್ರಯೋಜನ ? ಎಂದು ೧೨ನೇ ಶ್ಲೋಕದೊಡನೆ ಅನ್ವಯ.

ಇಹ=ಅಧಿಕಾರಿವರ್ಗದಲ್ಲಿ ಶುಕ್ಲ=ಮಾತಾಪಿತೃ ಉಭಯಕುಲಶುದ್ಧವಾದ, ಸಾವಿತ್ರ=ಉಪನಯನಾದಿಗಳಿಂದ ಯಾಜ್ಞಿಕೈಃ=ಅಗ್ನ್ಯಾಧಾನ ಮಾಡುವುದೆಂಬ ತ್ರಿಭಿಃ=ಮೂರು ಜನ್ಮಭಿಃ=ಜನ್ಮಗಳಿಂದ ಕಿಂ=ಏನು ಪ್ರಯೋಜನ ? ತ್ರಯೀಪ್ರೋಕ್ತೈಃ ಕರ್ಮಭಿಃ ವಾ=ವೇದವಿಹಿತಕರ್ಮಗಳಿಂದ ಕಿಂ=ಏನು ಫಲ ? ಪುಂಸಃ=ಜನರಿಗೆ ವಿಬುಧಾಯುಷಃ=ದೇವತೆಗಳಂತೆ ದೀರ್ಘಾಯುಷ್ಯದಿಂದ ಕಿಂ=ಏನು ಫಲ ?।।೧೦।।

**ಶ್ರುತೇನ ತಪಸಾ ವಾ ಕಿಂ ವಚೋಭಿಶ್ಚಿತ್ತವೃತ್ತಿಭಿಃ ।**
**ಬುದ್ಧ್ಯಾ ವಾ ಕಿಂ ನಿಪುಣಯಾ ಬಲೇನೇಂದ್ರಿಯರಾಧಸಾ ।।೧೧।।**

ಶ್ರುತೇನ =ಶ್ರವಣದಿಂದ ತಪಸಾ=ತಪಸ್ಸಿನಿಂದ ವಚೋಭಿಃ=ಭಗವದನ್ಯವಾರ್ತೆಗಳಿಂದ (ಹಾಳುಹರಟೆಯಿಂದ) ಚಿತ್ತವೃತ್ತಿಭಿಃ=ಅನೇಕ ವಸ್ತುಗಳನ್ನು ಗ್ರಹಿಸುವ ಮನೋವೃತ್ತಿಗಳಿಂದ (ಅಷ್ಟಾವಧಾನ ಶತಾವಧಾನ ರೂಪ ಮನೋವ್ಯಾಪಾರದಿಂದ) ನಿಪುಣಯಾ ಬುದ್ಧ್ಯಾ=

ಕುಶಲವಾದ ಬುದ್ಧಿಯಿಂದ ಬಲೇನ=ಸಾಮರ್ಥ್ಯದಿಂದ ಇಂದ್ರಿಯಾರಾಧಸಾ= ಇಂದ್ರಿಯಸಾಮರ್ಥ್ಯದಿಂದ ಕಿಂ=ಏನು ಪ್ರಯೋಜನ ? ||೧೧||

**ಕಿಂ ವಾ ಯೋಗೇನ ಸಾಂಖ್ಯೇನ ನ್ಯಾಸಸ್ವಾಧ್ಯಾಯಯೋರಪಿ ।**
**ಕಿಂ ವಾ ಶ್ರೇಯೋಭಿರನ್ಯೈಶ್ಚ ನ ಯತ್ರಾತ್ಮಪ್ರದೋ ಹರಿಃ ||೧೨||**

ಯೋಗೇನ=ಪ್ರಾಣಾಯಾಮದಿಂದ ಸಾಂಖ್ಯೇನ=ದೇಹಾದಿವ್ಯತಿರಿಕ್ತ ಆತ್ಮಜ್ಞಾನಮಾತ್ರ-ದಿಂದ (ಯಥಾರ್ಥಜ್ಞಾನದಿಂದ) ನ್ಯಾಸಸ್ವಾಧ್ಯಾಯಯೋಃ=ಸನ್ಯಾಸ ವೇದಾಧ್ಯಯನಗಳಿಂದ ಅನ್ಯೈಃ=ವ್ರತ ತೀರ್ಥಯಾತ್ರಾ ವೈರಾಗ್ಯಾದಿಗಳಿಂದ ಇವೆಲ್ಲ ಶ್ರೇಯೋಭಿಃ=ಶ್ರೇಯಃ-ಸಾಧನಗಳಿಂದ ಕಿಂ=ಏನು ಪ್ರಯೋಜನ ? ಯತ್ರ=ಯಾವುದರಲ್ಲಿ ಹರಿಃ=ಶ್ರೀಹರಿಯು ಸೇವಿತನಾಗಿ ಆತ್ಮಪ್ರದಃ ನ=ತನ್ನನ್ನು ನೀಡುವುದಿಲ್ಲವೋ ಅಂಥ ಹಿಂದೆ ಹೇಳಿದ ಸಾಧನಗಳಿಂದ ಏನು ಪ್ರಯೋಜನ ? ಎಂದು ಭಾವ. ||೧೨||

ಹರಿಸೇವಾರೂಪಗಳಾದ ಹಿಂದೆ ಹೇಳಿದ ಶ್ರೇಯಃಸಾಧನಗಳನ್ನು ಎಲ್ಲಿಯವರೆಗೆ ಅನುಷ್ಠಾನ ಮಾಡಬೇಕು ಎಂದು ಹೇಳುವರು -

**ಶ್ರೇಯಸಾಮಪಿ ಸರ್ವೇಷಾಮಾತ್ಮಾ ಹ್ಯವಧಿರರ್ಥಿತಃ ।**
**ಸರ್ವೇಷಾಮಪಿ ಭೂತಾನಾಂ ಹರಿರಾತ್ಮಾऽऽತ್ಮದಃ ಪ್ರಿಯಃ ||೧೩||**

ಸರ್ವೇಷಾಂ ಶ್ರೇಯಸಾಂ ಅಪಿ=ಎಲ್ಲ ಶ್ರೇಯಃಸಾಧನಗಳಿಗೆ ಅರ್ಥಿತಃ= ಉದ್ದಿಷ್ಟನಾದವನು ಆತ್ಮಾ=ಪರಮಾತ್ಮನೇ. ಅಂದರೆ ಅವನ ಪ್ರಾಪ್ತಿಯೇ ಅವಧಿಃ=ಕೊನೆಯು ಹಿ=ಪ್ರಸಿದ್ಧವು.

**ಭಾಗವತ ತಾತ್ಪರ್ಯ -**

ಅವಧಿತ್ವ ಹೇಗೆಂದು ಉಪಪಾದಿಸುವರು -

**ತಾವತ್ಪರ್ಯಂತಮೇವ ಫಲಂ ಇತ್ಯವಧಿಃ ।**

ಪರಮಾತ್ಮಪ್ರಾಪ್ತಿಯಾಗುವವರೆಗೆ ಜ್ಞಾನವೋ ಆನಂದವೃದ್ಧಿಯೋ ಆಗುವವು. ಪರಮಾತ್ಮಪ್ರಾಪ್ತ್ಯನಂತರ ಬೇರೆ ಯಾವ ಫಲವಿಲ್ಲ. ಕಾರಣ ಅವನೇ ಅವಧಿಯೆಂದು ಭಾವ.

ಅಂತೂ ಶ್ರೇಯಃಸಾಧನಗಳಾದ ಕರ್ಮಗಳೇನಿವೆಯೋ ಅವು ಜ್ಞಾನದಕಿಂತ ಪೂರ್ವದಲ್ಲಿ ಅನುಷ್ಠೇಯವು. ಜ್ಞಾನವನ್ನು ಹುಟ್ಟಿಸುವವು. ಜ್ಞಾನಾನಂತರ ಮಾಡಿದವು ಮೋಕ್ಷದಲ್ಲಿ ಆನಂದವೃದ್ಧಿಯನ್ನುಂಟುಮಾಡುವವು. ಪರಮಾತ್ಮಪ್ರಾಪ್ತಿರೂಪ ಮೋಕ್ಷಾನಂತರ ಅನುಷ್ಠಿತವಾದ ಕರ್ಮಗಳಿಗೆ ಯಾವ ಫಲವೂ ಇಲ್ಲ. ಆದ್ದರಿಂದ ಅವನೇ ಅವಧಿ ಎನಿಸುವನು.

ಶ್ರೀಹರಿಯೇ ಪೂಜ್ಯನೆಂದಾದರೆ, ಬ್ರಹ್ಮಾದಿದೇವತೆಗಳ ಪೂಜೆ ವೇದವಿಹಿತವಾದುದನ್ನು ಮಾಡಮಾರದೇ ? ಎಂದರೆ, ಹಾಗೇನಿಲ್ಲ. ಅವರನ್ನು ಪೂಜಿಸಿದಾಗಲೂ ಅವರ ಅಂತರ್ಯಾಮಿಯಾಗಿದ್ದು ಶ್ರೀಹರಿಯೇ ಪೂಜಿತನಾಗಿ ಫಲ ಕೊಡುವನು ಎಂಬ ಅಭಿಪ್ರಾಯದಿಂದ ಹೇಳುವರು -

ಸರ್ವೇಷಾಂ ಭೂತಾನಾಂ=ಎಲ್ಲ ಬ್ರಹ್ಮಾದಿಗಳಿಗೆ ಆತ್ಮಾ=ಅಂತರ್ಯಾಮಿಯು ಹರಿಃ=ಶ್ರೀಹರಿಯು ಪ್ರಿಯಶ್ಚ=ಪ್ರಿಯನೂ ಆದ್ದರಿಂದ ಬ್ರಹ್ಮಾದಿಗಳಲ್ಲಿದ್ದು ತನ್ನನ್ನು ಪೂಜಿಸುವವರಿಗೆ ಆತ್ಮದಃ=ತನ್ನ ಪ್ರಾಪ್ತಿಯನ್ನು ನೀಡುವನು.

**ವಿಜಯಧ್ವಜರ ಪ್ರಕಾರ -**

ಶ್ರೀಹರಿಯನ್ನು ಸೇವಿಸುವವರಿಗೆ ಎಂತಹ ಫಲ ಕೊಡುವನು ? ಯಾವುದರಿಂದ ಶ್ರೇಯಸ್ಸಿಗೆ ಅವಧಿ ಎನಿಸುವನು ? ಎಂದರೆ ಹೇಳುವರು -

ಬೇರೆಯವರು ತಮ್ಮನ್ನು ಸೇವಿಸಿದಾಗ ಪ್ರೀತರಾದಾಗ ತಮ್ಮಿಂದ ಭಿನ್ನವಾದ ಪುಣ್ಯ ಫಲವನ್ನೇ ಕೊಡುವರು. ಇವನಾದರೂ ಆತ್ಮದಃ=ತನ್ನನ್ನೇ ಕೊಡುವನು. ಆದ್ದರಿಂದ ಇಂಥ ಕೃಪಾಸಮುದ್ರ ಬೇರೊಬ್ಬನು ಉಂಟೇ ? ಯಾರೂ ಇಲ್ಲವೆಂದು ಭಾವ. ।।೧೩।।

ಬ್ರಹ್ಮಾದಿಗಳಿಗೆ ಪೂಜೆ ಮಾಡದೇ ಹೋದರೆ ಅವರ ಕೋಪದಿಂದ ಅನರ್ಥವಾಗುವುದಲ್ಲ ? ಎಂಬ ಶಂಕೆಗೆ, ಹರಿಯು ಅವರಿಗೆ ಆಧಾರನಾದುದರಿಂದ ಅವರಲ್ಲಿ ಅಂತರ್ಯಾಮಿಯಾದ ಹರಿಗೆ ಅರ್ಪಿಸುವುದೇ ಅವರ ಪೂಜೆ ಎಂದು ದೃಷ್ಟಾಂತಪೂರ್ವಕವಾಗಿ ಹೇಳುವರು -

**ಯಥಾ ತರೋರ್ಮೂಲನಿಷೇಚನೇನ**
**ತೃಪ್ಯಂತಿ ತತ್ಸ್ಕಂದಭುಜೋಪಶಾಖಾಃ ।**
**ಪ್ರಾಣೋಪಹಾರಾಚ್ಚ ಯಥೇಂದ್ರಿಯಾಣಾಂ**
**ತಥೈವ ಸರ್ವಾರ್ಹಣಮಚ್ಯುತೇಜ್ಯಾ ।।೧೪।।**

ಯಥಾ=ಹೇಗೆ ತರೋಃ=ಗಿಡದ ಮೂಲನಿಷೇಚನೇನ=ಬೇರಿಗೆ ನೀರೆರೆಯುವುದರಿಂದ ತತ್ಸ್ಕಂದಭುಜೋಪಶಾಖಾಃ=ಅದರ ಮೊದಲಿನ ಟೊಂಗೆ, ಸ್ಕಂದ ಅದರ ಭಾಗ, ಭುಜ ಅದರ ಟೊಂಗೆಗಳು, ಉಪಶಾಖಾಗಳು, ಉಪಲಕ್ಷಣಯಾ ಪತ್ರ-ಪುಷ್ಪಾದಿಗಳು ತೃಪ್ಯಂತಿ=ತೃಪ್ತಿಪಡುವವು. ಹೊರತು ಬೇರಿಗೆ ನೀರು ಹಾಕದೇ ಕೇವಲ ಟೊಂಗೆಗಳಿಗೆ ನೀರು ಸಿಂಪಡಿಸಿದರೆ ಆಗದು. ಪ್ರಾಣೋಪಹಾರತ್=ದೇಹದಲ್ಲಿರುವ ಪಂಚಪ್ರಾಣಗಳಿಗೆ ಭೋಜನವೀಯುವುದರಿಂದ ಇಂದ್ರಿಯಾಣಾಂ ಯಥಾ=ಇಂದ್ರಿಯಗಳಿಗೆ ತೃಪ್ತಿಯಾಗುವಂತೆ

ತಥಾ=ಹಾಗೆ ಅಚ್ಯುತೇಜ್ಯಾ=ಅಂತರ್ಯಾಮಿ ಶ್ರೀಹರಿಯ ಪೂಜೆಯು ಸರ್ವಾರ್ಹಣಂ= ಬ್ರಹ್ಮಾದಿ ಸರ್ವದೇವತೆಗಳ ಪೂಜೆಯು ಪ್ರೀತಿಜನಕವು. ॥೧೪॥

ಪರಮಾತ್ಮನು ಸರ್ವಾಧಾರ ಹೇಗೆಂದು ದೃಷ್ಟಾಂತ ಮುಖಾಂತರ ತಿಳಿಸುವರು -

**ಯಥೈವ ಸೂರ್ಯಾತ್ ಪ್ರಭವಂತಿ ಗಾವಃ ಪುನಶ್ಚ ತಸ್ಮಿನ್ ಪ್ರವಿಶಂತಿ ಕಾಲೇ ।**
**ಭೂತಾನಿ ಭೂಮೌ ಸ್ಥಿರಜಂಗಮಾನಿ ತಥಾ ಹರಾವೇವ ಗುಣಪ್ರವಾಹಃ॥೧೫॥**

ಕಾಲೇ=ಉದಯಕಾಲದಲ್ಲಿ ಅಥವಾ ಆಷಾಢಾದಿಕಾಲದಲ್ಲಿ ಗಾವಃ=ಕಿರಣಗಳು ಯಥಾ=ಹೇಗೆ ಸೂರ್ಯಾತ್=ಸೂರ್ಯನಿಂದ ಪ್ರಭವಂತಿ ಹೊರಬರುವವು, ಹುಟ್ಟುವವು. ಪುನಃ=ಮತ್ತೆ ಕಾಲೇ=ಸಾಯಂಕಾಲದಲ್ಲಿ ಅಥವಾ ಹೇಮಂತಾದಿಕಾಲದಲ್ಲಿ ತಸ್ಮಿನ್=ಆ ಸೂರ್ಯನಲ್ಲಿಯೇ ಪ್ರವಿಶಂತಿ=ಪ್ರವೇಶಿಸುವವೋ ಮತ್ತು ಯಥಾ=ಹೇಗೆ ಸ್ಥಿರಜಂಗಮಾನಿ ಭೂತಾನಿ=ಸ್ಥಾವರಜಂಗಮ ಪ್ರಾಣಿಗಳು ಭೂಮೌ=ಭೂಮಿಯಿಂದ ಜನಿಸಿ ಭೂಮಿಯಲ್ಲಿ ಪ್ರವೇಶಿಸುವವೋ ತಥಾ=ಹಾಗೆ ಗುಣಪ್ರವಾಹಃ=ಸತ್ವರಜಸ್ತಮೋಗುಣಾತ್ಮಕ ಜಗತ್‌ಪ್ರವಾಹವು ಹರಾವೇವ=ಶ್ರೀಹರಿಯಿಂದ ಜನಿಸಿ ಶ್ರೀಹರಿಯಲ್ಲಿಯೇ ಪ್ರವೇಶಿಸುವುದು. ಆದ್ದರಿಂದ ಶ್ರೀಹರಿಯೇ ಎಲ್ಲರಿಗೂ ಉಪಜೀವ್ಯನಾದ್ದರಿಂದ ಅವನ ಆರ್ಚನೆಯೇ ಎಲ್ಲರ ಆರ್ಚನೆ. ಆದಿಲ್ಲದೇ ಉಳಿದವರ ಪೂಜೆಯಾಗಲಾರದು. ॥೧೫॥

ಹೇಳಿದ ಶ್ರೇಯಃಸಾಧನ ಮಾಡಿದರೂ ಶ್ರೀಹರಿಯು ಸರ್ವದಾ ತೋರುವುದಿಲ್ಲ ? ಎಂದರೆ, ಉತ್ತರಿಸುವರು -

**ಏತತ್ ಪರಂ ತಜ್ಜಗಾದಾತ್ಮನಃ ಪದಂ**
**ಸಕೃದ್ ವಿಭಾತಂ ಸಮಿತುರ್ಯಥಾ ಪ್ರಭಾ ।**
**ಯದಾऽಸವೋ ಜಾಗ್ರತಿ ಸುಪ್ತವೃತ್ತಯೋ**
**ದ್ರವ್ಯಕ್ರಿಯಾಕಾರಕವಿಭ್ರಮಾತ್ಯಯಃ ॥೧೬॥**

ಏತತ್=ಜಗದಾಧಾರವೆಂದು ಹೇಳಿದ ತತ್=ಪೂರ್ವೋಕ್ತವಾದ ಪರಂ=ಲೋಕ-ವಿಲಕ್ಷಣವಾದ ಜಗದಾತ್ಮನಃ=ಜಗದೊಡೆಯನ ಪದಂ=ಸ್ವರೂಪವು ಸವಿತುಃ ಪ್ರಭಾ ಯಥಾ=ಸೂರ್ಯನ ಪ್ರಕಾಶದಂತೆ ಸಕೃತ್ ವಿಭಾತಂ=ಯಾವಾಗಲೋ ಒಮ್ಮೆ ತೋರುವುದು, ಯದಾ=ಯಾವಾಗ ಯೋಗಿನಾಂ=ಯೋಗಿಗಳಿಗೆ ದ್ರವ್ಯಕ್ರಿಯಾಕಾರಕವಿಭ್ರಮಾತ್ಯಯಃ=ನಾನೇ ಶರೀರವೆಂದು ತಿಳಿಯುವದೆಂಬ ದ್ರವ್ಯಭ್ರಮ, (ಸ್ಫುಟತರದೇಹಾತ್ಮವಿವೇಕಾಭಾವ) ನಾನೇ ಕರ್ತಾ ಎಂಬ ಕ್ರಿಯಾಭ್ರಮ, ನನ್ನ ಇಂದ್ರಿಯಗಳು ಎಂಬ ಕಾರಕಭ್ರಮ ಇವುಗಳ ನಾಶವು ಮುಖ್ಯಪ್ರಾಣದೇವರ ಶ್ರೀಹರಿಯ ಭಕ್ತಿಯಿಂದ ಉಂಟಾದ ಪ್ರಾಣೇಂದ್ರಿಯಜಯದಿಂದ

ಆಗುವುದೋ ತದಾ=ಆಗ ಸುಪ್ತವೃತ್ತಯಃ=ಸ್ವಾಭ್ಯಾಸಗಳನ್ನು ಕಳೆದುಕೊಂಡು ಮೊದಲಿಗೆ ಅವಿದ್ಯಾವರಣ ಇದ್ದುದರಿಂದ ಹರಿದರ್ಶ ಉದ್ಯೋಗವಿಲ್ಲದ ಅಸವಃ=ಪ್ರಾಣಗಳು ಜಾಗ್ರತಿ=ದರ್ಶನ ಉದ್ಯೋಗ ಉಳ್ಳವುಗಳಾಗುವವು.

**ಭಾಗವತ ತಾತ್ಪರ್ಯ -**

ಉತ್ತರಾರ್ಧದ ಅರ್ಥವಾಗದಿರುವುದರಿಂದ ಅರ್ಥ ಹೇಳುವರು -

**''ಆತ್ಮಭಾವಃ ಶರೀರೇ ತು ದ್ರವ್ಯಭ್ರಮ ಉದಾಹೃತಃ ।**
**ಕಿರಯಾಭ್ರಮಸ್ತ್ವಹಂ ಕರ್ತಾ ಮದೀಯಾನೀಂದ್ರಿಯಾಣಿ ತು ।**
**ಕಾರಕಭ್ರಮ ಇತ್ಯುಕ್ತಸ್ತ ಏತೇ ವಿಭ್ರಮಾ ಯದಾ ।**
**ಶ್ವಾಸಾದಿವೃತ್ತಿಲೋಪೇನ ಪ್ರಾಣಾ ಉದ್ಯೋಗಿನಸ್ತದಾ ।**
**ವಿಲೀಯಂತೇ ಪ್ರಾಣಭಕ್ತ್ಯಾ ನಿತ್ಯಂ ಸ್ವಾಪವತಾಂ ಸ್ಫುಟಮ್ ।**
**ಉದ್ಯೋಗ ಏವ ಜಾಗ್ರತ್ಸ್ಯಾದ್ಯೋಗಿನಾಂ ಮುಕ್ತಿಸಿದ್ಧಯೇ'' ಇತ್ಯಧ್ಯಾತ್ಮೇ ॥**

ಶರೀರವೇ ಆತ್ಮನೆಂಬ ಭ್ರಮವು ದ್ರವ್ಯಭ್ರಮವು. ನಾನೇ ಕರ್ತಾ ಎಂಬ ಭ್ರಮವು ಕ್ರಿಯಾಭ್ರಮವು. ಇಂದ್ರಿಯಗಳು ನನ್ನ ಅಧೀನಗಳು ಎಂಬ ಭ್ರಮ ಕಾರಕಭ್ರಮ. ಆ ಈ ಭ್ರಮಗಳು ಯಾವಾಗ ನಿತ್ಯದಲ್ಲಿಯೂ ಅನಾದ್ಯಜ್ಞಾನವುಳ್ಳ ಸಂಸಾರಿಗಳಿಗೆ ಶ್ರೀಹರಿ-ಮುಖ್ಯಪ್ರಾಣರ ಭಕ್ತಿಯಿಂದ ಉಂಟಾದ ಪ್ರಾಣೇಂದ್ರಿಯಮನೋಜಯದಿಂದ ಶ್ವಾಸಾದಿವೃತ್ತಿಲೋಪವಾಗುತ್ತದೋ ಆಗ ಪ್ರಾಣಗಳು ಶ್ರೀಹರಿಸಾಕ್ಷಾತ್ಕಾರವನ್ನು ಹುಟ್ಟಿಸಲಿಕ್ಕೆ ಸಾಧನಗಳಾಗುತ್ತವೆ. ಯೋಗಿಗಳಿಗೆ ಜ್ಞಾನದ್ವಾರಾ ಮುಕ್ತಿಸಿದ್ಧಿಗಾಗಿ ಶ್ರೀಹರಿದರ್ಶನವಾಗಲಿಕ್ಕೆ ಉಪಯೋಗವಾಗುವುದೇ ಜಾಗ್ರತ್ ಎನಿಸುತ್ತದೆ ಎಂದು ಅಧ್ಯಾತ್ಮದಲ್ಲಿ ಹೇಳಿದೆ. ॥೧೬॥

ಜಗದಾಶ್ರಯನಾದ ಪರಮಾತ್ಮನಿಗೆ ಜಗತ್ತಿನ ದೋಷಲೇಪವು ಕೆಸರಿನಲ್ಲಿ ಕಾಲಿಟ್ಟವನಂತೆ ಆಗಬಹುದಲ್ಲವೆ ? ಎಂದರೆ, ಹಾಗೇನಿಲ್ಲವೆಂದು ದೃಷ್ಟಾಂತ ಕೊಡುವ ಮೂಲಕ ತಿಳಿಸುವರು-

**ಯಥಾ ನಭ್ಯಸ್ಯಭ್ರತಮಃಪ್ರಕಾಶಾಃ**
**ಭವಂತಿ ಭೂಯೋ ನ ಭವಂತ್ಯನುಕ್ರಮಾತ್।**
**ಏವಂ ಪರೇ ಬ್ರಹ್ಮಣಿ ಶಕ್ತಯಸ್ತ್ವಮೂ**
**ರಜಸ್ತಮಸ್ಸತ್ವಮಿತಿ ಪ್ರವಾಹಃ ॥೧೭॥**

ಯಥಾ=ಹೇಗೆ ನಭಸಿ=ಆಕಾಶದಲ್ಲಿ ಅಭ್ರ=ಮೋಡ ತಮಃ=ಕತ್ತಲೆ ಪ್ರಕಾಶಾಃ=ಬೆಳಕು ಈ ಮೂರು ಅನುಕ್ರಮಾತ್=ಕ್ರಮವಾಗಿ ಭವಂತಿ=ಬರುವವು, ಭೂಯಃ=ಮತ್ತೆ ನ

ಭವಂತಿ=ಹೊರಟುಹೋಗುವವು. ಅದರಿಂದಾಗಿ ಆಕಾಶಕ್ಕೆ ಅವುಗಳ ಸಂಬಂಧದಿಂದ ಯಾವ ಲೇಪವಾಗುವುದಿಲ್ಲ. ಅದರಂತೆ ಪರೇ ಬ್ರಹ್ಮಣಿ=ಅಸಂಗನಾದ ಬ್ರಹ್ಮನಲ್ಲಿ ಅಮೂಃ ಶಕ್ತಯಃ=ಶಕ್ಯವಾದುದರಿಂದ ಶಕ್ತಿಶಬ್ದವಾಚ್ಯವಾದ ಯೇ=ಯಾವ ರಜಃ ಸತ್ವಂ ತಮಃ ಇತಿ=ಸತ್ವ ರಜಸ್ಸು ತಮಸ್ಸು ಎಂಬ ಗುಣಪ್ರವಾಹಃ=ಗುಣತ್ರಯಪ್ರವಾಹರೂಪವಾದ ಜಗತ್ತು ಭವತಿ ನ ಭವತಿ=ಉಂಟಾಗುವುದು, ನಾಶವಾಗುವುದು. ಆದರೂ ಅವನಿಗೆ ಯಾವ ದೋಷಲೇಪ ತಂದುಕೊಡಲಾರದು. ಮೋಡದ ಸಾಮ್ಯ ರಜೋಗುಣಕ್ಕೆ ಕತ್ತಲೆಯ ಸಾಮ್ಯ ತಮೋಗುಣಕ್ಕೆ ಪ್ರಕಾಶಸಾಮ್ಯ ಸತ್ವಗುಣಕ್ಕೆ ಎಂದು ತಿಳಿಯಬೇಕು. ।।೧೭।।

ಭಗವಂತ ಅಸಂಗನಾಗಲಿ. ಮುಂದೇನು ? ಅಂದರೆ ಅವನ ಭಜನೆ ಮಾಡಿರಿ ಎಂದು ಹೇಳುವರು -

**ತೇನೈಕಮಾತ್ಮಾನಮಶೇಷದೇಹಿನಾಂ ಕಾಲಂ ಪ್ರಧಾನಂ ಪುರುಷಂ ಪರೇಶಮ್ ।**
**ಸ್ವತೇಜಸಾ ಧ್ವಸ್ತಗುಣಪ್ರವಾಹಮಾತ್ಮೈಕಭಾವೇನ ಭಜಧ್ವಮದ್ಧಾ ।।೧೮।।**

ತೇನ=ಹಿಂದಿನ ಶ್ಲೋಕದಲ್ಲಿ ಹೇಳಿದಂತೆ ಜಗತ್ಸಂಬಂಧದಿಂದ ದೋಷಲೇಪ-ವಿಲ್ಲದಿರುವುದರಿಂದ ಅಶೇಷದೇಹಿನಾಂ ಆತ್ಮಾನಂ=ಎಲ್ಲ ಜೀವರಿಗೆ ಅಂತರ್ಯಾಮಿಯಾದ ಆದರೂ ಏಕಂ=ಸ್ವಗತಭೇದಶೂನ್ಯನಾದ ಕಾಲಂ=ಸಂಹಾರಕನಾದ್ದರಿಂದ ಕಾಲನಾಮಕನಾದ ಪ್ರಧಾನಂ=ಪ್ರಧಾನನಾಮಕನಾದ ಪುರುಷಂ=ಪುರುನಾಮಕನಾದ ಪರೇಶಂ=ಬ್ರಹ್ಮಾದಿಗಳಿಗೂ ನಿಯಾಮಕನಾದ ಸ್ವತೇಜಸಾ=ತನ್ನ ಸಾಮರ್ಥ್ಯದಿಂದ ಧ್ವಸ್ತಗುಣಪ್ರವಾಹಂ=ದೂರ ಮಾಡಲ್ಪಟ್ಟ ತ್ರಿಗುಣಬಂಧವುಳ್ಳ ಭಗವಂತನನ್ನು ಆತ್ಮೈಕಭಾವೇನ=ಭಗವಂತ ಒಬ್ಬನೇ ಪೂರ್ಣನೆಂಬ ಭಾವನೆಯಿಂದ ಅದ್ಧಾ=ಅತಿಶಯವಾಗಿ ಭಜಧ್ವಂ=ಭಜನ ಮಾಡಿರಿ.

ಕಾಲಾದಿಶಬ್ದವಾಚ್ಯತ್ವ ಹೇಳಿದ್ದರಿಂದ ಶ್ರುತಿಯಲ್ಲಿ ಕೆಲವಡೆ ಕಾಲಪುರುಷಪ್ರಧಾನರನ್ನು ಭಜಿಸಬೇಕೆಂದು ಹೇಳುವುದೆಂಬ ಶಂಕೆ ನಿರಾಕೃತವಾಯಿತು. ಕಾಲಾದಿ ಎಲ್ಲ ಶಬ್ದಗಳಿಗೂ ಶ್ರೀಹರಿಯೇ ಅರ್ಥನಾದ್ದರಿಂದ.

**ಭಾಗವತ ತಾತ್ಪರ್ಯ -**

ಆತ್ಮೈಕಭಾವೇನ ಎಂಬುದಕ್ಕೆ ಜೀವೈಕ್ಯಭಾವದಿಂದ ಎಂದರ್ಥ ತೋರುವುದು. ಕಾರಣ ಪ್ರಮಾಣದಿಂದಲೇ ಅದರ ಅರ್ಥ ತಿಳಿಸುವರು -

> **''ಪೂರ್ಣೋ ವಿಷ್ಣುಃ ಸ ಏವೈಕಃ ಇತಿ ಭಾವೋ ಯ ಈರಿತಃ ।**
> **ಆತ್ಮೈಕಭಾವ ಇತಿ ತಂ ವಿದುರ್ಬ್ರಹ್ಮಾತ್ಮದರ್ಶನಃ'' ಇತಿ ಸತ್ಯಸಂಹಿತಾಯಾಮ್ ।।**

ಶ್ರೀವಿಷ್ಣು ಒಬ್ಬನೇ ಸರ್ವಗುಣಪೂರ್ಣನು ಎಂಬ ಧ್ಯಾನವೇ ಆತ್ಮೈಕಭಾವ ಎನಿಸುವುದು ಎಂದು ಪರಬ್ರಹ್ಮಜೀವರ ಸ್ವರೂಪವನ್ನು ತಿಳಿದವರು ಹೇಳುತ್ತಾರೆ ಎಂದು ಸತ್ಯಸಂಹಿತೆಯಲ್ಲಿ ಹೇಳಿದೆ. ।।೧೮।।

ಪೂಜೆಯ ನಿಯಮ ಹೇಳುವರು -

**ನಿರಸ್ತಸಂಕಲ್ಪವಿಕಲ್ಪಮದ್ವಯಂ**
**ದ್ವಯಾಪವಾದೋಪರಮೋಪಲಂಭನಮ್ ।**
**ಅನಾದಿಮಧ್ಯಾಂತಮಜಸ್ರನಿರ್ವೃತಿಂ**
**ಸಂಜ್ಞಪ್ತಿಮಾತ್ರಂ ಭಜತಾಮುಯಾ ದೃಶಾ ।।೧೯।।**

ನಿರಸ್ತಸಂಕಲ್ಪವಿಕಲ್ಪಂ=ತನ್ನ ಪ್ರೇರಣೆ ಇಲ್ಲದೇ ಜನರಿಗೆ ಸಂಕಲ್ಪ-ವಿಕಲ್ಪಗಳನ್ನು ಹುಟ್ಟಿಸದಿರುವವನು, ಅದ್ವಯಂ=ಸಮಾನ-ದ್ವಿತೀಯವಸ್ತುರಹಿತನು, ದ್ವಯಾಪವಾದೋ-ಪರಮೋಪಲಂಭನಂ=ಪಂಚವಿಧಭೇದವನ್ನು ಕುತರ್ಕದಿಂದ ನಿರಾಕರಿಸದಿರುವವರಿಗೆ ದರ್ಶನ ಕೊಡುವವನು, ಅಥವಾ ದ್ವಿತೀಯಸ್ಯ ಅಪವಾದಃ ಯೇಭ್ಯಸ್ತೇ 'ವಿಮತಂ ಮಿಥ್ಯಾ ದೃಶ್ಯತ್ವಾತ್' ಎಂಬ ಯುಕ್ತಿಗಳು, ಅವುಗಳ ಉಪರಮಃ=ನಿರಾಕರಣ ಅದರಿಂದ ಯಾವನ ಜ್ಞಾನವಾಗುವುದೋ ಅವನು ಅಂದರೆ ಕುಯುಕ್ತಿಗಳನ್ನು ನಿರಾಕರಿಸಿ ಸತ್ಯಜಗತ್ಕರ್ತೃತ್ವೇನ ಜ್ಞಾನವಿಷಯನಾದವನು, ಅನಾದಿಮಧ್ಯಾಂತಂ=ಮಧ್ಯ ಕೊನೆ ಮೊದಲಿಲ್ಲದವನು, ಅಜಸ್ರನಿರ್ವೃತಿಂ=ನಿತ್ಯಾನಂದನು, ಸಂಜ್ಞಪ್ತಿಮಾತ್ರಂ=ಜ್ಞಾನರೂಪನು, ಜಡಾಮಿಶ್ರನು, ಅಮುಯಾ ದೃಶಾ=ಈ ರೀತಿಯಾದ ತಿಳುವಳಿಕೆಯಿಂದ ಭಜತ=ಭಜಿಸಿರಿ.

**ಭಾಗವತ ತಾತ್ಪರ್ಯ -**

ಇಲ್ಲಿ ವಿಷ್ಣುವಿಗೆ ಸಂಕಲ್ಪ-ವಿಕಲ್ಪಗಳಿಲ್ಲ ಮತ್ತು ದ್ವಿತೀಯವಸ್ತು ಇಲ್ಲ ಎಂದು ತೋರುವುದು. ಕಾರಣ ಪ್ರಮಾಣದಿಂದಲೇ ಅದನ್ನು ವ್ಯಾಖ್ಯಾನಿಸುವರು -

**'ಸಂಕಲ್ಪಶ್ಚ ವಿಕಲ್ಪಶ್ಚ ಋತೇ ವಿಷ್ಣುಪ್ರಸಾದತಃ ।**
**ನೈವ ಸಂಭವತೋ ವಿಷ್ಣೋಃ ಸಮಾಭಾವಾತ್ತು ಸೋಽದ್ವಯ' ಇತಿ ತಂತ್ರಭಾಗವತೇ ।**

ವಿಷ್ಣುವಿನ ಪ್ರೇರಣೆಯಿಲ್ಲದೇ ಜನರಿಗೆ ಸಂಕಲ್ಪ-ವಿಕಲ್ಪಗಳು ಆಗಲಾರವು. ಶ್ರೀವಿಷ್ಣುವಿಗೆ ಸಮಾನನಿಲ್ಲದಿರುವುದರಿಂದ ಅದ್ವಯ ಎನಿಸುವನು ಎಂದು ತಂತ್ರಭಾಗವತದಲ್ಲಿದೆ. ।।೧೯।।

ಶೀಘ್ರ ವಿಷ್ಣುಪ್ರಸಾದಜನಕ ಸಾಧನ ಹೇಳುವರು -

**ದಯಯಾ ಸರ್ವಭೂತೇಷು ಸಂತುಷ್ಟ್ಯಾ ಯೇನ ಕೇನ ವಾ ।**
**ಸರ್ವೇಂದ್ರಿಯೋಪಶಾಂತ್ಯಾ ಚ ತುಷ್ಯತ್ಯಾಶು ಜನಾರ್ದನಃ ।।೨೦।।**

ಸರ್ವಭೂತೇಷು=ಎಲ್ಲ ಪ್ರಾಣಿಗಳಲ್ಲಿ ದಯಯಾ=ದಯೆ ಮಾಡುವುದರಿಂದ, ಯೇನ ಕೇನ ವಾ ಸಂತುಷ್ಟ್ಯಾ=ಶ್ರೀಹರಿಯ ಇಚ್ಛೆಯಿಂದ ಶಾಸ್ತ್ರವಿಹಿತವಾದ ಯಾವುದು ದೊರೆಯುವುದೋ ಅಂತಹ ಅನ್ನ-ಪಾನಾದಿಗಳಿಂದಲೇ ಸಂತೋಷಪಡುವುದರಿಂದ, ಸರ್ವೇಂದ್ರಿಯೋಪಶಾಂತ್ಯಾ=ಎಲ್ಲ ಇಂದ್ರಿಯಗಳ ಜಯದಿಂದ, ಜನಾರ್ದನಃ=ಜನನವನ್ನು ಅರ್ದನ ಮಾಡುವ ಹರಿಯು ತುಷ್ಯತಿ=ಸಂತುಷ್ಟನಾಗುವನು. ।।೨೦।।

ವೈರಾಗ್ಯ ಸಂತತಧ್ಯಾನಗಳೆಂಬ ಸಾಧನಗಳನ್ನು ತಿಳಿಸುತ್ತ ಭಗವಂತನು ತಾನೇ ಭಜಿಸುವವರ ಮನಸ್ಸಿನಲ್ಲಿ ವ್ಯಕ್ತನಾಗಿ ಯಾವಾಗಲೂ ಮರೆಯಾಗಲಾರನೆಂದು ಹೇಳುವರು-

**ಅಪಗತಸಕಲೇಷಣಾಮಲಾತ್ಮ-**
**ನ್ಯವಿರತಮೇಧಿತಭಾವನೋಪಹೂತಃ ।**
**ನಿಜಜನವಶಗತ್ವಮಾಪ್ತವಾನ್**
**ಯೋ ನ ಸರತಿ ಛಿದ್ರವದಕ್ಷರಃ ಸತಾಂ ಹಿ ।।೨೧।।**

ಅಪಗತ=ದೂರೀಕೃತವಾದ ಸಕಲೇಷಣಾ=ಎಲ್ಲ ಪುತ್ರ, ವಿತ್ತ, ಲೋಕಗಳ ಕಾಮನೆ ಉಳ್ಳದ್ದರಿಂದ ಅಮಲ=ನಿರ್ದುಷ್ಟವಾದ ಆತ್ಮನಿ=ಮನಸ್ಸಿನಲ್ಲಿ ಅವಿರತಂ=ನಿರಂತರವಾಗಿ ಏಧಿತ=ಅಭಿವೃದ್ಧವಾದ ಭಾವನಯಾ=ಭಕ್ತಿಪೂರ್ವಕಜ್ಞಾನದಿಂದ ಉಪಹೂತಃ=ಕರೆದವನಂತೆ ವ್ಯಕ್ತನಾದವನಾಗಿ ಯಃ=ಯಾವನು ನಿಜಜನವಶಗತ್ವಂ ಆಪ್ತವಾನ್=ಭಕ್ತಜನರ ವಶನಾಗಿ ಸತಾಂ=ಸಜ್ಜನರ ಹೃದಯದಿಂದ ಛಿದ್ರವತ್=ಅಲ್ಲಿರುವ ಅವಕಾಶದಂತೆ ಅಕ್ಷರಃ= ನಾಶರಹಿತನಾದ ಶ್ರೀಹರಿಯು ನ ಸರತಿ=ಹೋಗಲಾರನು.

ಇಲ್ಲಿ ಹೃದಯಾಕಾಶದೃಷ್ಟಾಂತದಿಂದ ನಿತ್ಯ ಸನ್ನಿಹಿತನಾದವನೇ ಅಭಿವ್ಯಕ್ತನಾಗುವನು ಎಂದು ತಿಳಿಯಬೇಕು. ।।೨೧।।

ಇವನು ಸಜ್ಜನರಿಗೆ ಮಾತ್ರ ವಶನು, ಅಸಜ್ಜನರ ಪೂಜೆಯನ್ನು ಸ್ವೀಕರಿಸುವುದಿಲ್ಲ ಎಂದು ಹೇಳುವರು -

**ನ ಭಜತಿ ಕುಮನೀಷಿಣಾಂ ಸ ಇಜ್ಯಾಂ**
**ಹರಿರಧನಾತ್ಮಧನಪ್ರಿಯೋ ರಸಜ್ಞಃ ।**
**ಶ್ರುತಧನಕುಲಕರ್ಮಣಾಂ ಮದೈರ್ಯೇ**
**ವಿದಧತಿ ಪಾಪಮಕಿಂಚನೇಷು ಸತ್ಸು ।।೨೨।।**

ರಸಜ್ಞಃ=ಭಕ್ತರು ಮಾಡುವ ಭಕ್ತಿಯನ್ನು ಅರಿತವನಾದ ಅಧನಾತ್ಮಧನಪ್ರಿಯಃ= ಶ್ರೀಹರಿಯ ಪೂಜೆಗೆ ಉಪಯುಕ್ತವಾಗದ ಧನರಹಿತರು ಮತ್ತು ಪರಮಾತ್ಮನೇ ಧನದಂತೆ ಪ್ರಿಯರಾದವರಿಗೆ ಪ್ರಿಯನಾದ ಹರಿಃ=ಶ್ರೀಹರಿಯು ಶ್ರುತಧನಕುಲಕರ್ಮಣಾಂ= ಶ್ರವಣ,ಧನ,ಕುಲ,ಕರ್ಮ ಇವುಗಳಿಂದುಂಟಾದ ಮದೈಃ=ಮದದಿಂದ ಯೇ=ಯಾರು ಅಕಿಂಚನೇಷು=ಎಲ್ಲವೂ ಹರಿಯ ಅಧೀನವೆಂದು ತಿಳಿದ ಆತ್ಮಧನರಾದ ಸತ್ಸು=ಸಜ್ಜನರಲ್ಲಿ ಪಾಪಂ=ಅಪರಾಧವನ್ನು ವಿದಧತಿ=ಮಾಡುವರೋ ತೇಷಾಂ=ಅಂತಹ ಕುಮನೀಷಿಣಾಂ= ದುಷ್ಟಬುದ್ಧಿಯವರಿಂದ ಇಜ್ಯಾಂ=ಪೂಜೆಯನ್ನು ನ ಭಜತಿ=ಸ್ವೀಕರಿಸಲಾರನು.

**ಭಾಗವತ ತಾತ್ಪರ್ಯ-**

**ಅಧನಾಶ್ಚ ತ ಏವ ಆತ್ಮಧನಾಶ್ಚಾಧನಾತ್ಮಧನಾಃ ।**

ಪರಮಾತ್ಮನ ಪೂಜೆಗೆ ಅನುಪಯುಕ್ತವಾದ ಧನವಿಲ್ಲದವರು ಮತ್ತು ಪರಮಾತ್ಮನೇ ಧನದಂತೆ ಪ್ರಿಯನಾಗಿ ಉಳ್ಳವರು (ಅಂತಹ ಸಜ್ಜನರಿಗೆ ಶ್ರೀಹರಿಯು ಪ್ರಿಯನು). ।।೨೨।।

ಭಕ್ತಾಧೀನನಾದ ಹರಿಯ ಅನುಗ್ರಹಸಾಧ್ಯವಾದ ಫಲವನ್ನು ತಿಳಿಸುತ್ತ, ಇಂಥವನ ತ್ಯಾಗ ಉಚಿತವಲ್ಲವೆಂದು ಹೇಳುವರು -

**ಶ್ರಿಯಮನುಚರತೀಂ ತದರ್ಥಿನಶ್ಚ**
**ದ್ವಿಪದಪತೀನ್ ವಿಬುಧಾಂಶ್ಚ ಯಃ ಸ್ವಪೂರ್ಣಃ ।**
**ನ ಭಜತಿ ನಿಜಭೃತ್ಯವರ್ಗತಂತ್ರಃ**
**ಕಥಮಮುಮುದ್ವಿಸೃಜೇತ್ ಪುಮಾನ್ ಕೃತಜ್ಞಃ ।।೨೩।।**

ಅನುಚರತೀಂ=ಸಾಕ್ಷಾತ್ ಸೇವೆ ಮಾಡುವ ಶ್ರಿಯಂ=ಲಕ್ಷ್ಮೀದೇವಿಯನ್ನು ತದರ್ಥಿನಃ= ಲಕ್ಷ್ಮೀಪ್ರಸಾದವನ್ನು ಅಪೇಕ್ಷಿಸುವ ವಿಬುಧಾನ್=ದೇವತೆಗಳನ್ನು ತದರ್ಥಿನಃ=ಲಕ್ಷ್ಮೀದೇವಿ ಮತ್ತು ದೇವತೆಗಳ ಪ್ರಸಾದವನ್ನು ಅಪೇಕ್ಷಿಸುವ ದ್ವಿಪದಪತೀನ್=ರಾಜರನ್ನೂ ಯಃ=ಯಾವನು ಸ್ವಪೂರ್ಣಃ=ಸ್ವತಃ ಪೂರ್ಣನಾದವನು ನಿಜಭೃತ್ಯವರ್ಗತಂತ್ರಃ=ತನ್ನ ಸೇವಕವೃಂದದ ಅಧೀನನಾದವನು ಭಜತಿ=ತಾರತಮ್ಯದಿಂದ ಉತ್ತಮರಾದವರನ್ನು ಬಹುಮಾನಿಸುವನು. ತನಗಾಗಿ ನ ಭಜತಿ, ಕಿಂತು ಭಕ್ತವಾತ್ಸಲ್ಯದಿಂದಲೇ ಬಹುಮಾನಿಸುವನು. ಆದ್ದರಿಂದ ಕೃತಜ್ಞಃ ಪುಮಾನ್=ಕೃತಜ್ಞನಾದ ಮನುಷ್ಯನು ಅಮುಂ=ಭಕ್ತವತ್ಸಲನನ್ನು ಕಥಂ ಉದ್ವಿಸೃಜೇತ್ ಹೇಗೆ ಬಿಡುವನು ? ಬಿಡಲಾಗದು ಎಂದು ಭಾವ.

**ಭಾಗವತ ತಾತ್ಪರ್ಯ -**

ಈ ಶ್ಲೋಕದಲ್ಲಿ ಭೃತ್ಯರ ಅಧೀನನಾದ ಹರಿಯು ಲಕ್ಷ್ಮೀದೇವಿಯನ್ನು ದೇವತೆಗಳನ್ನು ಭಜಿಸುವುದಿಲ್ಲ ಎಂದು ಹೇಳಿದ್ದರಿಂದ ಲಕ್ಷ್ಮೀ ಮತ್ತು ದೇವತೆಗಳಿಗಿಂತ ಭೃತ್ಯರು ಉತ್ತಮರೆಂದರ್ಥ ತೋರುವುದು. ಕಾರಣ ವಿವಕ್ಷಿತತಾತ್ಪರ್ಯ ಹೇಳುವರು -

**'ಶ್ರಿಯಂ ದೇವಾಂಶ್ಚ ಭೃತ್ಯತ್ವಾತ್ ಮನುತೇಬಹು ಕೇಶವಃ ।**
**ನಾತ್ಮಾರ್ಥಾಯ ಯತಸ್ತೇ ತು ಭಕ್ತ್ಯಾ ಸರ್ವೋತ್ತಮೋತ್ತಮಾ' ಇತಿ ಚ ॥**

ಲಕ್ಷ್ಮೀದೇವಿಯನ್ನು ದೇವತೆಗಳನ್ನೂ ಪರಮಾತ್ಮನು ತನ್ನ ಭೃತ್ಯರಾದುದರಿಂದ ಸನ್ಮಾನಿಸುತ್ತಾನೆ. ತನ್ನ ಪ್ರಯೋಜನಕ್ಕಾಗಿ ಅಲ್ಲ. ಆ ಲಕ್ಷ್ಮ್ಯಾದಿಗಳು ಭಕ್ತ್ಯಾದಿಗುಣಗಳಿಂದಲೇ ತಾರತಮ್ಯನುಸಾರ ಉತ್ತಮೋತ್ತಮರಾಗಿದ್ದಾರೆ. ।।೨೩।।

ಭಗವಂತನನ್ನು ಪೂಜಿಸಿದ ಧ್ರುವನು ಉತ್ತಮಫಲ ಪಡೆದನು. ಕಾರಣ ಉತ್ತಮಫಲಕ್ಕಾಗಿ ಭಗವಂತನನ್ನು ಆರಾಧಿಸಿರಿ ಎಂದು ಹೇಳುವರು -

**ಭವತಾಂ ವಂಶಧುರ್ಯೋಽಭೂದ್ ಧ್ರುವಶ್ಚಿತ್ರರಥಃ ಸ್ವರಾಟ್ ।**
**ಗುರುದಾರವಚೋಬಾಣೈರ್ನಿರ್ಭಿನ್ನಹೃದಯೋಽರ್ಭಕಃ ।।೨೪।।**

ಭವತಾಂ=ನಿಮ್ಮ ವಂಶಧುರ್ಯಃ=ವಂಶದಲ್ಲಿ ಧುರೀಣನಾದ (ವಂಶದ ಭಾರವನ್ನು ಹೊತ್ತ) ಚಿತ್ರರಥಃ=ಆಶ್ಚರ್ಯಕರವಾದ ಗತಿಯುಳ್ಳ ಅಥವಾ ನಾನಾವರ್ಣದ ರಥವುಳ್ಳ ಸ್ವರಾಟ್=ಚಕ್ರವರ್ತಿಯಾದ ಧ್ರುವಃ=ಧ್ರುವನೆಂಬುವನು ಅಭೂತ್=ಇದ್ದನು. (ಚಿತ್ರರಥ ಎಂದು ಧ್ರುವನಿಗೇನೇ ಮತ್ತೊಂದು ಹೆಸರು ಎಂದೂ ಅಭಿಪ್ರಾಯ ಇದೆ.) (ಅಶತರೀಯುಕ್ತರಥಕ್ಕೆ ಚಿತ್ರರಥ ಎನ್ನುವರು. ಅದನ್ನು ಇಲ್ಲಿ ಟಿಪ್ಪಣಿಯಲ್ಲಿ ಹೇಳಿಲ್ಲ)

ಇವನು ಗುರುದಾರವಚೋಬಾಣೈಃ=ತಂದೆಯ ಹೆಂಡತಿಯಾದ ಸುರುಚಿಯ ವಾಗ್ಬಾಣಗಳಿಂದ ನಿರ್ಭಿನ್ನಹೃದಯಃ=ಎದೆ ಸೀಳಿದವನಾದ ಅರ್ಭಕಃ=ಐದು ವರ್ಷದ ಬಾಲಕನು. ।।೨೪।।

**ತ್ಯಕ್ತ್ವಾ ಸ್ತ್ರೈಣಂ ಚ ತಂ ಗಚ್ಛನ್ ದೃಷ್ಟೋ ಮೇ ಪಥ್ಯುದಾರಧೀಃ ।**
**ಪಂಚವರ್ಷೋ ಮದಾದೇಶೈಃ ಸಂರಾಧ್ಯ ಪುರುಷೇಶ್ವರಮ್ ।।೨೫।।**

ಸ್ತ್ರೈಣಂ=ಸ್ತ್ರೀಜಿತನಾದ ತಂ=ತಂದೆಯನ್ನು ತ್ಯಕ್ತ್ವಾ=ಬಿಟ್ಟು ಗಚ್ಛನ್=ಅರಣ್ಯಕ್ಕೆ ಹೋಗುವಾಗ ಪಥಿ=ಮಾರ್ಗದಲ್ಲಿ ಮೇ=ನನ್ನಿಂದ ದೃಷ್ಟಃ=ಕಾಣಿಸಿಕೊಂಡನು. ಉದಾರಧೀಃ= ಉತ್ಕೃಷ್ಟ ಬುದ್ಧಿಯುಳ್ಳ ಅವನು ಮದಾದೇಶೈಃ=ನನ್ನ ಉಪದೇಶಗಳಿಂದ ಪಂಚವರ್ಷಃ=ಐದು ವರ್ಷದವನು ಪುರುಷೇಶ್ವರಂ=ಶ್ರೀಹರಿಯನ್ನು ಸಂರಾಧ್ಯ=ಚೆನ್ನಾಗಿ ಆರಾಧಿಸಿ,।।೨೫।।

**ತತ್ ಪರಂ (ಪದಂ) ಸರ್ವಧಿಷ್ಣ್ಯೇಭ್ಯೋ ಮಾಯಾಧಿಷ್ಠಿತಮಾರುಹತ್ ।**
**ಮುನಯೋಽದ್ಯಾಪ್ಯುದೀಕ್ಷಂತೇ ಪರಂ ನಾಪುರವಾಕ್ ನೃಪಾಃ ॥೨೬॥**

ಸರ್ವಧಿಷ್ಣ್ಯೇಭ್ಯಃ ಪರಂ=ಎಲ್ಲ ವೈಮಾನಿಕರ ಸ್ಥಾನದಕ್ಕಿಂತಲೂ ಉತ್ತಮವಾದ ಮಾಯಾಧಿಷ್ಠಿತಂ=ಸರ್ವೋತ್ತಮನಾದ ಶ್ರೀಹರಿಯಿಂದ ವ್ಯಕ್ತವಾಗಿ ಅಧಿಷ್ಠಿತವಾದ ತತ್ಪದಂ=ಶ್ರೀಹರಿಯ ಸ್ಥಾನವನ್ನು ಆರುಹತ್=ಏರಿದನು, ಹೊಂದಿದನು. ಅದ್ಯಾಪಿ=ಈಗಲೂ ನೃಪಾಃ=ಚಕ್ರವರ್ತಿಗಳು ಮುನಯಃ=ಸಾಮಾನ್ಯ ಮುನಿಗಳು ಅರ್ವಾಕ್ ಸ್ಥಿತಾಃ=ಕೆಳಗೆ ನಿಂತು ಉದೀಕ್ಷಂತೇ=ನೋಡುವರು. ಪರಂ=ಆದರೆ (ಹೊರತು) ನ ಆಪುಃ=ಹೊಂದಲಾರರು.

**ಭಾಗವತ ತಾತ್ಪರ್ಯ -**

ಇಲ್ಲಿ ಮಾಯಾಧಿಷ್ಠಿತ ಶಬ್ದಕ್ಕೆ ವಿವಕ್ಷಿತ ಅರ್ಥವನ್ನು ಪ್ರಮಾಣದಿಂದಲೇ ತಿಳಿಸುವರು-

**'ಸರ್ವೋತ್ತಮತ್ವಾದ್ವಿಷ್ಣುರ್ಹಿ ಮಾಯಾ ಇತ್ಯೇವ ಶಬ್ದ್ಯತ' ಇತಿ ವ್ಯೋಮಸಂಹಿತಾಯಾಮ್ ।**

**'ದೇವಾನತ್ಯುತ್ತಮಮುನೀನ್ವಿನಾ ಕೇ ಶೈಂಶುಮಾರಕಮ್ ।**
**ಹರೇರ್ಗೃಹಂ ಪ್ರವಿಷ್ಟಾಸ್ತು ಧ್ರುವೋ ದೇವಾಶ್ಚ ತದ್ಗತಾ' ಇತಿ ಮಾತ್ಸ್ಯೇ ॥**

ವಿಷ್ಣುವೇ ಸರ್ವೋತ್ತಮನಾದುದರಿಂದ ಮಾಯಾ ಎಂದು ಕರೆಯಲ್ಪಡುವನು ಎಂದು ವ್ಯೋಮಸಂಹಿತೆಯಲ್ಲಿ ಇದೆ. ದೇವತೆಗಳನ್ನು, ಅತ್ಯುತ್ತಮಮುನಿಗಳನ್ನು ಬಿಟ್ಟು ಯಾರು ಧ್ರುವನ ಸ್ಥಾನವಾದ ಶಿಂಶುಮಾರರೂಪಿ ಶ್ರೀಹರಿಯ ಮಂದಿರವನ್ನು ಪ್ರವೇಶ ಮಾಡಿರುತ್ತಾರೆ? ಯಾರೂ ಪ್ರವೇಶಿಸಲಾರರು. (ಸಾಧಾರಣ ಮುನಿಗಳು, ರಾಜರು ಪ್ರವೇಶಿಸುವುದಿಲ್ಲ) ಧ್ರುವನು, ದೇವತೆಗಳು, ಉತ್ತಮಮುನಿಗಳು ಇವರುಗಳೇ ಅಲ್ಲಿ ಇರುವವರು ಎಂದು ಮತ್ಸ್ಯಪುರಾಣದಲ್ಲಿದೆ. ॥೨೬॥

**ತಂ ಯೂಯಂ ಸರ್ವಭೂತಾನಾಮಂತರ್ಯಾಮಿಣಮೀಶ್ವರಮ್ ।**
**ರುದ್ರಾದಿಷ್ಟೋಪದೇಶೇನ ಭಜಧ್ವಂ ಭವನುತ್ತಯೇ ॥೨೭॥**

ಭವನುತ್ತಯೇ=ಸಂಸಾರನಿವೃತ್ತಿಗಾಗಿ ಯೂಯಂ=ನೀವು ರುದ್ರಾದಿಷ್ಟೋಪದೇಶೇನ=ರುದ್ರದೇವರಿಂದ ಉಪದಿಷ್ಟವಾದ (ಉಪದೇಶವಿಷಯವಾದ) ಮಂತ್ರದಿಂದ ಸರ್ವಭೂತಾನಾಂ=ಎಲ್ಲ ಪ್ರಾಣಿಗಳ ಅಂತರ್ಯಾಮಿಣಂ=ಒಳಗಿದ್ದು ನಿಯಮಿಸುವ ಈಶ್ವರಂ=ಸರ್ವಸ್ವಾಮಿಯಾದ ತಂ=ನಿಮ್ಮ ಪೂರ್ವಜನಾದ ಧ್ರುವನಿಗೆ ಫಲವಿತ್ತವನನ್ನು ಭಜಧ್ವಂ=ಭಜಿಸಿರಿ. ॥೨೭॥

**ಮೈತ್ರೇಯ ಉವಾಚ -**

**ಇತಿ ಪ್ರಚೇತಸೋ ರಾಜನ್ನನ್ಯಾಂಶ್ಚ ಭಗವತ್ಕಥಾಃ ।**
**ಶ್ರಾವಯಿತ್ವಾ ಬ್ರಹ್ಮಲೋಕಂ ಯಯೌ ಸ್ವಾಯಂಭುವೋ ಮುನಿಃ ॥೨೮॥**

ಹೇ ರಾಜನ್=ಎಲೋ ರಾಜನೇ ! ಇತಿ=ಈ ರೀತಿಯಾಗಿ ಪ್ರಚೇತಸಃ=ಪ್ರಚೇತಸರಿಗೂ ಅನ್ಯಾನ್ ಚ=ಇತರರಿಗೂ ಭಗವತ್ಕಥಾಃ=ಶ್ರೀಹರಿಯ ಕಥೆಗಳನ್ನು ಶ್ರಾವಯಿತ್ವಾ=ಕೇಳಿಸಿ ಸ್ವಾಯಂಭುವಃ ಮುನಿಃ=ಬ್ರಹ್ಮಪುತ್ರರಾದ ನಾರದರು ಬ್ರಹ್ಮಲೋಕಂ ಯಯೌ=ಬ್ರಹ್ಮಲೋಕಕ್ಕೆ ತೆರಳಿದರು. ॥೨೮॥

**ತೇಽಪಿ ತನ್ಮುಖನಿರ್ಯಾತಂ ಯಶೋ ಲೋಕಮಲಾಪಹಮ್ ।**
**ಹರೇರ್ನಿಶಮ್ಯ ತತ್ಪಾದಂ ಧ್ಯಾಯಂತಸ್ತದ್ಗತಿಂ ಯಯುಃ ॥೨೯॥**

ತೇಽಪಿ=ಪ್ರಚೇತಸರಾದರೂ ತನ್ಮುಖನಿರ್ಯಾತಂ=ನಾರದರ ಮುಖದಿಂದ ಹೊರಟ ಲೋಕಮಲಾಪಹಂ=ಜನರ ಪಾಪಪರಿಹಾರಕವಾದ ಹರೇಃ ಯಶಃ ನಿಶಮ್ಯ=ಶ್ರೀಹರಿಯ ಕೀರ್ತಿಯನ್ನು ಕೇಳಿ ತತ್ಪಾದಂ ಧ್ಯಾಯಂತಃ=ಶ್ರೀಹರಿಯ ಪಾದವನ್ನು ಧ್ಯಾನ ಮಾಡುವವರಾಗಿ ತದ್ಗತಿಂ ಯಯುಃ=ಹರಿಯ ಸ್ಥಾನವನ್ನು ಕುರಿತು ಹೋದರು. ॥೨೯॥

**ಏತತ್ ತೇಽಭಿಹಿತಂ ಕ್ಷತ್ತರ್ಯನ್ಮಾಂ ತ್ವಂ ಪರಿಪೃಷ್ಟವಾನ್ ।**
**ಪ್ರಚೇತಸಾಂ ನಾರದಸ್ಯ ಸಂವಾದಂ ಹರಿಕೀರ್ತನಮ್ ॥೩೦॥**

ಹೇ ಕ್ಷತ್ತಃ=ವಿದುರನೇ ! ತ್ವಂ=ನೀನು ಮಾಂ=ನನ್ನನ್ನು ಯತ್ ಪರಿಪೃಷ್ಟವಾನ್=ಏನನ್ನು ಕೇಳಿದಿಯೋ ಏತತ್=ಆ ಇದನ್ನು ತೇ=ನಿನಗೆ ಹರಿಕೀರ್ತನಂ=ಶ್ರೀಹರಿಯ ಕೀರ್ತನವುಳ್ಳ ಪ್ರಚೇತಸಾಂ ನಾರದಸ್ಯ ಸಂವಾದಂ ಅಭಿಹಿತಮ್=ಪ್ರಚೇತಸ ಮತ್ತು ನಾರದರ ಸಂವಾದವು ನನ್ನಿಂದ ಹೇಳಲ್ಪಟ್ಟಿದೆ. ॥೩೦॥

ಮುಂದಿನ ಶ್ಲೋಕದಲ್ಲಿ ಹಿಂದಿನ ವೃತ್ತಾಂತವನ್ನು ಹೇಳಿ ಮುಂದಿನ ಕಥೆಯನ್ನು ಹೇಳುವೆನೆಂದು ಪ್ರತಿಜ್ಞೆ ಮಾಡುವರು ಶುಕಾಚಾರ್ಯರು -

**ಯ ಏಷ ಉತ್ತಾನಪದೋ ಮಾನವಸ್ಯಾನುವರ್ಣಿತಃ ।**
**ವಂಶಂ ಪ್ರಿಯವ್ರತಸ್ಯಾಪಿ ನಿಬೋಧ ನೃಪಸತ್ತಮ ॥೩೧॥**

ಹೇ ನೃಪಸತ್ತಮ=ಪರೀಕ್ಷಿತನೇ ಯಃ=ಯಾವ ವಂಶವು ಏಷಃ=ಇದುವರೆಗೆ ಹೇಳಿದುದು ಮಾನವಸ್ಯ=ಮನುಪುತ್ರನಾದ ಉತ್ತಾನಪದಃ ವಂಶಃ=ಉತ್ತಾನಪಾದನ ವಂಶವು ಅನುವರ್ಣಿತಃ=ಹೇಳಲ್ಪಟ್ಟಿತು. ಪ್ರಿಯವ್ರತಸ್ಯಾಪಿ ವಂಶಂ ನಿಬೋಧ=ಪ್ರಿಯವ್ರತನ ವಂಶವನ್ನೂ ವರ್ಣಿಸುವೆನು. ಕೇಳು. ॥೩೧॥

ಶುಕಾಚಾರ್ಯರು ಪರಿಕ್ಷೀತನಿಗೆ ಹೇಳಿದನ್ನೇ ಮೈತ್ರೇಯರು ವಿದುರನಿಗೆ ಹೇಳಿದ್ದು. ಕೇಳುವವರಿಗೆ ಸಂತೋಷವಾಗಲೆಂದು ಪ್ರಿಯವ್ರತನ ಚರಿತ್ರೆಯನ್ನು ಸ್ತುತಿಸುವರು -

**ಯೋ ನಾರದಾದಾತ್ಮವಿದ್ಯಾಮಧಿಗಮ್ಯ ಪುನರ್ಮಹೀಮ್ ।**
**ಭುಕ್ತ್ವಾ ವಿಭಜ್ಯ ಪುತ್ರೇಭ್ಯ ಐಶ್ವರಂ ಸಮಗಾತ್ ಪದಂ ।।೩೨।।**

ಯಃ=ಯಾವ ಪ್ರಿಯವ್ರತನು ನಾರದಾತ್=ನಾರದರಿಂದ ಆತ್ಮವಿದ್ಯಾಂ= ಭಗವದ್ವಿಷಯಕವಿದ್ಯೆಯನ್ನು ಅಧಿಗಮ್ಯ=ಪಡೆದು ಪುನಃ ಮಹೀಂ ಭುಕ್ತ್ವಾ=ಮತ್ತೆ ರಾಜ್ಯಭಾರ ಮಾಡಿ ಪುತ್ರೇಭ್ಯಃ=ಮಕ್ಕಳಿಗೆ ಮಹೀಂ=ಪೃಥ್ವಿಯನ್ನು ವಿಭಜ್ಯ=ಭಾಗ ಮಾಡಿಕೊಟ್ಟು ಐಶ್ವರಂ ಪದಂ ಸಮಗಾತ್=ಶ್ರೀಹರಿಯ ಸ್ಥಾನವನ್ನು ಹೊಂದಿದನು. ।।೩೨।।

**ಇತ್ಥಂ ತು ಕೌಷಾರವಿಣೋಪವರ್ಣಿತಾಂ**
**ಕ್ಷತ್ತಾ ನಿಶಮ್ಯಾಜಿತಪಾದಸತ್ಕಥಾಮ್ ।**
**ಪ್ರವೃದ್ಧಭಾವಾಶ್ರುಕಲಾಕುಲೋ ಮುನೇ-**
**ರ್ದಧಾರ ಮೂರ್ಧ್ನಾ ಚರಣಂ ಹೃದಾ ಹರೇಃ ।।೩೩।।**

ಇತ್ಥಂ=ಈ ರೀತಿ ಕೌಷಾರವಿಣಾ=ಮೈತ್ರೇಯರಿಂದ ಉಪವರ್ಣಿತಾಂ=ಹೇಳಲ್ಪಟ್ಟ ಅಜಿತಪಾದಸತ್ಕಥಾಂ=ಶ್ರೀಹರಿಯ ಪಾದಗಳ ನಿರ್ದುಷ್ಟವಾದ ಕಥಾವನ್ನು ನಿಶಮ್ಯ=ಕೇಳಿ ಕ್ಷತ್ತಾ=ವಿದುರನು ಪ್ರವೃದ್ಧಭಾವಾಶ್ರುಕಲಾಕುಲಃ=ಬಹಳವಾಗಿ ಹೆಚ್ಚಾದ ಭಕ್ತಿಯಿಂದ ಆನಂದಭಾಷ್ಪಗಳ ಸಮೂಹದಿಂದ ಕೂಡಿದವನಾಗಿ ಮುನೇಃ=ಮೈತ್ರೇಯರ ಚರಣಂ=ಪಾದವನ್ನು ಮೂರ್ಧ್ನಾ ದಧಾರ=ಶಿರಸಾ ಧಾರಣ ಮಾಡಿದನು. ಹರೇಃ ಚರಣಂ ಹೃದಾ ದಧಾರ=ಶ್ರೀಹರಿಯ ಚರಣವನ್ನು ಹೃದಯದಲ್ಲಿ ಧರಿಸಿದನು. ।।೩೩।।

**ವಿದುರ ಉವಾಚ -**

**ಸೋಽಯಂ ತೇನ ಮಹಾಯೋಗಿನ್ ಭವತಾ ಕರುಣಾತ್ಮನಾ ।**
**ದರ್ಶಿತಸ್ತಮಸಃ ಪಾರೋ ಯತ್ರಾಕಿಂಚನಗೋ ಹರಿಃ ।।೩೪।।**

ಹೇ ಮಹಾಯೋಗಿನ್=ಮೈತ್ರೇಯರೇ ! ಕರುಣಾತ್ಮನಾ=ದಯಾಳುಗಳಾದ ತೇನ ಭವತಾ=ಆ ನಿಮ್ಮಿಂದ ಯತ್ರ=ಎಲ್ಲಿ ಅಕಿಂಚನಗಃ=ನಿಷ್ಕಿಂಚನರಿಗೆ ಗೋಚರನಾದ ಹರಿಃ=ಶ್ರೀಹರಿಯು ಇರುವನೋ ಸಃ ಅಯಂ ತಮಸಃ ಪಾರಃ ದರ್ಶಿತಃ=ಅಜ್ಞಾನದ ಪಾರವು ತೋರಿಸಲ್ಪಟ್ಟಿತು. ।।೩೪।।

**ಶ್ರೀಶುಕ ಉವಾಚ -**

**ಇತ್ಯಾನಮ್ಯ ತಮಾಮಂತ್ರ್ಯ ವಿದುರೋ ಗಜಸಾಹ್ವಯಮ್ ।**
**ಸ್ವಾನಾಂ ದಿದೃಕ್ಷುಃ ಪ್ರಯಯೌ ಜ್ಞಾತೀನಾಂ ನಿರ್ವೃತಾಶಯಃ ।।೩೫।।**

ಇತಿ=ಈ ರೀತಿಯಾಗಿ ಆನಮ್ಯ=ನಮಸ್ಕರಿಸಿ ತಂ=ಮೈತ್ರೇಯರನ್ನು ಆಮಂತ್ರ್ಯ=ಹೋಗಿಬರುವೆನೆಂದು ತಿಳಿಸಿ ವಿದುರಃ=ವಿದುರನು ನಿರ್ವೃತಾಶಃ=ಸಂತುಷ್ಟವಾದ ಮನಸ್ಸುಳ್ಳವನಾಗಿ ಜ್ಞಾತಿನಾಂ ಸ್ವಾನಾಂ ದಿದೃಕ್ಷುಃ=ಬಂಧುಗಳಾದ ತಮ್ಮವರನ್ನು ಕಾಣುವ ಇಚ್ಛೆಯಿಂದ ಗಜಸಾಹ್ವಯಂ ಪ್ರಯಯೌ=ಹಸ್ತಿನಾಪುರಕ್ಕೆ ಹೋದನು. ।।೩೫।।

ಶುಕಾಚಾರ್ಯರು ಶ್ರೋತೃಗಳಿಗೆ ಫಲ ಹೇಳುವರು -

**ಏತದ್ ಯಃ ಶ್ರುಣುಯಾದ್ ರಾಜನ್ ರಾಜ್ಞಾಂ ಹರ್ಯರ್ಪಿತಾತ್ಮನಾಮ್ ।**
**ಆಯುರ್ಧನಂ ಯಶಃ ಸ್ವಸ್ತಿ ಗತಿಮೈಶ್ವರ್ಯಮಾಪ್ನುಯಾತ್ ।।೩೬।।**

ಹೇ ರಾಜನ್=ಪರೀಕ್ಷಿತನೇ ! ಯಃ=ಯಾರು ಹರ್ಯರ್ಪಿತಾತ್ಮನಾಂ=ಶ್ರೀಹರಿಯಲ್ಲಿ ಸಮರ್ಪಿತವಾದ ಮನಸ್ಸುಳ್ಳ ರಾಜ್ಞಾಂ=ರಾಜರ ಏತತ್=ಈ ಚರಿತ್ರೆಯನ್ನು ಶ್ರುಣುಯಾತ್=ಕೇಳುವರೋ ಸಃ=ಅವರು ಆಯುಃ=ಆಯುಷ್ಯವನ್ನು ಯಶಃ=ಕೀರ್ತಿಯನ್ನು ಸ್ವಸ್ತಿ=ಮಂಗಲವನ್ನು, ಗತಿಂ=ಸದ್ಗತಿಯನ್ನು, ಐಶ್ವರ್ಯಂ=ಸಂಪತ್ತನ್ನು ಆಪ್ನುಯಾತ್=ಹೊಂದುವರು. ।।೩೬।।

।। ಇಲ್ಲಿಗೆ ಮೂವತ್ತೊಂದನೇ ಅಧ್ಯಾಯವು ಮುಗಿಯಿತು ।।

।। ಇಲ್ಲಿಗೆ ಚತುರ್ಥಸ್ಕಂಧವು ಮುಗಿಯಿತು ।।

।। ಶ್ರೀಕೃಷ್ಣಾರ್ಪಣಮಸ್ತು ।।

ಅಸ್ಮದ್ಗುರ್ವಂತರ್ಗತ ಭಾವಬೋಧಾಂತರ್ಗತ ಸಮಸ್ತದೇವತಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ತ್ರಿವಿಕ್ರಮಾಭಿನ್ನ ಶ್ರೀಮೂಲರಾಮಚಂದ್ರಾಭಿನ್ನ ಅಸ್ಮತ್ ಕುಲಸ್ವಾಮೀ ಲಕ್ಷ್ಮೀನೃಸಿಂಹಃ ಪ್ರಿಯತಾಂ।।

**ಗುರುಶಿಕ್ಷಾನುಸಾರೇಣ ಕೃತಯಾ ವ್ಯಾಖ್ಯಯಾಽಮುನಾ ।**
**ಸುರಾಃ ಸದಾರಾಃ ಪ್ರೀಯಂತಾಂ ತಥಾ ಮತ್ಪಿತರೋಽಪಿ ಚ ।।**

।। ಶ್ರೀಮಧ್ವೇಶಾರ್ಪಣಮಸ್ತು ।।

★★★★★

